ವಜ್ರಮಹೋತ್ಸವ ವರ್ಷ

ಪಂಚವಾರ್ಷಿಕ ಯೋಜನೆಯ ಪುಸ್ತಕಮಾಲೆ–66

ಶಿವಕೋಟ್ಯಾಚಾರ್ಯರ

# ವಡ್ಡಾರಾಧನೆ

ಗದ್ಯಾನುವಾದ :

ಟಿ. ಕೇಶವ ಭಟ್ಟ








[illegible]ಡ ಸಾಹಿತ್ಯ ಪರಿಷತ್ತು
[illegible]ಮರಾಜಪೇಟೆ : [illegible] ಬೆಂಗಳೂರು–18.
1976

ಡಿ.ವಿ.ಕೆ. ರಾಮಸ್ವಾಮಿ
ಅವರ ಗ್ರಂಥಭಂಡಾರ
19/7/2005

ವಜ್ರಮಹೋತ್ಸವ ವರ್ಷ

ಪಂಚವಾರ್ಷಿಕ ಯೋಜನೆಯ ಪುಸ್ತಕಮಾಲೆ-66

18500

ಶಿವಕೋಟ್ಯಾಚಾರ್ಯರ

# ವಡ್ಡಾರಾಧಾನೆ

ಗದ್ಯಾನುವಾದ :

**ಟಿ. ಕೇಶವ ಭಟ್ಟ**







ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ : : ಬೆಂಗಳೂರು-18.
1976

*VADDARADHANE Shivakotyacharya : Original with rendering by Sri T. Keshava Bhatta First Published in 1976 b Kannada Sahitya Parishat, Bangalore-560018 in Commemorati its Diamond Jubilee, Demy Octavo Pages xiv+389, Price Rs.*





ಮೊದಲನೆಯ ಮುದ್ರಣ : 1976



ಬೆಲೆ : ಐಂಬತ್ತು ರೂಪಾಯಿಗಳು




ಪ್ರಕಾಶಕರು :

ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-560018

ಮುದ್ರಣ : ಶ್ರೀ ಮೀರಾ ಪ್ರಿಂಟರ್ಸ್, ಶಿವರಾಂಪೇಟೆ, ಮೈಸೂರು-570001

# ಪ್ರಸ್ತಾವನೆ

ಕನ್ನಡದ ಪ್ರಾಚೀನ ಕಾವ್ಯ ಸಂಪತ್ತು ಅಮೂಲ್ಯವಾಗಿದೆ. ಈ ಸಂಪತ್ತನ್ನು
ಗಿನ ಕನ್ನಡ ಜನತೆ ಓದಿ ತಿಳಿದುಕೊಳ್ಳುವುದು ಅತ್ಯಾವಶ್ಯಕವಾಗಿದೆ. ಆದರೆ ಈ
ಾವ್ಯಗಳು ಜನಸಾಮಾನ್ಯರಿಗೆ ಕಠಿಣವಾಗಿ ತೋರುವುದರಿಂದ ಇವುಗಳ ವ್ಯಾಸಂಗದಲ್ಲಿ
ತ್ಸಾಹಪೂರ್ಣವಾದ ಪ್ರವೃತ್ತಿ ಕಂಡುಬರುತ್ತಿಲ್ಲ. ಅನೇಕ ಸಂದರ್ಭಗಳಲ್ಲಿ ಮೂಲ
ಂಥಗಳೂ ದೊರೆಯುವುದಿಲ್ಲ. ಎಷ್ಟೋ ವೇಳೆ ವಿಶ್ವವಿದ್ಯಾನಿಲಯದವರು ಪ್ರಾಚೀನ
ಾವ್ಯಗಳನ್ನು ಕನ್ನಡ ಬಿ.ಎ., ಎಂ.ಎ. ಪದವಿ ಪರೀಕ್ಷೆಗಳಿಗೆ ಪಠ್ಯಪುಸ್ತಕಗಳಾಗಿ
ಟ್ಟಾಗಲಂತು ಮೂಲಗ್ರಂಥಗಳ ಅಭಾವ ವಿಶೇಷವಾಗಿ ಕಂಡುಬರುತ್ತದೆ.

ಆದ್ದರಿಂದ ಈ ಕೊರತೆಯನ್ನು ನಿವಾರಣೆ ಮಾಡಲು ಕನ್ನಡ ಸಾಹಿತ್ಯ ಪರಿಷತ್ತು
ನ್ನ ಪಂಚವಾರ್ಷಿಕ ಯೋಜನೆಯಲ್ಲಿ ಹಳಗನ್ನಡ ಕಾವ್ಯಗಳ ಪುನರ್ಮುದ್ರಣಕ್ಕೆ ವಿಶೇಷ
ುನಹರಿಸಿ ಅದಕ್ಕಾಗಿ ಪ್ರತ್ಯೇಕ ಯೋಜನೆಯನ್ನು ಹಾಕಿಕೊಂಡಿತು. ಆರಿಸಿದ
ಳಗನ್ನಡ ಹಾಗೂ ನಡುಗನ್ನಡ ಕಾವ್ಯಗಳನ್ನು ಹೊಸಗನ್ನಡ ಗದ್ಯದಲ್ಲಿ ಅನುವಾದಿಸಿ ಆ
ುವಾದದೊಡನೆ ಮೂಲಪಾಠವನ್ನು ಪ್ರಕಟಿಸಿ ಪುಸ್ತಕ ರೂಪದಲ್ಲಿ ಹೊರತರುವುದು
ತ್ತು ಸರ್ಕಾರದ ಸಹಾಯ ಪಡೆದು ಆ ಪುಸ್ತಕಗಳು ಸಾಧ್ಯವಾದಮಟ್ಟಿಗೆ ಸುಲಭ ಬೆಲೆ
ಲ್ಲಿ ದೊರೆಯುವಂತೆ ಮಾಡುವುದು, ಇವು ಆ ಯೋಜನೆಯ ಮುಖ್ಯ ಅಂಶಗಳು.

ಈ ಯೋಜನೆಯ ಕಾರ್ಯನಿರ್ವಹಣೆಗಾಗಿ ಪರಿಷತ್ತು ಮೊದಲು ಅನೇಕ
ದ್ವಾಂಸರಿಗೆ ಪ್ರಾರ್ಥನಾ ಪತ್ರಗಳನ್ನು ಕಳಿಸಿ ಯಾವ ಯಾವ ಕಾವ್ಯಗಳನ್ನು ಹೊಸ
ನ್ನಡಾನುವಾದಕ್ಕೆ ತೆಗೆದುಕೊಳ್ಳಬಹುದು ಎಂದು ತಿಳಿಸುವಂತೆ ಕೇಳಿಕೊಳ್ಳಲಾಯಿತು.
ಪಂಡಿತರ ಸಹಾನುಭೂತಿಯುತವಾದ ಮತ್ತು ಮೆಚ್ಚುಗೆಯ ಸೂಚನೆಗಳು ಬಂದ
ೀಲೆ ಅನುವಾದಗ್ರಂಥಗಳ ಪಟ್ಟಿಯೊಂದನ್ನು ಪರಿಷತ್ತು ಸಿದ್ಧಪಡಿಸಿತು. ಆ ಪಟ್ಟಿ
ಲ್ಲಿ ಸುಮಾರು ಅರುವತ್ತಕ್ಕೂ ಮಿಕ್ಕು ಕಾವ್ಯಗಳು ಇದ್ದುವು.

ತರುವಾಯ ಆ ವಿದ್ವಜ್ಜನರ ಒಂದು ಸಭೆಯನ್ನು ದಿನಾಂಕ 23–9–73ನೆಯ
ಾನುವಾರ ಬೆಳಗ್ಗೆ 10 ಗಂಟೆಗೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕರೆಯಲಾಯಿತು. ಆ
ೆ ಬೆಳಗ್ಗೆಯಿಂದ ಸಂಜೆಯವರೆಗೆ ನಡೆದು ಅನುವಾದ ಕಾರ್ಯದ ವಿಷಯವನ್ನು

ಕುರಿತು ಕೂಲಂಕಷವಾಗಿ ಸಮಾಲೋಚಿಸಿ ಈ ಕೆಳಕಂಡ ತೀರ್ಮಾನಗಳನ್ನು ಕೈಗೊಂಡಿತು.

1. ಭಾರತೀಯ ಜ್ಞಾನಪೀಠದವರು, ವಿಶ್ವವಿದ್ಯಾನಿಲಯದವರು, ಖಾಸಗಿ ಪ್ರಕಾಶಕರು ಪರಿಷತ್ತಿನ ಉದ್ದೇಶದಂತೆ ಈಗಾಗಲೆ ಕನ್ನಡ ಕಾವ್ಯಗಳನ್ನು ಅನುವಾದ ಮಾಡಲು ಕಾರ್ಯ ಕೈಗೊಂಡಿದ್ದರೆ, ಅಂಥ ಕಾವ್ಯಗಳನ್ನು ಪರಿಷತ್ತು ಅನುವಾದಕ್ಕೆ ತೆಗೆದುಕೊಳ್ಳಬೇಕಾಗಿಲ್ಲ.

2. ಅಗತ್ಯ ಕಂಡ ಕಡೆ ಮೂಲವನ್ನು ಪರಿಷ್ಕರಿಸಿ ಅನುವಾದವನ್ನು ಕೈಗೊಳ್ಳತಕ್ಕದ್ದು.

3. ಈ ಕೆಳಗೆ ಕಾಣಿಸಿದ ಹಳಗನ್ನಡ ಮತ್ತು ನಡುಗನ್ನಡ ಕಾವ್ಯಗಳನ್ನು ಸದ್ಯದಲ್ಲಿ ಅನುವಾದಕ್ಕೆ ಆರಿಸಿಕೊಳ್ಳತಕ್ಕದ್ದು :

**ಹಳಗನ್ನಡ :** ವಿಕ್ರಮಾರ್ಜುನವಿಜಯ, ಆದಿಪುರಾಣ, ಗದಾಯುದ್ಧ, ನೇಮಿನಾಥಪುರಾಣ (1. ಕರ್ಣಪಾರ್ಯ 2. ನೇಮಿಚಂದ್ರ), ಯಶೋಧರಚರಿತೆ, ಅನಂತನಾಥಪುರಾಣ, ಧರ್ಮಾಮೃತ, ಕಾದಂಬರಿ, ಪಂಚತಂತ್ರ, ನಳಚಂಪು, ವಡ್ಡಾರಾಧನೆ, ಗಿರಿಜಾಕಲ್ಯಾಣ, ಜಗನ್ನಾಥವಿಜಯ, ಕಬ್ಬಿಗರಕಾವ, ಶಬರಶಂಕರವಿಲಾಸ, ಹರಿಹರನ ರಗಳೆಗಳು, ಕೆಳದಿನೃಪವಿಜಯ, ದಮಯಂತೀಸ್ವಯಂವರ, ಶಾಂತಿಪುರಾಣ, ಚಂದ್ರಪ್ರಭಪುರಾಣ, ಉದ್ಭಟಕಾವ್ಯಂ, ಕುಸುಮಾವಳಿ ಕಾವ್ಯ, ಅಭಿನವ ದಶಕುಮಾರಚರಿತೆ, ಮಲ್ಲಿನಾಥಪುರಾಣ, ರಾಜಶೇಖರ ವಿಳಾಸ, ಚಿಕ್ಕದೇವರಾಜ ವಂಶಾವಳಿ, ದಿವ್ಯಸೂರಿಚರಿತೆ.

**ನಡುಗನ್ನಡ :** ಸಿದ್ಧರಾಮಚಾರಿತ್ರ, ಬಸವಪುರಾಣ, ಪ್ರಭುಲಿಂಗಲೀಲೆ, ತೊರವೆ ರಾಮಾಯಣ, ರಾಮನಾಥಚರಿತ, ಭರತೇಶವೈಭವ, ಅನುಭವಾಮೃತ, ಗೀತಗೋಪಾಲ, ಹದಿಬದೆಯಧರ್ಮ. . ನಳಚರಿತ್ರೆ, ಅದ್ಭುತರಾಮಾಯಣ, ಚನ್ನಬಸವಪುರಾಣ, ಭಾಗವತ, ಹರಿಕಥಾಮೃತಸಾರ, ಭಿಕ್ಷಾಟನಚರಿತೆ, ಮೋಹನತರಂಗಿಣಿ.

4. ಅನುವಾದ ಕಾರ್ಯವನ್ನು ನಡೆಸಲು ಪರಿಷತ್ತಿನ ಪ್ರಕಟಣಾ ಸಮಿತಿ ಆಶ್ರಯದಲ್ಲಿ ಎರಡು ಅನುವಾದಕ ಮಂಡಲಿಗಳು ಇರತಕ್ಕದ್ದು ; ಒಂದು ಬೆಂಗಳೂರಿನಲ್ಲಿ, ಇನ್ನೊಂದು ಮೈಸೂರಿನಲ್ಲಿ. ಅನುವಾದ ಕಾರ್ಯವನ್ನು ನಡೆಸಿಕೊಡಲು ಒಪ್ಪಿರುವ ಪಂಡಿತರು ಈ ಎರಡು ಅನುವಾದಕ ಮಂಡಲಿಗಳ ಪೈಕಿ ತಮಗೆ ಹತ್ತಿರವಿರುವ ಮಂಡಲಿಯ ಸದಸ್ಯರಾಗಬಹುದು.

5. ಮಂಡಲಿಯ ಸದಸ್ಯರಾದ ಅನುವಾದಕರು ಕನ್ನಡದಲ್ಲಿ ವಿದ್ವಾಂಸರಾಗಿದ್ದು ಆಧುನಿಕರಿಗೆ ಹಿತಕರವಾದ ಹೊಸಗನ್ನಡ ಶೈಲಿಯನ್ನು ಚೆನ್ನಾಗಿ ಬಲ್ಲವರಾಗಿರಬೇಕು. ಅವರಿಗೆ ಹಳಗನ್ನಡ ಮತ್ತು ಸಂಸ್ಕೃತ ಸಾಹಿತ್ಯ ವಾಙ್ಮಯದಲ್ಲಿ ಉತ್ತಮವಾದ ಪರಿಣತಿ

ಇರಬೇಕು. ಒಂದೊಂದು ಅನುವಾದಕ ಮಂಡಲಿಗೂ ಒಬ್ಬೊಬ್ಬ ಅಧ್ಯಕ್ಷರಿದ್ದು ಆ ಮಂಡಲಿಯ ಸಲಹೆಯಂತೆ ಅನುವಾದ ಕಾರ್ಯವು ನಡೆಯತಕ್ಕದ್ದು.

6. ಮೈಸೂರಿನ ಅನುವಾದಕ ಮಂಡಲಿಗೆ ಶ್ರೀ ಕೆ. ವೆಂಕಟರಾಮಪ್ಪ ಅವರು ಅಧ್ಯಕ್ಷರಾಗಿರಬೇಕೆಂದೂ ಬೆಂಗಳೂರಿನ ಅನುವಾದಕ ಮಂಡಲಿಗೆ ವಿದ್ವಾನ್ ಎನ್ ರಂಗನಾಥಶರ್ಮಾ ಅವರು ಅಧ್ಯಕ್ಷರಾಗಿರಬೇಕೆಂದೂ ಪರಿಷತ್ತಿನ ಅಧ್ಯಕ್ಷರು ನೀಡಿದ ಸೂಚನೆಗೆ ಸಭೆ ತನ್ನ ಸಮ್ಮತಿ ನೀಡಿತು.

7. ಒಂದು ತಿಂಗಳಿಗೆ ಕನಿಷ್ಠ ಪಕ್ಷದಲ್ಲಿ ನೂರು ಸಲವಾದರೂ ಈ ಅನುವಾದಕ ಮಂಡಲಿಯು ಆಯಾ ಊರಿನಲ್ಲಿ ಸಭೆ ಸೇರಿ ಕಾರ್ಯವಿಧಾನವನ್ನೂ ಕಾರ್ಯಪ್ರಗತಿಯನ್ನೂ ಪರಿಶೀಲಿಸತಕ್ಕದ್ದು. ಅನುವಾದ ಕಾರ್ಯದಲ್ಲಿ ಸಂಭವಿಸಬಹುದಾದ ಎಡರು ತೊಡರು, ಸಂದೇಹಗಳನ್ನು ಪರಸ್ಪರವಾಗಿ ಚರ್ಚಿಸಿ ಪರಿಹರಿಸಿಕೊಳ್ಳತಕ್ಕದ್ದು.

(ಅ) ಒಬ್ಬೊಬ್ಬ ಅನುವಾದಕನಿಗೆ ಒಂದೊಂದು ಕಾವ್ಯವನ್ನು ಪೂರ್ತಿಯಾಗಿ ಅನುವಾದಿಸುವ ಕಾರ್ಯವನ್ನು ವಹಿಸಿಕೊಡಬೇಕು. ವಿಶೇಷ ಸಂದರ್ಭದಲ್ಲಿ ಒಂದು ಪುಸ್ತಕವನ್ನು ಇಬ್ಬರು, ಮೂವರು ಅನುವಾದಕರಿಗೆ ವಹಿಸಿಕೊಡಬಹುದು.

(ಆ) ಅನುವಾದದಲ್ಲಿ ಏಕರೂಪತೆ ಇರಬೇಕು. ಮಧ್ಯದಲ್ಲಿ ವಿಚ್ಛಿನ್ನತೆ ಕಾಣಬಾರದು. ಕಥೆಯಂತೆ ಓದಿಸಿಕೊಂಡು ಹೋಗಬೇಕು.

(ಇ) ಅನುವಾದವು ಆಧುನಿಕರಿಗೆ ಪ್ರಿಯವಾಗುವ ಹೊಸಗನ್ನಡ ಗದ್ಯದಲ್ಲಿ ಇರಬೇಕು.

(ಈ) ಭಾಷೆಯು ಸರಳವಾಗಿಯೂ ಶುದ್ಧವಾಗಿಯೂ ಇರಬೇಕು. ಅನುವಾದವು ಮೂಲದಿಂದ ದೂರ ಹೋಗಬಾರದು ಮತ್ತು ಮೂಲವನ್ನು ಬಿಡಲೂಬಾರದು.

(ಉ) ಇದು ಪ್ರಾಚೀನ ಕಾವ್ಯಗಳ ಅನುವಾದವಾದ್ದರಿಂದ ವಿಷಯದ ಗಂಭೀರತೆ ಪವಿತ್ರತೆಗಳಿಗೆ ಅನುಗುಣವಾಗಿ ಭಾಷೆಯು ಲಲಿತಗಂಭೀರವಾಗಿ ಇರಬೇಕು.

(ಊ) ಪ್ರತಿಯೊಬ್ಬ ಅನುವಾದಕನೂ ತಾನು ಅನುವಾದಿಸಿದ ಗ್ರಂಥಕ್ಕೆ ಒಂದು ಉಪೋದ್ಘಾತ, ಶಬ್ದಾರ್ಥಕೋಶ, ಅನುಬಂಧಗಳನ್ನು ತಯಾರಿಸಿ ಕೊಡಬೇಕು. ಉಪೋದ್ಘಾತದಲ್ಲಿ ಪ್ರಸ್ತುತ ಕವಿಯ ದೇಶಕಾಲಾದಿ ಪರಿಚಯ, ಪ್ರಸ್ತುತ ಕಾವ್ಯದ ವಿಮರ್ಶೆ ಮುಂತಾದವು ಸಂಕ್ಷೇಪವಾಗಿ ಇರಬೇಕು. ಕಾವ್ಯದಲ್ಲಿ ಬಂದಿರುವ ನ್ಯಾಯಗಳು, ಗಾದೆಗಳು, ಪೂರ್ವಕತೆಗಳು ಮುಂತಾದವುಗಳ ವಿವರಣೆ ಅನುಬಂಧದಲ್ಲಿ ಇರಬೇಕು. ವಿವರಣೆ ಸಂಕ್ಷಿಪ್ತವಾಗಿದ್ದರೆ ಆಯಾ ಪುಟದ ಅಡಿಟಿಪ್ಪಣಿಯಲ್ಲಿ ಬರಬಹುದು.

(ಋ) ಅನುವಾದಕನು ಮೂಲ ಪರಿಷ್ಕೃತ ಪಾಠವನ್ನೂ ಅದರ ಕೆಳಗಡೆ ಅನುವಾದವನ್ನೂ ಕೊಡಬೇಕು.

(ಋ) ಉಪೋದ್ಘಾತದಲ್ಲಿ ಅನುವಾದಕನು ತನ್ನ ಸ್ವಂತ ವಿಷಯವೇನನ್ನೂ ಪ್ರಸ್ತಾಪಿಸಕೂಡದು.

(ಎ) ಯಾವೊಬ್ಬ ಅನುವಾದಕನ ಅನುವಾದನಕಾರ್ಯ ಮಂಡಲಿಗೆ ತೃಪ್ತಿಕರವಾಗಿ ಕಂಡುಬಾರದಿದ್ದಲ್ಲಿ ಅಥವಾ ಅನುವಾದಕ ತಾನಾಗಿ ಒಪ್ಪಿಸಿದ ಕಾರ್ಯ ಮಾಡಲು ತನ್ನಿಂದ ಸಾಧ್ಯವಿಲ್ಲವೆಂದು ತಿಳಿಸಿದ ಸಂದರ್ಭದಲ್ಲಿ ಆ ಅನುವಾದಕಮಂಡಲಿ ಅಧ್ಯಕ್ಷ ಪರಿಷತ್ತಿನ ಅಧ್ಯಕ್ಷರಿಗಾಗಲೀ ಅಥವಾ ಪರಿಷತ್ತಿನ ಪ್ರಕಟಣಾ ಸಮಿತಿ ಪ್ರಧಾನ ಸಂಪಾದಕರಿಗಾಗಲೀ ಆ ವಿಷಯವನ್ನು ತಿಳಿಸಿ ಆ ಕಾರ್ಯಕ್ಕೆ ಬೇರೊಬ್ಬ ವಿದ್ವಾಂಸನನ್ನು ಗೊತ್ತುಮಾಡಬಹುದು. ಹಾಗೆಯೇ ಅನುವಾದಕ ಮತ್ತು ಅನುವಾದಕ ಮಂಡಲಿ ಅಧ್ಯಕ್ಷರ ಮಧ್ಯೆ ಉದ್ಭವಿಸಬಹುದಾದ ಸಮಸ್ಯೆಗಳನ್ನು ಪರಿಷತ್ತಿನ ಅಧ್ಯಕ್ಷರು ಅಥವಾ ಪ್ರಕಟಣಾ ಸಮಿತಿಯ ಪ್ರಧಾನ ಸಂಪಾದಕರು ಪರಿಹರಿಸತಕ್ಕದ್ದು.

(ಏ) ನಿಯಮದಂತೆ ಗ್ರಂಥದ ಅನುವಾದಕಾರ್ಯ ಮುಗಿದಕೂಡಲೆ ಮಂಡಲಿಯ ಅಧ್ಯಕ್ಷರು ಅದನ್ನು ಅನುವಾದಕರಿಂದ ಪಡೆದು ತಮ್ಮ ಸಲಹೆಯೊಡನೆ ಅದನ್ನು ಪರಿಷತ್ತಿನ ಅಧ್ಯಕ್ಷರಿಗೆ ಕಳುಹಿಸಿಕೊಡತಕ್ಕದ್ದು.

8. ಹೀಗೆ ಅನುವಾದ ಕಾರ್ಯವನ್ನು ವಿದ್ವಾಂಸರಿಂದ ಮಾಡಿಸಿದಾಗ ಅವರಿಗೆ ಯುಕ್ತಸಂಭಾವನೆಯನ್ನು ಕೊಡುವ ಬಗ್ಗೆ ಸಭೆ ತೀರ್ಮಾನ ಕೈಗೊಂಡು, ಸಂಭಾವನೆ ಗ್ರಂಥದ ಪರಿಮಾಣದ ಆಧಾರದ ಮೇಲೆ ಸಲ್ಲಬೇಕೆಂದು ನಿರ್ಣಯಿಸಿ ಗ್ರಂಥದ 400 ಅಕ್ಷರಗಳಿಗೆ ಒಂದು ಘಟಕವೆಂದೂ ಒಂದು ಘಟಕಕ್ಕೆ 2 ರೂ. ನಂತೆ ಸಂಭಾವನೆ ನೀಡಬೇಕೆಂದೂ ನಿಶ್ಚಯಿಸಲಾಯಿತು. ಮತ್ತು ಅನುವಾದಕ ಮಂಡಲಿಯ ಅಧ್ಯಕ್ಷರಿಗೆ ಅನುವಾದಕರಿಗೆ ಸಲ್ಲುವ ಸಂಭಾವನೆಯ ಶೇಕಡ 15ರಷ್ಟನ್ನು ಸಂಭಾವನೆಯಾಗಿ ಕೊಡತಕ್ಕದ್ದೆಂದೂ ಸಭೆ ನಿರ್ಣಯಿಸಿತು. ಮತ್ತು ಅವರು, ಮೂಲಪಾಠ ಪರಿಷ್ಕರಣ, ಮುನ್ನುಡಿ, ಉಪೋದ್ಘಾತ, ಶೋಧನೆ, ಮೇಲ್ವಿಚಾರಣೆ ಇತ್ಯಾದಿ ಕಾರ್ಯಗಳನ್ನು ಗಮನದಲ್ಲಿಟ್ಟುಕೊಂಡು ಹಸ್ತಪ್ರತಿಯನ್ನು ಸಿದ್ಧಮಾಡಿ ಪರಿಷತ್ತಿಗೆ ಒಪ್ಪಿಸತಕ್ಕದ್ದೆಂದೂ ತೀರ್ಮಾನಿಸಲಾಯಿತು.

9. ಅನುವಾದಕರಿಗೆ ಅನುವಾದ ಕಾರ್ಯಕ್ಕಾಗಿ ಹಣ ಸಂದಾಯವಾದಮೇಲೆ ಆ ಗ್ರಂಥದ ಪೂರ್ಣ ಹಕ್ಕು ಪರಿಷತ್ತಿಗೆ ಸೇರುತ್ತದೆ. ಪುಸ್ತಕ ಪ್ರಕಟಣೆಯಾದಮೇಲೆ ಅನುವಾದಕರಿಗೆ ಗೌರವಧನ ನೀಡುವ ಪ್ರಶ್ನೆ ಬರುವುದಿಲ್ಲ. ಪುಸ್ತಕ ಅಚ್ಚಾದಮೇಲೆ ಅನುವಾದಕರಿಗೆ ಆ ಗ್ರಂಥದ ಹತ್ತು ಪ್ರತಿಗಳನ್ನು, ಮಂಡಲಿಯ ಅಧ್ಯಕ್ಷರಿಗೆ ಎರಡು ಪ್ರತಿಗಳನ್ನು ಉಚಿತವಾಗಿ ನೀಡತಕ್ಕದ್ದು.

ಮೇಲ್ಕಂಡ ತೀರ್ಮಾನದಂತೆ ಅನುವಾದಕಾರ್ಯ ಕೈಗೊಳ್ಳಲು ಪರಿಷತ್ತು ಮೈಸೂರಿನಲ್ಲಿ ಮತ್ತು ಬೆಂಗಳೂರಿನಲ್ಲಿ ಅನುವಾದಕ ಮಂಡಲಿಗಳನ್ನು ರಚಿಸಿ ಅದಕ್ಕೆ

ಬೇಕಾದ ಸಲಕರಣೆಗಳನ್ನು ಒದಗಿಸಿಕೊಟ್ಟಿದೆ ಯೋಜನೆಯ ಪ್ರಕಾರ ಅನುವಾದ ಕಾರ್ಯ ಎರಡು ಕಡೆಯೂ ನಡೆಯುತ್ತಿದೆ. ವಿದ್ವಾಂಸರು ಅನುವಾದಕ ಮಂಡಲಿ ಅಧ್ಯಕ್ಷರೊಡನೆ ಸಹಕರಿಸುತ್ತಿದ್ದಾರೆ ಅನುವಾದಕ ಮಂಡಲಿ ಅಧ್ಯಕ್ಷರು ವಿಶೇಷ ಆಸಕ್ತಿ ವಹಿಸಿ ಅನುವಾದಕಾರ್ಯ ಅಚ್ಚುಕಟ್ಟಾಗಿ ನಡೆಯುವಂತೆ ಶ್ರಮಿಸುತ್ತಿದ್ದಾರೆ ಪರಿಷತ್ತಿನ ಪ್ರಕಟಣಾಸಮಿತಿಯ ಪ್ರಧಾನ ಸಂಪಾದಕರಾದ ಡಾ|| ರಂ. ಶ್ರೀ. ಮುಗಳಿಯವರು ಅಷ್ಟೇ ಮುತುವರ್ಜಿಯಿಂದ ಅನುವಾದಕರಿಗೆ, ಮಂಡಲಿ ಅಧ್ಯಕ್ಷರಿಗೆ, ತಮ್ಮ ಸಲಹೆ ಸೂಚನೆಗಳನ್ನು ನೀಡಿ ಸಹಕರಿಸುತ್ತಿದ್ದಾರೆ. ಒಟ್ಟಿನಲ್ಲಿ ಈ ಎಲ್ಲ ವಿದ್ವನ್ಮಣಿಗಳೂ ಇದೊಂದು ಕನ್ನಡ ನುಡಿಯ ಮಹತ್ತರವಾದ ಸೇವೆ ಎಂಬ ಭಾವನೆಯಿಂದ ದುಡಿಯುತ್ತಿದ್ದಾರೆ. ಇವರೆಲ್ಲರಿಗೂ ಪರಿಷತ್ತಿನ ಪರವಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ಈಗ 20 ಗ್ರಂಥಗಳ ಅನುವಾದಕಾರ್ಯ ಮುಗಿದು ಅವು ಅಚ್ಚಿಗೆ ಹೋಗಿವೆ. 1977ನೆಯ ಏಪ್ರಿಲ್ ತಿಂಗಳಿನಲ್ಲಿ ನಡೆಯುವ ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರಮಹೋತ್ಸವ ಸಂದರ್ಭದಲ್ಲಿ ಈ ಗ್ರಂಥಗಳು ಹೊರಬಿದ್ದು ಸಾರ್ವಜನಿಕರ ಕೈಗೆ ಸೇರುವಂತೆ ಮಾಡಬೇಕೆಂದು ಪರಿಷತ್ತು ನಿಶ್ಚಯಿಸಿದೆ. ಆ ವೇಳೆಗೆ ಈ ಎಲ್ಲ ಗ್ರಂಥಗಳನ್ನು ಮುದ್ರಿಸಿ ಕೊಡುವ ಜವಾಬ್ದಾರಿಯನ್ನು ಮೈಸೂರಿನ ಶ್ರೀ ಮೀರಾ ಪ್ರಿಂಟರ್ಸ್ ಮಾಲಿಕರಾದ ಶ್ರೀ ಕೆ. ಪಿ. ಪುಟ್ಟಸ್ವಾಮಿಯವರು ವಹಿಸಿಕೊಂಡಿದ್ದಾರೆ. ಅದಕ್ಕಾಗಿ ಅವರು ಈ ವರ್ಷ ಬೇರೆ ಯಾವ ಮುದ್ರಣ ಕೆಲಸಗಳನ್ನೂ ತೆಗೆದುಕೊಳ್ಳದೆ ಪರಿಷತ್ತಿನ ಈ ಅನುವಾದ ಗ್ರಂಥಗಳ ಮುದ್ರಣಕ್ಕೇ ವಿಶೇಷ ಗಮನಕೊಟ್ಟಿದ್ದಾರೆ. ಇವರಿಗೆ ಪರಿಷತ್ತು ಎಷ್ಟು ಕೃತಜ್ಞತೆಯನ್ನು ಅರ್ಪಿಸಿದರೂ ಸಾಲದು. ಇಂಥ ಗ್ರಂಥಗಳ ಕರಡಚ್ಚು ತಿದ್ದುವ ಕಾರ್ಯ ಎಷ್ಟು ಕಷ್ಟಕರವಾದುದು ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಇದರ ಹೊಣೆಯನ್ನು ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಉಪನಿರ್ದೇಶಕರಾದ ಶ್ರೀ ಆರ್. ಎಲ್. ಅನಂತರಾಮಯ್ಯನವರು ಮತ್ತು ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನ ವಿಭಾಗದ ಸಹಾಯಕ ನಿರ್ದೇಶಕರಾದ ಶ್ರೀ ಬಿ. ಎಸ್. ಸಣ್ಣಯ್ಯನವರು ಹೊತ್ತುಕೊಂಡು ತಮಗಾಗುವ ಅಪಾರ ಶ್ರಮವನ್ನು ಲೆಕ್ಕಿಸದೆ ಪ್ರೀತಿಯಿಂದ ದುಡಿಯುತ್ತಿದ್ದಾರೆ. ಈ ಮಹನೀಯರಿಗೆ ಪರಿಷತ್ತು ತುಂಬಾ ಆಭಾರಿಯಾಗಿದೆ.

ಈ ಅನುವಾದ ಗ್ರಂಥಗಳು ಕನ್ನಡ ಜನತೆಗೆ ಸುಲಭ ಬೆಲೆಯಲ್ಲಿ ದೊರೆಯಬೇಕೆಂಬ ಪರಿಷತ್ತಿನ ಆಶೆಯು ಸರ್ಕಾರದ ನೆರವಿನಿಂದ ಕೈಗೂಡಿದೆ ಎಂದು ತಿಳಿಸಲು ಸಂತೋಷಿಸುತ್ತೇನೆ. ವಜ್ರಮಹೋತ್ಸವದ ವೇಳೆಗೆ ಬಿಡುಗಡೆಯಾಗಲಿರುವ 20 ಅನುವಾದ ಗ್ರಂಥಗಳಿಗೆ ತಗಲುವ ವೆಚ್ಚ ಸುಮಾರು 4 ಲಕ್ಷ ರೂಪಾಯಿಗಳೆಂದು ಅಂದಾಜು ಮಾಡಲಾಗಿದೆ. ಈ ಅಂದಾಜಿನಂತೆ ಅನುವಾದ ಕೃತಿಗಳ ಬೆಲೆಯನ್ನು ಗೊತ್ತು ಮಾಡುವುದಾದರೆ ಈಗ ಇಟ್ಟಿರುವ ಬೆಲೆಯ ಮೂರು ಅಥವಾ ನಾಲ್ಕುಪಟ್ಟು ಹೆಚ್ಚಾಗು

ತ್ತದೆ. ಅನುವಾದ ಕೃತಿ ಎಷ್ಟೇ ಪುಟವಿರಲಿ 10 ರೂಪಾಯಿಗಳಿಗಿಂತ ಹೆಚ್ಚು ಬೆಲೆ ಇಡಕೂಡದು, ಪುಸ್ತಕದ ಬೆಲೆಯನ್ನು ನೋಡಿಯಾದರೂ ಜನರು ಈ ಗ್ರಂಥಗಳನ್ನು ಕೊಂಡು ಓದಲಿ ಎನ್ನುವ ದೃಷ್ಟಿಯಿಂದ ಉದಾರ ಧನಸಹಾಯಕ್ಕಾಗಿ ಈ ಯೋಜನೆಯನ್ನು ರಾಜ್ಯ ಸರ್ಕಾರದ ಮುಂದಿಡಲಾಯಿತು. ರಾಜ್ಯ ಸರ್ಕಾರ ಅನುವಾದ ಕೃತಿಗಳ ಮಹತ್ವವನ್ನರಿತು ಪರಿಷತ್ತಿನ ಕೋರಿಕೆಯನ್ನು ಸಹಾನುಭೂತಿಯಿಂದ ಪರಿಶೀಲಿಸಿ ಉಚಿತ ಪ್ರಮಾಣದಲ್ಲಿ ಧನಸಹಾಯ ನೀಡಲು ಒಪ್ಪಿದೆ. ಇದರಿಂದ ಈ ಪುಸ್ತಕಗಳನ್ನು ಸುಲಭ ಬೆಲೆಗೆ ಕೊಡಲು ಸಾಧ್ಯವಾಗಿದೆ. ಈ ಸಹಾಯಕ್ಕಾಗಿ ಕನ್ನಡ ಸಾಹಿತ್ಯ ಪರಿಷತ್ತು ನಾಡಿನ ಜನತೆಯ ಪರವಾಗಿ ರಾಜ್ಯ ಸರ್ಕಾರಕ್ಕೆ ತನ್ನ ಅಪಾರ ಕೃತಜ್ಞತೆಗಳನ್ನು ಅರ್ಪಿಸುತ್ತದೆ.

ಕನ್ನಡಿಗರು ಈ ಅಮೂಲ್ಯವಾದ ಕೃತಿಗಳನ್ನು ಉತ್ಸಾಹದಿಂದ ಬರಮಾಡಿಕೊಂಡು ಇವುಗಳ ಪೂರ್ಣ ಪ್ರಯೋಜನ ಪಡೆಯಬೇಕೆಂದು ಪರಿಷತ್ತು ಬಯಸುತ್ತದೆ.

ಬೆಂಗಳೂರು

ದಿನಾಂಕ : 2–10–1976

ಗಾಂಧಿ ಜಯಂತಿ

**ದೇಶಹಳ್ಳಿ ಜಿ. ನಾರಾಯಣ**

ಅಧ್ಯಕ್ಷ

ಕನ್ನಡ ಸಾಹಿತ್ಯ ಪರಿಷತ್ತು

# ಮುನ್ನುಡಿ

ಕನ್ನಡ ಸಾಹಿತ್ಯದ ಅಭಿವೃದ್ಧಿಗಾಗಿ ಶ್ರಮಿಸುತ್ತಿರುವ ಕನ್ನಡ ಸಾಹಿತ್ಯ ಪರಿಷತ್ತು ಸಾಹಿತ್ಯದ ಸಂರಕ್ಷಣೆಗಾಗಿಯೂ ಕೆಲಸ ಮಾಡಬೇಕಾಗಿದೆ. ಕನ್ನಡ ಸಾಹಿತ್ಯ ಚರಿತ್ರೆಯನ್ನು ಅಭ್ಯಾಸ ಮಾಡಿದವರಿಗೆ ಸಾಹಿತ್ಯದಲ್ಲಿ ವಿವಿಧ ರೀತಿಯ ಆಂದೋಳನಗಳು ನಡೆದಿರುವುದು ಗೋಚರವಾಗದೆ ಇರದು. ಚಂಪೂರೂಪದಲ್ಲಿ ಬರವಣಿಗೆ ಕೆಲವು ಕಾಲ ನಡೆದು ವಚನ, ರಗಳೆ, ಷಟ್ಪದಿ, ಸಾಂಗತ್ಯ ಈ ಮುಂತಾದ ಪ್ರಕಾರಗಳು ತರುವಾಯ ಬಳಕೆಗೆ ಬಂದುದನ್ನು ನಾವು ಖಚಿತವಾಗಿ ಗುರುತಿಸಬಹುದು. ಅಲ್ಲಿಂದ ನವೋದಯದ ಕಾಲದಲ್ಲಿ ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ ಹೊಸ ಛಂದಸ್ಸು 'ಭಾವಗೀತೆ' ಗಳ ಧಾಟಿಯಲ್ಲಿ ಬಂದದ್ದನ್ನೂ ನಾವು ನೋಡುತ್ತೇವೆ. ಈಚೆಗೆ ಮುಕ್ತ ಛಂದಸ್ಸೂ, 'ನವ್ಯ ಕಾವ್ಯ' ದ ಧಾಟಿಯ ಗದ್ಯ ಛಂದಸ್ಸೂ ಬಳಕೆಯಲ್ಲಿವೆ. ಈ ರೀತಿಯ ಮಾರ್ಪಾಡು ಸಾಹಿತ್ಯ ರಚನೆಯಲ್ಲಿ ಅನಿವಾರ್ಯ ಮತ್ತು ಅವಶ್ಯ. ಇದು ಸಾಹಿತಿಗಳ, ಕವಿಗಳ ಪ್ರಗತಿಪರ ಮನೋಭಾವವನ್ನೂ ಸಾಮಾಜಿಕ ಪ್ರಜ್ಞೆಯನ್ನೂ ಪ್ರದರ್ಶಿಸುತ್ತದೆ. ಈ ಹೊಸ ದೃಷ್ಟಿ ಮೂಡಿದಂತೆ ಹಳೆಯದರ ಕಡೆ ಜನ ದೃಷ್ಟಿ ಹರಿಸುವುದು ಅಪರೂಪ. ಛಂದಸ್ಸಿನ ಬಗ್ಗೆ ಈ ಮಾತು ಹೇಗೆ ಅನ್ವಯಿಸುತ್ತದೆಯೋ ಹಾಗೆಯೇ ಕಾವ್ಯ ವಸ್ತುವಿಗೂ ಅನ್ವಯಿಸುತ್ತದೆ. ದೇವರು, ಪುರಾಣ, ಶ್ಲೀಲ, ಅಶ್ಲೀಲ, ಈ ವಿಷಯಗಳಲ್ಲಿಯೂ ಜನತೆಯ ಕಲ್ಪನೆ ಮತ್ತು ಅವುಗಳಿಗೆ ನೀಡುವ ಮೌಲ್ಯ ವ್ಯತ್ಯಾಸವಾಗುತ್ತಲೇ ಹೋಗುತ್ತವೆ. ಆ ಹಳೆಯ ಸಾಹಿತ್ಯ ಪ್ರಕಾರಗಳು ಮತ್ತು ವಿಷಯಗಳು ಇಂದಿನ ದೃಷ್ಟಿಗೆ ದಾರಿ ಮಾಡಿಕೊಟ್ಟವೆ ಎಂಬುದನ್ನು ನಾವು ಮರೆಯಬಾರದು. ಹೊಸ ಸಾಹಿತ್ಯ ಸೃಷ್ಟಿಯ ಮೋಹದಲ್ಲಿ ಹಳೆಯದು ನಮ್ಮ ಕೈಬಿಟ್ಟು ಹೋಗಬಾರದು ಎಂಬುದನ್ನು ನಾವು ಅರಿಯಬೇಕು. ಏಕೆಂದರೆ ಈಚೆಗೆ ಪಂಪಾದಿ ಕವಿಗಳ ಕಾವ್ಯಾಭ್ಯಾಸ ಪದವಿ ಪರೀಕ್ಷೆಗಳಲ್ಲಿ ಬಿಟ್ಟರೆ ಉಳಿದ ಕಡೆ ಕಡಮೆ ಆಗುತ್ತಿದೆ. ಅದನ್ನು ಉಳಿಸಿಕೊಳ್ಳಬೇಕು, ನಮ್ಮ ಜನಕ್ಕೆ ಅದು ಎಟುಕುವಂತಿರಬೇಕು ಎಂಬ ಉದ್ದೇಶದಿಂದ ಪರಿಷತ್ತು ಹಳಗನ್ನಡ ಕಾವ್ಯಗಳನ್ನು ಹೊಸಗನ್ನಡಕ್ಕೆ ಅನುವಾದಿಸಿ ಮೂಲಪಾಠಗಳೊಡನೆ ಸುಲಭ ಬೆಲೆಗೆ ಕೊಡಲು ಯೋಜನೆಯೊಂದನ್ನು ಹಾಕಿಕೊಂಡಿದೆ. ಇದರ ವಿವರ ಪರಿಷತ್ತಿನ ಅಧ್ಯಕ್ಷರ ಪ್ರಸ್ತಾವನೆಯಲ್ಲಿ ವಿವರವಾಗಿ ಬಂದಿದೆ.

ಹಳಗನ್ನಡ ಕಾವ್ಯಗಳನ್ನು ಹಳೆಯ ಮಾದರಿಯಲ್ಲಿ ಓದಿ, ವ್ಯಾಸಂಗ ಮಾಡಿ ಅದರಲ್ಲಿ ಪಾಂಡಿತ್ಯವನ್ನು ಸಂಪಾದಿಸಿಕೊಂಡಿರುವ ಜನ ನಮ್ಮಲ್ಲಿ ಈಗ ಕಡಮೆ. ಆದರೂ ಆ ರೀತಿಯ ಪಾಂಡಿತ್ಯವುಳ್ಳವರನ್ನು ಪರಿಷತ್ತು ಆರಿಸಿ ಅವರಿಂದ ಈ ಅನುವಾದ ಕಾರ್ಯ

ಗಳನ್ನು ಮಾಡಿಸಿದೆ. ಕಾವ್ಯವನ್ನು ಅಭ್ಯಾಸ ಮಾಡಿದವರು, ಪಾಠ ಹೇಳಿದವರು, ಕವಿಯ ಮನೋಭಾವವನ್ನು ಅರಿತವರು, ಹೊಸಗನ್ನಡವನ್ನು ಬಲ್ಲವರು ನಮಗೆ ಈ ಅನುವಾದ ಕಾರ್ಯವನ್ನು ಮಾಡಿಕೊಟ್ಟಿದ್ದಾರೆ. ಅವರೆಲ್ಲರಿಗೆ ಪರಿಷತ್ತು ತನ್ನ ಹೃತ್ಪೂರ್ವಕವಾದ ವಂದನೆಯನ್ನು ಸಲ್ಲಿಸುತ್ತದೆ.

ವಿದ್ವಾಂಸರಿಂದ ಆದ ಕಾವ್ಯಾನುವಾದವನ್ನು ನಿಷ್ಣಾತ ಪಂಡಿತರು ನೋಡಿ, ಅವಶ್ಯವಾದ ಕಡೆಗಳಲ್ಲಿ ತಿದ್ದಿ ಪರಿಷತ್ತಿನ ಪ್ರಕಟಣೆಗಾಗಿ ಕೊಟ್ಟಿದ್ದಾರೆ. ಹೀಗೆ ಘನ ವಿದ್ವಾಂಸರಿಬ್ಬರು ತಮ್ಮ ಪೂರ್ಣ ಪಾಂಡಿತ್ಯದಿಂದ ಈ ಅನುವಾದ ಕಾರ್ಯವನ್ನು ನೆರವೇರಿಸಿ ಕೊಟ್ಟಿದ್ದಾರೆ. ಹೀಗಿದ್ದರೂ ಆ ಕಾವ್ಯಗಳ ಕೆಲವು ಘಟ್ಟಗಳಲ್ಲಿ, ಸಂದರ್ಭಗಳಲ್ಲಿ ಅರ್ಥ ಕ್ಲಿಷ್ಟವಾಗಿ ಅಭಿಪ್ರಾಯ ಚರ್ಚೆಗೆ ಅವಕಾಶವನ್ನು ಒದಗಿಸಬಹುದು. ಅಂಥ ಸ್ಥಿತಿ ಅನಿವಾರ್ಯ. ಆದ್ದರಿಂದ ಅಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯ ಪರಿಷತ್ತಿನದೆಂದು ಯಾರೂ ಭಾವಿಸಬಾರದು. ಅದು ಪಂಡಿತರ ಅಭಿಪ್ರಾಯ. ಅದರಲ್ಲಿ ಭಿನ್ನಾಭಿಪ್ರಾಯವಿದ್ದರೆ ವಿದ್ವಾಂಸರು ಸೂಚಿಸಬಹುದು. ಏಕೆಂದರೆ 'ಜಗನ್ನಾಥ ವಿಜಯ' 'ರಾಜಶೇಖರ ವಿಳಾಸ' 'ಪಂಪಭಾರತ' ಮುಂತಾದ ಕಾವ್ಯಗಳ ಅಭಿಪ್ರಾಯವನ್ನು ಇಂದು ಖಚಿತವಾಗಿ ಹೇಳುವುದು ಕಷ್ಟಕರವಾದುದೇ.

'ವಡ್ಡಾರಾಧನೆ' ಯನ್ನು ಶ್ರೀ ಟಿ. ಕೇಶವ ಭಟ್ಟ ಅವರು ಹೊಸಗನ್ನಡಕ್ಕೆ ಅನುವಾದ ಮಾಡಿಕೊಟ್ಟಿದ್ದಾರೆ. ಅನುವಾದ ಮಂಡಲಿ ಅಧ್ಯಕ್ಷರಾದ ವಿದ್ವಾನ್ ಶ್ರೀ ಎಸ್. ರಂಗನಾಥ ಶರ್ಮಾ ಅವರು ಪರಿಶೀಲಿಸಿ ಕೊಟ್ಟಿದ್ದಾರೆ. ಅನುವಾದಕರು ಪಂಡಿತರು. ಬೆಂಗಳೂರು ಆಚಾರ್ಯ ಪಾಠಶಾಲಾ ಕಾಲೇಜಿನಲ್ಲಿ ಪಾಠಹೇಳಿ ಅನುಭವ ಗಳಿಸಿದ್ದಾರೆ. ಒಳ್ಳೆಯ ವಿಮರ್ಶಕರು, ಬರಹಗಾರರು, ವಿದ್ವಾಂಸರು. ಈ ಕೃತಿ ಅವರ ವಿಶಿಷ್ಟ ಅಭ್ಯಾಸದ ಕಾವ್ಯಗಳ ಗುಂಪಿಗೆ ಸೇರಿದ್ದು.

ಅನುವಾದವನ್ನು ಮಾಡಿಕೊಟ್ಟ ಅನುವಾದಕರಿಗೂ, ಅನುವಾದ ನೋಡಿ ಪರಿಶೀಲಿಸಿ ಕೊಟ್ಟ ಶ್ರೀ ರಂಗನಾಥ ಶರ್ಮಾ ಅವರಿಗೂ ನಮ್ಮ ಅಭಿನಂದನೆಗಳು. ಕನ್ನಡಿಗರು ಇದರ ಉಪಯೋಗವನ್ನು ಪಡೆಯುತ್ತಾರೆಂದು ನಂಬಿದ್ದೇನೆ.

ಬೆಂಗಳೂರು
2–10–76

**ರಂ. ಶ್ರೀ. ಮುಗಳಿ**
ಪ್ರಧಾನ ಸಂಪಾದಕ

# ಬಿನ್ನಹ

ಹಳಗನ್ನಡ ಕಾವ್ಯಗಳನ್ನು ಪ್ರಚಲಿತವಾದ ಕನ್ನಡದಲ್ಲಿ ಗದ್ಯಾನುವಾದ ಮಾಡಿ ಜನತೆಗೆ ಒದಗಿಸಬೇಕೆಂಬ ಉದ್ದೇಶದಿಂದ ಕನ್ನಡ ಸಾಹಿತ್ಯ ಪರಿಷತ್ತು ಎರಡು ಅನುವಾದಕ ಮಂಡಲಿಗಳನ್ನು ರಚಿಸಿತು. ಒಂದು ಬೆಂಗಳೂರಿನಲ್ಲಿಯೂ ಇನ್ನೊಂದು ಮೈಸೂರಿನಲ್ಲಿಯೂ ಅನುವಾದ ಕಾರ್ಯವನ್ನು ನಡೆಸಬೇಕೆಂದು ನಿರ್ಣಯವಾಯಿತು. ಬೆಂಗಳೂರಿನ ಅನುವಾದಕ ಮಂಡಲಿಗೆ ನಾನು ಅಧ್ಯಕ್ಷನಾಗಿರಬೇಕೆಂದು ಕನ್ನಡ ಸಾಹಿತ್ಯ ಪರಿಷತ್ತು ಗೊತ್ತುಮಾಡಿತು. ಈ ಮಂಡಲಿಗೆ ಅನುವಾದಕ ಸದಸ್ಯರಾಗಬೇಕೆಂದು ಕೆಲವು ವಿದ್ವಾಂಸರನ್ನು ಪರಿಷತ್ತು ಕೇಳಿಕೊಂಡಿತು. ಇದನ್ನು ಅಂಗೀಕರಿಸಿದ ವಿದ್ವಾಂಸರು ಅನುವಾದಕ ಮಂಡಲಿಯ ಸದಸ್ಯರಾಗಿ ತಮ್ಮ ಕಾರ್ಯವನ್ನು ನಡೆಸಿಕೊಡಲು ಒಪ್ಪಿದರು.

ಅನಂತರ ತಿಂಗಳಿಗೊಂದು ಸಲ ಸಭೆ ಸೇರಿ ಆ ತಿಂಗಳು ಮಾಡಿದ ಅನುವಾದ ಭಾಗವನ್ನು ಪರಿಶೀಲಿಸಿ ನ್ಯೂನಾತಿರೇಕಗಳನ್ನು ತಿದ್ದುವ ಕ್ರಮ ನಡೆಯುತ್ತಾ ಬಂದಿತು. ಅನೇಕಾರ್ಥಗಳನ್ನು ಕೊಡುವ ಶ್ಲೇಷವಾಕ್ಯವಿದ್ದರೆ ಪ್ರಕೃತವಾದ ಅರ್ಥವನ್ನು ಮೊದಲು ಬರೆದು ಅನಂತರ ಉಳಿದ ಅರ್ಥವನ್ನು ಬರೆಯಬೇಕು—ಎಂದು ನಿಶ್ಚಯಿಸಿಕೊಳ್ಳಲಾಯಿತು. ಅನುವಾದಕ್ರಮದಲ್ಲಿ ಬರುವ ತೊಡಕನ್ನು ಬಿಡಿಸುವುದು, ಕಠಿಣವಾದ ಗ್ರಂಥಭಾಗಕ್ಕೆ ಅರ್ಥವನ್ನು ನಿರ್ಣಯಿಸುವುದು ಮುಂತಾದ ಕಾರ್ಯಗಳು ನಡೆದವು.

ಹೀಗೆ ಹಂತಹಂತವಾಗಿ ಅನುವಾದ ಕಾರ್ಯ ನಡೆಯುವಾಗ ನಾನು ಅವನ್ನು ಪರಿಶೀಲಿಸಿ ಯಥಾಮತಿಯಾಗಿ ಮಾರ್ಗದರ್ಶನವನ್ನು ಮಾಡಿದ್ದೇನೆ. ಮೇಲೆ ಕಾಣಿಸಿದ ನಿರ್ಣಯಗಳಿಗೆ ಅನುಸಾರವಾಗಿ ಅನುವಾದವು ಇರಬೇಕೆಂದು ನನ್ನ ಸಂಕಲ್ಪವಾಗಿತ್ತು.

ಹಸ್ತಪ್ರತಿಗಳು ಕೈಸೇರುತ್ತಾ ಬಂದಂತೆ ಅವನ್ನು ಪರಿಶೀಲಿಸಿ ಅಲ್ಲಲ್ಲಿ ತಿದ್ದಿರುತ್ತೇನೆ. ತಿದ್ದಿರುವುದನ್ನು ಅನುವಾದಕರ ಗಮನಕ್ಕೆ ತಂದು ಅವರ ಒಪ್ಪಿಗೆಯನ್ನು ಪಡೆದಿರುತ್ತೇನೆ. ಹೆಚ್ಚಿನ ವಿಶೇಷವನ್ನು ಅಡಿಟಿಪ್ಪಣಿಯಲ್ಲಿ (ರಂ) ಎಂಬ ಸಂಕೇತದಿಂದ ಸೂಚಿಸಿದ್ದೇನೆ.

ಪ್ರತಿಯೊಂದು ವಾಕ್ಯವನ್ನೂ ತಿದ್ದಿ ಮಾರ್ಪಡಿಸುವುದು ಕಾರ್ಯಸಾಧ್ಯವಲ್ಲ ; ಅಪೇಕ್ಷಣೀಯವೂ ಅಲ್ಲ. ಅನುವಾದಕರು ವಿದ್ವಾಂಸರಾದ್ದರಿಂದ ಹೆಚ್ಚಿನ ಹಸ್ತಕ್ಷೇಪ ನನಗೆ ಸರಿಯೆನಿಸಲಿಲ್ಲ. ಮೂಲವನ್ನೂ ಅನುವಾದವನ್ನೂ ಅಕ್ಷರಶಃ ತಾಳೆನೋಡುವುದು ಕಠಿಣವೇ, ಅದೆಲ್ಲವನ್ನೂ ಅನುವಾದಕರು ಸರಿಯಾಗಿ ಗಮನಿಸಿಯೇ ಇರುತ್ತಾರೆಂಬ ವಿಶ್ವಾಸವನ್ನು ತಳೆದು, ಮೇಲ್ನೋಟದಲ್ಲಿ ಕಾಣುವ ಕೆಲವು ದೋಷಗಳನ್ನು ಅಲ್ಲಲ್ಲಿ ತಿದ್ದುವ ಪ್ರಯತ್ನಮಾಡಿದ್ದೇನೆ. ಅನುವಾದದಲ್ಲಿರುವ ಗುಣಗಳಿಗೆ ಆಯಾ ವಿದ್ವಾಂಸರೇ ಭಾಗಿಗಳು.

ಈ ಕಾರ್ಯದಲ್ಲಿ ನನಗೆ ಪೂರ್ಣ ಸಹಕಾರವನ್ನಿತ್ತು ತಮ್ಮ ಕಾರ್ಯವನ್ನು ಯಶಸ್ವಿಯಾಗಿ ನಡೆಸಿಕೊಟ್ಟಿರುವ ಎಲ್ಲ ವಿದ್ವಾಂಸರನ್ನು ಅಭಿನಂದಿಸುತ್ತೇನೆ.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಜಿ. ನಾರಾಯಣ ಅವರು ನನ್ನಲ್ಲಿ ವಿಶ್ವಾಸವಿಟ್ಟು ಅಭಿಮಾನದಿಂದ ಪ್ರೋತ್ಸಾಹಿಸಿದ್ದಾರೆ. ಈ ಮಂಡಲಿಯ ಅಧ್ಯಕ್ಷನಾಗಿ ಕೆಲಸಮಾಡಲು ಸಕಲ ಸೌಕರ್ಯಗಳನ್ನೂ ಒದಗಿಸಿಕೊಟ್ಟಿದ್ದಾರೆ. ಆ ಮಹನೀಯರಿಗೆ ಕೃತಜ್ಞತೆಯ ವಂದನೆಗಳನ್ನು ಅರ್ಪಿಸುತ್ತೇನೆ. ಎಲ್ಲ ನೆರವಿತ್ತು ಸಹಕರಿಸಿದ ಕನ್ನಡ ಸಾಹಿತ್ಯ ಪರಿಷತ್ತಿನ ಅಧಿಕಾರ ವರ್ಗದವರ ಉಪಕಾರವನ್ನು ಸ್ಮರಿಸಿಕೊಳ್ಳುತ್ತೇನೆ.

ಬೆಂಗಳೂರು

5-10-76

**ಎನ್. ರಂಗನಾಥ ಶರ್ಮಾ**

ಅಧ್ಯಕ್ಷ

ಬೆಂಗಳೂರು ಅನುವಾದಕ ಮಂಡಲಿ

ಕನ್ನಡ ಸಾಹಿತ್ಯ ಪರಿಷತ್ತು

# ವಿಷಯ ಸೂಚಿ


| | |
|---|---|
| ಉಪೋದ್ಘಾತ | ೧ |
| ಪೀಠಿಕೆ | ೯ |
| ಸುಕುಮಾರಸ್ವಾಮಿಯ ಕಥೆ | ೧೦ |
| ಸುಕೌಶಳ ಸ್ವಾಮಿಯ ಕಥೆ | ೬೮ |
| ಗಜಕುಮಾರನ ಕಥೆ | ೧೦೫ |
| ಸನತ್ಕುಮಾರಚಕ್ರವರ್ತಿಯ ಕಥೆ | ೧೧೦ |
| ಅಣ್ಣಿಕಾಪುತ್ರನ ಕಥೆ | ೧೪೬ |
| ಭದ್ರಬಾಹು ಭಟ್ಟಾರರ ಕಥೆ | ೧೫೦ |
| ಲಲಿತಘಟೆಯ ಕಥೆ | ೧೯೨ |
| ಧರ್ಮಘೋಷಭಟಾರರ ಕಥೆ | ೨೦೬ |
| ಸಿರಿದಿಣ್ಣನೆಂಬ ಭಟಾರರ ಕಥೆ | ೨೧೩ |
| ವೃಷಭಸೇನ ಭಟಾರರ ಕಥೆ | ೨೨೧ |
| ಕಾರ್ತಿಕ ಋಷಿಯ ಕಥೆ | ೨೩೦ |
| ಅಭಯಘೋಷರೆಂಬ ಮುನಿಯ ಕಥೆ | ೨೩೮ |
| ವಿದ್ಯುಚ್ಚೋರನೆಂಬ ರಿಸಿಯ ಕಥೆ | ೨೪೧ |
| ಗುರುದತ್ತ ಭಟಾರರ ಕಥೆ | ೨೬೭ |
| ಚಿಲಾತ ಪುತ್ರನ ಕಥೆ | ೩೧೫ |
| ದಂಡಕನೆಂಬ ರಿಸಿಯ ಕಥೆ | ೩೨೬ |
| ಮಹೇಂದ್ರದತ್ತಾಚಾರ್ಯರ್ ಮೊದಲಾದ ಐನೂರ್ವರ್ ರಿಸಿಯರ್ಕಳ ಕಥೆ | ೩೩೫ |
| ಚಾಣಾಕ್ಯ ರಿಸಿಯ ಕಥೆ | ೩೪೩ |
| ವೃಷಭ ಸೇನರೆಂಬ ರಿಸಿಯರ ಕಥೆ | ೩೬೫ |
| **ಅನುಬಂಧ** | |
| ೧. ಜೈನ ಪಾರಿಭಾಷಿಕ ಶಬ್ದಗಳ ಮತ್ತು ಸಂಖ್ಯಾರ್ಥಗಳ ಟಿಪ್ಪಣಿ | ೩೬೯ |
| ೨. ಶಬ್ದಕೋಶ | ೩೭೭ |




# ಉಪೋದ್ಘಾತ

## ಕರ್ತೃ-ಕೃತಿ ವಿಚಾರಗಳು

ಕನ್ನಡ ಸಾಹಿತ್ಯದಲ್ಲಿ ವಡ್ಡಾರಾಧನೆ ಒಂದು ಅಪೂರ್ವ ಗದ್ಯಕೃತಿ. ಇದು ಹತ್ತೊಂಬತ್ತು ಕಥೆಗಳ ಗುಚ್ಛ. ಪ್ರತಿಯೊಂದು ಕಥೆಯ ಪ್ರಾರಂಭದಲ್ಲಿ ಪ್ರಾಕೃತನಿಬದ್ಧವಾದ ಒಂದು ಗಾಹೆ (ಗಾಥೆ) ಯಿರುತ್ತದೆ. ಅದು ಕಥೆಯ ಸಾರ ಸೂಚಿಯಾಗಿರುತ್ತದೆ. ಕಥೆಯ ನಡುವೆಯೂ ಪ್ರಾಕೃತ-ಸಂಸ್ಕೃತ-ಕನ್ನಡ ಭಾಷೆಯ ಪದ್ಯಗಳು ಬರುವುದೂ ಉಂಟು. ಒಟ್ಟಿನಲ್ಲಿ ಪದ್ಯಸಂಖ್ಯೆ ಕಡಮೆ, ಗದ್ಯವೇ ಉದ್ದಕ್ಕೂ ಹಾಸುಹೊಕ್ಕಾಗಿದೆ. ಗದ್ಯದ ಭಾಷೆ ಪೂರ್ವದ ಹಳಗನ್ನಡ ಮತ್ತು ಹಳಗನ್ನಡ ಮಿಶ್ರವಾಗಿ ಸಂಸ್ಕೃತವನ್ನೂ ಸಾಕಷ್ಟು ಬಳಸಿಕೊಂಡು ಕನ್ನಡದ ದೇಶೀಶಬ್ದಗಳ ಸೊಗಸಾದ ಬೆರಕೆಯಿಂದ ಚೆಲುವಾಗಿದೆ. ನಿರೂಪಣೆ ಮನಮುಟ್ಟುವಂತಿದೆ. ಅಡಕವಾದ ನೀತಿ-ತತ್ವವಿಚಾರವಂತೂ ಬಹಳ ಹಿರಿದು.

ಕಾಲದಲ್ಲಿ ವಡ್ಡಾರಾಧನೆಗಿಂತಲೂ ಹಿಂದಿನದಾಗಿ ಕನ್ನಡದ ಮೊತ್ತಮೊದಲ ಉಪಲಬ್ಧ ಲಕ್ಷಣಕೃತಿಯಾಗಿರುವ ಕವಿರಾಜಮಾರ್ಗವು (ಕಾಲ ೮೫೦) ಕನ್ನಡದಲ್ಲಿ 'ಗದ್ಯಾಶ್ರಮಗುರುತಾ ಪ್ರತೀತಿಯಂ ಕೆಯ್ಕೊಂಡ' ಗದ್ಯಕವಿಗಳ ನಾಮೋಲ್ಲೇಖನನ್ನು ಮಾಡಿದೆ (೧-೨೯). ಅಂಥವರ ಗದ್ಯಕೃತಿ ದೊರೆಯದಿರುವುದರಿಂದ ವಡ್ಡಾರಾಧನೆಗೇ ಈಗ ಪ್ರಥಮ ಗದ್ಯಕೃತಿಪಟ್ಟ ಸಲ್ಲುವಂತಾಗಿದೆ.

ಮೊತ್ತ ಮೊದಲಾಗಿ ಈ ಗದ್ಯಕೃತಿಯನ್ನು ಕಂಡ ಕೆ. ಬಿ. ಪಾಠಕರು ೧೮೮೩ರಲ್ಲಿ ಇಂಡಿಯನ್ ಆಂಟಿಕ್ವೆರಿಯಲ್ಲಿ (I. A. XXII) ಇದರ ಕರ್ತೃ ರೇವಕೋಟ್ಯಾಚಾರ್ಯನೆಂದು ಉಲ್ಲೇಖ ಮಾಡಿದ್ದಾರೆ. ಅದೇ ಆಂಟಿಕ್ವೆರಿಯ ಸಂಪುಟದಲ್ಲಿ ಡಾ|| ಫ್ಲೀಟರು ಈ ಗದ್ಯಕೃತಿಯ ಹೆಸರು 'ಉಪಸರ್ಗ ಕೇವಲಿಗಳ ಕಥೆ' ಎಂದು ಪಾಠಕರು ತಮಗೆ ತಿಳಿಸಿರುವಂತೆ ಹೇಳಿದ್ದಾರೆ. ದಿ. ಆರ್. ನರಸಿಂಹಾಚಾರ್ಯರು ಕರ್ಣಾಟಕ ಕವಿಚರಿತೆಯ ಪ್ರಥಮ ಸಂಪುಟದಲ್ಲಿ (೧೯೦೭) ವಡ್ಡಾರಾಧನೆಯ ಕರ್ತೃ ರೇವಕೋಟ್ಯಾಚಾರ್ಯನೆಂತಲೇ ಬರೆದರು. [೧೯೨೪ರಲ್ಲಿ ಹೊರ ಬಂದ ಇದೇ ಗ್ರಂಥದ ಪರಿಷ್ಕೃತ ದ್ವಿತೀಯ ಮುದ್ರಣದಲ್ಲಿ (ಅನುಬಂಧ II-ಪುಟ ೩೫೫) ಕರ್ತೃನಾಮವನ್ನು ಶಿವಕೋಟ್ಯಾಚಾರ್ಯ ಎಂದು ತಿದ್ದುಪಡಿ ಮಾಡಲಾಗಿದೆ.] ಹರಿಷೇಣನ ಬೃಹತ್ಕಥಾಕೋಶದ ಸಂಪಾದಕರಾದ ಡಾ|| ಆ. ನೇ. ಉಪಾಧ್ಯೆ ಅವರು ಅದರ ಪ್ರಸ್ತಾವನೆಯಲ್ಲಿ ವಡ್ಡಾರಾಧನೆ ಎಂಬ ಕನ್ನಡ ಗದ್ಯಕೃತಿಯ ಹೆಸರಿನ ಬಗೆಗೆ ಚರ್ಚಿಸಿ, 'ಉಪಸರ್ಗ ಕೇವಲಿಗಳ ಕಥೆ' ಎಂಬುದನ್ನೇ ಪುರಸ್ಕರಿಸಿದ್ದಾರೆ. ಅಡಕವಾದ ಕಥೆಗಳ ವಿಷಯದ ದೃಷ್ಟಿಯಿಂದ ಈ ಹೆಸರನ್ನು ಒಪ್ಪಿರುವ

ಡಿ ಎಲ್. ನರಸಿಂಹಾಚಾರ್ಯರು ಈ ಕೃತಿಯನ್ನು ಐದು ಮೂಲಪ್ರತಿಗಳಿಂದ ಸಂಪಾದಿಸಿ, ಕವಿಕೃತಿನಾಮಗಳ ಒಂದು ಇತ್ಯರ್ಥಕ್ಕೆ ಬಂದು, ವಡ್ಡಾರಾಧನೆ ಎಂಬುದು ಕೃತಿನಾಮವೆಂದೂ ಶಿವಕೋಟ್ಯಾಚಾರ್ಯ ಎಂಬುದು ಕರ್ತೃನಾಮವೆಂದೂ ತಾತ್ಕಾಲಿಕವಾದ ತೀರ್ಮಾನ ಮಾಡಿದ್ದಾರೆ.

ಡಿ. ಎಲ್. ಎನ್. ಅವರು ಮೂಲ ಪ್ರತಿಗಳನ್ನು ಎರಡು ವಿಭಾಗಮಾಡಿ, ಅವುಗಳಲ್ಲಿ ಒಂದು ವಿಭಾಗದ ಮೂರು ಪ್ರತಿಗಳಲ್ಲಿಯೂ ಶಿವಕೋಟ್ಯಾಚಾರ್ಯ ಎಂಬ ಹೆಸರಿರುವುದನ್ನು ತಿಳಿಸಿ ಪ್ರತಿಕಾರರು 'ಶಿ' ಎಂಬುದನ್ನು ರೂಪಸಾದೃಶ್ಯದಿಂದ 'ರೆ' ಎಂದು ಭಾವಿಸಿದ ಪ್ರಮಾದದಿಂದ 'ರೇವಕೋಟ್ಯಾಚಾರ್ಯ' ಆದುದಾಗಿ ತರ್ಕಿಸಿದ್ದಾರೆ. ಇದರಿಂದ ಶಿವಕೋಟ್ಯಾಚಾರ್ಯ ಎಂಬ ಹೆಸರು ದೃಢವಾಗಿದೆ. ಇದೂ ಅಲ್ಲದೆ, 'ಪುಣ್ಯಾಸ್ರವಕಥಾಕೋಶ' ವೆಂಬ ಗ್ರಂಥವನ್ನು ಸಂಸ್ಕೃತದಲ್ಲಿ ಬರೆದ ರಾಮಚಂದ್ರ ಮುಮುಕ್ಷುವಿನ ಹೇಳಿಕೆಯಂತೆ, ಶಿವಕೋಟ್ಯಾಚಾರ್ಯನೆಂಬವನು ಪ್ರಾಕೃತದಲ್ಲಿ 'ವಡ್ಡಾರಾಧನೆ' ಎಂಬ ಗ್ರಂಥವನ್ನು ಬರೆದಿದ್ದು ಅದನ್ನು ಭ್ರಾಜಿಷ್ಣು ಎಂಬವನು "ಆರಾಧನಾ ಕರ್ಣಾಟ ಟೀಕಾ" ಎಂಬ ಹೆಸರಿನಲ್ಲಿ ಪರಿವರ್ತಿಸಿದ್ದಾನೆ-ಎಂದು ತಿಳಿದು ಬರುತ್ತದೆ. ಡಾ॥ ಎಂ. ಎಂ. ಕಲಬುರ್ಗಿಯವರು 'ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ' ಎಂಬ ಗ್ರಂಥದಲ್ಲಿ (ಪುಟ ೨೩೨-೩೩) ಈ ಕೃತಿನಾಮ-ಕರ್ತೃನಾಮಗಳನ್ನೇ ಎತ್ತಿ ಹಿಡಿದಿದ್ದಾರೆ. ಈ ಅಭಿಪ್ರಾಯವನ್ನು ಇತರರು ಯಾರೂ ಸಕಾರಣವೆಂದು ಒಪ್ಪಿಲ್ಲ.

ಕನ್ನಡ ವಡ್ಡಾರಾಧನೆಯ ಕರ್ತೃವಿನ ಕಾಲದ ಕುರಿತೂ ಬಹಳ ಚರ್ಚೆ ನಡೆದಿದೆ. ಮಂಜೇಶ್ವರ ಗೋವಿಂದ ಪೈ ಯವರು ಈ ಕೃತಿಯನ್ನು ಭಾಷಾದೃಷ್ಟಿಯಿಂದ ವಿವೇಚಿಸಿ "ನನಗಾದರೊ ಕನ್ನಡ ವೊಡ್ಡಾರಾಧಣವು ಕ್ರಿ. ಶ. ಆರನೆಯ ಶತಮಾನಕ್ಕಿಂತ ಈಚೆಯದಲ್ಲವೆಂದು ತೋರುತ್ತದೆ" ಎಂದಿದ್ದಾರೆ (ಮೂರು ಉಪನ್ಯಾಸಗಳು, ೧೯೬೦, ಪುಟ೧೧೮.) ಎಸ್. ಶ್ರೀಕಂಠಶಾಸ್ತ್ರಿಗಳು ಇದನ್ನು ಏಳನೆಯ ಶತಮಾನದ ರಚನೆ ಎಂದಿದ್ದಾರೆ (Sources of Karnatak History, Vol. I-XX) ನೃಪತುಂಗನ ಕಾಲದಲ್ಲಿದ್ದ ಗುಣಭದ್ರಾಚಾರ್ಯರ ಗ್ರಂಥದ ಪದ್ಯಗಳು ಇದರಲ್ಲಿ ಬರುವುದರಿಂದ ಇದು ಕ್ರಿ. ಶ. ೮೫೦ಕ್ಕೆ ಹಿಂದಿನದಲ್ಲವೆಂದು ಕೆ.ಜಿ ಕುಂದಣಗಾರರು ಅಭಿಪ್ರಾಯಪಟ್ಟರು (ಉಪಾಯನ, ೧೯೬೭, ಪುಟ ೪೩). ಡಿ. ಎಲ್.ಎನ್. ಅವರು ಇವೆಲ್ಲ ಕಾಲವಿಚಾರ ಸೂಚಿಗಳನ್ನೂ ಲಕ್ಷಿಸಿ, ಇದು ಪಂಪಭಾರತ (೯೪೧) ಕ್ಕಿಂತ ಹಿಂದಿನ ರಚನೆಯೆಂದೂ ಇದರ ರಚನಕಾಲಾವಧಿ ೮೯೮-೯೪೧ ಎಂದೂ ಆದುದರಿಂದಲೇ, ಈ ಗ್ರಂಥಕ್ಕೆ ೯೨೦ ಎಂಬ ಕಾಲವನ್ನು ಕೊಡಬಹುದೆಂದೂ ಹೇಳಿದ್ದಾರೆ. (ಡಿ.ಎಲ್. ಎನ್.-ವಡ್ಡಾರಾಧನೆ, ೧೯೬೦, ಪೀಠಿಕೆ. XXXII).

'ವಡ್ಡಾರಾಧನೆ' ಎಂಬ ಶಬ್ದದ ಮೂಲ 'ವೃದ್ಧಾರಾಧನೆ' ಅಥವಾ 'ಬೃಹದಾರಾಧನೆ' ಎಂದು ಅದರ ನಿಷ್ಪತ್ತಿಯಿಂದ ತಿಳಿಯಬಹುದು. ಗೋವಿಂದ ಪೈಗಳು 'ಬೃಹದಾರಾಧನ' ಎಂಬುದರ ಪ್ರಾಕೃತ ರೂಪವೆಂದು 'ವೊಡ್ಡಾರಾಧಣ' ಎಂಬ ಶಬ್ದರೂಪವನ್ನು ಮಾನ್ಯ

ಮಾಡಿಕೊಂಡಿದ್ದಾರೆ (ಮೂರು ಉಪನ್ಯಾಸಗಳು, ೧೯೬೦, ಪುಟ ೧೦೭). ವೃದ್ಧ + ಆರಾಧನೆ ಎನ್ನುವಾಗ ಅದರ ಶಬ್ದಾರ್ಥವನ್ನು ಲಕ್ಷಿಸಬೇಕು. 'ವೃದ್ಧ' ಎಂಬುದಕ್ಕೆ ವಯಸ್ಸಾದವನು (ಮುದುಕ), ಪೂರ್ಣವಾಗಿ ಬೆಳೆದವನು, ಪೂರ್ವಕಾಲದವನು, ಗೌರವಾರ್ಹ, ಶ್ರೇಷ್ಠ, ಜ್ಞಾನಿ, ಯತಿ, ಮಹಾಪುರುಷ ಎಂಬ ಅರ್ಥಗಳಿವೆ. ಹಾಗೆಯೇ 'ಆರಾಧನೆ' ಎಂಬುದಕ್ಕೆ ಸೇವೆ, ಪೂಜೆ, ಆದರಣೆ ಎಂಬಿವು ಸಾಮಾನ್ಯಾರ್ಥಗಳು. ಜೈನ ಸಿದ್ಧಾಂತದ ದೃಷ್ಟಿಯಿಂದ ಸಮ್ಯಗ್ದರ್ಶನ, ಸಮ್ಯಗ್ ಜ್ಞಾನ, ಸಮ್ಯಕ್ ಚಾರಿತ್ರ, ಸಮ್ಯಕ್ ತಪಸ್ಸು–ಈ ನಾಲ್ಕನ್ನು ಸಾಧಿಸುವುದೇ 'ಆರಾಧನೆ'. ವೃದ್ಧರು (ಜೈನ ಯತಿಗಳು, ಜ್ಞಾನಿಗಳು ಅಥವಾ ಮಹಾಪುರುಷರು) ಮಾಡಿದ ಸಫಲವಾದ ಆರಾಧನೆಗಳೇ ಈ ಗ್ರಂಥದ ಎಲ್ಲ ಕಥೆಗಳ ಸಾರವಾದುದರಿಂದ 'ವಡ್ಡಾರಾಧನೆ' ಈ ಗ್ರಂಥಕ್ಕೆ ಒಪ್ಪುವ ಹೆಸರಾಗಿದೆ. ಇದನ್ನು ಕೃತಿಕರ್ತನೇ ಗ್ರಂಥ ಪೀಠಿಕೆಯಲ್ಲಿ ಹೀಗೆ ಸ್ಪಷ್ಟಪಡಿಸಿದ್ದಾನೆ–

"ಶ್ರೀ ವೀರವರ್ಧಮಾನ ಭಟ್ಟಾರಕರ್ಗೆ ನಮಸ್ಕಾರಂ ಗೆಯ್ದು ದೇವೋಪಸರ್ಗ ಮನುಷ್ಯೋಪಸರ್ಗ ತಿರಿಕೋಪಸರ್ಗಮಚೇತನೋಪಸರ್ಗಮೆಂದಿಂತು ಚತುರ್ವಿಧಮಪ್ಪುಪಸರ್ಗಮುಮಂ ಪಸಿವುಂ ನೀರಟ್ಟೆ ಮೊದಲಾಗೊಡೆಯ ಇಪ್ಪತ್ತೆರಡು ಪರೀಷಹಂಗಳುಮಂ ಸೈರಿಸಿ ಅಯ್ದುಮಿಂದ್ರಿಯಂಗಳಂ ಗೆಲ್ದು ಬಾಹ್ಯಾಭ್ಯಂತರ ಪರಿಗ್ರಹಂಗಳಂ ತೊಱೆದು ದ್ವಾದಶ ವಿಧಮಪ್ಪ ತಪದೊಳ್ ನೆಗೞ್ದು ಪ್ರಾಯೋಪಗಮನದಿಂ ಸಂನ್ಯಸನಂ ಗೆಯ್ದು ಕರ್ಮಕ್ಷಯಂ ಗೆಯ್ದು ಮೋಕ್ಷಕ್ಕೆವೋದ ಮತ್ತಂ ಸರ್ವಾರ್ಥಸಿದ್ಧಿಯೊಳ್ ಪುಟ್ಟಿದ **ಮಹಾಪುರುಷರ್ಕಳ** ಕಥೆಗಳಂ ಪೇೞ್ವಲ್ಲಿ...."

ಈ ಕಥಾನಾಯಕರು ಮಹಾಪುರುಷರು. ನಾಲ್ಕು ಬಗೆಯ ಉಪಸರ್ಗ (ತಪೋವಿಘ್ನ)ಗಳನ್ನು ಸಹಿಸಿದವರು. ಹಸಿವು, ಬಾಯಾರಿಕೆ ಮೊದಲಾದ ಇಪ್ಪತ್ತೆರಡು ಬಗೆಯಾಗಿರುವ ಪರೀಷಹ (ತೊಂದರೆ)ಗಳನ್ನು ಸೈರಿಸಿ ಪಂಚೇಂದ್ರಿಯಗಳನ್ನು ಹತೋಟಿಯಲ್ಲಿಟ್ಟು ಬಾಹ್ಯ ಮತ್ತು ಆಂತರಿಕ ಪರಿಗ್ರಹಗಳನ್ನು ತ್ಯಜಿಸಿದವರು. ಆರು ವಿಧದ ಬಾಹ್ಯತಪಸ್ಸನ್ನೂ ಆರು ಬಗೆಯ ಅಭ್ಯಂತರ ತಪಸ್ಸನ್ನೂ ಆಚರಿಸಿದವರು. ಇಂತಹ ತಪಸ್ಸಾಧನೆಯೇ **ತಪಸ್ಸಿನ ಆರಾಧನೆ**. ಜೈನಸಿದ್ಧಾಂತಗಳಲ್ಲಿ ದೃಢವಾದ ವಿಶ್ವಾಸ-ಅಭಿರುಚಿಗಳನ್ನಿಡುವುದು **ದರ್ಶನಾರಾಧನೆ**. ಸಮ್ಯಗ್ ಜ್ಞಾನವನ್ನು ಪಡೆಯಲು ಮಾಡುವ ಸಾಧನೆ **ಜ್ಞಾನಾರಾಧನೆ**. ಪಂಚಮಹಾವ್ರತ, ಪಂಚಸಮಿತಿ, ತ್ರಿಗುಪ್ತಿಗಳನ್ನು ಭಾವಶುದ್ಧಿಯಿಂದ ನಡೆಸುವುದು **ಚಾರಿತ್ರಾರಾಧನೆ**. ಈ ನಾಲ್ಕು ಬಗೆಯ ಆರಾಧನೆಗಳನ್ನೆಸಗಿದ ಮಹಾಪುರುಷರ ಕಥೆಗಳು ಇರುವುದರಿಂದ 'ವಡ್ಡಾರಾಧನೆ' ಎಂಬುದು ಸಾರ್ಥಕವಾದ ಹೆಸರಾಗಿದೆ.

ಈ ಕನ್ನಡ ವಡ್ಡಾರಾಧನೆಯ ಪ್ರತಿಯೊಂದು ಕಥೆಯ ಪ್ರಾರಂಭದಲ್ಲಿ ಬರುವ ಕಥಾಸಾರಸೂಚಿಯಾಗಿರುವ ಗಾಹೆಗಳು ಪ್ರಾಕೃತದಲ್ಲಿ 'ಭಗವತೀ ಆರಾಧನಾ' ಅಥವಾ

'ಮೂಲಾರಾಧನಾ' ಎಂಬ ಗ್ರಂಥದಲ್ಲಿ ಬರುವ 'ಕವಚ' ಎಂಬ ಭಾಗದ ೧೫೩೯ ರಿಂದ ೧೫೫೭ ವರೆಗಿನ ಹತ್ತೊಂಬತ್ತು ಗಾಹೆಗಳೇ ಆಗಿವೆಯೆಂದು ತಿಳಿದುಬಂದಿದೆ.

ಕೃತಿ ಸ್ವರೂಪ ದೃಷ್ಟಿಯಿಂದಲೂ ಕನ್ನಡದ ವಡ್ಡಾರಾಧನೆಗೆ ಮಹತ್ವವಿದೆ. ಕನ್ನಡದಲ್ಲಿ ಗದ್ಯ ಪದ್ಯ ಮಿಶ್ರವಾದ ಚಂಪೂಕಾವ್ಯ ರಚನೆ ಪಂಪನಿಗಿಂತ (೯೪೧) ಹಿಂದೆಯೇ ಇದ್ದಿತೆಂದು ವಿದ್ವಾಂಸರು ಊಹಿಸುತ್ತಾರೆ. ಆದರೆ ಕವಿರಾಜ ಮಾರ್ಗದಲ್ಲಿ (೮೬೦) ಚಂಪು ಎಂಬ ಶಬ್ದದ ಉಲ್ಲೇಖವೇ ಇಲ್ಲ, ಚಂಪೂಕವಿಗಳನ್ನು ಹೇಳಿಲ್ಲ. ಆದರೆ 'ಗದ್ಯಕಥೆ' ಎಂಬ ಕೃತಿರೂಪವನ್ನು ಹೇಳಿದೆ ಅದು ಗದ್ಯ ಪದ್ಯ ಸಮ್ಮಿಶ್ರವಾದುದೆಂದೂ ತಿಳಿಸಿದೆ (೧-೨೭). ಮುಂದೆ 'ಉದಯಾದಿತ್ಯಾಲಂಕಾರ'ದಲ್ಲಿ (೧೧೫೦) ಗದ್ಯ ಪದ್ಯ ಮಿಶ್ರಕಾವ್ಯವನ್ನು ಚಂಪುವೆಂದು ಹೇಳಿ

"ಕನ್ನಡದೊಳ್ ಚಂಪೂಕೃತಿ
ಸಸ್ಕೃತ ತರ ವಚನಕಾವ್ಯಮೆನಿಕುಂ..." ಎಂದು ಹೇಳಿದೆ.

ಇಲ್ಲಿ ಹೇಳಿದ 'ವಚನಕಾವ್ಯ' ಎಂಬುದು ಗದ್ಯ ಕಥೆಯನ್ನೇ ಲಕ್ಷಿಸಿ ಹೇಳಿದಂತಿದೆ. 'ಗದ್ಯಕಥೆ' ಎಂಬ ರಚನಾ ಸಂಪ್ರದಾಯವು ಕವಿರಾಜ ಮಾರ್ಗಕ್ಕಿಂತ ಹಿಂದೆಯೇ ಕನ್ನಡದಲ್ಲಿ ಪ್ರಚಲಿತವಿತ್ತೆಂದು ತೋರುತ್ತದೆ. ಅದರಲ್ಲಿ ಗದ್ಯವೇ ಅಧಿಕವಾಗಿದ್ದು ಪದ್ಯ ಸಂಖ್ಯೆ ಅತ್ಯಂತವಾಗಿ ಕಡಮೆಯಿದ್ದು ಕಥೆಯೇ ಪ್ರಧಾನವೆಂದು ತೀರ್ಮಾನಿಸಬಹುದು. ವಡ್ಡಾರಾಧನೆ ಅಂತಹ 'ಗದ್ಯಕಥೆ'ಗಳಲ್ಲಿ ಒಂದೆಂದು ಭಾವಿಸುವುದು ತಪ್ಪಲ್ಲ. 'ಚಾವುಂಡರಾಯ ಪುರಾಣ' ಕೂಡ, ಗದ್ಯಕಥೆಯೆಂದು ವಿದ್ವಾಂಸರ ಅಭಿಪ್ರಾಯವಿದೆ. ದಿ. ಗೋವಿಂದ ಪೈಗಳು ಇದನ್ನು ಸ್ಪಷ್ಟೀಕರಿಸಿದ್ದಾರೆ. ಇತರರೂ ಇದಕ್ಕೆ ಹುಂ ಗುಟ್ಟಿದ್ದಾರೆ (ಬೆಂಗಳೂರು ವಿಶ್ವವಿದ್ಯಾಲಯ—ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂ ೧, ಪುಟ ೫೮).

ವಡ್ಡಾರಾಧನೆಯಲ್ಲಿ ಕವಿಯ ಕಥನ ಕೌಶಲ ಚೆನ್ನಾಗಿ ವ್ಯಕ್ತವಾಗಿದೆ. ಸಹಜತೆ ಸರಳತೆಗಳೆರಡೂ ಎದ್ದುಕಾಣುವ ಇದರ ರಚನೆಯಲ್ಲಿ ವರ್ಣನೆಗಳು ಹೆಚ್ಚಾಗಿಲ್ಲ. ನೀತಿ-ತತ್ವ-ತಪಸ್ಸಾಧನೆ-ಸಮ್ಯಕ್ತ್ವಗಳನ್ನು ಪ್ರತಿಪಾದಿಸುವುದೇ ಕವಿಯ ಉದ್ದೇಶ. ಈ ಕಥಾ ರಚನೆಯು ಒಂದೆರಡು ವಾಕ್ಯಗಳನ್ನು ದಾಟುವಾಗಲೇ ನಾವು ಹಲವು ವ್ಯಕ್ತಿಗಳ ಘಟನೆಗಳ ಪರಿಚಯಮಾಡಿಕೊಂಡು ಬೇಗ ಬೇಗನೇ ಮುಂದೆ ಸಾಗುತ್ತೇವೆ. ಅಲ್ಲಲ್ಲಿ ಬರುವ ಪಾತ್ರ ಸಂವಾದಗಳನ್ನು ನೋಡಿದಾಗ ಅವರು ನಮ್ಮ ಮುಂದೆಯೇ ಮಾತಾಡುತ್ತಿರುವರೋ ಎಂಬಂತೆ ನಾವು ಆ ಮಾತುಗಳಿಗೆ ಹತ್ತಿರದವರಾಗುತ್ತೇವೆ. ಕಥೆ ದೊಡ್ಡದಿರಲಿ ಚಿಕ್ಕದಿರಲಿ, ಅದರ ತಳಪಾಯ ಒಂದೇ ವಿಧ. ಕಥಾನಾಯಕನು ತಪೋಮಗ್ನನಾಗಿ ಪೂರ್ವ ವೈರಿಯೊಡ್ಡಿದ ಅಸಹ್ಯವೇದನೆಗಳನ್ನು ಶಾಂತಚಿತ್ತತೆಯಿಂದಲೇ ಅನುಭವಿಸಿ, ಸದ್ಗತಿ ಪಡೆಯುವುದು. ದೊಡ್ಡ ಕಥೆಯಲ್ಲಿ ಹಲವು ಪೂರ್ವಜನ್ಮಗಳ ಸ್ವಾರಸ್ಯಪೂರ್ಣ ಕಥೆಗಳೂ ಹೆಣೆದುಕೊಂಡಿರುತ್ತವೆ.

ಜಿನದೀಕ್ಷೆ ಪಡೆದು ತಪಸ್ಸಾಧನೆ ಮಾಡಿ ಏಕವಿಹಾರಿಯಾದ ಯತಿಯ ಸಂಚಾರವನ್ನು ಹೇಳುವಾಗ 'ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖ'ಗಳ ಉಲ್ಲೇಖ ಎಲ್ಲ ಕಡೆಗೂ ಪರಿಭಾಷಕಗಳು. ಸ್ತ್ರೀ ಸೌಂದರ್ಯವನ್ನು ಪ್ರಸ್ತಾವಿಸುವಲ್ಲಿ 'ಅತ್ಯಂತ ರೂಪ ಲಾವಣ್ಯ ಸೌಭಾಗ್ಯ ಕಾಂತಿ ಹಾವ ಭಾವ ವಿಲಾಸ ವಿಭ್ರಮಂಗಳ ನೊಡೆಯಳ್' ಎಂಬುದು ಸಾಮಾನ್ಯ. 'ಅಂತವರ್ಗಳಿಷ್ಟವಿಷಯ ಕಾಮಭೋಗಂಗಳನನುಭವಿಸುತ್ತಿರೆ,' 'ಸುಖಸಂಕಥಾ ವಿನೋದದಿಂ ಕಾಲಂ ಸಲೆ' ಇತ್ಯಾದಿ ನಿರ್ದಿಷ್ಟವಾದ ಮಾತುಗಳು ಎಲ್ಲ ಕಥೆಗಳಿಗೂ ಆಯಾ ಸನ್ನಿವೇಶದಲ್ಲಿ ಅಂಟಿಕೊಂಡಿದ್ದರೂ ಅವು ಕಥೆಯ ಸ್ವಾರಸ್ಯಕ್ಕಾಗಲೀ ಗತಿಗಾಗಲೀ ಬಾಧಕವಾಗಿಲ್ಲ.

ವಡ್ಡಾರಾಧನೆಯ ಕಥೆಗಳಲ್ಲಿ ಐತಿಹಾಸಿಕ ಮೌಲ್ಯವುಳ್ಳವೂ ಕೆಲವಿವೆ. ಭದ್ರಬಾಹು ಭಟಾರರ ಕಥೆ, ಚಾಣಾಕ್ಯರಿಸಿಯ ಕಥೆ, ಚಿಲಾತ ಪುತ್ರನ ಕಥೆ, ಗುರುದತ್ತ ಭಟಾರರ ಕಥೆ ಇವು ಅಂಥವು.

## ಗ್ರಂಥ ಪ್ರಕಟನೆ :

ವಡ್ಡಾರಾಧನೆಯ ಕಥೆಗಳಲ್ಲಿ ಮೂರನ್ನು ಡಿ. ಎಲ್. ನರಸಿಂಹಾಚಾರ್ಯರು ೧೯೩೨ ರಲ್ಲಿ ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಪ್ರಕಟಿಸಿದರು. ೧೯೪೯ ರಲ್ಲಿ ಗ್ರಂಥವನ್ನು ಪೂರ್ಣವಾಗಿ ಪರಿಷತ್ಪತ್ರಿಕೆಯಲ್ಲಿಯೂ ಅದೇ ವರ್ಷ ಸ್ವತಂತ್ರ ಗ್ರಂಥರೂಪವಾಗಿಯೂ ಪ್ರಕಟಪಡಿಸಿದರು. ಆ ಮೇಲೆ ಅದು ೧೯೫೫, ೬೫, ೭೦, ೭೨ ಎಂಬೀ ವರ್ಷಗಳಲ್ಲಿ ಪುನರಾವೃತ್ತಿ ಮುದ್ರಣಗಳಾಗಿವೆ. ೧೯೭೦ ರಲ್ಲಾದ ನಾಲ್ಕನೆಯ ಮುದ್ರಣದ ವೇಳೆಗೆ ಡಿ. ಎಲ್. ಎನ್. ಅವರು ಇದಕ್ಕೆ ಪೀಠಿಕೆಯನ್ನು ವಿಸ್ತಾರವಾದ ಟಿಪ್ಪಣಿ, ಹರಿಷೇಣನ ಬೃಹತ್ಕಥಾಕೋಶದ ಕಥೆಗಳ ಸಾರಾಂಶ, ಕೆಲವು ಕಠಿನ ಪದಗಳ ಕೋಶ, ಜೈನ ಪಾರಿಭಾಷಿಕ ಶಬ್ದಕೋಶ, ಉದ್ಧೃತ ಪದ್ಯಗಳ ಅಕಾರಾದಿ—ಇವನ್ನೆಲ್ಲ ಬರೆದು ಸೇರಿಸಿ, ಓದುಗರಿಗೆ ಹೆಚ್ಚಿನ ಸೌಕರ್ಯವನ್ನು ಒದಗಿಸಿದ್ದಾರೆ. ಈ ಕುರಿತಾದ ಸಂಶೋಧನೆಗೆ ಡಾ|| ಆ. ನೇ. ಉಪಾಧ್ಯೆ ಅವರು 'ಹರಿಷೇಣನ ಬೃಹತ್ಕಥಾಕೋಶ'ದ ಪ್ರಸ್ತಾವನೆಯಲ್ಲಿ ಬಹಳ ಸಾಮಗ್ರಿಯನ್ನು ಕಾಣಿಸಿದ್ದಾರೆ. ರಂ. ಶ್ರೀ. ಮುಗಳಿ ಅವರ 'ಕನ್ನಡ ಸಾಹಿತ್ಯ ಚರಿತ್ರೆ', ಹಂಪನಾ ಅವರ 'ವಡ್ಡಾರಾಧನೆ' ಮತ್ತು ಧವಳಶ್ರೀ ಅವರ 'ವಡ್ಡಾರಾಧನೆಯಲ್ಲಿ ಸ್ತ್ರೀ', ಆರ್. ಎಲ್. ಅನಂತರಾಮಯ್ಯನವರು ಬರೆದ 'ವಡ್ಡಾರಾಧನ ಕಥಾಲೋಕ' ಎಂಬ ಹೊಸಗನ್ನಡ ಕಥಾರೂಪ, ಕೆ. ನಾಗೇಂದ್ರಪ್ಪ ಅವರು ಬರೆದ 'ವಡ್ಡಾರಾಧನೆಯ ಕಥೆಗಳು', ಎಂ. ಎಂ. ಕಲಬುರ್ಗಿಯವರ 'ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ' ಎಂಬ ಗ್ರಂಥದಲ್ಲಿ ಬರುವ ವಡ್ಡಾರಾಧನೆಯ ಕುರಿತಾದ ಭಾಗ, ಡಾ|| ಕಡಬಡಿಯವರು ವಡ್ಡಾರಾಧನೆಯ ಕುರಿತು ಬರೆದ ಪಿ ಎಚ್. ಡಿ. ಪ್ರಬಂಧ, ಐ ಬಿ ಎಚ್ ಪ್ರಕಾಶನದವರು ಪ್ರಕಾಶಕರಾಗಿದ್ದು ವಿ ಎಂ ಇನಾಂದಾರ್ ಅವರ ವಿದ್ವಾಂಸರು

ಬರೆದ ಪ್ರೌಢಲೇಖನಗಳುಳ್ಳ 'ವಡ್ಡಾರಾಧನೆ', ಬೆಂಗಳೂರು ವಿಶ್ವವಿದ್ಯಾಲಯ ಪ್ರಕಟಿಸಿರುವ 'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯ ದ್ವಿತೀಯ ಸಂಪುಟದಲ್ಲಿ ಬಂದಿರುವ ವಡ್ಡಾರಾಧನೆಯ ಕುರಿತ ಮೂವರ ಲೇಖನಗಳು—ಇತ್ಯಾದಿಯಾಗಿ ವಡ್ಡಾರಾಧನೆಯ ಕುರಿತ ಬರವಣಿಗೆಗಳು ಬಹು ಸಂಖ್ಯೆಯಲ್ಲಿವೆ. ಓದುಗರಿಗೆ ಅವೆಲ್ಲವೂ (ಇನ್ನೂ ಕೆಲವು ಅಲ್ಲಲ್ಲಿ ಬಂದಿರುವ ಬಿಡಿಲೇಖನಗಳು) ಈ ಕೃತಿಯ ಕುರಿತು ಒಂದೊಂದು ಬಗೆಯಲ್ಲಿ ಬೆಳಕು ಕೊಡುವವೇ ಆಗಿವೆ.

ಇಷ್ಟೆಲ್ಲ ಗ್ರಂಥಗಳು, ಲೇಖನಗಳು ಇದ್ದರೂ ಕನ್ನಡ ಸಾಹಿತ್ಯ ಪರಿಷತ್ತು ಹೊರತರುವ ಗ್ರಂಥಕ್ಕೆ ಇತರ ಪ್ರಕಟನೆಗಳಿಗಿಲ್ಲದ ಮಹತ್ತ್ವವಿದೆ. ಈ ಗ್ರಂಥದಲ್ಲಿ ಮೂಲವೂ ಇದೆ, ಜೊತೆಯಾಗಿ ಅನುವಾದವೂ ಇದೆ. ಕೇವಲ ಹಳಗನ್ನಡದಲ್ಲಿ ಪಾಂಡಿತ್ಯವುಳ್ಳವರಿಗೆ ಅವಗಾಹ್ಯವಾಗಿರುವ ವಡ್ಡಾರಾಧನೆ ಇಲ್ಲಿ ಜನಸಾಮಾನ್ಯರಿಗೂ ಓದಿ ತಿಳಿದುಕೊಳ್ಳಲು ಸಾಧ್ಯವಾಗುವಂತಾಗಿದೆ ಭಾಷಾ ಪಾಂಡಿತ್ಯವನ್ನೂ ಸಾಹಿತ್ಯ ಪರಿಜ್ಞಾನವನ್ನೂ ಸ್ವಂತ ಓದಿಯೇ ಹೆಚ್ಚಿಸಿಕೊಳ್ಳಲು ಸಹಾಯಕವಾಗಿದೆ. ಇದರ ಅನುಬಂಧದಲ್ಲಿ ಜೈನ ಪಾರಿಭಾಷಿಕ ಪದಗಳ ಹಾಗೂ ಸಂಖ್ಯಾಪದಗಳ ಅರ್ಥವಿವರ, ಶಬ್ದಕೋಶಗಳಿರುವುದು ಹೆಚ್ಚಿನ ವ್ಯಾಸಂಗಕ್ಕೆ ಸಹಾಯಕವಾಗುವುದರಲ್ಲಿ ಸಂಶಯವಿಲ್ಲ. ಈ ಗ್ರಂಥವನ್ನು ಈ ರೂಪದಲ್ಲಿ ನನ್ನ ಮೂಲಕ ಬರೆಯಿಸಿದವರು ಕನ್ನಡ ಸಾಹಿತ್ಯ ಪರಿಷತ್ತಿನವರು. ಬರೆದುದನ್ನು ಪರಾಮರ್ಶಿಸಿದವರು ಅನುವಾದ ಸಮಿತಿಯ ಅಧ್ಯಕ್ಷರಾದ ವಿದ್ವಾನ್ ಎನ್. ರಂಗನಾಥಶರ್ಮರು. ಇವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಜನಮಂಗೀಕರಿಸುಗೆ ಪೊಸ
ತೆನೆ ಪೊಸಗನ್ನಡದ ಮೂಲಯುತ ವಡ್ಡಾರಾ
ಧನೆಯೆನುತುಂ ಕೇಶವನಿಂ
ಕನೀಯನಿಂ ರಚಿತಮೆಂಬುದೊಂದಾದರದಿಂ

**ಟಿ. ಕೇಶವ ಭಟ್ಟ**

# ವಡ್ಡಾರಾಧನೆ

## ಪೀಠಿಕೆ

ನಮಃ ಶ್ರೀ ವರ್ಧಮಾನಾಯ ನಿರ್ಧೂತ ಕಲಿಲಾತ್ಮನೇ
ಸಾಲೋಕಾನಾಂ ತ್ರಿಲೋಕಾನಾಂ ಯದ್ವಿದ್ಯಾ ದರ್ಪಣಾಯತೇ ॥

ಶ್ರೀ ವೀರ ವರ್ಧಮಾನ ಭಟ್ಟಾರಕರ್ಗೆ ನಮಸ್ಕಾರಂಗೆಯ್ದು ದೇವೋಪಸರ್ಗ ಮಾನುಷ್ಯೋಪಸರ್ಗ ತಿರಿಕೋಪಸರ್ಗಮಚೇತನೋಪಸರ್ಗಮೆಂದಿಂತು ಚತುರ್ವಿಧಮಪ್ಪುಪಸರ್ಗಮುಮಂ ಪಸಿವುಂ ನೀರಳ್ಕೆ ಮೊದಲಾಗೊಡೆಯ ಇಪ್ಪತ್ತೆರಡು ಪರೀಷಹಂಗಳುಮಂ ಸೈರಿಸಿ ಅಯ್ದುಮಿಂದ್ರಿಯಂಗಳಂ ಗೆಲ್ದು ಬಾಹ್ಯಾಭ್ಯಂತರ ಪರಿಗ್ರಹಂಗಳಂ ತೊಱೆದು ದ್ವಾದಶ ವಿಧಮಪ್ಪ ತಪದೊಳ್ ನೆಗಟ್ದು ಪ್ರಾಯೋಪಗಮನದಿಂ ಸಂನ್ಯಸನಂಗೆಯ್ದು ಕರ್ಮಕ್ಷಯಂಗೆಯ್ದು ಮೋಕ್ಷಕ್ಕೆವೋದ ಮತ್ತಂ ಸರ್ವಾರ್ಥಸಿದ್ಧಿಯೊಳ್ ಪುಟ್ಟಿದ ಮಹಾಪುರುಷರ್ಕಳ ಕಥೆಗಳಂ ಪೇಳ್ವಲ್ಲಿ ಮುನ್ನಂ ಸುಕುಮಾರಸ್ವಾಮಿಯ ಕಥೆಯಂ ಪೇಳ್ವೆಂ.

ಶ್ರೀ ವರ್ಧಮಾನ ತೀರ್ಥಂಕರನಿಗೆ ನಮಸ್ಕಾರ. ಯಾವುದು ಅಲೋಕವೆನಿಸುವ ಆಕಾಶದಿಂದ ಕೂಡಿದ ಸ್ವರ್ಗ-ಮರ್ತ್ಯ-ಪಾತಾಳ ಎಂಬ ಮೂರು ಲೋಕಗಳ ಇರುವು-ಆಗು ಹೋಗುಗಳಿಗೆ ಕನ್ನಡಿಯಂತಿರುವುದೋ ಅಂತಹ ಕೇವಲ ಜ್ಞಾನದಿಂದ ಕೂಡಿದವನು ಆತನು. ಘಾತಿ-ಅಘಾತಿ ಎಂಬ ವಿಭಾಗವುಳ್ಳ ಸಕಲ ಕರ್ಮಗಳೆಂಬ ಮಲವನ್ನು ತೊಳೆದವನು. ಸಂಪತ್ತು ತೇಜಸ್ಸುಗಳಿಂದ ಅನ್ವಿತನಾದವನು. ಶ್ರೀ ವೀರವರ್ಧಮಾನ ಸ್ವಾಮಿಯನ್ನು ನಮಸ್ಕರಿಸಿ, ಮಹಾಪುರುಷರುಗಳ ಕಥೆಗಳನ್ನು ಹೇಳುವೆನು. ಅವರು ದೇವ, ಮನುಷ್ಯ, ಮನುಷ್ಯೇತರ ಜೀವಿ, ಅಚೇತನ ಎಂಬ ನಾಲ್ಕು ಬಗೆಯವುಗಳಿಂದ ಬರುವ ಉಪಸರ್ಗ (ತಪೋವಿಘ್ನ) ಗಳನ್ನು ಸೈರಿಸಿದವರು. ಹಸಿವು, ಬಾಯಾರಿಕೆ-ಮುಂತಾದ ಇಪ್ಪತ್ತೆರಡು ಬಗೆಯ ಪರೀಷಹ (ತೊಂದರೆ) ಗಳನ್ನು ಸಹಿಸಿದವರು. ಪಂಚೇಂದ್ರಿಯಗಳನ್ನು ಜಯಿಸಿದವರು ಬಾಹ್ಯ ಅಭ್ಯಂತರ (ಹೊರಗಿನ ಮತ್ತು ಒಳಗಿನ) ಎಂಬ ಎರಡು ಬಗೆಯ ಪರಿಗ್ರಹಗಳನ್ನು ಬಿಟ್ಟು, ಹನ್ನೆರಡು ವಿಧದ ತಪಸ್ಸನ್ನು ಮಾಡಿ ಪ್ರಖ್ಯಾತರಾದವರು. ತನ್ನ ರೋಗಕ್ಕೆ ಚಿಕಿತ್ಸೆ ಮಾಡದೆ ಆಹಾರವನ್ನೂ ಸೇವಿಸದೆ ಧ್ಯಾನದಲ್ಲೇ ಅಚಲರಾಗಿದ್ದು ಸಂನ್ಯಾಸವನ್ನು ಕೈಗೊಂಡು, ಘಾತಿ-ಅಘಾತಿ ಕರ್ಮಗಳನ್ನು ನಾಶಗೊಳಿಸಿ ಮೋಕ್ಷಕ್ಕೆ ಹೋದವರು ಮತ್ತು **ಸರ್ವಾರ್ಥಸಿದ್ಧಿ** ಎಂಬ ಎಲ್ಲಕ್ಕೂ ಮೇಲಿನ ಲೋಕದಲ್ಲಿ ಜನಿಸಿದವರು. ಅಂತಹ ಮಹಾಪುರುಷರುಗಳ ಕಥೆಗಳನ್ನು ಹೇಳುವಲ್ಲಿ ಮೊದಲು **ಸುಕುಮಾರಸ್ವಾಮಿಯ ಕಥೆ**ಯನ್ನು ಹೇಳುವೆನು.

# ೧. ಸುಕುಮಾರಸ್ವಾಮಿಯ ಕಥೆ

ಗಾಹೆ॥ ಭಲ್ಲುಕ್ಕಿಯೇಣ ಣಿಚ್ಚಂ ಖಜ್ಜಂತೋ ಘೋರ ವೇದಣಠ್ಠೋವಿ
ಆರಾಧಣಂ ಪವಣ್ಣೋ ಝಾಣೇಣ ಅವಂತಿ ಸುಕುಮಾರೋ ॥

[ಭಲ್ಲುಕ್ಕಿಯೇಣ- ಮುನ್ನಿನ ಜನ್ಮಾಂತರದತ್ತಿಗೆಯಪ್ಪ, ಪೆಣ್ಣರಿಯಿಂದಂ, ಣಿಚ್ಚಂ ಖಜ್ಜಂತೋ- ಮೂಱು ದಿವಸಂ ನಿರಂತರ ಇರುಳುಂ ಪಗಲುಂ ತಿನೆಪಡುತಿರ್ದೊನಾಗಿಯುಂ, ಘೋರ ವೇದಣಠ್ಠೋವಿ - ಕಡಿದಪ್ಪ ವೇದನೆಯಿಂದಂ ಬಟ್ಟಿದೊನಾಗಿಯುಂ, ಆರಾಧಣಂ - ಸಮ್ಯಗ್ದರ್ಶನ ಜ್ಞಾನ ಚಾರಿತ್ರಾತ್ಮಕಮಪ್ಪಾರಾಧನೆಯಂ, ಝಾಣೇಣ - ಉತ್ತಮ ಧ್ಯಾನದಿಂದಂ, ಅವಂತಿ ಸುಕುಮಾರೋ - ಆವಂತಿಯೆಂಬ ಸುಕುಮಾರಸ್ವಾಮಿ, ಪವಣ್ಣೋ - ಪೊರ್ದಿದೊಂ]
ಅದೆಂತೆಂದೊಡೆ

ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ವತ್ಸೆಯೆಂಬುದು ನಾಡಲ್ಲಿ ಕೌಸಂಬಿಯೆಂಬುದು ಪೊೞಲದನಾಳ್ವೊನತಿಬಳನೆಂಬರಸನಾತನ ಮಹಾದೇವಿ ಮನೋಹರಿಯೆಂಬೊಳ್ ಪೆಸರ್ಗೆ ತಕ್ಕಂತೆ ನೋಡಿದರೆಲ್ಲರ ಕಣ್ಣಾಲಿಗೆ ಸೊಗಯಿಸುವಳ್ ಸತ್ಯಶೌಚಾಚಾರಂಗಳಿಂ ಕೂಡಿದೊಳ್ ಅತ್ಯಂತ ರೂಪ ಲಾವಣ್ಯ ಸೌಭಾಗ್ಯ ಕಾಂತಿ ಹಾವ ಭಾವ ವಿಲಾಸ ವಿಭ್ರಮಂಗಳನೊಡೆಯಳಂ ತವರ್ಗಳಿಪ್ಪವಿಷಯ ಕಾಮಭೋಗಂಗಳನನುಭವಿಸುತ್ತಿರೆ ಮತ್ತಾ ಅರಸನ ಮಂತ್ರಿ ಸೋಮ ಶರ್ಮನೆಂಬೊನಾತನ ಭಾರ್ಯೆ ಕಾಶ್ಯಪಿಯೆಂಬೊಳ್ - ಇರ್ವರ್ಗಂ ಮಕ್ಕಳಗ್ನಿಭೂತಿ ವಾಯು

[ಅವಂತಿ ಸುಕುಮಾರ ಎಂತಲೂ ಹೆಸರುಳ್ಳ ಸುಕುಮಾರಸ್ವಾಮಿಯನ್ನು ಹಿಂದಿನ ಜನ್ಮಾಂತರದಲ್ಲಿ ಅತ್ತಿಗೆಯಾಗಿದ್ದ ಹೆಣ್ಣುನರಿ ಎಡೆಬಿಡದೆ ಮೂರುದಿವಸ್ಕ ಇರುಳೂ ಹಗಲೂ ಕಚ್ಚಿ ತಿನ್ನುತ್ತಿತ್ತು. ಈ ಕಠಿನವಾದ ನೋವಿನಿಂದ ಸತ್ತವನಾದರೂ ಶ್ರೇಷ್ಠವಾದ ಧ್ಯಾನ ದಿಂದ ಅವನು ಸಮ್ಯಗ್ದರ್ಶನ ಸಮ್ಯಗ್‌ಜ್ಞಾನ ಸಮ್ಯಕ್‌ಚಾರಿತ್ರ ಎಂಬ ರತ್ನತ್ರಯ ಗಳಿಂದ ಕೂಡಿದ ಆರಾಧನೆಯನ್ನು ನಡೆಸಿದನು] ಅದು ಹೇಗೆಂದರೆ–ಈ ಜಂಬೂ ದ್ವೀಪದ ಭರತಕ್ಷೇತ್ರದಲ್ಲಿ ವತ್ಸೆ ಎಂಬ ನಾಡಿದ್ದಿತು. ಆ ನಾಡಿನ ಪಟ್ಟಣ ಕೌಸಂಬಿ. ಅದನ್ನು ಅತಿಬಳನೆಂಬ ಅರಸನು ಆಳುತ್ತಿದ್ದನು. ಅವನ ಪಟ್ಟದ ರಾಣಿಯ ಹೆಸರು ಮನೋಹರಿ. ಆಕೆ ಹೆಸರಿಗೆ ತಕ್ಕಂತೆ ನೋಡಿದವರೆಲ್ಲರ ಕಣ್ಣಿಗೂ ಚೆಲುವೆಯಾಗಿದ್ದಳು. ಸತ್ಯ–ಶುಚಿತ್ವ–ಸದಾಚಾರಗಳಿಂದ ಕೂಡಿದ್ದಳು, ಅತ್ಯಂತ ರೂಪ ಸೌಂದರ್ಯದಿಂದಲೂ ಸೌಭಾಗ್ಯ–ಕಾಂತಿ–ಹಾವ-ಭಾವ-ವಿಲಾಸ–ವಿಭ್ರಮಗಳನ್ನು ಉಳ್ಳವಳಾಗಿದ್ದಳು. ಅಂತು ಅವರಿಬ್ಬರು ತಮ್ಮ ಪ್ರೀತಿಯ ವಿಷಯದ ಸುಖಗಳನ್ನು ಅನುಭವಿಸುತ್ತಾ ಇದ್ದರು. ಆ ಅರಸನ ಮಂತ್ರಿ ಸೋಮಶರ್ಮನು. ಆತನ ಹೆಂಡತಿ ಕಾಶ್ಯಪಿಯೆಂಬವಳು. ಈ ಇಬ್ಬರಿಗೆ ಅಗ್ನಿಭೂತಿ ವಾಯುಭೂತಿ ಎಂಬಿಬ್ಬರು ಮಕ್ಕಳು. ಇವರು ತಾಯಿತಂದೆಗಳ ಮಾತನ್ನೇ

ಭೂತಿಯೆಂಬವರ್ಗಳ್ ತಾಯ್ ತಂದೆವಿರ ಕೇಳ್ಪಿಯುಂ ಗೆಯ್ಯದಾ ವೇದಂ ಮೊದಲಾಗೊಡೆಯ ಶಾಸ್ತ್ರಂಗಳನೋದದೆ ತಂದೆ ಪಡೆದ ಕಸವರಮಂ ಬಿಯಂಗೆಯ್ಯುತ್ತುಂ ಸಪ್ತವ್ಯಸನಾಭಿಭೂತರಾಗಿ ನೆಗೞುತ್ತಿರೆಯಿರೆ ಪಲಕಾಲದಿಂ ತಂದೆ ಕೞಿದೊಡೆ ಸೋಮಶರ್ಮಂಗೆ ಮಕ್ಕಳೊಳರಿಲ್ಲೆಂದರಸಂ ಬೆಸಗೊಂಡೊಡೊಳರೆಂದು ಪೇೞ್ದೊಡವರ್ಗೆ ಬಱಿಯಟ್ಟಿವರಿಸಿ ಮಜ್ಜನದೊಳ್ ಮಿಸಿಸಿ ಉಡಿಸಿ ತುಡಿಸಿಯೂಡಿ ತಂಬುಲಂಗೊಟ್ಟುಬ್ಬೆಗಂಬಡದಿರಿಮೆಂದು ನುಡಿದವರ್ಗ್ಗಳ ದುಃಖಮನಾಱಿಸಿ ಬೀಡಿಂಗೆ ಪೋಗಲ್ವೇೞ್ದು ಕೆಲವು ದಿವಸದಿಂ ಬಱಿಯಟ್ಟಿ ವರಿಸಿ ನೀಮಾವೋದುಗಳಂ ಬಲ್ಲಿರೆಂದಿರ್ವರುಮಂ ಬೆಸಗೊಂಡೊಡವರ್ಗ್ಗಳ್ ತಲೆಯಂ ಬಾಗಿ ಮಱುಮಾತುಗುಡದೆ ಕಣ್ಣನೀರಂ ತೀವಿ ನೆಲನಂ ಬರೆಯುತ್ತಿರೆ ಸಭೆಯೊಳಿರ್ದ್ದವರ್ಗ್ಗಳೆಲ್ಲಂ - ಇವರ್ ಮೂರ್ಖರೇನುಮೋದುಗಳನಱಿಯರ್ ಸಪ್ತವ್ಯಸನಾಭಿಭೂತರೆಂದರಸಂಗೆ ಪೇೞ್ದೊಡರಸನವರ್ಗಳನಟ್ಟಿ ಕಳೆದವರ ದಾಯಿಗಂ ಶಾಸ್ತ್ರಂಗಳಂ ಬಲ್ಲೊಂಗಂ ಮಂತ್ರಿಪದವಿಯುಂ ಬಾೞುಮಂ ಪ್ರತಿಪತ್ತಿಯುಮಂ ಕೊಟ್ಟುದಂ ಕೇಳ್ದಿರ್ವರುಮುಬ್ಬೆಗಂಬಟ್ಟು ವೈರಾಗ್ಯಪರಾಯಣರಾಗಿ ಕಪ್ಪಡ

ಕೇಳುತ್ತಿರಲಿಲ್ಲ. ವೇದ ಮುಂತಾದ ಯಾವ ಶಾಸ್ತ್ರಗಳನ್ನೂ ಓದಲಿಲ್ಲ. ತಂದೆ ಸಂಪಾದಿಸಿದ ಸಂಪತ್ತನ್ನೆಲ್ಲ ವೆಚ್ಚಮಾಡುತ್ತ ಬೇಟೆ, ಜೂಜು, ಮಾಂಸಸೇವನೆ, ಮದ್ಯಪಾನ, ವೇಶ್ಯಾಗಮನ, ಕಳ್ಳತನ, ದುರ್ವಾಕ್ಯ–ಎಂಬ ಏಳು ಬಗೆಯ ಕೆಟ್ಟ ಚಟಗಳಿಗೆ ಬಲಿಯಾಗಿ ನಡೆಯುತ್ತಿದ್ದರು. ಹೀಗೆ ಹಲವು ಕಾಲ ಕಳೆಯಿತು. ತಂದೆ ಸೋಮಶರ್ಮನು ತೀರಿಹೋದನು. ಅತಿಬಳ ಮಹಾರಾಜನು ಸೋಮಶರ್ಮನಿಗೆ ಮಕ್ಕಳಿದ್ದಾರೋ ಇಲ್ಲವೋ ಎಂದು ವಿಚಾರಿಸಿದನು ; ಇದ್ದಾರೆಂದು ತಿಳಿದು, ಒಡನೆ ದೂತರನ್ನು ಕಳುಹಿಸಿ ಅವರಿಬ್ಬರನ್ನೂ ಬರಿಸಿದನು ಅವರಿಗೆ ಪೂರ್ಣಸ್ನಾನ ಮಾಡಿಸಿ, ಬಟ್ಟೆಯುಡಿಸಿ, ತಕ್ಕ ಭೂಷಣಗಳನ್ನು ಕೊಡಿಸಿ, ಊಟಮಾಡಿಸಿದನು, ತಾಂಬೂಲ ಕೊಟ್ಟು 'ನೀವು ದುಃಖ ಪಡದಿರಿ ಎಂದು ಹೇಳಿ ಅವರ ವ್ಯಸನವನ್ನು ನಿವಾರಿಸಿ, ತಮ್ಮ ಮನೆಗೆ ಕಳುಹಿಸಿಕೊಟ್ಟನು. ಕೆಲವು ದಿನಗಳ ನಂತರ ರಾಜನು ಪುನಃ ದೂತರನ್ನು ಕಳುಹಿಸಿ ಅವರನ್ನು ಬರಮಾಡಿದನು. "ನೀವು ಯಾವ ವಿದ್ಯೆಗಳನ್ನು ಬಲ್ಲಿರಿ ?" ಎಂದು ಇಬ್ಬರನ್ನೂ ಕೇಳಿದನು. ಆಗ ಅವರು ತಲೆಬಗ್ಗಿಸಿದರು ; ಪ್ರತ್ಯುತ್ತರ ಕೊಡಲಿಲ್ಲ. ಕಣ್ಣೀರನ್ನು ತುಂಬಿ ನಾಚಿಕೆಯಿಂದ ನೆಲದ ಮೇಲೆ ಕಾಲ ಬೆರಲಿನಿಂದ ಗೀರತೊಡಗಿದರು. ಆಗ ಸಭೆಯಲ್ಲಿದ್ದವರೆಲ್ಲರೂ ರಾಜನಿಗೆ ಹೀಗೆಂದರು–"ಇವರು ತಿಳಿಗೇಡಿಗಳು. ವಿದ್ಯೆಗಳೇನನ್ನೂ ತಿಳಿಯರು. ಸಪ್ತವ್ಯಸನಗಳ ಬಾಧೆಗೆ ಒಳಗಾದವರು" ಆಗ ರಾಜನು ಅವರನ್ನು ಅಲ್ಲಿಂದ ಓಡಿಸಿಬಿಟ್ಟನು. ಅವರ ದಾಯಾದಿಯಾಗಿದ್ದು ಶಾಸ್ತ್ರಗಳನ್ನೆಲ್ಲಾ ತಿಳಿದವನಾದ ಒಬ್ಬನಿಗೆ ಮಂತ್ರಿ ಪದವಿಯನ್ನೂ ಜೀವಿಕೆಯನ್ನೂ ಗೌರವವನ್ನೂ ಕೊಟ್ಟನು. ಈ ಸಂಗತಿಯನ್ನು ಅಗ್ನಿಭೂತಿ ವಾಯುಭೂತಿ ಇಬ್ಬರೂ ಕೇಳಿ ವ್ಯಸನಪಟ್ಟರು. ಅವರು ವೈರಾಗ್ಯದಿಂದ, ಹರಕು ಬಟ್ಟೆಯನ್ನುಟ್ಟು, ಭಿಕ್ಷೆಬೇಡಿಕೊಂಡಾದರೂ

ಮುಟ್ಟು ಬೈಕಂದಿರಿರ್ದಿನ್ನೆಪ್ಪೊಡಮೋದುವಮೆಂದು ತಾಯ್ಗೆ ನುಡಿದೊಡಂತಪ್ಪೊಡೆ ಮಕ್ಕಳಿರಾ ಮಗಧೆಯೆಂಬುದು ನಾಡಲ್ಲಿ ರಾಜಗೃಹಮೆಂಬುದು ಪೊಱಲದನಾಳ್ವೊಂ ಸುಬಲನೆಂಬರಸನಾತನ ಮಹಾದೇವಿ ಸುಪ್ರಭೆಯೆಂಬೊಳವರ್ಗ್ಗೆ ಮಂತ್ರಿಯೆಮ್ಮಣ್ಣಂ ಸೂರ್ಯಮಿತ್ರನೆಂಬೊಂ ಎಲ್ಲಾ ಓದುಗಳುಮಂ ಬಲ್ಲೊನಾತಂ ನಿಮ್ಮನೋದಿಸಿ ಯೋಗ್ಯರಂ ಮಾಡುವಂತಿರೆ ನಿರೂಪಿಸಿ ಕಳ್ಪಿಸಿ ಯೋಲೆಯುಂ ಬರೆಯಿಸಿ ನಿಮ್ಮ ಕಯ್ಯೊಳಟ್ಟಿದಪೆಂ ನೀಮುಂ ಪೋಗಿ ನಿಮ್ಮ ಮಾವನ ಪಕ್ಕದೊಳೋದಿಮೆಂದೋಲೆಯುಂ ಬರೆಯಿಸಿ ಕೊಟ್ಟೊಡವರ್ಗ್ಗಳುಂ ತಾಯುಂ ಬೀೞ್ಕೊಂಡು ಕತಿಪಯ ದಿವಸಂಗಳಿಂ ರಾಜಗೃಹಮನೆಯ್ದಿ ಸೂರ್ಯಮಿತ್ರನ ಮನೆಯುಂ ಬೆಸಗೊಂಡು ಪೋಗಿ ಕಂಡೋಲೆಯು ನಿಕ್ಕಿದೊಡೆ ಸೂರ್ಯಮಿತ್ರನೆಲ್ಲಿಂ ಬಂದಿರಾರೋಲೆಯೆಂದು ಬೆಸಗೊಂಡೊಡೆ - ಕೌಸಂಬಿಯಿಂ ಬಂದೆವು ನಿಮ್ಮ ತಂಗೆಯಪ್ಪ ಕಾಶ್ಯಪಿಯಟ್ಟಿದೋಲೆಯೆಂದೊಡೋಲೆಯುಂ ಬಾಜಿಸಿ ನೋಡಿ ಸೋಮಶರ್ಮಂ ಕಱಿದುದುಮಂ ಮಂತ್ರಿಪದವಿ ಪೆಱರ್ಗ್ಗಾದುದುಮಂ ಮಕ್ಕಳ್ ಸಪ್ತವ್ಯಸನಾಭಿಭೂತರಾಗಿ ಬಾೞಿಂ ಕೆಟ್ಟುದುಮಂ ಶಾಸ್ತ್ರಜ್ಞರುಂ ಬುದ್ಧಿಯೊಡೆಯರುಂ ಯೋಗ್ಯರುಮಪ್ಪಂತು ಮಾಡಿಮೆಂದು ಮಕ್ಕಳಂ ತನಗೆ ನಿರೂಪಿಸಿಯಟ್ಟಿದುದುಮನಿಂತಿವೆಲ್ಲಮಂ ಬಾಜಿಸಿ

ಇನ್ನಾದರೂ ಓದೋಣ ಎಂದುಕೊಂಡು, ತನ್ನ ತಾಯಿಗೆ ಈ ಸಂಗತಿಯನ್ನು ತಿಳಿಸಿದರು. ಆಗ ಕಾಶ್ಯಪಿ ಅವರೊಡನೆ ಹೀಗೆ ಹೇಳಿದಳು–"ಮಕ್ಕಳೇ, ಮಗಧೆ ಎಂಬ ನಾಡಿನಲ್ಲಿ ರಾಜಗೃಹ ಎಂಬ ಪಟ್ಟಣವಿದೆ. ಅದನ್ನು ಸುಬಲನೆಂಬ ರಾಜನು ಆಳುತ್ತಿರುವನು. ಅವರ ರಾಣಿ ಸುಪ್ರಭೆ. ಅವರಿಗೆ ಮಂತ್ರಿಯಾಗಿರುವ ಸೂರ್ಯಮಿತ್ರ ನನ್ನಣ್ಣ. ಅವನು ಎಲ್ಲ ವಿದ್ಯೆಗಳನ್ನೂ ಬಲ್ಲವನು. ಆತನು ನಿಮ್ಮನ್ನು ಓದಿಸಿ ಯೋಗ್ಯರನ್ನಾಗಿ ಮಾಡಲು ಹೇಳಿ ತಿಳಿಸಿ ಪತ್ರ ಬರೆಯಿಸಿ ನಿಮ್ಮ ಕೈಯಲ್ಲಿ ಕಳುಹಿಸುತ್ತೇನೆ. ನೀವು ಹೋಗಿ ನಿಮ್ಮ ಮಾವನ ಬಳಿಯಿದ್ದು ವಿದ್ಯೆ ಕಲಿಯಿರಿ". ಹೀಗೆಂದು ಆಕೆ ಪತ್ರಬರೆಸಿ ಕೊಟ್ಟಳು. ಅವರಿಬ್ಬರೂ ತಾಯಿಯನ್ನು ಬೀಳ್ಕೊಂಡರು. ಕೆಲವು ದಿನಸಗಳಲ್ಲಿ ರಾಜಗೃಹಕ್ಕೆ ಬಂದರು. ಅಲ್ಲಿ ಕೇಳಿಕೊಂಡು ಸೂರ್ಯಮಿತ್ರನ ಮನೆಗೆ ಹೋದರು. ಅವನನ್ನು ಕಂಡು ಪತ್ರವನ್ನು ಕೊಟ್ಟರು. ಆಗ ಸೂರ್ಯಮಿತ್ರನು–"ನೀವು ಎಲ್ಲಿಂದ ಬಂದಿರಿ ? ಯಾರ ಪತ್ರವಿದು ?" ಎಂದು ಕೇಳಿದನು. ಅದಕ್ಕೆ ಇವರು–"ನಾವು ಕೌಸಂಬಿಯಿಂದ ಬಂದೆವು. ಈ ಪತ್ರವನ್ನು ನಿಮ್ಮ ತಂಗಿ ಕಾಶ್ಯಪಿ ಕಳುಹಿಸಿದಳು" ಎಂದರು. ಸೂರ್ಯಮಿತ್ರನು ಆ ಪತ್ರವನ್ನು ಓದಿ ನೋಡಿದನು. ಸೋಮಶರ್ಮನು ತೀರಿಹೋದುದು, ಮಂತ್ರಿ ಪದವಿ ಬೇರೆಯವರಿಗೆ ಆದುದು, ಮಕ್ಕಳು ಕೆಟ್ಟ ಚಟಗಳಿಗೆ ಬಲಿಬಿದ್ದು ಜೀವನೋಪಾಯವನ್ನೇ ಕಳೆದುಕೊಂಡುದು, ಇವರನ್ನು ಶಾಸ್ತ್ರಜ್ಞರೂ ಬುದ್ಧಿವಂತರೂ ಯೋಗ್ಯರೂ ಆಗುವಂತೆ ಮಾಡಬೇಕೆಂದು ಸೂಚಿಸಿ ಮಕ್ಕಳನ್ನು ತನ್ನ ಬಳಿಗೆ ಕಾಶ್ಯಪಿ ಕಳುಹಿಸಿದುದು–ಹೀಗೆ

ನೋಡಿ—ಇವಂದಿರ್ಗೆ ಪಸರಂ ಗೊಟ್ಟೆನಪ್ಪೊಡೆ ಮುನ್ನಿನಂತುರ್ಕಿ ಕಿಡುವರೆಂದು ಮನದೆ ಬಗೆದಗ್ನಿಭೂತಿ ವಾಯುಭೂತಿಗಳ್ಗಿಂತೆಂದಂ—ಕಾಶ್ಯಪಿಯೆಂಬೊಳೆನಗೆ ತಂಗೆಯಿಲ್ಲ ಸೋಮಶರ್ಮನೆಂಬೊಂ ಮಯ್ದುನನುಮಿಲ್ಲ ಸೂರ್ಯಮಿತ್ರನೆಂಬ ಪೆಸರೆನಗುಂಟು ನಿಮ್ಮ ಮಾವನಪ್ಪ ಸೂರ್ಯಮಿತ್ರನಲ್ಲೆನೆಂದವರ್ಗ್ಗೆ ನುಡಿದುಂ ಮತ್ತಮಿಂತೆಂದಂ ನೀಮಾರ್ಗ್ಗರಾದೊಡಮೇಂ ವಿದ್ಯಾರ್ಥಿಗಳಾಗಿಯೋದಂ ಕಲ್ವೆಮೆಂಬಟ್ಟಿಯೊಳ್ ಬಂದಿರಪ್ಪೊಡೆ ಬೈಕಂದಿರಿದು ಕಪ್ಪಡಮುಟ್ಟಿರುಳುಂ ಪಗಲುಮಲಸದೆ ನಿರ್ಬಂಧದಿಂದೋದಲಾರ್ಪೊಡೆ ನಿಮ್ಮನೋದಿಸಲಕ್ಕುಮೆಂದೊಡವರ್ಗಳುಮಿಂ ದಯೆಗೆಯ್ಯಂ ಮಹಾಪ್ರಸಾದಮೆಂದು ಪೊಡಮಟ್ಟು ಹರ್ಷಚಿತ್ತರಾಗಿ ಒಳ್ಳಿತಪ್ಪ ದಿವಸ ವಾರ ವಿದ್ಯಾನಕ್ಷತ್ರದಂದು ತಮ್ಮನುಕೂಲದೊಳೋಜರ್ಗ್ಗೆಱಗಿ ಪೊಡೆವಟ್ಟು ವಿದ್ಯಾಪ್ರಾರಂಭಂಗೆಯ್ದರ್ ಸೂರ್ಯಮಿತ್ರನುಮವರನಿರುಳುಂ ಪಗಲುಂ ನಿರಂತರಂ ನಿರ್ಬಂಧದಿಂದೋದಿಸಿ ಏೞೆಂಟು ವರುಷದಿಂದೊಳಗೆ ನಾಲ್ಕು ವೇದಮುಮಾಱಂಗಮುಂ ಪದಿನೆಂಟು ಧರ್ಮಶಾಸ್ತ್ರಂಗಳುಂ ಮೀಮಾಂಸಾ ನ್ಯಾಯವಿಸ್ತರಂ ವ್ಯಾಕರಣಂ ಪ್ರಮಾಣಂ ಛಂದಮಲಂಕಾರಂ ನಿಘಂಟು ಕಾವ್ಯನಾಟಕಂಗಳುಂ

ಇವೆಲ್ಲವನ್ನೂ ಓದಿನೋಡಿದನು. ನಾನು ಇವರಿಗೆ ಸಲುಗೆ ಕೊಟ್ಟೆನಾದರೆ ಇವರು ಹಿಂದಿನಂತೆ ಗರ್ವಿಷ್ಠರಾಗಿ ಹಾಳಾಗುವರು—ಎಂದು ಮನಸ್ಸಿನಲ್ಲಿ ಯೋಚಿಸಿದನು. ಅಗ್ನಿಭೂತಿ ವಾಯುಭೂತಿಗಳಿಗೆ ಮತ್ತೆ ಹೀಗೆಂದನು–"ನನಗೆ ಕಾಶ್ಯಪಿ ಎಂಬ ತಂಗಿಯಿಲ್ಲ. ಸೋಮಶರ್ಮ ಎಂಬ ಹೆಸರುಳ್ಳ ಭಾವಮೈದುನನೂ ಇಲ್ಲ. ನನಗೆ ಸೂರ್ಯಮಿತ್ರನೆಂಬ ಹೆಸರಿದೆ. ನಿಮ್ಮ ಮಾವನಾಗಿರುವ ಸೂರ್ಯಮಿತ್ರ ನಾನಲ್ಲ". ಮತ್ತೆ ಹೀಗೆಂದನು–"ನೀವು ಯಾರ ಮಕ್ಕಳಾದರೇನು ? ಯಾರಾದರೇನು ? ವಿದ್ಯಾರ್ಥಿಗಳಾಗಿ ವಿದ್ಯೆ ಕಲಿವ ಪ್ರೀತಿಯಿಂದ ಬಂದಿದ್ದೀರಾದರೆ ಅಡ್ಡಿಯಿಲ್ಲ. ಭಿಕ್ಷಾಟನೆ ಮಾಡಿ, ಹರಕುಬಟ್ಟೆಯುಟ್ಟು ಇರುಳೂ ಹಗಲೂ ಆಲಸ್ಯಗೊಳ್ಳದೆ ನಿಯಮಕ್ಕೆ ಅನುಸಾರವಾಗಿ ಕಲಿಯಲು ನೀವು ಸಾಧ್ಯತೆಯುಳ್ಳವರಾದರೆ ನಿಮಗೆ ವಿದ್ಯೆ ಕಲಿಸಬಹುದು". ಆಗ ಅವರು "ಇನ್ನು ದಯೆ ಮಾಡಿ. ಅನುಗ್ರಹವಿದು" ಎಂದು ನುಡಿದು ಸಾಷ್ಟಾಂಗ ವಂದಿಸಿದರು. ಮನಸ್ಸಿನಲ್ಲಿ ಸಂತೋಷಪಟ್ಟರು. ಒಳ್ಳೆಯ ದಿನ ವಿದ್ಯಾರಂಭಕ್ಕೆ ಯೋಗ್ಯವಾದ ನಕ್ಷತ್ರದಂದು ತಮಗೆ ಅನುಕೂಲವೆನಿಸಿದಂದು ಉಪಾಧ್ಯಾಯರಿಗೆ ನಮಸ್ಕರಿಸಿ, ಸಾಷ್ಟಾಂಗ ವಂದಿಸಿ ಅವರು ವಿದ್ಯಾಭ್ಯಾಸವನ್ನು ಪ್ರಾರಂಭಿಸಿದರು. ಸೂರ್ಯಮಿತ್ರನು ಅವರನ್ನು ಇರುಳೂ ಹಗಲೂ ಎಡೆಬಿಡದೆ ಕಟ್ಟುನಿಟ್ಟಿನಿಂದ ಓದಿಸಿದನು. ಏಳೆಂಟು ವರ್ಷಗಳೊಳಗೆ ನಾಲ್ಕು ವೇದಗಳನ್ನೂ ವೇದದ ಆರು ಅಂಗಗಳಾದ ಶಿಕ್ಷೆ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು, ಜ್ಯೋತಿಷಗಳನ್ನೂ ಹದಿನೆಂಟು ಧರ್ಮಶಾಸ್ತ್ರಗಳನ್ನೂ ಕಲಿಸಿದನು. ಮೀಮಾಂಸೆ, ತರ್ಕಶಾಸ್ತ್ರ, ವ್ಯಾಕರಣ, ಪ್ರಮಾಣ, ಛಂದಸ್ಸು, ಅಲಂಕಾರಶಾಸ್ತ್ರ, ಶಬ್ದಕೋಶ, ಕಾವ್ಯ ನಾಟಕಗಳು, ಕಾಟಿಲ್ಯನ ಅರ್ಥಶಾಸ್ತ್ರ, ಸಾಮುದ್ರಿಕ

ಚಾಣಕ್ಯಂ ಸಾಮುದ್ರಿಕಂ ಶಾಲಿಹೋತ್ರಂ ಪಾಳಕಾಪ್ಯಂ ಹಾನಿತಂ ಚರಕಮಶ್ವಿನೀಮತಂ ಬಾಹಲಂ ಸುಶ್ರುತಂ ಕ್ಷಾರಪಾನೀಯಂ ಮೊದಲಾಗೊಡೆಯ ನರವೈದ್ಯಂಗಳುಂ ಜ್ಯೋತಿಷಂ ಮಂತ್ರವಾದಂ ಮೊದಲಾಗೊಡೆಯ ಶಾಸ್ತ್ರಂಗಳೆಲ್ಲಮಂ ನೆಱೆಯೆ ಕಲ್ಪಿಸಿ ಯೋಗ್ಯರ್ ಮಾಡಿದೊಡವರ್ ನಿಮ್ಮ ಪ್ರಸಾದದಿಂದೆಲ್ಲಾ ಶಾಸ್ತ್ರಮಂ ಕಲ್ತು ಪಂಡಿತರೆಮಾದೆಮೆಂದಾದಮಾನುಮೊಸೆದುಮಿನ್ನೆಮ್ಮ ನಾಡ್ಗೆ ಪೋದಪೆಮೆಂದೋಜರ್ಗೆಱಗಿ ಪೊಡೆವಟ್ಟು ಬೀೞ್ಕೊಂಡಾಗಳೋಜರೆಂದರ್— ನೀಮೆಮ್ಮ ತಂಗೆಯ ಮಕ್ಕಳಿರ್ ಸೋದರಳಿಯಂದಿರಪ್ಪಿರ್ ನಿಮಗಾಂ ಪಸರಂಗೊಟ್ಟೆನಿಲ್ಲೇಕೆಂದೊಡೆ ಮುನ್ನಿನಂತೆ ತಂದೆಯಲ್ಲಿಯುರ್ಕ್ಕಿ ಕೆಟ್ಟಂತಿರಿಲ್ಲಿಯುಮೆತ್ತಾನುಮುರ್ಕ್ಕಿ ಕಿಡುವಿರೆಂದಾಂ ನಿಮ್ಮಂ ಯೋಗ್ಯರಂ ಮಾಡುವ ಕಾರಣಮಾಗಿ ನಿಮಗೆ ಪಸರಂಗೊಟ್ಟೆನಿಲ್ಲಿದರ್ಕ್ಕೆ ಮುಳಿಯದಿರಿಂ ಕ್ಷಮಿಯಿಸಿಮೆಂದುಡಲುಂ ತುಡಲುಂ ಸಂಬಳಮುಮಂ ಕೊಟ್ಟು ಕೞಿಪಿದಾಗಳ್-ಪಿರಿಯಾತನಗ್ನಿಭೂತಿಯೆಂಬೊಂ ಮಾವನೆಮಗೆ ಪಸರಂಗುಡದಿರ್ದುದುಮಂ ಯೋಗ್ಯರಂ ಮಾಡಿದನೆಂದುಪಕಾರಮಂ ಮನದೆ ಬಗೆದಾದಮಾನುಂ ಸಂತೋಷಂಬಟ್ಟಂ ಕಿಱಿಯಾತಂ ವಾಯುಭೂತಿ ಸೂರ್ಯಮಿತ್ರಂ ಗೆಯ್ದುದೆಲ್ಲಮುಪಕಾರಮೆಂದು ಬಗೆದೆಂಪಪ್ಪೊಡಮೆಮ್ಮ ಮಾವಂ ಬೈಕಂದಿರಿದು

ಶಾಸ್ತ್ರ, ಶಾಲಿಹೋತ್ರಋಷಿಯ ಅಶ್ವಶಾಸ್ತ್ರ, ಪಾಳಕಾಪ್ಯ ಋಷಿ ಪ್ರಣೀತವಾದ ಗಜಶಾಸ್ತ್ರ, ಹಾನಿತ ಎಂಬ ವೈದ್ಯಶಾಸ್ತ್ರ, ಚರಕ ಅಶ್ವಿನೀಮತ ಎಂಬ ವೈದ್ಯಗ್ರಂಥಗಳು, ವಾಗ್ಭಟನ ಅಷ್ಟಾಂಗ ಹೃದಯ, ಸುಶ್ರುತಗ್ರಂಥ, ಬಿಡುಲವಣ ಅಥವಾ ಕೃಷ್ಣ ಲವಣದ ಪಾನಕ್ಕೆ ಸಂಬಂಧಿಸಿದ ವೈದ್ಯ ಮುಂತಾದ ಮನುಷ್ಯ ವೈದ್ಯಗಳನ್ನೂ ಕಲಿಸಿದನು. ಜ್ಯೋತಿಷ, ಮಂತ್ರವಾದ ಮುಂತಾದ ಎಲ್ಲ ಶಾಸ್ತ್ರಗಳನ್ನೂ ಪೂರ್ಣವಾಗಿ ಕಲಿಸಿ ಅವರನ್ನು ಯೋಗ್ಯರಾಗಿ ಮಾಡಿದನು. "ತಮ್ಮ ಅನುಗ್ರಹದಿಂದ ನಾವು ಎಲ್ಲಾ ಶಾಸ್ತ್ರಗಳನ್ನು ಕಲಿತು ವಿದ್ವಾಂಸರಾದೆವು" ಎಂದು ಅವರು ಹೇಳಿ ಅತ್ಯಂತ ಸಂತೋಷವನ್ನು ವ್ಯಕ್ತಪಡಿಸಿದರು. "ಇನ್ನು ನಾವು ನಮ್ಮ ನಾಡಿಗೆ ತೆರಳುವೆವು" ಎಂದು ಗುರುಗಳಿಗೆರಗಿ, ಸಾಷ್ಟಾಂಗ ವಂದಿಸಿ, ಹೋಗಲು ಹೊರಟರು. ಆಗ ಸೂರ್ಯಮಿತ್ರನು ಹೀಗೆಂದನು— "ನೀವು ನನ್ನ ತಂಗಿಯ ಮಕ್ಕಳು. ನನಗೆ ಸೋದರ ಅಳಿಯಂದಿರಾಗಿರುವಿರಿ. ನಿಮಗೆ ನಾನು ಸಲುಗೆಯನ್ನು ಕೊಡಲಿಲ್ಲ. ಏಕೆಂದರೆ, ನೀವು ಹಿಂದೆ ನಿಮ್ಮ ತಂದೆ ಕೊಟ್ಟ ಸಲುಗೆಯಿಂದ ಉನ್ಮತ್ತರಾಗಿ ಕೆಟ್ಟುಹೋದಿರಿ. ಇಲ್ಲಿ ಕೂಡ ಎಲ್ಲಿಯಾದರೂ ಸೊಕ್ಕಿ ಕೆಟ್ಟುಹೋಗುವಿರೆಂದು ಭಾವಿಸಿ, ನಾನು ನಿಮ್ಮನ್ನು ಯೋಗ್ಯರನ್ನಾಗಿ ಮಾಡುವ ಉದ್ದೇಶದ ಕಾರಣದಿಂದ ಸಲುಗೆ ಕೊಡಲಿಲ್ಲ. ಇದಕ್ಕೆ ನೀವು ಸಿಟ್ಟಾಗಬಾರದು. ನನ್ನ ತಪ್ಪನ್ನು ಕ್ಷಮಿಸಿರಿ". ಸೂರ್ಯಮಿತ್ರನು ಹೀಗೆ ಹೇಳಿ ಅವರಿಗೆ ವಸ್ತ್ರ ಆಭರಣಗಳನ್ನು ಕೊಟ್ಟನು. ಪ್ರಯಾಣಕ್ಕೆ ಬೇಕಾಗುವ ಬುತ್ತಿಯನ್ನು ಕೊಟ್ಟು ಕಳುಹಿಸುವ ಸಂದರ್ಭದಲ್ಲಿ ಹಿರಿಯನಾದ ಅಗ್ನಿಭೂತಿ ಎಂಬವನು "ಮಾವನು ನಮಗೆ

ತಂದ ಕೂೞ್ಗೆ ನೆರಪೆಣ್ಣೆಯನಕ್ಕುಪ್ಪನಕ್ಕೆ ಕೞಿಯನಕ್ಕೆಂದಪ್ಪೊಡಮಿಕ್ಕಿಯುಮೆಱೆ ಯಿಸಿಯುಮಱಿಯಂ ಕೆಱೆಗೆವೋಗಿ ಮೀವಾಗಳ್ ತಲೆಯುಂ ಪೂಸಲೆಣ್ಣೆಯನಪ್ಪೊಡ ಮೆಱೆಯಿಸಿಯುಮಱಿಯಂ ತಾಂ ದಿವ್ಯಮಪ್ಪಾಹಾರಂಗಳಂ ದೆವಸದೆವಸಕ್ಕಂ ಪಲಂಬರ್ ನಂಟರ್ಕಳುಂ ಆಳ್ಗಳುಂ ಬೆರಸುಣ್ಗುಂ ಪರ್ವದಿವಸದೊಳಪ್ಪೊಡಮೆಂದಾನುಮಿವರ್ಗ್ಗ ಣಲಿಕ್ಕಿಮೆಂವಱಿಯಂ ಪಂಚಮಹಾಪಾತಕನೆಮ್ಮನೇೞೆಂಟು ವರುಷಂಬರಂ ಪಗೆವರಂ ಬಗೆ ವಂತೆ ದಂಡಿಸಿದನೆಂದು ಮನದೊಳ್ ಮುಳಿಸಂ ಭಾವಿಸಿ ಪೊಱಮಟ್ಟು ಪೋದನ್ ಅಂತಿರ್ವರುಂ ಪೋಗಿ ಕತಿಪಯ ದಿವಸಗಳಿಂ ಕೌಶಂಬಿಯನೆಯ್ದಿ ತಮ್ಮ ಮನೆಯಂ ಪೊಕ್ಕು ತಾಯುಂ ಕಂಡು ತುೞಿಲ್ಗೆಯ್ದು ಪಂಡಿತರಾಗಿ ಬಂದುದಂ ಪೇೞ್ದು ಮಿಂದುಂಡು ವಿಶ್ರಮಿಸಿಯೊಳ್ಳಿತಪ್ಪ ದಿವಸ ವಾರ ನಕ್ಷತ್ರದೊಳತಿಬಲ ಮಹಾರಾಜನಂ ಕಂಡಿರ್ವರುಂ ಬೇಱೆಬೇಱುಪಶ್ಲೋಕಿಸಿ ಕ್ರಿಯಾಕಾರಕಸಂಬಂಧದಿಂದಂ ವಖ್ಯಾಣಿಸಿ ತಮ್ಮ ಪಂಡಿತಕ್ಕೆಯನಱಿಪಿದೊಡೆ ಸಭೆಯೊಳಿರ್ದ ಪಂಡಿತಜನಮೆಲ್ಲಂ ಮೆಚ್ಚಿ ಬಿಚ್ಚಳಿಸಿ ಪೊಗೞ್ದೊಡರಸಂ ಸಂತುಷ್ಟಚಿತ್ತನಾಗಿ ಒಸೆದು ನಿಮ್ಮ

ಸಲುಗೆ ಕೊಡದೆ ಇಬ್ಬರನ್ನೂ ಯೋಗ್ಯರನ್ನಾಗಿ ಮಾಡಿದನು"—ಎಂದು ಉಪಕಾರವನ್ನು ಮನಸ್ಸಿನಲ್ಲಿ ಭಾವಿಸಿಕೊಂಡು ಅತ್ಯಂತ ಸಂತೋಷಪಟ್ಟನು. ಕಿರಿಯವನಾದ ವಾಯುಭೂತಿ ತನಗೆ ಸೂರ್ಯಮಿತ್ರನು ಮಾಡಿದುದೆಲ್ಲವೂ ಅಪಕಾರವೆಂದೇ ಬಗೆದನು. "ನಾವು ಭಿಕ್ಷೆಬೇಡಿ ಅಲೆದಾಡಿ ತಂದ ಅನ್ನಕ್ಕೆ ಸೇರಿಸಲು ಎಣ್ಣೆಯನ್ನಾಗಲೀ ಉಪ್ಪನ್ನಾಗಲೀ ಮಜ್ಜಿಗೆಯನ್ನಾಗಲೀ ನಮ್ಮ ಮಾವ ನಮಗೆ ಎಂದಿಗೂ ಕೊಡಲೂ ಇಲ್ಲ, ಕೊಡಿಸಲೂ ಇಲ್ಲ. ಕೆರೆಗೆ ಹೋಗಿ ಸ್ನಾನಮಾಡುವ ಸಂದರ್ಭದಲ್ಲಿ ತಲೆಗೆ ಹಚ್ಚಲು ಎಣ್ಣೆಯನ್ನಾದರೂ ಹೊಯಿಸಿದವನಲ್ಲ. ತಾನಾದರೋ ದಿವ್ಯವಾದ ಆಹಾರಗಳನ್ನು ಪ್ರತಿದಿನವೂ ಹಲವರು ನೆಂಟರನ್ನೂ ಆಳುಗಳನ್ನು ಕೂಡಿಕೊಂಡು ಉಣ್ಣುತ್ತಿದ್ದನು. ಹಬ್ಬದ ದಿವಸದಲ್ಲಾದರೂ 'ಇವರಿಗೆ ಊಟ ಹಾಕಿ' ಎಂದು ಎಂದಾದರೂ ಇವನು ಹೇಳಿದವನಲ್ಲ. ಇವನು ಪಂಚಮಹಾಪಾಪ ಮಾಡಿದವನು. ನಮ್ಮಿಬ್ಬರನ್ನೂ ಏಳೆಂಟು ವರ್ಷಗಳವರೆಗೆ ಶತ್ರುಗಳೆಂದು ಭಾವಿಸಿದಂತೆ ದಂಡಿಸಿದ್ದಾನೆ"—ಹೀಗೆ ವಾಯುಭೂತಿ ಮನಸ್ಸಿನಲ್ಲಿ ಕ್ರೋಧಭಾವವನ್ನಿಟ್ಟುಕೊಂಡು ಸಾಷ್ಟಾಂಗ ವಂದಿಸಿ ಹೊರಟುಹೋದನು.

ಅಂತು ಅವರಿಬ್ಬರೂ ಹೋಗಿ ಕೆಲವು ದಿನಗಳಲ್ಲಿ ಕೌಶಂಬಿಗೆ ಬಂದರು. ತಮ್ಮ ಮನೆಗೆ ಹೊಕ್ಕು ತಾಯಿಯನ್ನು ಕಂಡು ವಂದಿಸಿದರು. ತಾವು ವಿದ್ವಾಂಸರಾಗಿ ಬಂದುದನ್ನು ತಿಳಿಸಿದರು. ಸ್ನಾನಮಾಡಿ, ಊಟಮಾಡಿ, ವಿಶ್ರಾಂತಿ ತೆಗೆದುಕೊಂಡರು. ಒಳ್ಳೆಯ ದಿನ ವಾರ ನಕ್ಷತ್ರ ಮುಹೂರ್ತದಲ್ಲಿ ಅತಿಬಲ ಮಹಾರಾಜನಲ್ಲಿಗೆ ಬಂದು ಅವನನ್ನು ಕಂಡು ಬೇರೆ ಬೇರೆಯಾಗಿ ಸ್ತುತಿ ರಚನೆ ಮಾಡಿದರು. ಅವನ್ನು ಕ್ರಿಯೆ-ಕಾರಕಗಳ ಸಂಬಂಧ ಪೂರ್ವಕ ವ್ಯಾಕರಣ ಶುದ್ಧವಾಗಿ ವ್ಯಾಖ್ಯಾನಮಾಡಿ, ತಮ್ಮ ಪಾಂಡಿತ್ಯವನ್ನು ಪ್ರಕಟಿಸಿದರು. ಆಗ ರಾಜಸಭೆಯಲ್ಲಿದ್ದ ಪಂಡಿತರೆಲ್ಲರೂ ಮೆಚ್ಚಿ ಹಿರಿದಾಗಿ ಹೊಗಳಿದರು. ರಾಜನು

ತಂದೆಯ ಮಂತ್ರಿಪದಮಂ ಬಾೞುಮಂ ಕೈಕೊಳ್ಳಿಮೆಂದು ಕೊಟ್ಟೊಡೆ ಮಹಾಪ್ರಸಾದಮೆಂ
ದೆಱಗಿ ಪೊಡೆವಟ್ಟು ಕೈಕೊಂಡು ಸುಖದೊಳ್ ಬಾೞುತ್ತಂ ಪಲಂಬರ್ ಪಂಡಿತರ್ಕಳ್ಗೋದು
ಗಳಂ ವಖ್ಖಾಣಿಸುತ್ತಂ ಲೋಕದೊಳರಮನೆಯೊಳಂ ಪೂಜ್ಯರಾಗಿ ಸುಖಸಂಕಥಾ ವಿನೋದದಿಂ
ಕಾಲಂ ಸಲೆ ಮತ್ತಿತ್ತ ರಾಜಗೃಹದೊಳ್ ಸೂರ್ಯಮಿತ್ರಂ ಸುಬಲ ಮಹಾರಾಜನ ತೊಟ್ಟ
ನರ್ಘ್ಯಮಪ್ಪ ಮಾಣಿಕ್ಯದುಂಗುರಮಂ ಕಳೆದು ತನಗೆ ತುಡಲ್ಕೆಂದು ಕೊಟ್ಟೊಡೊಂದು ದಿವಸಂ
ಸಂಜೆವಾರಿಸಲೆಂದು ಪೋದಲ್ಲಿ ಆದಿತ್ಯಂಗಿದಿರಂ ನೀರಂ ಸೂಸುವಾಗಳ್ ಬೆರಲಿಂದಮುರ್ಚಿ ನೀರ್ವ
ರಸು ಸೂಸಿ ತಾವರೆವೊಳಂಗುರಂ ಬಿೞ್ದತ್ತು ತಾನುಂ ನೋಡದೆ ಬಗೆಯದೆ ಕಿಮ್ಮನೆ ಕಿಱಿದಂ
ತರಮಂ ಪೋಗಿ ಕೈಯಂ ನೋಡಿ ಬೆರಲುಂಗುರಮಂ ಕಾಣದೆಲ್ಲಿ ಕೆಟ್ಟತ್ತೆಂದು ಪ್ರಮಾಣಮಱಿ
ಯದೆ ಮಲ್ಮಲ ಮಱುಗುತ್ತುಂ ದೆಸೆಗಳಂ ನೋೞ್ಪನ್ನೆಗಂ ದೂರಾಂತರದೊಳಿರ್ದ್ದ ಸುಧರ್ಮ
ರೆಂಬಾಚಾರ್ಯರಂ ದಿವ್ಯಜ್ಞಾನಿಗಳಂ ಕಂಡಿವರೇನಾನುಮಂ ಬಲ್ಲೊರಪ್ಪೊಡೆ ಬೆಸಗೊಂಡು
ನೋೞ್ಪೆನೆಂದು ಪೋಗಿ ಭಟಾರರಂ ಕಂಡು ಪಕ್ಕದೊಳಿರ್ದ್ದಾಗಳ್ ಈತಂ ಭವ್ಯನೆಂದಱಿದು—

ಮನಸ್ಸಿನಲ್ಲಿ ಸಂತೋಷಗೊಂಡು ಪ್ರೀತಿ ತಾಳಿದನು. "ನಿಮ್ಮ ತಂದೆಯ ಮಂತ್ರಿಸ್ಥಾನ
ವನ್ನೂ ಜೀವಿಕೆಯನ್ನೂ ಸ್ವೀಕರಿಸಿ"—ಎಂದು ಅವರಿಗೆ ಕೊಟ್ಟನು. 'ದೊಡ್ಡ ಅನುಗ್ರಹ
ವಿದು'—ಎಂದುಕೊಂಡು ಅವರು ನಮಸ್ಕರಿಸಿ, ರಾಜನಿತ್ತುದನ್ನು ಸ್ವೀಕರಿಸಿದರು.
ಸುಖವಾಗಿ ಬಾಳುತ್ತ, ಅವರು ಹಲವಾರು ವಿದ್ವಾಂಸರಿಗೆ ವಿದ್ಯೆಗಳನ್ನು ವಿವರಣೆ
ಮಾಡುತ್ತ ಲೋಕದಲ್ಲಿಯೂ ಅರಮನೆಯಲ್ಲಿಯೂ ಪೂಜ್ಯರಾದರು. ಸುಖಸಂಕಥಾ
ವಿನೋದದಿಂದ ಹೀಗೆಯೇ ಕಾಲ ಕಳೆಯುತ್ತಿತ್ತು. ಇತ್ತ ರಾಜಗೃಹದಲ್ಲಿ ಸೂರ್ಯಮಿತ್ರ
ನಿಗೆ ಸುಬಲ ಮಹಾರಾಜನು ತಾನು ತೊಟ್ಟ ಅಮೂಲ್ಯವಾದ ಮಾಣಿಕ್ಯದ ಉಂಗುರ
ವನ್ನು ತೆಗೆದು, ಒಮ್ಮೆ ತೊಡಲು ಕೊಟ್ಟನು. ಸೂರ್ಯಮಿತ್ರನು ಒಂದು ದಿನ ಸೂರ್ಯನಿಗೆ
ಸಂಧ್ಯಾಕಾಲದ ಅರ್ಘ್ಯಕೊಡಲು ಹೋದನು. ಸೂರ್ಯನಿಗೆ ಅಭಿಮುಖನಾಗಿ ಅರ್ಘ್ಯವನ್ನು
ಕೊಡುವಾಗ ಆ ಉಂಗುರ ಅವನ ಬೆರಳಿನಿಂದ ಹೊರಗೆ ಬಂದು ಅರ್ಘ್ಯದ ನೀರಿನೊಂದಿಗೆ
ತಾವರೆಯ ಕೆರೆಯಲ್ಲಿ ಬಿದ್ದಿತು. ಅವನು ಅದನ್ನು ನೋಡಲಿಲ್ಲ ಭಾವಿಸಲಿಲ್ಲ, ಸುಮ್ಮನೆ
ಸ್ವಲ್ಪ ದೂರ ಹೋದನು. ಕೈಯನ್ನು ನೋಡಿದಾಗ ಬೆರಳಿನ ಉಂಗುರವನ್ನು ಕಾಣದೆ,
ಎಲ್ಲಿ ಬಿದ್ದುಹೋಯಿತೋ ಎಂದುಕೊಂಡನು. ಅದು ಕಾಣೆಯಾಗಲು ಕಾರಣವನ್ನು ತಿಳಿ
ಯದೆ, ಬಹಳ ವ್ಯಥೆಪಟ್ಟನು. ಭಯಗೊಂಡವನಾಗಿ ದಿಕ್ಕುಗಳನ್ನು ನೋಡಿದನು.
ಹಾಗೆ ನೋಡುವಾಗ ದೂರದ ಒಂದು ಸ್ಥಳದಲ್ಲಿ ಇದ್ದ ದಿವ್ಯಜ್ಞಾನಿಗಳಾದ ಸುಧರ್ಮ
ರೆಂಬ ಆಚಾರ್ಯರನ್ನು ಕಂಡನು. "ಇವರು ಏನಾದರೂ ತಿಳಿದಿದ್ದರೆ, ಕೇಳಿ ನೋಡು
ವೆನು" ಎಂದು ಹೋಗಿ ಆ ಮುನಿಗಳ ಪಕ್ಕದಲ್ಲಿ ಇದ್ದನು. ಆಗ ಸುಧರ್ಮಾಚಾರ್ಯರು
ಈತನು ಭವ್ಯ (ಧರ್ಮ ವಿಚಾರವನ್ನು ಕೇಳಲು ಅರ್ಹ)ನೆಂದು ತಿಳಿದು-ಏನಯ್ಯ

ಏನಯ್ಯ ಅರಸರ ಪಾರಕದ ಮಾಣಿಕದುಂಗುರಮಂ ಕಿಡಿಸಿ ಬಂದಿರೆ ಎಂದಾಗಳೆಱಗಿ ಪೊಡೆವಟ್ಟಿಂತಱಿವರೊಳರೆ ಎಂದು ಪೊಗೞ್ದಿರ್ದಿಂತು ಬೆಸಗೊಂಡಂ—ಭಟ್ಟಾರಾ ಬೆಸಪಿಪೊಪ್ಪಂಗುರಮಂ ಕಾಣಲಕ್ಕುಮೆ ಎಂದಂಗೆ ಭಟಾರರ್ ಕಾಣಲಕ್ಕುಮೆಂದರ್ ನಿನ್ನೆ ನೀನಾದಿತ್ಯಂಗೆ ನೀರಂ ಸೂಸಿ ಪೊಡೆಮಡುವಾಗಳಾ ನೀರ್ವೆರಸು ಸೂಸಿ ತಾವರೆಗೆಱೆಯೊಳಗೆ ಮುೞುಗಿರ್ದ್ದ ಮುಗುಳ ಮೇಗೆ ತಗುಳ್ದಿರ್ದುದು ನಾಳೆ ನೇಸಱ್ ಮೂಡುವಾಗಳ್ ನೀರಿಂದಂ ಮೇಗೆ ನೆಗೆದಿರ್ದ್ದುಂಗುರಮಂ ಕಾಣಲಕ್ಕುಮೆಂದೊಡೆ ಸಂತೋಷಂಬಟ್ಟು ಪೊಡೆವಟ್ಟು ಪೋಗಿ ಕೊಳಕ್ಕೆ ಮಾನಸರಂ ಕಾಪಿಟ್ಟು ಮಱುದಿವಸಂ ಸಂಜೆಯೊಳ್ ಬಂದು ನೋಟ್ಪನ್ನೆಗಂ ತಾವರೆಯ ಮುಗುಳ ಮೇಲೆ ತಗುಳ್ದಿರ್ದ್ದುಂಗುರಮಂ ಕಂಡು ಕೊಂಡರಸಂಗೊಪ್ಪಿಸಿ ತುರಿಪದಿಂದರಮನೆಯಿಂ ಪೊಱಮಟ್ಟು ಪೋಗಿ ಮನದೊಳಿಂತೆಂದು ಬಗೆದನೀ ಲೋಕದೊಳಿರ್ದ ಸೂಕ್ಷ್ಮಾಂತರಿತ ದೂರ ಪದಾರ್ಥ ವಸ್ತುಗಳೆಲ್ಲಮನಱಿವಂತಪ್ಪೀ ಸವಣನ ಜೋಯಿಸಮನೆಂತಪ್ಪೊಡಂ ಕ್ಷಪಣಕನಂ ಮಿಥ್ಯಾವಿನಯದಿಂದಿಳಿಸಿ ಕಲ್ವೆನೆಂಬುದೊಂದು ಬುದ್ಧಿಯಿಂದಂ ಮನೆಗೆ ಬಂದು ಸುದೇವಿಯೆಂಬ ತನ್ನ ಪಾರ್ವಂತಿಗೆ ಸ್ವಾಭಿಪ್ರಾಯಮೆಲ್ಲಮಂ ಪೇೞ್ದು ಜ್ಯೋತಿಷನಿಮಿತ್ತಂ ಮನೆಯಿಂ ಪೊಱಮಟ್ಟು ಸುಧರ್ಮಾ

ಅರಸರು ಇಟ್ಟುಕೊಳ್ಳಲು ಕೊಟ್ಟ ಮಾಣಿಕ್ಯದ ಉಂಗುರವನ್ನು ಕಳೆದುಕೊಂಡು ಬಂದಿರೇ ?—ಎಂದರು. ಆಗ ಸೂರ್ಯಮಿತ್ರನು ಅವರಿಗೆ ಸಾಷ್ಟಾಂಗವಂದಿಸಿ ಹೀಗೆ ತಿಳಿದವರು ಇರುವರೆ ?—ಎಂದು ಹೊಗಳಿ, ಹೀಗೆ ಕೇಳಿದನು—'ಪೂಜ್ಯರೇ ಆ ಉಂಗುರವನ್ನು ಕಾಣಲು ಸಾಧ್ಯವೆ? ತಿಳಿಸಿರಿ'. ಅದಕ್ಕೆ ಯತಿಗಳು—'ಕಾಣಲು ಸಾಧ್ಯವಿದೆ' ಎಂದರು. 'ನಿನ್ನೆ ನೀನು ಸೂರ್ಯನಿಗೆ ಅರ್ಘ್ಯವನ್ನು ಕೊಟ್ಟು ಸಾಷ್ಟಾಂಗ ವಂದಿಸುವಾಗ ಆ ನೀರಿನೊಂದಿಗೆ ಉಂಗುರ ಕೆಳಗೆ ಬಿದ್ದು ತಾವರೆ ಕೆರೆಯೊಳಗೆ ಮುಳುಗಿದ್ದ ಮುಗುಳಿನ ಮೇಲೆ ಸಿಕ್ಕಿಕೊಂಡಿದೆ. ನಾಳೆ ಸೂರ್ಯೋದಯದ ವೇಳೆಗೆ ಆ ಉಂಗುರವು ನೀರಿನಿಂದ ಮೇಲಕ್ಕೆ ಎದ್ದುಕೊಂಡು ಕಾಣಿಸುವುದು' ಎಂದರು. ಆಗ ಸೂರ್ಯಮಿತ್ರನು ಸಂತೋಷದಿಂದ ಪೊಡಮಟ್ಟು ತೆರಳಿದನು. ಸರೋವರಕ್ಕೆ ಆಳುಗಳನ್ನು ಕಾವಲಿರಿಸಿ, ಮರುದಿನ ಬೆಳಗ್ಗೆ ನೋಡಲು ಬಂದನು. ಆಗ ತಾವರೆಯ ಮುಗುಳಿನ ಮೇಲೆ ಸಿಕ್ಕಿಕೊಂಡಿದ್ದ ಉಂಗುರವನ್ನು ಕಂಡನು. ಅದನ್ನು ತೆಗೆದುಕೊಂಡು ಸುಬಲ ಮಹಾರಾಜನಿಗೆ ಒಪ್ಪಿಸಿ ಬೇಗನೆ ಅರಮನೆಯಿಂದ ಹೊರಟುಹೋದನು. ಅವನು ತನ್ನ ಮನಸ್ಸಿನಲ್ಲಿ ಹೀಗೆ ಯೋಚಿಸಿದನು ಈ ಲೋಕದಲ್ಲಿರುವ ಚಿಕ್ಕದಾದ, ಗುಪ್ತವಾದ, ಹಾಗೂ ದೂರದಲ್ಲಿದ್ದ ಪದಾರ್ಥಗಳನ್ನು ಅಥವಾ ವಸ್ತುಗಳೆಲ್ಲವನ್ನೂ ತಿಳಿಯುವಂತಹ ಈ ಜೈನ ಸಂನ್ಯಾಸಿಯ ಜ್ಯೋತಿಷ ವಿದ್ಯೆಯನ್ನು ಹೇಗಾದರೂ ಕಲಿಯುವೆನು. ಈ ಸಂನ್ಯಾಸಿಯನ್ನು ಕಪಟ ನಮ್ರತೆಯಿಂದ ಒಲಿಸಿ ಕಲಿಯುವೆನು— ಎಂಬ ಒಂದು ಬುದ್ಧಿಯಿಂದ ಮನೆಗೆ ಬಂದನು. ಸುದೇವಿ ಎಂಬ ತನ್ನ ಹೆಂಡತಿಗೆ ತನ್ನ ಅಭಿಪ್ರಾಯವೆಲ್ಲವನ್ನೂ ತಿಳಿಸಿದನು. ಜ್ಯೋತಿಷವನ್ನು ಕಲಿಯುವ ಕಾರಣದಿಂದ ಮನೆಯಿಂದ ಹೊರಟು

ಚಾರ್ಯರಲ್ಲಿಗೆ ಪೋಗಿ ಪೊಡೆವಟ್ಟು ಭಟ್ಟಾರಾ ನಿಮ್ಮ ಪಕ್ಕದೆ ಜ್ಯೋತಿಷಮಂ ಕಲ್ತೆನೆಂಬು
ದೊಂದಾಸತ್ತಿಯಿಂ ಬಂದೆನೆನ್ನಂ ಜ್ಯೋತಿಷಮಂ ಕಲ್ಪಿಪ್ಪುದೆಂದೊಡೆ ಭಟಾರರೆಂದರ್—ತಮ್ಮಾ
ಎಮ್ಮ ಜೋಯಿಸಮೆಮ್ಮಂತಪ್ಪ ರೂಪಿನ ಋಷಿಯರ್ಗಲ್ಲದೆ ಪೇೞಲುಂ ಕಲಲುಮಾಗದೆಂದೊಡೆ
ಅಂತಪ್ಪ ದೀಕ್ಷೆಯುಂ ದಯೆಗೆಯ್ಯಿಮೆಂದು ಬೇಡಿದೊಡೊಳ್ಳಿತಪ್ಪ ಮುಹೂರ್ತದೊಳ್ ದೀಕ್ಷೆಯುಂ
ಕೊಟ್ಟು ಪಂಚಮಹಾವ್ರತಂಗಳನೇಱಿಸಿ ಪಡಿಕಮಣಮಂ ಪೇೞ್ದು ತದನಂತರಮಿನ್ ಕಲ್ಪಿಸಿಮೆಂದೊಡೆ
ನಮಸ್ಕಾರಂಗಳುಮಾಲೋಚನೆಗಳಂ ನಿಯಮಮುಮನೋದಿದೊಡಲ್ಲದೆ ಪೇೞಲಾಗದೆಂದೊಡೆ
ಲ್ಲಮಂ ಬೇಗವೇಗಂ ಪಾಠಂಗೊಂಡು ಭಟ್ಟಾರಾ ಇನ್ ಪೇೞಿಮೆನೆ ಭಟ್ಟಾರರೆಂದರ್ ತ್ರಿಷಷ್ಟಿ
ಶಲಾಕಾ ಪುರುಷರ್ಕಳ ಚರಿತಂಗಳುಮನಾಚಾರಮಾರಾಧನೆ ಮೊದಲಾಗೊಡೆಯ ಚರಣ ಗ್ರಂಥಂ
ಗಳುಮಂ ಲೋಗಾಣಿ ಸಂಗಾಣಿ ಮೊದಲಾಗೊಡೆಯ ಕರಣಗ್ರಂಥಂಗಳುಮಿವೆಲ್ಲಮಂ
ಕಲ್ತೊಡಲ್ಲದೆ ಪೇೞಲಾಗದೆಂದೊಡೆ ಸೂರ್ಯಮಿತ್ರಂ ಪಂಡಿತನಪ್ಪುದಱಿಂದವೆಲ್ಲಮಂ ಕಿಱಿದೆ

ಸುಧರ್ಮಾಚಾರ್ಯರಲ್ಲಿಗೆ ಹೋದನು. ಅವರಿಗೆ ಸಾಷ್ಟಾಂಗವಂದನೆ ಮಾಡಿ—
"ಪೂಜ್ಯರೇ, ನಿಮ್ಮ ಬಳಿಯಲ್ಲಿ ಜ್ಯೋತಿಷವನ್ನು ಕಲಿಯಬೇಕೆಂಬ ಒಂದು ಪ್ರೀತಿಯಿಂದ
ನಾನು ಬಂದಿದ್ದೇನೆ. ನನಗೆ ಜ್ಯೋತಿಷವನ್ನು ಕಲಿಸುವುದು" ಎಂದು ಹೇಳಿದನು. ಆಗ
ಭಟಾರರು ಹೀಗೆಂದರು — "ತಮ್ಮಾ ನಮ್ಮ ಜ್ಯೋತಿಷ ವಿದ್ಯೆಯನ್ನು ನಮ್ಮ ಹಾಗೆಯೇ
ಇರುವ ಋಷಿಗಳಿಗಲ್ಲದೆ ಹೇಳಬಾರದು, ಕಲಿಯಲೂ ಬಾರದು". ಹೀಗೆನ್ನಲು ಸೂರ್ಯ
ಮಿತ್ರನು "ಅಂತಹ ದೀಕ್ಷೆಯನ್ನು ನನಗೆ ದಯಪಾಲಿಸಿರಿ" ಎಂದು ಬೇಡಿದನು. ಆಚಾರ್ಯರು
ಒಳ್ಳೆಯ ಮುಹೂರ್ತದಲ್ಲಿ ದೀಕ್ಷೆಯನ್ನು ಕೊಟ್ಟರು. ಅಹಿಂಸೆ, ಸತ್ಯ, ಅಸ್ತೇಯ,
ಬ್ರಹ್ಮಚರ್ಯ, ಅಪರಿಗ್ರಹಗಳೆಂಬ ಐದು ಬಗೆಯ ಮಹಾವ್ರತಗಳನ್ನು ಅನುಷ್ಠಾನ
ಮಾಡಿಸಿದರು. ದೋಷಗಳಿಗೆ ಪ್ರಾಯಶ್ಚಿತ್ತಗಳನ್ನು ಹೇಳಿಸಿದರು. ಅನಂತರ ಸೂರ್ಯ
ಮಿತ್ರನು "ಇನ್ನು ಕಲಿಸಿ" ಎಂದನು. ಅದಕ್ಕೆ ಆಚಾರ್ಯರು "ಪಂಚ ನಮಸ್ಕಾರಗಳನ್ನೂ
ಪ್ರಾಯಶ್ಚಿತ್ತಕ್ಕೆ ಮುಂಚೆ ತನ್ನ ದೋಷಗಳನ್ನು ಗುರುವಿಗೆ ತಿಳಿಸುವ ಆಚರಣೆಯನ್ನೂ
ಪ್ರತಿಜ್ಞೆಯನ್ನೂ ಆಚರಿಸಿದಲ್ಲದೆ, ಹೇಳಿ ಕೊಡಲಾಗುವುದಿಲ್ಲ ಎಂದರು. ಸೂರ್ಯಮಿತ್ರನು
ಬೇಗ ಬೇಗನೆ ಅವೆಲ್ಲವನ್ನೂ ಪಾಠಹೇಳಿಸಿದ ಮೇಲೆ "ಪೂಜ್ಯರೇ, ಇನ್ನು ಹೇಳಿ" ಎಂದನು.
ಆಗ ಆಚಾರ್ಯರು "ಅರುವತ್ತಮೂರು ಮಂದಿ ಶಲಾಕಾಪುರುಷರ ಚರಿತ್ರೆಗಳನ್ನು ಆಚಾರ
ಆರಾಧನೆ ಮಾಡಲಾಗಿರುವ ಚರಣ ಗ್ರಂಥ (ಜೈನ ಶ್ರಾವಕರ ಮತ್ತು ಯತಿಗಳ ಆಚಾರ
ಗಳನ್ನು ನಿರೂಪಿಸುವ ಗ್ರಂಥ) ಗಳನ್ನೂ ಲೋಗಾಣಿ (ಲೋಕಾಕಾರವನ್ನು ನಿರೂಪಿಸುವ
ಗ್ರಂಥಗಳು) ಸಂಗಾಣಿ (ಸಪ್ತ ಪದಾರ್ಥಗಳ ಸ್ವರೂಪವನ್ನು ತಿಳಿಸುವ ಗ್ರಂಥಗಳು)
ಮುಂತಾದ ಕರಣಗ್ರಂಥಗಳನ್ನು—ಇವೆಲ್ಲವನ್ನೂ ಕಲಿತಲ್ಲದೆ, ಹೇಳಿ ಕೊಡಲಿಕ್ಕಾಗದು"
ಎಂದರು. ಸೂರ್ಯಮಿತ್ರನು ಪಂಡಿತನಾದುದರಿಂದ ಅವೆಲ್ಲವನ್ನೂ ಸ್ವಲ್ಪವೇ ಕಾಲದಲ್ಲಿ
ಓದಿ ಕಲಿತನು. "ಪೂಜ್ಯರೇ, ನೀವು ಹೇಳಿಕೊಟ್ಟ ವಿದ್ಯೆಗಳೆಲ್ಲವನ್ನೂ ಗ್ರಂಥದ ಅರ್ಥ

ಕಾಲದಿಂದೋದಿ ಕಲ್ತು ಭಟ್ಟಾರಾ ನಿಮ್ಮ ಪೇೞ್ದುದುಗಳೆಲ್ಲಮಂ ಗ್ರಂಥಾರ್ಥಸ್ವರೂಪ ದಿಂದೋದಿ ಕಲ್ತೆಂ ಇನ್ ಜ್ಯೋತಿಷಮಂ ವಖ್ಖಾಣಿಸಿಮೆಂದೊಂಗೆ ಭಟ್ಟಾರರೆಂದರ್ ಇನ್ನೊಂದಧಿ ಕಾರಮುಂಟು ದ್ರವ್ಯಾನುಯೋಗಮೆಂಬುದಂ ಕೇಳ್ದ ಬೞಿಕ್ಕೆ ಜ್ಯೋತಿಷಶಾಸ್ತ್ರಮಂ ವಖ್ಖಾಣಿಸು ವೆನೆಂದೊಡೆ ಮನದೊಳಾದಮಾನುಮೊಸೆದೊಂದಧಿಕಾರಮೆಂಬುದೆನಗೇಮುಟ್ಟೀಗಳೆ ಕಲ್ವೆನೆಂದು ಬಗೆದು ಒಳ್ಳಿತಪ್ಪ ದಿವಸ ವಾರ ನಕ್ಷತ್ರ ಮುಹೂರ್ತದೊಳ್ ಸಿದ್ಧಾಂತಮಂ ತೊಡಗಿಸೆ ಅಂತಂತೆ ಕೇಳ್ಗುಮಂತಂತೆ ಮಿಥ್ಯಾತ್ವಮಿನಿಸಿನಿಸು ಪಿಂಗೆ ಬಂಧಂ ಬಂಧ ಕಾರಣಂ ಮೋಕ್ಷಂ ಮೋಕ್ಷಕಾರಣ ಮಾ ಎರಡಱ ಫಲಮುಮೆಂದಿಂತು ಸಿದ್ಧಾಂತದೊಳ್ ಪೇೞ್ದ ವಸ್ತುಗಳೆಲ್ಲಮಂ ಕೇಳ್ದು ಜೀವಾ ಜೀವ ಪುಣ್ಯಪಾಪಾಸ್ರವ ಸಂವರ ನಿರ್ಜರ ಬಂಧ ಮೋಕ್ಷಮೆಂದಿಂತು ನವಪದಾರ್ಥಂಗಳುಂ ಪಂಚಾಸ್ತಿಕಾಯ ಷಡ್ದ್ರವ್ಯಂಗಳುಮೆಂಬಿವಱೊಳಾದಮಾನುಮಱಿತಮುಂ ಕುಶಲಿಕೆಯುಂ ನಂಬುಗೆಯುಮಾಗಿ ಅರ್ಹದ್ಭಟ್ಟಾರಕರ ಸಿದ್ಧಸ್ವರೂಪಮಂ ಗುಣಂಗಳುಮನಱಿದು ಶಂಕಾದ್ಯಷ್ಟ ಮಲಂಗಳುಮೆಂಟು ಮದಂಗಳುಂ ಮೂಱು ಮೂಢಮುಮಾಱುಮನಾಯತನ ಸೇವೆಗಳು ಮೆಂದಿಂತು ಇಪ್ಪತ್ತೈದು ದೋಷಂಗಳಿಂದಗಲ್ದು ಸಮ್ಯಕ್ತ್ವಮನೊಡೆಯನಾಗಿ ಸಂಸಾರ ಭೋಗ

ಸ್ವರೂಪದಿಂದಲೇ ಓದಿ ಕಲಿತೆನು. ಇನ್ನು ಜ್ಯೋತಿಷವನ್ನು ವ್ಯಾಖ್ಯಾನಿಸಿರಿ" ಎಂದನು. ಆಗ ಅವನಿಗೆ ಆಚಾರ್ಯರು ಹೀಗೆಂದರು— "ಇನ್ನೊಂದು ಅರ್ಹತೆ ಉಳಿದಿದೆ. ಅದಕ್ಕೆ ದ್ರವ್ಯಾನುಯೋಗವೆಂದು ಹೆಸರು. ಅದನ್ನು ತಿಳಿದುಕೊಡನಂತರ ಜ್ಯೋತಿಷ ಶಾಸ್ತ್ರ ವನ್ನು ವ್ಯಾಖ್ಯಾನಿಸುವೆನು"—ಹೀಗೆನ್ನಲು, ಸೂರ್ಯಮಿತ್ರನು ಮನಸ್ಸಿನಲ್ಲಿ ಬಹಳ ಸಂತೋಷಪಟ್ಟು—ಇನ್ನುಳಿದ ಒಂದು ಅರ್ಹತೆಯೆಂಬುದು ನನಗೆ ಏನು ಮಹಾ! ಈಗಲೇ ಕಲಿಯುವೆನು—ಎಂದು ಭಾವಿಸಿಕೊಂಡನು. ಅನಂತರ ಒಳ್ಳೆಯ ದಿವಸ ವಾರ ನಕ್ಷತ್ರ ಮುಹೂರ್ತದಲ್ಲಿ ಭಟ್ಟಾರರು ಸಿದ್ಧಾಂತವನ್ನು ಉಪದೇಶಿಸಲು ಪ್ರಾರಂಭ ಮಾಡಿದರು. ಸೂರ್ಯಮಿತ್ರನು ಸಿದ್ಧಾಂತವನ್ನು ಕೇಳಿದಂತೆಲ್ಲ ಅವನ ಅಜ್ಞಾನವು (ಅಪನಂಬಿಕೆ) ಸ್ವಲ್ಪ ಸ್ವಲ್ಪವಾಗಿ ಹಿಂಗತೊಡಗಿತು. ಬಂಧವು ಬಂಧನಕ್ಕೆ ಕಾರಣವೆಂದೂ ಮೋಕ್ಷವು ಮೋಕ್ಷಕ್ಕೆ ಕಾರಣವೆಂತಲೂ ಆ ಎರಡರ ಪರಿಣಾಮವನ್ನೂ ಸಿದ್ಧಾಂತ ದಲ್ಲಿ ಹೇಳಿದ ವಿಚಾರವೆಲ್ಲವನ್ನೂ ಕೇಳಿಕೊಂಡನು. ಜೀವ, ಅಜೀವ, ಪುಣ್ಯ, ಪಾಪ, ಆಸ್ರವ, ಸುಂದರ, ನಿರ್ಜರ, ಬಂಧ, ಮೋಕ್ಷ-ಎಂದು ಈ ರೀತಿಯಾದ ನವಪದಾರ್ಥ ಗಳು, ಪಂಚಾಸ್ತಿಕಾಯ ಷಡ್ದ್ರವ್ಯಗಳು-ಎಂಬವುಗಳಲ್ಲಿ ಹೆಚ್ಚಿನ ತಿಳಿವಳಿಕೆಯೂ ಪ್ರಾವೀಣ್ಯವೂ ವಿಶ್ವಾಸವೂ ಅವನಲ್ಲಿ ಉಂಟಾದವು. ಜೈನ ತೀರ್ಥಂಕರರ ಸಿದ್ಧಸ್ವರೂಪ ವನ್ನೂ ಗುಣಗಳನ್ನೂ ತಿಳಿದುಕೊಂಡನು. ಸಂಶಯವೇ ಮೊದಲಾದ ಎಂಟು ಬಗೆಯ ಮಲಗಳು ಎಂಟು ಮದಗಳು ಮೂರು ಬಗೆಯ ಮೂಢತೆಗಳು ಆರು ಬಗೆಯ ಅನಾಯತನ ಸೇವೆಗಳು—ಎಂಬೀ ರೀತಿಯ ಇಪ್ಪತ್ತೈದು ದೋಷಗಳಿಂದ ದೂರವಾದ ತತ್ತ್ವಜ್ಞಾನವುಳ್ಳವನಾದನು. ಸಾಂಸಾರಿಕ ಸುಖದಲ್ಲಿ ವೈರಾಗ್ಯವನ್ನು ತಾಳಿದನು,

ಕೊರ್ಯ್‌ತಲೆಯುಧವಾ ನೀಚಾ ಸ್ವಾಮಿಯುನಿಂತೆಂಬಾ ಎಂದವನಂ ಬಯ್ದೊಡೆ ಭಟ್ಟಾರರೆನ್ಗುಂ—

ಗಾಪೆ॥ ಣಿಂದಂತಂ ಸಿಳಹಂತಂ ಸತ್ತುಂ ಮಿತ್ತುಂ ತಹೇವ ಸುಖ ದುಕ್ಖಂ ।
ಜೋ ಸಮಭಾವಣ ಪೆಚ್ಛ ಇ ಸೋ ಸವಣೋ ಸೋಯ ಪವ್ವಯಿಓ ॥

ವೃತ್ತ ॥ ಆಕೃಷ್ಟ ಏವ ವಚಸಾ ನ ತು ತಾಡಿತೋಽಸ್ಮಿ
ಸಂತಾಪಿತೋಽಸ್ಮಿ ನ ತು ಮೇ ಹೃತಮುತ್ತಮಾಂಗಂ
ಪ್ರಾಣಾ ಹೃತಾಃ ಮಮ ಪರೈರ್ನ ತು ಮೇ ಸಮಾಧಿಃ
ಇತ್ಯಾತ್ಮಚಿಂತನ ಪರಂಪರಯಾ ಕ್ಷಮೇತ

ಎಂದಿಂತು ಕ್ಷಮೆಯುಂ ಭಾವಿಸಿದರ್ ಅಗ್ನಿಭೂತಿಯುಂ ಭಟ್ಟಾರರೊಡನುದಯಾವತ ಪರ್ವತಕ್ಕೆ ಪೋಗಿ ಇಂತೆಂದಂ-ಭಟ್ಟಾರಾ ನಿಮ್ಮಂ ಪಂಚಮಹಾಪಾತಕನ ಮನೆಗೊಡಗೊಂಡು ಪೋಗಿ ಬಯ್ಸಿದೆನದನಾತಂ ಬಯ್ದೊನಲ್ಲನಾಂ ಬಯ್ದೆನೀಯಪರಾಧಕ್ಕೆನಗೆ ಕ್ಷಮಿಯಿಸುವುದೀ ಬಯ್ಸಿದ ಪಾಪಮಿಂತಲ್ಲದೆ ಓಂಗದೆನಗೆ ದೀಕ್ಷೆಯುಂ ದಯೆಗೆಯ್ಯಿಮೆಂದು ಕೀೞ್ ಬೇಡಿದೊಡೆ ಭಟ್ಟಾರರೊಳ್ಳಿತಪ್ಪ ಮುಹೂರ್ತದೊಳ್ ದೀಕ್ಷೆಯುಂ ಕೊಟ್ಟೊಡಾತನುಂ ತಪಂಬಟ್ಟು ಕ್ರಿಯೆಗಳೆಲ್ಲಮಂ ಕಲ್ತು ಆಗಮಂಗಳನೋದುತ್ತುಂ ತಮ್ಮ ಗುರುಗಳೊಡನೆ ವಿಹಾರಿಸುತಿರ್ದ್ದಂ ಇತ್ತಲಗ್ನಿಭೂತಿಯು

ಹೀಗೆನ್ನುವೆಯಾ ?" ಎಂದು ಅವನನ್ನು ಬೈದನು. ಆಗ ಭಟ್ಟಾರರು ಹೀಗೆಂದರು- "ನಿಂದಿಸುವವನನ್ನೂ ಹೊಗಳುವವನನ್ನೂ ಶತ್ರುವನ್ನೂ ಮಿತ್ರನನ್ನೂ ಹಾಗೆಯೇ ಸುಖ ದುಃಖವನ್ನೂ ಯಾವನು ಸಮಭಾವದಿಂದ ಭಾವಿಸುವನೋ ಮತ್ತು ನೋಡುವನೋ ಅವನು ಸವಣನು (ಜೈನಯತಿ) ಅವನೇ ಪರಿವ್ರಾಜಕನು. ವಾಯುಭೂತಿ ನನ್ನನ್ನು ಮಾತುಗಳಿಂದ ನಿಂದಿಸಿದ್ದಾನಲ್ಲದೆ ಹೊಡೆದಿಲ್ಲ. ದುಃಖಕ್ಕೆ ಈಡು ಮಾಡಿದ್ದಾನಲ್ಲದೆ ನನ್ನ ತಲೆಯನ್ನು ಕತ್ತರಿಸಿಕೊಂಡು ಹೋಗಿಲ್ಲ. ನನ್ನ ಪ್ರಾಣಗಳು ಇತರರಿಂದ ಅಪಹರಿಸಲ್ಪಟ್ಟಿವೆ, ಆದರೆ ನನ್ನ ಧ್ಯಾನಸ್ಥಿತಿ ಉಳಿದಿದೆ. ಈ ರೀತಿಯ ಆತ್ಮಚಿಂತನೆಗಳನ್ನು ಅನುಕ್ರಮವಾಗಿ ಮಾಡುತ್ತ, ಅವನನ್ನು ಕ್ಷಮಿಸಬೇಕು." ಎಂದು ಸೂರ್ಯಮಿತ್ರಯತಿಗಳು ಅವನನ್ನು ಕ್ಷಮಿಸಿದರು. ಅಗ್ನಿಭೂತಿ ಅವರೊಡನೆ ಉದಯಾವತ ಎಂಬ ಪರ್ವತಕ್ಕೆ ತೆರಳಿದನು. ಅಲ್ಲಿ ಅವರೊಡನೆ ಹೀಗೆಂದನು "ಪೂಜ್ಯರೇ, ನಿಮ್ಮನ್ನು ನಾನು ಆ ಪಂಚಮಹಾಪಾತಕನಾದ ವಾಯುಭೂತಿಯ ಮನೆಗೆ ಕರೆದುಕೊಂಡುಹೋಗಿ ಅವನಿಂದ ಬಯ್ಯಿಸಿದೆನು. ಆದ್ದರಿಂದ ಬೈದುದು ಅವನಲ್ಲ, ನಾನೇ ಬೈದೆನು. ನನ್ನ ಈ ತಪ್ಪನ್ನು ಕ್ಷಮಿಸಬೇಕು. ಈ ಬೈಸಿದ ಪಾಪಪರಿಹಾರಕ್ಕೆ ಬೇರೆ ಮಾರ್ಗವಿಲ್ಲ. ನನಗೆ ದೀಕ್ಷೆಯನ್ನು ದಯೆಪಾಲಿಸಿರಿ" ಎಂದು ಕೂಗಿ ಬೇಡಿದನು. ಸೂರ್ಯಮಿತ್ರಭಟಾರರು ಒಳ್ಳೆಯ ಮುಹೂರ್ತದಲ್ಲಿ ಅವನಿಗೆ ದೀಕ್ಷೆಯನ್ನಿತ್ತರು. ಅಗ್ನಿಭೂತಿ ತಪವನ್ನೆಸಗಿ ಯತಿಗಳ ಆಚರಣೆಗಳೆಲ್ಲವನ್ನೂ ಕಲಿತು ಶಾಸ್ತ್ರಗಳನ್ನೆಲ್ಲ ಕಲಿಯುತ್ತ ತನ್ನ ಗುರುಗಳೊಂದಿಗೆ ಸಂಚ

**ಪಾರ್ವಂತಿ ಸೋಮದತ್ತೆಯೆಂಬೊಳ್ ತನ್ನೊಂದು ಸಲ್ಗೆಯಿಂದಮಱಲಿಂದಂ ವಾಯುಭೂತಿಯ ನಿಂತೆಂದಳ್—ಸೂರ್ಯಮಿತ್ರ ಭಟ್ಟಾರಕರ್ ಮುನ್ ಬ್ರಾಹ್ಮಣರ್ ನಿಮ್ಮ ಸೋದರಮಾವಂಗಳೀಗಳ್ ಮಹಾ ತಪೋಧನರ್ ಗುಣವಂತರಪ್ಪರ್ ನಿಮ್ಮ ಮನೆಗೆವಂದೊಡೆ ಮಣೆಯಿಂದೆರ್ದ್ದಿದಿರಂ ಪೋಗಿ ಪೊಡೆವಟ್ಟಿರಿಲ್ಲೀ ಜಾಟಿಂ ಸಂಪತ್ತುಂ ಶ್ರೀಯುಮೆಂಬುದವರ ಪ್ರಸಾದದಿಂದ ಮಾದುದಂತಪ್ಪ ಮಹಾಋಷಿಯರಂ ನಿಮಗೆ ಪೞಿಯಲುಂ ಬಯ್ಯಲುಂ ತಿರಸ್ಕರಿಸಿ ನುಡಿಯಲು ಮಕ್ಕುಮೆ ಅಘಮರ ಪೊಲ್ಲಮಾನಸರ ದುರ್ಜನರ ಜಾರಜಾತರ ವಿಜಾತಿಗಳ್ಗೆ ಯೋಗ್ಯಮಪ್ಪ ಯೋಗ್ಯಮಂ ಗೆಯ್ದ್ದಿರೆಂದು ಪಾರ್ವರ ಸಭೆಯ ನಡುವೆ ನುಡಿದೊಡೆ ವಾಯುಭೂತಿಯುಂ ಮುಳಿದು ಬಯ್ದು ಜಡಿದು ಕಾಲಿಂದಂ ತಲೆಯನೊದೆದು ಮನೆಯೊಳುಳ್ಳುದೆಲ್ಲಮಂ ಕಸರ್ದುಕೊಂಡು ನಿಮ್ಮ ಸವಣನಾಗಿರ್ದ್ದಾಣ್ಮನ ಪೋದಲ್ಲಿಗೆ ಪೋಗೆಂದಟ್ಟೆ ಕೇಳಿದೊಡಾಕೆಯುಂ ಮುಳಿದು ಕ್ರೋಧಾಗ್ನಿ ಪೆರ್ಚೆ ದುರಾತ್ಮಾ ಎನ್ನನೊದೆದ ನಿನ್ನ ಕಾಲ್ಗಳಂ ಜನ್ಮಾಂತರದೊಳಂ ನಾಯುಂ ನರಿಯುಮಾಗಿಯಪ್ಪೊಡಂ ಕೊಂದು ಮಕ್ಕಳ್ವೆರಸು ತಿಂಬೆನಕ್ಕೆಂದು ನಿದಾನಂಗೆಯ್ದು ಮನೆಯಿಂದಂ ಮಕ್ಕಳ್ವೆರಸು ಪೊಱಮಟ್ಟು ಪೋಗಿ ಕೆಲವು ಕಾಲದಿಂ ಬೞಿಕ್ಕೆ ಸತ್ತು ತಾನುಂ**

ರಿಸುತ್ತಿದ್ದನು. ಇತ್ತ ಅಗ್ನಿಭೂತಿ ಬ್ರಾಹ್ಮಣನ ಹೆಂಡತಿಯಾದ ಸೋಮದತ್ತೆ ಎಂಬವಳು ತನ್ನ ಒಂದು ಸಲುಗೆಯಿಂದಲೂ ಅಳಲಿನಿಂದಲೂ ವಾಯುಭೂತಿಯನ್ನು ಕುರಿತು ಹೀಗೆಂದಳು "ಸೂರ್ಯಮಿತ್ರ ಯತಿಗಳು ಮೊದಲೇ ಬ್ರಾಹ್ಮಣರು, ನಿಮ್ಮ ಸೋದರ ಮಾವನವರು. ಈಗ ಅವರು ಮಹಾತಪಸ್ಸೇ ಐಶ್ವರ್ಯವಾಗಿ ಉಳ್ಳವರು, ಒಳ್ಳೆಯ ಗುಣವಂತರೂ ಆಗಿದ್ದಾರೆ. ಅವರು ನಿಮ್ಮ ಮನೆಗೆ ಬಂದಾಗ ನೀವು ನಿಮ್ಮ ಪೀಠದಿಂದ ಎದ್ದು ಎದುರುಗೊಂಡು ಸಾಷ್ಟಾಂಗವಂದನೆ ಮಾಡಲಿಲ್ಲ ಈ ಜೀವನೋಪಾಯವೂ ಐಶ್ವರ್ಯವೂ ತೇಜಸ್ಸೂ ಅವರ ಅನುಗ್ರಹದಿಂದ ಆಗಿವೆ. ಅಂತಹ ಮಹರ್ಷಿಗಳನ್ನು ಹಳಿಯಲೂ ಬೈಯಲೂ ತುಚ್ಛೀಕರಿಸಿ ನುಡಿಯಲೂ ನಿಮಗೆ ಯುಕ್ತವೆ ? ಅಧಮರೂ ಕೆಟ್ಟ ಮನುಷ್ಯರೂ ದುಷ್ಟರೂ ಹಾದರಕ್ಕೆ ಹುಟ್ಟಿದವರೂ ಕುಲಗೆಟ್ಟವರೂ ಆದ ವ್ಯಕ್ತಿಗಳಿಗೆ ಯೋಗ್ಯವೆನಿಸುವ ಅಯೋಗ್ಯ ವರ್ತನೆಯನ್ನು ಮಾಡಿದಿರಿ"—ಹೀಗೆ ಬ್ರಾಹ್ಮಣರ ಸಭೆಯ ನಡುವೆ ಆಕೆ ಹೇಳಿದಳು. ಆಗ ವಾಯುಭೂತಿ ಸಿಟ್ಟಾಗಿ, ಬೈದು, ಗದರಿಸಿ, ತನ್ನ ಕಾಲಿನಿಂದ ಅವಳ ತಲೆಯನ್ನು ಒದೆದನು. ಅವಳ ಮನೆಯಲ್ಲಿದ್ದುದೆಲ್ಲವನ್ನೂ ಸುಲಿದು, 'ನಿನ್ನ ಜೈನಯತಿಯಾದ ಗಂಡನು ಹೋದಲ್ಲಿಗೆ ನಡೆ' ಎಂದು ಹೊರಪಡಿಸಿದನು. ಆಗ ಸೋಮದತ್ತೆಯೂ ಕೋಪಗೊಂಡು, ಸಿಟ್ಟಿನ ಬೆಂಕಿ ಹೆಚ್ಚಾಗಲು ಹೀಗೆಂದಳು–ಎಲೈ ದುಷ್ಟನೇ, ನನ್ನನ್ನು ಒದೆದ ನಿನ್ನನ್ನು ನಾನು ಮುಂದಿನ ಜನ್ಮದಲ್ಲಿಯಾದರೂ ನಾಯಿ ಅಥವಾ ನರಿಯಾಗಿಯಾದರೂ ಹುಟ್ಟಿಬಂದು, ಕೊಂದು, ನನ್ನ ಮಕ್ಕಳೊಂದಿಗೆ ನಿನ್ನ ಕಾಲುಗಳನ್ನು ತಿನ್ನುವಂತೆ ಆಗಲಿ ಎಂದು ಪ್ರತಿಜ್ಞೆ ಮಾಡಿದಳು. ಆಕೆ ಮನೆಯಿಂದ ಮಕ್ಕಳೊಡನೆ ಹೊರಟು ಹೋದಳು. ಕೆಲವು ಕಾಲಾನಂತರ ಸತ್ತು ತಾನು ಮಕ್ಕಳ [illegible]

ಮಕ್ಕಳುಂ ಸಂಸಾರದೊಳ್ ತಿರಿಯುತ್ತಿರ್ದರ್. ಇತ್ತ ವಾಯುಭೂತಿಯುಮತಿಮಾನ ಗರ್ವದಿಂದಂ ಋಷಿಯರಂ ಪರಿಭವಿಸಿ ಬಯ್ದು ನುಡಿದು ಜಿನಧರ್ಮಮಂ ಪೞಿದ ಪಾಪದ ಫಲದಿಂದಮೇೞುಂ ದಿವಸದಿಂದೊಳಗೌದುಂಬರಕುಷ್ಠಮಾಗಿ ಪುೞಿತು ನವೆದು ಸತ್ತು ಕೌಸಂಬಿಯೆಂಬ ಪೊೞಲೊಳ್ ಮಿಳಿಯ ಬಿದಿರ ಮೇಗೇಱಿಯಾಕಾಶದೊಳಾಡುವ ವಿದ್ಯಾಧರ ಲಂಗಿಗರ ಮನೆಯೊಳ್ ಪೆಣ್ಗತ್ತೆಯಾಗಿ ಪುಟ್ಟಿ ಪಿರಿಯವಪ್ಪ ಪೊಱೆಗಳಂ ಪೊತ್ತು ಪೋಗಿ ಬೆನ್ನೊಳ್ ನಾಳಿ ಬಿಸ್ರ್ದ ಕಱಿಮೆಯಾಗಿ ಪುೞಿತು ನವೆದು ಸತ್ತು ಮತ್ತಮಾ ಪೊೞಲೊಳ್ ಪೇಪಂದಿಯಾಗಿ ಪುಟ್ಟಿ ಸತ್ತು ಮತ್ತಾ ಮಗಧೆಯೆಂಬುದು ನಾಡಲ್ಲಿ ಚಂಪಾನಗರಮೆಂಬುದು ಪೊೞಲಲ್ಲಿ ಪೆಣ್ನಾಯಾಗಿ ಮಾದೆಗರ ಮನೆಯೊಳ್ ಪುಟ್ಟಿ ಸತ್ತು ಮತ್ತಮಾ ಪೊೞಲೊಳ್ ಮಾದೆಗರ್ಗೆ ಪ್ರಧಾನನಪ್ಪ ನೀಳನೆಂಬ ಮಾದೆಗಂಗಂ ಕೇಶಿಯೆಂಬ ಮಾದೆಗಿಗಂ ಮಗಳ್ ದುರೂಪೆ ದುರ್ವರ್ಣೆ ದುರ್ಗಂಧೆ ದುಸ್ಸ್ವರೆ ಪುಟ್ಟುಂಗುರುಡಿ ಪೊಲತಿಯಾಗಿ ಪುಟ್ಟಿ ವ್ಯಾಧಿಪೀಡಿತೆ ಕ್ಷುಧಾಗ್ನಿಯಿಂ ಬೞಿದ್ದೊಳೊಂದು ದಿವಸಮುದ್ಯಾನವನಕ್ಕೆ ಪೋಗಿ ನೇಱಿಲ ಪಣ್ಗಳಂ ತಡವರಿಸಿ ಯಾಯ್ವಾಯ್ದು ತಿನ್ನುತ್ತಿರ್ಪಳ್

ಅನ್ನೆಗಮಿತ್ತ ಸೂರ್ಯಮಿತ್ರಾಚಾರ್ಯರುಮಗ್ನಿಭೂತಿ ಮುನಿಯುಂ ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ ವಿಹಾರಿಸುತ್ತುಂ ಚಂಪಾ

ದಲ್ಲಿ ಸುತ್ತುತ್ತಿದ್ದರು. ಇತ್ತ ವಾಯುಭೂತಿ ಅತಿಯಾದ ಉದ್ಧಟತನದ ಗರ್ವದಿಂದ ಋಷಿಗಳನ್ನು ತಿರಸ್ಕರಿಸಿ ಬೈದು ಮಾತಾಡಿ; ಜೈನಧರ್ಮವನ್ನು ನಿಂದಿಸಿದ ಪಾಪದ ಪರಿಣಾಮವಾಗಿ ಏಳು ದಿವಸಗಳೊಳಗಾಗಿ ಔದುಂಬರ ಕುಷ್ಠ ರೋಗಕ್ಕೆ ತುತ್ತಾದನು. ಹುಳಗಳು ಉಂಟಾಗಿ ಯಾತನೆಪಟ್ಟು ಸತ್ತು ಕೌಸಂಬಿ ಎಂಬ ಪಟ್ಟಣದಲ್ಲಿ ಹಗ್ಗ ಕಟ್ಟಿದ ಬಿದಿರ ಗಣೆಯ ಮೇಲೆ ಆಡುವ ವಿದ್ಯೆಯನ್ನು ತೋರಿಸುವ ಡೊಂಬರ ಮನೆಯಲ್ಲಿ ಹೆಣ್ಣು ಕತ್ತೆಯಾಗಿ ಹುಟ್ಟಿದನು. ಆ ಕತ್ತೆ ದೊಡ್ಡ ದೊಡ್ಡ ಹೊರೆಗಳನ್ನು ಹೊತ್ತುಕೊಂಡುಹೋಗಿ, ಬೆನ್ನಿನಲ್ಲಿ ನಾಳಿಹುಣ್ಣು ಉಂಟಾಗಿ, ಆ ಹುಣ್ಣು ಬಲಿತು ಹುಳುವಾಗಿ ಯಾತನೆಗೊಂಡು ಸತ್ತಿತು. ಅದು ಮತ್ತೆ ಆ ಪಟ್ಟಣದಲ್ಲಿ ಹೇಲು ತಿನ್ನುವ ಹಂದಿಯಾಗಿ ಹುಟ್ಟಿ ಸತ್ತು ಹೋದನಂತರ ಮಗಧೆ ಎಂಬ ನಾಡಿನಲ್ಲಿರುವ ಚಂಪಾನಗರ ಎಂಬ ಪಟ್ಟಣದಲ್ಲಿ ಮಾದಿಗನ ಮನೆಯಲ್ಲಿ ಒಂದು ಹೆಣ್ಣು ನಾಯಿಯಾಗಿ ಹುಟ್ಟಿತು ಆ ನಾಯಿ ಸತ್ತು ಅನಂತರದಲ್ಲಿ ಅದೇ ಪಟ್ಟಣದಲ್ಲಿ ಮಾದಿಗರಿಗೆಲ್ಲ ಮುಖ್ಯಸ್ಥನಾದ ನೀಳನೆಂಬ ಮಾದಿಗನಿಗೂ ಕೇಶಿಯೆಂಬ ಮಾದಿಗಿತಿಗೂ ಮಗಳಾಗಿ ಹುಟ್ಟಿತು. ಆಕೆ ಕುರೂಪೆಯೂ ಕೆಟ್ಟ ಬಣ್ಣದವಳೂ ದುರ್ವಾಸನೆಯುಳ್ಳವಳೂ ಕೆಟ್ಟಸ್ವರವುಳ್ಳವಳೂ ಹುಟ್ಟು ಕುರುಡಿಯೂ ಹೊಲತಿಯೂ ಆಗಿ ಹುಟ್ಟಿ ರೋಗದಿಂದ ಪೀಡಿತೆಯಾಗಿ ಹೊಟ್ಟೆಗೆ ಗತಿಯಿಲ್ಲದೆ ಹಸಿವೆಂಬ ಬೆಂಕಿಯಿಂದ ಬಳಲುತ್ತ, ಬದುಕಿದ್ದಳು. ಆಕೆ ಒಂದು ದಿವಸ ಉದ್ಯಾನವನಕ್ಕೆ ಹೋಗಿ ಅಲ್ಲಿ ನೇರಳೆ ಹಣ್ಣುಗಳನ್ನು ಕೈಯಿಂದ ತಡವರಿಸಿ ಹೆಕ್ಕುತ್ತ ತಿನ್ನುತ್ತಿದ್ದಳು. – ಆ ವೇಳೆಗೆ ಇತ್ತ ಸೂರ್ಯಮಿತ್ರಾಚಾರ್ಯರೂ ಅಗ್ನಿಭೂತಿ ಋಷಿಯೂ ಗ್ರಾಮ, ನಗರ, ಖೇಡ, ಖರ್ವಡ,

ನಗರಮನೆಯ್ದಿ ವಾಸುಪೂಜ್ಯಭಟ್ಟಾರರ ನಿಸಿದ್ಧಿಗೆ ಸೇದ ತೀರ್ಥಸ್ಥಾನಮುಮಾದಮಾನುಂ ಶುದ್ಧ ಪರಿಣಾಮದಿಂದಂ ವಂದಿಸುತ್ತಿರ್ದ್ದ ಸೂರ್ಯಮಿತ್ರಾಚಾರ್ಯರ್ಗ್ಗವಧಿ ಜ್ಞಾನಂ ಪುಟ್ಟಿತ್ತು ಮತ್ತೆ ಬಹಿರುದ್ಯಾನದೊಳ್ ಸಂಬರನಾಗತಾಣದೊಳ್‌ಬಂದಿರ್ದ್ದರಂದಿನದಿವಸಂ ಸೂರ್ಯಮಿತ್ರಾಚಾರ್ಯರುಪವಾಸಂ ಗೆಯ್ದಿರ್ದ್ದರಗ್ನಿಭೂತಿಮುನಿಯುಂ ಭೈಕ್ಷಾನಿಮಿತ್ತಂ ಚರಿಗೆವೋಗುತ್ತವೆಡೆಯೊಳುದ್ಯಾನವನದೊಳ್ ನೇರಿಲ ಮರದ ಕೆಳಗೆ ನೇರಿಲ ಪಣ್ಗಳಂ ತಡವರಿಸಿ ಆಯ್ದಾಯ್ದು ತಿನ್ಬ ಜಾತ್ಯಂಧೆಯುಪ್ಪ ಪೊಲೆಯುರ ಕೂಸಂ ಕಂಡತ್ಯಂತ ಸ್ನೇಹಮಾಗಿ ಪರವಸದಿಂದಂ ಕಣ್ಣೀರ್ಗಳಂ ಸೂಸಿಯೊಯ್ತಂದು ಮನ್ಯುಮಿಕ್ಕು ಕರುಣದಿಂದೆ ಕುಂಚದ ಕೋಲೊಳ್ ಪರೆದಿರ್ದ ಪಣ್ಗಳಂ ಕೂಸಿನ ಮುಂದೆ ಸಾರ್ಚುತ್ತುಂ ನೀಡುಂ ಬೇಗಮಿರ್ದ್ದಿದೇಂ ಪಾಪದ ಫಲಮೊ ಎಂದು ಸಂಸಾರ ನಿರ್ವೇಗಮಾಗೆಯುಂದಿನ ದಿವಸಮಲಾಭಂ ಮಾಡಿ ತಮ್ಮಾವಾಸಕ್ಕೆ ಪೋದೊಡೆ ಭಟ್ಟಾರರೆಂದರ್-ಏನುಲಾಭಮಾದುದೆ ಎಂದು ಬೆಸಗೊಂಡೊಡೆ ಭಟ್ಟಾರರ್ಗ್ಗಿಂತೆಂದು ಪೇೞ್ದರ್ ಚರಿಗೆವುಗುತ್ತಮೊಂದೆಡೆಯೊಳುದ್ಯಾನದೊಳ್ ನೇರಿಲ ಮರದ ಕೆಳಗೆ ತಡವರಿಸಿ ನೇರಿಲ ಪಣ್ಗಳಂ ತಿನ್ಬ ಜಾತ್ಯಂಧೆಯುಪ್ಪ ಪೊಲೆಯರ ಕೂಸಂ ಕಂಡಾದಮಾನುಂ ಸ್ನೇಹಮಾಗಿ ಕರುಣದಿಂದಂ ಮನ್ಯು

ಮಡಂಬ, ಪತ್ತನ, ದ್ರೋಣಾಮುಖಗಳನ್ನು ಸಂಚರಿಸುತ್ತ ಚಂಪಾನಗರಕ್ಕೆ ಬಂದರು. ಅಲ್ಲಿ ವಾಸುಪೂಜ್ಯ ಯತಿಗಳ ಸಮಾಧಿಗಾಗಿ ಸಂದ ತೀರ್ಥಕ್ಷೇತ್ರವನ್ನು ಅತ್ಯಂತ ಪರಿಶುದ್ಧವಾದ ಭಕ್ತಿಯಿಂದ ವಂದಿಸುತ್ತಿದ್ದ ಸೂರ್ಯಮಿತ್ರಾಚಾರ್ಯರಿಗೆ ಅವಧಿಜ್ಞಾನವುಂಟಾಯಿತು. ಅನಂತರ ಅವರು ಪಟ್ಟಣದ ಹೊರಗಿನ ಉದ್ಯಾನದಲ್ಲಿದ್ದ ಶಂಬರ ಎಂಬ ಹೆಸರಿನ ನಾಗಾಲಯದಲ್ಲಿ ಬಂದು ಸೇರಿದ್ದರು. ಆ ದಿವಸ ಅವರು ಉಪವಾಸ ಮಾಡಿದ್ದರು. ಅಗ್ನಿಭೂತಿಮುನಿ ಭಿಕ್ಷೆಗಾಗಿ ಸಂಚಾರ ಮಾಡುತ್ತ, ನಡುವೆ ಉದ್ಯಾನದಲ್ಲಿ ನೇರಳೆ ಮರದ ಕೆಳಗೆ ನೇರಳೆ ಹಣ್ಣುಗಳನ್ನು ಕೈಯಿಂದ ತಡವರಿಸಿ ಆಯ್ದುಕೊಳ್ಳುತ್ತ ತಿನ್ನುವ ಹುಟ್ಟುಕುರುಡಿಯಾದ ಹೊಲತಿ ಕೂಸನ್ನು ಕಂಡು ಅತ್ಯಂತ ಪ್ರೀತಿಯುಂಟಾಗಿ ಪ್ರೇಮುರಿಯುತ್ತ, ಕಣ್ಣೀರನ್ನು ಸುರಿಸಿಕೊಂಡು ಒಳಗೆ ಬಂದರು. ಅವರಿಗೆ ದುಃಖ ಹೆಚ್ಚಾಯಿತು. ಕರುಣೆತಾಳಿ ಅವರು ಅಲ್ಲಿ ಹರಡಿ ಬಿದ್ದಿದ್ದ ಹಣ್ಣುಗಳನ್ನು ನವಿಲಗರಿಯ ಕಟ್ಟಿನ ಕೋಲಿನಿಂದ ಆ ಕೂಸಿನ ಮುಂದಕ್ಕೆ ತಳ್ಳುತ್ತ ಬಹಳ ಹೊತ್ತು ಅಲ್ಲೇ ಇದ್ದು 'ಇದು ಯಾವ ಪಾಪದ ಫಲವೋ!' ಎಂದು ಸಂಸಾರದಲ್ಲಿ ವಿರಕ್ತಿಯನ್ನು ತಾಳಿದರು. ಆ ದಿನ ಭಿಕ್ಷವೇ ಇಲ್ಲದಂತೆ ಆಚರಿಸಿ ತಮ್ಮ ವಾಸಸ್ಥಳಕ್ಕೆ ತೆರಳಿದರು. ಆಗ ಸೂರ್ಯಮಿತ್ರ ಯತಿಗಳು–"ಏನು, ಭಿಕ್ಷೆ ಇಲ್ಲವಾಯಿತೆ?" ಎಂದು ಕೇಳಲು ಭಟಾರರಿಗೆ ಅಗ್ನಿಭೂತಿಯತಿಗಳು ಹೀಗೆಂದರು– "ನಾನು ಭಿಕ್ಷೆಗಾಗಿ ಸಂಚರಿಸುತ್ತ ಒಂದೆಡೆ ಉದ್ಯಾನದಲ್ಲಿ ನೇರಳೆ ಮರದ ಕೆಳಗೆ ಹರಡಿದ್ದ ನೇರಳೆ ಹಣ್ಣುಗಳನ್ನಾಯ್ದು ತಿನ್ನುತ್ತಿದ್ದ ಹುಟ್ಟುಗುರುಡಿಯಾಗಿದ್ದ ಹೊಲೆಯರ ಹೆಂಗಸೊಬ್ಬಳನ್ನು ಕಂಡೆನು. ಆಗ ಅತ್ಯಂತ ಪ್ರೀತಿಯುಂಟಾಗಿ ವ್ಯಸನದಿಂದ ಮನಸ್ಸು ಹೆಚ್ಚಾಗಿ

ಮಿಕ್ಕು ಪರವಸದಿಂದಂ ಕಣ್ಣೀರ್ಗಳ್ ಬಂದು ನೀಡುಂ ಬೇಗಮಿರ್ದ್ದು ನೋಡಿ ಅಹೋವಿಧಾತ್ರಾ ಸಂಸಾರಮೆಂದು ಮುಟ್ಟುಪಡಂ ಮಾಡಿ ಬಂದೆನೆನೆ ಭಟ್ಟಾರರೆಂದರ್ — ಆ ಕೂಸೆಂಬುದು ನಿಮ್ಮ ತಮ್ಮನಪ್ಪ ವಾಯುಭೂತಿಯ ಜೀವಮೆನೆ ಅದೆಂತು ಭಟ್ಟಾರಾ ಎಂದು ಬೆಸಗೊಂಡೊಡೆ ಭಟ್ಟಾರರಿಂತೆಂದು ಪೇೞ್ದರ್ ವಾಯುಭೂತಿ ತನ್ನೊಂದು ಮಾನಗರ್ವದಿಂದೆಮ್ಮಂ ಪೞಿದು ಬಯ್ದು ನುಡಿದ ಪಾಪದ ಫಲದಿಂದೇೞು ದಿವಸದಿಂದೊಳಗೌದುಂಬರ ಕುಷ್ಠಮಾಗಿ ಪುೞಿತು ನಮೆದು ಸತ್ತಾಪೊೞಲೊಳೆ ಲಂಗಿಗರ ಮನೆಯೊಳ್ ಪೆಣ್ಗತ್ತೆಯಾಗಿ ಪುಟ್ಟಿ ನಮೆದು ಸತ್ತು ಪೇಪಂದಿಯಾಗಿ ಪುಟ್ಟಿ ಸತ್ತು ಪೆಣ್ನಾಯಾಗಿ ಪುಟ್ಟಿ ಸತ್ತೀಗಳ್ ಜಾತ್ಯಂಧೆ ಪೊಲೆಯರ ಮಗಳಾಗಿ ಪುಟ್ಟಿದಳದಱಿಂ ಮುನ್ನಿನಸ್ನೇಹಂ ಕಾರಣಮಾಗಿ ಕೂಸಿನ ಮೇಗೆ ನಿಮಗೆ ಕೂರ್ಮೆಯಾದುದೆನೆ–ಭಟ್ಟಾರಾ ಅದೇಂ ಭವ್ಯಜೀವನೋ ಅಭವ್ಯಜೀವನೋ ಎಂದು ಬೆಸಗೊಂಡೊಡೆ ಭವ್ಯಜೀವಂ ನಿಮ್ಮ ಪೇೞೆ ಬ್ರತಂಗಳಂ ಕೈಕೊಳ್ಗುಮೆಂದೊಡೆ ಭಟ್ಟಾರರನುಮತದಿಂದಗ್ನಿಭೂತಿ ಋಷಿಯರ್ ಪೋಗಿ ತಮ್ಮ ಮುನ್ನಿನ ಜನ್ಮಾಂತರ ಸಂಬಂಧಮುಮಂ ಋಷಿಯರಂ ಪಳಿದು ನುಡಿದ ಪಾಪದ ಫಲದಿಂದೆಯ್ದಿದ ಭವಂಗಳ ದುಃಖಂಗಳುಮನಾ ಕೂಸಿಂಗಱಿವಂತು ತಿಳಿಯೆ ಪೇೞ್ದು ಮತ್ತ

ಬೇರೆಲ್ಲವನ್ನೂ ಮರೆತೆನು. ಕಣ್ಣೀರು ಸುರಿಯಿತು. ಬಹಳ ಹೊತ್ತು ಅಲ್ಲಿದ್ದು ನೋಡಿ, ಅಯ್ಯೋ ವಿಧಿಯೇ, ಈ ಸಂಸಾರವೇ! ಎಂದುಕೊಂಡು ಭಿಕ್ಷೆಯೆತ್ತುವುದನ್ನೇ ಬಿಟ್ಟು ಬಂದೆನು". ಹೀಗೆನ್ನಲು ಸೂರ್ಯಮಿತ್ರಯತಿಗಳು "ಆ ಹೆಂಗುಸು ನಿಮ್ಮ ತಮ್ಮನಾದ ವಾಯುಭೂತಿಯ ಜೀವ" ಎಂದರು. 'ಪೂಜ್ಯರೇ, ಅದು ಹೇಗೆ ?' ಎಂದು ಕೇಳಿದಾಗ ಯತಿಗಳು ಹೀಗೆ ಹೇಳಿದರು–"ವಾಯುಭೂತಿ ತನ್ನದೊಂದು ಔದ್ಧತ್ಯದ ಗರ್ವದಿಂದ ನನ್ನನ್ನು ಹಳಿದು ಬೈದು ನುಡಿದ ಪಾಪದ ಪರಿಣಾಮವಾಗಿ ಏಳುದಿವಸದೊಳಗೆ ಔದುಂಬರ ಕುಷ್ಠರೋಗಕ್ಕೆ ಗುರಿಯಾಗಿ ಹುಳುವಾಗಿ ಯಾತನೆಪಟ್ಟು ಸತ್ತನು. ಮತ್ತೆ ಆ ಪಟ್ಟಣದಲ್ಲೇ ಡೊಂಬರ ಮನೆಯಲ್ಲಿ ಹೆಣ್ಣು ಕತ್ತೆಯಾಗಿ ಹುಟ್ಟಿ ಯಾತನೆ ಪಟ್ಟು ಸತ್ತು ಹೇಲುಹಂದಿಯಾಗಿ ಹುಟ್ಟಿ ಸತ್ತು ಹೆಣ್ಣುನಾಯಾಗಿ ಹುಟ್ಟಿ ಸತ್ತು ಈಗ ಹುಟ್ಟು ಗುರುಡಿಯಾಗಿ ಹೊಲೆಯರ ಮಗಳಾಗಿ ಆಕೆ ಹುಟ್ಟಿದ್ದಾಳೆ. ಆದುದರಿಂದ ಹಿಂದಿನ ಪ್ರೀತಿಯೇ ಕಾರಣವಾಗಿ ನಿಮಗೆ ಆ ಕೂಸಿನ ಮೇಲೆ ಪ್ರೀತಿಯುಂಟಾಯಿತು" ಆಗ ಅಗ್ನಿಭೂತಿ ಮುನಿಗಳು–ಪೂಜ್ಯರೆ, ಅದೇನು ಭವ್ಯ (ಮೋಕ್ಷಕ್ಕೆ ಅರ್ಹವಾದ) ಜೀವನೋ ? ಅಭವ್ಯ ಜೀವನೋ ?–ಎಂದು ಕೇಳಿದರು. "ಅದು ಭವ್ಯಜೀವವಾಗಿದೆ. ನೀವು ಉಪದೇಶ ಮಾಡಿದರೆ ಆಕೆ ವ್ರತಗಳನ್ನು ಸ್ವೀಕರಿಸುವಳು" ಎಂದು ಸೂರ್ಯಮಿತ್ರಾಚಾರ್ಯರು ಹೇಳಿದರು. ಅವರ ಅನುಮತಿ ಪಡೆದು ಅಗ್ನಿಭೂತಿಋಷಿಗಳು ಹೋಗಿ ತಮ್ಮ ಹಿಂದಿನ ಜನ್ಮಾಂತರದ ಸಂಬಂಧವನ್ನೂ ಸೂರ್ಯಮಿತ್ರಋಷಿಗಳನ್ನು ತಿರಸ್ಕಾರದಿಂದ ಕೆಟ್ಟ ಮಾತಾಡಿದ ಪಾಪದ ಪರಿಣಾಮವಾಗಿ ಉಂಟಾದ ಜನ್ಮಗಳ ದುಃಖಗಳನ್ನೂ ಆ ಹೆಂಗುಸಿಗೆ ಗೊತ್ತಾಗುವಂತೆ ತಿಳಿಸಿ ಆಮೇಲೆ ಹೀಗೆಂದರು—"ನೀನು ಈ ಜನ್ಮದಿಂದ ಹಿಂದಿನ

ಮಿಂತೆಂದರ್ ಮುನ್ನೆ ನೀನೀ ಭವದಿಂ ತೊಟ್ಟಯ್ದನೆಯ ಭವದೊಳ್ ವಾಯುಭೂತಿಯಪ್ಪಂದು ಮಾನಗರ್ವದಿಂ ಋಷಿಯರಂ ಬಯ್ದ ಪಾಪದ ಫಲದಿಂದಿಂತಪ್ಪ ದುಃಖಂಗಳನೆಯ್ದಿದೆ ಇನ್ ಮತ್ತಂ ಮಧುಮದ್ಯಮಾಂಸಂಗಳಂ ಭಕ್ಷಿಸಿ ತಿರಿಕ ಮನುಷ್ಯ ಭವಂಗಳೊಳಪ್ಪ ದುಃಖಂಗಳನಂತ ನಂತಕಾಲಮನುಭವಿಸಿ ನೀಡಜೀಂಪೆತ್ತಾನುಮಲ್ಲದೆ ಮನುಷ್ಯಭವಮಂ ಪೆಱದು ಪೆತ್ತೊಡ ಮಿಂತಾಗಿ ಪುಟ್ಟುಗುಂ—

ವೃತ್ತ॥ ವೈರೂಪ್ಯಂ ದುರ್ಭಗತ್ವಂ ಕುಮತಿ ಕುಜನತಾಂ ಕುತ್ಸಿತತ್ವಂ ಕುಜಾತಿಂ
ಕ್ಷುತ್ತೃಷ್ಣಾಪೀಡಿತತ್ವಂ ವಿರಸ ವಿಕಳತಾಂ ವ್ಯಾಧಿತಾಂ ಚಾಬಲತ್ವಂ
ಹೀನತ್ವಂ ಪ್ರೇಷಣತ್ವಂ ಲಘುತರಮರಣಂ ಶೋಕ ಕಾಂಕ್ಷಾಲಯತ್ವಂ
ಮಾಂಸಾಶೀ ಪ್ರಾಣಘಾತೀಹ್ಯನುಭವತಿ ಚಿರಂ ಪ್ರಾಪ್ಯ ಮಾನುಷ್ಯ ಜನ್ಮಂ ॥

ಆರ್ಯೆ ॥ ಪಾಪಾತ್ ಕಿಲ ಜಾಯಂತೇ
ವಾಮನ ಪಂಗ್ವಂಧ ಕುಬ್ಜ ಖಂಜ ಕರಾಲಾಃ
ಜಡ ಬಧಿರ ಮೂಕ ಕೃಶ ರೋ
ಮಶ ವಕ್ರ ನಿಬಿಡಾಳಿಸ್ತೇ (?) ॥




ಐದನೆಯ ಜನ್ಮದಲ್ಲಿ ವಾಯುಭೂತಿಯಾಗಿದ್ದಾಗ ಔದ್ಧತ್ಯಗರ್ವದಿಂದ ಋಷಿಗಳನ್ನು ನಿಂದಿಸಿದ ಪಾಪದ ಫಲದಿಂದ ಇಂತಹ ದುಃಖಗಳನ್ನು ಹೊಂದಿರುವೆ. ಅಲ್ಲದೆ, ಜೇನು-ಹೆಂಡ-ಮಾಂಸಗಳನ್ನು ಸೇವಿಸಿ ತಿರ್ಯಕ್ಕ-ಮನುಷ್ಯ ಜನ್ಮಗಳಲ್ಲಿ ಒದಗುವ ದುಃಖಗಳನ್ನು ಹಾಗೆಯೇ ಕೊನೆಯಿಲ್ಲದಷ್ಟು ಕಾಲವೂ ಅನುಭವಿಸಿ, ದೀರ್ಘಕಾಲದ ನಂತರವೂ ಮನುಷ್ಯಜನ್ಮ ಪ್ರಾಪ್ತವಾಗದು. ಒಂದು ವೇಳೆ ಮನುಷ್ಯಜನ್ಮ ದೊರೆತರೂ ಹೀಗೆ (ಹುಟ್ಟುಗುರುಡಿ-ದುರ್ಗಂಧೆ-ದುಸ್ವರೆ ಇತ್ಯಾದಿಯಾಗಿ) ಹುಟ್ಟ ಬೇಕಾಗುವುದು. -ಅಂತಹ ಜೀವವು ಮನುಷ್ಯ ಜನ್ಮವನ್ನು ಪಡೆದು ವಿಕಾರ ರೂಪ, ಭಾಗ್ಯಹೀನತೆ, ಕೆಟ್ಟಬುದ್ಧಿ, ಕೇಡಿಗತನ, ನೀಚಸ್ವಭಾವ, ಕೆಟ್ಟಜಾತಿ, ಹಸಿವು ಬಾಯಾರಿಕೆಗಳಿಂದ ಪೀಡಿತವಾಗಿರುವುದು, ರಸಹೀನವಾದ ಮನೋದುಃಖಗಳು, ರೋಗ, ಶಕ್ತಿಹೀನತೆ, ಕೊರತೆ, ಅನ್ಯರ ಆಳುತನ, ಬರೀ ಹಗುರವಾದ ಸಾವು, ದುಃಖ ದುರಾಶೆಗಳಿಗೆ ಆಶ್ರಯವಾಗಿರುವುದು, ಮಾಂಸಸೇವನೆ, ಜೀವಹಿಂಸೆ-ಇವನ್ನೆಲ್ಲ ಗಳಿಸಿ ಕೊಂಡು ಬಹುಕಾಲ ಇವನ್ನು ಅನುಭವಿಸಿಕೊಂಡು ಇರಬೇಕಾಗುವುದಲ್ಲವೆ? ಪಾಪ ದಿಂದಲೇ ಕುಳ್ಳರಾಗಿ, ಕೈಕಾಲಿಲ್ಲದವರಾಗಿ, ಕುರುಡರಾಗಿ, ಗಿಡ್ಡರಾಗಿ, ಕುಂಟರಾಗಿ, ಭಯಂಕರರಾಗಿ, ದಡ್ಡರಾಗಿ, ಕಿವುಡರಾಗಿ, ಮೂಕರಾಗಿ, ಕ್ಷೀಣರಾಗಿ, ಮೈಮೇಲೆಲ್ಲ ಕೂದಲುಳ್ಳವರಾಗಿ, ಡೊಂಕುಳ್ಳವರಾಗಿ-ಹುಟ್ಟುತ್ತಾರಲ್ಲವೆ? ಮನುಷ್ಯರು ಹಿಂದೆ

ವಸಂತ ತಿಲಕಂ॥ ಉದ್ದಂತ ಕುಬ್ಜ ಕುಣಿಕುಂಡ ಕರಾಳ ಕಾಣಾಃ
ಸಂಸ್ಥೂಲ ದೀರ್ಘ ಕೃಶರೋಮಶ ರೂಕ್ಷರೂಪಾಃ
ಕುಷ್ಠಾರ್ದಿತಾಃ ಕೃಪಣ ವಾಮನ ಪಾಮನಾಶ್ಚ
ಪಾಪೇನ ಪೂರ್ವಚರಿತೇನ ನರಾ ಭವನ್ತಿ ॥

ವೃತ್ತ ॥ ಕುಲಹೀನಂ ದೀನಮಾನಂ ಪರಿಭವವಿಭವಂ ದುಷ್ಕೃತಂ ಪಾಪಕರ್ಮಂ
ಮಲಿನಂ ದುರ್ಗಂಧಗಂಧಂ ಜಡಮತಿ ಕಿವುಡಂ ಪಂಗು ಮೂಕಂ...ತಂ ನಾ
ಣಿಲಿ ಪಾಣ್ಬಂ ಪಂದೆ ಲೋಭಂ ಖಳನಳಿಕಮನಂ ವಂಚಕಂ ನಿತ್ಯರೋಗಾ
ಕುಲನೆಂಬೀ ನಾಮ ನಾಮಾವಳಿಗೆ ನಿಳಯಮಕ್ಕುಂ ವ್ರತವ್ರಾತಹೀನಂ ॥

ಇಂತು ಪೂರ್ವಕೃತ ಪಾಪದ ಫಲದಿಂದಂ ವ್ರತಂಗಳಂ ಕೈಕೊಂಡಟಿದುದಱಿಂದಂ ಮನುಷ್ಯಜನ್ಮ
ದೊಳ್ ಪುಟ್ಟಿಯುಂ ದುಃಖಂಗಳನೆಯ್ದುಗುಂ ಜೀವಂ ಮತ್ತೆ ಧರ್ಮದ ಫಲದಿಂದಂ—

ವೃತ್ತ ॥ ಶ್ರೀವಕ್ಷಶ್ಚಾರುರೂಪಂ ಕುಲ ಬಲ ವಿನಯಂ ಖ್ಯಾತಿ ದೀರ್ಘಾಯುಷತ್ವಂ
ಪೂಜಾಂ ದೇವಾಸುರೇಂದ್ರೈಃ ಸುರನರವನಿತಾ ಪ್ರೀತಿಮಷ್ಟಾಂಗ ಭೋಗಂ
ಸ್ವರ್ಗೇ ಮರ್ತ್ಯೇ ಲಭಂತೇ ದ್ಯುತಿ ಮತಿ ಪಟುತಾಂ ರಾಜರಾಜಶ್ರಿಯಂಚ
ಸೌಭಾಗ್ಯಂ ಪೂಜ್ಯವಾಕ್ಯಂ ಜಗತಿ ಮಧು ಸುರಾ ಮಾಂಸ ಸೇವಾನಿವೃತ್ತಾಃ ॥

ಮಾಡಿದ ಪಾಪಕರ್ಮದಿಂದ ಉಬ್ಬು ಹಲ್ಲುಳ್ಳವರು, ಕುಬ್ಜರು ಮೋಟುಗೈಯವರು, ಹಾದರಕ್ಕೆ ಹುಟ್ಟಿದವರು, ಒಂದೇ ಕಣ್ಣಿನವರು, ತುಂಬಾ ದಪ್ಪವಾದವರು, ಉಗ್ರವಾಗಿರುವವರು, ಕೃಶವಾಗಿರುವವರು, ಕಾಡು ಗೂದಲುಳ್ಳವರು, ಒರಟುರೂಪದವರು, ಕುಷ್ಠರೋಗ ಪೀಡಿತರು, ಜಿಪುಣರು, ಕುಳ್ಳರು, ಚರ್ಮರೋಗ ಪೀಡಿತರು ಆಗಿ ಹುಟ್ಟುತ್ತಾರೆ. ಅಹಿಂಸೆ ಮೊದಲಾದ ವ್ರತಗಳನ್ನು ಆಚರಿಸದವನು-ನೀಚಕುಲೋತ್ಪನ್ನನು, ಗೌರವ ಕಡಮೆಯಾದವನು, ತಿರಸ್ಕಾರಕ್ಕೆ ಗುರಿಯಾದ ವೈಭವವುಳ್ಳವನು, ಕೇಡಿಗನು, ಪಾಪಕೃತ್ಯವೆಸಗಿದವನು, ಕೊಳಕನು, ಕೆಟ್ಟ ನಾತವುಳ್ಳವನು, ಮಂದಬುದ್ಧಿಯವನು, ಕಿವುಡನು, ಹೆಳವನು, ಮೂಕ, ನಾಚಿಕೆಯಿಲ್ಲದವ, ಜಾರ, ಹೇಡಿ, ಅತ್ಯಾಶೆಯುಳ್ಳವ, ಕೆಟ್ಟವ, ಕಪಟ ಮನದವ, ಮೋಸಗಾರ, ಯಾವಾಗಲೂ ರೋಗಿ, ಎಂಬೀ ನಾಮಾವಳಿಗೆ ಆಶ್ರಯಸ್ಥಾನವಾಗುತ್ತಾನೆ. - ಈ ರೀತಿಯಾಗಿ ಹಿಂದೆ ಮಾಡಿದ ಪಾಪದ ಪರಿಣಾಮವಾಗಿ ವ್ರತಗಳನ್ನು ಸ್ವೀಕರಿಸಿ ಸತ್ತುದರಿಂದ ಮನುಷ್ಯ ಜನ್ಮದಲ್ಲಿ ಬಂದರೂ ಜೀವನು ದುಃಖಗಳನ್ನು ಹೊಂದುವನು. ಆಮೇಲೆ ಧರ್ಮಾಚರಣೆಯಿಂದ ಏನಾಗುವುದೆಂದರೆ- ಲೋಕದಲ್ಲಿ ಜೇನು, ಮದ್ಯ, ಮಾಂಸಗಳನ್ನು ತಿನ್ನದೆ ಬಿಟ್ಟವರು-ಸಂಪದ್ಯುಕ್ತವಾದ ಎದೆ, ಮನೋಹರವಾದ ರೂಪ, ಕುಲ-ಬಲ-ವಿನಯಗಳು, ಕೀರ್ತಿ, ದೀರ್ಘಾಯುಷ್ಯ, ಇಂದ್ರನಿಂದಲೂ ರಾಕ್ಷಸ ರಾಜರಿಂದಲೂ ಪೂಜೆ, ದೇವತಾಸ್ತ್ರೀಯರ ಪ್ರೇಮ, ಅನ್ನ-ನೀರು-ತಾಂಬೂಲ-ಪುಷ್ಪ-ಚಂದನ-ವಸ್ತ್ರ-ಶಯ್ಯೆ-ಅಲಂಕಾರ ಎಂಬ ಎಂಟು ಬಗೆಯ ಸುಖ, ಕಾಂತಿಯುಕ್ತವಾದ ಬುದ್ಧಿಶಕ್ತಿ, ಕುಬೇರನ ಐಶ್ವರ್ಯ, ಸಂಪತ್ತು, ಗೌರವಯುಕ್ತವಾದ

ಆರ್ಯೆ ॥ ಪುಣ್ಯಾದುತ್ಪದ್ಯಂತೇ ಜೀವಾ ವಿಖ್ಯಾತ ವಿಪುಲ ವಂಶೇಷ್ವೇಕೇ
ದ್ಯುತಿ ಮತಿ ಧೃತಿ ಕಾಂತಿ ಶ್ರೀ ಹ್ರೀ ರೂಪಾರೋಗ್ಯ ಸತ್ವಬಲ ಸಂಪನ್ನಾಃ
ಆಜ್ಞಾ ಯಶೋ ಧೃತಿ ಮತಿ ದ್ಯುತಿ ಕಾಂತಿ ಲಕ್ಷ್ಮೀ
ಶೌರ್ಯಪ್ರತಾಪ ಪರಿವಾರ ಧನೋಪಭೋಗಾಃ
ತೇ ಲೋಕವೇದ ಸಮಯೇಷು ಸುನಿಶ್ಚಯೇನ
ಪುಣ್ಯೋದಯೇನ ಸುಲಭಾ ಇತಿ ವರ್ಣಯಂತಿ ॥
ವರ ಯುವತಿ ಭವನ ವಾಹನ ನಾಟಕ ಧನಕನಕ ರಜತಮಣಿ ಸುರಥಾಃ
ಅತಿ ಲಲಿತ ತುರಗ ಮದ ದಳಿತ ನಾಗ ಭೃತ್ಯಾ ಭವಂತಿ ಧರ್ಮೇಣ ॥



ಇಂತು ಧರ್ಮದ ಫಲದಿಂದಂ ದೇವಲೋಕದ ಮನುಷ್ಯಲೋಕದ ಸುಖಂಗಳನನುಭವಿಸಿ ಬೞಿಕ್ಕ
ನಿರ್ವಾಣ ಸುಖಮನೆಯ್ದುಗುಂ ಜೀವಮಿನ್ನಾಧರ್ಮಮೆಂಬುದೆಂತೆಂದೊಡೆ—

ಗಾಹೆ॥ ಸೋ ಧಮ್ಮೋ ಜತ್ಥ ದಯಾ ಸೋವಿ ತಓ ವಿಸಯಣಿಗ್ಗಹೋ ಜತ್ಥ
ದಸ ಅಟ್ಠ ದೋಸರಹಿಓ ಸೋ ದೇವೋ ಣತ್ಥಿ ಸಂದೇಹೋ ॥

ಎಂದಿಂತು ಪದಿನೆಂಟು ದೋಷಂಗಳನಿಲ್ಲದೊಂ ದೇವನಂತಪ್ಪ ದೇವನ ಪೇೞ್ದುದಾಗಮ
ಮೆಂಬುದಕ್ಕುಮಾ ಆಗಮಂ ಪೇೞ್ದಂತು ಬಾಹ್ಯಾಭ್ಯಂತರ ಪರಿಗ್ರಹಂಗಳೆಲ್ಲಮಂ ತೊಱೆದು

ಮಾತು–ಇವನ್ನು ಸ್ವರ್ಗಮರ್ತ್ಯಗಳೆರಡರಲ್ಲಿಯೂ ಪಡೆಯುವರು. ಮನುಷ್ಯರು ಪುಣ್ಯ
ಸಂಪಾದನೆಯಿಂದಲೇ ಪ್ರಸಿದ್ಧವೂ ವಿಸ್ತಾರವೂ ಆಗಿರುವ ವಂಶಗಳಲ್ಲಿ ಒಂದಗಲ್ಲಿ, ಪ್ರಕಾಶ
ಯುಕ್ತವಾದ ಬುದ್ಧಿಯಿಂದಲೂ ಸ್ಥಿರತೆಯಿಂದಲೂ ತೇಜಸ್ಸಿನಿಂದಲೂ ಐಶ್ವರ್ಯ
ದಿಂದಲೂ ಲಜ್ಜಾಗುಣದಿಂದಲೂ ಆಕಾರ ಆರೋಗ್ಯ ಸತ್ವಗುಣ ಶಕ್ತಿಗಳಿಂದಲೂ
ಕೂಡಿದವರಾಗಿ ಹುಟ್ಟುತ್ತಾರೆ. ಲೌಕಿಕ ವೈದಿಕ ಸಂಪ್ರದಾಯಗಳಲ್ಲಿ ಆಜ್ಞೆಮಾಡುವ
ಅಧಿಕಾರವೂ ಕೀರ್ತಿಯೂ ಸ್ಥಿರಬುದ್ಧಿಯೂ ಬುದ್ಧಿಪ್ರಕಾಶವೂ ತೇಜಸ್ಸೂ ಐಶ್ವರ್ಯವೂ
ಪರಾಕ್ರಮ ಪ್ರತಾಪಗಳೂ ಸೇವಕರು ಐಶ್ವರ್ಯ ಮುಂತಾದ ಸುಖಗಳೂ ಅತ್ಯಂತ ನಿಶ್ಚಯ
ವಾದ ಪುಣ್ಯದ ಏಳಿಗೆಯಿಂದ ಸುಲಭವಾಗಿ ದೊರೆಯುವುವು ಎಂದು ವರ್ಣಿಸುತ್ತಾರೆ.
ಧರ್ಮದಿಂದ ಶ್ರೇಷ್ಠಳಾದ ಸ್ತ್ರೀ, ಮನೆ, ವಾಹನಗಳು, ನೃತ್ಯಗಳು, ಐಶ್ವರ್ಯ, ಚಿನ್ನ,
ಬೆಳ್ಳಿ, ರತ್ನ, ಒಳ್ಳೆಯ ರಥಗಳು, ಬಹಳ ಸುಂದರವೂ ಎತ್ತರವೂ ಆಗಿ ಮದಜಲದಿಂದ
ಬೀಗಿದ ಆನೆಗಳು, ಸೇವಕರು–ಈ ಎಲ್ಲವೂ ದೊರೆಯುತ್ತವೆ.–ಹೀಗೆ ಧರ್ಮದ ಫಲ
ದಿಂದ ಜೀವವು ಸ್ವರ್ಗ ಮರ್ತ್ಯಗಳ ಸುಖವನ್ನು ಅನುಭವಿಸಿದ ಮೇಲೆ ಮೋಕ್ಷದ
ಸುಖವನ್ನು ಪಡೆಯುವುದು. ಇನ್ನು ಆ ಧರ್ಮವೆಂಬುದು ಹೇಗೆಂದರೆ— ಎಲ್ಲಿ ದಯೆ
ಇದೆಯೋ ಅದು ಧರ್ಮವು ಮತ್ತು ಎಲ್ಲಿ ಇಂದ್ರಿಯ ನಿಗ್ರಹವಿದೆಯೋ ಅದು ಕೂಡ
ಧರ್ಮವು. ಹದಿನೆಂಟು ದೋಷಗಳಿಲ್ಲದವನು ದೇವನು. ಇದರಲ್ಲಿ ಸಂಶಯವಿಲ್ಲ.–ಈ
ರೀತಿಯಾಗಿ ಹಸಿವು, ಬಾಯಾರಿಕೆ, ಹೆದರಿಕೆ, ಹಗೆತನ, ಪ್ರೀತಿ, ಮೋಹ, ಚಿಂತೆ,

ದ್ವಾದಶವಿಧಮಪ್ಪ ತಪದೊಳ್ ನೆಗೞ್ದು ಅಯ್ದುಮಿಂದ್ರಿಯಂಗಳಂ ಗೆಲ್ದು ಪಸಿವುಂ ನೀರೞ್ಕೆ ಮೊದಲಾಗೊಡೆಯ ಇಪ್ಪತ್ತೆರಡು ಪರೀಷಹಂಗಳಂ ಸೈರಿಸಿ ಯಮ ನಿಯಮ ಸ್ವಾಧ್ಯಾಯ ಧ್ಯಾನಾನುಷ್ಠಾನ ನಿರತರಾಗಿ ತಪಂಗೆಯ್ವ ಋಷಿಯರ್ಕಳ್ ತಪೋಧನರ್ ಕೊಲ್ಲದುದೆ ಧರ್ಮಮೆಂದಿಂತು ನಂಬಿ ವ್ರತಂಗಳಂ ಕೈಕೊಂಡು ನೆಗೞ್ವುದು ಧರ್ಮಮೆಂಬುದಕ್ಕುಂ—ಎಂದಗ್ನಿಭೂತಿ ರಿಸಿಯರ್ ತಿಳಿಯೆ ಧರ್ಮಮಂ ಪೇೞ್ದೊಡೆರ್ದೆಯೊಳ್ ಮೆಲ್ಲಿನಳಾಗಿ ತನ್ನ ಭವಾಂತರಂಗಳಂ ಧರ್ಮಮುಮಂ ಕೇಳ್ದಱಿದು ಸಂಸಾರ ಶರೀರ ವೈರಾಗ್ಯಮಾದಮಾನುಂ ಪೆರ್ಚೆ ತನ್ನಂ ತಾನೆ ಪೞಿದು ನಿಂದಿಸಿ ಪಾಪಕ್ಕಂಜಿ ಅಣುವ್ರತಂ ಮೊದಲಾಗೊಡೆಯ ಶ್ರಾವಕವ್ರತಂಗಳಂ ಕೈಕೊಂ- ಗಳ್ ಭಟಾರರುಂ ದೃಢವ್ರತೆಯಾಗು ಕರ್ಮಕ್ಷಯಮಕ್ಕೆಂದು ಪರಸಿ ತಮ್ಮಾವಾಸಕ್ಕೆ ಪೋದರಿತ್ತ ಜಾತ್ಯಂಧೆಯಪ್ಪ ಕೂಸುಮಹಿಂಸಾದಿ ವ್ರತಗಳಂ ಮೇಲ್ಕೊಂಡು ತನ್ನ ಮನೆಗೆ ಪೋಪಾಗಳ್ ಅನ್ನೆಗಂ ಎಡೆಯೊಳರಸನ ಪುರೋಹಿತಂ ಸೋಮಶರ್ಮನೆಂಬೊಂ ತನ್ನ ಪರಿವಾರಂ ಬೆರಸು ಮಹಾ ವಿಭೂತಿ ವಿಸ್ತಾರದಿಂದಂ ಪಿರಿದು ಪೂಜೆಯಂ ಕೊಂಡು ಮಕ್ಕಳಂ ಬೇಡಿ ಸಂಬರನಾಗ ಠಾಣಕ್ಕೆ

ಮುಪ್ಪು, ರೋಗ, ಮರಣ, ಬೆವರು, ಖೇದ, ಮದ, ರತಿ, ಆಶ್ಚರ್ಯ, ಜನನ, ನಿದ್ರೆ, ವಿಷಾದ ಎಂಬೀ ಹದಿನೆಂಟು ದೋಷಗಳಿಲ್ಲದವನು ದೇವನು. ಅಂತಹ ದೇವನು ಹೇಳಿದುದು ಶಾಸ್ತ್ರವೆನಿಸುವುದು. ಆ ಶಾಸ್ತ್ರ ಹೇಳಿದಂತೆ ಬಾಹ್ಯ ಮತ್ತು ಅಭ್ಯಂತರ ಎಂಬ ಪರಿಗ್ರಹಗಳೆಲ್ಲವನ್ನೂ ಬಿಟ್ಟು ಹನ್ನೆರಡು ತೆರನಾದ ತಪಸ್ಸಿನಲ್ಲಿ ಪ್ರಖ್ಯಾತನಾಗಿ ಪಂಚೇಂದ್ರಿಯಗಳನ್ನು ಗೆದ್ದು ಹಸಿವು ಬಾಯಾರಿಕೆ ಮುಂತಾದ ಇಪ್ಪತ್ತೆರಡು ಪರೀಷಹಗಳನ್ನು ಸಹಿಸಿ ಯಮ, ನಿಯಮ, ಸ್ವಾಧ್ಯಾಯ, ಧ್ಯಾನಗಳ ಆಚರಣೆಯಲ್ಲಿ ತತ್ಪರರಾಗಿ ತಪಸ್ಸನ್ನು ಮಾಡುವ ಋಷಿಗಳು ತಪಸ್ಸೇ ಐಶ್ವರ್ಯವಾಗಿರುವವರು. ಕೊಲ್ಲದಿರುವುದೇ ಧರ್ಮ–ಹೀಗೆ ನಂಬಿಕೊಂಡು ವ್ರತಗಳನ್ನು ಸ್ವೀಕರಿಸಿ ಆಚರಿಸುವುದು ಧರ್ಮವು. ಎಂದು ಅಗ್ನಿಭೂತಿಋಷಿ ಆಕೆ ತಿಳಿಯುವಂತೆ ಧರ್ಮವನ್ನು ತಿಳಿಸಿದನು. ಆಗ ಅವಳು ಹೃದಯದಲ್ಲಿ ಮೃದುತ್ವವನ್ನು ತಾಳಿ, ತನ್ನ ಜನ್ಮಾಂತರಗಳನ್ನೂ ಧರ್ಮವನ್ನೂ ಕೇಳಿ ತಿಳಿದುಕೊಂಡು, ಸಂಸಾರದಲ್ಲಿಯೂ ತನ್ನ ಶರೀರದಲ್ಲಿಯೂ ಅತ್ಯಂತ ವೈರಾಗ್ಯಭಾವವು ಹೆಚ್ಚಾಗಲು, ತನ್ನನ್ನು ತಾನೇ ಹಳಿದುಕೊಂಡಳು. ಪಾಪಕ್ಕೆ ಹೆದರಿ ಅಣುವ್ರತನೇ ಮೊದಲಾದ ಶ್ರಾವಕ ವ್ರತಗಳನ್ನು ಕೈಕೊಂಡಳು. ಆಗ ಅಗ್ನಿಭೂತಿ ಋಷಿಗಳು "ನೀನು ದೃಢವಾದ ವ್ರತವುಳ್ಳವಳಾಗು, ನಿನ್ನ ಕರ್ಮ ನಾಶವಾಗಲಿ" ಎಂದು ಆಶೀರ್ವದಿಸಿ ತಮ್ಮ ವಾಸಸ್ಥಾನಕ್ಕೆ ತೆರಳಿದರು. ಇತ್ತ ಹುಟ್ಟುಗುರುಡಿಯಾದ ಆ ಹೆಂಗುಸು ಅಹಿಂಸೆ ಮೊದಲಾದ ವ್ರತಗಳನ್ನು ಸ್ವೀಕರಿಸಿ ತನ್ನ ಮನೆಗೆ ತೆರಳುತ್ತಿದ್ದಳು. –ಆಗ ಅಷ್ಟರಲ್ಲಿ ರಾಜಪುರೋಹಿತನಾದ ಸೋಮಶರ್ಮನೆಂಬವನು ತನ್ನ ಪರಿವಾರದೊಂದಿಗೆ ಮಹಾವೈಭವದಿಂದ ಹೆಚ್ಚಾದ ಪೂಜಾದ್ರವ್ಯಗಳನ್ನು ತೆಗೆದುಕೊಂಡು ತನಗೆ ಮಕ್ಕಳನ್ನು ಕೊಡಬೇಕೆಂದು ಪ್ರಾರ್ಥಿಸುತ್ತ ಶಂಬ

ಪರಕೆಗುಡಲ್ ಪೋಪುದಂ ತನ್ನೊಡವೋಪ ಪೊಲೆಯರ ಕೂಸುಗಳ್ ಕಂಡು ತನಗೆ ವ್ಯಾವರ್ಣಿಸಿ ಪೇೞೆ ಕೇಳ್ದದಱೊಳ್ ಮನಮಿಟ್ಟುಮವರ್ಗ್ಗೆ ಸತ್ತು ಪುಟ್ಟುವೆನಕ್ಕೆಂದು ಭೋಗಾಸಕ್ತೆಯಾಗಿ ನಿದಾನಂಗೆಯ್ದು ಮನೆಗೆವೋಗಿ ಇರ್ಪನ್ನೆಗಮಾಯಿರುಳೊಳೆ ಪಾವುಕಚ್ಚಿ ಸತ್ತು ಚಂಪಾನಗರ ಮನಾಳ್ವೊಂ ಚಂದ್ರವಾಹನನೆಂಬೊ ನರಸನಾತನ ಮಹಾದೇವಿ ಚಂದ್ರಮತಿಯೆಂಬೊಳವರ ಪುರೋಹಿತಂ ಸೋಮಶರ್ಮನೆಂಬೊಂ ಭಟ್ಟನಾತನ ಪಾರ್ವಂತಿ ತ್ರಿವೇದಿಯೆಂಬೊಳಾಯಿರ್ವರ್ಗ್ಗಂ ನಾಗಶ್ರೀಯೆಂಬೊಳ್ ಮಗಳಾಗಿ ಪುಟ್ಟಿದೊಳತ್ಯಂತ ರೂಪ ಲಾವಣ್ಯ ಸೌಭಾಗ್ಯ ಕಾಂತಿಯನೊಡೆಯಳ್ ಜನಂಗಳ್ಗೆಲ್ಲಮಾದಮಾನುಂ ಸೊಗಯಿಸುವಳ್ ನಾಗರ್ಗೆ ಪರಸಿ ಪೆತ್ತರಪ್ಪುದಱಿಂ ನಾಗಶ್ರೀಯೆಂದು ಪೆಸರನಿಟ್ಟರ್ ಮತ್ತಿತ್ತ ಸೂರ್ಯಮಿತ್ರಾಚಾರ್ಯರ್ ಅಗ್ನಿಭೂತಿ ಋಷಿಯುಮಂತಿರ್ವರುಂ ಚಂಪಾನಗರಮಂ ಪೊಱಮಟ್ಟು ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ ವಿಹಾರಿಸುತ್ತಂ ಏೞೆಂಟು ವರ್ಷದಿಂ ಮಗುೞ್ದು ಚಂಪಾನಗರಕ್ಕೆ ವಂದು ಪೊಱವೊೞಲೊಳುದ್ಯಾನ ವನದೊಳ್ ಕಂಬಳನಾಗಂ ಶಂಬರನಾಗಂ ಪಾಂಡುಕನಾಗಮೆಂದೀ ನಾಗರ ಪೆಸರನೊಡೆಯ ಮುನ್ನಿರ್ದ್ದ ನಾಗ ಠಾಣದೊಳ್ ಬಂದಿರ್ದ್ದರ್ ಅನ್ನೆಗಂ ನಾಗಶ್ರೀಯುಂ ಪಂಚಮಿಯೆಂದು ಮಂತ್ರಿಯರ್ಕ್ಕಳ ಪೆರ್ಗಡೆಗಳ ರಾಜ

ನಾಗಸ್ಥಾನಕ್ಕೆ ಹರಕೆಯನ್ನೊಪ್ಪಿಸಲು ಹೋಗುತ್ತಿದ್ದನು. ಅದನ್ನು ತನ್ನೊಡನೆ ಬರುತ್ತಿದ್ದ ಹೊಲೆಯರ ಹೆಂಗುಸರು ಕಂಡು ತನಗೆ ವಿವರಿಸಿ ಹೇಳಲು ಆ ಕುರುಡಿಯು ಕೇಳಿ ಅದರಲ್ಲೇ ಮನಸ್ಸಿಟ್ಟು ತಾನು ಸತ್ತು ಅವರಿಗೆ ಹುಟ್ಟುವಂತಾಗಲಿ-ಎಂದು ಮನದಲ್ಲಿ ಅಭಿಲಾಷೆಗೊಂಡು ಸಂಕಲ್ಪಿಸಿಕೊಂಡು ಮನೆಗೆ ಹೋದಳು. ಮನೆಯಲ್ಲಿ ಆಕೆ ಇರುತ್ತ ಅಂದಿನ ರಾತ್ರಿಯೆ ಹಾವು ಕಚ್ಚಿ ಸತ್ತಳು. ಚಂಪಾನಗರವನ್ನು ಆಳುವ ಚಂದ್ರವಾಹನನೆಂಬ ರಾಜನಿಗೆ ಚಂದ್ರಮತಿ ಎಂಬವಳು ಪಟ್ಟದ ರಾಣಿ. ಅವರ ಪುರೋಹಿತನು ಸೋಮಶರ್ಮನೆಂಬ ಭಟ್ಟನು. ಅವನ ಹೆಂಡತಿ ತ್ರಿವೇದಿಯೆಂಬಾಕೆ. ಆ ಇರ್ವರಿಗೆ ಇವಳು ನಾಗಶ್ರೀ ಎಂಬ ಹೆಸರಿನ ಮಗಳಾಗಿ ಹುಟ್ಟಿದಳು. ಇವಳು ಅತಿಶಯವಾದ ರೂಪ-ಲಾವಣ್ಯ-ಸೌಭಾಗ್ಯ-ಕಾಂತಿಯಿಂದ ಕೂಡಿದವಳಾಗಿ ಜನರಿಗೆಲ್ಲ ಅತ್ಯಂತ ಸುಂದರಿಯಾಗಿ ಕಾಣಿಸುತ್ತಿದ್ದಳು. ನಾಗದೇವತೆಗಳಿಗೆ ಹರಕೆ ಸಲ್ಲಿಸಿ, ಆಕೆಯನ್ನು ಪಡೆದುದರಿಂದ ಅವಳಿಗೆ ನಾಗಶ್ರೀ ಎಂದು ಹೆಸರನ್ನಿಟ್ಟರು. ಆ ಮೇಲೆ ಇತ್ತ ಸೂರ್ಯಮಿತ್ರಾಚಾರ್ಯರೂ ಅಗ್ನಿಭೂತಿ ಋಷಿಗಳೂ ಚಂಪಾನಗರದಿಂದ ಹೊರಟರು. ಗ್ರಾಮ, ನಗರ, ಖೇಡ, ಖರ್ವಡ, ಮಡಂಬ, ಪತ್ತನ, ದ್ರೋಣಾಮುಖಗಳನ್ನು ಸಂಚರಿಸುತ್ತ ಏಳೆಂಟು ವರ್ಷಗಳು ಕಳೆಯಲು ಮರಳಿ ಚಂಪಾನಗರಕ್ಕೆ ಬಂದರು. ಆ ಪಟ್ಟಣದ ಹೊರಗಿನ ಉದ್ಯಾನದಲ್ಲಿ ಕಂಬಳನಾಗ, ಶಂಬರನಾಗ, ಪಾಂಡುಕನಾಗ-ಎಂಬುದಾಗಿ ನಾಗನ ಹೆಸರನ್ನುಳ್ಳ ಮತ್ತು ಅವರು ಹಿಂದೆ ಇದ್ದ ನಾಗಸ್ಥಾನದಲ್ಲಿ ಅವರು ಬಂದು ಇದ್ದರು. -ಆ ವೇಳೆಗೆ ಸರಿಯಾಗಿ ನಾಗಶ್ರೀಯು ನಾಗರ ಪಂಚಮಿಯೆಂದು ಮಂತ್ರಿಗಳ ಹೆಗ್ಗಡೆಗಳ ರಾಜರಂತೆ

ಶ್ರೇಷ್ಠಿಯುತೆ ಪ್ರಧಾನರಪ್ಪ ನಿಯೋಗಿಗಳ ಪಲಂಬರುಂ ಪೆಣ್ಗೂಸುಗಳ್ವೆರಸು ಪಿರಿದುಂಪೂರ್ಜನೆ ಯುಂ ಕೊಂಡು ನಾಗಠಾಣಕ್ಕೆ ಪೋಗಿ ನಾಗರನರ್ಚಿಸಿ ಪೊಡೆವಟ್ಟು ಸೂರ್ಯಮಿತ್ರಾಚಾರ್ಯರು ಮನಗ್ನಿಭೂತಿ ರುಷಿಯರುಮಂ ಕಂಡು ಜಾತಿಸ್ಮರೆಯಾಗಿ ತನ್ನ ಮುನ್ನಿನ ಪೊಲತಿಯಾಗಿ ಪುಟ್ಟಿದ ಭವಮಂ ನೆನೆದು ಭಟಾರರ ಕಾಲ್ಗೆರಗಿ ಪೊಡೆವಟ್ಟು ಕುಳ್ಳಿರ್ದಾಗಳಾ ಕೂಸಂ ಕಂಡು ಅಗ್ನಿಭೂತಿ ರುಷಿಯರ್ಗತಿ ಸ್ನೇಹಮಾಗಿ ತಮ್ಮ ಗುರುಗಳಂ ಸೂರ್ಯಮಿತ್ರಾಚಾರ್ಯರನಿಂತೆಂದು ಬೆಸಗೊಂಡರ್ ಭಟಾರಾ ಈ ಕೂಸಿನ ಮೇಗೆಮಗಾನಮಾನುಂ ಮೋಹಮಾದುದರ್ಕೆ ಕಾರಣಮೇನೆಂದು ಬೆಸ ಗೊಂಡೊಡೆ ಭಟಾರರವಧಿ ಜ್ಞಾನಮುಂ ಪ್ರಯೋಗಿಸಿ ಇಂತೆಂದು ಪೇಳ್ದರ್—ಈ ಕೂಸೆಂಬುದು ನಿಮ್ಮ ತಮ್ಮನಪ್ಪ ವಾಯುಭೂತಿಯ ಜೀವಂ ಅಭಿಮಾನಂ ಕಾರಣಮಾಗೆಮ್ಮನುಜದೆ ಪರಿಭವಿಸಿ ಬಾಯ್ಗೆ ವಂದುದನೆ ಪೊಲ್ಲಮೆಯ ಬಯ್ಗುಳಂ ಬಯ್ದುದಾ ಪಾಪದ ಫಲದಿಂದಮೇಳುದಿವಸದಿಂ ದೊಳಗೌದುಂಬರ ಕುಷ್ಠಮಾಗಿ ಪುಟಿತು ಸತ್ತು ಕೌಸಂಬಿಯೊಳೆ ಲಂಗಿಗರ ಮನೆಯೊಳ್ ಪೆಣ್ಗತ್ತೆಯಾಗಿ ಪಿರಿಯ ಪೊರೆಗಳಂ ಪೊತ್ತು ಪೋಗಿ ಬೆನ್ನೊಳ್ ಕಱುಮೆಯಾಗಿ ನಾಳಿಬಿರ್ದು ಪುಟಿತು ನವೆದು ಸತ್ತು ಪೇಪಂದಿಯಾಗಿ ಪುಟ್ಟಿ ಸತ್ತು ಪೆಣ್ನಾಯಾಗಿ ಪುಟ್ಟಿ ಸತ್ತು ಮತ್ತೀ

ರುವ ಶೆಟ್ಟಿಯರ ಹಾಗೂ ಮುಖ್ಯಸ್ಥರಾದ ಅಧಿಕಾರಿಗಳ ಹಲವು ಮಂದಿ ಹೆಣ್ಣುಮಕ್ಕಳನ್ನು ಕೂಡಿಕೊಂಡು ಹೆಚ್ಚಿದ ಪೂಜಾ ವಸ್ತುಗಳನ್ನು ತೆಗೆದುಕೊಂಡು ನಾಗಸ್ಥಾನಕ್ಕೆ ಹೋದಳು. ನಾಗರನ್ನು ಪೂಜಿಸಿದಳು. ಸಾಷ್ಟಾಂಗ ನಮನೆಯನ್ನು ಮಾಡಿದಳು. ಸೂರ್ಯಮಿತ್ರಾಚಾರ್ಯರನ್ನೂ ಅಗ್ನಿಭೂತಿಋಷಿಗಳನ್ನೂ ಕಂಡು ತನ್ನ ಪೂರ್ವಜನ್ಮದ ಸ್ಮರಣೆಯನ್ನು ತಾಳಿದಳು. ಅವಳು ಹಿಂದಿನ ಜನ್ಮದಲ್ಲಿ ಹೊಲತಿಯಾಗಿ ಹುಟ್ಟಿದುದನ್ನು ತಿಳಿದು, ಆಚಾರ್ಯರ ಪಾದಕ್ಕೆ ಸಾಷ್ಟಾಂಗ ವಂದಿಸಿ ಕುಳಿತುಕೊಂಡಳು. ಆಗ ಆ ಹೆಂಗುಸನ್ನು ನೋಡಿ ಅಗ್ನಿಭೂತಿಋಷಿಗಳಿಗೆ ಬಹಳ ಪ್ರೀತಿಯುಂಟಾಗಿ ತಮ್ಮ ಗುರು ಗಳಾದ ಸೂರ್ಯಮಿತ್ರಾಚಾರ್ಯರೊಡನೆ ಹೀಗೆ ಕೇಳಿದರು–"ಸ್ವಾಮಿಗಳೇ, ಈ ಹೆಂಗುಸಿನ ಮೇಲೆ ನನಗೆ ಅತ್ಯಂತ ಪ್ರೀತಿಯುಂಟಾಗಲು ಕಾರಣವೇನು ?"-ಹೀಗೆ ಕೇಳಿದಾಗ ಸೂರ್ಯ ಮಿತ್ರಾಚಾರ್ಯರು ತಮಗಿದ್ದ ಅವಧಿ ಜ್ಞಾನ (ತ್ರಿಕಾಲಜ್ಞಾನ)ವನ್ನು ಉಪಯೋಗಿಸಿ ಸಂಗತಿಯನ್ನು ತಿಳಿದು ಹೀಗೆ ಹೇಳಿದರು. "ಈ ಹೆಂಗುಸೆಂಬುದು ನಿಮ್ಮ ತಮ್ಮನಾದ ವಾಯುಭೂತಿಯ ಜೀವವು ತನ್ನ ಗರ್ವದ ಕಾರಣದಿಂದ ನಮ್ಮನ್ನು ಅಲಕ್ಷ್ಯಮಾಡಿ ಅವಮಾನಿಸಿ ಬಾಯಿಗೆ ಬಂದ ಹೊಲಸಿನ ಬೈಗುಳನ್ನು ಬಯ್ದಿದ್ದನು. ಹಾಗೆ ಬೈದ ಆ ಪಾಪದ ಪರಿಣಾಮವಾಗಿ ಏಳು ದಿವಸದೊಳಗೆ ಔದುಂಬರ ಕುಷ್ಠರೋಗಕ್ಕೆ ಗುರಿಯಾಗಿ ಹುಳುವಾಗಿ ಸತ್ತನು. ಆ ಜೀವವು ಮತ್ತೆ ಕೌಶಂಬಿ ಪಟ್ಟಣದಲ್ಲಿ ಡೊಂಬರ ಮನೆಯಲ್ಲಿ ಹೆಣ್ಣುಕತ್ತೆಯಾಗಿ ಹುಟ್ಟಿ ದೊಡ್ಡ ಹೊರೆಗಳನ್ನು ಹೊತ್ತುಕೊಂಡು ಹೋಗಿ ಬೆನ್ನಿನಲ್ಲಿ ಹೆಪ್ಪಾಟ ಒಡಕು ಬಿದ್ದು ಹುಳುವಾಗಿ, ಯಾತನೆ ಪಟ್ಟು ಸತ್ತಿತು. ಮುಂದಿನ ಜನ್ಮದಲ್ಲಿ ಹೇಲು ಹಂದಿಯಾಗಿ ಹುಟ್ಟಿ ಸತ್ತು ಮತ್ತೆ ಹೆಣ್ಣುನಾಯಿಯಾಗಿ ಹುಟ್ಟಿ ಸತ್ತು ಆಮೇಲೆ

ಚಂಪಾನಗರದೊಳ್ ಮಾದೆಗರ್ಗೆ ಪ್ರಧಾನನಪ್ಪ ನೀಳನೆಂಬ ಮಾದೆಗಂಗಂ ಕೇಶಿಯೆಂಬ ಮಾದೆಗಿಗಂ ದುರೂಪೆ ದುರ್ಗಂಧೆ ದುಸ್ವರೆ ಜಾತ್ಯಂಧೆ ಪೊಲೆಯರ್ಗ್ಗೆ ಮಗಳಾಗಿ ಪುಟ್ಟಿ ನೀವು ಪ್ರತಿಬೋಧಿಸೆ ವ್ರತಂಗಳಂ ಕೈಕೊಂಡು ನಿದಾನಂಗೆಯ್ದು ಪಾವು ಕೊಳೆ ಸತ್ತು ಪುರೋಹಿತಂ ಸೋಮಶರ್ಮಂಗಂ ತ್ರಿವೇದಿಗಂ ಪುಟ್ಟಿದ ನಾಗಶ್ರೀಯೆಂಬೊಳ್ ಮಗಳಾದಳದಱಿಂ ನಿಮಗೀ ಕೂಸಿನ ಮೇಗತಿ ಸ್ನೇಹಮಾದುದೆಂದು ಪೇೞ್ದುದೆಲ್ಲಮಂ ನಾಗಶ್ರೀ ಕೇಳ್ದು ಕಱದಯ್ದು ಭವಂಗಳುಂ ತನಗೆ ಪ್ರತ್ಯಕ್ಷಮಾದಂತಱಿದು ಭಟಾರರ ಕಾಲ್ಗೆಱಗಿ ಪೊಡೆವಟ್ಟು ಧರ್ಮಮಂ ಬೆಸಗೊಂಡು ಕೇಳ್ದಣುವ್ರತಂ ಮೊದಲಾಗೊಡೆಯ ಶ್ರಾವಕವ್ರತಂಗಳಂ ಸಮ್ಯಕ್ತ್ವಪೂರ್ವಕಂ ಕೈಕೊಂಡು ವಂದಿಸಿ ಮನೆಗೆ ಪೋಪಾಗಳ್ ಭಟ್ಟಾರರ್ ಮಗಳೆ ಎಮ್ಮ ಕೊಟ್ಟ ಬ್ರತಂಗಳಂ ನಿಮ್ಮಮ್ಮಂ ಬಿಸುಡಲ್ವೇೞ್ದನಪ್ಪೊಡೆ ಪೆಱವುೞಿವಿಸುಡದಿರೆಮ್ಮಲ್ಲಿಗೆವಂದೆಮ್ಮ ಕೊಟ್ಟ ಬ್ರತಂಗಳ ನೆಮಗೊಪ್ಪಿಸುವುದೆನೆ ಕೇಳ್ದಂತೆಗೆಯ್ವೆನೆಂದು ಮನೆಗೆ ಪೋದೊಡೊಡನೆಯ ಕೂಸುಗಳ್ ಸೋಮಶರ್ಮಭಟ್ಟಂಗೆ—ನಿಮ್ಮ ಮಗಳ್ ರಿಸಿಯರ ಪಕ್ಕದೆ ಶ್ರಾವಕಬ್ರತಂಗಳಂ ಕೈಕೊಂಡು ಬಂದಳೆನೆ ಭಟ್ಟಂ ಕೇಳ್ದು ಮಗಳೆ ನಾಗಶ್ರೀ ನಾಮುಂ ಪಾರ್ವರೆಮುಂ ಲೋಕಕ್ಕೆಲ್ಲಮಗ್ಗಳಂ ಲೋಕ

ಈ ಚಂಪಾನಗರದಲ್ಲಿ ಮಾದಿಗಂಗೆ ಮುಖ್ಯವಾದ ನೀಳನೆಂಬ ಮಾದಿಗನಿಗೂ ಕೇಶಿಯೆಂಬ ಮಾದಿಗಿತಿಗೂ ಹುಟ್ಟಿ ಕುರುಡಿ ಹೊಲತಿಯಾಗಿ ಹುಟ್ಟಿತು. ಆಕೆ ಕೆಟ್ಟ ರೂಪಿನವಳೂ ದುರ್ಗಂಧವುಳ್ಳವಳೂ ಕೆಟ್ಟ ಸ್ವರವುಳ್ಳವಳೂ ಆಗಿದ್ದಳು. ನೀವು ಉಪದೇಶಿಸಿದ ವ್ರತಗಳನ್ನು ಸ್ವೀಕರಿಸಿ, ಮುಂದಿನ ಜನ್ಮದಲ್ಲಿ ಸೋಮಶರ್ಮನ ಮಗಳಾಗಬೇಕೆಂದು ನಿಶ್ಚಯಿಸಿದ್ದು ಹಾವು ಕಚ್ಚಿ ಸತ್ತು ಪುರೋಹಿತ ಸೋಮಶರ್ಮನಿಗೂ ಅವನ ಮಡದಿ ತ್ರಿವೇದಿಗೂ ಜನಿಸಿದ ನಾಗಶ್ರೀ ಎಂಬ ಹೆಸರಿನ ಮಗಳಾದಳು. ಆದುದರಿಂದ ನಿಮಗೆ ಈ ಕನ್ಯೆಯ ಮೇಲೆ ಹೆಚ್ಚಿನ ಪ್ರೀತಿಯುಂಟಾಯಿತು". ಹೀಗೆ ಸೂರ್ಯಮಿತ್ರಾಚಾರ್ಯರು ಹೇಳಿದ್ದೆಲ್ಲವನ್ನೂ ನಾಗಶ್ರೀ ಕೇಳಿ, ಹಿಂದಿನ ಐದು ಜನ್ಮಗಳೂ ತನಗೆ ಕಣ್ಣೆದುರಿನಲ್ಲಿ ಕಂಡಂತೆ ತಿಳಿದು ಆಚಾರ್ಯರ ಪಾದಕ್ಕೆ ಸಾಷ್ಟಾಂಗ ವಂದಿಸಿ ಧರ್ಮವನ್ನು ಉಪದೇಶಿಸಬೇಕೆಂದು ಪ್ರಾರ್ಥಿಸಿ ಕೇಳಿ ತಿಳಿದು, ಅಣುವ್ರತ ಮೊದಲಾಗುಳ್ಳ ಶ್ರಾವಕ ವ್ರತಗಳನ್ನು ಧರ್ಮದ ಕುರಿತು ಸರಿಯಾದ ತಿಳಿವಳಿಕೆಯೊಂದಿಗೆ ಕೈಕೊಂಡು, ವಂದಿಸಿ ತನ್ನ ಮನೆಗೆ ಹೊರಟಳು. ಆಗ ಸೂರ್ಯಮಿತ್ರಾಚಾರ್ಯರು–"ಮಗಳೇ, ನಾವು ನಿನಗೆ ಉಪದೇಶಿಸಿಕೊಟ್ಟ ವ್ರತಗಳನ್ನು ನಿನ್ನ ತಂದೆ ಬಿಟ್ಟುಬಿಡೆಂದು ಹೇಳಿದನಾದರೆ ಅವನ್ನು ಬೇರೆಕಡೆ ಬಿಟ್ಟು ಬಿಡದಿರು, ನಮ್ಮ ಬಳಿಗೆ ಬಂದು, ನಾವು ಕೊಟ್ಟ ವ್ರತಗಳನ್ನು ನಮಗೇ ಒಪ್ಪಿಸಬೇಕು." ಎಂದು ಹೇಳಲು 'ಹಾಗೆಯೇ ಮಾಡುವೆನು' ಎಂದು ಆಕೆ ಮನೆಗೆ ತೆರಳಿದಳು. ಆಕೆಯ ಜೊತೆಯಲ್ಲಿದ್ದ ಹುಡುಗಿಯರು ಸೋಮಶರ್ಮಭಟ್ಟನಿಗೆ "ನಿಮ್ಮ ಮಗಳು ಋಷಿಗಳ ಬಳಿಯಲ್ಲಿ ಶ್ರಾವಕ ವ್ರತಗಳನ್ನು ಸ್ವೀಕರಿಸಿಕೊಂಡು ಬಂದಿದ್ದಾಳೆ" ಎಂದರು. ಆಗ ಭಟ್ಟನು ಕೇಳಿ—"ಮಗಳೆ ನಾಗಶ್ರೀ, ನಾವು

ದಿಂದಂ ಪೂಜಿತರೆಮುಮೆಮ್ಮಿಂದಗ್ಗಳಂ ಪೆಱರಿಲ್ಲದಱಿಂದಂ ಸವಣರ ಧರ್ಮಮಂ ನಮಗೆ ಕೊಳ ಲಾಗ ಬಿಸುಡು ಎನೆ ನಾಗಶ್ರೀಯೆಂದಳ್—ಅಪ್ಪಾ ವ್ರತಂಗಳಂ ಕೊಟ್ಟ ರಿಸಿಯರ್ಗ್ಗೆ ಪೋಗಿ ಯೊಪ್ಪಿಸಿ ಬಿಸುಟಿರ್ಪೆನೆನೆಯುಂತೆಗೆಯ್ಯೆಂದು ಮಗಳ ಕೈಯಂ ಪಿಡಿದಿರ್ವರುಂ ರಿಸಿಯರಲ್ಲಿಗೆ ವ್ರತಂಗಳನೊಪ್ಪಿಸಲ್ಕೆಂದು ಪೋಪನ್ನೆಗಮಾಪೆಡೆಯೊಳ್ ಬಟ್ಟೆಯೊಳೊರ್ವನಂ ಪೆಡಂಗೆಯ್ಯಡಿಯೆ ಕಟ್ಟಿ ಒಂದೆವಱೆ[3]ಗುಟ್ಟಿ ಪೊೞಲ ಜನಂಗಳ್ ಮುಸುಱಿಕೊಂಡು ನೋಡುತ್ತಮೊಡವರೆ ನೂಂಕು ತ್ತುಂ ಕೊಲಲುಯ್ವ ಪುರುಷನಂ ಯುವ್ವನನಂ ತೇಜಸ್ವಿಯಂ ಕಂಡು ನಾಗಶ್ರೀ ತಮ್ಮಮ್ಮನಂ ಬೆಸಗೊಳ್ಗುಮೀತನನೇಕೆ ಕೊಲಲುಯ್ದಪ್ಪರಪ್ಪಾ ಬೆಸಗೊಳ್ಳಿಮೆನೆ ಸೋಮಶರ್ಮ್ಮ ಕೊಲ ಲುಯ್ವ ತಳಾಱನಂ ಬೆಸಗೊಂಡು ತದ್ವೃತ್ತಾಂತಮೆಲ್ಲಮನಱಿದು ನಾಗಶ್ರೀಗಿಂತೆಂದು ಪೇೞ್ಗುಂ ಈ ಪೊೞಲ ಪ್ರಧಾನನಪ್ಪ ಶ್ರೇಷ್ಠಿ ಇಂದ್ರದತ್ತನೆಂಬೊಂ ಪದಿನಾಱುಂ ಕೋಟಿ ಕಸವರಮ ನೊಡೆಯೊನಾತನ ಮಗನೀತಂ ವರಸೇನನೆಂಬೊಂ ಜೂದಾಡಿಯಕ್ಷಧೂರ್ತನೆಂಬೊಂಗೆ ಸಾಸಿರ ದೀನಾರಮಂ ಸೋಲ್ತು ಸೋಲಮಂ ಕುಡಲಾಱದೆ ಅರಸನಾಣೆಯುಂ ಮಿಕ್ಕು ಪೋಪನ್ ಮುಂದಡ್ಡಮಾಗಿರ್ದ್ದನನಪರಾಧಿಯನಕ್ಷಧೂರ್ತನಂ ಕೊಂದನದಱಿಂದರಸನೀತನಂ ಕೊಲ

ಬ್ರಾಹ್ಮಣರಾಗಿದ್ದೇವೆ ; ಲೋಕಕ್ಕೆಲ್ಲ ಶ್ರೇಷ್ಠರು. ಲೋಕದ ಜನರಿಂದ ಪೂಜಿಸಲ್ಪಡುವವ ರಾಗಿದ್ದೇವೆ. ನಮಗಿಂತ ಶ್ರೇಷ್ಠರು ಯಾರೂ ಇಲ್ಲ. ಆದುದರಿಂದ ಜೈನ ಸನ್ಯಾಸಿಗಳ ಧರ್ಮವನ್ನು ನಾವು ಸ್ವೀಕರಿಸಲಾಗದು, ಅವನ್ನು ಬಿಟ್ಟುಬಿಡು" ಎಂದನು. ಆಗ ನಾಗಶ್ರೀ ಹೀಗೆಂದಳು–"ಅಪ್ಪಾ, ವ್ರತಗಳನ್ನು ನನಗೆ ಕೊಟ್ಟಿರುವ ಋಷಿಗಳಿಗೇ ಅವನ್ನು ಒಪ್ಪಿಸಿ ಬಿಟ್ಟು ಬರುವೆನು"–ಎನ್ನಲು "ಹಾಗೆಯೇ ಮಾಡು" ಎಂದು ಹೇಳಿ ಅವನು ಮಗಳ ಕೈಯನ್ನು ಹಿಡಿದುಕೊಂಡು ಇಬ್ಬರೂ ಋಷಿಗಳಲ್ಲಿಗೆ ವ್ರತಗಳನ್ನು ಹಿಂದಿರುಗಿಸುವುದ ಕ್ಕಾಗಿ ಹೋಗುತ್ತಿದ್ದರು. ಆಗ ಆ ಕಡೆಯಲ್ಲಿಯೇ ದಾರಿಯಲ್ಲಿ ಒಬ್ಬ ತೇಜೋವಂತ ನಾದ ಯುವಕನನ್ನು ಕೈಮುರಿನಂತೆ ಹಿಂದಕ್ಕೆ ಬಿಗಿದು ಕಟ್ಟಿ, ತಮಟೆಯೊಂದನ್ನು ಬಾರಿಸುತ್ತ, ತಳ್ಳುತ್ತ ಕೊಲ್ಲಲು ಒಯ್ಯುತ್ತಿದ್ದರು. ಪಟ್ಟಣದ ಜನರು ಮುತ್ತಿಕೊಂಡು ನೋಡುತ್ತ ಒಟ್ಟಿಗೆ ಬರುತ್ತಿದ್ದರು. ಇದನ್ನು ನಾಗಶ್ರೀ ಕಂಡು ತನ್ನ ತಂದೆಯೊಡನೆ ಹೀಗೆ ಕೇಳಿದಳು–"ಅಪ್ಪಾ, ಈತನನ್ನು ಯಾಕೆ ಕೊಲ್ಲಲು ಕೊಂಡೊಯ್ಯುತ್ತಿದ್ದಾರೆ, ಕೇಳಿ" ಆಗ ಸೋಮಶರ್ಮನು ಕೊಲ್ಲುವುದಕ್ಕೆ ಒಯ್ಯುತ್ತಿದ್ದ ತಳಾರನನ್ನು ಕೇಳಿ ಆ ಸಂಗತಿಯೆಲ್ಲವನ್ನೂ ತಿಳಿದು, ನಾಗಶ್ರೀಗೆ ಹೀಗೆಂದನು–ಈ ಪಟ್ಟಣದಲ್ಲಿ ಇಂದ್ರದತ್ತನೆಂಬ ಶ್ರೇಷ್ಠನಾದ ಸೆಟ್ಟಿ ಹದಿನಾರು ಕೋಟಿ ಹೊನ್ನುಳ್ಳವನು. ಆತನ ಮಗನಾದ ವರಸೇನ ನೆಂಬವನಿವನು. ಇವನು ಅಕ್ಷಧೂರ್ತನೆಂಬವನೊಡನೆ ಜೂಜಾಡಿ ಸಾವಿರ ದೀನಾರ (ದೀನಾರ ಎಂಬ ನಾಣ್ಯ) ಗಳನ್ನು ಸೋತು, ಈ ಸೋಲವನ್ನು ಕೊಡಲಾರದೆ ರಾಜಾಜ್ಞೆ ಯನ್ನು ಮೀರಿ ಹೋಗುತ್ತಿದ್ದನು. ತನಗೆ ತಡೆಯಾಗಿ ಇದ್ದಂತಹ ನಿರಪರಾಧಿ ಯಾದ ಅಕ್ಷಧೂರ್ತನನ್ನು ಕೊಂದನು. ಆದುದರಿಂದ ರಾಜನು ಇವನಿಗೆ ಮರಣ

ಲ್ವೇೞ್ದಿನದಱಿಂ ಕೊಲಲುಯ್ದಪರ್ ಮಗಳೆ ಎಂದು ಪೇೞ್ದೊಡೆ ನಾಗಶ್ರೀಯೆಂದಳ್—ಅಂತ ಪ್ಪೊಡಮಾನುಂ ರಿಸಿಯರ ಪಕ್ಕದೆ ಬ್ರತಮಂ ಸಾವಿಂಗಂಜಿ ಜೀವಂಗಳಂ ಕೊಲ್ಲೆನೆಂಬ ಬ್ರತಮಂ ಕೊಂಡೆನಾ ಬ್ರತಮನವರ್ಗೊಪ್ಪಿಸಿದೊಡಾನುಮಮೋಘಂ ಜೀವಂಗಳಂ ಕೊಲಲ್ವೇೞ್ಕುಮಾ ಜೀವಂಗಳಂ ಕೊಂದೊಡೆನ್ನುಮನೀತನಂತೆ ಪೆಡಂಗಯ್ಯುಡಿಯೆ ಕಟ್ಟಿಯೊಂದೆವಱೆಗುಟ್ಟಿ ನೀಮೆಲ್ಲ ನಂಟರ್ ನೋಡೆ ಶ್ಮಶಾನಕ್ಕುಯ್ದು ಸೂಲದೊಳಿಕ್ಕಿ ಕೊಲ್ವರೆನೆ ಅಂತಪ್ಪೊಡೆ ಈಯೊಂದು ಕೊಲ್ಲದ ವ್ರತಂ ನಿನಗಿರ್ಕೆ ಮಗಳೆ ಉೞಿದ ಬ್ರತಂಗಳೆಲ್ಲಮಂ ಪೋಗಿಯಾ ಕ್ಷಪಣಕಂಗೊಪ್ಪಿಸುವಮೆಂದು ಕಿಱಿದಂತರಮಂ ಪೋಪನ್ನೆಗಂ ಮತ್ತೊರ್ವನಂ ಮುನ್ನಿನಂತೆ ಕೊಲಲ್ಕೊಂಡು ಪೋಪ ಪುರುಷನಂ ಕಂಡು ನಾಗಶ್ರೀ ತಮ್ಮಮ್ಮನಂ ಬೆಸಗೊಳಲ್ವೇೞ್ದೊಡಾ ತನುಂ ಬೆಸಗೊಂಡೆಲ್ಲಮನಱಿದು ಮಗಳ್ಗಿಂತೆಂದು ಪೇೞ್ಗುಂ ಕೇಳ್ ಮಗಳೆ ವೈನಯಿಕನೆಂಬೊ ನೊರ್ವ ಪುರುಷಂ ಕನ್ನೆಯ ಬಂಟನ ವೃದ್ಧಸ್ತ್ರೀಯ ಮೂವರ ಚಿತ್ರಕಥೆಗಳಂ ಪಟದೊಳ್ ತೋಱಿ ಪೇೞ್ದು ಲೋಗರಂ ಡಂಬಿಸಿ ಮಾಱುಗೊಳ್ವ ಬತ್ತಮಂ ಕಳ್ವೊನಾ ಮೂಱಱಿಂ ಕಥೆಗಳೊಳಗೆ ಕನ್ನೆಯ ಕಥೆಯುಂ ಪೇೞ್ವೆನದೆಂತೆಂದೊಡೆ—ಕೌಶಂಬಿಯೆಂಬ ಪೊೞಲೊಳ್

ದಂಡನೆಯನ್ನು ವಿಧಿಸಿದನು. ಆದುದರಿಂದ ಇವನನ್ನು ಕೊಲ್ಲಲು ಕೊಂಡು ಹೋಗುತ್ತಿದ್ದಾರೆ ಮಗಳೇ !" ಎಂದು ಹೇಳಿದನು. ಆಗ ನಾಗಶ್ರೀ ಹೇಳಿದಳು"–ಹಾಗಾದರೆ ನಾನೂ ಋಷಿಗಳ ಬಳಿಯಲ್ಲಿ ವ್ರತವನ್ನು ಕೈಗೊಂಡಿದ್ದೇನೆ–ಸಾವಿಗೆ ಹೆದರಿ ಜೀವಿಗಳನ್ನು ಕೊಲ್ಲುವುದಿಲ್ಲವೆಂಬ ಅಹಿಂಸಾ ವ್ರತವನ್ನು ಸ್ವೀಕರಿಸಿದ್ದೇನೆ. ಆ ವ್ರತವನ್ನು ಅವರಿಗೇ ಒಪ್ಪಿಸಿದೆನಾದರೆ, ನಾನೂ ಬಿಡದೆಯೆ ಜೀವಿಗಳನ್ನು ಕೊಲ್ಲಬೇಕಾಗುತ್ತದೆ. ಆ ಜೀವಿಗಳನ್ನು ಕೊಂದರೆ ನನ್ನನ್ನೂ ಇವನಂತೆಯೆ ಕೈಗಳನ್ನು ಹೆಡಮುರಿ ಕಟ್ಟಿ ತಮಟೆಯನ್ನು ಹೊಡೆಯುತ್ತ ನಂಟರಾದ ನೀವೆಲ್ಲ ನೋಡುತ್ತಿರುವಂತೆಯೇ ಮಸಣಕ್ಕೆ ಕೊಂಡುಹೋಗಿ ಶೂಲಕ್ಕೆ ಹಾಕಿ ಕೊಂದಾರು". ಹೀಗೆ ನಾಗಶ್ರೀ ಹೇಳಿದಾಗ ಅವಳ ತಂದೆ– "ಮಗಳೆ, ಹಾಗಾದರೆ ಈಯೊಂದು ಅಹಿಂಸಾವ್ರತ ನಿನಗಿರಲಿ. ಉಳಿದ ವ್ರತಗಳೆಲ್ಲವನ್ನೂ ನಾವು ಹೋಗಿ ಆ ಜೈನಸನ್ಯಾಸಿಗೆ ಕೊಟ್ಟುಬಿಡೋಣ" ಎಂದು ನುಡಿದು, ಅವರು ಸ್ವಲ್ಪದೂರ ಹೋಗುವಷ್ಟರಲ್ಲಿ ಮತ್ತೊಬ್ಬ ಗಂಡಸನ್ನು ಹಿಂದಿನಂತೆಯೇ ಕೊಲ್ಲಲು ಕೊಂಡು ಹೋಗುವುದನ್ನು ನಾಗಶ್ರೀ ಕಂಡಳು. ಕಾರಣವನ್ನು ತಿಳಿಯುವಂತೆ ಅವಳು ತಂದೆಗೆ ಹೇಳಲು, ಅವನು ಕೇಳಿ ಎಲ್ಲವನ್ನೂ ತಿಳಿದು ಮಗಳಿಗೆ ಹೀಗೆಂದನು–"ಮಗಳೇ ಕೇಳು. ವೈನಯಿಕನೆಂಬ ಒಬ್ಬ ಮನುಷ್ಯನು ಒಂದು ವಸ್ತ್ರದಲ್ಲಿ ಓರ್ವ ಕನ್ಯೆಯ, ಓರ್ವ ಸೇವಕನ ಓರ್ವ ಮುದುಕಿಯ ಹೀಗೆ ಮೂವರ ಚಿತ್ರಕಥೆಗಳನ್ನು ತೋರಿಸಿ ಹೇಳಿ, ಜನರನ್ನು ಮೋಸಮಾಡಿ ಬೆಲೆಗೆ ಕೊಳ್ಳುವ ಬತ್ತವನ್ನು ಕದಿಯುವನು. ಆ ಮೂರು ಕಥೆಗಳಲ್ಲಿ ಕನ್ಯೆಯ ಕಥೆಯನ್ನು ಹೇಳುವೆನು. ಅದು ಹೇಗೆಂದರೆ– ಕೌಸಂಬಿ

ಸುಮಿತ್ರನೆಂಬೊಂ ಶ್ರೇಷ್ಠಿ ಕೋಟಿ ಕಸವರಮನೊಡೆಯೊನಾತನ ಮಗಂ ವಸುಮಿತ್ರನೆಂಬೊಂಗೆ ಸರ್ಪದಷ್ಟಮಾದೊಡೆ ಸತ್ತನೆಂದು ಶ್ಮಶಾನಕ್ಕೆ ಕೊಂಡು ಪೋಗಿ ಇೞಿಪಿದೊಡಲ್ಲಿ ಗರುಡನಾಭಿಯೆಂಬ ಮಂತ್ರವಾದಿ ಪೋಗಿ ನೋಡಿ ಈತನನಾಂ ನಾಳೆಯಭಿಮಂತ್ರಿಸಿ ಬಾೞಿಸುವೆನಂಜದಿರಿಮಿಲ್ಲಿಯೆ ಇರುಳೀ ದಷ್ಟಕಂಗೆ ಜಾವಮಿರಿಮೆಂದು ಪೇೞ್ದು ಪೋದಂ ಸುಮಿತ್ರಸೆಟ್ಟಿಯುಂ ನಾಲ್ವರೊಳ್ಳಿದರಪ್ಪ ಸುಭಟರಂ ಜಾವಮಿರಿಸಿ ಪೋದನಾ ನಾಲ್ವರುಂ ಜಾವಮಿರ್ದ ಭಟರೊಳಗೊರ್ವನಿರುಳ್ ಕುಱಿಯುಂ ಕಳ್ದು ತರಲ್ ಪೋದಂ ಮತ್ತೊರ್ವಂ ಪುಳ್ಳಿಯುಂ ತರಲ್ಪೋದಂ ಮತ್ತೊರ್ವಂ ಕಿಚ್ಚುಂ ತರಲ್ಪೋದಂ ಮತ್ತೊರ್ವಂ ದಷ್ಟಕನಾ ಪಕ್ಕದೆ ಕಾಪಿರ್ದನಂತಾ ನಾಲ್ವರುಂ ಕುಱಿಯುಂ ಕೊಂಡು ಸುಟ್ಟು ತಿಂದರೆಂಬ ಕಥೆಯುಮಂ ಪೊೞ್ತುಱನೆ ನೇಸರ್ಮೂಡೆ ಗರುಡನಾಭಿಯೆಂಬ ಮಂತ್ರವಾದಿ ಬಂದು ಪಱೆಗುಟ್ಟಿ ಮಂತ್ರಿಸಿ ದಷ್ಟಕನನೆತ್ತಿದಂ ಸುಮಿತ್ರ ಸೆಟ್ಟಿಯುಮಿರುಳ್ ಜಾವಮಿರ್ದ ನಾಲ್ವರ್ ಸುಭಟರ್ಗೊರೊರ್ವರ್ಗೆ ಸಾಸಿರ ದೀನಾರದ ಪೊಟ್ಟಳಿಗೆಗಳಂ ಪ್ರಾಸಾದದ ಮೇಗಿರ್ದು ಜನಸಂಕೀರ್ಣದ ನಡುವೆ ನಾಲ್ಕು ಪೊಟ್ಟಳಿಗೆಯನೀಡಾಡಿದೊಡಾ ಪೊಟ್ಟಳಿಗೆಯುಂ ಕೊಂಡು ಕೊಳ್ಳೆನೆಂದು ಪುಸಿ

ಎಂಬ ಪಟ್ಟಣದಲ್ಲಿ ಕೋಟಿ ಹೊನ್ನುಳ್ಳವನಾದ ಸುಮಿತ್ರನೆಂಬ ಸೆಟ್ಟಿಯಿದ್ದನು. ಅವನ ಮಗನಾದ ವಸುಮಿತ್ರನಿಗೆ ಹಾವು ಕಚ್ಚಿತು. ಅವನು ಸತ್ತನೆಂದು ಮಸಣಕ್ಕೆ ಒಯ್ದು ಇಳಿಸಿದಾಗ, ಅಲ್ಲಿಗೆ ಗರುಡನಾಭಿ ಎಂಬ ಒಬ್ಬ ಮಂತ್ರವಾದಿ ಬಂದು ನೋಡಿ "ನಾನು ಇವನಿಗೆ ನಾಳೆ ಮಂತ್ರಪ್ರಯೋಗ ಮಾಡಿ ಬದುಕಿಸುವೆನು. ನೀವು ಹೆದರಬೇಡಿ. ಕಚ್ಚಿಸಿಕೊಂಡವನಿಗೆ ನೀವು ಇಲ್ಲಿಯೇ ರಾತ್ರಿ ಕಾವಲಾಗಿ ಇರಿ" ಎಂದು ಹೇಳಿ ಹೋದನು. ಸುಮಿತ್ರ ಸೆಟ್ಟಿ ನಾಲ್ಕು ಮಂದಿ ಒಳ್ಳೆಯವರಾದ ಯೋಧರನ್ನು ಕಾವಲಿರಿಸಿ ಹೋದನು. ಕಾವಲಾಗಿದ್ದ ಆ ನಾಲ್ಕುಮಂದಿ ವೀರರಲ್ಲಿ ಒಬ್ಬನು ರಾತ್ರಿಯಲ್ಲಿ ಕುರಿಯನ್ನು ಕದ್ದು ತರಲು ಹೋದನು. ಮತ್ತೊಬ್ಬನು ಕಟ್ಟಿಗೆ ತರಲು ಹೋದನು. ಮತ್ತೊಬ್ಬನು ಬೆಂಕಿತರಲು ಹೋದನು, ಇನ್ನೊಬ್ಬನು ಹಾವು ಕಚ್ಚಿದವನ ಬಳಿಯಲ್ಲಿ ಕಾವಲಾಗಿದ್ದನು. ಅಂತು ಆ ನಾಲ್ಕು ಮಂದಿ ಆ ಕುರಿಯನ್ನು ಸುಟ್ಟು ತಿಂದರು. ಹೊತ್ತಾರೆ ವೇಳೆಗೆ ಸೂರ್ಯೋದಯವಾದಾಗ ಗರುಡನಾಭಿಯೆಂಬ ಮಂತ್ರವಾದಿ ಬಂದು ಡೋಲು ಹೊಡೆದು, ಮಂತ್ರಪ್ರಯೋಗ ಮಾಡಿ ವಿಷವೇರಿದವನನ್ನು ಎಬ್ಬಿಸಿದನು. ಸುಮಿತ್ರ ಸೆಟ್ಟಿ ರಾತ್ರಿ ಕಾವಲಾಗಿದ್ದ ನಾಲ್ಕುಮಂದಿ ಯೋಧರಿಗೆ ಒಬ್ಬೊಬ್ಬರಿಗೆ ಸಾವಿರ ದೀನಾರ ನಾಣ್ಯಗಳ ಪೊಟ್ಟಣಗಳನ್ನು ಕೊಡಲು ನಿರ್ಣಯಿಸಿದನು. ತಾನು ಉಪ್ಪರಿಗೆಯ ಮೇಲೆ ಇದ್ದುಕೊಂಡು ಜನಸಂದಣಿಯ ನಡುವೆ ಅವನ್ನು ಬಿಸಾಡಿದನು. ಆ ಕಟ್ಟಾಳುಗಳಲ್ಲಿ ಒಬ್ಬನು ಪೊಟ್ಟಣವನ್ನು ತೆಗೆದುಕೊಂಡಿದ್ದರೂ ತನಗೆ ಸಿಕ್ಕಿಲ್ಲವೆಂದು ಸುಳ್ಳಾಡಿದನು. ಆಗ ಸುಮಿತ್ರ ಸೆಟ್ಟಿ ರಾಜನಿಗೆ ವಿಜ್ಞಾಪನೆಮಾಡಿದನು– "ನನ್ನ

ದೊಡಾ ಶ್ರೇಷ್ಠಿಯುಮರಸರ್ಗೆ ಪೋಗಿ ಬಿನ್ನಪಂಗೆಯ್ವನ್ ಎನ್ನ ಸಾಸಿರ ದೀನಾರದ ಪೊಟ್ಟ
ಳಿಗೆ ಕೆಟ್ಟುದದಂ ದೇವರಾರೈವುದೆಂದು ಪೇೞ್ದೊಡೆ ತಳಾಱನಂ ಕರೆದು ಬೇಗಂ ಕಳ್ಳನನಾರಯ್ಯ
ಲ್ಲದಾಗಳ್ ಕಳ್ಳಂಗೆ ತಕ್ಕ ನಿಗ್ರಹಮಂ ನಿನಗೆ ಮಾೞ್ಪೆನೆಂದರಸನಾತನಂ ಬಗ್ಗಿಸಿ ನುಡಿದೊಡಾ
ತನುಮಱಿಸಿ ಕಳ್ಳನನಾರಯ್ಯಲಾಱದೆ ನಾಲ್ವರ್ ಸುಭಟರುಮಂ ಮನೆಗೊಡಗೊಂಡು ಬಂದು
ಭೀತನಾಗಿ ಬಿನ್ನನೆ ಮೊಗಂ ಬಾಡಿ ಚಿಂತಿಸುತಿರ್ದೊಡಾತನ ಮಗಳ್ ಸುಮತಿಯೆಂಬಳಿಂತೇಕೆ
ಬಿನ್ನನಾಗಿ ಚಿಂತಿಸುತ್ತಿರ್ದ್ದೆಯಯ್ಯಾ ಎಂದು ತಂದೆಯಂ ಬೆಸಗೊಂಡೊಡಾತನುಂ ತದ್ವೃತ್ತಾಂತ
ಮನೆಲ್ಲಮಂ ಮಗಳ್ಗಱಿಯೆ ಪೇೞ್ದೊಡಂಜಲ್ವೇಡಿದನೆಲ್ಲಮನಾನಾರಯ್ದು ಕಳ್ಳನುಮಂ ಕಸವರ
ಮುಮಂ ನಾಳೆ ನಿಮಗೊಪ್ಪಿಸುವೆಂ ನೀಮುಂ ನಿಶ್ಚಿಂತಮಿರಿಮೆಂದು ತಂದೆಯನೇಕಾಂತದೊಳ್
ನುಡಿದು ತಂದೆಯಂ ಸಂತವಿಸಿದಾಗಳ್ ಸುಮತಿಯುಮಿರುಳ್ ಕಳ್ಳರಂ ಪರೀಕ್ಷಿಸಲ್ವೇಡಿಯಾ
ನಾಲ್ವರುಂ ಸುಭಟರ ಪಕ್ಕದಿರ್ದೇನಂದವರ್ಗೆ ಕಥೆಯಂ ಪೇೞ್ಗುಂ ಪಾಟಳೀಪುತ್ರಮೆಂಬ ಪುರ
ಮಲ್ಲಿ ಶ್ರೇಷ್ಠಿ ಸುದತ್ತನೆಂಬೊನಾತನ ಮಗಳ್ ಸುದಾಮೆಯೆಂಬ ಕನ್ನೆಯೊಂದು ದಿವಸಂ
ಗಂಗೆಯಂ ಮೀಯಲ್ಪೋಗಿ ಮೀವಲ್ಲಿ ನೆಗೞ್ ಪಿಡಿದೊಡಾದಮಾನುಮಂಜಿ ತಡಿಯೊಳಿರ್ದ

ಸಾವಿರ ದೀನಾರಗಳ ಕಟ್ಟು ಕಳೆದುಹೋಗಿದೆ. ಅದನ್ನು ಪ್ರಭುಗಳು ವಿಚಾರಣೆ ಮಾಡಬೇಕು" ಎಂದನು. ಆಗ ರಾಜನು ತಳಾರ (ಪಟ್ಟಣದ ಕಾವಲುಗಾರ) ನನ್ನು ಕರೆದು– "ಬೇಗನೆ ಕಳ್ಳನನ್ನು ಪತ್ತೆಹಚ್ಚು, ನಿನ್ನಿಂದ ಆಗದಿದ್ದರೆ ಕಳ್ಳನಿಗೆ ಮಾಡುವ ಶಿಕ್ಷೆಯನ್ನು ನಿನಗೆ ಮಾಡುವೆನು" ಎಂದು ಗದರಿಸಿ ಆಜ್ಞಾಪಿಸಿದನು. ತಳಾರನು ಕಳ್ಳನನ್ನು ಹುಡುಕಿ ಹಿಡಿಯಲಾರದೆ ಆ ನಾಲ್ಕು ಮಂದಿ ಸುಭಟರನ್ನೂ ಮನೆಗೆ ಕರೆದುಕೊಂಡು ಬಂದನು. ಬೆದರಿದವನಾಗಿ ಶೂನ್ಯವಾದ ಮೋರೆಯುಳ್ಳವನಾಗಿ, ಬಾಡಿಹೋಗಿ ಚಿಂತಿಸುತ್ತಿದ್ದನು. ಆಗ ಅವನ ಮಗಳು ಸುಮತಿ ಎಂಬವಳು– "ಅಪ್ಪಾ, ನೀನು ಹೀಗೇಕೆ ದಿಕ್ಕು ತೋಚದೆ ಚಿಂತಿಸುತ್ತಿರುವೆ?" ಎಂದು ತಂದೆಯೊಡನೆ ಕೇಳಿದಳು. ಆಗ ಸುಮಿತ್ರನು ಆ ಸಂಗತಿಯೆಲ್ಲವನ್ನೂ ಮಗಳಿಗೆ ತಿಳಿಯುವ ಹಾಗೆ ಹೇಳಿದನು. ಅದಕ್ಕೆ ಆಕೆ– "ಹೆದರಬೇಡಿ, ನಾನು ಇದೆಲ್ಲವನ್ನೂ ವಿಚಾರಿಸಿ ಕಳ್ಳನನ್ನೂ ಹಣವನ್ನೂ ನಾಳೆ ನಿಮಗೆ ಒಪ್ಪಿಸುವೆನು. ನೀವು ಚಿಂತೆಯನ್ನು ಬಿಟ್ಟುಬಿಡಿ" ಎಂದು ತಂದೆಗೆ ರಹಸ್ಯವಾಗಿ ತಿಳಿಸಿ, ತಂದೆಯನ್ನು ಸಮಾಧಾನಪಡಿಸಿದಳು. ಸುಮತಿ ರಾತ್ರಿಯಲ್ಲಿ ಕಳ್ಳನು ಯಾರೆಂದು ಪರೀಕ್ಷಿಸುವುದಕ್ಕಾಗಿ ಆ ನಾಲ್ಕು ಮಂದಿ ಸುಭಟರ ಬಳಿಯಲ್ಲಿದ್ದು ಅವರಿಗೆ ಏನೆಂದು ಕತೆ ಹೇಳಿದಳೆಂದರೆ—ಪಾಟಳೀಪುತ್ರವೆಂಬ[1] ಪಟ್ಟಣ. ಅಲ್ಲಿ ಸುದತ್ತನೆಂಬ ಸೆಟ್ಟಿಯಿದ್ದನು. ಅವನ ಮಗಳು ಸುದಾಮೆ–ಇನ್ನೂ ಮದುವೆಯಾಗದವಳು ಆಕೆ ಒಂದು ದಿವಸ ಗಂಗಾನದಿಯಲ್ಲಿ ಸ್ನಾನ ಮಾಡಲು ಹೋಗಿ, ಸ್ನಾನ ಮಾಡುತ್ತಿದ್ದಾಗ ಮೊಸಳೆ ಹಿಡಿ

ಧನದತ್ತನೆಂಬೊಂ ಸೋದರಮಯ್ದುನನಂ ಕಂಡೆನ್ನಂ ಬೇಗಂ ಬಿಡಿಸೆಂದೊಡಾತನಿಂತೆಂದನೆನ್ನ ಬೇಡಿದುದನೀವೊಡೆ ನಿನ್ನಂ ಕಾವೆನೆಂದೊಡಾಕೆಯುಮೀವೆನೆಂದು ಪೂಣ್ದೊಡೆ ಬೇಗಂ ನೀರಂ ಪೊಕ್ಕು ನೆಗೞಿಂ ಬಿಡಿಸಿದ ಬೞಿಕ್ಕಂ ಪೇೞೆನಂ ಬೇಡುವಯ್ ನಿನ್ನ ಬೇಡಿದುದನೆಲ್ಲಮನೀವೆನೆಂದು ಕನ್ನೆ ನುಡಿದೊಡಾತನಿಂತೆಂದಂ ನಿನ್ನ ಮದುವೆಯಂದು ಪ್ರಥಮ ದಿವಸದ ಪಸವನಮನೆನಗೆ ವಂದು ತೋಱಲ್ವೇೞ್ಕುಮೆಂದು ಬೇಡಿದೊಡಾಕೆಯುಮಂತೆಗೆಯ್ವೆನೆಂದು ಪೂಣ್ದಿಂತುಕಾಲಂ ಸಲೆ ಮತ್ತಾ ಕನ್ನೆಗೆ ಯೌವನಂ ನೆಱೆದಂದು ಮದುವೆಯಾದೊಡೆ ತನ್ನ ಪೂಣ್ಕೆಯಂ ನೆನೆದು ಸರ್ವಾಲಂಕಾರಶೋಭಿತೆಯನಾಗಿಯಾಸವರಾನುಂ ಕೈಗೆಯ್ದು ಚೆಲ್ವೆಯಾಗಿ ನಟ್ಟನಡುವಿರುಳ್ ಮನೆಯಿಂದಂ ಪೊಱಮಟ್ಟು ಮೈದುನನಿರ್ದಾಪಣಕ್ಕೆ ಪೋಪನ್ನೆಗಮೆಡೆಯೊಳ್ ಕಳ್ಳನೊರ್ವಂ ಕಂಡು ನಿನ್ನ ತೊಟ್ಟಾಭರಣಮೆಲ್ಲಮಂ ಕೊಟ್ಟು ಪೋಗಲ್ಲದಾಂ ಪೋಗಲೀಯೆನೆಂದೊಡೀಗಳೆ ಪೋಗಿ ಬಂದು ನಿನಗೆನ್ನ ತುಡುಗೆಯೆಲ್ಲಮಂ ಕುಡುವೆನನ್ನೆಗಮಿಲ್ಲಿ ಎನ್ನ ಬರ್ಪನ್ನೆಗಮೆತ್ತಂ ಪೋಗದಿರೆಂದು ನಂಬೆ ನುಡಿದು ಸಂತೈಸಿ ಕಿಱಿದಂತರಮಂ ಪೋದೊಡೆ ತಳಾಱಂ ಕಂಡೀ ಪೊೞ್ತಿತ್ತ

ಯಿತು. ಬಹಳ ಭಯಪಟ್ಟು ಆಕೆ ದಡದಲ್ಲಿದ್ದ ಸೋದರ ಮೈದುನನಾದ ಧನದತ್ತನೆಂಬವನನ್ನು ಕಂಡು "ನನ್ನನ್ನು ಬೇಗ ಬಿಡಿಸು" ಎಂದಳು. ಆಗ ಆತನು– "ನಾನು ಕೇಳಿದದನ್ನು ನೀನು ಕೊಡುವೆಯಾದರೆ ನಿನ್ನನ್ನು ರಕ್ಷಿಸುವೆನು" ಎಂದನು. ಆಕೆ ಆಗಲಿ. ಕೊಡುವೆನು ಎಂದು ಶಪಥ ಮಾಡಲು ಧನದತ್ತನು ಕೂಡಲೆ ನೀರಿಗಿಳಿದು ಮೊಸಳೆಯಿಂದ ಅವಳನ್ನು ಬಿಡಿಸಿದನಂತರ ಆ ಕನ್ನಿಕೆ– "ಹೇಳು. ನೀನು ಏನನ್ನು ಬಯಸುತ್ತೀ? ನೀನು ಕೇಳಿದುದೆಲ್ಲವನ್ನೂ ಸಲ್ಲಿಸುವೆನು" ಎಂದು ನುಡಿದಳು. ಆಗ ಧನದತ್ತನು– "ನೀನು ಮದುವೆಯಾದಾಗ ಮೊದಲನೆಯ ದಿವಸದ ಅಲಂಕಾರವನ್ನು ನನಗೆ ಬಂದು ತೋರಿಸಬೇಕು" ಎಂದು ತಿಳಿಸಿದನು. 'ಹಾಗೆಯೇ ಮಾಡುವೆನು' ಎಂದು ಆಕೆ ಪ್ರತಿಜ್ಞೆ ಮಾಡಿದಳು. ಹೀಗೆಯೇ ಕಾಲ ಕಳೆಯಲು ಆ ಕನ್ಯೆಗೆ ಯೌವನ ಪ್ರಾಪ್ತಿಯಾದಾಗ ವಿವಾಹವಾಗಲು ಆಕೆ ತನ್ನ ಪ್ರತಿಜ್ಞೆಯನ್ನು ನೆನಪಿಟ್ಟುಕೊಂಡು ಎಲ್ಲಾ ಆಭರಣಗಳಿಂದ ಅಲಂಕೃತೆಯಾಗಿ ಅತ್ಯಂತವಾಗಿ ಶೃಂಗಾರ ಮಾಡಿಕೊಂಡು ಸೊಬಗುಗಾತಿಯಾಗಿ ಮಧ್ಯರಾತ್ರಿ ವೇಳೆಯಲ್ಲಿ ಮನೆಯಿಂದ ಹೊರಟಳು. ತನ್ನ ಮೈದುನನಿದ್ದ ಅಂಗಡಿ ಕಡೆಗೆ ಆಕೆ ಹೋಗುವಾಗ ನಡುವೆ ಒಬ್ಬ ಕಳ್ಳನು ಕಂಡು—"ನೀನು ತೊಟ್ಟುಕೊಂಡಿರುವ ಆಭರಣಗಳೆಲ್ಲವನ್ನೂ ಕೊಟ್ಟುಹೋಗು. ಅದಲ್ಲದೆ ಹೋಗಲು ಬಿಡೆನು" ಎಂದನು. ಆಗ ಅವಳು ನಾನು ಈಗಲೆ ಹೋಗಿ ಬಂದು ನಿನಗೆ ನನ್ನ ಆಭರಣಗಳೆಲ್ಲವನ್ನೂ ಕೊಡುವೆನು. ಅದುವರೆಗೆ—ನಾನಿಲ್ಲಿಗೆ ಬರುವವರೆಗೆ ಎಲ್ಲಿಗೂ ಹೋಗದಿರು" ಎಂದು ನಂಬುವಂತೆ ನುಡಿದು ಸಮಾಧಾನಪಡಿಸಿ ಸ್ವಲ್ಪದೂರ ಮುಂದುವರಿದಳು. ಆಗ ತಳಾರನು (ಪಟ್ಟಣದ ಕಾವಲುಗಾರನು) ಕಂಡು—"ಎಲೈ ಕೆಟ್ಟಮನುಷ್ಯಳೇ, ಈ ಹೊತ್ತಿಗೆ ಯಾವ ಕಡೆ ಹೋಗುತ್ತಿರುವೆ ?" ಎಂದು ಆಕೆಯನ್ನು

ಪೋದಪ್ಪಯ್ ಪೊಲ್ಲಮಾನಸಿಯೆ ಎಂದಾತಂ ಪಿಡಿದು ಕಾಡೆ ಪಿರಿದೊಂದು ಮನೆವಾೞ್ತೆಯುಂ ಟೆನ್ನಂ ಕಾಪದೆ ಪೋಗಲೀಯಾನೀಗಳೆ ಪೋಗಿ ನಿನ್ನಲ್ಲಿಗೆ ಬಂದಪ್ಪೆಂ ಬಂದೊಡೆ ನಿನ್ನ ಮೆಚ್ಚುಗೆ ಯ್ವೆನೆಂದು ನಂಬೆ ನುಡಿದು ನನ್ನಿಗೊಟ್ಟು ಕಿಱಿದಂತರಮಂ ಪೋಪನ್ನೆಗಮೆಡೆಯೊಳ್ ಬ್ರಹ್ಮ ರಾಕ್ಷಸಂ ಕಂಡು ತನ್ನಂ ತಿನ್ನಲ್ ಬಗೆದೊಡೆ ಬ್ರಹ್ಮರಾಕ್ಷಸಂಗೆಂದಳ್ ಪಿರಿಯುದೊಂದು ಮನೆ ವಾೞ್ತೆಯುಂಟೀಗಳೆ ಪೋಗಿ ಬಂದಪ್ಪೆಂ ಬಂದ ಬೞಿಕ್ಕೆನ್ನಂ ಮೆಚ್ಚಿದಂತೆ ಮಾಡೆಂದು ನನ್ನಿ ಗೊಟ್ಟು ನಂಬಿಸಿ ಪೋದೊಡಾ ಕಳ್ಳನುಂ ತಳಾಱನುಂ ಬ್ರಹ್ಮರಾಕ್ಷಸನುಮಂತುಮೀಕೆಯೀ ಪೊೞ್ತು ತುರಿಪದಿಂದಲ್ಕಱಿಂದೆತ್ತ ಪೋದಪ್ಪಳೆಂದು ಬೞಿವೞಿಯನೆ ನೋಡುತ್ತಂ ಪೋಪರ ನ್ನೆಗಂ ಮಯ್ದುನಂ ಪಟ್ಟಿದ್ದಾಪಣಕ್ಕೆ ಪೋಗಿ ಬಾಗಿಲಂ ತೆಱೆಯಿಮೆಂದಾಗಳವರಾರೆಂದು ಬೆಸ ಗೊಂಡಾಗಳಾನಲ್ತೆ ಸುದಾಮೆಯೆನೆಂದೊಡೆ ಬಾಗಿಲಂ ತೆಱೆದಾಪಣದೊಳಗು ಪೊಕ್ಕಳನೀ ಪೊೞ್ತೇಕೆ ಬಂದೆಯೆಂದು ಬೆಸಗೊಂಡೊಡೆ ನೀನಲ್ತೆ ಎನ್ನ ನನ್ನಿಗೊಂಡಯ್ ಎನ್ನ ಮದುವೆ ಯಂದು ಪ್ರಥಮ ದಿವಸದ ಪಸದನಮನೆನಗೆ ತೋಱಲ್ವೇೞ್ಕುಮೆಂದು ಬೇಡಿದೊಡಾಂ ಪ್ರತಿಜ್ಞೆಯುಂ ನೆಱಪಲ್ ಬಂದೆನೆಂದು ತನ್ನಂ ತೋಱಿದೊಡಾತನುಮಾಕೆಯ ರೂಪಂ ನೋಡಿ

ತಡೆದು ತೊಂದರೆಪಡಿಸಿದನು. ಅದಕ್ಕೆ ಅವಳು—"ನನಗೆ ಹಿರಿದಾದ ಒಂದು ಮನೆಗೆಲಸ ವಿದೆ. ನನ್ನನ್ನು ತೊಂದರೆ ಪಡಿಸದೆ ಹೋಗಲು ಬಿಡು. ನಾನು ಈಗಲೇ ಹೋಗಿ ನಿನ್ನ ಬಳಿಗೆ ಬರುವೆನು. ಬಂದಾಗ ನಿನಗೆ ಮೆಚ್ಚಿಕೆಯಾದುದನ್ನು ಮಾಡುವೆನು" ಎಂದು ನಂಬಿಕೆಯಾಗುವಂತೆ ಹೇಳಿ ಭಾಷೆಕೊಟ್ಟು ಸ್ವಲ್ಪದೂರ ಮುನ್ನಡೆದಳು. ಆ ಸಂದರ್ಭ ದಲ್ಲಿ ಒಬ್ಬ ಬ್ರಹ್ಮರಾಕ್ಷಸನು ಕಂಡು ಅವಳನ್ನು ತಿನ್ನಲು ಬಗೆದನು. ಆಗ ಅವಳು ಬ್ರಹ್ಮ ರಾಕ್ಷಸನಿಗೆ ಹೇಳಿದಳು—"ನನಗೆ ಹಿರಿದಾದ ಒಂದು ಮನೆಗೆಲಸವಿದೆ. ಈಗಲೇ ಹೋಗಿ ಬರುತ್ತೇನೆ. ಬಂದ ಮೇಲೆ ನನ್ನನ್ನು ನಿನ್ನ ಇಷ್ಟದಂತೆ ಮಾಡು" ಎಂದು ಸುದಾಮೆ ಭಾಷೆ ಕೊಟ್ಟು ನಂಬಿಸಿ ಹೋದಳು. ಆ ಕಳ್ಳನೂ ತಳಾರನೂ ಬ್ರಹ್ಮರಾಕ್ಷಸನೂ "ಅಂತೂ ಈಕೆ ಈ ಹೊತ್ತಿಗೆ ತ್ವರೆಯಿಂದಲೂ ಪ್ರೀತಿಯಿಂದಲೂ ಯಾವ ಕಡೆ ಹೋಗು ತ್ತಿದ್ದಾಳೆ ?" ಎಂದುಕೊಂಡು ಅವಳ ದಾರಿ ದಾರಿಯನ್ನೇ ನೋಡುತ್ತ ಅನುಸರಿಸಿ ಹೋದರು. ಅಷ್ಟರಲ್ಲಿ ಅವಳು ಮೈದುನನಾದ ಧನದತ್ತನು ಮಲಗಿದ್ದ ಅಂಗಡಿಗೆ ಹೋಗಿ 'ಬಾಗಿಲು ತೆರೆಯಿರಿ' ಎಂದಾಗ 'ಬಾಗಿಲು ತೆರೆಯಿರಿ ಎಂಬುವರು ಯಾರು ?' ಎಂದು ಕೇಳಲು, 'ನಾನು ಸುದಾಮೆಯಲ್ಲವೆ ?' ಎಂದಳು. ಬಾಗಿಲು ತೆರೆದೊಡನೆ ಅವಳು ಅಂಗಡಿಯ ಒಳಹೊಕ್ಕಳು. ಆಗ ಧನದತ್ತನು 'ಈ ಹೊತ್ತಿಗೆ ಯಾಕೆ ಬಂದೆ ?' ಎಂದು ಕೇಳಿದನು. ಅದಕ್ಕೆ ಅವಳು 'ನೀನಲ್ಲವೆ ನನ್ನಿಂದ ಭಾಷೆ ತೆಗೆದುಕೊಂಡದ್ದು ? ನನ್ನ ಮದುವೆಯಂದು ಮೊದಲನೆಯ ದಿವಸದ ಅಲಂಕಾರವನ್ನು ತೋರಿಸಬೇಕೆಂದು ನೀನು ಕೇಳಿದ್ದಿ. ನಾನು ಆ ಪ್ರತಿಜ್ಞೆಯನ್ನು ಈಗ ಈಡೇರಿಸಲಿಕ್ಕಾಗಿ ಬಂದಿದ್ದೇನೆ' ಎಂದು ತನ್ನನ್ನು ತೋರಿಸಿದಳು. ಆಗ ಧನದತ್ತನು ಆಕೆಯ ರೂಪವನ್ನು ನೋಡಿ ಮೆಚ್ಚಿ-

ಮೆಚ್ಚಿ ವಿದ್ಯಾಧರಿಯ ದೇವಗಣಿಕೆಯ ರೂಪನೆ ಪೋಲ್ವೆ ಎಂದು ಪೊಗೞ್ದು ಮತ್ತಮಿಂತೆಂದಂ ಪ್ರತಿಜ್ಞೆಯುಂ ನೆಱಪಿದೆ ಒಳ್ಳಿತಾಯ್ತೀ ಪೊೞ್ತು ಪೊಲ್ಲದುವಂದೆ ನಟ್ಟನಡುವಿರುಳ್ ಕಳ್ಳರುಂ ತಳಾಱರುಂ ಕಾದುವರ್ ಬೇಗಂ ಪೋಗೆಂದು ನುಡಿದು ಪೋಗಲ್ವೇೞ್ದಡದೆಲ್ಲಮನಾ ಮೂವರುಂ ಪೊಱಗೆ ಕೇಳ್ದು ಮತ್ತಂ ಬೇಗವೇಗಂ ಪೋಗಿ ತಮ್ಮಿರ್ದೆಡೆಗಳೊಳಿರ್ದರನ್ನೆಗಮಾ ಮದೆವಳ್ ರಕ್ಕಸನಲ್ಲಿಗೆ ಬಂದೇನೆನ್ನಂ ನೀಂ ಮೆಚ್ಚಿದಂತಂ ಮಾಡೆಂದು ತನ್ನಂ ತೋಱಿದೊಡಾ ಬ್ರಹ್ಮ ರಾಕ್ಷಸನಿಂತೆಂದಂ ನೀ ಸತ್ಯವಾದಿಯಯ್ ಅದಮಾನುಂ ರೂಪು ಲಾವಣ್ಯ ಸೌಭಾಗ್ಯ ಕಾಂತಿ ಹಾವ ಭಾವ ವಿಲಾಸ ವಿಭ್ರಮಂಗಳನೊಡೆಯಯ್ ನಿನ್ನಂ ತಿಂದಾನಾವ ಗತಿಗೆ ಪೋಪೆಂ ನಿನ್ನ ರೂಪನೞಿಯಲಾಱೆನವನಱಿನಂಜದೆ ಪೋಗೆಂದು ಪೋಗಲ್ವೇೞ್ದೊಡೆ ಬರ್ಪಳನ್ನೆಗಂ ತಳಾಱನಂ ಕಂಡಿನ್ನೆನ್ನಂ ನೀಂ ಮೆಚ್ಚುಗೆಯ್ಯೆಂದು ನುಡಿದೊಡಾತನಿಂತೆಂದಂ ನೀಂ ಪೊಲ್ಲಮಾನಸಿಯೆ ಎಂದು ಮನದೊಳೆ ಬಗೆದೆಂ ನಿನ್ನಂತೊಳ್ಳಿದರಾರುಮಿಲ್ಲ ನುಡಿದ ನನ್ನಿಯಂ ತಪ್ಪದೆ ಬಂದೆ ಸತ್ಯವಾದಿಯಯ್ ಪೋಗಬ್ಬಾ ಎಂದು ಪೋಗಲ್ವೇೞ್ದೊಡೆ ಬರ್ಪಳನ್ನೆಗಂ ಕಳ್ಳನಂ ಕಂಡು ತನ್ನ ತೊಟ್ಟಾಭರಣಮನೆಲ್ಲಮಂ ಕಳೆದೊಪ್ಪಿಸೆಯಾತನಿಂತೆಂದನೆನಗೇನೊಂದೆ ಭವಮೆ ನಿನ್ನ ಕೈ

"ನೀನು ವಿದ್ಯಾಧರಿಯ ಅಥವಾ ದೇವತಾ ಸ್ತ್ರೀಯ ರೂಪವನ್ನು ಹೋಲುತ್ತಿರುವೆ" ಎಂದು ಹೊಗಳಿ ಮತ್ತೆ ಹೀಗೆಂದನು—"ನೀನು ಪ್ರತಿಜ್ಞೆಯನ್ನು ನಡೆಸಿದೆ, ಒಳ್ಳೆಯದಾಯಿತು. ಈ ಹೊತ್ತಿಗೆ ನೀನು ಬಂದುದು ಒಳ್ಳೆಯದಲ್ಲ. ಮಧ್ಯರಾತ್ರಿಯಲ್ಲಿ ಕಳ್ಳರೂ ತಳವಾರರೂ ತೊಂದರೆ ಕೊಡುವರು. ಬೇಗ ಹೋಗು" ಎಂದು ನುಡಿದು ಹೋಗಲು ಹೇಳಿದನು. ಈ ಮಾತೆಲ್ಲವನ್ನೂ ಆ ಮೂವರೂ ಹೊರಗಿನಿಂದ ಕೇಳಿ ಮತ್ತೆ ಬೇಗ ಬೇಗನೆ ಹೋಗಿ ತಾವು ಮೊದಲಿದ್ದ ಸ್ಥಳಗಳಲ್ಲಿಯೇ ಇದ್ದರು. ಅಷ್ಟರಲ್ಲಿ ಆ ಮದುಮಗಳು ಸುದಾಮೆ ರಾಕ್ಷಸನಲ್ಲಿಗೆ ಬಂದು 'ನೀನು ನನ್ನನ್ನು ಇಷ್ಟಬಂದಂತೆ ಮಾಡು' ಎಂದು ತನ್ನನ್ನು ತೋರಿಸಿದಳು. ಆಗ ಬ್ರಹ್ಮರಾಕ್ಷಸನು ಹೀಗೆಂದನು— "ನೀನು ಸತ್ಯವಾದಿಯಾಗಿರುವೆ. ಅತ್ಯಂತ ರೂಪ–ಲಾವಣ್ಯ-ಸೌಭಾಗ್ಯ-ಕಾಂತಿ ಹಾವ–ಭಾವ–ವಿಲಾಸ ವಿಭ್ರಮಗಳುಳ್ಳವಳು. ನಿನ್ನನ್ನು ತಿಂದು ಯಾವ ದುರ್ಗತಿಗೆ ಹೋಗುವೆನೋ! ನಿನ್ನ ರೂಪವನ್ನು ಕೆಡಿಸಲಾರೆನು. ಆದುದರಿಂದ ಹೆದರದೆ ಹೋಗು—" ಎಂದು ಹೋಗಲು ಹೇಳಿದನು. ಅವಳು ಮುಂದೆ ಬರುತ್ತ ತಳಾರನನ್ನು ಕಂಡು "ಇನ್ನು ನೀನು ನನ್ನನ್ನು ಇಷ್ಟಬಂದಂತೆ ಮಾಡು" ಎಂದು ಹೇಳಿದಳು. ಅದಕ್ಕೆ ಅವನು ಹೀಗೆಂದನು— "ನೀನು ಕೆಟ್ಟ ಹೆಂಗುಸೆಂದು ನಾನು ಮನಸ್ಸಿನಲ್ಲಿ ಭಾವಿಸಿದ್ದೆನು. ನಿನ್ನ ಹಾಗೆ ಒಳ್ಳೆಯವರು ಯಾರೂ ಇಲ್ಲ. ಕೊಟ್ಟ ಭಾಷೆಗೆ ತಪ್ಪದೆ ಬಂದಿರುವೆ. ಸತ್ಯವಾದಿಯಾಗಿದ್ದಿ. ಹೋಗು ತಾಯೀ"— ಎಂದು ಹೋಗಲು ಹೇಳಿದನು. ಸುದಾಮೆ ಮುಂದೆ ಬರುವಷ್ಟರಲ್ಲಿ ಕಳ್ಳನನ್ನು ಕಂಡು, ತಾನು ಧರಿಸಿದ ತೊಡಿಗೆಗಳೆಲ್ಲವನ್ನೂ ಕಳಚಿ ಅವನಿಗೆ ಒಪ್ಪಿಸಿದಳು. ಆಗ ಅವನು ಹೀಗೆಂದನು— "ನನಗೇನು ಇದು ಒಂದೇ ಜನ್ಮವೆ? ನಿನ್ನ ಕೈಯ ಆಭರಣ

ಯುದಂ ಕೊಂಡಾನೇನಾಚಂದ್ರಾರ್ಕತಾರಂಬರಂ ಬರ್ದಪ್ಪೆನೆ ಎಣಿಕೊಂಡ ಕಸವರಂ ತವ ನಿಧಿಯಂತೆ ತವದಿರ್ದಪ್ಪುದೆ ನಿನ್ನ ಕೈಯಿಂದಂ ಕೊಳ್ಳೆ ಪೋಗಬ್ಬಾ ಎಂದು ಪೋಗಲ್ವೇೞ್ದನಂತಾ ಮೂವರುಂ ಮದೆವಳಂ ಪೋಗಲ್ವೇೞ್ದು ಪೂಜಿಸಿ ಕೞಿಪಿದೊಡಾಕೆಯುಂ ತನ್ನ ಮನೆಗೆ ಪೋದಳಿಂತವರೊಳ ಗೊಳ್ಳಿದರಾರಣ್ಣಂಗಳಿರಾ ಪೇೞಿಮೆಂದು ಸುಮತಿಯೆಂಬ ಕನ್ನೆ ಬೆಸಗೊಂಡಾಗಳಾ ಸುಭಟರೊ ಳೊರ್ವನಿರುಳ್ ಕುಱಿಯುಂ ಕೊಂದವಂ ಬೊಮ್ಮರಾಕ್ಷಸನಾಕೆಯುಂ ತಿನ್ನದೆ ಕೞಿಪಿದೊಡಾತ ನೊಳ್ಳಿದನೆಂದಂ ಸರ್ಪದಷ್ಟನಂ ಕಾದಿರ್ದಾತಂ ತಳಾಱಂ ಕಾಡದೆ ಕೞಿಪಿದನಾತನೊಳ್ಳಿದನೆಂದಂ ಕಿಚ್ಚಂ ತರಲ್ ಪೋದಾತನಿಂತೆಂದಂ ಮದೆವಳಂ ಸೋದರ ಮಯ್ದುನನತ್ಯಂತ ರೂಪಲಾವಣ್ಯ ಕಾಂತಿ ಹಾವ ಭಾವ ವಿಲಾಸ ವಿಭ್ರಮಂಗಳನೊಡೆಯೊಳಂ ಸೋದರಮಾವನ ಮಗಳಂ ತನ್ನಲ್ಲಿಗೆ ವಂದೊಳನೇಕಾಂತಂ ಸಮನಿಸಿದೊಡಾಕೆಗಳಿಪದೆ ಪೋಗಲ್ವೇೞ್ದ ಧನದತ್ತನೊಳ್ಳಿದನೆಂದಂ ಪುಳ್ಳಿ ಯುಂತರಲ್ ಪೋದಾತಂ ಸಾಸಿರದೀನಾರದ ಪೊಟ್ಟಳಿಗೆಯುಂ ಕಳ್ದಾತನಿಂತೆಂದಂ ಮದೆವಳ್ ತೊಟ್ಟಾ ಭರಣಮೆಲ್ಲಮಂ ಕೊಳ್ಳದೆ ಕೞಿಪಿದ ಕಳ್ಳನೊಳ್ಳಿದನೆಂದೊಡಾತನ್ ಕಳ್ಳನಪ್ಪುದನಱಿದು ಕಿರಿದು ಬೇಗಮಿರ್ದಾ ನುಡಿಗಳೆಲ್ಲಮಂ ಮಱೆಯಿಸಿ ಎಲ್ಲರುಮಂ ಮಱಲುಂದಿಸಿದ ಬೞಿಕ್ಕಮಾ ಕಳ್ಳನ

ಗಳನ್ನು ತೆಗೆದುಕೊಂಡು ನಾನೇನು ಚಂದ್ರ ಸೂರ್ಯ ನಕ್ಷತ್ರಗಳಿರುವ ತನಕ (ಶಾಶ್ವತವಾಗಿ) ಬದುಕಿರುವೆನೆ ? ಎಣಿಕೆಮಾಡಿ ತೆಗೆದುಕೊಂಡ ಚಿನ್ನವು ಅಕ್ಷಯ ಸಂಪತ್ತಿನಂತೆ ನಾಶ ವಾಗದೆಯೇ ಇದ್ದೀತೆ ? ನಿನ್ನ ಕೈಯಿಂದ ತೆಗೆದುಕೊಳ್ಳೆನು. ಹೋಗು ತಾಯೇ" ಎಂದು ಹೋಗಲು ಹೇಳಿದನು. ಅಂತು ಆ ಮೂವರೂ ಮದುಮಗಳನ್ನು ಹೋಗಲು ಹೇಳಿ ಮನ್ನಿಸಿ ಕಳುಹಿಸಿದರು. ಆಕೆ ತನ್ನ ಮನೆಗೆ ಹೋದಳು. ಎಲೈ ಅಣ್ಣಂದಿರೇ, ಹೀಗೆ ಅವರಲ್ಲಿ ಒಳ್ಳೆಯವರು ಯಾರು ? ಹೇಳಿ—ಎಂದು ಆ ಸುಮತಿ ಎಂಬ ಕನ್ಯೆ ಸುಭಟ ರೊಡನೆ ಕೇಳಿದಳು. ಆಗ ಅವರಲ್ಲಿ ಒಬ್ಬನು—ಕುರಿಯನ್ನು ರಾತ್ರಿಯಲ್ಲಿ ಕೊಂದವನು 'ಬ್ರಹ್ಮರಾಕ್ಷಸನು ಸುದಾಮೆಯನ್ನು ತಿನ್ನದೆ ಕಳುಹಿಸಿದುದರಿಂದ ಅವನು ಒಳ್ಳೆಯವನು' ಎಂದನು. ಬೆಂಕಿ ತರಲು ಹೋದವನು ಹೀಗೆಂದನು—"ಧನದತ್ತನು ಒಳ್ಳೆಯ ವನು. ಯಾಕೆಂದರೆ ಅವನು ಸೋದರ ಮೈದುನನಾಗಿದ್ದರೂ ತನ್ನ ಬಳಿಗೆ ಬಂದಂತಹ ಸೋದರಮಾವನ ಮಗಳನ್ನು ಮದುಮಗಳನ್ನು ಅತ್ಯಂತ ರೂಪ-ಲಾವಣ್ಯ-ಸೌಭಾಗ್ಯ-ಕಾಂತಿ-ಹಾವ-ಭಾವ-ವಿಲಾಸ - ವಿಭ್ರಮಗಳುಳ್ಳವಳನ್ನು ಏಕಾಂತದಲ್ಲಿ ಪ್ರಾಪ್ತವಾದವಳಾದರೂ ಆಕೆಯಲ್ಲಿ ಮೋಹಗೊಳ್ಳದೆ ಅವಳನ್ನು ಹೋಗಲು ಹೇಳಿ ದನು. ಆದುದರಿಂದ ಅವನು ಒಳ್ಳೆಯವನು" ಎಂದು ಹೇಳಿದನು. ಕಟ್ಟಿಗೆ ತರಲು ಹೋದವನು ಸಾವಿರ ದೀನಾರದ ಪೊಟ್ಟಣವನ್ನು ಕದ್ದವನಾಗಿದ್ದು ಹೀಗೆಂದನು— "ಮದುಮಗಳು ಧರಿಸಿದ ತೊಡಿಗೆಗಳೆಲ್ಲವನ್ನೂ ತೆಗೆದುಕೊಳ್ಳದೆ ಕಳುಹಿಸಿದ ಕಳ್ಳನು ಒಳ್ಳೆಯವನು" ಎಂದನು. ಆಗ ಆತನು ಕಳ್ಳನಾಗಿರುವುದನ್ನು ತಿಳಿದು ಆಕೆ ಸ್ವಲ್ಪ ಹೊತ್ತು ಇದ್ದು, ಆ ಮಾತುಗಳೆಲ್ಲವನ್ನೂ ಮರೆತಂತೆ ವರ್ತಿಸಿ ಎಲ್ಲರನ್ನೂ ಮೈ

ನೆಟ್ಟಿ ಏಕಾಂತದೊಳಿಂತೆಂದು ನುಡಿಗುಂ ನಿನಗಾನಾಟಿಸಿದೆನೆನಗೆ ನೆಱೆಯೆ ತುಡುಗೆಯುಂ ಮಾಡಿಸಲ್ ಭಾಗಸಮುಳ್ಳೊಡೆ ನಿನಗಾಂ ಪೆಂಡತಿಯೆನಾಗಿ ನಿನ್ನೊಡವರ್ಪೆನೆಂದವನನುರ್ಕೆವದಿಂದಂ ಮನಂಗೊಳೆ ನಂಬೆ ನುಡಿದೊಡಾತನುಂ ಮೆಯ್ಯಱಿಯದೆ ದೀನಾರದ ಸಹಸ್ರದ ಪೊಟ್ಟಳಿಗೆಯುಂ ತೆಗೆದು ಕೊಟ್ಟಾನಿವಱೊಳಗೆ ನಿನಗೆ ತುಡುಗೆಯುಂ ಮಾಡಿಸುವೆ. ಬಾ ಪೋಪಮಿರ್ವರುಮೆಂದೊಡಂತೆಗೆಯ್ವೆನೆಂದು ಪೊನ್ನ ಪೊಟ್ಟಳಿಗೆಯುಂ ತಂದೆಯು ಮಱಲುಂದಿದಲ್ಲಿಗೆ ಪೋಗಿ ಬರುಂಟಿ ಎೞ್ಚಿ ಪೊಟ್ಟಳಿಗೆಯುಂ ತಂದೆಗೆ ಕೊಟ್ಟಳ್ ಕೊಟ್ಟೊಡಾತನುಂ ಕಳ್ಳನುಮಂ ದೀನಾರದ ಸಹಸ್ರದ ಪೊಟ್ಟಳಿಗೆಯುಮಂ ಕೊಂಡು ಪೋಗಿಯರಸಂಗೊಪ್ಪಿಸಿದನೆಂಬೀ ಚಿತ್ರಕಥೆಗಳುಮಂ ಜನಂಗಳ್ಗೆ ಪೇೞ್ದು ಬತ್ತಮುಂ ಕಳ್ದಂ ವೈನಯಿಕನೆಂಬೊಂ ಕಳ್ಳನಿನ್ನುಮಾತನ ಪೇೞ್ದ ಕಥೆಗಳುಮಂ ಪೇೞ್ವೆಂ ಕೇಳ್ ಮಗಳೆ ಎಂದು ಸೋಮಶರ್ಮ ಭಟ್ಟಂ ನಾಗಶ್ರೀಗಿಂತೆಂದು ಪೇೞ್ಗುಂ ಧರ್ಮಪುರಮೆಂಬುದು ಪೊೞಲಲ್ಲಿ ನಾಗದತ್ತನೆಂಬೊಂ ಶ್ರೇಷ್ಠಿಯಾತನ ಬಂಟಂ ವೈನಾಕನೆಂಬೊನಾತನೊಂದು ದಿವಸಂ ಕಬ್ಬಿನ ಕೆಯ್ಯನುೞ್ವಾಂ ನಿದಾನಮುಂ ಕಂಡದಂ ಮಱಸಲ್ವೇಡಿ ತನ್ನ ಪೆಂಡತಿಯ ಮನಮಂ ಪರೀಕ್ಷಿಸಲ್ವೇಡಿ ಕೃತಕಗರ್ಭಮಂ ತಾಳ್ದಿರೆ ಪೆಂಡತಿ ಕಂಡಿದೇನ್ ಬಸಿ

ಮರೆತು ನಿದ್ದೆ ಮಾಡಿಸಿದ ನಂತರ ಆ ಕಳ್ಳನನ್ನು ಎಬ್ಬಿಸಿ ರಹಸ್ಯದಲ್ಲಿ ಹೀಗೆಂದಳು— "ನಿನ್ನನ್ನು ನಾನು ಪ್ರೀತಿಸಿದ್ದೇನೆ. ನನಗೆ ಬೇಕಾದಷ್ಟು ಆಭರಣವನ್ನು ಮಾಡಿಸಲು ತಕ್ಕ ಐಶ್ವರ್ಯ ನಿನ್ನಲ್ಲಿದ್ದರೆ, ನಾನು ನಿನ್ನ ಹೆಂಡತಿಯಾಗಿ ನಿನ್ನ ಜೊತೆಯಲ್ಲಿ ಬರುವೆನು" ಎಂದು ಅವನನ್ನು ಕಪಟದಿಂದ ಮನಸ್ಸಿಗೆ ಹಿಡಿಯುವಂತೆ ನಂಬಿಕೆಯಾಗುವಂತೆ ನುಡಿದಳು. ಆಗ ಅವನು ಮೈಮರೆತವನಾಗಿ ಸಾವಿರ ದೀನಾರದ ಕಟ್ಟನ್ನು ತೆಗೆದು ಕೊಟ್ಟು "ನಾನು ಇದರಲ್ಲಿ ನಿನಗೆ ಆಭರಣವನ್ನು ಮಾಡಿಸುವೆನು ಬಾ ಇಬ್ಬರೂ ಹೋಗೋಣ" ಎಂದನು. ಆಗ ಸುಮತಿ 'ಹಾಗೆಯೇ ಮಾಡುವೆನು' ಎಂದು ಚಿನ್ನದ ಕಟ್ಟನ್ನು ತೆಗೆದುಕೊಂಡು ತನ್ನ ತಂದೆ ಮೈಮರೆತು ನಿದ್ರಿಸುತ್ತಿದ್ದಲ್ಲಿಗೆ ಹೋಗಿ, ಬೆರಲಿನಿಂದ ಚುಚ್ಚಿ ಎಬ್ಬಿಸಿ ಆ ಪೊಟ್ಟಣವನ್ನು ತಂದೆಗೆ ಕೊಟ್ಟಳು. ಆತನು ಕಳ್ಳನನ್ನೂ ಸಾವಿರ ದೀನಾರಗಳ ಪೊಟ್ಟಣವನ್ನೂ ತೆಗೆದುಕೊಂಡು ಹೋಗಿ ರಾಜನಿಗೆ ಒಪ್ಪಿಸಿದನು. ಈ ರೀತಿಯಾದ ಚಿತ್ರಕಥೆಗಳನ್ನು ಜನರಿಗೆ ಹೇಳಿ, ವೈನಯಿಕನೆಂಬ ಕಳ್ಳನು ಬತ್ತವನ್ನು ಕದಿಯುತ್ತಿದ್ದನು. ಇನ್ನೂ ಆತನ ಕಥೆಗಳನ್ನು ಹೇಳುವೆನು, ಮಗಳೇ ಕೇಳು-ಎಂದು ಸೋಮಶರ್ಮಭಟ್ಟನು ನಾಗಶ್ರೀಗೆ ಈ ರೀತಿಯಾಗಿ ಹೇಳಿದನು—ಧರ್ಮಪುರವೆಂಬ ಪಟ್ಟಣದಲ್ಲಿ ನಾಗದತ್ತನೆಂಬ ಸೆಟ್ಟಿಯಿದ್ದನು. ಅವನ ಆಳು ವೈನಾಕನೆಂಬವನು. ಆತನು ಒಂದು ದಿನ ಒಬ್ಬನ ಗದ್ದೆಯನ್ನು ಉಳುತ್ತಿದ್ದನು. ಅವನಿಗೆ ಒಂದು ನಿಕ್ಷೇಪ ದೊರಕಿತು. ಅದನ್ನು ಮರೆಮಾಚುವುದಕ್ಕಾಗಿ ಅವನು ತನ್ನ ಹೆಂಡತಿಯ ಮನಸ್ಸನ್ನು ಪರೀಕ್ಷಿಸಲು ಬಯಸಿ ತಾನು ಗರ್ಭ ತಾಳಿದವನಂತೆ ನಟಿಸಿದನು. ಹೆಂಡತಿ ಕಂಡು 'ಹೊಟ್ಟೆಯಲ್ಲಿ ಏನಿದೆ ?' ಎಂದು ಕೇಳಿದಳು. ಅದಕ್ಕೆ ಆತನು 'ಆ ಮಾತಿನಲ್ಲೇನು ? ಸುಮ್ಮನಿರು' ಎಂದನು.

ಅೞೊಳಿರ್ದುದೆಂದೊಡಾತನಾ ಮಾತಿನೊಳೇನೊ ಕೆಮ್ಮಗಿರೆಂದೊಡಾಕೆ ನಿರ್ಬಂಧದಿಂ ಕೇೞೆ
ಬೆಸಗೊಳೆಯಾರ್ಗಂ ಪೇೞೆಯಪ್ಪೊಡೆ ನಿನಗೆ ಪೇೞ್ವೆನೆಂದಿಂತೆಂದಂ ಪುರುಷರ್ಕಳ್ಗಾಗದುದೆನೆ
ಗಾದುದೆಂದು ಪೇೞ್ದೊಡದಂ ಕೇಳ್ದು ಸೈರಿಸಲಾಱದೆ ಪೊೞಲ ಜನಂಗಳೆಲ್ಲಮಱಿವಂತು ಪೇೞ್ದು
ಳಿಂಬೆರಡನೆಯ ಕಥೆಯುಮಂ ಪೇೞ್ದು ಮೂಱನೆಯ ವೃದ್ಧಸ್ತ್ರೀಯ ಕಥೆಯನಿಂತೆಂದು ಪೇೞಲ್
ತೊಡಂಗಿದಂ ಹರಿಪುರಿಯೆಂಬ ಪೊೞಲೊಳ್ ಗಂಭೀರೆಯೆಂಬೊಳೊರ್ವಳ್ ಬಿರ್ದಿಯಾಕೆಯ
ಮಗಳ್ ಹರಿಣಿಯೆಂಬೊಳಾಕೆಯಂ ಜಯಂತಮೆಂಬ ಪೊೞಲೊಳ್ ವಸುದತ್ತನೆಂಬ ಪರದಂಗೆ
ಕೊಟ್ಟೊಡಾಕೆಗೆ ಗರ್ಭಮಾಗಿ ಮೋದಗೆಯ ಮೇಗೆ ಬಯಕೆಯಾದೊಡೆ ತಾಯ್ ಪಲವುಂ
ತೆಱದ ಲಡ್ಡುಗೆಗಳ್ ಮಂಡಗೆಗಳುಂ ಮೊದಲಾಗೊಡೆಯ ಪಲವುಂ ಭಕ್ಷ್ಯರೂಪಗಳುಮಂ
ಕೊಂಡು ಗಂಭೀರೆಯೆಂಬ ಬಿರ್ದಿ ಹರಿಪುರದಿಂ ಪೊಱಮಟ್ಟು ಮಗಳಿರ್ದೂರ್ಗೆ ಪೋಪಳನ್ನೆಗ
ಪೆಡೆಯೊಳೆಣ್ಬರ್ ಕಳ್ಳರಂ ಕಂಡವರೊಳಗೊರ್ವನಂ ಪಿಡಿದೞ್ತೆನ್ನ ಮಗಂ ನಿನ್ನನೆ ಪೋಲ್ಕುಂ
ಪನ್ನೆರಟ್ಬರಿಸಂ ಪೋದೊನೆತ್ತ ಪೋದನೆಂದಱಿಯೆನಾತನಂ ಕಾಣದಿರುಳುಂ ಪಗಲುಂ ನೆನೆದೞ್ತು
ಕಣ್ಗಳ್ ಬಾತಿರ್ಪುವಿಂದೆನಗೆ ಆತಂ ಬಂದಂತಿರೆ ನಿನ್ನಂ ಕಂಡು ಸಂತಸಮಾಯ್ತು ಮಗನೆ
ನೀಮೆಲ್ಲಂ ಬನ್ನಿಂ ಪೋಪಂ ಸಾರೆಯೂರಂ ಮಿಂದುಂಡುಟ್ಟು ವಿಶ್ರಮಿಸಿ ನಾಳೆ ಪೋಪಿರೆಂದೊಡ

ಆದರೆ ಆಕೆ ಒತ್ತಾಯದಿಂದ ಕಿರಿಚಾಡುತ್ತ ಮತ್ತೆಯೂ ಕೇಳಲು 'ಯಾರಿಗೂ ಹೇಳು
ವುದಿಲ್ಲವಾದರೆ ನಿನಗೆ ಹೇಳುವೆನು' ಎಂದು ಹೀಗೆಂದನು-"ಗಂಡುಸರಿಗೆ ಆಗದಿರುವಂಥದು
ನನಗೆ ಆಗಿದೆ" ಎಂದು ಹೇಳಲು ಅದನ್ನು ಆಕೆ ಕೇಳಿ ಸಹಿಸಲಾರದೆ ಪಟ್ಟಣದ ಜನರೆಲ್ಲರೂ
ತಿಳಿಯುವಹಾಗೆ ಹೇಳಿದಳು. ಈ ರೀತಿಯಾಗಿ ಎರಡನೆಯ ಕಥೆಯನ್ನು ಹೇಳಿ ಮೂರನೆಯ
'ಮುದುಕಿಯ ಕಥೆ'ಯನ್ನು ಈ ರೀತಿಯಾಗಿ ಹೇಳತೊಡಗಿದನು—ಹರಿಪುರಿಯೆಂಬ
ಪಟ್ಟಣದಲ್ಲಿ ಗಂಭೀರೆಯೆಂಬೊಬ್ಬಳು ಮುದುಕಿಯಿದ್ದಳು. ಅವಳಿಗೆ ಹರಿಣಿ ಎಂಬ
ಮಗಳಿದ್ದಳು. ಆಕೆಯನ್ನು ಜಯಂತ ಎಂಬ ಪಟ್ಟಣದಲ್ಲಿದ್ದ ವಸುದತ್ತನೆಂಬ ವ್ಯಾಪಾರಿಗೆ
ಕೊಟ್ಟಲ್ಲಿ ಆಕೆ ಗರ್ಭಿಣಿಯಾಗಿ ಅವಳಿಗೆ ಕಡುಬನ್ನು ತಿನ್ನಬೇಕೆಂಬ ಬಯಕೆಯುಂಟಾ
ಯಿತು. ತಾಯಿ ಹಲವು ವಿಧದ ಲಾಡುಗಳು ಕಡುಬುಗಳು ಮುಂತಾಗಿರುವ ಹಲವು
ತಿರದ ಭಕ್ಷ್ಯಗಳನ್ನು ಸಿದ್ಧಮಾಡಿಕೊಂಡು, ಆ ಮುದುಕಿ ಗಂಭೀರೆಯು ಹರಿಪುರದಿಂದ
ಹೊರಟು ತನ್ನ ಮಗಳಿದ್ದ ಊರಿಗೆ ಹೋಗುತ್ತಿದ್ದಳು. ಆಕೆ ಹೋಗುವ ದಾರಿಯಲ್ಲಿ
ಎಂಟು ಮಂದಿ ಕಳ್ಳರು ಎದುರಾದರು. ಅವರನ್ನು ಕಂಡು, ಅವರೊಳಗೆ ಒಬ್ಬನನ್ನು
ಹಿಡಿದು ಅತ್ತಳು. "ನನ್ನ ಮಗ ನಿನ್ನನ್ನೇ ಹೋಲುತ್ತಿದ್ದ. ಅವನು ನನ್ನನ್ನಗಲಿ ಹನ್ನೆರಡು
ವರ್ಷವಾಯಿತು. ಎಲ್ಲಿಗೆ ಹೋದನೆಂದು ತಿಳಿಯದಾಗಿರುವೆನು. ಅವನನ್ನು ಕಾಣದೆ
ರಾತ್ರಿಯೂ ಹಗಲೂ ನೆನೆಸಿ ಅತ್ತು ಕಣ್ಣುಗಳು ಊದಿಕೊಂಡಿವೆ. ಇಂದು ನನಗೆ ನಿನ್ನನ್ನು
ಕಂಡಾಗ ಆತನು ಬಂದ ಹಾಗೆಯೇ ಸಂತೋಷವಾಯಿತು. ಮಗನೇ, ನೀವೆಲ್ಲರೂ ಬನ್ನಿ
ಹೋಗೋಣ ಸಮೀಪದ ಊರಿಗೆ ಹೋಗಿ ಸ್ನಾನ ಮಾಡಿ ಊಟ ಮಾಡಿ ಬಟ್ಟೆಯುಟ್ಟು

ಗೊಂಡು ಪೋಗಿ ಮಗಳ ಮನೆಯನೆಯ್ದಿ ಅವರ್ಗೆಲ್ಲಂ ನೀರನಿಡಿಸಿ ತಲೆಯಂ ಪೂಸಿಸಿಯೊಲ್ಲಣಿಗೆ
ಯನುಡಿಸಿ ತಲೆಯೊಳ್ ಕೞಿಯಂ ಪೊಯ್ವಾಗಳ್ ಬಿದ್ದಿ ಮನೆಯ ಮೇಗೇಱಿ ಕಳ್ಳರೆಂದು
ಪುಯ್ಯಲಿಟ್ಟಾಗಳನಿಬರುಂ ತ್ರಸ್ತಾಭಿಭೂತರಾಗಿ ಪಟ್ಟನೆ ಪಾಱಿಯೋಡಿ ಕೆಟ್ಟೊಪ್ಪಳಿತ್ತೆಮ್ಮಂ
ಬಿದ್ದಿ ಛಿದ್ರಿಸಿದಳೆಂದು ಪಗೆ ಸಾರ್ದಿರ್ದರಿತ್ತ ಬಿದ್ದಿಯುಂ ನೆಟ್ಟನಿರುಳ್ ಕಳ್ಳರ್ ಬರ್ಪರೆಂದಱಿತು
ಕೂರಿತಪ್ಪ ಬಾಳಂ ಪಿಡಿದಿರ್ದಳನ್ನೆಗಮಿರುಳ್ ಕಳ್ಳರ್ ವಂದಾಕೆಯ ಲುಂದಿದ ಮನೆಯೊಳ್ ಕನ್ನ
ಮಿಕ್ಕಿದೊಡೆ ಕನ್ನದ ಬಾಗಿಲೊಳಾ ಬಾಳನಡ್ಡಮಿಟ್ಟು ಪಿಡಿದಿರ್ದು ಪುಗುವ ಕಳ್ಳನ ಮೂಗನರಿ
ದೊಡವಂ ಪೊಱಮಟ್ಟು ತನಗೆ ಪುಗಲ್ ಪಾಂಗಿಲ್ಲ ನೀಂ ಪುಗೆಂದು ಪೆಱನೊರ್ವನಂ ಪುಗಿಸಿ
ದೊಡಾತನ ಮೂಗಮಂ ಕೊಱೆದೊಡಾತನುಂ ಪೆಱನೊರ್ವನಂ ಪುಗಿಸೆ ಸೂೞುಸೂೞೊಳೆ
ಪೊಕ್ಕೊಡನಿಬರ ಮೂಗುಮಂ ಕೊಱೆದಿಕ್ಕಿದೊಡನಿಬರುಂ ಮೂಗರಿಯೆ ಪಟ್ಟು ಪೊಱಮಟ್ಟು
ಪೋಗಿಯೊರ್ವನಿಂದ್ರಜಾಲಿಗನ ಮನೆಯೊಳ್ ಕನ್ನಮಿಕ್ಕಿ ಪುಡುಕೆಯಂ ತೆಗೆದು ಪೊತ್ತು ಪೋಗಿ
ಪೊಱವೊೞಲೊಳ್ ಶ್ಮಶಾನದೊಳಿೞಿಪಿ ಕುೞಿಯಂ ಕಳ್ದುತಂದಱುವರ್ ಕಳ್ಳರುಂ ಮಱಲುಂದಿ
ದರೊರ್ವನಾ ಕುೞಿಯಂ ಕೊಂದು ಜಾವಮಿರ್ದು ಮಸಣದ ಕಿಚ್ಚಿನೊಳ್ ಪಿಶಿತಮಂ

ವಿಶ್ರಾಂತಿ ತೆಗೆದುಕೊಂಡು ನಾಳೆ ಹೋಗಬಹುದು” ಎಂದು ಅವರನ್ನು ಒಡಗೂಡಿಕೊಂಡು
ಹೋಗಿ ಮಗಳ ಮನೆಗೆ ಬಂದು ಅವರಿಗೆಲ್ಲ ಬಿಸಿನೀರು ಸಿದ್ಧಪಡಿಸಿ, ತಲೆಗೆ ಎಣ್ಣೆ ಹಚ್ಚಿಸಿ,
ಸ್ನಾನದ ಒಟ್ಟೆಯನ್ನುಡಿಸಿ, ತಲೆಯ ಮೇಲೆ ಅವರು ಕುದಿಗಂಜಿಯನ್ನು ಹಾಕುತ್ತಿರುವಾಗ
ಆ ಮುದುಕಿ ಮನೆಯ ಮೇಲ್ಗಡೆ ಹತ್ತಿ ‘ಕಳ್ಳರು, ಕಳ್ಳರು’ ಎಂದು ಗಟ್ಟಿಯಾಗಿ ಕೂಗಿ
ದಳು. ಆಗ ಅವರೆಲ್ಲರೂ ಭಯಪಟ್ಟು ತಟಕ್ಕನೆ ಹಾರಿ ದಿಕ್ಕುಗೆಟ್ಟು ಓಡಿದರು. ‘ನಮ್ಮನ್ನು
ಈ ಮುದುಕಿ ವಂಚಿಸಿದಳು’ ಎಂದು ಹಗೆತನವನ್ನು ಹಿಡಿದಿದ್ದರು. ಇತ್ತ ಮುದುಕಿ ನೆಟ್ಟಗೆ
ಇಂದಿನ ರಾತ್ರಿಯಲ್ಲಿ ಕಳ್ಳರು ಬರುವರೆಂದು ತಿಳಿದು ಹರಿತವಾದ ಕತ್ತಿಯನ್ನು ಹಿಡಿದಿದ್ದಳು.
ಹೀಗಿರಲು ರಾತ್ರಿಯಲ್ಲಿ ಕಳ್ಳರು ಬಂದು ಆಕೆ ನಿದ್ದೆಮಾಡುತ್ತಿದ್ದ ಮನೆಗೆ ಕನ್ನಹಾಕಿದರು.
ಆಗ ಆ ಕನ್ನದ ತೂತಿನ ಬಾಗಿಲಲ್ಲಿ ಅವಳು ಆ ಕತ್ತಿಯನ್ನು ಅಡ್ಡವಾಗಿ ಹಿಡಿದು ಇಟ್ಟು
ಕೊಂಡು ಒಳಗೆ ನುಗ್ಗುವ ಕಳ್ಳನ ಮೂಗನ್ನು ಕತ್ತರಿಸಿದಳು. ಅವನು ಹಿಂದೆರಳಿ ತನಗೆ
ಒಳನುಗ್ಗಲು ಅವಕಾಶವಿಲ್ಲ ನೀನು ನುಗ್ಗು ಎಂದು ಇನ್ನೊಬ್ಬನಿಗೆ ಹೇಳಿ ಅವನನ್ನು
ನುಗ್ಗಿಸಿದಾಗ ಅವನ ಮೂಗನ್ನೂ ಮುದುಕಿ ಕತ್ತರಿಸಿ ಬಿಟ್ಟಳು. ಆ ಕಳ್ಳನು ಬೇರೊಬ್ಬ
ನನ್ನು ನುಗ್ಗಿಸಿದನು. ಹೀಗೆ ಸರದಿಪ್ರಕಾರವಾಗಿ ಆ ಎಲ್ಲ ಕಳ್ಳರ ಮೂಗನ್ನೂ ಕತ್ತರಿಸಲು
ಅವರೆಲ್ಲರೂ ಮೂಗುಕತ್ತರಿಸಿಕೊಂಡವರಾಗಿ ಹೊರಟುಹೋದರು. ಅನಂತರ ಅವರು
ಒಬ್ಬ ಇಂದ್ರಜಾಲಿಗನ ಮನೆಗೆ ಕನ್ನವಿಕ್ಕಿ ಒಂದು ಪೆಟ್ಟಿಗೆಯನ್ನು ತೆಗೆದು ಹೊತ್ತು
ಕೊಂಡು ಹೋಗಿ ಪಟ್ಟಣದ ಹೊರಗಿನ ಶ್ಮಶಾನದಲ್ಲಿ ಇಳಿಸಿದರು. ಕುರಿಯನ್ನು
ಕದ್ದುತಂದ ಆರು ಮಂದಿ ಕಳ್ಳರೂ ನಿದ್ರಿಸಿದರು. ಒಬ್ಬನು ಕುರಿಯನು
ಕೊಂದು ಒಂದು ಜಾವದಷ್ಟು ಸಮಯ ಇದ್ದುಕೊಂಡು ಸುಡುಗಾಡಿನ ಬೆಂಕಿ

ಮಾಡುತಿರ್ದ್ದ ಪುಡುಕೆಯಂ ತೆಱೆದು ನೋೞ್ಪನ್ನೆಗಮದಱೊಳಗಿರ್ದ ಇಂದ್ರಜಾಲಿಗರ ಪಾವೆಗಳುಂ ಸೀರೆಗಳುಂ ಝುಣಂಬಮುಂ ಕೋಡೊಂದು ಪ್ರತಿಮುಖಮುಂ ಕೊಂಡು ತನ್ನ ಮುಖದೊಳಿಟ್ಟು ಪುಲಿಯ ಝುಣಂಬಮುಮಂ ತೊಟ್ಟು ಶ್ಮಶಾನದೊಳುರಿವ ಕಿಚ್ಚಿನ ಪಕ್ಕದೆ ನಿಂದಿರ್ದನನ್ನೆಗಮೆೞ್ಚತ್ತು ಕಂಡಱುವರುಂ ಕಳ್ಳರುಂ ಬೇತಾಳನೆಂದಂಜಿ ಪ್ರಾಣ ಭಯದಿಂದೋಡಿ ಕೆಟ್ಟರಾತನುಮವರೋಡುವುದಂ ಕಂಡು ಪಿಶಿತಮಂ ಕೊಂಡು ಬೞಿಯಂ ತಗುಳೆ ಎನಿತೆನಿತಾತನಂ ಕಾಣ್ಬರನಿತನಿತವೆ ಬೇತಾಳಂ ಬೞಿಯಂ ತಗುಳ್ದನೆಂದೋಡೆ ಪ್ರತಿಮುಖಮುಂ ಝುಣಂಬಮುಮಂ ಕಳೆದೀಡಾಡಿ ತನ್ನ ಪೆಸರಂ ಪೇೞ್ದವರಂ ಮಾಣಿಸಿ ಯೊಡಗೂಡಿ ತನ್ನ ಮಾಡಿದ ಪಿಶಿತಮನವರ್ಗ್ಗೆಲ್ಲಂ ಪಚ್ಚುಗೊಟ್ಟುಮನಿಬರುಮೊಂದಾಗಿ ಪೋಪನ್ನೆಗಂ ಇತ್ತ ಗಂಭೀರೆಯೆಂಬ ಬಿರ್ದ್ದಿ ಬೈಗಿರುಳಿನೊಂದು ಜಾವಮುಂಟೆನೆ ಎೞ್ದು ಪೊೞಲಿಂ ಪೊಱಮಟ್ಟು ತನ್ನೂರ್ಗೆವೋಪಳ್ ನೆರಂ ಬೆಱದಂಜಿ ವಂದಾಲದ ಮರನನೇರಿರ್ದಳನ್ನೆಗ ಮಾ ಕಳ್ಳರಾಕೆಯೇಱಿರ್ದ್ದ ಮರಕ್ಕೆವಂದವರೊಳೊರ್ವಂ ಬಟ್ಟೆಯೊಳ್ ಬರ್ಪ ಜನಮಂ ನೋಡಲ್ವೇಡಿ ಮರದ ತುತ್ತತುದಿಯನೇಱಿ ನೋೞ್ಪನ್ನೆಗಂ ಮರದ ಮೇಗಿರ್ದ ವೃದ್ಧಸ್ತ್ರೀಯಂ

ಯಲ್ಲಿ ಮಾಂಸದ ಅಡುಗೆಯನ್ನು ಮಾಡುತ್ತ ಇದ್ದವನಾಗಿ ಆ ಪೆಟ್ಟಿಗೆಯನ್ನು ತೆರೆದು ನೋಡಿದನು. ಆಗ ಅದರೊಳಗೆ ಇಂದ್ರಜಾಲಿಗರ ಗೊಂಬೆಗಳೂ ಬಟ್ಟೆಗಳೂ ಕಾಣಿಸಿದವು. ಅವನ್ನು ತೆಗೆದುಕೊಂಡು ಒಂದು ಮುಖವಾಡವನ್ನು ಮಾಡಿ ತನ್ನ ಮುಖಕ್ಕೆ ಇಟ್ಟುಕೊಂಡು ಹುಲಿದೊಗಲನ್ನು ಧರಿಸಿ ಶ್ಮಶಾನದಲ್ಲಿ ಉರಿಯುತ್ತಿರುವ ಬೆಂಕಿಯ ಸಮೀಪ ನಿಂತುಕೊಂಡನು. ಅಷ್ಟರಲ್ಲಿ ಆರುಮಂದಿ ಕಳ್ಳರೂ ಎಚ್ಚತ್ತು ಕಂಡು, ಈ ಮುಖವಾಡವಿಟ್ಟುಕೊಂಡವನನ್ನು ಬೇತಾಳನೆಂದು ಭಾವಿಸಿ ಹೆದರಿ ಪ್ರಾಣದ ಅಂಜಿಕೆಯಿಂದ ಓಡಿಹೋದರು. ಅವರು ಓಡುವುನ್ನು ಕಂಡು ಆತನು ಮಾಂಸವನ್ನು ಹಿಡಿದುಕೊಂಡು ಅವರನ್ನು ಅನುಸರಿಸಿ ಬಂದನು. ಅವನನ್ನು ಎಷ್ಟೆಷ್ಟು ಮಟ್ಟಿಗೆ ಕಂಡರೋ ಅಷ್ಟುಮಟ್ಟಿಗೆ ಬೇತಾಳನು ಬೆನ್ನಟ್ಟಿ ಬರುತ್ತಿದ್ದಾನೆಂದು ಭಾವಿಸಿ ಓಡಿದರು. ಆಗ ಅವನು ಮುಖವಾಡವನ್ನೂ ಹುಲಿದೊಗಲನ್ನೂ ತೆಗೆದು ಎಸೆದು, ತನ್ನ ಹೆಸರನ್ನು ಹೇಳಿ ಅವರ ಭಯವನ್ನು ಪರಿಹರಿಸಿ, ಜೊತೆ ಸೇರಿ ತಾನು ಮಾಡಿದ ಮಾಂಸದ ಅಡುಗೆ ಯನ್ನು ಅವರಿಗೆಲ್ಲ ಹಂಚಿಕೊಟ್ಟು ಅನಂತರ ಅವರೆಲ್ಲ ಒಂದಾಗಿ ಮುಂದೆ ಹೋಗುತ್ತಿದ್ದರು. ಇತ್ತ ಗಂಭೀರೆಯೆಂಬ ಮುದುಕಿ ಬೆಳಗಾಗಲು ಮೂರುಗಂಟೆಗಳಿವೆಯೆಂಬ ಹೊತ್ತಿಗೆ ಎದ್ದು ಪಟ್ಟಣದಿಂದ ತನ್ನ ಊರ ಕಡೆಗೆ ಹೋಗುತ್ತಿದ್ದಳು. ಆಕೆಗೆ ಸಹಾಯಕರು ಯಾರೂ ಇಲ್ಲದುದರಿಂದ ಹೆದರಿ ಒಂದು ಆಲದ ಮರವನ್ನೇರಿಕೊಂಡಳು. ಆ ವೇಳೆಗೆ ಆ ಕಳ್ಳರು ಆಕೆ ಹತ್ತಿದ ಮರದ ಬುಡಕ್ಕೆ ಬಂದರು. ಅವರಲ್ಲೊಬ್ಬನು ದಾರಿಯಲ್ಲಿ ಬರುವ ಜನರನ್ನು ನೋಡುವುದಕ್ಕಾಗಿ ಮರದ ತುತ್ತತುದಿಗೇರಿ ನೋಡುತ್ತಿದ್ದನು.

ಕಂಡು ನೀನಾರ್ಗೆಂದಾತಂ ಬೆಸಗೊಂಡೊಡಾಕೆಯಾನೀ ಮರದೊಳಿರ್ಪ್ಪ ಯಕ್ಷದೇವತೆಯೆನೆಂದೊ
ಡಾತನೆನಗೆ ಪೆಂಡತಿಯಪ್ಪಾ ಎಂದು ಬೆಸಗೊಂಡೊಡೊಂದು ಪಾಂಗಿನೊಳಪ್ಪೆನೀ ಪಿಶಿತದ
ಖಂಡಮುಂ ನಾಲಿಗೆಯುಂ ಪಿಡಿದೆನ್ನ ಬಾಯೊಳಿಡುವೊಡೆ ನಿನಗಾಂ ಪೆಂಡತಿಯಪ್ಪೆನೆಂದು ನುಡಿ
ದೊಡಾತನುಂ ನಾಲಿಗೆಯುಂದಂ ಪಿಶಿತದ ಖಂಡಮುಂ ಬಾಯೊಳಿಡೆ ನಾಲಗೆಯುಂ ಪಱಿಯೆ ಕಚ್ಚಿ
ದೊಡವಂ ಪುಯ್ಯಲಿಟ್ಟುಂಜಿ ಬೀೞ[3] ಅನಿಬರುಂ ಭಯದಿಂದೋಡೆ ವೃದ್ಧಸ್ತ್ರೀಯೊಂದಳ್ ಎನಗೆ
ನಿಮ್ಮ ಕಳ್ದಲ್ಲಿಯೆಲ್ಲಮೆಂಟನೆಯ ಭಾಗಮುಂ ತಂದೀ ಪೊಟಲೊಳಿಟ್ಟು ಪೋಪೊಡೆ ಬಾೞ್ವಿರಲ್ಲದಾ
ಗಳ್ ಸತ್ತಿರ್ ನಿಮ್ಮೆಲ್ಲರುಮಂ ತಿಂದಪ್ಪೆನೆಂದೊಡಂಜಿ ಕಳ್ಳರಂತೆಗೆಯ್ವೆಮೆಂದೊಡಂಬಟ್ಟು
ಕಳ್ದಲ್ಲಿಯೆಲ್ಲಮೆಂಟನೆಯ ಭಾಗಮುಂ ಮರದ ಪೊಟಲೊಳಿಟ್ಟು ದಿವಸಕ್ಕಂ ಪೋಪರಾ ವೃದ್ಧ
ಸ್ತ್ರೀಯುಂ ತನ್ನೂರಿಂದಂ ಬಂದು ಕಸವರಮುಂ ಕೊಂಡು ಪೋಕುಮಿಂತಾ ಎಣ್ಬರ್ ಕಳ್ಳರನಾ
ವೃದ್ಧಸ್ತ್ರೀ ಪಿಡಿದಾಳ್ದಳೆಂಬ ಕಥೆಗಳುಮಂ ಇಂತಿವು ಮೊದಲಾಗೊಡೆಯ ಚಿತ್ರಕಥೆಗಳಂ ಪಟ
ದೊಳ್ ಬರೆದು ಜನಂಗಳ್ಗೆ ತೋಱಿ ಪೇೞ್ದು ಬತ್ತಮಂ ಕಳೆವನೀತಂ ವೈನಯಿಕನೆಂಬೊಂ
ಕಳ್ಳಂ ಮತ್ತೊರ್ವಂ ವೈನಯಿಕನೆಂಬೊಂಗಾಸಕ್ತರಾಗಿ ಕೇಳ್ವ ಜನಂಗಳ ಧಾನ್ಯಮನಱುವತ್ತು

ಅಷ್ಟರಲ್ಲಿ ಆತನು ಮರದ ಮೇಲೆ ಇದ್ದ ಮುದುಕಿಯನ್ನು ಕಂಡು 'ನೀನು ಯಾರು' ಎಂದು ಕೇಳಿದನು. ಅದಕ್ಕೆ ಆಕೆ "ನಾನು ಈ ಮರದಲ್ಲಿರುವ ಯಕ್ಷಿಣಿ" ಎಂದಳು. "ನನಗೆ ನೀನು ಹೆಂಡತಿಯಾಗುವಿಯಾ ?" ಎಂದು ಆತನು ಕೇಳಿದಾಗ, ಅವಳು "ಒಂದು ರೀತಿಯಲ್ಲಿ ಆಗುವೆನು. ಈ ಮಾಂಸದ ತುಂಡನ್ನು ನೀನು ನಾಲಗೆಯಿಂದ ಹಿಡಿದು ನನ್ನ ಬಾಯಿಯಲ್ಲಿ ಇಡುವೆಯಾದರೆ ನಾನು ನಿನಗೆ ಹೆಂಡತಿಯಾಗುವೆನು" ಎಂದಳು. ಆತನು ನಾಲಗೆಯಿಂದ ಮಾಂಸದ ತುಂಡನ್ನು ಅವಳ ಬಾಯಲ್ಲಿಡುವಾಗ ಅವನ ನಾಲಗೆ ಹರಿದುಹೋಗುವಂತೆ ಕಚ್ಚಿಬಿಟ್ಟಳು. ಅವನು ಕೂಗಾಡಿಕೊಂಡು ಬಿದ್ದುಬಿಟ್ಟನು. ಕಳ್ಳರೆಲ್ಲರೂ ಹೆದರಿ ಓಡತೊಡಗಿದರು. ಆಗ ಮುದುಕಿ ಹೇಳಿದಳು–"ನೀವು ಕದ್ದುದರಲ್ಲೆಲ್ಲ ಎಂಟನೆಯ ಒಂದು ಅಂಶವನ್ನು ನನಗೆ ತಂದು ಈ ಮರದ ಪೊಟರೆಯಲ್ಲಿಟ್ಟು ಹೋಗುವಿರಾದರೆ ಬದುಕುವಿರಿ. ಅದಲ್ಲವಾದರೆ ಸಾಯುವಿರಿ, ನಾನು ನಿಮ್ಮೆಲ್ಲರನ್ನೂ ತಿಂದುಬಿಡುವೆನು" ಹೀಗೆ ಹೇಳಿದಾಗ ಕಳ್ಳರು ಹೆದರಿ "ಹಾಗೆಯೇ ಮಾಡುವೆವು" ಎಂದು ಒಪ್ಪಿಕೊಂಡರು. ಅವರು ಕಳ್ಳತನ ಮಾಡಿದಾಗಲೆಲ್ಲ ಎಂಟನೆಯ ಅಂಶವನ್ನು ಮರದ ಪೊಟರೆಯಲ್ಲಿಟ್ಟು ಪ್ರತಿದಿನವೂ ಹೋಗುತ್ತಿದ್ದರು. ಆ ಮುದುಕಿ ತನ್ನ ಊರಿನಿಂದ ಬಂದು ಪೊಟರೆಯಲ್ಲಿದ್ದ ದ್ರವ್ಯವನ್ನು ಕೊಂಡು ಹೋಗುತ್ತಿದ್ದಳು. ಹೀಗೆ ಆ ಎಂಟು ಮಂದಿ ಕಳ್ಳರನ್ನು ಆ ಮುದುಕಿ ಹಿಡಿದು ಆಳಿದಳು ಎಂಬ ಕಥೆಗಳನ್ನೂ ಇಂತು ಇವೇ ಮೊದಲಾದ ಚಿತ್ರಕಥೆಗಳನ್ನೂ ವಸ್ತ್ರದಲ್ಲಿ ಬರೆದು ಜನರಿಗೆ ತೋರಿಸಿ ಹೇಳುತ್ತ ಬತ್ತವನ್ನು ಕಬಳಿಸುತ್ತಿರುವ ಈತನು ವೈನಯಿಕನೆಂಬ ಕಳ್ಳನು. ಇನ್ನೊಬ್ಬನು ವೈಕನೆಂಬ ಕಳ್ಳನು. ಇವನು ವೈನಯಿಕನೆಂಬವನಲ್ಲಿ ಆಸಕ್ತರಾಗಿ ಕೇಳುತ್ತಿರುವ ಜನರ ಯೋಚನೆ ಬೇರೆ ಕಡೆ

ಬಳ್ಳಮನಿರ್ಪತ್ತು ಬಳ್ಳಮೆಂದಳೆಗುಮೀತನೊರ್ವಂ ವೈಕಸೆಂಬೊಂ ಕಳ್ಳಂ ಮತ್ತೊರ್ವಂ ವ್ಯೋಮಕನೆಂಬೊಂ ವೈನಯ್ಯಿಕನ ಕಳ್ದ ಧಾನ್ಯಮನೆಲ್ಲಮನಲ್ಲಿಯೆ ನೆಲಮನೆಯೊಳಗಿರ್ದು ಕಿಱಿದಾನುಮೊಂದು ಛಿದ್ರದ್ವಾರದೊಳಗಣ್ಗೆ ಬತ್ತಮುಂ ಬರೆಕೊಳ್ವಂ ಪೊಱಗಣಳೆದ ಬತ್ತಮುಂ ನೋಟಕ್ಕೆ ಕಿಱಿದಪ್ಪಂತಿರೆ ಇಂತು ಮೂವರುಮೊಂದಾಗಿ ಬತ್ತಮಂ ಮಾಱುವರಾ ಬತ್ತಂಗಳಂ ಕಳ್ವುಕೊಳ್ವರೀ ಪ್ರಕಾರದಿಂ ಮೂವರ್ಗಂ ಕಾಲಂ ಸಲೆ ಮತ್ತೊಂದು ದಿವಸಂ ಕೌಶಳಮೆಂಬೂರ ಗಾಮುಂಡಂ ಜಗದ್ಗ್ರುಹನೆಂಬೊಂ ತನ್ನ ಬತ್ತಮಂ ಚಂಪಾನಗರಕ್ಕೆ ಮಾಱಲೆಂದು ಕೊಂಡು ಪೋಗಿ ಬತ್ತಮನಳೆವಲ್ಲಿಯಾ ಮೂವರ ದೋಷಂಗಳುಂ ಪ್ರಕಟಮಾಗರಸುವರೆಗಮಾದೊಡೆ ಅರಸನಿವರ ಕಳವಿನ ಪುಸಿಯ ದೋಷಂ ಕಾರಣಮಾಗಿ ಮೂವರುಮಂ ಕೊಲಲ್ ಪೇೞ್ದೊಡೆ ಕೊಲಲುಯ್ದಪ್ಪರ್ ಮಗಳೆ ಎಂದು ಪೇೞ್ದೊಡೆ ನಾಗಶ್ರೀಯುಮೀ ತೆಱದಪ್ಪ ದುಃಖಕ್ಕಂಜಿ ಪುಸಿಯುಂ ಕಳವುಮಂ ನಿವೃತ್ತಿಗೆಯ್ವೆನಮ್ಮಾ ಎಂದೊಡಂತಪ್ಪೊಡಾ ಎರಡುಂ ಬ್ರತಂಗಳ್ ನಿನಗಿರ್ಕೆ ಮಗಳೆ ಎಂದೊಡಂತೆಗೆಯ್ವೆನೆನೆ ಮತ್ತಂ ಕಿಱಿದಂತರಮಂ ಪೋಪನ್ನೆಗಂ ಗಂಡನುಮಂ ಪೆಂಡತಿಯುನೊಡಗೂಡಿ ಇರ್ವರುಮಂ ಪೆಡಂಗಯ್ಯುಮ್ಮಡಿಯೆ ಕಟ್ಟಿಕೊಂಡು ಪೋಪರಂ ಕಂಡೇಂ ದೋಷಂ ಗೆಯ್ದರವರಂ ಬೆಸಗೊಳ್ಳೆ

ಇರುವ ವೇಳೆಗೆ ಅರುವತ್ತು ಬಳ್ಳವನ್ನು ಇಪ್ಪತ್ತು ಬಳ್ಳ ಎನ್ನುತ್ತ ಅಳೆಯುವನು. ಮತ್ತೊಬ್ಬನು ವ್ಯೋಮಕನೆಂಬ ಕಳ್ಳನು. ಅವನು ವೈನಯಿಕನು ಕದ್ದ ಧಾನ್ಯವನ್ನೆಲ್ಲ ಅಲ್ಲೇ ನೆಲಮನೆಯ ಒಳಗಿದ್ದುಕೊಂಡು ಸ್ವಲ್ಪ ಚಿಕ್ಕದಾಗಿರುವ ತೂತಿನ ಬಾಯಿಯೊಳಗೆ ಬತ್ತವನ್ನು ಬರುವಂತೆ ಮಾಡಿ ಅಪಹರಿಸುವನು. ಹೊರಗೆ ಅಳತೆಮಾಡಿದ ಬತ್ತವನ್ನು ನೋಡುವಾಗ ಕಡಮೆಯಾಗುವಂತೆ ಮಾಡಿ ಈ ಮೂವರು ಕಳ್ಳರೂ ಒಂದಾಗಿ ಬತ್ತವನ್ನು ಕದ್ದುಕೊಂಡು ಮಾರುತ್ತಿದ್ದರು. ಈ ರೀತಿಯಾಗಿ ಆ ಮೂವರಿಗೂ ಸ್ವಲ್ಪ ಕಾಲ ಕಳೆಯಲು, ಮತ್ತೊಂದು ದಿನ ಕೌಶಳವೆಂಬ ಊರಿನ ಗೌಡನಾದ ಜಗದ್ಗ್ರುಹನೆಂಬುವನು ತನ್ನ ಬತ್ತವನ್ನು ಮಾರುವುದಕ್ಕಾಗಿ ಚಂಪಾನಗರಕ್ಕೆ ಕೊಂಡು ಹೋದನು. ಬತ್ತವನ್ನು ಅಳೆಯುವ ವೇಳೆಗೆ ಆ ಮೂವರ ಕಳ್ಳತನವೂ ಪ್ರಕಟವಾಗಲು ರಾಜನ ತನಕವೂ ಈ ಸಂಗತಿ ತಿಳಿಯಿತು. ರಾಜನು ಇವರ ಕಳ್ಳತನದ ಮತ್ತು ಸುಳ್ಳಿನ ತಪ್ಪಿಗಾಗಿ ಮೂವರನ್ನೂ ಕೊಲ್ಲಲು ಆಜ್ಞೆಮಾಡಿದನು. ಆದುದರಿಂದ ಇವರನ್ನು ಕೊಲ್ಲಲು ಒಯ್ಯುತ್ತಿದ್ದಾರೆ, ಮಗಳೇ—ಎಂದು ಸೋಮಶರ್ಮನು ಮಗಳಾದ ನಾಗಶ್ರೀಗೆ ಹೇಳಿದನು. ಆಗ ಅವಳು—'ಈ ರೀತಿಯಾದ ದುಃಖಕ್ಕೆ ಹೆದರಿ ಸುಳ್ಳನ್ನೂ ಕಳ್ಳತನವನ್ನೂ ಬಿಟ್ಟುಬಿಡುವೆನಪ್ಪಾ' ಎಂದು ಹೇಳಿದಳು. "ಹಾಗಾದರೆ ಆ ಎರಡೂ ವ್ರತಗಳು ನಿನಗಿರಲಿ ಮಗಳೇ," ಎಂದು ಸೋಮಶರ್ಮನು ಹೇಳಲು ಆಕೆ "ಹಾಗೆಯೇ ಮಾಡುವೆನು" ಎಂದಳು. ಆ ಮೇಲೆ ಸ್ವಲ್ಪ ದೂರ ಹೋಗುವಷ್ಟರಲ್ಲಿ ಗಂಡ ಹೆಂಡತಿ ಇಬ್ಬರನ್ನೂ ಒಟ್ಟಿಗೆ ಹಿಂದುಮುಂದಾಗುವಂತೆ ಹಿಂದಕ್ಕೆ ಕಟ್ಟಿಕೊಂಡು ಹೋಗುವುದನ್ನು ನಾಗಶ್ರೀ ಕಂಡಳು. "ಇವರು ಏನು ತಪ್ಪು

ವೆಂದು ತಂದೆಗೆ ಪೇೞ್ದೊಡಾತನುಮದೆಲ್ಲಮಂ ಬೆಸಗೊಂಡು ಮಗಳ್ಗಿಂತೆಂದು ಪೇೞ್ಗುಂ ಚಂಪಾನಗರದ ಸಾರೆ ಶ್ವೇತಪುರಮೆಂಬ ಪೊೞಲಲ್ಲಿ ಮತ್ಸ್ಯನೆಂಬ ಪರದನಾತನ ಪೆಂಡತಿ ಜೈಸೆ ಯೆಂಬೊಳ್ ಇರ್ವರ್ಗ್ಗಂ ಮಕ್ಕಳ್ ನೆಂದನುಂ ಬೋದನೆಂಬವರ್ಗಳ್ ಮತ್ತಮಾ ಪೊೞಲೊಳ್ ಸೂರದತ್ತನೆಂಬ ಪರದಂಗಂ ವಸುದತ್ತೆಯೆಂಬ ಪರದಿಗಂ ಮಗಳ್ ಮೋದಾಳಿಯೆಂಬೊಳಾಕೆಯುಂ ಬಸಿಱೊಳಿರ್ದಂತೆ ಸೋದರಮಾವನ ಮಗಂ ನಂದನೆಂಬೊಂಗೆ ಕುಡುವಮೆಂದು ನುಡಿದರಿಂತು ಕಾಲಂ ಸಲೆ ನಂದನೊಂದು ದಿವಸಂ ದ್ರವ್ಯಂ ಬಡೆವುದು ಕಾರಣಮಾಗಿ ಸುವರ್ಣದ್ವೀಪಕ್ಕೆ ಪೋಗುತ್ತಂ ಮಾಮಂಗೆಂದಂ ಪನ್ನೆರಡು ವರುಷಕ್ಕಂ ಬಾರದಾಗಳ್ ಎಮ್ಮ ಕಿಱಿಯ ತಮ್ಮ ಬೋದಂಗೆ ಕೂಸಂ ಕುಡಿಮೆಂದು ಪೇೞ್ದು ಪೋದಂ ಇಂತು ಕಾಲಂ ಸಲೆ ಪನ್ನೆರಡು ವರುಷಂ ನೆಱೆದಂದು ನಂದಂ ಬಂದನಿಲ್ಲೆಂದು ಕೂಸಂ ಬೋದಂಗೆ ಕೈನೀರೆಱೆದು ಕುಡುವ ಪ್ರಸ್ತಾವಕ್ಕಾಗಳ್ ನಂದಂ ಬಂದೊಡಾತಂಗೆ ಕುಡಲ್ ತಗುಳ್ದೊಡೆ ತಮ್ಮನ ಪೆಂಡತಿಯನೆಮಗೆ ಕೊಳಲಕ್ಕುಮೆ ಎಂದು ಕೊಂಡನಿಲ್ಲ ಬೋದನುಮಣ್ಣನ ಪೆಂಡತಿಯನೆಂತು ಕೊಳ್ವೆನೆಂದಾತನುಂ ಕೊಂಡನಿಲ್ಲಿಂತಿರ್ವರುಂ ಬಿಸುಟ್ಟೊಡೆ ಮೋದಾಳಿ ತನ್ನ ತವರ್ಮನೆಯೊಳಿರ್ದಳ್ ಮತ್ತಮಾ ಪೊೞಲೊಳ್

ಮಾಡಿದ್ದಾರೆ ಕೇಳಿ" ಎಂದು ತಂದೆಗೆ ತಿಳಿಸಲು ಆತನು ಅದೆಲ್ಲವನ್ನೂ ಕೇಳಿ ತಿಳಿದುಕೊಂಡು ಮಗಳಿಗೆ ಹೀಗೆ ಹೇಳಿದನು. ಚಂಪಾನಗರದ ಹತ್ತಿರ ಶ್ವೇತಪುರವೆಂಬ ಪಟ್ಟಣವಿದೆ. ಅಲ್ಲಿ ಮತ್ಸ್ಯನೆಂಬ ವರ್ತಕನಿದ್ದನು. ಅವನಿಗೆ ಜೈಸೆ ಎಂಬುವಳು ಹೆಂಡತಿ. ಇವರಿಗೆ ನಂದ ಮತ್ತು ಬೋದ ಎಂಬಿಬ್ಬರು ಮಕ್ಕಳಿದ್ದರು. ಅದಲ್ಲದೆ ಆ ಪಟ್ಟಣದಲ್ಲಿ ಸೂರದತ್ತನೆಂಬ ವರ್ತಕನಿಗೂ ಅವನ ಪತ್ನಿಯಾದ ವಸುದತ್ತೆಗೂ ಮೋದಾಳಿ ಎಂಬ ಮಗಳಿದ್ದಳು. ಆಕೆ ತಾಯಿಯ ಗರ್ಭದಲ್ಲಿರುವಾಗಲೇ ಸೋದರಮಾವನ ಮಗನಾದ ನಂದನೆಂಬವನಿಗೆ ಕೊಡೋಣ-ಎಂದು ಆ ದಂಪತಿಗಳು ಆಡಿಕೊಂಡರು. ಹೀಗೆಯೇ ಕಾಲ ಕಳೆಯಲು ನಂದನು ಒಂದು ದಿನಸ ಹಣವನ್ನು ಸಂಪಾದಿಸುವ ಕಾರಣಕ್ಕಾಗಿ ಸುವರ್ಣದ್ವೀಪಕ್ಕೆ ಹೋಗಲು ಸಿದ್ಧನಾಗಿ ತನ್ನ ಮಾವನಿಗೆ ಹೀಗೆಂದನು-"ನಾನು ಹನ್ನೆರಡು ವರ್ಷಗಳವರೆಗೂ ಬಾರದಿದ್ದರೆ ನಿಮ್ಮ ಮಗಳನ್ನು ನನ್ನ ಚಿಕ್ಕ ತಮ್ಮನಾದ ಬೋದನಿಗೆ ಕೊಡಿ"-ಹೀಗೆ ಹೇಳಿ ತೆರಳಿದನು. ಈ ರೀತಿಯಾಗಿ ಹಲವು ಕಾಲ ಕಳೆಯಿತು. ಹನ್ನೆರಡು ವರ್ಷಗಳು ಪೂರ್ಣವಾದಾಗ ನಂದನು ಬಂದಿಲ್ಲವೆಂದು ಮಗಳನ್ನು ಬೋದನಿಗೆ ಧಾರೆಯೆರೆದುಕೊಡುವ ಸಂದರ್ಭದಲ್ಲಿ ನಂದನು ಬಂದುಬಿಟ್ಟನು. ಆಗ ಆತನಿಗೆ ಕೊಡಲು ಉದ್ಯುಕ್ತರಾಗಲು ನಂದನು "ತಮ್ಮನ ಹೆಂಡತಿಯನ್ನು ನನಗೆ ಸ್ವೀಕರಿಸಲು ಬರುವುದೆ ?" ಎಂದು ಹೇಳಿದನು. ಆಕೆಯನ್ನು ಸ್ವೀಕರಿಸದಾದನು. ಬೋದನು "ನಾನು ಅಣ್ಣನ ಹೆಂಡತಿಯನ್ನು ಹೇಗೆ ಸ್ವೀಕರಿಸುವೆನು ?" ಎಂದು ಆತನೂ ಸ್ವೀಕರಿಸಲಿಲ್ಲ. ಹೀಗೆ ಇಬ್ಬರೂ ಬಿಟ್ಟ ಕಾರಣ ಮೋದಾಳಿ ತನ್ನ ತಾಯಿಯ ಮನೆಯಲ್ಲಿಯೇ

**ನಾಗದತ್ತನೆಂಬೊಂ ಪರದನಾತನ ಭಾರ್ಯೆ ಗಂಗೆಯೆಂಬೊಳಾ ಇರ್ವರ್ಗಂ ಮಗಂ ನಾಗಸೂರ ನೆಂಬೊನಾತಂಗೆಣ್ಬರ್ ಪೆಂಡಿರ್ ತನ್ನ ಪೆಂಡಿರೊಳ್ ಸಂತೋಸಂಬಡೆಯದೆ ಮೋದಾಳಿಯೊಳ್ ಮಱವಾೞುತ್ತಿರ್ಕುಂ ಇಂತು ಕಾಲಂ ಸಲೆ ಮತ್ತೊಂದು ದಿವಸಂ ನಾಗಸೂರಂ ಮೋದಾಳಿಯು ನೊಡಗೊಂಡು ಚಂಪಾನಗರಕ್ಕೆ ವಂದೊಡೆ ತಳಾಱಿಂ ಕಂಡಾಯಿರ್ವರುಮಂ ಪಿಡಿದು ಕೊಂಡು ಪೋಗಿ ಅರಸಂಗೆ ತೋಱಿದೊಡರಸನುಮಿರ್ವರುಮನೆರಡು ಕಾಯ್ದ ಕರ್ಬೊನ್ನ ಪ್ರತಿಮಗಳ ನಪ್ಪವೇೞೆಂದು ತಳಾಱಂಗೆ ಬೆಸವೇೞ್ದೊಡವರಿರ್ವರುಮಂ ಕೊಲಲ್ ಕೊಂಡುಪೋಪರ್ ಮಗಳೆ ಎಂದು ಪೇೞ್ದೊಡಾನುಮಿಂತಪ್ಪ ಭಯಕ್ಕಂಜಿ ಪರಪುರುಷ ಪ್ರಸಂಗಮಂ ತೊಱೆದೆ ನೆಂದೊಡಂತಪ್ಪೊಡಾ ಬ್ರತಮುಂ ನಿನಗಿರ್ಕೆ ಮಗಳೆ ಎಂದೊಡುೞಿದ ಬ್ರತಂಗಳಂ ಬಿಸುಟ್ಟು ದೆಂದು ಪೇೞ್ದು ಕಿಱಿದಂತರಮಿರ್ವರ್ ಪೋಪರನ್ನೆಗಂ ಮತ್ತೊರ್ವನಂ ಕೊಲಲ್ ಕೊಂಡು ಪೋಪ ಪುರುಷನಂ ಕಂಡೀತನೇದೋಷಂಗೆಯ್ದನಾಗಿ ಕೊಲಲ್ ಕೊಂಡು ಪೋದಪ್ಪರೆಂದು ಬೆಸಗೊಳ್ಳಿಯುಮಪ್ಪಾ ಎಂದು ತಂದೆಗೆ ಪೇೞ್ದೊಡಾತನುಮದೆಲ್ಲಮಂ ಬೆಸಗೊಂಡು ಮಗಳ್ಗಿಂ ತೆಂದು ಪೇೞ್ಗುಂ ಈ ಕೊಲೆಪಡುವಾತನರಸರ ಗೋಮಂಡಳಮಂ ಕಾವೊಂ ವೀರಪೂರ್ಣನೆಂಬೊ**

ಇದ್ದಳು. ಆ ಪಟ್ಟಣದಲ್ಲಿ ನಾಗದತ್ತನೆಂಬ ವರ್ತಕನಿದ್ದನು. ಅವನ ಪತ್ನಿ ಗಂಗೆ ಯೆಂಬವಳು. ಆ ಇಬ್ಬರಿಗೆ ಮಗನು ನಾಗಸೂರನೆಂಬವನು. ಆತನಿಗೆ ಎಂಟುಮಂದಿ ಹೆಂಡಿರಿದ್ದರು. ತನ್ನ ಹೆಂಡಿರಲ್ಲಿ ನಾಗಸೂರನು ತೃಪ್ತನಾಗದೆ ಮೋದಾಳಿಯೊಂದಿಗೆ ಗುಟ್ಟಾಗಿ ಸೇರಿ ಬಾಳುತ್ತಿದ್ದನು. ಹೀಗೆಯೇ ಹಲವು ಕಾಲ ಕಳೆಯಿತು. ಒಂದು ದಿವಸ ನಾಗಸೂರನು ಮೋದಾಳಿಯನ್ನು ಕೂಡಿಕೊಂಡು ಚಂಪಾನಗರಕ್ಕೆ ಬಂದನು. ಆಗ ಪಟ್ಟಣದ ಕಾವಲುಗಾರನು ಕಂಡು ಆ ಇಬ್ಬರನ್ನೂ ಹಿಡಿದು ಕೊಂಡೊಯ್ದು ಅರಸನಿಗೆ ತೋರಿಸಿದನು. ಅರಸನು ಆ ಇಬ್ಬರನ್ನೂ ಎರಡು ಕಾದ ಕಬ್ಬಿಣದ ಪ್ರತಿಮೆಗಳನ್ನು ಅಪ್ಪುವಂತೆ ಹೇಳೆಂದು ತಳಾರನಿಗೆ ಆಜ್ಞೆ ಮಾಡಿದನು. ಅದರಂತೆ ಅವರಿಬ್ಬರನ್ನೂ ಕೊಲ್ಲಲು ಕೊಂಡೊಯ್ಯುತ್ತಿದ್ದಾರೆ ಮಗಳೇ–ಎಂದು ಸೋಮಶರ್ಮನು ಹೇಳಿದನು. ಆಗ ನಾಗಶ್ರೀ "ನಾನೂ ಇಂತಹ ಭಯಂಕರ ಸಂಗತಿಗೆ ಹೆದರಿ ಬೇರೆ ಗಂಡಸರ ಸಂಸರ್ಗವನ್ನು ಬಿಟ್ಟಿದ್ದೇನೆ" ಎಂದಳು. "ಹಾಗಾದರೆ ಆ ವ್ರತವೂ ನಿನಗಿರಲಿ ಮಗಳೇ" ಎಂದು ಸೋಮಶರ್ಮನು ಹೇಳುತ್ತ ಇನ್ನುಳಿದ ವ್ರತಗಳನ್ನು ಬಿಸಾಡು ಎಂದು ಹೇಳಿ ಇಬ್ಬರೂ ಸ್ವಲ್ಪ ದೂರ ಹೋದರು. ಅಷ್ಟರಲ್ಲಿ ಮತ್ತೊಬ್ಬ ಗಂಡಸನ್ನು ಕೊಲ್ಲಲು ಒಯ್ಯುತ್ತಿರುವುದನ್ನು ನಾಗಶ್ರೀ ಕಂಡಳು. "ಅಪ್ಪಾ ಈತನು ಏನು ತಪ್ಪು ಮಾಡಿರುವುದರಿಂದ ಕೊಲ್ಲಲು ಕೊಂಡೊಯ್ಯುತ್ತಿದ್ದಾರೆ?–ಎಂದು ಕೇಳಿರಿ" ಎಂದು ತಂದೆಗೆ ಹೇಳಿದಳು. ಆತನು ಅದೆಲ್ಲವನ್ನೂ ವಿಚಾರಿಸಿ ತಿಳಿದು ಮಗಳಿಗೆ ಹೀಗೆಂದನು. –ಈ ಕೊಲ್ಲಲ್ಪಡುವ ಮನುಷ್ಯನು ರಾಜರ ಹಸುಗಳ ಮಂದೆಯನ್ನು ಕಾಯತಕ್ಕವನು. ವೀರಪೂರ್ಣ ನೆಂದು ಹೆಸರು. ರಾಜನು ಒಮ್ಮೆ ಅವನ ಮೇಲೆ ಪ್ರೀತಿಪಟ್ಟು ತನ್ನ ಆಕಳಮಂದೆ

ನರಸನೊಂದು ದಿವಸಮಾತಂಗೊಸೆದು ತನ್ನ ಗೋಮಂಡಳದೊಳಗೊಳ್ಳಿದುವಪ್ಪ ಪತ್ತು ಪಯಸುಮಂ ಮೂಸಾಸಿರಗಂಡುಗ ಬತ್ತಮುಮಂ ಪ್ರಮಾಣಂ ಮಾಡಿ ಕೊಟ್ಟೊಡಾ ಪಸರದೊಳರಸಂ ದಾಯಂಗೊಟ್ಟನೆಂದು ಸಾಮಂತರ ನಿಯೋಗಿಗಳ ಅರಸಿಯರ ಗೋವುಗಳೊಳೊಳ್ಳಿದುವಪ್ಪ ಎಮ್ಮೆಯುಮಂ ಪಸುಗಳುಮನಾಯ್ದು ಕೊಂಡರಸರ ಮಂಡಲದೊಳಗೆ ಪುಗಿಸಿಯುಣುತ್ತಮಿರ್ದಂ ಮತ್ತಂ ಲೋಭಾಭಿಭೂತಂ ಪೊಱಲ ಪಸುಗಳನರಸರ ಗೋಮಂಡಳಮಂ ಪೊಕ್ಕವೆಲ್ಲಮಂ ಬಂಡಾರಂಪೊಕ್ಕವೆಂದುಂ ಪೋಜಿಮದೆಂದುಂ ಜಡಿದು ಬಗ್ಗಿಸಿಕೊಂಡುಣೆ ಮತ್ತೊಂದು ದಿವಸಂ ಮಹಾದೇವಿಯ ಗೋಮಂಡಳದೊಳಗಗ್ಗಳಮಪ್ಪ ಕಾಮಧೇನುವನಾಯ್ದೊಂದು ದಿವಸಂ ವೀರಪೂರ್ಣಂ ಮೂದಲಿಸೆ ಮಹಾದೇವಿಯರಸಂಗೆನ್ನ ಕಾಮಧೇನುವಂ ವೀರಪೂರ್ಣಂ ಕೊಂಡೊಯ್ದನೆಂದೊಡರಸಂ ಸಾಮಂತರುಮರಸಿಯರುಂ ನಿಯೋಗಿಗಳುಂ ಪೊಱಲ ಜನಂಗಳುಮೆಲ್ಲಮೆಮ್ಮೆಮ್ಮ ಪಸುಗಳೆಲ್ಲಮಂ ಕೊಂಡನೆಂದನಿಬರುಂ ಪೇೞೆಯರಸಂ ಮುಳಿದವನೆನ್ನ ಕೊಟ್ಟುದಱೊಳ್ ಸಂತೋಷಂಬಟ್ಟನಿಲ್ಲ ಲೋಗರ ಪಸುಗಳಂ ಕೊಳಲ್ ತಗುಳ್ದನ್ ಮಹಾ ಲೋಭಾಭಿಭೂತನಸಂತುಷ್ಟಚಿತ್ತನಿವನಂ ಕೊಲ್ಲಿಮೆಂದು ತಳಾಱಂಗೆ ಬೆಸವೇೞ್ದೊಡೆ ಸೂಲದೊಳಿಕ್ಕಲೊಯ್ದಪ್ಪರ್ ಮಗಳೆ ಎಂದು ಪೇೞ್ದೊಡೆ ನಾಗಶ್ರಿಯೆಂದಳ್ ಕೊಲ್ಲದ ಪುಸಿ



ಯೊಳಗೆ ಚೆನ್ನಾಗಿರುವ ಹತ್ತು ಕರೆವ ಹಸುಗಳನ್ನೂ ಮೂರುಸಾವಿರ ಖಂಡುಗ ಬತ್ತವನ್ನೂ ಲೆಕ್ಕಮಾಡಿ ಕೊಟ್ಟನು. ವೀರಪೂರ್ಣನು ಆ ಸಲುಗೆಯಿಂದ ರಾಜನು ತನಗೆ ಕೊಟ್ಟಿದ್ದಾನೆಂದು ಹೇಳಿಕೊಂಡು ಅಧೀನ ರಾಜರ, ಅಧಿಕಾರಿಗಳ ಹಾಗೂ ಅರಸಿಯರ ಆಕಳುಗಳೊಳಗೆ ಉತ್ತಮವಾದ ಎಮ್ಮೆಗಳನ್ನೂ ಹಸುಗಳನ್ನೂ ಆಯ್ದು ಕೊಂಡು ರಾಜನ ಹಸುಗಳ ಮಂದೆಯೊಳಗೆ ಸೇರಿಸಿಕೊಂಡು ಉಣ್ಣುತ್ತಿದ್ದನು. ಅಷ್ಟೂ ಅಲ್ಲದೆ ದುರಾಶೆಗೆ ವಶನಾಗಿ ಅರಸನ ಆಕಳ ಮಂದೆಯನ್ನು ಹೊಕ್ಕ ಪಟ್ಟಣದ ಹಸುಗಳೆಲ್ಲವನ್ನೂ ರಾಜಭಂಡಾರಕ್ಕೆ ಸೇರಿದವೆಂದೂ ಅವು ಹೊರಗೆ ಹೋಗಲಾರವೆಂದೂ ಹೆದರಿಸಿ ಮಣಿಸಿಕೊಂಡು ಅನುಭವಿಸುತ್ತಿದ್ದನು. ಮತ್ತೊಂದು ದಿನ ವೀರಪೂರ್ಣನು ಮಹಾರಾಣಿಯ ಹಸುಮಂದೆಯಲ್ಲಿ ಶ್ರೇಷ್ಠವೆನಿಸಿದಂತಹ ಕಾಮಧೇನುವನ್ನು ವಶಪಡಿಸಿಕೊಂಡನು. ಮಹಾರಾಣಿ ಆಕ್ಷೇಪಿಸಿದಾಗ ಅವಳನ್ನೇ ಮೂದಲಿಸಿದನು. ಅರಸಿಯು 'ನನ್ನ ಕಾಮಧೇನುವನ್ನು ವೀರಪೂರ್ಣನು ಕೊಂಡುಹೋಗಿದ್ದಾನೆ' ಎಂದು ರಾಜನಿಗೆ ಹೇಳಿದಳು. ಅದಲ್ಲದೆ, ಅಧೀನರಾಜರೂ ಅರಸಿಯರೂ ಅಧಿಕಾರಿಗಳೂ ಪಟ್ಟಣದ ಜನರೂ ಎಲ್ಲರೂ "ನಮ್ಮ ಎಮ್ಮೆಗಳನ್ನೂ ಹಸುಗಳನ್ನೂ ವೀರಪೂರ್ಣನು ತೆಗೆದು ಕೊಂಡನು" ಎಂದು ಹೇಳಿದರು. ಆಗ ರಾಜನು ಕೋಪಗೊಂಡು "ಇವನು ನಾನು ಕೊಟ್ಟುದರಲ್ಲಿ ತೃಪ್ತಿಪಡಲಿಲ್ಲ. ಜನರ ಹಸುಗಳನ್ನು ವಶಮಾಡಲು ಉದ್ಯುಕ್ತನಾಗಿದ್ದಾನೆ. ಇವನು ಮಹಾ ಜಿಪುಣನು ಅತೃಪ್ತವಾದ ಮನಸ್ಸಿನವನು ಇವನನ್ನು ಕೊಂದಿಕ್ಕಿ". ಎಂದು ತಳಾರನಿಗೆ ಆಜ್ಞೆಮಾಡಿದನು. ಹೀಗೆಂದು ಸೋಮಶರ್ಮನು ಹೇಳಿದಾಗ ನಾಗಶ್ರೀ.

ಯುದ ಕಳ್ಳದ ಸ್ವದಾರ ಸಂತೋಷಂ ಪರಿಮಿತಪರಿಗ್ರಹಮೆಂತಯ್ದುಮಣುವ್ರತಂಗಳಂ ಕೊಂಡೆನೀ ಬ್ರತಂಗಳಂ ರಿಸಿಯರ್ಗೊಪ್ಪಿಸಿದೊಡಾನುಮೀಯಯ್ದುಂ ಪಾಪಂಗಳೊಳಪ್ಪ ಸೇದೆಯುಂ ಕಟ್ಟುಪಡುವುದುಂ ಕೊಲೆಯುಂಮುನಿವರಂತೆಯ್ದಲ್ ವೇೞ್ಕುಮೆಂದೊಡೆ ಸೋಮಶರ್ಮ ನೆಂದನೀಯಯ್ದುಮಣುವ್ರತಮಂ ಕೈಕೊಂಡು ದೃಢಬ್ರತೆಯಾಗು ಸುವ್ರತೆಯಾಗು ಮಗಳೆ ಆವರ್ಗೊಪ್ಪಿಸಲ್ವೇಡೆಂತುಮಾ ನಿರ್ಲಜ್ಜಂ ಬತ್ತಲಿಗನಪ್ಪ ಸವಣನಲ್ಲಿಗೆವೋಗಿ ಕಂಡು ನುಡಿದು ಕಾಡಿ ಬರ್ಪಂ ಬಾ ಮಗಳೆ ಎಂದು ಮಗಳನೊಡಗೊಂಡು ರಿಸಿಯರಲ್ಲಿಗೆ ಪೋಗಿ ಕಂಡು ಗೆಂಟಱೊಳಿರ್ದಿಂತೆಂಗುಂ ಎಲೆ ತಪಸ್ವಿ ಎನ್ನ ಮಗಳ್ಗೆ ನಿಮ್ಮ ಬ್ರತಂಗಳನೇಕೆ ಕೊಟ್ಟಿರೆನೆ ಸೂರ್ಯಮಿತ್ರಭಟಾರರೆಂದರ್ ನಿಮ್ಮ ಮಗಳ್ಗೇಕಕ್ಕುಮೆಮ್ಮ ಮಗಳಿಂಗೆಮ್ಮ ಬ್ರತಂಗಳನಾಮುಂ ಕೊಟ್ಟೊಡೆ ನಿನಗೆ ಬೇನೆ ಮಾಡಿತ್ತೆ ಎಂದು ನುಡಿದು ಇತ್ತ ಬಾ ನಾಗಶ್ರೀ ಎಂದು ಕರೆದೊಡಾಕೆಯುಂ ಪೋಗಿ ಇರ್ವರ್ ಭಟ್ಟಾರಕರ ಕಾಲ್ಗಳಂ ಪಿಡಿದೆಱಗಿ ಪೊಡೆವಟ್ಟವರ ಕೆಲದೊಳಿರ್ದೊಡೆ ಸೋಮಶರ್ಮಭಟ್ಟಂ ಬೆಱಗಾಗಿ ಕೀಲಿಸಿದಂತಿರ್ದೊನಂ ಭಟ್ಟಾರರೆಂದರ್ ಈ ಎಡೆಯಿಂದಂ ಬೇಗಂ ಪೋಗು ದುಷ್ಟ ಬ್ರಾಹ್ಮಣಾ ಅರಸರ್ಗೆ ಪೇೞ್ದು ನೀನಱ್ಕಡದನ್ನೆಗಮೆಂದೊ

ಹೀಗೆಂದಳು "ಅಹಿಂಸೆ, ಸತ್ಯ, ಅಸ್ತೇಯ, ಪರದಾರ ನಿವೃತ್ತಿ, ಮಿತಿಯುಳ್ಳ ಸ್ವೀಕರಣ ಎಂಬ ಈ ಐದು ಅಣುವ್ರತಗಳನ್ನು ಸ್ವೀಕರಿಸಿರುತ್ತೇನೆ. ಈ ವ್ರತಗಳನ್ನು ಋಷಿಗಳಿಗೆ ಹಿಂದಕ್ಕೆ ಕೊಟ್ಟರೆ ನಾನು ಈ ಐದು ಪಾಪಗಳಿಂದಾಗುವ ಆಯಾಸವನ್ನೂ ಬಂಧನಕ್ಕೆ ಒಳಗಾಗುವುದನ್ನೂ ಕೊಲೆಯನ್ನೂ ಇವರ ಹಾಗೆಯೇ ಪಡೆಯಬೇಕಾಗುವುದು". ಹೀಗೆ ನ್ನಲು ಸೋಮಶರ್ಮನು "ಈ ಐದು ಅಣುವ್ರತಗಳನ್ನು ಅನುಸರಿಸಿಕೊಂಡು ದೃಢವಾದ ವ್ರತದವಳಾಗು, ಒಳ್ಳೆಯ ವ್ರತದವಳಾಗು ಮಗಳೇ ಇದನ್ನು ನೀನು ಅವರಿಗೆ ಒಪ್ಪಿಸು ವುದು ಬೇಡ. ಹೇಗಿದ್ದರೂ ಆ ನಾಚಿಕೆಗೇಡಿಯೂ ಬತ್ತಲೆಯಾಗಿರುವವನೂ ಆದ ಜೈನ ಸನ್ಯಾಸಿಯಲ್ಲಿಗೆ ಹೋಗಿ, ಅವನನ್ನು ಕಂಡು ಮಾತಾಡಿ ಪೀಡಿಸಿ ಬರೋಣ ಬಾ ಮಗಳೇ" ಎಂದನು. ಅವನು ಮಗಳನ್ನು ಕೂಡಿಕೊಂಡು ಋಷಿಗಳಲ್ಲಿಗೆ ಹೋಗಿ ಕಂಡು ದೂರದಲ್ಲಿಯೇ ಇದ್ದು ಹೀಗೆಂದನು—"ಎಲೈ ತಪಸ್ವಿಯೇ, ನನ್ನ ಮಗಳಿಗೆ ನಿಮ್ಮ ವ್ರತ ಗಳನ್ನು ಯಾಕೆ ಕೊಟ್ಟಿರಿ ?" ಎನ್ನಲು ಸೂರ್ಯಮಿತ್ರ ಋಷಿಗಳು ಹೀಗೆಂದರು—"ನಿಮ್ಮ ಮಗಳಿಗೆ ಯಾಕೆ ಕೊಡುತ್ತೇವೆ ? ನಮ್ಮ ಮಗಳಿಗೆ ನಮ್ಮ ವ್ರತಗಳನ್ನು ನಾವು ಕೊಟ್ಟಲ್ಲಿ ನಿನಗೆ ನೋವು (ಸಂಕಟ) ಮಾಡಿತೆ ?" ಎಂದು ಹೇಳಿ ನಾಗಶ್ರೀಯನ್ನು 'ಇತ್ತ ಬಾ' ಎಂದು ಕರೆದರು. ಆಕೆ ಹೋಗಿ ಇಬ್ಬರೂ ಋಷಿಗಳ ಕಾಲುಗಳನ್ನು ಹಿಡಿದು ಸಾಷ್ಟಾಂಗ ವಂದಿಸಿ ಅವರ ಬಳಿಯಲ್ಲಿ ಇದ್ದುಕೊಂಡಳು. ಆಗ ಸೋಮಶರ್ಮಭಟ್ಟನು ಆಶ್ಚರ್ಯಪಟ್ಟು, ಅಲುಗಾಡದೆ ಇದ್ದನು. ಅವನನ್ನು ಕುರಿತು ಋಷಿಗಳು ಹೀಗೆಂದರು—"ಎಲೈ ಕೆಟ್ಟ ಬ್ರಾಹ್ಮಣನೇ, ರಾಜರಿಗೆ ಹೇಳಿ ನೀನು ಅಲುಗಾಡುವ ಮೊದಲೇ ಈ ಸ್ಥಳದಿಂದ

ಡಲ್ಲಿಂದಮೆೞ್ದು ಪೋಗಿ ಸೋಮಶರ್ಮಭಟ್ಟಂ ಪಿರಿದೊಂದು ತೊವಲಂ ಪಿಡಿದಬ್ರಹ್ಮಣ್ಯಂ ಭೋ ಅಬ್ರಹ್ಮಣ್ಯಂ ಭೋ ಎಂದೞುತ್ತಮಂಗಡಿಯ ಜನಂಗಳ್ಗೆ ಪುಯ್ಯಲಿಡುತುಮರಮನೆಗೆ ಪೋಗಿ ಚಂದ್ರವಾಹನನೆಂಬರಸನಂ ಕಂಡಿಂತೆಂದು ಬಿನ್ನಪಂಗೆಯ್ಗುಂ ಮಹಾರಾಜಾ ಆಂ ಬತ್ತಲೆ ಸವಣರಿಂದಂ ಕೋಳ್ಪಟ್ಟೆನೆನ್ನ ಮಗಳ್ ನಾಗಶ್ರೀಯುಮಂ ತನ್ನ ಮಗಳೆಂದು ಕೈಕೊಂಡಿರ್ದರ್ ಮತ್ತವರ್ ಕೂಸಂ ಕೊಂಡೋಡದನ್ನೆಗಂ ಪೋಪಂ ಬನ್ನಿಮೆಂದರಸನನೊಡಗೊಂಡು ಪೋಗೆ ಸಾಮಂತ ಮಹಾಸಾಮಂತ ಶ್ರೇಷ್ಠಿ ಸೇನಾಪತಿ ತಳಾಱ ದಂಡನಾಯಕ ಪ್ರಭೃತಿ ಚಂಪಾನಗರದ ಸಬಾಳವೃದ್ಧ ಜನಮೆಲ್ಲರುಮರಸನೊಡನೆ ನಾಗರತಾಣಕ್ಕೆ ಪೋಗಿ ಸೂರ್ಯಮಿತ್ರಾಚಾರ್ಯರಗ್ನಿ ಭೂತಿ ರಿಷಿಯರನರಸಂ ಕಂಡವರ ಪಕ್ಕದೆ ಕುಳ್ಳಿರ್ದ್ದಿರ್ದೇನ್ ಸಂಬಂಧಂ ಪೇೞಿಮೆಂದು ಮುನೀಂದ್ರನಂ ಬೆಸಗೊಂಡೊಡೆ ಸೂರ್ಯಮಿತ್ರ ಭಟ್ಟಾರಕರೀ ಕೂಸೆಂಬುದು ನಮ್ಮ ಮಗಳೆಂ ದೊಡೆ ಸೋಮಶರ್ಮಭಟ್ಟನ್ ನಾಗಶ್ರೀ ಎನ್ನ ಮಗಳ್ ನಾಗರಿತ್ತರೆಂದೊಡೆ ಭಟ್ಟಾರರಿಂತೆಂ ದರ್ ನಿನ್ನ ಮಗಳಪ್ಪೊಡೆ ನಾಲ್ಕು ವೇದಮುಮಾಱಂಗಮುಂ ಪದಿನೆಂಟುಂ ಧರ್ಮಶಾಸ್ತ್ರಂಗಳುಂ ಮೀಮಾಂಸಾ ನ್ಯಾಯಶಾಸ್ತ್ರಂ ವ್ಯಾಕರಣಂ ಪ್ರಮಾಣಂ ಕಾಬ್ಯಂ ನಾಟಕಂ ಛಂದಮಲಂಕಾರಂ

ತೊಲಗು" ಎಂದರು. ಸೋಮಶರ್ಮನು ಅಲ್ಲಿಂದ ಎದ್ದು ಹೋದನು. ದೊಡ್ಡದೊಂದು ಚಿಗುರನ್ನು ಹಿಡಿದು ಬ್ರಾಹ್ಮಣನಿಗೆ ಅನರ್ಥವಾಯಿತು ಭೋ ಎಂದು ಅಳುತ್ತ ಅಂಗಡಿಯ ಜನರಿಗೆಲ್ಲ ಮೊರೆಯಿಡುತ್ತ ಅರಮನೆಗೆ ಹೋಗಿ ಚಂದ್ರವಾಹನನೆಂಬ ರಾಜನನ್ನು ಕಂಡು ಈ ರೀತಿಯಾಗಿ ವಿಜ್ಞಾಪನೆ ಮಾಡಿದನು—"ಮಹಾರಾಜನೇ ನಾನು ಬತ್ತಲೆಯ ಜೈನ ಸನ್ಯಾಸಿಗಳಿಂದ ಸುಲಿಗೆಗೆ ಒಳಗಾದೆನು. ನನ್ನ ಮಗಳಾದ ನಾಗಶ್ರೀಯನ್ನು ಅವರು ತನ್ನ ಮಗಳೆಂದು ವಶದಲ್ಲಿಟ್ಟುಕೊಂಡಿದ್ದಾರೆ. ಮತ್ತೆ ಅವರು ಆಕೆಯನ್ನು ಕರೆದುಕೊಂಡು ಓಡಿಹೋಗುವುದಕ್ಕೆ ಮುಂಚಿತವಾಗಿ ಹೋಗೋಣ, ಬನ್ನಿ"—ಎಂದು ಅರಸನನ್ನು ಒಡ ಗೊಂಡು ಹೋಗಲು ಸಾಮಂತರು, ಮಹಾಸಾಮಂತರು, ಸೆಟ್ಟಿಗಳು, ಸೇನಾಪತಿ, ದಂಡ ನಾಯಕರು, ಪುರದ ಕಾವಲುಗಾರರು, ಮುಂತಾದ ಚಂಪಾನಗರದ ಬಾಲಕರಿಂದ ಮುದುಕರವರೆಗೆ ಎಲ್ಲರೂ ರಾಜನೊಡನೆ ನಾಗಸ್ಥಾನಕ್ಕೆ ಹೋದರು. ರಾಜನು ಸೂರ್ಯಮಿತ್ರಾಚಾರ್ಯರನ್ನೂ ಅಗ್ನಿಭೂತಿ ಋಷಿಗಳನ್ನೂ ಕಂಡು ಅವರ ಬಳಿಯಲ್ಲಿ ಕುಳಿತು 'ನಾಗಶ್ರೀಗೂ ನಿಮಗೂ ಏನು ಸಂಬಂಧವಿದೆ ? ಹೇಳಿ' ಎಂದು ಕೇಳಿದನು. ಆಗ ಸೂರ್ಯಮಿತ್ರ ಮುನಿಗಳು 'ಈ ಕನ್ಯೆ ನಮ್ಮ ಮಗಳು' ಎಂದರು. ಸೋಮ ಶರ್ಮಭಟ್ಟನು 'ನಾಗಶ್ರೀ ನನ್ನ ಮಗಳು. ನನಗೆ ನಾಗದೇವತೆಗಳು ಕೊಟ್ಟರು' ಎಂದನು. ಆಗ ಮುನಿಗಳು ಹೀಗೆಂದರು—"ನಿನ್ನ ಮಗಳಾದರೆ ನಾಲ್ಕು ವೇದಗಳನ್ನೂ ಆರು ವೇದಾಂಗಗಳನ್ನೂ ಹದಿನೆಂಟು ಧರ್ಮಶಾಸ್ತ್ರಗಳನ್ನೂ ಮೀಮಾಂಸೆ, ವ್ಯಾಕರಣ, ಪ್ರಮಾಣ, ಕಾವ್ಯ, ನಾಟಕ, ಛಂದಸ್ಸು, ಅಲಂಕಾರಶಾಸ್ತ್ರ, ನಿಘಂಟು, ಸಾಮುದ್ರಿಕ,

**ಅಭಿಧಾನಂ ಸಾಮುದ್ರಿಕಂ ಶಾಳಿಹೋತ್ರಂ ಪಾಳಕಾಪ್ಯಂ ಹಾನಿತಂ ಚರಕಮಶ್ವಿನೀಮತಂ ಬಾಹಟಂ ಶುಶ್ರುತಮುಮೆಂದಿವು ಮೊದಲಾದ ನರವೈದ್ಯಮುಮಂ ಚಾಣಕ್ಯಂ ಜ್ಯೋತಿಷಂ ಮಂತ್ರವಾದಂ ಮೊದಲಾಗೊಡೆಯ ಶಾಸ್ತ್ರಂಗಳೆಲ್ಲಮನೇನೀ ಕೂಸನೋದಿಸಿದಾ ಎಂದೊಡಾತ ನಿಲ್ಲೋದಿಸಿದೆನೆಂದಂ ಮತ್ತಿನಿತುಮನಾ ಕೂಸನಾವೋದಿಸಿದೆಮದಱಿಂದೆಮ್ಮ ಕೂಸೆಂದೊಡೆ ಅರಸನೋದಿಸಿ ತೋಱಿಮೆಂದೊಡೆ ಅಗ್ನಿಭೂತಿ ಎಮ್ಮೋದಿಸಿದ ವೇದಮನೀ ಪೊೞಲನೆರೆದ ನೆರವಿಯ ನಡುವೆ ಓದಿ ತೋಱು ಮಗಳೆ ಎಂದೊಡಾ ನಾಗಶ್ರೀಯುಮಂತೆಗೆಯ್ವೆನೆಂದು ಪ್ರಣವ ಮನುಚ್ಚರಿಸಿ ಸ್ವರವರ್ಣಭೇದದಿಂದಂ ಪ್ರಥಮಂ ಚತುಃಷಷ್ಟಿ ಸಂಹತಿಗಳುಂ ಪದಕ್ರಮ ಭೇದದಿಂ ಬ್ರಾಹ್ಮಣ ಆರಣ ಸೂತ್ರಂ ಮೊದಲಾಗೊಡೆಯುವನೋದಿ ಋಗ್ಯಜುಸ್ಸಾಮಾಥರ್ವಣ ವೇದಂ ಗಳಂ ಸ್ವರವರ್ಣ ಭೇದದಿಂದಂ ಮಂತ್ರ ಸಹಿತ ಪಾಳಿ ಪದಕ್ರಮ ಜಟೆ ಭೇದದಿಂದಂ ಶತಸೂತ್ರಂ ಮೊದಲಾಗೆಲ್ಲಮಂ ಯಥಾಕ್ರಮದಿಂದುಚ್ಚರಿಸಿ ಪದಿನೆಂಟು ಪುರಾಣಂಗಳುಂ ಪದಿನೆಂಟು ಧರ್ಮ ಸಂಹತಿಗಳುಂ ಮೀಮಾಂಸಾ ನ್ಯಾಯಸೂತ್ರಮಿವೆಲ್ಲಮನೋದಿ ಕ್ರಿಯಾಕಾರಕ ಸಂಬಂಧ**

ಅಶ್ವಶಾಸ್ತ್ರ, ಗಜಶಾಸ್ತ್ರ, ಹಾನಿತ-ಚರಕ-ಅಶ್ವಿನೀ ಮತಗಳೆಂಬ ವೈದ್ಯಶಾಸ್ತ್ರಗಳು, ವಾಗ್ಭಟನ ಅಷ್ಟಾಂಗಹೃದಯ ಶುಶ್ರುತಪ್ರಣೀತ ವೈದ್ಯಗಳು_ಇವೇ ಮೊದಲಾದ ಮಾನವ ವೈದ್ಯವನ್ನೂ ಕೌಟಿಲ್ಯನ ಅರ್ಥಶಾಸ್ತ್ರ, ಜ್ಯೋತಿಷ ಮಂತ್ರವಾದ ಮುಂತಾಗಿರುವ ಶಾಸ್ತ್ರಗಳೆಲ್ಲವನ್ನೂ ನೀನು ಈ ಕನ್ಯೆಗೆ ಕಲಿಸಿರುವೆಯಾ ?" ಎಂದು ಕೇಳಿದನು. ಆಗ ಅವನು ಓದಿಸಿಲ್ಲವೆಂದು ಹೇಳಿದನು. ಆಗ ಋಷಿಗಳು "ನಾವು ಮತ್ತಿವೆಲ್ಲವನ್ನೂ ಆ ಕನ್ಯೆಗೆ ಕಲಿಸಿದ್ದೇವೆ. ಆದುದರಿಂದ ಅವಳು ನಮ್ಮ ಮಗಳು" ಎಂದರು. ರಾಜನು 'ಆಕೆ ಯಿಂದ ಇವೆಲ್ಲವನ್ನೂ ಹೇಳಿಸಿ ಪ್ರತ್ಯಕ್ಷಪಡಿಸಿರಿ' ಎನ್ನಲು, ಅಗ್ನಿಭೂತಿಯು "ಮಗಳೇ, ನಾವು ಕಲಿಸಿರುವ ವೇದವನ್ನು ಇಲ್ಲಿ ಸೇರಿದ ಪಟ್ಟಣಿಗರ ಗುಂಪಿನ ನಡುವೆ ಹೇಳಿ ತೋರಿಸು" ಎಂದನು. ಆಗ ನಾಗಶ್ರೀ 'ಹಾಗೆಯೇ ಮಾಡುವೆನು' ಎಂದು ಓಂಕಾರವನ್ನು ಉಚ್ಚಾರಣೆ ಮಾಡಿ ಸ್ವರ ವರ್ಣಗಳ ಭೇದದಿಂದ ಮೊದಲು ಅರುವತ್ತನಾಲ್ಕು ವಿಧದ ಸಂಹತಿ[1]ಗಳನ್ನೂ ಪದಕ್ರಮಗಳ ಭೇದದಿಂದ ಬ್ರಾಹ್ಮಣ ಅರಣ[2] ಸೂತ್ರ ಮುಂತಾಗಿರು ವವನ್ನೂ ಹೇಳಿದಳು. ಋಗ್ವೇದ ಯಜುರ್ವೇದ ಸಾಮವೇದ ಅಥರ್ವವೇದಗಳನ್ನೂ ಸ್ವರಗಳ ಮತ್ತು ವರ್ಣಗಳ ಭೇದದಿಂದ ಮಂತ್ರ ಸಮೇತವಾಗಿ ಪಾಳಿ-ಪದಕ್ರಮ-ಜಟೆ ಮುಂತಾದ ವೇದಪಠನದ ರೀತಿಯಲ್ಲಿ ಶತಸೂತ್ರ ಮುಂತಾಗಿ ಎಲ್ಲವನ್ನೂ ಸರಿಯಾದ ಕ್ರಮದಿಂದ ಉಚ್ಚಾರಣೆ ಮಾಡಿದಳು. ಹದಿನೆಂಟು ಪುರಾಣಗಳು, ಹದಿನೆಂಟು ಧರ್ಮ ಶಾಸ್ತ್ರಸಂಗ್ರಹಗಳು, ಮೀಮಾಂಸೆ ನ್ಯಾಯಸೂತ್ರ ಇವೆಲ್ಲವನ್ನೂ ಹೇಳಿ, ಕ್ರಿಯಾಪದ

1. ಸಂಹಿತೆ 2. ಆರಣ್ಯಕ

ದಿಂದೆಲ್ಲಮಂ ವಕ್ಕಾಣಿಸಿ ತೋಱಿದೊಡರಸಂ ಮೊದಲಾಗಿ ನೆರೆದ ನೆರವಿಯುಂ ಪಂಡಿತರ್ಕಳೆಲ್ಲಂ ವಿಸ್ಮಯಂಬಟ್ಟು ಪೊಗೞ್ದು ಮತ್ತಮರಸನಿಂತೆಂದನೀ ಕೂಸಿನಿತು ಶಾಸ್ತ್ರಂಗಳನೆಂತು ಕಲ್ತಳೆಂತು ಭಟಾರಾ ಇದನಱಿಯೆ ಬೆಸಸಿಮೆನೆ ಸೂರ್ಯಮಿತ್ರ ಭಟ್ಟಾರರಿಂತೆಂದರ್ ಈಯಿರ್ದ್ದ ರಿಸಿಯರ ಸಹೋದರಂ ವಾಯುಭೂತಿಯೆಂಬೊನಾನಾಮೋದಿಸಿದೆವೆಮ್ಮೊಳಪ್ಪ ಮಾನಕಷಾಯಂ ಕಾರಣಮಾಗಿ ಸತ್ತು ಬೆಳ್ಗತ್ತೆಯುಂ ಪೇಪಂದಿಯುಂ ನಾಯುಂ ಪೊಲೆಯರ ಕೂಸುಮಾಗಿ ರಿಸಿಯರ ಪ್ರಬೋಧನೆಯಿಂದಂ ಬ್ರತಂಗಳಂ ಕೈಕೊಂಡೀಗಳ್ ನಾಗಶ್ರೀಯಾದಳೆಂದು ಮುನ್ನಿನ ಭವದ ಸಂಬಂಧಮೆಲ್ಲಮಂ ಸವಿಸ್ತರಂ ಪೇೞ್ದು ಮತ್ತಮಿಂತೆಂದರ್ ಮಿಥ್ಯಾತ್ವ ಸಂಯಮ ಕಷಾಯ ಯೋಗಂ ಕಾರಣಮಾಗಿ ಜೀವಂಗಳ್ ಸಂಸಾರಸಮುದ್ರದೊಳ್ ತೊೞಲ್ಗುಮೆಂದು ಸವಿಸ್ತರಂ ಧರ್ಮಮಂ ಪೇೞೆ ಕೇಳ್ದು ಚಂದ್ರವಾಹನನೆಂಬರಸಂಗೆ ವೈರಾಗ್ಯಂ ಪುಟ್ಟಿ ಮಗಂಗರಸುಗೊಟ್ಟು ಪಲಂಬರರಸು ಮಕ್ಕಳ್ವೆರಸು ಭಟ್ಟಾರರ ಪಕ್ಕದೆ ತಪಂಬಟ್ಟಂ ಕೆಲರ್ ಶ್ರಾವಕ ವ್ರತಂಗಳಂ ಕೆಲಂಬರ್ ಸಮ್ಯಕ್ತ್ವಮಂ ಕೈಕೊಂಡರಾಗಳಾ ಸೋಮಶರ್ಮಭಟ್ಟಂ ರಿಸಿಯರೊಳಾದ ಮಾನ ಗರ್ವದ ದೋಷದಿಂದೆಯ್ದಿದ ದುಃಖಂಗಳಂ ಕೇಳ್ದಱಿದಾ ಭಟ್ಟಾರರ ಪಕ್ಕದೆ ತಪಂಬಟ್ಟಂ

ಕಾರಕಪದಗಳ ಸಂಬಂಧ ಸರಿಯಾಗಿರುವಂತೆ ಎಲ್ಲವನ್ನೂ ವ್ಯಾಖ್ಯಾನಮಾಡಿ ತೋರಿಸಿದಳು. ಆಗ ರಾಜನೂ, ನೆರೆದ ಜನರೂ ವಿದ್ವಾಂಸರೂ ಎಲ್ಲರೂ ಆಶ್ಚರ್ಯಪಟ್ಟು ಹೊಗಳಿದರು. ಆ ಮೇಲೆ ರಾಜನು ಹೀಗೆಂದನು "ಈ ಕನ್ಯೆ ಇಷ್ಟೊಂದು ಶಾಸ್ತ್ರಗಳನ್ನು ಹೇಗೆ ಕಲಿತುಕೊಂಡಳು? ಋಷಿಗಳೇ, ಇದನ್ನು ನನಗೆ ತಿಳಿಯುವಂತೆ ಅಪ್ಪಣೆಮಾಡಿ" ಎನ್ನಲು, ಸೂರ್ಯಮಿತ್ರ ಋಷಿಗಳು ಹೀಗೆಂದರು "ಇದೋ ಇಲ್ಲಿರುವ ಅಗ್ನಿಭೂತಿ ಋಷಿಗಳ ಸಹೋದರ ವಾಯುಭೂತಿಯೆಂಬವನಿಗೆ ನಾವು ವಿದ್ಯೆ ಕಲಿಸಿದ್ದೆವು. ನಮ್ಮ ಮೇಲೆ ಅವನು ತಾಳಿದ ಗರ್ವ ಕೋಪಗಳ ಕಾರಣದಿಂದ ಸತ್ತು ಬಿಳಿಕತ್ತೆ, ಹೇಲುಹಂದಿ, ನಾಯಿ, ಹೊಲೆಯರ ಕನ್ಯೆಯಾಗಿ ಹುಟ್ಟಿಬಂದು, ಋಷಿಗಳ ಉಪದೇಶದಿಂದ ವ್ರತಗಳನ್ನು ಸ್ವೀಕರಿಸಿ, ಈಗ ನಾಗಶ್ರೀಯಾದಳು" ಹೀಗೆ ಹಿಂದಿನ ಜನ್ಮದ ಸಂಬಂಧವೆಲ್ಲವನ್ನೂ ವಿಸ್ತಾರವಾಗಿ ತಿಳಿಸಿ ಮತ್ತೆ ಹೀಗೆಂದರು "ಜೀವಗಳು ಮಿಥ್ಯಾತ್ವ, ಸಂಯಮವಿಲ್ಲದಿರುವುದು, ಗರ್ವಕೋಪಾದಿಗಳ ಕಾರಣದಿಂದ ಸಂಸಾರವೆಂಬ ಸಮುದ್ರದಲ್ಲಿ ಸುತ್ತಾಡುವವು". ಹೀಗೆಂದು ವಿಸ್ತಾರವಾಗಿ ಧರ್ಮದ ರಹಸ್ಯವನ್ನು ಹೇಳಲು ಕೇಳಿದ ಚಂದ್ರವಾಹನ ರಾಜನಿಗೆ ವೈರಾಗ್ಯವುಂಟಾಯಿತು. ಅವನು ತನ್ನ ಮಗನಿಗೆ ಅರಸುತನವನ್ನು ಕೊಟ್ಟು ಹಲವು ಮಂದಿ ರಾಜಕುಮಾರರೊಂದಿಗೆ ಋಷಿಗಳ ಸಮೀಪದಲ್ಲಿದ್ದು ತಪವನ್ನೆಸಗಿದನು. ಕೆಲವರು ಶ್ರಾವಕವ್ರತಗಳನ್ನೂ ಕೆಲವರು ಸಮ್ಯಗ್ದರ್ಶನ ಸಮ್ಯಗ್ ಜ್ಞಾನ ಸಮ್ಯಕ್ ಚಾರಿತ್ರಗಳನ್ನು ಪಡೆದುಕೊಂಡರು. ಆ ಸಂದರ್ಭದಲ್ಲಿ ಸೋಮಶರ್ಮ ಭಟ್ಟನು ಋಷಿಗಳ ಮೇಲೆ ಉಂಟಾದ ಗರ್ವಕ್ರೋಧಗಳ ತಪ್ಪಿನಿಂದ ಉಂಟಾಗತಕ್ಕ ದುಃಖಗಳನ್ನು ಕೇಳಿ ತಿಳಿದು ಆ ಋಷಿಗಳ ಪಕ್ಕದಲ್ಲಿ ತಪಸ್ಸನ್ನು ಮಾಡಿದನು. ನಾಗಶ್ರೀಯೂ

ನಾಗಶ್ರೀಯುಂ ನಾಗಶ್ರೀಯ ತಾಯ್ ತ್ರಿವೇದಿಯುಂ ಬ್ರಹ್ಮಿಲೆಯೆಂಬ ಕಂತಿಯರ ಪಕ್ಕದೆ ತಪಂಬಟ್ಟರ್ ಮತ್ತೆ ಸೂರ್ಯಮಿತ್ರ ಭಟ್ಟಾರರಗ್ನಿಭೂತಿ ಭಟ್ಟಾರರುಮಿರ್ವರುಂ ಪಲಕಾಲಂ ತಪಂಗೆಯ್ದು ಅಗ್ರಮಂದಿರವೆಂಬ ಪರ್ವತದೊಳ್ ಮೋಕ್ಷವನೆಯ್ದಿದರ್ ಮತ್ತಂ ಸೋಮಶರ್ಮ ರಿಸಿಯರುಮುಗ್ರೋಗ್ರ ತಪಶ್ಚರಣಂ ಗೆಯ್ದು ಸನ್ಯಸನ ವಿಧಿಯಿಂದಂ ಮುಡಿಪಿ ಅಚ್ಯುತಕಲ್ಪ ದೊಳಿರ್ಪ್ಪತ್ತೆರಡು ಸಾಗರೋಪಮಾಯುಷ್ಯಮನೊಡೆಯೊಂ ಸಾಮಾನಿಕದೇವನಾಗಿ ಪುಟ್ಟಿದೊಂ ಮತ್ತೆ ನಾಗಶ್ರೀಯುಂ ಭುಕ್ತ ಪ್ರತ್ಯಾಖ್ಯಾನವಿಧಿಯಿಂ ರತ್ನತ್ರಯಮಂ ಸಾಧಿಸಿ ಅಚ್ಯುತ ಕಲ್ಪದೊಳ್ ದೇವನಾಗಿ ಪುಟ್ಟಿದೊಳ್ ಮತ್ತಾ ಸ್ವರ್ಗದೊಳ್ ತ್ರಿವೇದಿಯುಂ ನಾಗಶ್ರೀ ಎನಗೆ ಜನ್ಮಾಂತರದೊಳಪ್ಪೊಡಂ ಮಗನಕ್ಕೆಂದು ನಿದಾನಂಗೆಯ್ದು ಮುಡಿಪಿ ದೇವನಾದೊಳಿಂತಾ ಯಿರ್ವರುಂ ಇರ್ಪ್ಪತ್ತೆರಡು ಸಾಗರೋಪಮಾಯುಷ್ಯಮನೊಡೆಯೊರಾಗಿ ದೇವರಾಗಿ ಪುಟ್ಟಿದರ್ ಮತ್ತಂ ಸೋಮಶರ್ಮನಪ್ಪ ದೇವಂ ಪಲಕಾಲಂ ದೇವಲೋಕದ ಭೋಗಮನನುಭವಿಸಿ ಬಂದಿಲ್ಲಿ ಈ ಜಂಬೂದ್ವೀಪದ ದಕ್ಷಿಣ ಭರತದೊಳವಂತಿಯೆಂಬುದು ನಾಡುಜ್ಜೇನಿಯೆಂಬುದು ಪೊೞಲಲ್ಲಿ ಇಂದ್ರದತ್ತನೆಂಬೊಂ ಪರದನಾತನ ಭಾರ್ಯೆ ಗುಣಮತಿಯೆಂಬೊಳಾಯಿರ್ವರ್ಗ್ಗಂ ಸೂರದತ್ತ ನೆಂಬೊಂ ಮಗನಾಗಿ ಪುಟ್ಟಿದೊಂ ಮತ್ತಮಾ ಪೊೞಲೊಳ್ ಮೂವತ್ತೆರಡು ಕೋಟಿ ಕಸವರಮ

ಅವಳ ತಾಯಿಯಾದ ತ್ರಿವೇದಿಯೂ ಬ್ರಹ್ಮಿಲೆ ಎಂಬ ಜೈನ ಸಂನ್ಯಾಸಿನಿಯ ಬಳಿಯಲ್ಲಿ ತಪಸ್ಸನ್ನು ಮಾಡಿದರು. ಸೂರ್ಯಮಿತ್ರ ಋಷಿಗಳು ಅಗ್ನಿಭೂತಿ ಋಷಿಗಳು ಇವರಿಬ್ಬರೂ ಹಲವು ವರ್ಷಗಳ ಕಾಲ ತಪಸ್ಸನ್ನು ಮಾಡಿ ಅಗ್ರಮಂದಿರವೆಂಬ ಬೆಟ್ಟದಲ್ಲಿ ಮೋಕ್ಷಕ್ಕೆ ಹೋದರು. ಆ ಮೇಲೆ ಸೋಮಶರ್ಮ ಋಷಿಗಳು ಅತ್ಯಂತ ಘೋರವಾದ ತಪಸ್ಸನ್ನು ಆಚರಿಸಿ ಸನ್ಯಸನ ವಿಧಿಯಿಂದ ಸತ್ತು ಅಚ್ಯುತ ಎಂಬ ಹೆಸರಿನ ಸ್ವರ್ಗದಲ್ಲಿ ಇಪ್ಪತ್ತೆರಡು ಸಾಗರಕ್ಕೆ ಸಮಾನವಾದ ಆಯುಷ್ಯವನ್ನು ಉಳ್ಳ ಸಾಮಾನಿಕ ದೇವನಾಗಿ ಹುಟ್ಟಿದನು. ಮತ್ತೆ ನಾಗಶ್ರೀಯು ಕ್ರಮದಿಂದ ಆಹಾರ ಪಾನೀಯಗಳನ್ನು ತ್ಯಾಗಮಾಡುವ 'ಭುಕ್ತ ಪ್ರತ್ಯಾಖ್ಯಾನ' ಎಂಬ ವ್ರತನಿಯಮದಿಂದ ಸಮ್ಯಗ್ದರ್ಶನ ಚಾರಿತ್ರಗಳೆಂಬ ರತ್ನ ತ್ರಯ ವನ್ನು ಪಡೆದು, ಅಚ್ಯುತ ಕಲ್ಪದಲ್ಲಿ ದೇವತೆಯಾಗಿ ಹುಟ್ಟಿದಳು. ಮತ್ತು ಆ ಸ್ವರ್ಗದಲ್ಲಿ ತ್ರಿವೇದಿಯು ನನಗೆ ಬೇರೆ ಜನ್ಮದಲ್ಲಿಯಾದರೂ ನಾಗಶ್ರೀಯು ಮಗನಾಗಿ ಜನಿಸಲಿ" ಎಂದು ಸಂಕಲ್ಪಿಸಿ ಸತ್ತು ದೇವನಾದಳು. ಹೀಗೆ ಆ ಇಬ್ಬರೂ ಇಪ್ಪತ್ತೆರಡು ಸಾಗರಕ್ಕೆ ಸಮಾನವಾಗುವ ಆಯುಷ್ಯವುಳ್ಳವರಾಗಿ ದೇವರುಗಳಾಗಿ ಜನಿಸಿದರು. -ಅನಂತರ ಸೋಮಶರ್ಮನಾಗಿದ್ದ ದೇವನು ಹಲವು ಕಾಲದವರೆಗೆ ದೇವಲೋಕದ ಸುಖವನ್ನು ಅನು ಭವಿಸಿದನಂತರ ಭೂಲೋಕದಲ್ಲಿ ಜನಿಸಿದನು. ಈ ಜಂಬೂದ್ವೀಪದ ದಕ್ಷಿಣ ಭರತಭೂಮಿ ಯಲ್ಲಿ ಅವಂತಿಯೆಂಬ ನಾಡಿದೆ. ಅಲ್ಲಿ ಉಜ್ಜೇನಿಯೆಂಬ ಪಟ್ಟಣದಲ್ಲಿ ಇಂದ್ರದತ್ತನೆಂಬ ವರ್ತಕನಿದ್ದನು. ಅವನ ಹೆಂಡತಿ ಗುಣಮತಿ ಎಂಬವಳು ಆ ಇಬ್ಬರಿಗೂ ಸೂರದತ್ತ ನೆಂಬ ಮಗನಾಗಿ (ಸೋಮಶರ್ಮನಾಗಿದ್ದ ದೇವನು) ಹುಟ್ಟಿದನು. ಇದಲ್ಲದೆ ಆ ಪಟ್ಟಣ

ನೊಡೆಯೊಂ ಸುಭದ್ರನೆಂಬೊಂ ಸೆಟ್ಟಿಯಾತನ ಭಾರ್ಯೆ ಸರ್ವಯಶಿಯೆಂಬೊಳಾಯಿರ್ವರ್ಗ್ಗಂ ತ್ರಿವೇದಿಯಪ್ಪ ದೇವಂ ಬಂದು ಯಶೋಭದ್ರೆಯೆಂಬೊಳ್ ಮಗಳಾಗಿ ಪುಟ್ಟಿದೊಳಾ ತ್ರಿವೇದಿ ತಪಶ್ಚರಣದ ಫಲದಿಂದಂ ದೇವತ್ವಮನೆಯ್ದಿಯುಂ ನಿದಾನಂ ಕಾರಣಮಾಗಿ ಮಿಥ್ಯಾತ್ವಕ್ಕೆ ಸಂದು ಸ್ತ್ರೀತ್ವಮನೆಯ್ದಿದಳಾ ಯಶೋಭದ್ರೆಯುಂ ಸೂರದತ್ತಂಗೆ ಕೊಟ್ಟೊರಾಯಿರ್ವರ್ಗ್ಗಂ ನಾಗಶ್ರೀಯಪ್ಪ ದೇವಂ ಬಂದು ಸುಕುಮಾರಸ್ವಾಮಿಯೆಂಬೊಂ ಮಗನಾಗಿ ಪುಟ್ಟಿದನಾತನ ಪುಟ್ಟಿದಂದೆ ವೈರಾಗ್ಯಂ ಕಾರಣಮಾಗಿ ಸೂರದತ್ತಸೆಟ್ಟಿ ಸುಕುಮಾರಸ್ವಾಮಿಗೆ ಸೆಟ್ಟಿವಟ್ಟಂಗಟ್ಟಿ ತಪಂಬಟ್ಟಂ ಸುಕುಮಾರಸ್ವಾಮಿಯುಂ ಯೌವನನಾಗಿ ಅತ್ಯಂತ ರೂಪ ಲಾವಣ್ಯ ಸೌಭಾಗ್ಯ ಕಾಂತಿಯಿಂದಂ ಕೂಡಿದೊನಾತಂಗೆ ಮೂವತ್ತೆರಡು ಬಳ್ಳಿಮಾಡಂಗಳತ್ಯಂತ ರೂಪಲಾವಣ್ಯ ಸೌಭಾಗ್ಯ ಕಾಂತಿ ಹಾವ ಭಾವ ವಿಲಾಸ ವಿಭ್ರಮಂಗಳನೊಡೆಯ ದೇವಗಣಿಕೆಯರನೆ ಪೋಲ್ವ ಮೂವತ್ತಿರ್ವರ್ ದಿವ್ಯಸ್ತ್ರೀಯರ್ಕಳ್ ಮೂವತ್ತೆರಡು ನಾಟಕಂಗಳ್ ಮೂವತ್ತೆರಡು ಕೋಟಿ ಕಸವರಮುಂ ಪಂಚರತ್ನಂಗಳೆಂಬಿನಿತಱಿಂದಂ ಕೂಡಿ ಭೋಗೋಪಭೋಗ ಸುಖಂಗಳನನುಭವಿಸುತ್ತುಮಿರೆ ಮತ್ತೊಂದು ದಿವಸಮೊರ್ವ ನೈಮಿತ್ತಿಕನಿಂತೆಂದಾದೇಶಂಗೆಯ್ದನೀ ಸುಕುಮಾರಸ್ವಾಮಿ ಆವುದೊಂದು ಕಾಲದೊಳ್ ರಿಸಿಯರ ರೂಪಂ ಕಾಣ್ಗುಮಂದೀತನುಂ ತಪಂಬಡುಗುಮೆಂದೊಡಾ

ದಲ್ಲಿ ಮೂವತ್ತೆರಡು ಕೋಟಿ ಹೊನ್ನನ್ನುಳ್ಳ ಸುಭದ್ರನೆಂಬ ಸೆಟ್ಟಿಯಿದ್ದನು. ಅವನ ಹೆಂಡತಿ ಸರ್ವಯಶಿಯೆಂಬವಳು. ಆ ಇಬ್ಬರಿಗೆ ತ್ರಿವೇದಿಯಾಗಿದ್ದ ದೇವನ ಜೀವದಿಂದ ಯಶೋಭದ್ರೆಯೆಂಬ ಮಗಳು ಜನಿಸಿದಳು. ಆ ತ್ರಿವೇದಿ ತನ್ನ ತಪಸ್ಸಿನ ಆಚರಣೆಯ ಫಲದಿಂದ ದೇವತ್ವವನ್ನು ಪಡೆದರೂ ತನ್ನ ಸಂಕಲ್ಪದ ಕಾರಣದಿಂದ ಮಿಥ್ಯಾತ್ವಕ್ಕೆ ಒಳಗಾಗಿ ಹೆಣ್ಣುತನವನ್ನು ಹೊಂದಿದಳು. ಆ ಯಶೋಭದ್ರೆಯನ್ನು ಸೂರದತ್ತನಿಗೆ ಕೊಟ್ಟರು. ಆ ಇಬ್ಬರಿಗೂ ನಾಗಶ್ರೀಯಾಗಿದ್ದ ದೇವನು ಬಂದು ಸುಕುಮಾರಸ್ವಾಮಿಯೆಂಬ ಮಗನಾಗಿ ಹುಟ್ಟಿದನು. ಅವನು ಹುಟ್ಟಿದ ದಿನವೇ ವೈರಾಗ್ಯವುಂಟಾಗಿ ಸೂರದತ್ತ ಸೆಟ್ಟಿಯು ಸುಕುಮಾರಸ್ವಾಮಿಗೆ ಸೆಟ್ಟಿಪಟ್ಟವನ್ನು ವಹಿಸಿಕೊಟ್ಟು ತಪಸ್ಸಿಗೆ ತೆರಳಿದನು. ಸುಕುಮಾರಸ್ವಾಮಿ ತಾರುಣ್ಯವನ್ನು ಪಡೆದು ಅತ್ಯಂತ ರೂಪ ಲಾವಣ್ಯ ಸೌಭಾಗ್ಯ ಕಾಂತಿಯಿಂದ ಕೂಡಿದವನಾದನು. ಅವನಿಗೆ ಮೂವತ್ತೆರಡು ಲತಾಗೃಹಗಳೂ ಅತ್ಯಂತ ರೂಪ–ಲಾವಣ್ಯ–ಸೌಭಾಗ್ಯ–ಕಾಂತಿ–ಹಾವ–ಭಾವ–ವಿಲಾಸ–ವಿಭ್ರಮಗಳಿಂದ ಕೂಡಿ ದೇವತಾಸ್ತ್ರೀಯನ್ನು ಹೋಲುವ ಮೂವತ್ತೆರಡು ಮಂದಿ ದಿವ್ಯರಾದ ಸ್ತ್ರೀಯರೂ ಇದ್ದರು. ಮೂವತ್ತೆರಡು ಬಗೆಯ ನಾಟ್ಯಗಳು, ಮೂವತ್ತೆರಡು ಕೋಟಿ ಹೊನ್ನು, ಐದು ಬಗೆಯ ರತ್ನಗಳು ಎಂಬಿವೆಲ್ಲವುಗಳಿಂದ ಕೂಡಿ ಸುಕುಮಾರಸ್ವಾಮಿ ಎಲ್ಲಾ ರೀತಿಯ ಸುಖಗಳನ್ನು ಅನುಭವಿಸುತ್ತಿದ್ದನು. ಮತ್ತೊಂದು ದಿನ ಒಬ್ಬ ಜೋಯಿಸನು ಈ ರೀತಿಯಾಗಿ ಭವಿಷ್ಯವನ್ನು ಹೇಳಿದನು. 'ಈ ಸುಕುಮಾರಸ್ವಾಮಿ ಯಾವಾಗ ಋಷಿಗಳ ರೂಪವನ್ನು ಕಾಣುವನೋ ಅಂದೇ ತಪಸ್ಸಿಗೆ ತೆರಳುವನು' ಹೀಗೆಂದ

ಮಾತಂ ತಾಯ್ ಕೇಳ್ದು ತನ್ನ ಮನೆಯಂ ರಿಸಿಯರಂ ಪುಗಲೀಯದಂತು ಬಾಗಿಲ ಕಾಪಿನವರಂ ಕಲ್ಪಿಸಿದೊಳಂತು ಕಾಲಂ ಸಲೆ ಮತ್ತೊಂದು ದಿವಸಂ ರತ್ನ ದ್ವೀಪದಿಂದೊರ್ವ ಪರದಂ ಸರ್ವರತ್ನಕಂಬಳಂಗಳಂ ಲಕ್ಷದೀನಾರಂಗಳ್ ಬೆಲೆಯಪ್ಪುವ ನುಜ್ಜೇನಿಗೆ ಮಾಱಲ್ ಕೊಂಡುಬಂದೊಸಾ ಪೊಬಲನಾಳ್ವೊಂ ವೃಷಭಾಂಕನೆಂಬೊಸರಸಂಗಂ ಜ್ಯೋತಿರ್ಮಾಲೆಯೆಂಬ ಮಹಾದೇವಿಗಮಿಂತಿರ್ವರ್ಗ್ಗಂ ತೋಱಿದೊಡೆ ಅವಱ ಬೆಲೆಯುಂ ಬೆಸಗೊಂಡೊಡೆ ಲಕ್ಷ ದೀನಾರಂಗಳ್ ಬೆಲೆಯೆಂದು ಪೇೞ್ದೊಡೆ ಕೊಳಲಾಱದರಸಂ ಪೋಗಲ್ವೇೞ್ದ ನಂತು ಪೊೞಲೊಳಗೆಲ್ಲಂ ತೋಱೆ ಯಾರುಂ ಕೊಳಲಾಱದಿರ್ದೊಡೆ ರತ್ನಕಂಬಳಂಗಳಂ ಕೊಂಡು ಪೋಗಿ ಯಶೋಭದ್ರೆಗೆ ತೋಱಿದೊಡೆ ಲಕ್ಷದೀನಾರಂಗಳಂ ಕೊಟ್ಟು ರತ್ನಕಂಬಳಂಗಳಂ ಕೊಂಡೋರೊಂದಱೊಳಂ ನಾಲ್ಕು ಖಂಡಮಾಗೆ ಮೂವತ್ತೆರಡು ಖಂಡಂಗಳಂ ಮಾಡಿ ಮೂವ ತ್ತಿರ್ವರ್ ಸೊಸೆವಿರ್ಕಳ್ಗೆ ಪಚ್ಚುಗೊಟ್ಟೊಡವರುಂ ತಂತಮ್ಮ ಕೆರ್ಪುಗಳೊಳ್ ತಗುಳ್ಚಿದರೆಂಬ ಮಾತನರಸಂ ಕೇಳ್ದು ಚೋದ್ಯಂಬಟ್ಟವರ ವಿಭೂತಿಯುಂ ನೋೞ್ಪೆನೆಂದು ಮನೆಗೆವರ್ಪುದಂ ಯಶೋಭದ್ರೆ ಕೇಳ್ದರಸರ್ ಬರ್ಪ ಬಟ್ಟೆಯೊಳೆಲ್ಲಂ ಪಂಚರತ್ನಂಗಳಂ ರಂಗವಲ್ಲಿಯನಿಕ್ಕಿ ನೇತ್ರ

ಮಾತನ್ನು ತಾಯಿ ಯಶೋಭದ್ರೆ ಕೇಳಿ ತನ್ನ ಮನೆಗೆ ಋಷಿಗಳನ್ನು ಪ್ರವೇಶಿಸಲು ಬಿಡದ ಹಾಗೆ ಬಾಗಿಲ ಕಾಯುವವರಿಗೆ ಆಜ್ಞೆ ಮಾಡಿದಳು. ಹಾಗೆಯೇ ಕಾಲ ಕಳೆಯಿತು. ಮತ್ತೊಂದು ದಿನಸ ರತ್ನದ್ವೀಪದಿಂದ ಒಬ್ಬ ವರ್ತಕನು ಲಕ್ಷದೀನಾರ (ಚಿನ್ನದ ನಾಣ್ಯ) ಗಳ ಬೆಲೆ ಬಾಳತಕ್ಕ ಎಲ್ಲಾ ರತ್ನಗಳಿಂದ ಕೂಡಿದ ಕಂಬಳಿಗಳನ್ನು ಮಾರಲು ಉಜ್ಜ ಯಿನಿಗೆ ತೆಗೆದುಕೊಂಡು ಬಂದನು. ಆ ಪಟ್ಟಣವನ್ನಾಳುವ ವೃಷಭಾಂಕನೆಂಬ ರಾಜನಿಗೂ ಜ್ಯೋತಿರ್ಮಾಲೆಯೆಂಬ ಮಹಾರಾಣಿಗೂ ಹೀಗೆ ಇಬ್ಬರಿಗೂ ರತ್ನದ ಕಂಬಳಿಗಳನ್ನು ತೋರಿಸಲು, ಅದರ ಬೆಲೆಯೇನೆಂದು ಕೇಳಿದಾಗ ಲಕ್ಷದೀನಾರಗಳೆಂದು ಹೇಳಿದನು ರಾಜನು ಅವನ್ನು ಕ್ರಯಕ್ಕೆ ಕೊಳ್ಳಲಾರದೆ ಆ ವರ್ತಕನನ್ನು ಹೋಗಲು ಹೇಳಿದನು. ಅಂತೂ ಪಟ್ಟಣದಲ್ಲೆಲ್ಲಾ ತೋರಿಸಿದರೂ ಯಾರೂ ಕೊಂಡುಕೊಳ್ಳಲಾರದೆ ಇದ್ದಾಗ ಆ ರತ್ನ ಕಂಬಳಿಗಳನ್ನು ಕೊಂಡುಹೋಗಿ ಯಶೋಭದ್ರೆಗೆ ತೋರಿಸಿದಾಗ, ಆಕೆ ಲಕ್ಷದೀನಾರಗಳನ್ನು ಕೊಟ್ಟು ಅವನ್ನು ಕೊಂಡಳು. ಆಮೇಲೆ ಅವುಗಳಲ್ಲಿ ಪ್ರತಿಯೊಂದನ್ನೂ ನಾಲ್ಕು ತುಂಡುಗ ಳಾಗಿ ಮಾಡಿ ಒಟ್ಟು ಮೂವತ್ತೆರಡು ತುಂಡುಗಳನ್ನು ಮಾಡಿ ತನ್ನ ಮೂವತ್ತೆರಡು ಸೊಸೆಯಂದಿರಿಗೆ ಹಂಚಿಕೊಟ್ಟಳು ಅವರು ಆ ತುಂಡುಗಳನ್ನು ತಂತಮ್ಮ ಪಾದುಕೆ ಗಳಿಗೆ ಸಿಕ್ಕಿಸಿದರು. ಈ ಸಂಗತಿಯನ್ನು ರಾಜನು ಕೇಳಿ ಆಶ್ಚರ್ಯಪಟ್ಟು ಅವರ ವೈಭವವನ್ನು ನೋಡುವೆನೆಂದು ಸುಕುಮಾರಸ್ವಾಮಿಯ ಮನೆ ಬರುತ್ತಿದ್ದನು. ರಾಜನು ಬರುವುದನ್ನು ಯಶೋಭದ್ರೆ ಕೇಳಿ, ರಾಜನು ಬರುವ ದಾರಿಯಲ್ಲೆಲ್ಲ ನೀಲ, ವಜ್ರ, ಪದ್ಮ ರಾಗ, ಮುತ್ತು, ಹವಳ-ಎಂಬ ಐದು ಬಗೆಯ ರತ್ನಗಳಿಂದ ರಂಗೋಲಿ ಹಾಕಿಸಿದಳು.

ವಟ್ಟು ದುಕೂಲ ಚೀನಾದಿ ದಿವ್ಯವಸ್ತ್ರಂಗಳಂ ಪಾಸಿ ಮಣಿಭದ್ರಮಪ್ಪ ಹೇಮ ಮುಕ್ತಾಹಾರಂಗಳಿಂ ತೋರಣಂಗಟ್ಟಿಸಿಯುರಸರ ಬರವಂ ಪಾರುತ್ತಿರೆ ನೃಪತಿಯುಂ ಬಂದು ಸುರೇಂದ್ರಭವನೋಪಮಮಪ್ಪ ಪ್ರಾಸಾದಮಂ ಪೊಕ್ಕು ವಿಸ್ಮಯಚಿತ್ತನಾಗಿ ಸುರಲೋಕಂಬೊಕ್ಕ ಪುಣ್ಯವಂತಂಬೊಲಾಗಳ್ ಮಹಾವಿಭೂತಿಯಿಂ ಶಯ್ಯಾತಳದೊಳಿರ್ದು ಸುಕುಮಾರನೆಲ್ಲಿದನೆಂದು ಬೆಸಗೊಂಡೊಡೆ ಸ್ವಾಮಿ ಆತಂ ಕರಂ ಸಾದು ನಿಮ್ಮ ಬರವುಮನಱಿಯಂ ಪ್ರಾಸಾದದ ಮೇಗಣ ನೆಲೆಯೊಳಿರ್ದನೆಂದೊಡರಸಂ ಬಟಿಯುನಟ್ಟಿಮೆನೆ ತಾಯ್ ಪೋಗಿ ಮಗನೆ ಅರಸರ್ವಂದರ್ ಬಾ ಪೋಪಮೆನೆ ಅರಸರೆಂಬೊರಾರೆನೆ ತಾಯೆಂದಳ್ ನಮ್ಮನಾಳ್ವೊರೆಂದೊಡೆ ನಮ್ಮನಾಳ್ವರುಮೊಳರೆ ಎಂದು ವಿಸ್ಮಯಂಬಟ್ಟು ತಾಯ ವಚನಮಂ ಮಾರ್ಕೊಳಲಾಱದೆ ಬರ್ಪೊನಂ ನರೇಶ್ವರಂ ಕಂಡು ಕಣ್ಬೆತ್ತ ಫಲಮಿಂದು ಪೆತ್ತೆನೆಂದು ಪ್ರತ್ಯಕ್ಷ ಕಾಮದೇವನನಪ್ಪಿಕೊಳ್ವಂತಪ್ಪಿಕೊಂಡು ದಿವ್ಯ ಶಯ್ಯಾತಳದ ಮೇಗೊಡನಿರಿಸಿದಾಗಳ್ ಸ್ವಜನ ಪರಿಜನಂಗಳ್ ಸಿದ್ಧಾರ್ಥಂಗಳಂ ಮಾಂಗಲ್ಯಮೆಂದಿರ್ವರ್ಗಂ ಸೇಸೆಯನಿಕ್ಕಲಾಗಳಾ ಸಿದ್ಧಾರ್ಥಂಗಳ್ ಸುಕುಮಾರಸ್ವಾಮಿಯಾಸನಮನೊತ್ತೆ ಕಟವಮನಲುಗಿಸುವುದುಮಂ ಸೊದರಂ ನೋಡಿದಾಗಳ್ ಕಣ್ಣೀರ್ಗಳ್ ಸುರಿವುದುಮಂ ಕಂಡೀ

ನೇತ್ರ, ಪಟ್ಟು, ದುಕೂಲ, ಚೀನ-ಎಂಬ ಬಗೆಬಗೆಯ ರೇಷ್ಮೆಯ ದಿವ್ಯವಾದ ಬಟ್ಟೆಗಳನ್ನು ಹಾಸಿದಳು. ರತ್ನಗಳಿಂದ ಚೆಲುವಾದ ಚಿನ್ನದ ಮುತ್ತಿನ ಸರಗಳಿಂದ ತೋರಣ ಕಟ್ಟಿಸಿದಳು. ರಾಜನ ಆಗಮನವನ್ನು ಎದುರು ನೋಡುತ್ತಿರಲು ರಾಜನು ಬಂದು, ಇಂದ್ರನ ಅರಮನೆಯನ್ನು ಹೋಲುವ ಉಪ್ಪರಿಗೆ ಮನೆಯನ್ನು ಪ್ರವೇಶಿಸಿದನು. ಆಗ ರಾಜನು ಅಚ್ಚರಿಗೊಂಡವನಾಗಿ ದೇವಲೋಕವನ್ನು ಪ್ರವೇಶಿಸಿದ ಪುಣ್ಯಶಾಲಿಯಂತೆ ಮಹಾ ವೈಭವದಿಂದ ಹಾಸಿಗೆಯ ಮೇಲೆ ಕುಳಿತು, 'ಸುಕುಮಾರನು ಎಲ್ಲಿದ್ದಾನೆ ?' ಎಂದು ಕೇಳಿದನು. ಅದಕ್ಕೆ ಉತ್ತರವಾಗಿ "ಸ್ವಾಮಿ, ಅವನು ಬಹಳ ಸಾಧು. ನೀವು ಬಂದುದನ್ನು ಅವನು ತಿಳಿದಿಲ್ಲ. ಉಪ್ಪರಿಗೆಯ ಮೇಲೆ ಇದ್ದಾನೆ" ಎಂದು ಹೇಳಲು ದೂತರೊಡನೆ ಹೇಳಿ ಕಳುಹಿಸಿ ಅವನನ್ನು ಬರಮಾಡಿ ಎಂದನು. ಆಗ ತಾಯಿ ಯಶೋಭದ್ರೆ ಹೋಗಿ "ಮಗನೇ, ರಾಜರು ಬಂದಿದ್ದಾರೆ ಬಾ, ಹೋಗೋಣ" ಎಂದಳು. ಆಗ ಸುಕುಮಾರನು "ರಾಜರೆಂದರೆ ಯಾರು ?" ಎಂದು ಕೇಳಲು, ತಾಯಿಯು "ನಮ್ಮನ್ನು ಆಳುವವರು" ಎಂದಾಗ ಸುಕುಮಾರನು "ನಮ್ಮನ್ನು ಆಳುವವರೂ ಇರುವರೆ ?" ಎನ್ನುತ್ತ ಆಶ್ಚರ್ಯಪಟ್ಟನು. ತಾಯಿಯ ಮಾತನ್ನು ವಿರೋಧಿಸಲಾರದೆ ಬಂದನು. ಅವನನ್ನು ರಾಜನು ಕಂಡು "ಕಣ್ಣನ್ನು ಪಡೆದದ್ದು ಇಂದು ಸಫಲವಾಯಿತು" ಎಂದುಕೊಂಡು ಪ್ರತ್ಯಕ್ಷವಾಗಿ ಮನ್ಮಥನನ್ನೇ ಅಪ್ಪಿಕೊಳ್ಳುವಂತೆ ಅವನನ್ನು ಅಪ್ಪಿಕೊಂಡು ಶ್ರೇಷ್ಠವಾದ ಆ ಹಾಸಿಗೆಯ ಮೇಲೆ ತನ್ನ ಜೊತೆಯಲ್ಲಿ ಕುಳ್ಳಿರಿಸಿದನು. ಆಗ ಸ್ವಜನರೂ ಸೇವಕರೂ ಬಿಳಿ ಸಾಸವೆಗಳನ್ನು ಮಂಗಳಕರವೆಂದು ಇಬ್ಬರಿಗೂ ಮಂತ್ರಾಕ್ಷತೆಯಾಗಿ ಹಾಕಿದರು. ಆ ಬಿಳಿ ಸಾಸವೆಕಾಳುಗಳು ಸುಕುಮಾರಸ್ವಾಮಿಯ ಆಸನದಲ್ಲಿ ಒತ್ತಿದುದರಿಂದ ಸೊಂಟ ಅಲ್ಲಾಡಿಸಿದುದನ್ನೂ

ಗಳೀತಂಗೆ ಬ್ಯಾದಿಗಳೆಂದು ಬಗೆದಿರ್ಪ್ಪಿನಂ ಮಜ್ಜನಕ್ಕೆೞ್ತನ್ನಿಮೆಂದೊಡಂತೆಗೆಯ್ವೆಮೆಂದು ಮಜ್ಜನಂಗೊಂಡಮರಸನ್ನಿಭ ಮಣಿಕುಟ್ಟಿಮಮಪ್ಪ ಬಾವಿಯುಂ ಪೊಕ್ಕು ಮಿಂದಲ್ಲಿಯನರ್ಘ್ಯಮಪ್ಪ ತನ್ನ ಬೆರಲ ಮಾಣಿಕದುಂಗುರಂ ಬಿಟ್ಟುದನಱಸಲ್ವೇಡಿ ಛಿದ್ರಕದ್ವಾರದ ತೂಂತನುರ್ಚಿ ನೀರಂ ಕಳೆದಾಗಳಿಂದ್ರನ ಭಂಡಾರಂ ತೆಱೆದಂತಪ್ಪ ಲೇಸಪ್ಪ ನಾನಾಮಣಿಯ ವಿಚಿತ್ರ ಭೂಷಣಂಗಳಂ ಪಲವುಮಂ ಕಂಡು ಮಹಾಶ್ಚರ್ಯಭೂತನಾಗಿ ನೋಡುತ್ತಿರ್ಪನ್ನೆಗಮಾರೋಗಿಸಲೆೞ್ತನ್ನಿಮೆಂದಾಗಳ್ ಪರಿಯಣದ ಮೊದಲೊಳ್ ಸುಕುಮಾರಂ ಬೆರಸು ನಾನಾ ಪ್ರಕಾರದಿನಿಯವಪ್ಪುಣಿಸುಗಳನುಣುತ್ತಂ ಸುಕುಮಾರಸ್ವಾಮಿ ಅರ್ಧಾಹಾರಮಂ ನುಂಗುಗುಮರ್ಧಾಹಾರಮನುಗುೞ್ಗುಮದಂ ನೋಡಿ ಇದುವುಮೊಂದು ಕುತ್ತಂ ಆಹಾರದ ಮೋಗರುಚಿಯೆಂದು ಬಗೆದುಣಿಸು ಸಮೆದ ಬೞಿಕ್ಕೆ ಗಂಧ ತಾಂಬೂಲ ಮಾಲ್ಯ ವಸ್ತ್ರಾಭರಣಂಗಳಂ ತಂದು ಕೊಟ್ಟಾಗವಂ ತೊಟ್ಟುಟ್ಟು ಪಸದನಂಗೊಂಡು ಸುಖ ಸಂಕಥಾ ವಿನೋದದಿಂದಿರ್ದೊಡೆ ಯಶೋಭದ್ರೆಯನರಸನಿಂತೆಂದು ಬೆಸಗೊಂಡನಬ್ಬಾ ಎಮ್ಮ ತಮ್ಮನ ಕಟಿಪ್ರದೇಶದ ರೋಗಕ್ಕಂ ಕಣ್ಣನೀರ್ ಬರ್ಪ್ಪುದರ್ಕಂ

ದೀಪ ನೋಡಿದಾಗ ಕಣ್ಣೀರು ಸುರಿವುದನ್ನೂ ಕಂಡು ಈತನಿಗೆ ರೋಗಗಳಿವೆಯೆಂದು ಭಾವಿಸಿಕೊಂಡಿದ್ದನು. ಅಷ್ಟರಲ್ಲಿ "ಸ್ನಾನಕ್ಕೆ ಏಳಿ, ಬನ್ನಿ" ಎನ್ನಲು 'ಹಾಗೆಯೇ ಮಾಡುವೆವು' ಎಂದು ಸ್ನಾನ ಮಾಡಲು ಉದ್ಯುಕ್ತನಾಗಿ ದೇವಲೋಕದ್ದಕ್ಕೆ ಸಮಾನವಾದ ರತ್ನಮಯವಾದ ನೆಲಗಟ್ಟುಳ್ಳ ಕೆರೆಗೆ ಹೋಗಿ ಸ್ನಾನ ಮಾಡಿದನು. ಆಗ ತನ್ನ ಬೆರಳಿನಲ್ಲಿದ್ದ ಅಮೂಲ್ಯವಾದ ಉಂಗುರ ಬಿದ್ದುಹೋಗಲು, ಅದನ್ನು ಹುಡುಕುವುದಕ್ಕಾಗಿ ಆ ಕೆರೆಯ ಎದುರಿನ ತೂಬನ್ನು ತೆಗೆದು ನೀರನ್ನು ಬಿಟ್ಟನು. ಆಗ ಅಲ್ಲಿ ದೇವೇಂದ್ರನ ಖಜಾನೆಯನ್ನೇ ತೆರೆದ ರೀತಿಯಲ್ಲಿ ಶ್ರೇಷ್ಠವಾದ ಬಗೆಬಗೆಯ ರತ್ನಗಳ ವಿಚಿತ್ರವಾದ ಹಲವು ಆಭರಣಗಳನ್ನು ಕಂಡು ಬಹಳ ಆಶ್ಚರ್ಯಪಟ್ಟವನಾಗಿ ನೋಡುತ್ತಿದ್ದನು. ಅಷ್ಟರಲ್ಲಿ ರಾಜನನ್ನೂ ಸುಕುಮಾರನನ್ನೂ 'ಊಟಕ್ಕೆ ಬನ್ನಿರಿ' ಎಂದು ಕರೆಯಲು ರಾಜನು ಸುಕುಮಾರನೊಂದಿಗೆ ಊಟದ ತಟ್ಟೆಯ ಮುಂದೆ ಕುಳಿತುಕೊಂಡು ಹಲವು ವಿಧದ ಸವಿಯಾದ ಆಹಾರಸನ್ನು ಉಣ್ಣುತ್ತ ಇರಲು, ಸುಕುಮಾರಸ್ವಾಮಿ ಆಹಾರದ ಅರ್ಧಾಂಶವನ್ನು ನುಂಗುತ್ತಿದ್ದನು, ಇನ್ನುಳಿದ ಅರ್ಧಾಂಶ ಆಹಾರವನ್ನು ಉಗುಳುತ್ತಿದ್ದನು. ಅದನ್ನು ಅರಸನು ನೋಡಿ "ಇದು ಒಂದು ಬಗೆಯ ರೋಗ ಊಟದ ಮೇಲೆ ರುಚಿಯಿಲ್ಲದುದು" ಎಂದು ಭಾವಿಸಿಕೊಂಡನು. ಊಟವಾದ ನಂತರ ಗಂಧ, ತಾಂಬೂಲ, ಹೂಮಾಲೆ, ಉಡಿಗೆ, ತೊಡಿಗೆಗಳನ್ನು ತಂದು ಕೊಡಲು, ಅವನ್ನು ತೊಟ್ಟು ಉಟ್ಟು ಅಲಂಕಾರ ಮಾಡಿಕೊಂಡು ಸಂತೋಷದ ಮಾತುಗಳ ವಿನೋದದಿಂದ ಇದ್ದರು. ಆಗ ಅರಸನು ಯಶೋಭದ್ರೆಯನ್ನು ಕುರಿತು ಹೀಗೆ ಪ್ರಶ್ನಿಸಿದನು : "ಅಮ್ಮಾ, ನನ್ನ ತಮ್ಮನಾದ ಸುಕುಮಾರನಿಗೆ ಸೊಂಟದ ರೋಗಕ್ಕೂ ಕಣ್ಣೀರು ಸುರಿಯುವುದಕ್ಕೂ ಊಟ ಸೇರದಿರುವುದಕ್ಕೂ

**ಅರುಚಿಗಮೇಕೆ ಮದ್ದಂ ಮಾಡಿಸಿದಿರಿಲ್ಲೆನೆ ದೇವಾ ಆತಂಗಿವು ಕುತ್ತಮಲ್ಲವು ಸೇಸೆಯಿಕ್ಕಿದ ಸರುಸಪಂಗಳೊತ್ತೆ ಸೈರಿಸಲಾಱಂ ಮತ್ತೆ ಆವ ಕಾಲಮುಂ ಮಾಣಿಕದ ಬೆಳಗಿನೊಳಿರ್ಪುದಱಿಂದಂ ಸೊಡರ ಬೆಳಗಿಂಗೆ ಸೈರಿಸದೆ ಕಣ್ಣನೀರ್ ಬರ್ಕುಂ ಮತ್ತಂ ಕಮಳ ನೀಳೋತ್ಪಳದೊಳ್ ಪಾಸಿಸಿದಕ್ಕಿಯೊಳ್ ಪೆಱವಕ್ಕಿಯುಂ ನೀಮುಂ ಬಂದೊಡೆ ಬೆರಸಿಯುಟ್ಟುದು ಕೂೞುಮಪ್ಪುದಱಿಂ ಪಾಸಿಸಿದಕ್ಕಿಯ ಕೂೞಂ ನುಂಗುಗುಮುೞಿದ ಕೂೞನುಗುೞ್ಗುಮದಱಿಂದೀತಂಗೀಯವಸ್ಥೆಗಳಾದುವೆನೆ ಕೇಳ್ದು ವಿಸ್ಮಯಂಬಟ್ಟು ಈತನ ಕ್ಷಣಮಾತ್ರದ ಭೋಗಕ್ಕಂ ಸುಖಕ್ಕಂ ಎಮ್ಮೆಲ್ಲಾ ಕಾಲಮರಸುತನಂ ಗೆಯ್ವಲ್ಲಿಯೊಳಪ್ಪ ಭೋಗೋಪಭೋಗಂಗಳ್ ದೊರೆಯಲ್ಲವದಱಿಂದೀ ಲೋಕದೊಳೀತನೆ ಪರಮಾರ್ಥಂ ಸುಖಿಯೆಂದೊಸೆದರಸನವಂತಿ ಸುಕುಮಾರನೆಂದು ಪೆಸರನಿಟ್ಟಂ ಯಶೋಭದ್ರೆಯುಮರಸನನೇಕ ವಸ್ತುವಾಹನಂಗಳಿಂದಂ ಪೂಜಿಸಿ ಕೞಿಪಿದೊಳಿಂತು ಸುಕುಮಾರಸ್ವಾಮಿಗೆ ಸುಖದಿಂದಂ ಕಾಲಂ ಸಲೆ ಮತ್ತೊಂದು ದಿವಸಂ ಯಶೋಭದ್ರೆಯ ಭ್ರಾತರರಪ್ಪ ದಯಾಭದ್ರರೆಂಬ ರಿಸಿಯರ್ ಮುನ್ನಮವರ ಪಕ್ಕದೆ ಸೂರದತ್ತಂ ಧರ್ಮಂ ಕೇಳ್ದು ವೈರಾಗ್ಯಮಾಗಿ ಪುತ್ರಮುಖಂಗಂಡು ತಪಂಬಟ್ಟೊನಾತನ ಮಗನುಂ ರಿಸಿಯರಂ ಕಂಡಾಗಳೆ ತಪಂಬಡುಗು**

ಏಕೆ ಔಷಧ ಮಾಡಿಸಿಲ್ಲ ?" ಎಂದು ಕೇಳಿದಾಗ ಆಕೆ "ಒಡೆಯರೆ, ಅವನಿಗೆ ಇವು ರೋಗಗಳಲ್ಲ. ಮಂತ್ರಾಕ್ಷತೆಯಾಗಿ ಹಾಕಿದ ಬಿಳಿ ಸಾಸವೆಗಳು ಒತ್ತಿದುದರಿಂದ ಸಹಿಸದಾದನು. ಅಲ್ಲದೆ ಯಾವಾಗಲೂ ಮಾಣಿಕ್ಯ ರತ್ನದ ಬೆಳಕಿನಲ್ಲಿ ಅವನು ಇರುವುದರಿಂದ ದೀಪದ ಬೆಳಕಿಗೆ ಸಹಿಸಲಾರದೆ ಅವನ ಕಣ್ಣಿನಲ್ಲಿ ನೀರು ಬರುತ್ತದೆ. ಅದೂ ಅಲ್ಲದೆ ನೀವು ಬಂದ ಸಂದರ್ಭದಲ್ಲಿ ತಾವರೆ ನೈದಿಲೆ ಹೂಗಳ ಸುವಾಸನೆಯಿಂದ ಕೂಡಿದ ಅಕ್ಕಿಯೊಂದಿಗೆ ಬೇರೆ ಅಕ್ಕಿಯನ್ನೂ ಮಿಶ್ರಮಾಡಿ ಬೇಯಿಸಿದ ಅನ್ನವನ್ನು ಬಡಿಸಿದ್ದರಿಂದ ಅವನು ಸುವಾಸನೆಯ ಅಕ್ಕಿಯ ಅನ್ನವನ್ನು ನುಂಗುತ್ತಿದ್ದನು. ಉಳಿದ ಅನ್ನವನ್ನು ಉಗುಳುತ್ತಿದ್ದನು. ಆದುದರಿಂದಲೇ ಇವನಿಗೆ ಈ ಅವಸ್ಥೆಗಳಾಗಿವೆ" ಎಂದು ಹೇಳಿದಳು. ಅರಸನು ಇದನ್ನು ಕೇಳಿ ಆಶ್ಚರ್ಯಪಟ್ಟನು. "ಈತನ ಒಂದು ಕ್ಷಣದ ಭೋಗಕ್ಕೂ ಸುಖಕ್ಕೂ ನನ್ನ ಎಲ್ಲಾ ಕಾಲವೂ ಅರಸುತನ ನಡೆಸಿದಾಗ ಉಂಟಾದ ಭೋಗ-ಉಪಭೋಗಗಳು ಸಮಾನವಾಗವು. ಆದುದರಿಂದ ಲೋಕದಲ್ಲಿ ನಿಜವಾಗಿಯೂ ಈತನೇ ಸುಖಿ" ಎಂದು ಪ್ರೀತಿಗೊಂಡವನಾಗಿ ಅರಸನು ಅವನಿಗೆ 'ಅವಂತಿ ಸುಕುಮಾರ' ಎಂದು ಹೆಸರನ್ನಿಟ್ಟನು. ಯಶೋಭದ್ರೆ ರಾಜನನ್ನು ಹಲವಾರು ವಿಧದ ವಸ್ತುಗಳಿಂದಲೂ ವಾಹನಗಳಿಂದಲೂ ಸತ್ಕರಿಸಿ ಕಳುಹಿಸಿದಳು. ಹೀಗೆ ಸುಕುಮಾರಸ್ವಾಮಿಗೆ ಕಾಲವು ಸುಖಮಯವಾಗಿ ಸಾಗುತ್ತಿತ್ತು. ಅನಂತರ ಒಂದು ದಿವಸ ಯಶೋಭದ್ರೆಯ ಸಹೋದರರಾದ ದಯಾಭದ್ರರೆಂಬ ಋಷಿಗಳು ಉಜ್ಜಯಿನಿಗೆ ಬಂದರು. ಹಿಂದೆ ಅವರ ಬಳಿಯಲ್ಲಿದ್ದು ಸೂರದತ್ತನು (ಸುಕುಮಾರನ ತಂದೆ) ಧರ್ಮಶ್ರವಣ ಮಾಡಿ, ವೈರಾಗ್ಯ ತಾಳಿ, ಮಗನು ಹುಟ್ಟಿದೊಡನೆ ತಪಸ್ಸಿಗೆ ತೆರಳಿದ್ದನು. ಆತನ ಮಗನಾದ ಸುಕುಮಾರನೂ ಋಷಿಗಳನ್ನು ಕಂಡ ಕೂಡಲೇ ತಪಸ್ಸಿಗೆ

ಮೆಂಬುದಂ ಮುನ್ನೆ ನೈಮಿತ್ತಿಕರಾದೇಶಂಗೆಯ್ದಿರ್ದರ್ ಮತ್ತಂ ದಯಾಭದ್ರರೆಂಬ ರಿಸಿಯರ್ ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ ವಿಹಾರಿಸುತ್ತಂ ಬಪ್ಪ ದಿವ್ಯಜ್ಞಾನಿಗಳ್ ಸುಕುಮಾರಸ್ವಾಮಿಗೆ ನಾಲ್ಕುತಿಂಗಳುಮಯ್ದುದಿವಸಮಾಯುಷ್ಯಪ್ರಮಾಣ ಮನಱಿದುಪಕಾರಾರ್ಥಮುಜ್ಜೇನಿಗೆ ವಂದು ಸುಕುಮಾರಸ್ವಾಮಿಯ ಮಾಡದ ಪೆಱಗಣ ನಂದನ ವನದೊಳಗಣ ಜಿನಾಲಯದೊಳಾಷಾಢ ಮಾಸದ ಚತುರ್ದಶಿಯ ದಿವಸದಂದು ಪಱವೊೞ್ತು ಬಂದು ಜೋಗುಗೊಂಡಿರ್ದರನ್ನೆಗಂ ವನಪಾಲಕರ್ ಪೋಗಿ ಯಶೋಭದ್ರೆಗೆ ರಿಸಿಯರ ಬರವಂ ಪೇೞ್ದೊಡಾಕೆಯುಂ ಬಂದು ದೇವರುಮಂ ರಿಸಿಯರುಮಂ ಬಂದಿಸಿ ಭಟ್ಟಾರಾ ನೀಮಿಲ್ಲಿಗೇಕೆ ಬಂದಿರಿಲ್ಲಿಂದಂ ಪೊಱವೊೞಲೊಳ್ ಪೆಱವುೞಿ ಬಸದಿಯಿಲ್ಲಾ ಎಂದೊಡೆ ಭಟ್ಟಾರರೆಂದರಬ್ಬಾ ನಿಡುವಯಣಂ ಬಂದು ಸೇದೆಗೆಟ್ಟೆಂತಾನುಮಿಲ್ಲಿಗೆಯಾಸತ್ತು ಜೋಗಿನ ಪೊೞ್ತಱೊಳೆಯ್ದೆ ಬಂದು ಜೋಗುಗೊಂಡಿರ್ದೆಮೆತ್ತಲುಂ ಪೋಗಲಾಗದೆನೆ ಅಂತಪ್ಪೊಡೆ ಭಟಾರಾ ನಿಮ್ಮನೊಂದಂ ಬೇಡಿ ದಪ್ಪೆಂ ನಾಲ್ಕುತಿಂಗಳುಮೇನುಮನೋದದೆ ಮೋನಂಗೊಂಡು ಬಸದಿಯಂಗಳದೊಳ್ ನಡಪಾಡ ದೊಳಗಣಡಂಗಿರ್ದು ಜೋಗು ನೆಱೆದಂದು ಬಿಜಯಂಗೆಯ್ಯೆವೆಂದೊಡಂತೆಗೆಯ್ವೆಮೆಂದು

ತೆರಳುವನೆಂಬುದನ್ನು ಹಿಂದೆಯೇ, ಜ್ಯೋತಿಷ್ಯ ತಿಳಿದವರು ತಿಳಿಸಿದ್ದರು. ಆ ಮೇಲೆ ದಯಾಭದ್ರರೆಂಬ ಋಷಿಗಳು ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖ ಗಳಲ್ಲಿ ಸಂಚಾರ ಮಾಡುತ್ತ, ದಿವ್ಯಜ್ಞಾನಿಗಳಾದ ಅವರು ಸುಕುಮಾರಸ್ವಾಮಿಗೆ ನಾಲ್ಕು ತಿಂಗಳು ಐದು ದಿವಸ ಮಾತ್ರ ಆಯುಷ್ಯವಿರುವುದನ್ನು ತಿಳಿದು ಉಪಕಾರ ಮಾಡು ವುದಕ್ಕಾಗಿಯೇ ಉಜ್ಜಯಿನಿಗೆ ಬಂದರು. ಹಾಗೆ ಬಂದು ಸುಕುಮಾರಸ್ವಾಮಿಯ ಮನೆಯ ಹಿಂದಣ ಉದ್ಯಾನದೊಳಗಿರುವ ಜಿನಾಲಯದಲ್ಲಿ ಆಷಾಢಮಾಸದ ಚತುರ್ದಶಿಯ ದಿವಸ ಸಂಜೆ (ಹರೆ ಬಾರಿಸುವ ಹೊತ್ತು) ಬಂದು ಯೋಗಸ್ಥ ರಾಗಿದ್ದರು. ಅಷ್ಟರಲ್ಲಿ ಉದ್ಯಾನಪಾಲಕರು ಹೋಗಿ, ಋಷಿಗಳು ಬಂದ ಸಂಗತಿ ಯನ್ನು ಯಶೋಭದ್ರೆಗೆ ತಿಳಿಸಿದರು. ಆಕೆ ಬಂದು ಜಿನೇಂದ್ರರನ್ನೂ ಋಷಿ ಗಳನ್ನೂ ವಂದಿಸಿ ಋಷಿಗಳೊಡನೆ–"ಸ್ವಾಮೀ, ನೀವು ಈ ಸ್ಥಳಕ್ಕೆ ಯಾಕೆ ಬಂದಿರಿ ? ಇಲ್ಲಿಗಿಂತ ಈ ಪಟ್ಟಣದ ಹೊರಗೆ ಬೇರೆ ಕಡೆ ಜಿನದೇವಾಲಯವಿರಲಿಲ್ಲವೆ ?" ಎಂದು ಕೇಳಿದಳು. ಆಗ ಋಷಿಗಳು "ಅವ್ವಾ, ನಾವು ಬಹಳ ದೂರದಿಂದ ಪ್ರಯಾಣ ಮಾಡಿ ಕೊಂಡು ಬಂದುದರಿಂದ ಬಹಳ ಬಳಲಿದ್ದೇವೆ. ಹೇಗಾದರೂ ಈ ಸ್ಥಳಕ್ಕೆ ಆಯಾಸ ಗೊಂಡು ಯೋಗಾಭ್ಯಾಸದ ಹೊತ್ತಿಗೆ ಬಂದು ತಲಪಿ ಯೋಗ ಮಗ್ನರಾಗಿದ್ದೇವೆ. ಇಲ್ಲಿಂದ ಎಲ್ಲಿಗೂ ಹೋಗಲಾಗದು" ಎಂದು ಹೇಳಿದರು. ಆಗ ಆಕೆ–"ಹಾಗಿದ್ದರೆ ಪೂಜ್ಯರೇ, ನಿಮ್ಮಲ್ಲಿ ಒಂದನ್ನು ನಾನು ಬೇಡಿಕೊಳ್ಳುತ್ತೇನೆ. ನೀವು ನಾಲ್ಕು ತಿಂಗಳು ಏನನ್ನೂ ಪಠಿಸದೆ, ಮೌನವ್ರತ ತಾಳಿ, ಜಿನಾಲಯದ ಅಂಗಣದಲ್ಲಿ ಅಡ್ಡಾಡದೆ ಒಳಗೆಯೇ ಅಡಗಿದ್ದು, ತಪಸ್ಸು ಕೊನೆಗೊಂಡಾಗ ನಿಮ್ಮ ಪ್ರಯಾಣ ಬೆಳಸಿರಿ" ಎಂದಳು.

ಭಟಾರರಿರ್ದರ್ ಮತ್ತಿತ್ತಲ್ ಸುಕುಮಾರಸ್ವಾಮಿಯುಂ ಸರ್ವತೋಭದ್ರಮೆಂಬುತ್ತುಂಗ ವಿಚಿತ್ರಮಾಗಿರ್ದ ಪ್ರಾಸಾದದ ಮೇಗೇೞನೆಯ ನೆಲೆಯೊಳ್ ಕಾರ್ತಿಕಮಾಸದ ಪುಣ್ಣಮಿಯಂದು ಸುಖದಿಂದೆ ಉಂದಿರ್ದನನ್ನೆಗಮಿತ್ತ ದಯಾಭದ್ರ ಭಟಾರರ್ಗ್ಗೆ ಜೋಗು ನೆಱೆದು ಯಶೋಭದ್ರೆಯ ಬೇಡಿದ ಮೋನದ ದಿವಸದ ಪ್ರಮಾಣಾವಸಾನದೊಳ್ ಬೈಗಿರುಳಿನ ಪಂಚಮಹಾಶಬ್ದದ ಪೊೞ್ತುಱೊಳ್ ತ್ರಿಲೋಕಪ್ರಜ್ಞಪ್ತಿಯೆಂಬುದಂ ಮೃದು ಮಧುರ ಗಂಭೀರ ಸ್ವರದಿಂ ಭಟಾರರ್ ಪರಿವಿಡಿಗೆಯ್ವಾಗಳ್ ಅಧೋಲೋಕ ತಿರ್ಯಗ್ಲೋಕಂಗಳಿರ್ದ ಸ್ವರೂಪಮುಂ ಪ್ರಮಾಣಮುಮನೋದಿ ಊರ್ಧ್ವಲೋಕವ್ಯಾವರ್ಣನೆಯುಂ ಪೇೞ್ವಾಗಳಚ್ಯುತ ಕಲ್ಪದ ಪದ್ಮಗುಲ್ಮವಿಮಾನಮುಂ ವ್ಯಾವರ್ಣಿಸುವುದಂ ಸುಕುಮಾರಸ್ವಾಮಿ ಕೇಳ್ದು ಜಾತಿಸ್ಮರನಾಗಿಯಾನಿಲ್ಲಿ ಪುಟ್ಟಿರ್ದೆನೆಂಬುದನಱಿದು ಅಹೋ ಸುರಲೋಕಮೆಂಬಮೃತ ಸಮುದ್ರದ ನೀರೆಲ್ಲಮಂ ಕುಡಿದು ತಣಿಯದನೀ ಮನುಷ್ಯಭವದ ಸುಖಮೆಂಬ ಪುಲ್ವನಿಯೊಳ್ ಸಿಲ್ಕಿ ಶಿವಸುಖಮನೆಯ್ದಿಸುವ ಸಚ್ಚಾರಿತ್ರದಿಂ ಬೞ್ಚಿದೆನೆಂದು ತನ್ನಂ ತಾಂ ನಿಂದಿಸುತ್ತಂ ಮಂಚದಿಂದಿೞಿದು ಮಾಡದೊಳ

"ಹಾಗೆಯೇ ಮಾಡುವೆವು" ಎಂದು ನುಡಿದು ಋಷಿಗಳಿದ್ದರು. ಆಮೇಲೆ ಇತ್ತ ಸುಕುಮಾರಸ್ವಾಮಿ ಸರ್ವತೋಭದ್ರವೆಂಬ ಅತ್ಯಂತ ಎತ್ತರವಾದ ಮತ್ತು ವಿಶೇಷ ಆಶ್ಚರ್ಯಕರವಾದ ಉಪ್ಪರಿಗೆ ಮನೆಯ ಮೇಲೆ ಏಳನೆಯ ಅಂತಸ್ತಿನಲ್ಲಿ ಕಾರ್ತಿಕಮಾಸದ ಹುಣ್ಣಿಮೆಯಂದು ಸುಖವಾಗಿ ಮಲಗಿದ್ದನು. ಅದೇ ಸಮಯಕ್ಕೆ ಈ ಕಡೆಯಲ್ಲಿ ದಯಾಭದ್ರ ಮುನಿಗಳ ತಪಸ್ಸು ಪೂರ್ಣವಾಯಿತು. ಯಶೋಭದ್ರೆ ಪ್ರಾರ್ಥಿಸಿಕೊಂಡ ಮೌನ ದಿವಸದ ಅವಧಿ ಕೊನೆಗೊಂಡಿತು. ಅಂದಿನ ರಾತ್ರಿಯ ಕೊನೆಯ ವೇಳೆ (ಮುಂಜಾವದಲ್ಲಿ) ಶೃಂಗ, ತಮಟೆ, ಶಂಖ, ಭೇರಿ, ಜಯಘಂಟೆ–ಎಂಬ ಐದುಬಗೆಯ ವಾದ್ಯಗಳ ಬಾಜನೆಯ ಸಮಯದಲ್ಲಿ ಋಷಿಗಳು ಮೂರುಲೋಕಗಳ ಆಕಾರಾದಿಗಳನ್ನು ನಿರೂಪಿಸುವ ಶಾಸ್ತ್ರವನ್ನು ಮೆಲ್ಲು ಇಂಪು ಗುಣ್ಪುಳ್ಳ ಸ್ವರದಿಂದ ಅನುಕ್ರಮವಾಗಿ ಪಠನ ಮಾಡಿದರು. ಕೆಳಗಿನ ಲೋಕ, ಮೃಗಪಕ್ಷಿ (ತಿರ್ಯಕ್) ಲೋಕಗಳು ಇರುವ ಸ್ವರೂಪವನ್ನೂ ಅವುಗಳ ಪ್ರಮಾಣವನ್ನೂ ಪಠಿಸಿದರು. ಅನಂತರ ಮೇಲಿನ ಲೋಕದ ವರ್ಣನೆಯನು ಹೇಳಿ, ಮತ್ತೆ ಅಚ್ಯುತ ಕಲ್ಪದ 'ಪದ್ಮಗುಲ್ಮ' ಎಂಬ ಮಹಾಭವನವನ್ನು ವರ್ಣನೆ ಮಾಡಿದನು. ಇದೆಲ್ಲವನ್ನೂ ಸುಕುಮಾರಸ್ವಾಮಿ ಕೇಳಿದನು. ಆಗ ಅವನಿಗೆ ಪೂರ್ವಜನ್ಮಸ್ಮರಣೆಯುಂಟಾಯಿತು. ತಾನೀಗ ಇಲ್ಲಿ ಹುಟ್ಟಿದ್ದೇನೆ–ಎಂಬುದನ್ನು ಅವನು ತಿಳಿದುಕೊಂಡನು. ಆಹಾ, ನಾನು ದೇವಲೋಕವೆಂಬ ಸುಧಾಸಮುದ್ರದ ನೀರನ್ನೆಲ್ಲ ಕುಡಿದೂ ತೃಪ್ತಿಗೊಳ್ಳದೆ ಈ ಮನುಷ್ಯ ಜನ್ಮದ ಸುಖವೆಂಬ ಹುಲ್ಲಿನಹನಿಗೆ ಸಿಕ್ಕಿ ಮಂಗಳಕರ ಸುಖವನ್ನು ಒದಗಿಸುವ ಒಳ್ನಡತೆಯಿಂದ ಕೆಳಕ್ಕೆ ಜಾರಿಹೋಗಿದ್ದೇನೆ"–ಎಂದು ತನ್ನನ್ನೂ ತಾನೇ ನಿಂದಿಸಿಕೊಂಡನು. ಮಂಚದಿಂದ ಇಳಿದು, ಮನೆಯಲ್ಲಿದ್ದ ಬಟ್ಟೆಗಳನ್ನೆಲ್ಲ ತೆಗೆದುಕೊಂಡು ಉಪ್ಪರಿಗೆ ಮನೆಯ ಹಿಂಗಡೆಯ ಕಿಟಕಿಗೆ ಕಟ್ಟಿಕೊಂಡು ಒಂದೊಂದರ

ಗಿರ್ದ ವಸ್ತ್ರಂಗಳಂ ತೆಗೆದುಕೊಂಡು ಪ್ರಾಸಾದದ ಪೆಱಗಣ ಗವಾಕ್ಷಜಾಳದೊಳ್ ಕಟ್ಟಿ ಕೊಂಡೊಂದೊಂದಱ ತುದಿಯೊಳೊಂದೊಂದು ವಸ್ತ್ರಮಂ ತಗುೞ್ಚಿ ಪಿಡಿದಿೞಿದು ಜಿನಾಲಯ ಮನೆಯ್ದಿ ದೇವರ್ಗೆ ನಮಸ್ಕಾರಂಗೆಯ್ದು ದಯಾಭದ್ರ ಭಟಾರರ್ಗೆಱಗಿ ಪೊಡೆವಟ್ಟು ದೀಕ್ಷೆಯಂ ಪ್ರಸಾದಂಗೆಯ್ದೆನ್ನಂ ಸಂಸಾರಾರ್ಣವದತ್ತಣಿಂದೆತ್ತಿಮೆಂದೊಂಗೆ ಭಟಾರರ್ ಮೂಱು ದಿವಸಂ ನಿನಗಾಯುಷ್ಯಮೆಂದೊಡೀಗಳೀ ನಿಸ್ಸಾರಮಪ್ಪ ದೇಹದಿಂ ಸಾರಮಪ್ಪ ತಪಮಂ ಕೈಕೊಂಡು ಪಲ ಕಾಲಂ ನೆಗೞಲ್ ಪೆತ್ತೆನಿಲ್ಲ ನಿಸ್ಸಾರಮಪ್ಪ ಭೋಗದೊಳ್ ಸಿಲ್ಕಿ ಅಮೇಧ್ಯದೊಳ್ ಕ್ರೀಡಿಸುವ ಬಾಳಕಂಬೊಲ್ ಕಾಲಮಂ ಬಱಿದೆ ಕಳೆದೆನೆಂದು ತನ್ನನಾದಮಾನುಂ ನಿಂದಿಸಿ ತತ್ಪಾದಮೂಲ ದೊಳ್ ತಪಂಬಟ್ಟು ಪಂಚಮಹಾಬ್ರತಂಗಳನೇಱಿಸಿಕೊಂಡು ಪಡಿಕಮಣಂಗೇಳ್ದು ತದನಂತರಂ ನಿಶ್ಚಯ ಸಮ್ಯಕ್ತ್ವಮಂ ಕೈಕೊಂಡಿಂ ಬೞಿಕ್ಕೆ ಮಹಾಕಾಳಮೆಂಬ ಶ್ಮಶಾನಕ್ಕೆ ಪೋಗಿ ಯಾವ ಜ್ಜೀವಮಾಹಾರಕ್ಕೆ ನಿವೃತ್ತಿಗೆಯ್ದು ಪ್ರಾಯೋಪಗಮನ ವಿಧಾನದಿಂ ಪ್ರಚ್ಛನ್ನಮಪ್ಪೆಡೆಯೊಳ್ ಮೃತಕ ಸೆಜ್ಜೆಯೊಳಿರ್ದು ಸನ್ಯಸನಂಗೆಯ್ದು ಧರ್ಮಧ್ಯಾನ ಶುಕ್ಲಧ್ಯಾನಂಗಳಂ ಧ್ಯಾನಿಸುತ್ತಿ ರ್ಪನ್ನೆಗಂ ಇತ್ತ ವಾಯುಭೂತಿಯಪ್ಪ ಭವದಂದಿನತ್ತಿಗೆಯಪ್ಪ ಸೋಮದತ್ತೆಯೆಂಬೊಳ್ ನಿದಾನಂಗೆಯ್ದು ತನ್ನ ನಾಲ್ವರ್ ಮಕ್ಕಳುಂ ತಾನುಂ ಸಂಸಾರಸಮುದ್ರದೊಳ್ ನೀಡುಂ ತಿಱ್ಱನೆ

ತುದಿಗೆ ಒಂದೊಂದು ಬಟ್ಟೆಯನ್ನು ಕಟ್ಟಿ, ಆದನ್ನು ಹಿಡಿದು ಕೆಳಗಿಳಿದು ಜಿನಾಲಯಕ್ಕೆ ಬಂದು ಜಿನೇಶನನ್ನು ವಂದಿಸಿದನು. ದಯಾಭದ್ರ ಮುನಿಗಳಿಗೆ ಸಾಷ್ಟಾಂಗ ವಂದಿಸಿ "ನನಗೆ ದೀಕ್ಷೆಯನ್ನು ಅನುಗ್ರಹಿಸಿ ನನ್ನನ್ನು ಸಂಸಾರ ಸಮುದ್ರದಿಂದ ಎತ್ತಿರಿ" ಎಂದು ಹೇಳಿದನು. ಆಗ ಭಟಾರರು ಅವನೊಡನೆ–"ನಿನಗೆ ಮೂರು ದಿವಸದ ಆಯುಷ್ಯ ಮಾತ್ರ ವಿರುವುದು" ಎಂದರು. ಆಗ ಸುಕುಮಾರಸ್ವಾಮಿ–"ಈಗ ಈ ನಿಸ್ಸಾರವಾದ ಶರೀರದಿಂದ ಸಾರವತ್ತಾದ ತಪಸ್ಸನ್ನು ಕೈಕೊಂಡು ನಾನು ಬಹುಕಾಲ ಆಚರಿಸಲಿಲ್ಲ. ನಿಸ್ಸಾರ ವಾದ ಸುಖಾನುಭವದಲ್ಲಿ ಸಿಕ್ಕಿಕೊಂಡು ಹೇಲಿನಲ್ಲಿ ಆಟವಾಡುವ ಬಾಲಕನ ಹಾಗೆ ವ್ಯರ್ಥವಾಗಿ ಕಾಲವನ್ನು ಕಳೆದೆನು" ಎಂದು ತನ್ನನ್ನು ಅತಿಶಯವಾಗಿ ಹಳಿದುಕೊಂಡನು. ಆ ಮುನಿಗಳ ಪಾದದ ಬುಡದಲ್ಲಿ ತಪಸ್ಸಿನ ಆಚರಣೆಯನ್ನು ಸ್ವೀಕರಿಸಿ, ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ–ಎಂಬ ಐದು ಮಹಾವ್ರತಗಳನ್ನು ಕೈಕೊಂಡು ದೋಷಗಳಿಗೆ ಪ್ರಾಯಶ್ಚಿತ್ತಗಳನ್ನು (ಪಡಿಕಮಣ) ಕೇಳಿದ ನಂತರ ಜೈನತತ್ವವನ್ನು ಸ್ವೀಕ ರಿಸಿ ಮಹಾಕಾಳವೆಂಬ ಶ್ಮಶಾನಕ್ಕೆ ಹೋಗಿ ಜೀವವಿರುವವರೆಗೂ ಆಹಾರವನ್ನು ಸೇವಿಸದೆ, ಆಮರಣ ಉಪವಾಸ ವಿಧಾನದಿಂದ ಗುಪ್ತವಾದ ಸ್ಥಳದಲ್ಲಿ ಶವಾಸನವಲ್ಲಿದ್ದು, ಸಂನ್ಯಾಸ ವನ್ನು ಮಾಡುತ್ತ ಧರ್ಮಧ್ಯಾನ ಶುಕ್ಲಧ್ಯಾನ ಎಂಬ ಧ್ಯಾನಗಳಲ್ಲಿ ಮಗ್ನನಾಗಿದ್ದನು. ಈ ಕಡೆಯಲ್ಲಿ ವಾಯುಭೂತಿಯಾಗಿದ್ದ ಜನ್ಮದಂದಿನ ಅತ್ತಿಗೆಯಾಗಿದ್ದ ಸೋಮದತ್ತೆ ಎಂಬವಳು (ಜನ್ಮಾಂತರದಲ್ಲಿ ನರಿಯಾಗಿ ಮಕ್ಕಳೊಂದಿಗೆ ನಿನ್ನ ಕಾಲುಗಳನ್ನು ತಿನ್ನು ವವಳಾಗುವೆನೆಂದು) ಪ್ರತಿಜ್ಞೆ ಮಾಡಿ ತನ್ನ ನಾಲ್ಕು ಮಂದಿ ಮಕ್ಕಳೂ ತಾನೂ ಸಂಸಾರ

ತಿರಿದು ಬಂದು ಪೆಣ್ಣರಿಯಾಗಿ ಪುಟ್ಟಿ ತನ್ನ ನಾಲ್ಕು ಮಱಿಗಳ್ವೆರಸಾಹಾರಮನಱಸಿ ತೊೞಲುತ್ತುಂ ಬರ್ಪುದನ್ನೆಗಂ ಸುಕುಮಾರಸ್ವಾಮಿಯುಂ ಮಹಾಕಾಳಕ್ಕೆ ಪೋಪನೆಲ್ಲಾ ಕಾಲಮುಂ ಮಣಿಕುಟ್ಟಿಮ ಭೂಮಿಯೊಳ್ ಪಾಸಿದ ನೇತ್ರಪಟ್ಟಿಯ ಮೇಗೆ ನಡೆದ ಮೃದು ಲಲಿತಮಪ್ಪ ಚರಣದ್ವಯದೊಳ್ ಮುನ್ನೆಂದುಂ ನೆಲನಂ ಕಿಟ್ಟಿಯಱಿಯದೊಂ ಕಠಿನಭೂಮಿಯೊಳ್ ನಡೆದೊಡೆ ಕಿಱುಗಲ್ಗಳುಂ ಪೆಟ್ಟೆಗಳುಮುಗುೞ್ದು ಪುಗುಳೊಡೆದು ಪೊಱಮಟ್ಟ ಕರಗದ ಧಾರೆವೊಲೆಡೆವಱಿಯದೆ ಮಹಾಕಾಳಶ್ಮಶಾನಂಬರೆಗಮೊಕ್ಕ ನೆತ್ತರ ಧಾರೆಯ ಗಂದದಿಂದಂ ನರಿಗಳ್ ಬಂದು ಕಂಡು ರಾಗಿಸಿ ಮಱಿಗಳ್ವೆರಸಡಿಯಿಂದಂ ತೊಟ್ಟೆರಡುಂ ಕಾಲ್ಗಳಂ ಮೊೞಕಾಲ್ವರೆಗಮೊಂದುದಿವಸಂ ತಿಂದತ್ತೆರಡನೆಯ ದಿವಸಂ ಮೊೞಕಾಲಿಂ ತೊಟ್ಟು ಕಟಿವರೆಗಂ ತಿಂದತ್ತು ಮೂಱನೆಯ ದಿವಸಂ ಬಸಿಱಂ ಪೋೞ್ದು ಕರುಳಂ ತೋಡಿತಿನೆ ಪೃಥಕ್ತ್ವವಿತರ್ಕ ವೀಚಾರಮೆಂಬ ಪ್ರಥಮ ಶುಕ್ಲಧ್ಯಾನದೊಳ್ ಕೂಡಿಯುಪಶಾಂತ ಗುಣಸ್ಥಾನದೊಳಿರ್ದು ರತ್ನತ್ರಯಮಂ ಸಾಧಿಸಿ ಸಯುಸತ್ತಮ ದೇವನಾಗಿ ಪುಟ್ಟಿದೊಂ ಮತ್ತಿತ್ತ ತಾಯುಂ ಪೆಂಡಿರುಂ ಪರಿವಾರಮುಮೆಲ್ಲಾ ದೆಸೆಗಳೊಳಂ ಪರಿವರಿದು

ವೆಂಬ ಸಮುದ್ರದಲ್ಲಿ ವಿಶೇಷವಾಗಿ ತಿರ್ರನೆ ಸುತ್ತುತ್ತ ಒಂದು, ಹೆಣ್ಣುನರಿಯಾಗಿ ಹುಟ್ಟಿ ತನ್ನ ನಾಲ್ಕು ಮರಿಗಳೊಂದಿಗೆ ಅದು ಆಹಾರವನ್ನು ಹುಡುಕುತ್ತ ಸುತ್ತಾಡುತ್ತಾ ಬರುತ್ತಿತ್ತು. ಸುಕುಮಾರಸ್ವಾಮಿ ಮಹಾಕಾಳನೆಂಬ ಶ್ಮಶಾನದ ಕಡೆಗೆ ಹೋಗುತ್ತಿದ್ದವನು. ಅವನು ಯಾವ ಕಾಲದಲ್ಲಿ ನೋಡಿದರೂ ರತ್ನಮಯವಾದ ಜಗಲಿಯ ಮೇಲೆ ಹಾಸಿದ ರೇಷ್ಮೆವಸ್ತ್ರದ ಮೇಲೆ ನಡೆದ ತನ್ನ ಮೆತ್ತಗಾದ ಮತ್ತು ಚೆಲುವಾದ ಎರಡು ಪಾದಗಳಲ್ಲಿ ಹಿಂದೆ ಎಂದೂ ನೆಲವನ್ನು ಮುಟ್ಟಿಯೂ ಅರಿಯದವನು. ಅವನು ಈಗ ಕಠಿನವಾದ ನೆಲದಲ್ಲಿ ನಡೆಯಲು, ಹರಳುಕಲ್ಲುಗಳೂ ಹೆಂಟೆ (ಗಟ್ಟಿ)ಗಳೂ ನಾಟಿಕೊಂಡು ಗುಳ್ಳೆಯೆದ್ದು ಒಡೆದು ಅದರಿಂದ ಹೊರಟ ರಕ್ತವು ಕರಗದಿಂದ ಇಳಿಯುವ ನೀರಿನ ಧಾರೆಯಂತೆ ನಿರಂತರವಾಗಿ ಸುರಿದಿತ್ತು. ಮಹಾಕಾಳ ಶ್ಮಶಾನದವರೆಗೂ ಸುರಿದ ರಕ್ತದ ಧಾರೆಯ ವಾಸನೆಯಿಂದ ನರಿಗಳು ಬಂದು ನೋಡಿದವು. ಆ ಹೆಣ್ಣುನರಿ ಸಂತೋಷಗೊಂಡು ತನ್ನ ಮರಿಗಳ ಸಮೇತವಾಗಿ ಮೊದಲನೆಯ ದಿನ ಸುಕುಮಾರಸ್ವಾಮಿಯ ಎರಡೂ ಕಾಲುಗಳನ್ನು ಪಾದದಿಂದ ಪ್ರಾರಂಭಿಸಿ ಮೊಣಕಾಲುಗಳವರೆಗೆ ತಿಂದಿತು. ಎರಡನೆಯ ದಿನಸ ಮೊಣಕಾಲುಗಳಿಂದ ಪ್ರಾರಂಭಿಸಿ ಸೊಂಟದವರೆಗೂ ತಿಂದಿತು. ಮೂರನೆಯ ದಿವಸ ಹೊಟ್ಟೆಯನ್ನು ಸೀಳಿ ಕರುಳನ್ನು ತೋಡಿ ತಿನ್ನುತ್ತಿತ್ತು. ಆಗ ಸುಕುಮಾರಸ್ವಾಮಿಯು ಪೃಥಕ್ತ್ವ, ವಿತರ್ಕ, ವೀಚಾರ–ಎಂಬ ಮೊದಲನೆಯ ಶುಕ್ಲಧ್ಯಾನದಲ್ಲಿ ಸೇರಿಕೊಂಡು ಉಪಶಾಂತಿ ಎಂಬ ಗುಣಸ್ಥಾನದಲ್ಲಿದ್ದು ಸಮ್ಯಗ್ದರ್ಶನ, ಸಮ್ಯಗ್ಜ್ಞಾನ, ಸಮ್ಯಕ್ಚಾರಿತ್ರ–ಎಂಬ ರತ್ನತ್ರಯವನ್ನು ಸಾಧನೆಮಾಡಿ ಅತ್ಯಂತ ಶ್ರೇಷ್ಠ ದೇವತೆಯಾಗಿ ಜನಿಸಿದನು. ಆ ಮೇಲೆ ಇತ್ತಲಾಗಿ ಸುಕುಮಾರಸ್ವಾಮಿಯ ತಾಯಿಯೂ ಹೆಂಡಿರೂ ಪರಿವಾರವೂ ಎಲ್ಲಾ ದಿಕ್ಕುಗಳಲ್ಲಿಯೂ ಸಂಚರಿಸಿ

ಪೋಗಿ ಸುಕುಮಾರಸ್ವಾಮಿಯುನಹೊ ಸೂರಾ ಅಹೋ ಮಹಾಪುರುಷ ಅಹೊ ಧೈರ್ಯವಂತ ಅಹೊ ಸಂಸಾರಭೀರು ನಿನ್ನಂತುಪಸರ್ಗಮಂ ನಾರಪ್ಪೊಡಂ ಸೈರಿಸಿ ರತ್ನತ್ರಯಮಂ ಸಾಧಿಸಿದೊರಿಲ್ಲೆಂದು ದೇವತೆಗಳ್ ಪೊಗೞ್ವ ಕಳಕಳಧ್ವನಿಯುಮಂ ದೇವದುಂದುಭಿಯ ರವಮುಮಂ ಯಶೋಭದ್ರೆ ನೋಡಿ ದೇವಸಂಘಾತಮಂ ಕಂಡು ಮಗನ ಸಾವನಱಿದು ಬಯ್ಗುರುಳಾದಾಗಳ್ ಮೂವತ್ತಿರ್ವರ್ ಸೊಸೆವಿರ್ಕಳ್ಗಂ ಪೇೞ್ದಟ್ಟಿ ಸುಕುಮಾರಸ್ವಾಮಿ ನಿಮಗೆಲ್ಲರ್ಗೆ ಮುಳಿದು ಪೋಗಿ ಯಡಂಗಿರ್ದೊನನಾನಱಿವೆಂ ನೀವೆಲ್ಲಂ ನೆಱೆಯೆ ತೊಟ್ಟುಟ್ಟು ಪಸದನಂಗೊಂಡು ಚೆಲ್ವೆಯರಾಗಿ ಬನ್ನಿಂ ಪೋಪಂ ತಿಳಿಪಿಕೊಂಡು ಬರ್ಪಂ ನಿಮ್ಮ ಸ್ವಾಮಿಯನೆಂದೊಡವರ್ಗಳನಿಬರುಂ ರಾಗಿಸಿ ಕೈಗೆಯ್ದತ್ತೆಯೊಡನೆ ಪರಿವಾರಸಹಿತಂ ಮಹಾಕಾಳಕ್ಕೆ ಪೋಗಿ ನೋೞ್ಪರನ್ನೆಗಂ ನಮೇರು ಮಂದಾರ ಸಂತಾನಕ ಪಾರಿಯಾತ್ರಮೆಂಬ ದೇವರ್ಕಳ್ ಸುರಿದ ಪುಷ್ಪವೃಷ್ಟಿಯಿಂದಂ ಮುಚ್ಚೆಪಟ್ಟನಾಗಿ ಕಂಪಿಂಗೆಱಗಿದ ತುಂಬಿಯ ಸಮೂಹಮಂ ಮೇಗೆ ಸುೞಿವುದಂ ಕಂಡಿಲ್ಲಿರ್ದ್ದನೆಂದು ಯಶೋಭದ್ರೆ ತೋಱಿದೊಡೆ ಪೋಗಿ ತೆಱೆದು ನೋೞ್ಪರನ್ನೆಗಂ ಮೃತಕಮಂ ಕಂಡನಿಬರುಂ

ಕೊಂಡು ಹೋಗಿ ಸುಕುಮಾರಸ್ವಾಮಿಯನ್ನು ಎರಡು ದಿನಸ ಇರುಳೂ ಹಗಲೂ ಹುಡುಕಿದರು. ಆದರೆ ಕಾಣಲಿಲ್ಲ" ಮೂರನೆಯ ದಿವಸದಂದು ಸಂಜೆ ಹೊತ್ತಿನಲ್ಲಿ ದೇವತೆಗಳು ಬಂದು ಸುಕುಮಾರಸ್ವಾಮಿಯನ್ನು "ಆಹಾ ಶೂರನೇ, ಆಹಾ ಧೈರ್ಯಶಾಲಿಯೇ, ಆಹಾ ಸಂಸಾರಕ್ಕೆ ಹೆದರಿದವನೇ, ನಿನ್ನ ಹಾಗೆ ಉಪಸರ್ಗಗಳನ್ನು ಸಹಿಸಿಕೊಂಡು ರತ್ನತ್ರಯವನ್ನು ಸಾಧಿಸಿದವರು ಯಾರೂ ಇಲ್ಲ" ಎಂದು ಹೊಗಳುತ್ತಿದ್ದರು. ಹಾಗೆ ಹೊಗಳುವ ಗದ್ದಲದ ಧ್ವನಿಯನ್ನೂ ದೇವಲೋಕದ ದುಂದುಭಿವಾದ್ಯದ ಶಬ್ದವನ್ನೂ ಯಶೋಭದ್ರೆ ಕೇಳಿ, ದೇವತಾಸಮೂಹವನ್ನು ಕಂಡು ತನ್ನ ಮಗನು ಸತ್ತುದು ನಿಜವೆಂದು ತಿಳಿದುಕೊಂಡಳು. ಅಂದು ರಾತ್ರಿ ಮೂವತ್ತೆರಡು ಮಂದಿ ಸೊಸೆಯಂದಿರಿಗೂ ಅವಳು ಹೇಳಿಕಳುಹಿಸಿದಳು. ಅವರೊಡನೆ ಹೀಗೆಂದಳು–"ಸುಕುಮಾರಸ್ವಾಮಿ ನಿಮ್ಮೆಲ್ಲರ ಮೇಲೆಯೂ ಕೋಪಿಸಿಕೊಂಡು ಹೋಗಿ ಅಡಗಿರುತ್ತಾನೆ. ಅವನು ಎಲ್ಲಿರುವನೆಂದು ನಾನು ಬಲ್ಲೆ. ನೀವೆಲ್ಲರೂ ವಿಶೇಷವಾಗಿ ಉಡಿಗೆತೊಡಿಗೆಗಳನ್ನು ಧರಿಸಿ ಶೃಂಗಾರಮಾಡಿಕೊಂಡು ಚೆಲುವೆಯರಾಗಿ ಬನ್ನಿ, ಹೋಗೋಣ. ನಿಮ್ಮ ಒಡೆಯನಾದ ಸುಕುಮಾರನನ್ನು ಸಂತಯಿಸಿಕೊಂಡು ಬರೋಣ". ಹೀಗೆನ್ನಲು ಅವರೆಲ್ಲರೂ ಸಂತೋಷಗೊಂಡು ಸಿಂಗರಿಸಿಕೊಂಡು ಅತ್ತೆ (ಯಶೋಭದ್ರೆ) ಯೊಂದಿಗೆ ಮಹಾಕಾಳ ಶ್ಮಶಾನಕ್ಕೆ ಹೋಗಿ ನೋಡಿದರು. ಆಗ ಸುಂಪುನ್ನಾಗ, ಮಂದಾರ, ಕಲ್ಪವೃಕ್ಷ, ಪಾರಿಯಾತ್ರಗಳ ಹೂಮಳೆಯನ್ನು ದೇವತೆಗಳು ಸುರಿಸಲು ಅದರಿಂದ ಮುಚ್ಚಲ್ಪಟ್ಟವನಾಗಿ, ಹೂಗಂಪಿಗೆ ಬಂದೆರಗಿದ ತುಂಬಿಗಳ ಹಿಂಡು ಮೇಲುಗಡೆ ಸುಳಿಯುವುದನ್ನು ಕಂಡು ಸುಕುಮಾರನು ಇಲ್ಲಿದ್ದಾನೆ ಎಂದು ಯಶೋಭದ್ರೆ ತೋರಿಸಿದಳು. ಆಗ ಇವರು ಹೋಗಿ, ಮುಚ್ಚಿದ್ದನ್ನು ತೆರೆದು ನೋಡಿದರು. ಹೆಣವನ್ನು ಕಂಡು ಅವರೆಲ್ಲರೂ ಮೂರ್ಛೆ

ಮೂರ್ಛೆವೋಗಿ ನೀಡಱಿಂದೆೞ್ಚೆತ್ತು ತಮ್ಮ ಬಸಿಱುಮಂ ತಲೆಯುಮಂ ಬಡಿದುಕೊಂಡು ಸುಕು
ಮಾರಸ್ವಾಮಿಯ ರೂಪಮುಂ ತೇಜಮುಮಂ ಯೌವನಮುಂ ಲಾವಣ್ಯಮುಂ ಸೌಭಾಗ್ಯಮುಂ
ಯಶಮುಂ ಪೊಲ್ಪುಂ ನುಡಿಯ ಬಲ್ಮೆಯುಂ ಶುಚಿತ್ವಮುಂ ಶೌಚಮುಂ ಶ್ರೀಯುಂ ಸಂಪತ್ತುಂ
ಸೊಬಗುಂ ಒಲ್ಮೆಯುಂ ಧೈರ್ಯಮುಂ ಎಂದಿವು ಮೊದಲಾಗೊಡೆಯವಾತನೊಳ್ ನೆಲಸಿರ್ದ ಗುಣಂ
ಗಳಂ ನೆನೆನೆನೆದನಿಬರುಂ ಪ್ರಲಾಪಂಗೆಯ್ಯುತ್ತುಂ ಸೈರಿಸಲಾಱದೆ ನಿರಂತರಂ ಮೂರ್ಛೆವೋಗುತ್ತುಂ
ನೀಡುಂ ಬೇಗಂ ದುಃಖಂಗೆಯ್ದುೞ್ತು ನೀರಿೞಿದೆಣ್ಬರ್ ಬಸಿಱ ಪೆಂಡಿರುೞಿಯೆ ಇರ್ಪತ್ತು ನಾಲ್ವರ್
ಪೆಂಡಿರುಂ ಮತ್ತಂ ಪೆಱರ್ ನಂಟರ್ಕಳುಂ ಪರಿವಾರಮುಂ ಯಶೋಭದ್ರೆಯೊಡನೆ ದಯಾ
ಭದ್ರರ್ ಗುರುಗಳಾಗೆ ಕಮಳಶ್ರೀ ಕಂತಿಯರ್ ಕಂತಿಯರಾಗೆ ತಪಂಬಟ್ಟುಗ್ರೋಗ್ರ ತಪಂಗೆಯ್ದು
ನಿಬರುಂ ಸೌಧರ್ಮಕಲ್ಪಂ ಮೊದಲಾಗೊಡೆಯ ಕಲ್ಪಂಗಳೊಳ್ ಪುಟ್ಟಿದರ್ ಮತ್ತಿಂತಪ್ಪುದಂ
ಚಿಂತಿಸಲುಂ ಸೈರಿಸಲುಮಾಗದ ತಿರಿಕೋಪಸರ್ಗಮನವಂತಿ ಸುಕುಮಾರಸ್ವಾಮಿ ಮೂಱು ದಿವಸ
ಮಿರುಳುಂ ಪಗಲುಂ ಸೈರಿಸಿ ರತ್ನತ್ರಯಮನೆಂತು ಸಾದಿಸಿದನಂತೆ ಸನ್ಯಸನಂಗೆಯ್ದಾರಾಧಕ
ರಪ್ಪ ಮಹಾಪುರುಷರುಮವಂತಿ ಸುಕುಮಾರಸ್ವಾಮಿಯ ಪರಮಸುಖಿಯಪ್ಪುಪಸರ್ಗಮುಂ

ಹೋದರು. ಬಹಳ ಹೊತ್ತಾದನಂತರ ಎಚ್ಚರಗೊಂಡು ತಮ್ಮ ಹೊಟ್ಟೆಯನ್ನೂ ತಲೆಯನ್ನೂ ಬಡಿದುಕೊಂಡು ಸುಕುಮಾರಸ್ವಾಮಿಯ ರೂಪ, ಕಾಂತಿ, ಯೌವನ, ಲಾವಣ್ಯ, ಸೌಭಾಗ್ಯ, ಕೀರ್ತಿಗಳನ್ನೂ ಮೃದುಸ್ವಭಾವವನ್ನೂ ಮಾತಿನ ಪ್ರೌಢಿಮೆಯನ್ನೂ ಶುಚಿತ್ವವನ್ನೂ ಶುದ್ಧಗುಣವನ್ನೂ, ಶೋಭೆಯನ್ನು, ಸಂಪತ್ತನ್ನೂ ಸೊಬಗನ್ನೂ ಪ್ರೀತಿಯನ್ನೂ ಧೈರ್ಯ ಮುಂತಾಗಿರುವ ಆತನಲ್ಲಿ ನೆಲಸಿಕೊಂಡಿದ್ದ ಗುಣಗಳನ್ನೂ ಮತ್ತೂ ಮತ್ತೂ ನೆನೆಸಿಕೊಳ್ಳುತ್ತ, ಅವರೆಲ್ಲರೂ ಗೋಳಾಡುತ್ತ ಸಹಿಸಲಾರದೆ ಎಡೆಬಿಡದೆ ಆಗಾಗ ಮೂರ್ಛೆಗೊಳ್ಳುತ್ತ, ಬಹಳ ಹೊತ್ತಿನ ತನಕ ದುಃಖಪಡುತ್ತ ಅತ್ತು, ಸ್ನಾನ ಮಾಡಿದರು. ಅವರಲ್ಲಿ ಎಂಟು ಮಂದಿ ಗರ್ಭಿಣಿ ಸ್ತ್ರೀಯರನ್ನು ಬಿಟ್ಟು ಉಳಿದ ಇಪ್ಪತ್ತನಾಲ್ಕು ಮಂದಿ ಹೆಂಡಿರೂ ಮತ್ತಿತರ ನೆಂಟರೂ ಪರಿವಾರದವರೂ ಯಶೋಭದ್ರೆಯೊಂದಿಗೆ ತಪಸ್ಸನ್ನು ಕೈಗೊಂಡರು. ಅವರಿಗೆ ದಯಾಭದ್ರರು ಗುರುಗಳಾದರು. ಕಮಲಶ್ರೀ ಕಂತಿಯರು ಮಾರ್ಗದರ್ಶಿಗಳಾದ ಸನ್ಯಾಸಿನಿಯರಾದರು. ಹೀಗೆ ಯಶೋಭದ್ರೆಯೊಂದಿಗೆ ಅತ್ಯಂತ ಘೋರವಾದ ತಪಸ್ಸನ್ನು ಮಾಡಿ ಅವರೆಲ್ಲರೂ ಸೌಧರ್ಮಕಲ್ಪವೇ ಮೊದಲಾಗಿರುವ ಸ್ವರ್ಗಗಳಲ್ಲಿ ಹುಟ್ಟಿದರು. ಆ ಮೇಲೆ ಈ ರೀತಿಯಾಗುವುದನ್ನು ಯೋಚಿಸಲೂ ಸಹಿಸಲೂ ಸಾಧ್ಯವಾಗದಂತಹ ಪ್ರಾಣ್ಯುಪದ್ರವ (ತಿರಿಕೋಪಸರ್ಗ)ವನ್ನು ಅವಂತಿ ಸುಕುಮಾರನು ಮೂರುದಿವಸ ಇರುಳೂ ಹಗಲೂ ಸಹಿಸಿಕೊಂಡು ರತ್ನತ್ರಯ (ಸಮ್ಯಗ್ದರ್ಶನ-ಜ್ಞಾನ-ಚಾರಿತ್ರ(ವನ್ನು ಹೇಗೆ ಸಾಧಿಸಿದನೋ ಹಾಗೆಯೇ ಸಂನ್ಯಾಸನ ಕೈಗೊಂಡು ಆರಾಧನೆ ಮಾಡತಕ್ಕ ಇದರ ಮಹಾಪುರುಷರೂ ಸುಕುಮಾರಸ್ವಾಮಿಗೆ ಪರಮ ಸುಖವನ್ನೊದಗಿಸಿದ ಉಪಸರ್ಗವನ್ನೂ ಅದನ್ನು ಗೆಲ್ಲುವ ಕ್ರಮವನ್ನೂ ಮನಸ್ಸಿ

ವಿಜಯವಿಧಾನವಮಂ ಮನದೊಳನವರತಂ ಚಿಂತಿಸುತ್ತಾಪ್ತಾಗಮ ಪದಾರ್ಥರ್ಧಿಗಳೊಳತೀವ ಸ್ಥಿರರಾಗಿ ಪರಮ ಸಹಜ ನಿಜ ರತ್ನತ್ರಯಂದೊಳ್ ಕೂಡಿ ಅಭೇದವಾಗೆಯ್ದಿ ಕೂಡಿ ಶರೀರಂ ಮೊದಲಾಗೊಡೆಯ ಸಮಸ್ತ ಬಾಹ್ಯಾಭ್ಯಂತರ ಪರಿಗ್ರಹಂಗಳಂ ನೆಱೆ ತೊಱೆದು ಅಪೂರ್ವಾ ಪವರ್ಗ ಸುಖಂಗಳನೆಯ್ದುಗೆ ಮತ್ತುಜ್ಜೇನಿಯ ತೆಂಕಣ ದೆಸೆಯೊಳವಂತಿ ಸುಕುಮಾರ ಸ್ವಾಮಿಯ ಕಾಲಂಗೆಯ್ದಿಡೆ ಈಗಳುಂ ಪುಣ್ಯಮುಂ ಪವಿತ್ರಮುಮಾದುದು ಮತ್ತಂ ಮಹಾ ಪುರುಷನ ಶರೀರಮಂ ಚತುರ್ನಿಕಾಯಾಮರತತಿಗಳ್ ಭಕ್ತಿಯಿಂದಗರು ಕಾಳಾಗರು ಗೋಶೀರ್ಷ ಚಂದನಂ ಮೊದಲಾಗೊಡೆಯ ಅನೇಕ ಸುಗಂಧ ದ್ರವ್ಯಂಗಳಿಂದಂ ಪೂಜಿಸಿದ ವಸ್ತುಗಳ್ ಕಾಲಾಂತರದಿಂ ಕರಗಿ ಬಿಟ್ಟುದಾ ಸ್ಥಾನಮೆಂಬುದು ಗಂಧವತಿಯೆಂಬ ತೊಱೆಯಾದುದು ದೇವರ್ಕಳ್ ಪೊಗಟ್ಟ ಕಳಕಳಧ್ವನಿಯಿಂ ಪೆಂಡಿರ್ಕಳ ಪ್ರಳಾಪಂಗೆಯ್ದುಟ್ಟ ಕಳಕಳಧ್ವನಿಯಿಂದಂ ಕಳಕಳಾಯತವೆಂದು ಸಿದ್ಧಾಯತನಮಾದುದು.

ನಲ್ಲಿ ಯಾವಾಗಲೂ ಯೋಚಿಸುತ್ತ ಆತ್ಮೀಯವಾದ ಆಗಮ (ಶಾಸ್ತ್ರ) ಗಳಲ್ಲಿಯೂ ನವಪದಾರ್ಥಗಳಲ್ಲಿಯೂ ಋದ್ಧಿ (ಸಿದ್ಧಿ)ಗಳಲ್ಲಿಯೂ ಅತ್ಯಂತ ಸ್ಥಿರರಾಗಿದ್ದುಕೊಂಡು ಸಹಜವಾದ ಮತ್ತು ನಿಜವಾದ ರತ್ನತ್ರಯದಲ್ಲಿ ಒಂದಾಗಿ, ಭೇದವಿಲ್ಲದಂತೆ ಕೂಡಿ ದೇಹವೇ ಮೊದಲಾದ ಎಲ್ಲ ಹೊರಗಿನ ಮತ್ತು ಒಳಗಿನ ಪರಿಗ್ರಹಗಳನ್ನು ವಿಶೇಷವಾಗಿ ಬಿಟ್ಟು ಅಪೂರ್ವವೆನಿಸುವ ಮುಕ್ತಿ ಸುಖಗಳನ್ನು ಪಡೆಯಲಿ! ಆಮೇಲೆ, ಉಜ್ಜಯಿನಿಯ ದಕ್ಷಿಣ ದಿಶಾಭಾಗದಲ್ಲಿ ಅವಂತಿ ಸುಕುಮಾರಸ್ವಾಮಿ ದೇಹತ್ಯಾಗ ಮಾಡಿದ ಸ್ಥಳ ಇಂದಿಗೂ ಪುಣ್ಯಕರವೂ ಪವಿತ್ರವೂ ಆಯಿತು. ಅದಲ್ಲದೆ, ಆ ಮಹಾಪುರುಷನ ದೇಹ ವನ್ನು ಭವನಪತಿ, ವ್ಯಂತರಿಕ, ಜ್ಯೋತಿಷ್ಕ ಮತ್ತು ವಿಮಾನವಾಸಿಗಳೆಂಬ ನಾಲ್ಕು ಬಗೆಯ ದೇವತೆಗಳು ಭಕ್ತಿಯಿಂದ ಅಗರು, ಕಾಳಾಗರು, ಗೋರೋಚನ, ಗಂಧ, ಶ್ರೀಗಂಧ ಮುಂತಾಗಿರುವ ಹಲವಾರು ಸುವಾಸನೆಯ ದ್ರವ್ಯಗಳಿಂದ ಪೂಜಿಸಿದ ವಸ್ತುಗಳು ಕೆಲವು ಕಾಲಾನಂತರ ಕರಗಿ ಬಿದ್ದುವು. ಹಾಗೆ ಬಿದ್ದ ಸ್ಥಳವು 'ಗಂಧವತಿ' ಎಂಬ ಹೆಸರಿನ ಹೊಳೆ ಯಾಗಿ ಪರಿಣಮಿಸಿತು. ದೇವತೆಗಳು ಕೊಂಡಾಡಿದ ಕಳಕಳ ಧ್ವನಿಯಿಂದಲೂ ಸುಕುಮಾರಸ್ವಾಮಿಯ ಹೆಂಡಿರು ದುಃಖಿಸಿ ಅತ್ತ ಕಳಕಳ ಶಬ್ದದಿಂದಲೂ 'ಕಳಕಳಾಯತ' ಎಂಬ ಹೆಸರುಳ್ಳ ಸಿದ್ಧಕ್ಷೇತ್ರವೂ ಆಯಿತು.

# ೧. ಸುಕೌಶಳಸ್ವಾಮಿಯ ಕಥೆ

ಸುಕೌಶಳಸ್ವಾಮಿಯ ಕಥೆಯಂ ಪೇೞ್ವಂ :

ಗಾಹೆ॥ ಮೊಗ್ಗಳಗಿರಿಮ್ಮಿಯ ಸುಕೌಸಳೋ ವಿ ಸಿದ್ಧತ್ಥ ದಯಿದಗೋ ಭಗವಂ
ವಗ್ಘೀಯೆ ಖಯಿದಂ ಪದಿದೋ ಪಡಿವಣ್ಣೋ ಉತ್ತಮಂ ಅಟ್ಠಂ

[ಮೊಗ್ಗಳ ಗಿರಿಮ್ಮಿಯ-ಮೊಗ್ಗಳಮೆಂಬ ಪರ್ವತದೊಳ್, ಸುಕೌಸಳೋವಿ-ಸುಕೌಸಳಸ್ವಾಮಿಯುಂ, ಸಿದ್ಧತ್ಥದಯಿದಗೋ-ಸಿದ್ಧಾರ್ಥನೆಂಬ ಪರದನ ಕಾದಲಿಸೆ ಪಡುವ ಮಗಂ, ಭಗವಂ-ಪೆರ್ಮೆಯನೊಡೆಯೊಂ, ವಗ್ಘೀಯೆ ಖಯಿದಂ ಪದಿದೋ-ಮುನ್ನಿನ ಭವದ ತಾಯಪ್ಪ ಪೆಣ್ಬುಲಿಯಿಂದಂ ತಿನೆ ಬರ್ದಿದೊನಾಗಿಯುಂ, ಪಡಿವಣ್ಣೋ-ಪೊರ್ದಿದೊಂ, ಉತ್ತಮಂ ಅಟ್ಠಂ-ಮಿಕ್ಕ ಜ್ಞಾನ ಚಾರಿತ್ರಾರಾಧನೆಯಂ]

ಅದೆಂತೆಂದೊಡೆ :

ಈ ಜಂಬೂದ್ವೀಪದ ದಕ್ಷಿಣ ಭರತಕ್ಷೇತ್ರದೊಳಂಗಮೆಂಬುದು ನಾಡಲ್ಲಿ ಚಂಪಾನಗರಮೆಂಬುದು ಪೊೞಲದನಾಳ್ವಂ ಗಂಧಭಾಜನನೆಂಬರಸನಿಂದ್ರನೊಳೋರಂತಪ್ಪ ಭೋಗೈಶ್ವರ್ಯ ವಿಭವಮನೊಡೆಯೊಂ ನ್ಯಾಯದಿಂದಂ ಪ್ರಜೆಗಳಂ ಪ್ರತಿಪಾಳಿಸುವೊನಧಿಗಮ ಸಮ್ಯಕ್‌ದೃಷ್ಟಿಯುಪ್ಪನೇೞುಗುಣಂಗಳಿಂದಂ ಕೂಡಿದೊನಾಯೇೞುಂ ಗುಣಂಗಳೆಂಬುವಾವುವೆಂದೊಡೆ

ಗಾಹೆ॥ ಸಮ್ಮದ್ದಸ್ಸಣಸುದ್ಧೋ ಕದವಧ ಕಮ್ಮೋ ಸುಸೀಲಗುಣಣಿಳಯೊ
ಉಜುಗತ್ತೋ ಗುರುಭತ್ತೋ ಪವಯಣ ಕುಸಳೋ ಮದಿಪ್ಪಗಬ್ಭೋಯ

ಸುಕೌಶಳಸ್ವಾಮಿಯ ಕಥೆಯನ್ನು ಹೇಳುವೆನು : [ ಸಿದ್ಧಾರ್ಥನೆಂಬ ವರ್ತಕನ ಪ್ರೀತಿಯ ಮಗ ಸುಕೌಶಳಸ್ವಾಮಿ ; ಹಿರಿಮೆಯನ್ನುಳ್ಳವನು. ಆತನು ಮೊಗ್ಗಳವೆಂಬ ಬೆಟ್ಟದಲ್ಲಿ ಇದ್ದಾಗ ಅವನನ್ನು ಹಿಂದಿನ ಜನ್ಮದ ತಾಯಿಯಾಗಿದ್ದ ಒಂದು ಹೆಣ್ಣುಹುಲಿ ತಿನ್ನಲು ಸತ್ತವನಾಗಿ ಶ್ರೇಷ್ಠವಾದ ಜ್ಞಾನ-ಚಾರಿತ್ರ-ಆರಾಧನೆಯನ್ನು ಪಡೆದನು. ]
ಅದು ಹೇಗೆಂದರೆ : ಈ ಜಂಬೂದ್ವೀಪದಲ್ಲಿ ದಕ್ಷಿಣಕ್ಕಿರುವ ಭರತಕ್ಷೇತ್ರದಲ್ಲಿ ಅಂಗ ರಾಜ್ಯವಿದೆ. ಅಲ್ಲಿ ಚಂಪಾನಗರವೆಂಬ ಪಟ್ಟಣವನ್ನು ಗಂಧಭಾಜನನೆಂಬ ರಾಜನು ಆಳುತ್ತಿದ್ದನು. ಅವನು ಇಂದ್ರನಿಗೆ ಸಮಾನವಾದ ಸುಖ-ಐಶ್ವರ್ಯ-ಸಂಪತ್ತುಗಳುಳ್ಳವನಾಗಿ ಪ್ರಜೆಗಳನ್ನು ನ್ಯಾಯದಿಂದ ಆಳುತ್ತಿದ್ದನು. ಸಂಪಾದಿಸಿದ ಜ್ಞಾನವುಳ್ಳವನಾಗಿ ಏಳು ಗುಣಗಳಿಂದ ಕೂಡಿದವನಾಗಿದ್ದನು. ಆ ಏಳು ಗುಣಗಳು ಯಾವುವೆಂದರೆ– ಸಮ್ಯಗ್ದರ್ಶನದಲ್ಲಿ ಶುದ್ಧನಾಗಿರುವವನು, ಉತ್ತಮವಾದ ಕರ್ಮವುಳ್ಳವನು, ಒಳ್ಳೆಯ ಶೀಲಕ್ಕೂ ಗುಣಕ್ಕೂ ಮನೆಯಾಗಿರುವವನು, ಪ್ರಯತ್ನದಲ್ಲಿ ಆಸಕ್ತಿಯುಳ್ಳವನು, ಗುರು

ಎಂದೇೞುಂ ಗುಣಂಗಳಿಂದಂ ಕೂಡಿದೊನಂತಪ್ಪರಸಂ ಶರತ್ಕಾಲದ ಮುಗಿಲೊಳೋರಂತಪ್ಪು
ದನಾದಮಾಸುಂ ವಿಚಿತ್ರಮಪ್ಪುದಂ ಸಹಸ್ರಕೂಟಮೆಂಬ ಜಿನಾಲಯಮಂ ಮಾಡಿಸಿ ಅದರ್ಕನ
ವರತಂ ಮಹಾಪೂಜೆಯುಮಂ ಮಹಿಮೆಯುಮಭಿಷೇಕಂಗಳುಮಂ ಸಲಿಸುತಿರ್ಪೊಂ ಮತ್ತಾ
ಪೊೞಲೊಳೊರ್ವಂ ಸಾಗರದತ್ತನೆಂಬೊಂ ಸೆಟ್ಟಿಯಾತನ ಭಾರ್ಯೆ ಸುಭದ್ರೆಯೆಂಬೊಳಾಯಿ
ರ್ವರ್ಗಂ ಮಗಳ್ ಸುರೂಪೆಯೆಂಬೊಳ್ ಮತ್ತಾ ಪೊೞಲೊಳ್ ಪೆಱನೊರ್ವಂ ಸೆಟ್ಟಿ ನಾಗದತ್ತ
ನೆಂಬೊನಾತಂಗೆ ಸುರೂಪೆಯಂ ಕೊಟ್ಟೊಡಾಯಿರ್ವರ್ಗಂ ಸುಕೇಶಿನಿಯೆಂಬ ಮಗಳಾದಳಾಕೆ
ಬೞೆದತ್ಯಂತ ರೂಪಲಾವಣ್ಯ ಸೌಭಾಗ್ಯ ಕಾಂತಿ ಹಾವಭಾವವಿಲಾಸ ವಿಭ್ರಮಂಗಳನೊಡೆಯೊಳ್
ಪಲವುಂ ತೆಱದ ಶುಭಲಕ್ಷಣಂಗಳಿಂದಂ ಕೂಡಿದ ಮೆಯ್ಯನೊಡೆಯೊಳ್ ನವಯೌವನೆ ದೇವಗಣಿಕೆ
ಯನೆ ಪೋಲ್ವಳೊಂದು ದಿವಸಂ ಅಷ್ಟಮಿಯುಂ ನೋಂತು ದೇವರನರ್ಚಿಸಲೆಂದು ಸಹಸ್ರಕೂಟ
ಚೈತ್ಯಾಲಯಕ್ಕರ್ಚನೆಯುಂ ಕೊಂಡು ಪೋದಳನ್ನೆಗಮರಸನುಮಾಗಳೆ ದೇವರಂ ಬಂದಿಸಲ್
ಬಂದೊಡರಸಂಗೆ ನಾಣ್ಚಿ ಬಸದಿಯೊಳಗಣ ಕಂಬದ ಮಱೆಯೊಳ್ ಕೇರಂ ಸಾರ್ದು ಪೊನ್ನ
ಬೆಳಗುವ ಗಳಂತಿಗೆಯನಾದಮಾನುಮೊಪ್ಪುತ್ತಿರ್ದುದಂ ಪಿಡಿದು ನಿಂದಿರ್ದೊಳನರಸಂ ಕಂಡಿಲ್ಲಿಯ
ಚಿತ್ರದ ಲೆಪ್ಪದ ಕಾಷ್ಠಕರ್ಮದ ರೂಪುಗಳೊಳೆಲ್ಲಮೀ ಸ್ತ್ರೀಯು ಜೀವವಿದ್ದುಮಿಂತುಟತಿಶಯ

ಭಕ್ತನು, ಪ್ರವಚನದಲ್ಲಿ ಕುಶಲನು, ಪಾಂಡಿತ್ಯವುಳ್ಳವನು. ಈ ವಿಧವಾದ ಏಳು
ಗುಣಗಳಿಂದ ಕೂಡಿದ ಗಂಧಭಾಜನರಾಜನು ಶರತ್ಕಾಲದ ಮೋಡದಂತೆ ಬೆಳ್ಳಗಿರುವ
ಮತ್ತು ಅತ್ಯಂತ ರಮ್ಯವಾಗಿರುವ 'ಸಹಸ್ರ ಕೂಟ' ಎಂಬ ಜಿನಮಂದಿರವನ್ನು ಮಾಡಿಸಿ
ದನು. ಆ ಜಿನಮಂದಿರಕ್ಕೆ ಯಾವಾಗಲೂ ಮಹಾಪೂಜೆಯನ್ನೂ ಮಹಿಮೆಯನ್ನೂ
(ವಿಶೇಷವಾದ ಉತ್ಸವಗಳನ್ನು) ಅಭಿಷೇಕಗಳನ್ನೂ ಸಲ್ಲಿಸುತ್ತಿದ್ದನು. ಆ ಪಟ್ಟಣದಲ್ಲಿ
ಸಾಗರದತ್ತನೆಂಬ ಒಬ್ಬ ಸೆಟ್ಟಿಯಿದ್ದನು. ಅವನ ಹೆಂಡತಿ ಸುಭದ್ರೆಯೆಂಬುವಳು.
ಅವರಿಬ್ಬರಿಗೆ ಸುರೂಪೆಯೆಂಬುವಳು ಮಗಳು. ಮತ್ತು, ಅದೇ ಪಟ್ಟಣದಲ್ಲಿ ನಾಗದತ್ತ
ನೆಂಬ ಇನ್ನೊಬ್ಬ ಸೆಟ್ಟಿಯಿದ್ದನು. ಅವನಿಗೆ ಸುರೂಪೆಯನ್ನು ಕೊಡಲು, ಆ ಇಬ್ಬರಿಗೆ
ಸುಕೇಶಿನಿ ಎಂಬ ಮಗಳಾದಳು. ಆಕೆ ದೊಡ್ಡವಳಾಗಿ ಹೆಚ್ಚಾದ ರೂಪ-ಲಾವಣ್ಯ-
ಸೌಭಾಗ್ಯ-ಕಾಂತಿ-ಹಾವ-ಭಾವ-ವಿಲಾಸ-ವಿಭ್ರಮಗಳುಳ್ಳ ನವಯುವತಿಯಾಗಿ ದೇವ
ವಾರಾಂಗನೆಯನ್ನು ಹೋಲುತ್ತಿದ್ದಳು. ಅವಳು ಒಂದು ದಿವಸ ಅಷ್ಟಮಿಯ ವ್ರತ
ವನ್ನು ಆಚರಿಸಿ ಜಿನೇಂದ್ರನನ್ನು ಪೂಜಿಸುವುದಕ್ಕಾಗಿ ಸಹಸ್ರಕೂಟ ಜಿನಮಂದಿರಕ್ಕೆ
ಪೂಜಾದ್ರವ್ಯಗಳನ್ನು ತೆಗೆದುಕೊಂಡು ಹೋದಳು. ಅಷ್ಟರಲ್ಲಿ ಅದೇ ವೇಳೆಗೆ ಗಂಧ
ಭಾಜನ ರಾಜನು ಜಿನೇಶ್ವರನನ್ನು ವಂದಿಸುವುದಕ್ಕಾಗಿ ಬಂದನು. ಸುಕೇಶಿನಿ ರಾಜ
ನನ್ನು ಕಂಡು ನಾಚಿಕೆಪಟ್ಟು ಬಸದಿಯೊಳಗಿನ ಕಂಬದ ಮರೆಯಲ್ಲಿ ಗೋಡೆಯ ಬಳಿಗೆ
ಹೋಗಿ ಚೆನ್ನಾಗಿ ಶೋಭಿಸುವ ಚಿನ್ನದ ಗಡಿಗೆಯನ್ನು ಹಿಡಿದು ನಿಂತುಕೊಂಡಿದ್ದಳು.
ಅವಳನ್ನು ರಾಜನು ಕಂಡು–"ಇಲ್ಲಿ ಚಿತ್ರಿಸಿಯೂ ಲೇಪ್ಯವಸ್ತುಗಳಿಂದಲೂ ಘನಗೊಳಿಸ

ಮೊಂದೆರಸನಾಕೆಯ ರೂಪಿಂಗಚ್ಚರಿವಟ್ಟು ಪೊಗೞೆ ಕೆಲದೊಳಿರ್ದ ಕಶ್ಚಿದೇವದತ್ತನೀಕೆ ಕನ್ನೆಯಿರ್ದೊಳೆಂದು ಪೇೞ್ದೊಡಾರ ಮಗಳೆಂದು ಬೆಸಗೊಂಡೊಡೀ ಪೊೞಲ್ಗೆ ಪ್ರಧಾನಂ ನಾಗದತ್ತಸೆಟ್ಟಿಯ ಮಗಳೆಂದು ಪೇೞ್ದೊಡರಸಂ ಕೇಳ್ದು ಕಿಮ್ಮಗಿರ್ದು ದೇವರ್ಗೆ ನಮಸ್ಕಾರಂಗೆಯ್ದು ಋಷಿಯರಂ ಬಂದಿಸಿ ತನ್ನ ಮನೆಗೆವೋದನ್ ಇತ್ತ ಸುಕೇಶಿನಿಯುಂ ದೇವರನರ್ಚಿಸಿ ಬಂದಿಸಿ ಗುರುಪರಿವಿಡಿಯಿಂದಂ ರಿಸಿಯರಂ ಬಂದಿಸಿ ವ್ರತಂಗಳನೇಱಿಸಿಕೊಂಡು ಸಿದ್ಧಸೇಸೆಯುಂ ತಾಯ್ಗಂ ತಂದೆಗಂ ಪೋಗಿ ಕೊಟ್ಟೊಡವರ್ಗಳುಂ ತಲೆಯೊಳಿಟ್ಟುಕೊಂಡು ಯೌವನಂ ನೆಱೆದ ಕೂಸಿನ ರೂಪಂ ನೋಡುತ್ತಿರ್ದಾರ್ಗೆ ಕುಡುವಮೆಂದು ತಮ್ಮೊಳ್ ನುಡಿಯುತ್ತಿರ್ಪಿನಮರಸಂ ಕನ್ನೆಯ ರೂಪಂ ಕಂಡಾಟಿಸಿ ಕೂಸಿನ ತಾಯಪ್ಪ ಸುರೂಪೆಗೆ ಬೞಿಯನಟ್ಟಿ ಬರಿಸಿ ಕೂಸನಾರ್ಗೆ ಕೊಟ್ಟಪಿರೆಂದು ಬೆಸಗೊಂಡೊಡೆನ್ನ ತಮ್ಮಂ ವರಾಂಗನೆಂಬೊನಾತನ ಮಗಂ ಜಿತರಂಗನೆಂಬೊನೆನ್ನ ಸೋದರಳಿಯನಾತಂಗೆ ಕೊಟ್ಟಪೆನೆಂದು ಪೇೞ್ದೊಡರಸಂ ಮಧುಸೇನಂ ಮಧುಸೂದನರೆಂಬಿರ್ವರ್ ಪ್ರಧಾನವೆರ್ಗಡೆಗಳಂ ನಾಗದತ್ತಸೆಟ್ಟಿಯಲ್ಲಿಗೆ ಕೂಸಂ ಬೇಡಿ

ದಿಂದಲೂ ಮಾಡಿರುವ ರೂಪಗಳಲ್ಲೆಲ್ಲ ಈ ಹೆಂಗುಸಿನ ಸಜೀವವೆನಿಸುವ ಶಿಲ್ಪದ ಪ್ರತಿಮೆ ಬಹಳ ಶ್ರೇಷ್ಠವಾದುದು" ಎಂದು ಆಕೆಯ ರೂಪಕ್ಕೆ ಆಶ್ಚರ್ಯಪಟ್ಟು ಹೊಗಳಿದನು. ಆಗ ಅವನ ಪಕ್ಕದಲ್ಲಿದ್ದ ದೇವದತ್ತನೆಂಬ ಯಾವನೋ ಒಬ್ಬನು-"ಈಕೆ ಅವಿವಾಹಿತೆಯಾದ ಓರ್ವ ಬಾಲಿಕೆ" ಎಂದು ಹೇಳಿದನು. ರಾಜನು ಅವಳನ್ನು ಯಾರ ಮಗಳೆಂದು ಕೇಳಿದಾಗ, ಅವನು-"ಈಕೆ ಈ ಪಟ್ಟಣದಲ್ಲಿ ಶ್ರೇಷ್ಠನಾದ ನಾಗದತ್ತಸೆಟ್ಟಿಯ ಮಗಳು" ಎಂದು ಹೇಳಿದನು. ರಾಜನು ಇದನ್ನು ಕೇಳಿ ಸುಮ್ಮಗಿದ್ದು, ದೇವರಿಗೆ ನಮಸ್ಕಾರ ಮಾಡಿ, ಋಷಿಗಳಿಗೆ ವಂದಿಸಿ, ತನ್ನ ಮನೆಗೆ ತೆರಳಿದನು. ಇತ್ತ ಸುಕೇಶಿನಿ ದೇವರನ್ನು ಪೂಜಿಸಿ, ವಂದಿಸಿದಳು. ಗುರು ಪರಂಪರೆಯ ಕ್ರಮದಿಂದ ಋಷಿಗಳನ್ನು ವಂದಿಸಿ, ವ್ರತಗಳನ್ನು ಧಾರಣೆ ಮಾಡಿಕೊಂಡು ಸಿದ್ಧರನ್ನು ಅರ್ಚಿಸಿದ ಮಂತ್ರಾಕ್ಷತೆಯನ್ನು ತೆಗೆದುಕೊಂಡು ಹೋಗಿ ತನ್ನ ತಾಯಿತಂದೆಗಳಿಗೆ ಕೊಟ್ಟಳು. ಅವರು ಅದನ್ನು ತಮ್ಮ ತಲೆಯಲ್ಲಿ ಇಟ್ಟುಕೊಂಡರು. ತಾರುಣ್ಯದಿಂದ ಕೂಡಿದ ಮಗಳ ರೂಪವನ್ನು ನೋಡುತ್ತ, 'ಈಕೆಯನ್ನು ಯಾರಿಗೆ ಮದುವೆ ಮಾಡಿ ಕೊಡಲಿ' ಎಂದು ತಮ್ಮೊಳಗೆ ಮಾತಾಡಿಕೊಳ್ಳುತ್ತಿದ್ದರು. ಅಷ್ಟರಲ್ಲಿ ರಾಜನು ಆ ಕನ್ನಿಕೆಯ ಸೌಂದರ್ಯವನ್ನು ಕಂಡು ಆಸೆಪಟ್ಟು ಆಕೆಯ ತಾಯಿಯಾದ ಸುರೂಪೆಯ ಬಳಿಗೆ ದೂತರನ್ನು ಕಳುಹಿಸಿ ಬರಮಾಡಿಸಿದನು. ಈ ಕನ್ಯೆಯನ್ನು ಯಾರಿಗೆ ಕೊಡುತ್ತೀರಿ ?-ಎಂದು ಕೇಳಿದನು. ಅದಕ್ಕೆ ಆಕೆ-"ನನಗೆ ವರಾಂಗನೆಂಬ ತಮ್ಮನಿದ್ದಾನೆ. ಅವನ ಮಗ ಜಿತರಂಗನೆಂಬುವನು, ನನಗೆ ಸೋದರಳಿಯನು. ಅವನಿಗೆ ಕೊಡುತ್ತೇನೆ" ಎಂದಳು. ರಾಜನು ಮಧುಸೇನ ಮಧುಸೂದನ ಎಂಬಿಬ್ಬರು ಪ್ರಮುಖರಾದ ಹೆಗ್ಗಡೆಗಳನ್ನು ನಾಗದತ್ತ ಸೆಟ್ಟಿಯಲ್ಲಿಗೆ ಆತನ ಮಗಳನ್ನು ತನಗೆ ಕೇಳುವುದಕ್ಕಾಗಿ ಕಳುಹಿಸಿದನು. ತನ್ನ ಉತ್ಕಂಠತೆಯಿಂದ

ಯಟ್ಟಿಯುತ್ತವಳನಾಗಿಯುವರ ಬಟಿಯನೆ ತಾನುಂ ನಾಗದತ್ತನ ಮನೆಗೆ ಪೋಗಿ ಕೂಸಂ ಬೇಡಿ ಪೆತ್ತಂ ನಾಗದತ್ತನುಮಷ್ಟಾಹ್ನಿಕ ಮಹಾಮಹಿಮೆಯನೆಂಟು ದಿವಸಂ ಮಾಡಿ ಪ್ರಶಸ್ತ ದಿನ ವಾರ ನಕ್ಷತ್ರ ಮುಹೂರ್ತ ಹೋರಾ ಲಗ್ನದೊಳ್ ಕೂಸಿನನುಕೂಲದೊಳ್ ಪಾಣಿಗ್ರಹಣಪುರಸ್ಸರಂ ಸುಕೇಶಿನಿಯುಂ ಗಂಧಭಾಜನನೆಂಬರಸಂಗೆ ಕೊಟ್ಟನಿಂತು ಮಹಾವಿಭೂತಿಯಿಂದಂ ಮದುವೆನಿಂದು ಗಂಧಭಾಜನ ನೃಪತಿಯುಂ ಸುಕೇಶಿನಿಯೊಳಿಷ್ಟ ವಿಷಯ ಕಾಮಭೋಗಂಗಳಂ ಪಲಕಾಲಮನುಭವಿಸುತ್ತಿರೆ ಮತ್ತೊಂದು ದಿವಸಂ ಕೌಶಲಾಧಿಪತಿಯಪ್ಪತಿಬಳನೆಂಬರಸಂಗಂ ಕಳಿಂಗಾಧಿಪತಿಯಪ್ಪ ಕಳಿಂಗನೆಂಬರಸಂಗಂ ತಮ್ಮೊಳ್ ವಿಗ್ರಹವಾದೊಡೆ ಗಂಧಭಾಜನ ನೃಪತಿ ತನ್ನ ಮತಿಶ್ರುತನೆಂಬ ಮಂತ್ರಿಯನಟ್ಟಿ ಇರ್ವರ್ಗಂ ಸಂಧಿಮಾಡಿದೊಡೆ ಕಳಿಂಗನೆಂಬರಸಂ ಮಧುಸೂದನನೆಂಬ ಪೆರ್ಗಡೆಯ ಕೆಯ್ಯೊಳ್ ಮದಾಂಧಗಂಧಹಸ್ತಿಯಂ ಗಂಧಭಾಜನ ನೃಪತಿಗೆ ಪಾಗುಡಮಟ್ಟಿದೊಡದಂ ಸೊರ್ಕಿನಿಂದಂ ಮಸಗಿದುದಂ ಗಂಧಹಸ್ತಿಯಂ ಸುಕೇಶಿನಿ ಕಂಡು ಜಾತಿಸ್ಮರೆಯಾಗಿ ಮೂರ್ಛೆವೋಗಿರ್ದಳಂ ದಾದಿ ಮೊದಲಾಗಿ ಕೆಲದೊಳಿರ್ದೋರೆಲ್ಲಂ ಚಂದನದ ನೀರ್ಗಳಂ ತಳಿದು ಬೀಸೆ ನೀಡಱಿಂದೆಟ್ಟುತ್ತಳನ್ನೆಗಮರಸನುತ್ತವಳನಾಗಿ ಪರಿತಂದಿದೇನೀಕೆಗೇಕಿಂತಾಯ್ತೆಂದು ಬೆಸಗೊಳೆ ದಾದಿಯೆಂದಳ್ ಸೊರ್ಕಾನೆಯುಂ ಕಂಡು ಮೂರ್ಛೆವೋದಳೆಂದು ಪೇಟ್ದೊಡಾ ಮಾತನರಸಂ

ಅವರ ಬಳಿಯಲ್ಲೇ ತಾನೂ ನಾಗದತ್ತನ ಮನೆಗೆ ಹೋಗಿ ಆ ಕನ್ಯೆಯನ್ನು ತನಗೆ ಕೊಡ್ವಂತೆ ಕೇಳಿ ಅವನ ಸಮ್ಮತಿ ಪಡೆದುಕೊಂಡನು. ನಾಗದತ್ತನು ಎಂಟು ದಿನಸಗಳ ಅಷ್ಟಾಹ್ನಿಕ ಮಹೋತ್ಸವಗಳನ್ನು ಮಾಡಿ, ಶುಭಕರವಾದ ದಿನ, ವಾರ, ನಕ್ಷತ್ರ ಮುಹೂರ್ತ, ಹೋರೆ, ಲಗ್ನಗಳು ತನ್ನ ಮಗಳಿಗೂ ಅನುಕೂಲವಾಗಿ ಇರುವಂದು ಪಾಣಿಗ್ರಹಣ ಪೂರ್ವಕವಾಗಿ ಸುಕೇಶಿನಿಯನ್ನು ಗಂಧಭಾಜನನೆಂಬ ರಾಜನಿಗೆ ಕೊಟ್ಟನು. ಹೀಗೆ ಮಹಾವೈಭವದಿಂದ ಮದುವೆಯಾದ ನಂತರ ಗಂಧಭಾಜನ ರಾಜನು ಸುಕೇಶಿನಿಯೊಂದಿಗೆ ಇಷ್ಟವಿಷಯಗಳಾದ ಕಾಮಸುಖಗಳನ್ನು ಹಲವು ಕಾಲ ಅನುಭವಿಸುತ್ತಿದ್ದನು. ಹೀಗಿರಲು ಮತ್ತೊಂದು ದಿನ ಕೌಶಲ ದೇಶಕ್ಕೆ ಒಡೆಯನಾದ ಅತಿಬಳನೆಂಬ ರಾಜನಿಗೂ ಕಳಿಂಗ ದೇಶದ ಒಡೆಯನಾದ ಕಳಿಂಗನೆಂಬ ಅರಸನಿಗೂ ತಮ್ಮೊಳಗೆ ಯುದ್ಧವಾಯಿತು. ಆ ಸಂದರ್ಭದಲ್ಲಿ ಗಂಧಭಾಜನ ರಾಜನು ಮತಿಶ್ರುತನೆಂಬ ತನ್ನ ಮಂತ್ರಿಯನ್ನು ಕಳುಹಿಸಿ ಇಬ್ಬರಿಗೂ ಸಂಧಿಯನ್ನು ಮಾಡಿದನು. ಕಳಿಂಗರಾಜನು ಮಧುಸೂದನನೆಂಬ ಅಧಿಕಾರಿಯ ಕೈಯಲ್ಲಿ ಸೊಕ್ಕಿ ಕಂಗೆಟ್ಟ ಗಂಧವಾರಣವನ್ನು ಗಂಧಭಾಜನ ರಾಜನಿಗೆ ಕಾಣಿಕೆಯಾಗಿ ಕಳುಹಿಸಿಕೊಟ್ಟನು. ಗರ್ವೋದ್ರೇಕದಿಂದ ಕೂಡಿದ ಆ ಮದ್ದಾನೆಯನ್ನು ಸುಕೇಶಿನಿ ಕಂಡು ಪೂರ್ವಜನ್ಮದ ಸ್ಮರಣೆ ಬಂದವಳಾಗಿ ಮೂರ್ಛಿತಳಾದಳು. ಆಗ ಬಳಿಯಲ್ಲಿದ್ದ ದಾದಿಯರು ಮುಂತಾದವರು ಶ್ರೀಗಂಧದ ನೀರನ್ನು ಸೇಚಿಸಿ ಗಾಳಿ ಹಾಕಲು ಬಹಳ ಹೊತ್ತಿನ ನಂತರ ಎಚ್ಚೆತ್ತಳು. ಅಷ್ಟರಲ್ಲಿ ರಾಜನು ಉತ್ಕಂಠಿತನಾಗಿ ಬಂದು 'ಇವರಿಗೆ ಹೀಗೆ ಆಗಲು ಕಾರಣವೇನು ?' ಎಂದು ಕೇಳಿದನು. ಆಗ ದಾದಿಯು "ಈಕೆ ಮದ್ದಾನೆ

ಕೇಳ್ದು ಮಱುಸೊಟನಾನೆಯುಂ ಕಂಡಂಜದಂತಿರೆ ಸುಕೇಶಿನಿಯ ಮಾಡದ ಕೇಗ್ಗೞೆಲ್ಲಾಯೆಡೆಗಳೊಳಂ [ವ್ಯಾಳಂಗಳಪ್ಪಾನೆಗಳಂ ತನ್ನ ಚಿತ್ತಾರಿಗರಿಂದಂ ಬರೆಯಿಸಿದಂ] ಮತ್ತೆ ಸುಕೇಶಿನಿಯುಂ ತನ್ನ ಮುನ್ನಿನ ಜನ್ಮದೊಳ್ ನೆಗೞ್ದುದೆಲ್ಲಮಂ ಪಟದೊಳ್ ತಾನೆ ಬರೆದಾರುಮಱಿಯದಂತಿರೇಕಾಂತದೊಳ್ ನೋಡುತ್ತಿರ್ಕುಮಿಂತು ಕಾಲಂ ಸಲೆ ಮತ್ತೊಂದು ದಿವಸಂ ಮುನ್ನಿನ ಗಂಧಹಸ್ತಿಯೊಡನೆ ಬಾರಿಯೊಳ್ ಮೂವತ್ತೆರಡು ಗಜಕ್ರೀಡೆಗಳಿಂದಂ ನೀಡುಂ ಬೇಗಂ ಕ್ರೀಡಿಸಿಯಾನೆಯುಂ ಸೇದೆಗೆಡಿಸಿ ತನ್ನ ವಸಕ್ಕೆ ಮಾಡಿಯೇಱಿಯಂಕುಸಮಂ ಪೊಳೆಯಿಸುತ್ತಮರಸಿಯಲ್ಲಿಗೆ ವಂದು ನಿಂದಿಂತಕ್ಕುಮೆ ಮೆಚ್ಚಿದಾ ಎಂದು ತನ್ನ ಸಾಹಸಮಂ ಪೇೞ್ದು ಮೆಱೆಯೆ ಸುಕೇಶಿನಿಯೆಂದೊಳ್ ದೇನೆಂಬಾನೆ ತಗರೊಳೋರಂತಪ್ಪುದು ಚಂದನಮಲಯಮೆಂಬ ಪಿರಿಯ ಪರ್ವತದೊಳ್ ಇಂದ್ರನೀಲ ಮಾಣಿಕದೊಳೋರಂತಪ್ಪ ಬಣ್ಣಮನೊಡೆಯುದು ಮಲಯಸುಂದರನೆಂಬಾನೆಯುಂಟು ಹಸ್ತಿಯೂಥಕ್ಕೆಱೆಯನಪ್ಪುದು ಎಲ್ಲಾ ಕಾಲಮುಂ ಮದದಿಂದಂ ಪೆರ್ಚುತ್ತಿರ್ದುದು ಕೆಂದಾವರೆಯ ವಣ್ಣದೊಳೋರಂತಪ್ಪ ಬಣ್ಣಮನೊಡೆಯ ಪದ್ಮಾವತಿಯೆಂಬ ಪಿಡಿಯೊಡನೆ ಕ್ರೀಡಿಸುತ್ತಿರ್ಪಾನೆಯುಂ ನಿನ್ನ ವಸಕ್ಕೆ ಮಾಡಿ ಪಿಡಿದೇಱಿಕೊಂಡು ವಂದೊಡೆ ನಿನ್ನ ಗಜ

ಯನ್ನು ಕಂಡು ಮೂರ್ಛೆಹೋದಳು" ಎಂದು ಹೇಳಿದಳು. [ಆ ಮಾತನ್ನು ರಾಜನು ಕೇಳಿ ಆಕೆ ಮತ್ತೊಂದು ಬಾರಿ ಆನೆಯನ್ನು ಕಂಡಾಗ ಹೆದರದಂತೆ ಮಾಡುವುದಕ್ಕಾಗಿ ಸುಕೇಶಿನಿಯ ಮನೆಯ ಗೋಡೆಗಳ ಎಲ್ಲಾ ಕಡೆಗಳಲ್ಲಿಯೂ ತುಂಟಾಟ ಮಾಡತಕ್ಕ ಆನೆಗಳನ್ನು ತನ್ನ ಚಿತ್ರಕಾರರಿಂದ ಬರೆಯಿಸಿದನು. ಆ ಮೇಲೆ ಸುಕೇಶಿನಿ ತನ್ನ ಹಿಂದಿನ ಜನ್ಮದಲ್ಲಿ ನಡೆದುದೆಲ್ಲವನ್ನೂ ಪಟದಲ್ಲಿ ತಾನೆ ಬರೆದು ಯಾರೂ ತಿಳಿಯದ ಹಾಗೆ ಒಬ್ಬಳೇ ಇದ್ದು ಹೀಗೆಯೇ ಕಾಲಕಳೆಯಿತು. ಮತ್ತೊಂದು ದಿನಸ ಗಂಧಭಾಜನನು ಹಿಂದಿನ ಮದ್ದಾನೆಯೊಡನೆ ಖೆಡ್ಡಾದಲ್ಲಿ ಮೂವತ್ತೆರಡು ಸಾರಿ ಗಜಕ್ರೀಡೆಗಳನ್ನು ಬಹಳ ಹೊತ್ತಿನವರೆಗೆ ನಡೆಸಿ ಆನೆಯನ್ನು ಬಳಲಿಸಿ ತನ್ನ ವಶಕ್ಕೆ ತಂದನು. ಅದರ ಮೇಲೇರಿ ಅಂಕುಶವನ್ನು ಹೊಳೆಯಿಸುತ್ತ, ರಾಣಿಯ ಬಳಿಗೆ ಬಂದು ನಿಂತನು. "ನಾನು ಹೀಗೆ ಮಾಡಿದ್ದು ಆಗಬಹುದೇ ? ಮೆಚ್ಚಿದೆಯಾ ?" ಎಂದು ತನ್ನ ಸಾಹಸವನ್ನು ಹೇಳಿ ಮೆರೆದುಕೊಂಡನು. ಆಗ ಸುಕೇಶಿನಿ ಹೀಗೆಂದಳು–"ಇದೇನು ಮಹಾ! ಕ್ಷುಲ್ಲಕವಾದ ಆನೆ. ಇದು ಟಗರಿನಂತಿರುವುದು. ಚಂದನಮಲಯವೆಂಬ ದೊಡ್ಡ ಪರ್ವತದಲ್ಲಿ ಇಂದ್ರನೀಲ ಮಾಣಿಕ್ಯದ ಹಾಗಿರುವ ಬಣ್ಣವನ್ನುಳ್ಳ ಮಲಯಸುಂದರನೆಂಬ ಆನೆಯಿದೆ. ಅದು ಆನೆಗಳ ಹಿಂಡಿಗೆ ಒಡೆಯನಾಗಿರುವುದು. ಎಲ್ಲಾ ಕಾಲದಲ್ಲಿಯೂ ಸೊಕ್ಕೇರಿಕೊಂಡಿರುವುದು. ಕೆಂಪು ತಾವರೆಯ ಬಣ್ಣದ ಹಾಗಿರುವ ಬಣ್ಣವುಳ್ಳ ಪದ್ಮಾವತಿಯೆಂಬ ಹೆಣ್ಣಾನೆಯೊಡನೆ ಆಡುತ್ತಿರುವ ಆ ಆನೆಯನ್ನು ನೀನು ವಶಮಾಡಿ ಹಿಡಿದು ಅದನ್ನೇರಿಕೊಂಡು ಬಂದರೆ ಆನೆಸವಾರಿಯಲ್ಲಿ ನಿನಗಿರುವ ಪ್ರೀತಿಯನ್ನೂ ಸವಾರಿಯ ಪ್ರೌಢಿಮೆಯನ್ನೂ ಪೌರುಷವನ್ನೂ ತಿಳಿಯಬಹುದು. ಆ ಆನೆಯನ್ನು ನೀನು ತಂದೆಯಾದರೆ,

ಪ್ರಿಯತೆಯುಮೇಱಿಯಾಡಲ್ ಬಲ್ಮೆಯುಂ ಕಲಿತನಮುಂ ಸಾಹಸಮುಂ ಗಂಡಗುಣಮುಮ ನಱಿಯಲಕ್ಕುಮಾಯಾನೆಯುಂ ತಂದಂದು ಗಂಡರ್ ನಿನ್ನನ್ನರೀ ಭುವನದೊಳಾರುಮಿಲ್ಲೆಂದೊಸೆದು ಮೆಚ್ಚಿ ಪೊಗೞ್ವೆನೆಂದೊಡರಸನಿಂತೆಂದಂ ನೀನಪ್ಪೊಡಿಲ್ಲಿ ಪುಟ್ಟಿದೆ ಆಯಾನೆಯುಮನೆಲ್ಲಿ ಕಂಡೆಯೆಂತಱಿವೆಯೆಂದು ಬೆಸಗೊಳೆ ಸುಕೇಶಿಯಿಂತೆಂದಳ್ ಆಂ ಮುನ್ನಿನ ಜನ್ಮದೊಳ್ ಮನೋವೇಗೆಯೆನೆಂಬ ವಿದ್ಯಾಧರಿ ಎನ್ನಂದಿನ ಭರ್ತಾರಂ ಮಣಿಚೂಳನೆಂಬೊಂ ವಿದ್ಯಾಧರನಾತನೊಡನೆ ಭೌಮವಿಹಾರಾರ್ಥಂ ತೊೞಲ್ವಲ್ಲಿ ಚಂದನಮಲಯಮೆಂಬ ಪರ್ವತದೊಳ್ ಕರಿಣೀವೃಂದಂ ಬೆರಸಾಡುವ ಕರಿಪತಿಯನೈರಾವಣ ಸನ್ನಿಭಮಂ ಕಂಡೆನೆಂದುರ್ಕೆವದಿಂದಂ ಪೇೞ್ದೊಡಾ ಮಾತನರಸಂ ಕೇಳ್ದು ಪೂರ್ವಜನ್ಮಾಂತರದೊಳ್ ಕಟ್ಟಿಪಟ್ಟ ಮುಳಿಸನೊಡೆಯೊಂ ತನ್ನುಳ್ಳ ಸಮಸ್ತ ಬಲಂಬೆರಸುಪೋಗಿ ಮಲಯಪರ್ವತಮೆಲ್ಲಮಂ ಬಳಸಿ ಸುತ್ತಿಮುತ್ತಿದಾಗಳಿಂದ್ರನೀಲ ಮಾಣಿಕದ ತೇಜದೊಳೋರಂತಪ್ಪ ಮೆಯ್ಯನೊಡೆಯ ಗಜಪತಿಯುಂ ಮುಗಿಲಧ್ವನಿಯ ಮೆಲ್ಗಂಭೀರಮಪ್ಪ ಗರ್ಜನೆಯನೊಡೆಯದುಂ ಬಂದು ಪಡೆಯೆಲ್ಲಮಂ ಹತವಿತತ ಕೋಳಾಹಳಮೆೞ್ದು ಕೊಲ್ವುದ ನಾದಮಾನುಂ ಕಲಿಯಪ್ಪುದನರಸಂ ಕಂಡು ಪಿಡಿಯಲಾಱದಾನೆಯಂ ಕೊಂದೆರಡುಂ ನಿಡಿಯ ತೋರಮಪ್ಪ ಕೊಂಬುಗಳುಮಂ ಕುಂಭಸ್ಥಳದ ಮುತ್ತುಗಳುಮಂ ಕೊಂಡೊಸಗೆಯಿಂದಂ

ನಿನ್ನಂತಹ ಗಂಡುಗಲಿಗಳು ಈ ಲೋಕದಲ್ಲಿ ಯಾರೂ ಇಲ್ಲ–ಎಂದು ಪ್ರೀತಿಪಟ್ಟು ಮೆಚ್ಚಿ ನಿನ್ನನ್ನು ಹೊಗಳುವೆನು–" ಎಂದಳು. ಆಗ ರಾಜನು ಹೀಗೆಂದನು–"ನೀನಾದರೆ ಹುಟ್ಟಿದ್ದು ಇಲ್ಲಿ. ಆ ಆನೆಯನ್ನು ಎಲ್ಲಿ ಕಂಡೆ ಮತ್ತು ಅದು ನಿನಗೆ ಹೇಗೆ ಗೊತ್ತು?" ಎಂದು ಕೇಳಲು ಸುಕೇಶಿನಿ ಹೀಗೆಂದಳು– "ನಾನು ಹಿಂದಿನ ಜನ್ಮದಲ್ಲಿ ಮನೋವೇಗೆ ಎಂಬ ವಿದ್ಯಾಧರಿಯಾಗಿದ್ದೆನು. ಆಗಿನ ನನ್ನ ಗಂಡನು ಮಣಿಚೂಳನೆಂಬ ವಿದ್ಯಾಧರನು. ನಾನು ಆತನೊಡನೆ ಭೂಮಿಯ ಮೇಲೆ ಸಂಚಾರ ಮಾಡುವ ವಿನೋದಕ್ಕಾಗಿ ಸುತ್ತಾಡುತ್ತಿದ್ದಾಗ ಚಂದನಮಲಯವೆಂಬ ಬೆಟ್ಟದಲ್ಲಿ ಹೆಣ್ಣಾನೆಗಳ ಹಿಂಡನ್ನು ಕೂಡಿಕೊಂಡು ಕ್ರೀಡಿಸತಕ್ಕ ಆನೆಗಳೊಡೆಯನನ್ನು ಕಂಡೆನು. ಅದು ಇಂದ್ರನ ಐರಾವತದಂತೆ ಕಾಣುತ್ತಿತ್ತು–" ಎಂದು ಕಪಟದಿಂದ ಹೇಳಿದಳು. ಆ ಮಾತನ್ನು ರಾಜನು ಕೇಳಿ ಹಿಂದಿನ ಯಾವುದೋ ಜನ್ಮದಲ್ಲಿ ಕಟ್ಟಲ್ಪಟ್ಟ ಕೋಪವುಳ್ಳವನಾಗಿ ತನ್ನಲ್ಲಿದ್ದ ಎಲ್ಲಾ ಸೈನ್ಯವನ್ನೂ ಕೂಡಿಕೊಂಡು ಹೋಗಿ ಮಲಯಪರ್ವತವೆಲ್ಲವನ್ನೂ ಆವರಿಸಿ ಸುತ್ತಲೂ ಮುತ್ತಿಗೆ ಹಾಕಿದನು. ಆಗ ಮೋಡದ ಶಬ್ದದಂತೆ ಮೃದು ಮತ್ತು ಗಂಭೀರವಾದ ಗರ್ಜನೆಯನ್ನುಳ್ಳ, ಇಂದ್ರನೀಲ ಮಾಣಿಕ್ಯದ ಕಾಂತಿಯನ್ನು ಹೋಲುವ ದೇಹವುಳ್ಳ ಆನೆಗಳ ರಾಜನು ಬಂದು ರಾಜನ ಸೈನ್ಯವನ್ನೆಲ್ಲಾ ಚಲ್ಲಾಪಿಲ್ಲಿಯಾಗುವಂತೆ ಹೊಡೆದು ಎಳೆದು ಕೊಲ್ಲಲು ತೊಡಗಿತು. ಈ ಆನೆ ಅತ್ಯಂತ ಶೌರ್ಯವುಳ್ಳುದೆಂಬುದನ್ನು ರಾಜನು ಕಂಡು, ಅದನ್ನು ಹಿಡಿಯಲಾರದೆ ಆ ಆನೆಯನ್ನು ಕೊಂದು ಅದರ ಉದ್ದವಾದ ಮತ್ತು ದಪ್ಪವಾದ ಎರಡು ದಾಡೆಗಳನ್ನೂ ಅದರ ತಲೆಯ ಮುತ್ತುಗಳನ್ನೂ ತೆಗೆದುಕೊಂಡು, ಸಂತೋಷವಾರ್ತೆ

ಬೇಗಂ ಚಂಪಾಪುರಕ್ಕೆ ವಂದರಮನೆಯುಂ ಪೊಕ್ಕರಸಿಯುಂ ಕಂಡು ನಿನ್ನ ನಚ್ಚುವ ಮಲಯ ಕೊಂಬುಗಳುಮಂ ಮುತ್ತುಗಳುಮಂ ಕೊಳ್ಳೆಂದವಂ ಸುಕೇಶಿನಿಯ ಮುಂದೆ ತಂದಿಟ್ಟೊಡೆ ಸುಕೇಶಿನಿಯುಂ ಹಾ ಮಲಯ ಸುಂದರಾ ಹಾ ಎನ್ನ ನಲ್ಲನೆ ಹಾ ಎನ್ನ ಮಲಯ ಸುಂದರನಪ್ಪ ಸ್ವಾಮಿಯೆಂದು ಪ್ರಳಾಪಂಗೆಯ್ದು ಎರಡು ಕೊಂಬುಗಳುಮಂ ತಚಿಕ್ಕೈಸಿಯಾದ ಮಾನುಂ ಬಿಗಿದಪ್ಪಿಕೊಂಡು ಸತ್ತಳ್ ಸುಕೇಶಿನಿ ಸತ್ತುದರ್ಕ್ಕರಸಂ ಮೊದಲಾಗಿ ಪರಿವಾರ ಮೆಲ್ಲಮುಂ ಬೆಱಗಾಗಿ ವಿಸ್ಮಯಂಬಟ್ಟು ದುಃಖಂಗೆಯ್ದರ್ ಕೆಲವು ದಿವಸದಿಂ ಯಶೋಧರರೆಂಬ ಕೇವಲ ಜ್ಞಾನಿಗಳ್ ವಿಹಾರಿಸುತ್ತಮಾ ಚಂಪಾನಗರಕ್ಕೆ ವಂದು ಪ್ರಮದೋದ್ಯಾನವನದೊಳಿರ್ದ ರೆಂಬ ಮಾತನರಸಂ ಱಿಸಿನಿವೇದಕನಿಂದಱಿದು ಸಪರಿವಾರಂ ಬೆರಸು ಬಂದರ್ಚಿಸಿ ಯಥೋಚಿತ ಸ್ಥಾನದೊಳಿರ್ದಂ ಮತ್ತಂ ನಾಗದತ್ತಸೆಟ್ಟಿಯುಂ ಸುರೂಪೆಯುಂ ವರಾಂಗನುಂ ಪ್ರಿಯಂಗುವುಂ ಮೊದಲಾಗೊಡೆಯ ಶ್ರಾವಕ ಜನಂಗಳ್ ಬಂದರ್ಚಿಸಿ ತಂತಮ್ಮೆಡೆಯೊಳಿರ್ದು ಧರ್ಮಮಂ ಕೇಳ್ದು ತದನಂತರಮೆ ವೈರಾಗ್ಯಮಾಗಿ ಸುಕೇಶಿನಿಯ ದುಃಖಮಂ ಸೈರಿಸಲಾಱದೆ ಸುಕೇಶಿನಿಯ ತಂದೆಯಪ್ಪ ನಾಗದತ್ತಸೆಟ್ಟಿಯುಂ ತಾಯ್ ಸುರೂಪೆಯುಂ ಮಾವನಪ್ಪ ವರಾಂಗನುಂ ವರಾಂಗನ ಭಾರ್ಯೆಯಪ್ಪ ಪ್ರಿಯಂಗುವುಮಂತು ನಾಲ್ವರುಮೆಟ್ದಭಿಮುಖರಾಗಿ ದೀಕ್ಷಾಪ್ರಸಾದಂ ಗೆಯ್ಯಿಂ ಭಟಾರಾ ಎಂದು ಬೇಡಿ ತಪಂಬಟ್ಟರ್ ಮತ್ತಂ ಸುಕೇಶಿನಿಯಾ ಮಲಯಸುಂದರ

ಯೊಂದಿಗೆಬೇಗನೆ ಚಂಪಾಪುರಕ್ಕೆ ಬಂದನು. ಅರಮನೆಯನ್ನು ಪ್ರವೇಶಿಸಿ ಅರಸಿಯನ್ನು ಕಂಡು "ನಿನ್ನ ಪ್ರೀತಿಯ ಮಲಯ ಸುಂದರನ ದಾಡೆಗಳನ್ನೂ ಮುತ್ತುಗಳನ್ನೂ, ಇದೋ, ತೆಗೆದುಕೋ" ಎಂದು ಅವನ್ನು ಸುಕೇಶಿನಿಯ ಎದುರಿಗೆ ತಂದಿಟ್ಟನು. ಆಗ ಅವಳು ಹಾ ಮಲಯ ಸುಂದರಾ, ಹಾ ನನ್ನ ಪ್ರಿಯನೇ ನನ್ನ ಮಲಯ ಸುಂದರನಾದ ಒಡೆಯನೇ!' ಎಂದು ಅತ್ತು ಎರಡು ದಾಡೆಗಳನ್ನೂ ಗಾಢವಾಗಿ ಅಪ್ಪಿಕೊಂಡು ಪ್ರಾಣಬಿಟ್ಟಳು. ಸುಕೇಶಿನಿ ಸತ್ತುದಕ್ಕಾಗಿ ರಾಜನೂ ಪರಿವಾರವೆಲ್ಲವೂ ಆಶ್ಚರ್ಯ ಪಟ್ಟು ದುಃಖಿಸಿದರು. ಕೆಲವು ದಿನಗಳ ನಂತರ ಯಶೋಧರರೆಂಬ ಕೇವಲ ಜ್ಞಾನವುಳ್ಳ ಋಷಿಗಳು ಸಂಚಾರ ಮಾಡುತ್ತ ಆ ಚಂಪಾನಗರಕ್ಕೆ ಬಂದು ಪ್ರಮದೋದ್ಯಾನದಲ್ಲಿ ಇದ್ದಾರೆ–ಎಂಬ ಸಂಗತಿಯನ್ನು ರಾಜನು ಋಷಿನಿವೇದಕನ ಮಾತಿನಿಂದ ತಿಳಿದು ಪರಿವಾರಸಮೇತನಾಗಿ ಬಂದು ಅವರನ್ನು ಪೂಜಿಸಿ ಯಥೋಚಿತವಾದ ಸ್ಥಾನದಲ್ಲಿ ಇದ್ದನು. ಆ ಮೇಲೆ ನಾಗದತ್ತ ಸೆಟ್ಟಿ, ಸುರೂಪೆ, ವರಾಂಗ, ಪ್ರಿಯಂಗು–ಮುಂತಾಗಿರುವ ಶ್ರಾವಕ ಜನರು ಬಂದು ಪೂಜಿಸಿ ತಮ್ಮ ತಮ್ಮ ಸ್ಥಾನಗಳಲ್ಲಿ ಇದ್ದು ಧರ್ಮಬೋಧನೆಯನ್ನು ಕೇಳಿದರು. ಅನಂತರ ವೈರಾಗ್ಯವುಂಟಾಗಿ, ಸುಕೇಶಿನಿಯ ಶೋಕವನ್ನು ಸಹಿಸಲಾರದೆ, ಅವಳ ತಂದೆ ನಾಗದತ್ತ ಸೆಟ್ಟಿ, ತಾಯಿಯಾದ ಸುರೂಪೆ, ಮಾವನಾದ ವರಾಂಗ, ವರಾಂಗನ ಹೆಂಡತಿಯಾದ ಪ್ರಿಯಂಗು-ಅಂತು ನಾಲ್ಕು ಮಂದಿಯೂ ಎದ್ದು ಮುನಿಗಳಿಗೆ ಎದುರಾಗಿ- "ಸ್ವಾಮೀ, ದೀಕ್ಷೆಯನ್ನು ಅನುಗ್ರಹಿಸಿರಿ" ಎಂದು ಪ್ರಾರ್ಥಿಸಿ ದೀಕ್ಷೆಪಡೆದು ತಪಸ್ಸು ಮಾಡಿದರು. ಆ

ನೆಂಬಾನೆಯ ಕೊಂಬುಗಳನಪ್ಪಿ ಸತ್ತಳೆಂಬ ಮಾತಂ ವರಾಂಗನುಂ ಕೇಳ್ದು ಜನ್ಮಾನುಬಂಧಿಯಪ್ಪ ಸ್ನೇಹಂ ಕಾರಣಮಾಗಿ ದುಃಖಮಂ ಸೈರಿಸಲಾಱದೆ ತಪಂಬಟ್ಟು ನಿದಾನಸಹಿತಂ ತಪಂಗೆಯ್ದನಿತ್ತ ಗಂಧಭಾಜನ ನೃಪತಿ ಯಶೋಧರ ಕೇವಲಿಗಳನಿಂತೆಂದು ಬೆಸಗೊಂಡಂ ಭಟಾರಾ ಸುಕೇಶಿನಿ ಮಲಯಸುಂದರನೆಂಬಾನೆಯ ಕೊಂಬುಗಳನಪ್ಪಿಕೊಂಡು ಸತ್ತುದರ್ಕೆ ಕಾರಣಮೇನೆಂದು ಬೆಸಗೊಂಡೊಡೆ ಕೇವಲ ಜ್ಞಾನಿಗಳಿಂತೆಂದು ಪೇಳ್ದರ್ ದಕ್ಷಿಣಾಪಥದೊಳ್ ದ್ರವಿಳವಿಷಯದೊಳ್ ದಕ್ಷಿಣ ಮಧುರೆಯೆಂಬುದು ಪೊೞಲದನಾಳ್ವೊಂ ಸುಂದರಪಾಂಡ್ಯನೆಂಬೊನರಸನಾತನರಸಿಯಮೃತ ಮಹಾದೇವಿಯೆಂಬೊಳಂತವರ್ಗ್ಗಳಿಪ್ಪ ವಿಷಯ ಕಾಮಭೋಗಂಗಳನನುಭವಿಸುತ್ತಿರೆ ಮತ್ತಮಾ ಪೊೞಲೊಳಾರ್ಯನಂದಿಯೆಂಬೊಂ ಸೆಟ್ಟಿಯಾತನ ಪರದಿಯವಿಧಿಯೆಂಬೊಳಾ ಇರ್ವ್ವರ್ಗ್ಗಂ ಸುಕೀರ್ತಿಯೆಂಬೊಳ್ ಮಗಳಾದಳ್ ಮತ್ತೊರ್ವನಾ ಪೊೞಲೊಳ್ ಸುದರ್ಶನನೆಂಬೊಂ ಪರದನಾತನ ಪರದಿ ವೀರಶ್ರೀಯೆಂಬೊಳಾಯಿರ್ವ್ವರ್ಗ್ಗಂ ಮಗಂ ಪ್ರಿಯದರ್ಶನನೆಂಬೊನಾತಂಗಾ ಸುಕೀರ್ತಿಯುಂ ಕೊಟ್ಟರ್ ಸುಕೀರ್ತಿಯ ಕೆಳದಿ ಮಾಲೆಗಾರ್ತಿ ಪ್ರಿಯಸೇನೆಯೆಂಬೊಳಂತವರ್ಗ್ಗಳಿಪ್ಪ ವಿಷಯ ಕಾಮಭೋಗಂಗಳನನುಭವಿಸುತ್ತಿರೆ ಮತ್ತೊಂದು ದಿವಸಂ ಸುಕೀರ್ತಿ ತನ್ನ ಭರ್ತಾರ

ಮೇಲೆ ಸುಕೇಶಿನಿ ಆ ಮಲಯ ಸುಂದರನೆಂಬ ಆನೆಯ ಕೋಡುಗಳನ್ನು ಅಪ್ಪಿಕೊಂಡು ಸತ್ತಳೆಂಬ ಸುದ್ದಿಯನ್ನು ವರಾಂಗನು ಕೇಳಿ, ಜನ್ಮಾಂತರದಿಂದ ಬಂದಿದ್ದ ಪ್ರೀತಿಯೇ ಕಾರಣವಾಗಿ ವ್ಯಸನವನ್ನು ಸಹಿಸಲಾರದೆ ತಪಸ್ಸನ್ನು ಸ್ವೀಕರಿಸಿ ಸಂಕಲ್ಪದೊಡನೆ ತಪಸ್ಸನ್ನು ಮಾಡಿದನು. ಇತ್ತ ಗಂಧಭಾಜನ ರಾಜನು ಯಶೋಧರ ಮುನಿಗಳನ್ನು ಕುರಿತು "ಸ್ವಾಮಿ, ಸುಕೇಶಿನಿಯು ಮಲಯ ಸುಂದರನೆಂಬ ಆನೆಯ ದಾಡೆಗಳನ್ನು ಅಪ್ಪಿಕೊಂಡು ಸತ್ತುದಕ್ಕೆ ಕಾರಣವೇನು ?- ಎಂದು ಕೇಳಿದನು. ಅದಕ್ಕೆ ಕೇವಲಜ್ಞಾನಿಗಳಾದ ಯಶೋಧರ ಮುನಿಗಳು ಹೀಗೆಂದರು—ದಕ್ಷಿಣಾಪಥದಲ್ಲಿರುವ ದ್ರಾವಿಡ ದೇಶದಲ್ಲಿ ದಕ್ಷಿಣ ಮಧುರೆ ಎಂಬ ಪಟ್ಟಣವಿದೆ. ಅದನ್ನು ಆಳುವವನು ಸುಂದರಪಾಂಡ್ಯನೆಂಬ ರಾಜನು. ಅವನ ಪತ್ನಿ ಮಹಾದೇವಿಯೆಂಬವಳು. ಅಂತು ಅವರು ತಮಗೆ ಪ್ರಿಯವಾದ ಸುಖಗಳನ್ನು ಅನುಭವಿಸುತ್ತ ಇದ್ದರು. ಮತ್ತು, ಆ ಪಟ್ಟಣದಲ್ಲಿ ಆರ್ಯನಂದಿಯೆಂಬ ಸೆಟ್ಟಿಯಿದ್ದನು. ಅವನ ಪತ್ನಿ ಅವಿಧಿ ಎಂಬವಳು. ಆ ಇಬ್ಬರಿಗೆ ಸುಕೀರ್ತಿ ಎಂಬ ಮಗಳಾದಳು. ಆ ಪಟ್ಟಣದಲ್ಲಿ ಸುದರ್ಶನನೆಂಬ ಮತ್ತೊಬ್ಬ ವರ್ತಕನಿದ್ದನು. ಅವನ ಹೆಂಡತಿ ವೀರಶ್ರೀಯೆಂಬಾಕೆ. ಆ ಇಬ್ಬರಿಗೂ ಪ್ರಿಯದರ್ಶನನೆಂಬವನು ಮಗನು. ಅವನಿಗೆ ಸುಕೀರ್ತಿಯನ್ನು ಕೊಟ್ಟರು. ಸುಕೀರ್ತಿಯ ಗೆಳತಿ, ಮಾಲೆಗಾರ್ತಿಯಾದ ಪ್ರಿಯಸೇನೆ ಎಂಬುವಳು. ಅಂತು ಅವರು ಇಷ್ಟವಿಷಯದ ಕಾಮಸುಖಗಳನ್ನು ಅನುಭವಿಸುತ್ತ ಇದ್ದರು. ಹೀಗಿರಲು ಮತ್ತೊಂದು ದಿನ ಸುಕೀರ್ತಿ ತನ್ನ ಗಂಡನೊಡನೆ ಹೀಗೆಂದಳು-ಕಾಡು, ಗುಡ್ಡ, ಮರಳು

ನನಿಂತೆಂದಳಡವಿಯೊಳಂ ಪರ್ವತಂಗಳೊಳಂ ಪುಳಿನ ಸ್ಥಳಂಗಳೊಳಮೆನಗೆ ಕ್ರೀಡಿಸಲಟ್ಟಿ ಯಾದುದೆನೆ ನಿನ್ನಟ್ಟಿಯಂ ನೆಱಪಲಕ್ಕುಮೆಂದು ಪ್ರಿಯದರ್ಶನನುಂ ಸುಕೀರ್ತಿಯುಂ ಪ್ರಿಯ ಸೇನೆಯುಮಂತು ಮೂವರುಂ ಪರಿವಾರಸಹಿತಮಡವಿಗೆ ಪೋಗಿಯಲ್ಲಿ ಕಾನನ ವನ ಸರಿತ್ಸರೋವರ ಪ್ರದೇಶಂಗಳೊಳ್ ಪರಿಜನಂಬೆರಸು ತದೀಪ್ಸಿತ ಪ್ರದೇಶಂಗಳೊಳ್ ವಿಹಾರಿಸಿ ರಮ್ಯಮಪ್ಪ ಗಿರಿ ನದಿಯ ಪುಷ್ಪಪಲ್ಲವಲತಾಕೀರ್ಣಮಪ್ಪ ಪುಳಿನಸ್ಥಳಂಗಳೊಳ್ ಕ್ರೀಡಿಸುತ್ತಿರ್ಪನ್ನೆಗಂ ಹಸ್ತಿ ಯೂಥಂ ಬರ್ಪುದಂ ಕಂಡಾಗಳೊಂದು ಮದಾಂಧ ಗಂಧ ಸಿಂಧುರಂ ಕರಿಣೀವೃಂದಂಗಳಿಂ ಪರಿವೇಷ್ಟಿತನಾಗಿ ಕರಿಣೀಗಣಂಗಳಾ ಕಾಶಪುಷ್ಪಂಗಳಿಂ ಚಾಮರಮಿಕ್ಕೆ ಮೃದುಪಲ್ಲವಂಗಳಂ ಕಬಳಂಗೊಳುತ್ತುಂ ಲೀಲೆಯಿಂ ಬಂದು ಸ್ವಚ್ಛವಿಚ್ಛಳಾಕಾರಮಪ್ಪ ಮಡುವಂ ಪೊಕ್ಕು ಮನೋ ಹಾರಿಗಳಪ್ಪ ಕರಿಣೀಗಣದೊಡನೆ ಕ್ರೀಡಿಸುವುದಂ ಮೂವರುಂ ಕಂಡು ಹಸ್ತಿಭೋಗಂಗಳೊಳಪ್ಪ ಕಾಂಕ್ಷೆಯಿಂದಂ ನಿದಾನಂಗೆಯ್ದು ತಿರ್ಯಗಾಯುಷ್ಯಮಂ ಕಟ್ಟಿದರಿಂತು ಕಾಲಂ ಸಲೆ ಮತ್ತೊಂದು ದಿವಸಂ ಬಱಸಿಡಿಲ್ ಪೊಡೆದು ಪ್ರಿಯಸೇನೆ ಸತ್ತಳ್ ಪ್ರಿಯದರ್ಶನನೊಂದು ದಿವಸಂ ತನ್ನ ಭಾರ್ಯೆವೆರಸು ಕದಳೀವನದೊಳ್ ಮಱಲುಂದಿದಲ್ಲಿಗೆ ಕಾಳಿಂಗನಾಗಂ ಬಂದೊಡದಱ ಮೇಗೆಕಾಲಂ ನೀಡಿದೊಡೆ ಕರ್ಚಿತ್ತಾತನುಮಾಗಳೆ ಪರವಶನಾಗಿ ಪ್ರಾಣಪರಿತ್ಯಾಗಂ ಗೆಯ್ದನಂ ಕಂಡು

ಜಾಗಗಳಲ್ಲಿ ಕ್ರೀಡಿಸಬೇಕೆಂದು ನನಗೆ ಬಯಕೆಯಾಗಿದೆ. ಹೀಗೆನ್ನಲು, "ನಿನ್ನ ಬಯಕೆ ಯನ್ನೂ ಈಡೇರಿಸಬಹುದು" ಎಂದು ಪ್ರಿಯದರ್ಶನನು ಒಪ್ಪಿಗೆ ಕೊಟ್ಟನು. ಅದರಂತೆ ಪ್ರಿಯದರ್ಶನ, ಸುಕೀರ್ತಿ, ಪ್ರಿಯಸೇನೆ–ಅಂತು ಮೂವರು ಪರಿವಾರದೊಂದಿಗೆ ಕಾಡಿಗೆ ಹೋದರು. ಅಲ್ಲಿ ಕಾಡು, ಉದ್ಯಾನ, ನದಿ, ಸರೋವರ ಪ್ರದೇಶಗಳಲ್ಲಿ ಸೇವಕಜನರೊಂದಿಗೆ ಅವರಿಗೆ ಇಷ್ಟವಾದ ಸ್ಥಳಗಳಲ್ಲಿ ಸಂಚರಿಸಿ ಮನೋಹರವಾದ ಬೆಟ್ಟದ ಹೊಳೆಯ ಹೂ, ಚಿಗುರು, ಬಳ್ಳಿಗಳಿಂದ ಕೂಡಿದ ಮರಳಿನ ಸ್ಥಳಗಳಲ್ಲಿ ಕ್ರೀಡಿಸುತ್ತಿದ್ದರು. ಅಷ್ಟರಲ್ಲಿ ಒಂದು ಆನೆ ಹಿಂಡು ಬರುವುದನ್ನು ಕಂಡರು. ಆ ಹಿಂಡಿನಲ್ಲಿ ಒಂದು ಸೊಕ್ಕೇರಿ ಕಂಗಾಣದ ಆನೆ ಹೆಣ್ಣಾನೆಗಳ ಹಿಂಡಿನಿಂದ ಆವರಿಸಿದ್ದಿತು. ಹೆಣ್ಣಾನೆ ಹಿಂಡುಗಳು ನಾಣಿಲು ಹೂ ಗಳಿಂದ ಚಾಮರ ಬೀಸುತ್ತಿರಲು, ಮೆತ್ತಗಿನ ಚಿಗುರುಗಳನ್ನು ಮೆಲ್ಲುತ್ತ ವಿನೋದದಿಂದ ಬಂದು ಅದು ಸ್ವಚ್ಛವಾಗಿ ಹೊಳೆಯುವ ಸ್ವರೂಪವುಳ್ಳ ಮಡುವನ್ನು ಹೊಕ್ಕು ತನ್ನ ಮನಸ್ಸನ್ನು ಸೆಳೆಯತಕ್ಕ ಹೆಣ್ಣಾನೆಗಳ ಹಿಂಡಿನೊಡನೆ ಕ್ರೀಡಿಸುತ್ತಿತ್ತು. ಅದನ್ನು ಮೂವರೂ ಕಂಡು, ಆನೆಗಳಾಗಿ ಸುಖವನ್ನು ಅನುಭವಿಸಬೇಕೆಂಬ ಬಯಕೆಯಿಂದ ಸಂಕಲ್ಪ ಮಾಡಿಕೊಂಡು ಪ್ರಾಣಿ ಜೀವನದ ಆಯುಷ್ಯವನ್ನು ಕಟ್ಟಿಕೊಂಡರು. ಹೀಗೆಯೇ ಕಾಲ ಕಳೆಯಲು ಮತ್ತೊಂದು ದಿನ ಬರಸಿಡಿಲು ಬಡಿದು ಪ್ರಿಯಸೇನೆ ಸತ್ತುಹೋದಳು. ಪ್ರಿಯದರ್ಶನನು ಒಂದು ದಿವಸ ತನ್ನ ಪತ್ನಿಯೊಂದಿಗೆ ಬಾಳೆತೋಟದಲ್ಲಿ ನಿದ್ರಿಸುತ್ತಿದ್ದನು. ಅಲ್ಲಿಗೆ ಒಂದು ಕಾಳಿಂಗಸರ್ಪ ಬಂತು. ಇವನು ಅದರ ಮೇಲೆ ತನ್ನ ಕಾಲನ್ನು ಚಾಚಿ ದಾಗ, ಅದು ಕಚ್ಚಿತು. ಅವನು ಆಗಲೇ ಮೂರ್ಛೆಹೋಗಿ ಪ್ರಾಣಬಿಟ್ಟನು. ಅವನನ್ನು

ಸುಕೀರ್ತಿಯುಂ ಕಾದಲನ ವಿಯೋಗಂ ಕಾರಣಮಾಗೆ ಪ್ರಾಣವಲ್ಲಭನ ಸುರಿಗೆಯುಂ ಕೊಂಡು ತನ್ನಂ ತಾನಿಱಿದು ಸತ್ತಳ್ ಅಂತಾ ಮೂವರುಂ ಸತ್ತು ತೆಂಕಣ ಪಡುವಣ ಸಮುದ್ರದ ತಡಿಯೊಳ್ ಚಂದನಮಲಯಮೆಂಬಾದಮಾನುಂ ರಮ್ಯಮಪ್ಪ ಪರ್ವತದೊಳ್ ಪ್ರಿಯದರ್ಶನ ನಿಂದ್ರನೀಲ ಮಾಣಿಕದೊಳೋರಂತಪ್ಪ ಮೆಯ್ಯನೊಡೆಯುದಾಗಿ ಸುಭದ್ರಜಾತಿಯಪ್ಪಾನೆಗೆ ಮಲಯಸುಂದರನೆಂಬಾನೆಯಾಗಿ ಪುಟ್ಟಿದೊಂ ಸುಕೀರ್ತಿಯುಂ ಧವಳವರ್ಣಮಪ್ಪ ಮಲಯಾ ವತಿಯೆಂಬ ಪಿಡಿಯಾಗಿ ಪುಟ್ಟಿದಳ್ ಪ್ರಿಯಸೇನೆಯುಂ ಕೆಂದಾವರೆಯ ವಣ್ಣದೊಳೋರಂತಪ್ಪ ಮೆಯ್ಯನೊಡೆಯ ಪದ್ಮಾವತಿಯೆಂಬ ಪಿಡಿಯಾಗಿ ಪುಟ್ಟಿದಳಾಯೆರಡುಂ ಪಿಡಿಗಳುಂ ಸುಭದ್ರ ಜಾತಿಯಪ್ಪಾನೆಗೆ ಪುಟ್ಟಿದವಂತಾ ಮೂಱರ್ಕಮಾರಣ್ಯ ನಿವಾಸಿಗಳಪ್ಪ ಜನಂಗಳುಂ ತಾಪಸಾದಿ ಗಳುಮವಂ ಕಂಡೊರ್ಗ್ಗಳೆಲ್ಲಮೊಸೆದು ಮೆಚ್ಚಿ ತದ್ದೇಹಾನುಸಾರಿಗಳಪ್ಪ ಪೆಸರನಿಟ್ಟುದರಿಂದಾ ನಾಡೊಳ್ ಪ್ರಸಿದ್ಧಿಗೆ ಸಂದುವಂತವರ್ಕೆ ಕಾಲಂಸಲೆ ಮತ್ತಮಲ್ಲಿ ಯೂಥಾಧಿಪತಿ ಭದ್ರ ಜಾತಿಯಪ್ಪ ಸುಂದರನೆಂಬಾನೆ ಚಾರಣರಿಸಿಯರ್ಕಳ ಪಾದಯುಗಳಂಗಳಂ ವಿದ್ಯಾಧರನರ್ಚಿಸಿ ಪೊಡೆವಟ್ಟು ಪೋಪುದಂ ಕಂಡು ತಾನುಂ ನಿಚ್ಚಮಾ ಸ್ಥಿತಿಯೊಳೆ ತಾಮರೆಯ ಪೂಗಳಂ ತಂದರ್ಚಿಸಿ ಪೂಜಿಸಿ ಪೊಡೆವಟ್ಟು ಪೋಕುಮಿಂತು ಪುಣ್ಯಮಂ ನೆರಪುತ್ತಂ ಕಾಲಂ ಸಲೆ ಮತ್ತೊಂದು ದಿವಸಂ

ನೋಡಿ ಸುಕೀರ್ತಿ ತನ್ನ ಪ್ರಿಯನ ಅಗಲಿಕೆಯೇ ಕಾರಣವಾಗಿ ತನ್ನ ಗಂಡನ ಕತ್ತಿಯನ್ನು ತೆಗೆದು ತನ್ನನ್ನು ತಿವಿದುಕೊಂಡುಸತ್ತುಹೋದಳು. ಅಂತು ಆ ಮೂವರು.ಸತ್ತು ನೈಋತ್ಯ ಸಮುದ್ರದ ತೀರದಲ್ಲಿರುವ ಚಂದನಮಲಯವೆಂಬ ಅತ್ಯಂತ ಮನೋಹರವಾದ ಪರ್ವತದಲ್ಲಿ ಪ್ರಿಯದರ್ಶನನು ಇಂದ್ರನೀಲ ಮಾಣಿಕ್ಯವನ್ನು ಹೋಲುವ ಮೈಬಣ್ಣವುಳ್ಳ ಸುಭದ್ರ ಜಾತಿಯ ಒಂದು ಆನೆಗೆ ಮಲಯಸುಂದರನೆಂಬ ಆನೆಯಾಗಿ ಹುಟ್ಟಿದನು. ಸುಕೀರ್ತಿಯು ಬಿಳಿಯ ಬಣ್ಣವುಳ್ಳ ಮಲಯಾವತಿಯೆಂಬ ಹೆಣ್ಣಾನೆಯಾಗಿ ಹುಟ್ಟಿದಳು. ಪ್ರಿಯ ಸೇನೆಯು ಕೆಂಪು ತಾವರೆಯ ಬಣ್ಣವನ್ನು ಹೋಲುವ ಶರೀರವುಳ್ಳ ಪದ್ಮಾವತಿಯೆಂಬ ಹೆಣ್ಣಾನೆಯಾಗಿ ಹುಟ್ಟಿದಳು. ಆ ಎರಡು ಹೆಣ್ಣಾನೆಗಳೂ ಆನೆಗಳಲ್ಲಿ ಉತ್ಕೃಷ್ಟ ಜಾತಿಯ ದಾದ ಸುಭದ್ರಜಾತಿಯ ಆನೆಗೆ ಹುಟ್ಟಿದವು. ಅಂತು ಆ ಮೂರು ಆನೆಗಳಿಗೂ ಕಾಡಿನಲ್ಲಿ ವಾಸಮಾಡತಕ್ಕ ಜನರೂ ಋಷಿಗಳು ಮುಂತಾದವರೂ ಅವನ್ನು ಕಂಡವರೆಲ್ಲರೂ ಪ್ರೀತಿ ಪಟ್ಟು ಮೆಚ್ಚಿ ಅವುಗಳ ದೇಹಗಳಿಗೆ ಅನುಸಾರವಾಗುವ ಹೆಸರುಗಳನ್ನು ಇಟ್ಟುದರಿಂದ ಆ ನಾಡಿನಲ್ಲಿ ಪ್ರಖ್ಯಾತವಾದವು. ಅಂತು ಅವುಗಳ ಕಾಲ ಹೀಗೆ ಕಳೆಯುತ್ತಿರಲು, ಅಲ್ಲಿ ಆನೆಗಳ ಹಿಂಡಿನೊಡೆಯನಾದ ಭದ್ರಜಾತಿಯದಾಗಿರುವ ಸುಂದರನೆಂಬ ಆನೆ ಚಾರಣ ಮುನಿಗಳ ಎರಡೂ ಪಾದಗಳನ್ನು ವಿದ್ಯಾಧರನೊರ್ವನು ಪೂಜಿಸಿ, ಸಾಷ್ಟಾಂಗ ವಂದಿಸಿ ಹೋಗುವುದನ್ನು ಕಂಡಿತು. ತಾನು ಕೂಡ, ನಿತ್ಯವೂ ಅದೇ ರೀತಿಯಲ್ಲಿ ತಾವರೆಯ ಹೂ ಗಳನ್ನು ತಂದು ಪೂಜಿಸಿ, ವಂದಿಸಿ ಹೋಗುತ್ತಿತ್ತು. ಹೀಗೆ ಪುಣ್ಯವನ್ನು ಕೂಡಿಸಿ ಕೊಳ್ಳುತ್ತ ಕಾಲ ಕಳೆಯಲು, ಮತ್ತೊಂದು ದಿನ ಮಲಯಸುಂದರನು ತನ್ನ ಹಿಂದಿನ

ಯುಗಳಂಗಳುಮಂ ನೋಡಿಯುಪಶಮಕ್ಕೆ ಸಂದು ತಾನುಂ ತಾವರೆಯ ಪೂಗಳಂ ತಂದು ಪ್ರತಿದಿನಮರ್ಚಿಸಿ ಪೂಜಿಸಿ ಪೊಡೆಮಟ್ಟು ಪೋಕುಮಾ ಚಾರಣರಿಷಿಯರಡಿವೊಣರ ನರ್ಚಿಸಿದ ಪುಣ್ಯದಿಂದಂ ಸತ್ತಿಲ್ಲಿ ನೀಂ ಚಂಪಾಪುರಕ್ಕಧಿಪತಿಯಪ್ಪ ಗಂಧಭಾಜನನೆಂಬರಸನಾದಯ ಸುಕೇಶಿನಿಯುಂ ಜಾತಿಸ್ಮರೆಯಾಗಿ ತನ್ನ ಮುನ್ನಿನ ಭವದ ಭರ್ತಾರನಪ್ಪ ಮಲಯಸುಂದರನ ನೆನೆದು ನಿನ್ನಿಂದಂ ಕೊಲೆ ಸತ್ತುದಱ ಕೋಡ್ಕಳನಾದಮಾನುಂ ಬಿಗಿದಪ್ಪಿಕೊಂಡು ಸತ್ತುದರ್ಕಿದು ಕಾರಣಂ ಮತ್ತೆ ನೀಂ ಮುನ್ನೆ ಸುಂದರನೆಂಬಾನೆಯಾಗಿ ಚಾರಣರಿಷಿಯರ ಪಾದಯುಗಳಂಗಳ ನರ್ಚಿಸುವಂದು ನಿನ್ನಂ ಕಂಡಾಯೆರಡುಂ ಪಿಡಿಗಳ್ ನಿನ್ನೊಡವೋಗಿಯರ್ಚಿಸಿ ಪುಣ್ಯಮಂ ನೆರಪಿದ ಫಲದಿಂದಂ ಸುಕೇಶಿನಿಯುಂ ವರಾಂಗನುಮಾದರೆಂದು ಯಶೋಧರ ಕೇವಲಿಗಳ್ ಸವಿಸ್ತರಂ ಪೇೞ್ವುದುಂ ಗಂಧಭಾಜನನೆಂಬರಸಂ ಕೇಳ್ದು ಮತ್ತಮಿಂತೆಂದಂ ಭಟಾರಾ ಸುಕೇಶಿನಿ ಸತ್ತೀಗಳೆಲ್ಲಿ ಪುಟ್ಟಿದಳೆಂದು ಬೆಸಗೊಂಡೊಡೆ ಭಟಾರರಿಂತೆಂದು ಪೇೞ್ದರ್ ಸುರಟಮೆಂಬುದು ನಾಡಲ್ಲಿ ಗಿರಿನಗರಮೆಂಬುದು ಪೊೞಲದನಾಳ್ವೊಂ ನಿನ್ನಾಳ್ ಮಹಾಸಾಮಂತನತಿರಥನೆಂಬೊನಾತನರಸಿ ಗೌರಿಯೆಂಬಳಾ ಇರ್ವರ್ಗ್ಗಂ ಸುಕೇಶಿನಿ ಸತ್ತು ಮನೋಹರಿಯೆಂಬೊಳ್ ಮಗಳಾಗಿ ಪುಟ್ಟಿದಳ್ ಮತ್ತಾ ಅರಸನ ಮಂತ್ರಿ ವಿಜಯನೆಂಬೊನಾತನ ಭಾರ್ಯೆ ವೀರಶ್ರೀಯೆಂಬೊಳಾ

ಶಾಂತತೆಯನ್ನು (ಸಮತ್ವಭಾವವನ್ನು) ಹೊಂದಿ ತಾನು ಕೂಡ, ತಾವರೆಯ ಹೂಗಳನ್ನು ತಂದು ಪ್ರತಿದಿನವೂ ಅರ್ಚನೆ ಮಾಡಿ ಪೂಜಿಸಿ ವಂದಿಸಿ ಹೋಗುತ್ತಿತ್ತು. ಆ ಚಾರಣ ಋಷಿಗಳ ಪಾದಯುಗ್ಮವನ್ನು ಅರ್ಚಿಸಿದ ಪುಣ್ಯದಿಂದಾಗಿ ಸತ್ತ ಮೇಲೆ, ಇಲ್ಲಿ ನೀನು ಈಗ ಚಂಪಾಪುರಕ್ಕೆ ಒಡೆಯನಾದ ಗಂಧಭಾಜನನೆಂಬ ರಾಜನಾಗಿರುವೆ. ಸುಕೇಶಿನಿ ಪೂರ್ವಜನ್ಮದ ನೆನಪನ್ನು ಪಡೆದು, ತನ್ನ ಹಿಂದಿನ ಜನ್ಮದ ಗಂಡನಾದ ಮಲಯ ಸುಂದರನನ್ನು ಸ್ಮರಿಸಿ, ನೀನು ಕೊಂದುದರಿಂದ ಸತ್ತ ಮಲಯ ಸುಂದರನ ಕೊಂಬುಗಳನ್ನು ಅತಿಶಯವಾಗಿ ಬಿಗಿದಪ್ಪಿಕೊಂಡು ಸಾಯಲು ಇದು ಕಾರಣವಾಗಿದೆ. ಆಮೇಲೆ, ನೀನು ಪೂರ್ವಜನ್ಮದಲ್ಲಿ ಸುಂದರನೆಂಬ ಆನೆಯಾಗಿದ್ದು ಚಾರಣ ಋಷಿಗಳ ಎರಡುಪಾದಗಳನ್ನು ಅರ್ಚಿಸುವಾಗ ನಿನ್ನನ್ನುಕಂಡು ಆ ಎರಡೂ ಹೆಣ್ಣಾನೆಗಳು ನಿನ್ನ ಒಟ್ಟಿಗೆ ಹೋಗಿ ಪೂಜಿಸಿ ಪುಣ್ಯವನ್ನು ಗಳಿಸಿದ ಫಲದಿಂದ ಸುಕೇಶಿನಿಯೂ ವರಾಂಗನೂ ಆದರು. ಹೀಗೆಂದು ಯಶೋಧರ ಮುನಿಗಳು ವಿಸ್ತಾರವಾಗಿ ಹೇಳಲು ಗಂಧಭಾಜನನೆಂಬ ರಾಜನು ಕೇಳಿ, ಆಮೇಲೆ ಹೀಗೆಂದನು—ಸ್ವಾಮೀ, ಸುಕೇಶಿನಿ ಮಡಿದು ಈಗ ಎಲ್ಲಿ ಹುಟ್ಟಿದ್ದಾಳೆ? —ಎಂದು ಕೇಳಿದನು. ಆಗ ಯಶೋಧರ ಮುನಿಗಳು ಹೀಗೆಂದರು—ಸುರಟ ಎಂಬ ನಾಡಿನಲ್ಲಿ ಗಿರಿನಗರ ಎಂಬ ಪಟ್ಟಣವಿದೆ. ಅದನ್ನು ಆಳುವವನು ನಿನ್ನ ಸೇವಕನೆನಿಸಿರುವ ಮಹಾಸಾಮಂತನಾದ ಅತಿರಥನೆಂಬವನು. ಅವನ ಪತ್ನಿ ಗೌರಿಯೆಂಬವಳು. ಸುಕೇಶಿನಿ ಸತ್ತು ಪುನರ್ಜನ್ಮದಲ್ಲಿ ಆ ಇಬ್ಬರಿಗೂ ಮನೋಹರಿ ಎಂಬ ಮಗಳಾಗಿ ಹುಟ್ಟಿದಳು. ಆಮೇಲೆ, ಆ ರಾಜನ ಮಂತ್ರಿ ವಿಜಯನೆಂಬವನು. ಅವನ ಪತ್ನಿ ವೀರಶ್ರೀ ಎಂಬವಳು

ಇರ್ವರ್ಗ್ಗಂ ಮಲಯಸುಂದರಂ ಸತ್ತು ಕುಬೇರಕಾಂತನೆಂಬೊಂ ಮಗನಾಗಿ ಪುಟ್ಟಿದೊಂ ವಿಭವೈಶ್ವರ್ಯಂಗಳಿಂದಂ ಕುಬೇರನೊಳೋರನ್ನನಪ್ಪೊಂ ಮತ್ತಾ ಪೊೞಲೊಳ್ ರಾಜಶ್ರೇಷ್ಠಿ ಧನದನೆಂಬೊನಾತನ ಪರದಿ ಧನಶ್ರೀಯೆಂಬೊಳಾ ಇರ್ವರ್ಗ್ಗಂ ಮಲಯಸುಂದರಂ ಸತ್ತುದಂ ಸುಕೇಶಿನಿ ಕಂಡು ಸೈರಿಸಲಾಱದೆ ಪ್ರಾಣಪರಿತ್ಯಾಗಂ ಗೆಯ್ದಳಂ ನೆನೆದು ದ್ರವ್ಯ ತಪದೊಳ್ ಕೂಡಿ ತಪಂಗೆಯ್ದು ವರಾಂಗಂ ಸತ್ತು ಶ್ರೀಧರನೆಂಬೊಂ ಮಗನಾಗಿ ಪುಟ್ಟಿದೊನಾತನ ಭಾರ್ಯೆ ಕುಬೇರಶ್ರೀಯೆಂಬೊಳಾ ಶ್ರೀಧರಂ ಕುಬೇರಕಾಂತಂಗಿಷ್ಟ ಮಿತ್ರನಾಗಿ ಸಲೆ ಮತ್ತೊಂದು ದಿವಸಂ ಶ್ರೀಧರಂ ಕುಬೇರಕಾಂತನೊಡನೆ ಮುಳಿ ಲುಂದಿಯಾತನ ರತ್ನಕಂಬಳಮುಂ ಪೊದೆದು ತನ್ನ ಮನೆಗೆ ಬರ್ಪ್ಪೋನಂ ಕಂಡು ಸವತಿಯೊಳಪ್ಪ ಶಂಕೆಯಿಂದಂ ಪ್ರಾಸಾದದ ಮೇಗಣಿಂದಂ ನೆಲಕ್ಕಿಕ್ಕಿ ಬಿಟ್ಟು ಸತ್ತೊಳಾ ಸತ್ತೊಳಂ ಶ್ರೀಧರಂ ಕಂಡಾದಮಾನುಂ ದುಃಖಂಗೆಯ್ದು ಶೋಕಾಭಿಭೂತನಾಗಿರ್ದೊನು ಕುಬೇರಕಾಂತಂ ಬಂದು ಕಂಡು ಶ್ರೀಧರಾ ಪರಮಮಿತ್ರಾ ಇಂತೇಕೆ ಬರ್ದಿ ಬಂಬಳಂ ಬಾಡಿ ಪಾಡಳಿದುಬ್ಬೆಗಂ ಬಟ್ಟಿರ್ದ್ದಯೆಂದು ಬೆಸಗೊಂಡೊಡೆ ತನ್ನ ಕೆಳೆಯಂಗೀತೆಂದು ಶ್ರೀಧರಂ ಪೇೞ್ಗುಂ ನಿನ್ನ ರತ್ನ ಕಂಬಳಮುಂ ಪೊದೆದು ಮನೆಗೆ ವಂದೊಡೆ ಸವತಿಯೊಳಪ್ಪ ಶಂಕೆಯಿಂದೆನ್ನ ಭಾರ್ಯೆ ಕುಬೇರಶ್ರೀ

ಮಲಯಸುಂದರನು ಸತ್ತು, ಆ ಇಬ್ಬರಿಗೂ ಕುಬೇರಕಾಂತನೆಂಬ ಮಗನಾಗಿ ಜನಿಸಿದನು. ಅವನು ವೈಭವ ಸಂಪತ್ತುಗಳಿಂದ ಕುಬೇರನಿಗೆ ಸರಿಯಾದವನಾಗಿದ್ದನು. ಮತ್ತು ಆ ಪಟ್ಟಣದಲ್ಲಿ ಸೆಟ್ಟಿಗಳಿಗೆ ರಾಜನೆನಿಸಿದ ಧನದನೆಂಬವನಿದ್ದನು. ಅವನ ಮಡದಿ ಧನಶ್ರೀ ಯೆಂಬವಳು. ಮಲಯಸುಂದರನು ಸತ್ತುದನ್ನು ಸುಕೇಶಿನಿ ಕಂಡು ಸಹಿಸಲಾರದೆ ಪ್ರಾಣಬಿಟ್ಟುದನ್ನು ವರಾಂಗನು ನೆನಸಿಕೊಂಡು ಮಿಥ್ಯಾತಪಸ್ಸಿನಲ್ಲಿ ಸೇರಿಕೊಂಡು ತಪಸ್ಸುಮಾಡಿ ಸತ್ತು ಆ ಧನದ-ಧನಶ್ರೀಯೆಂಬ ಇಬ್ಬರಿಗೆ ಶ್ರೀಧರನೆಂಬ ಮಗನಾಗಿ ಹುಟ್ಟಿದನು. ಅವನ ಹೆಂಡತಿ ಕುಬೇರಶ್ರೀಯೆಂಬವಳು. ಆ ಶ್ರೀಧರನು ಕುಬೇರಕಾಂತನಿಗೆ ಪ್ರೀತಿಯ ಮಿತ್ರನಾಗಿದ್ದನು. ಹೀಗೆ ಕಳೆಯಲು, ಮತ್ತೊಂದು ದಿನ ಶ್ರೀಧರನು ಕುಬೇರ ಕಾಂತನೊಡನೆ ಸಿಡ್ರಿಮಾಡಿ ಅವನ ರತ್ನದಕಂಬಳಿಯನ್ನು ಹೊದೆದುಕೊಂಡು ತನ್ನ ಮನೆಗೆ ಬಂದನು. ಅವನನ್ನು ಕುಬೇರಶ್ರೀ ಕಂಡು ತನ್ನ ಗಂಡನು ಸವತಿಯಲ್ಲಿ ಆಸಕ್ತನಾಗಿರುವನೆಂಬ ಸಂಶಯದಿಂದ ಮೇಲುಪ್ಪರಿಗೆಯಿಂದ ಕೆಳನೆಲಕ್ಕೆ ಹಾರಿ ಬಿದ್ದು ಸತ್ತಳು. ಹಾಗೆ ಸತ್ತವಳನ್ನು ಶ್ರೀಧರನು ಕಂಡು ಅತ್ಯಂತವಾಗಿ ಮರುಗಿ, ದುಃಖದಿಂದ ಹೊಡೆಯಲ್ಪಟ್ಟವನಾಗಿದ್ದನು. ಆಗ ಕುಬೇರಕಾಂತನು ಬಂದು ಅವನನ್ನು ಕಂಡು—"ಪರಮ ಸ್ನೇಹಿತನಾದ ಶ್ರೀಧರನೇ, ಹೀಗೆ ಯಾಕೆ ಸೊರಗಿ ಬಹಳ ಬಾಡಿ ಹೋಗಿರುವೆ? ಸ್ಥಿತಿಕೆಟ್ಟು ಉದ್ವೇಗಗೊಂಡಿರುವೆ"—ಎಂದು ಕೇಳಿದನು. ಶ್ರೀಧರನು ತನ್ನ ಗೆಳೆಯನಿಗೆ ಈ ರೀತಿಯಾಗಿ ಹೇಳಿದನು—ನಾನು ನಿನ್ನ ರತ್ನಕಂಬಳಿಯನ್ನು ಹೊದೆದುಕೊಂಡು ಮನೆಗೆ ಬಂದಾಗ ನನ್ನ ಮಡದಿ ಕುಬೇರಶ್ರೀಯು ಸವತಿಯಲ್ಲಿ ಆದ

ಮಾಡದ ಮೇಗಣಿಂದಂ ತನ್ನಂ ನೆಲಕ್ಕಿಕ್ಕಿ ಬಿಟ್ಟು ಸತ್ತಳೆನ್ನುಮಾಯಿದ್ದಳೆಂದು ತೋಱಿ
ದೊಡೆ ಕುಬೇರಕಾಂತಂ ನೋಡೆ ನೋಡೆ ಜಾತಿಸ್ಮರನಾಗಿ ಕೆಳೆಯಂಗಿಂತೆಂದು ಪೇೞ್ಗುಮೆನ್ನ
ಪೆಂಡತಿ ಮಲಯಾವತಿಯುಮಪ್ಪ ಪಿರಿ ಪುರುಡಿನಿಂದಂ ಚಂದನಮಲಯಮೆಂಬ ಪರ್ವತದ ಶಿಖರ
ದಿಂದಂ ತನ್ನನಿಕ್ಕಿ ಸತ್ತಂತೆ ನಿನ್ನ ಪೆಂಡತಿಯುಂ ಸತ್ತಳೆಂದು ಪೇೞ್ದುಬ್ಬೆಗಂ ಬಡಲ್ವೇಡೆಂದು
ಸಂತಯಿಸಿ ತನ್ನ ಮನೆಗೆ ಪೋಗಿ ಜಾತಿಸ್ಮರನಪ್ಪುದಱಿಂ ಕುಬೇರಕಾಂತಂ ತನ್ನ ಮುನ್ನಿನ
ಮಲಯಸುಂದರನಪ್ಪ ಭವದ ನೆಗೞ್ತಿಗಳೆಲ್ಲಮಂ ಮಲಯಾವತಿ ಪದ್ಮಾವತಿ ಮೊದಲಾಗಿ
ಕರಿಣೀವೃಂದಸಹಿತಂ ವನಹಸ್ತಿಕ್ರೀಡೆಗಳೆಲ್ಲಮನೊಂದು ಪಟದೊಳ್ ಬರೆದದಂ ನೋಡುತ್ತಂ
ಪಾಡುತ್ತಂ ಹಾ ಎನ್ನ ಮಲಯಾವತಿ ಹಾ ಎನ್ನ ನಲ್ಲಳೆ ನೀನೀಗಳೆಲ್ಲಿರ್ದೆಯೆಂದಱಸುತ್ತಂ
ಮರುಳ್ಗೊಂಡು ಪ್ರಳಾಪಂಗೆಯ್ಯುತ್ತಂ ಉಜ್ಜಯಂತ ಪರ್ವತಮಂ ಬಲಗೊಂಡು ಬರ್ಪೊನಂ
ಚಿತ್ರಾಂಗದನೆಂಬ ವಿದ್ಯಾಧರಂ ಕಂಡು ಕರುಣಿಸಿ ಧರ್ಮವಾತ್ಸಲ್ಯದಿಂದಂ ತನ್ನ ಕಾಮ
ಮುದ್ರಿಕೆಯುಂ ಸ್ವೇಪ್ಸಿತ ಕಾರ್ಯಸಿದ್ಧಿಯುಂ ಮಾಡುವ ವಿದ್ಯೆಯುಂ ಕುಬೇರಕಾಂತಂಗೆ ಕೊಟ್ಟಂ
ಕುಬೇರಕಾಂತನುಂ ವಿದ್ಯಾದೇವತೆಯುಂ ಬೆಸಗೊಂಡೆನ್ನ ಮುನ್ನಿನ ಭವದ ಪ್ರಾಣವಲ್ಲಭೆಯೆಲ್ಲಿ

ಸಂಶಯದಿಂದ ಉಪ್ಪರಿಗೆಯ ಮೇಲಿನಿಂದ ಕೆಳಗೆ ಹಾರಿಬಿದ್ದು ಸತ್ತಳು. ಇನ್ನೂ
ಅಗೋ ಅಲ್ಲಿದ್ದಾಳೆಂದು ಆಕೆಯ ದೇಹವನ್ನು ತೋರಿಸಿದನು. ಆಗ ಕುಬೇರಕಾಂತನು
ನೋಡನೋಡುತ್ತಲೇ ಪೂರ್ವಜನ್ಮದ ಸ್ಮರಣೆಯನ್ನು ಪಡೆದು ತನ್ನ ಗೆಳೆಯನಿಗೆ ಹೀಗೆಂ
ದನು—"ನನ್ನ ಹೆಂಡತಿಯಾಗಿದ್ದ ಮಲಯಾವತಿಯೆಂಬ ಹೆಣ್ಣಾನೆ ಹೊಟ್ಟೆಕಿಚ್ಚಿನಿಂದ
ಚಂದನಮಲಯವೆಂಬ ಪರ್ವತದ ತುದಿಯಿಂದ ತಾನೇ ಕೆಳಗೆ ಹಾರಿ ಬಿದ್ದು ಸತ್ತ ರೀತಿ
ಯಲ್ಲಿಯೇ ನಿನ್ನ ಹೆಂಡತಿಯೂ ಸತ್ತಳು"—ಎಂದು ಹೇಳಿದನು. 'ವ್ಯಸನಪಡಬೇಡ,'
ಎಂದು ಅವನನ್ನು ಸಮಾಧಾನಪಡಿಸಿ ತನ್ನ ಮನೆಗೆ ಹೋದನು. ಪೂರ್ವಜನ್ಮದ
ಸ್ಮರಣೆಯುಳ್ಳವನಾದುದರಿಂದ ಕುಬೇರಕಾಂತನು ತಾನು ಹಿಂದೆ ಮಲಯಸುಂದರ
ನಾಗಿದ್ದ ಜನ್ಮದಲ್ಲಿ ಮಾಡಿದುದೆಲ್ಲವನ್ನೂ ಮಲಯವತಿ ಪದ್ಮಾವತಿ ಮುಂತಾದ ಹೆಣ್ಣಾನೆ
ಗಳ ಹಿಂಡಿನೊಡನೆ ನಡೆಸಿದ ಆಟಗಳೆಲ್ಲವನ್ನೂ ಒಂದು ಚಿತ್ರಪಟದಲ್ಲಿ ಬರೆದು,
ಅದನ್ನು ನೋಡುತ್ತ ಹಾಡುತ್ತಾ "ಹಾ, ನನ್ನ ಮಲಯಾವತೀ, ಹಾ ನನ್ನ ಪ್ರಿಯ
ತಮಳೇ, ನೀನು ಈಗ ಎಲ್ಲಿರುವೆ?" ಎಂದುಕೊಂಡು ಹುಡುಕುತ್ತ ಹುಚ್ಚನಂತಾಗಿ ಗೋಳಾ
ಡುತ್ತ ಉಜ್ಜಯಂತ ಪರ್ವತವನ್ನು ಪ್ರದಕ್ಷಿಣ ಮಾಡುತ್ತ ಬರುತ್ತಿದ್ದನು. ಅವನನ್ನು
ಚಿತ್ರಾಂಗದನೆಂಬ ವಿದ್ಯಾಧರನು ಕಂಡು ಕರುಣೆಗೊಂಡನು. ತನ್ನ ಧರ್ಮಕ್ಕೆ ಅನುಗುಣ
ವಾದ ಪ್ರೀತಿಯಿಂದ, ಅವನು ಕುಬೇರಕಾಂತನಿಗೆ ತನ್ನ ಕಾಮಮುದ್ರಿಕೆಯನ್ನು ತಾನು
ಬಯಸಿದ ಕಾರ್ಯವನ್ನು ಕೈಗೂಡಿಸುವ ವಿದ್ಯೆಯನ್ನು ಕೊಟ್ಟನು. ಕುಬೇರಕಾಂತನು
ವಿದ್ಯಾದೇವತೆಯನ್ನು ಕುರಿತು "ನನ್ನ ಹಿಂದಿನ ಜನ್ಮದ ಪ್ರಾಣವರಸಿ ಎಲ್ಲಿದ್ದಾಳೆ"

**ರ್ದಳೆನೆ ವಿದ್ಯಾದೇವತೆಯೆಂದಳ್ ನಿನ್ನ ಪ್ರಾಣವಲ್ಲಭೆಯತಿರಥನೆಂಬರಸಂಗೆ ಮಗಳ್ ಮನೋಹರಿಯಾಗಿರ್ದಳೆಂದು ವಿದ್ಯಾದೇವತೆ ಪೇೞೆ ಕೇಳ್ದಱಿದು ಪಿಶಾಚವೇಷಮಂ ಕೈಕೊಂಡರಮನೆಯಂಗಣದೊಳಿರ್ದು ಪಟಮಂ ನಿಮಿರ್ಚಿಯೆತ್ತಿ ತೋಱಿ ಪಾಡುತ್ತಮೆಲೆ ಮಲಯಾವತಿ ಹಾ ಎನ್ನ ಕಾದಲಳೆ ನೀನೀಗಳೆಲ್ಲಿರ್ದಪೆಯೆಂದು ಪಾಡುವುದಂ ಕೇಳ್ದು ಪಟಮಂ ನೋಡಿ ಮನೋಹರಿ ಜಾತಿಸ್ಮರೆಯಾಗಿ ತನ್ನ ಮುನ್ನಿನ ಭವಮನಱಿದು ದಾಮರಥಿಯೆಂಬ ತನ್ನ ದಾದಿಗೊಸಗೆಯಿಂದಮಿಂತೆಂದಳೀ ಯಂಗಣದೊಳ್ ಪಟಮಂ ತೋಱುವಾತನೆನ್ನ ಮುನ್ನಿನ ಭವದ ಭರ್ತಾರನೆಂದು ಪೇೞ್ದು ಮತ್ತಮಿಂತೆಂದಳಬ್ಬಾ ನೀನೆನ್ನ ಪ್ರಾಣಮಂ ಕಾವುದು ಕಾರಣಮಾಗಿ ಆತನಲ್ಲಿಗೆವೋಗಿ ಏಕಾಂತದೊಳಿಂತೆಂದು ಪೇೞ್ ಪದ್ಮಾವತಿಯ ತಲೆಯೊಳಟ್ಟಿಯಿಂದಂ ನೀಂ ತಾವರೆಯ ಪೂವಂ ಮುನ್ನಮಿಟ್ಟು ಮಲಯಾವತಿ ಪ್ರಾಣವಲ್ಲಭೆ ಎಲ್ಲಿರ್ದೆಯೆಂದೀಗಳೇಕೆ ಮಲಯಸುಂದರಾ ನೀನಾರಯ್ದಪ್ಪೆಯೆಂದು ಪೇೞ್ದು ಮತ್ತಮಿಂತೆಂದು ಪೇೞ್ ನಿನ್ನ ಪ್ರಾಣವಲ್ಲಭೆ ನಿನ್ನನೆಯಱಸಿ ಬಯಸುತ್ತಿರ್ಪಳಾಕೆ ನಿನ್ನೊಳ್ ಕೂಡುವನ್ನೆಗಮೀ ಪಟಮಂ ತೋಱಿಯಾಕೆಯ ಪ್ರಾಣಮಂ ಕಾವೆನೆಂದು ಪಟಮಂ ಬೇಡಿಕೊಂಡು ಬಾ ಎಂದು ಕಲ್ಪಿಸಿಯಟ್ಟಿದೊಡಾಕೆಯುಂ ಕಲ್ಪಿಸಿದ**

ಎಂದು ಕೇಳಿದನು. ಆಗ ವಿದ್ಯಾದೇವತೆ ಹೀಗೆ ಹೇಳಿದಳು—"ನಿನ್ನ ಪ್ರಾಣದರಸಿ ಅತಿರಥನೆಂಬ ಅರಸನಿಗೆ ಮನೋಹರಿಯೆಂಬ ಮಗಳಾಗಿ ಇದ್ದಾಳೆ"—ಹೀಗೆ ವಿದ್ಯಾದೇವತೆ ಹೇಳಲು, ಕುಬೇರಕಾಂತನು ಕೇಳಿ ತಿಳಿದುಕೊಂಡು ಹುಚ್ಚನ ರೂಪವನ್ನು ತಾಳಿಕೊಂಡು, ಅರಮನೆಯ ಅಂಗಳದಲ್ಲಿ ಇದ್ದು ಚಿತ್ರಪಟವನ್ನು ಸುರುಳಿಬಿಚ್ಚಿ ನೇರವಾಗಿಸಿ, ಎತ್ತಿ ತೋರಿಸಿ ಹಾಡುತ್ತ—"ಎಲೆ ಮಲಯಾವತೀ, ಹಾ ನನ್ನ ಪ್ರಿಯಳೇ! ನೀನು ಈಗ ಎಲ್ಲಿರುವೆ?" ಎಂದು ಹಾಡುತ್ತಿದ್ದನು. ಹಾಗೆ ಹಾಡುವುದನ್ನು ಕೇಳಿದ ಮನೋಹರಿ ಪಟವನ್ನು ನೋಡಿ ಪೂರ್ವದ ನೆನಪನ್ನು ಹೊಂದಿ, ತನ್ನ ಹಿಂದಿನ ಜನ್ಮವೃತ್ತಾಂತವನ್ನು ತಿಳಿದು ದಾಮರಥಿಯೆಂಬ ತನ್ನ ಸೇವಕಿಗೆ ಸಂತೋಷದಿಂದ ಹೀಗೆ ಹೇಳಿದಳು—"ಈ ಅಂಗಳದಲ್ಲಿ ಚಿತ್ರಪಟ ತೋರಿಸುವವನು ಹಿಂದಿನ ಜನ್ಮದಲ್ಲಿ ನನ್ನಗಂಡನಾಗಿದ್ದವನು." ಹೀಗೆ ಹೇಳಿ, ಅನಂತರ ಅವಳೊಡನೆ ಹೀಗೆಂದಳು—ತಾಯೇ, ನೀನು ನನ್ನ ಪ್ರಾಣವನ್ನು ಉಳಿಸುವ ಕಾರಣಕ್ಕಾಗಿ ಆತನಲ್ಲಿಗೆ ಹೋಗಿ, ಅವನೊಬ್ಬನೇ ಇರುವ ವೇಳೆಯಲ್ಲಿ ಹೀಗೆ ಹೇಳು— ಎಲೈ ಮಲಯ ಸುಂದರಾ, ನೀನು ಪದ್ಮಾವತಿಯ ತಲೆಯ ಮೇಲೆ ಮೊದಲು ತಾವರೆಯ ಹೂವನ್ನಿಟ್ಟು, ಪ್ರಾಣದರಸಿಯಾದ ಮಲಯಾವತಿಯೇ ಎಲ್ಲಿರುವೆ?—ಎಂದು ಈಗ ಯಾಕೆ ವಿಚಾರಿಸುತ್ತಿರುವೆ? ಎಂದು ಹೇಳಿ, ಆಮೇಲೆ ಹೀಗೆ ಹೇಳು—ನಿನ್ನ ಪ್ರಾಣದರಸಿ ನಿನ್ನನ್ನೇ ಹುಡುಕಿಕೊಂಡು ಬಯಸಿಕೊಂಡು ಇದ್ದಾಳೆ. ಅವಳು ನಿನ್ನೊಡನೆ ಸೇರುವವರೆಗೆ ಈ ಚಿತ್ರಪಟಗಳನ್ನು ತೋರಿಸಿ ಆಕೆಯ ಪ್ರಾಣರಕ್ಷಣೆ ಮಾಡುವೆನೆಂದು ಚಿತ್ರಪಟವನ್ನು ಕೇಳಿ ತೆಗೆದುಕೊಂಡು ಬಾ ಎಂದು ತಿಳಿಸಿ ಕಳುಹಿಸಿ

ಪಾಂಗಿನೊಳಾತನಲ್ಲಿಗೆವೋಗೇಕಾಂತದೊಳೆಲ್ಲಮಂ ನುಡಿದು ಕುಬೇರಕಾಂತನ ಕೆಯ್ಯ ಪಟಮಂ ಬೇಡಿ ಕೊಂಡು ಪೋಗಿ ಮನೋಹರಿಗೆ ಕೊಟ್ಟಳ್ ಮನೋಹರಿಯುಮಾ ಪಟಮಂ ಕೊಂಡು ದೆವಸಕ್ಕಮುಟ್ಕಱೊಳ್ ನೋಡುತ್ತಿರ್ಕುಂ ಮತ್ತಿತ್ತ ಕುಬೇರಕಾಂತಂ ತನ್ನ ಮರುಳ್ವೇಷಮಂ ತೊಱೆದು ಸ್ವಾಭಾವಿಕನಾಗಿ ತನ್ನ ಮನೆಗೆ ವಂದೊಡೆ ಪ್ರಸನ್ನರೂಪನಾಗಿರ್ದೋನಂ ವಿಜಯ ನಿಂತೆಂದು ಬೆಸಗೊಂಡಂ ಮಗನೆ ನೀನಿನಿತು ದಿವಸಮೇಕೆ ಮರುಳಾಗಿರ್ದೆ ಈಗಳೆಂತು ಮರುಳ್ತನಂ ಪಿಂಗಿತೆಂದು ಬೆಸಗೊಂಡೊಡೆ ಕುಬೇರಕಾಂತನಿಂತೆಂದು ಪೇೞ್ದ ನೀಯರಸರ ಮಗಳಪ್ಪ ಮನೋಹರಿ ಎನ್ನ ಮುನ್ನಿನ ಭವದ ಪೆಂಡತಿಯಾಕೆಯುಮಱಸಲ್ವೇಡಿ ಇನಿತು ದಿವಸಂ ಮರುಳ್ಗೊಂಡಿರ್ದೆಂ ಮತ್ತೀಗಳಾರಯ್ದಱಸಿ ಕಂಡೆನಪ್ಪುದಱಿಂದಂ ಮರುಳ್ತನಂ ಪಿಂಗಿತೆಂದು ಪೇೞ್ದೊಡೆ ತಂದೆ ಯೆಂದಂ ಮಗನೆ ನಿನ್ನ ಮುನ್ನಿನ ಪೆಂಡತಿಯೆಂದಱಿದೆಯಪ್ಪೊಡಮೀಗಳಾಕೆಯರಸನ ಮಗಳಾಗಿ ಪುಟ್ಟಿದಱಿಂ ನಿನಗತಿ ದುರ್ಲಭೆ ಭಾಗ್ಯಮಿಲ್ಲದುದಂ ಪೆಱಲಾಗ ನಿನಗಾಕೆಯೊಳಪ್ಪ ಪ್ರೇಂಟ ಮನೞಿವುದು ಮಗನೆ ಎಂದೊಡೆ ಕುಬೇರಕಾಂತಂ ಕಾಮವಿದ್ಯೆಯಿಂದಂ ಹಸ್ತ್ಯಶ್ವರಥ ಪದಾತಿಬಲ ಸಮೂಹಮನೆನಿತಾನುಮಂ ವಿಭವೈಶ್ವರ್ಯ ಸಮನ್ವಿತಂ ತಂದೆಗೆ ತೋಱಿದೊಡೆ ತಂದೆಯುಂ

ದಳು. ದಾಮರತಿಯು ಆಕೆ ಹೇಳಿಕೊಟ್ಟ ರೀತಿಯಲ್ಲಿ ಕುಬೇರಕಾಂತನ ಬಳಿಗೆ ಹೋದಳು. ಏಕಾಂತದಲ್ಲಿ ಎಲ್ಲ ಸಂಗತಿಗಳನ್ನೂ ಹೇಳಿ, ಕುಬೇರಕಾಂತನ ಕೈಯಲ್ಲಿದ್ದ ಚಿತ್ರಪಟವನ್ನು ಕೇಳಿ, ತೆಗೆದುಕೊಂಡುಹೋಗಿ ಮನೋಹರಿಗೆ ಕೊಟ್ಟಳು. ಮನೋಹರಿ ಆ ಚಿತ್ರಪಟ ವನ್ನು ತೆಗೆದುಕೊಂಡು ಪ್ರತಿದಿನವೂ ಪ್ರೀತಿಯಿಂದ ನೋಡುತ್ತಾ ಇದ್ದಳು. ಆ ಮೇಲೆ, ಇತ್ತ ಕುಬೇರಕಾಂತನು ತನ್ನ ಹುಚ್ಚನ ವೇಷವನ್ನು ಬಿಟ್ಟು, ಸಹಜವೇಷವನ್ನು ತಾಳಿ, ತನ್ನ ಮನೆಗೆ ಬಂದು ಸಂತೋಷದಿಂದ ಇರುತ್ತಿದ್ದನು. ತಂದೆಯಾದ ವಿಜಯನು ಅವನನ್ನು ಕುರಿತು ಹೀಗೆ ಕೇಳಿದನು – " ಮಗನೆ, ನೀನು ಇಷ್ಟು ದಿವಸವೂ ಯಾಕೆ ಹುಚ್ಚನ ಹಾಗೆ ಇದ್ದೆ? ಈಗ ಹುಚ್ಚುತನವು ಹೇಗೆ ಹೋಯಿತು ?" ಎಂದು ಕೇಳಿದಾಗ, ಕುಬೇರಕಾಂತನು ಹೀಗೆ ಹೇಳಿದನು—"ಈಗ ರಾಜರ ಮಗಳಾಗಿರುವ ಮನೋಹರಿ ನನ್ನ ಹಿಂದಿನ ಜನ್ಮದ ಹೆಂಡತಿ. ಆಕೆಯನ್ನು ಹುಡುಕುವುದಕ್ಕಾಗಿ ಇಷ್ಟು ದಿವಸವೂ ನಾನು ಹುಚ್ಚುಗೊಂಡಿದ್ದೆನು. ಆ ಮೇಲೆ ಈಗ ವಿಚಾರಿಸಿ, ಹುಡುಕಿ ಕಂಡೆನಾದುದರಿಂದ ನನ್ನ ಹುಚ್ಚು ಹೋಗಿಬಿಟ್ಟಿತು." ಕುಬೇರಕಾಂತನು ಹೀಗೆ ಹೇಳಲು ಅವನ ತಂದೆ—"ಮಗನೆ, ನೀನು ಆಕೆಯನ್ನು ಪೂರ್ವಜನ್ಮದ ಪತ್ನಿಯೆಂದು ತಿಳಿದಿರುವೆಯಾದರೂ ಈಗ ಆಕೆಯು ರಾಜನ ಮಗಳಾಗಿರುವುದರಿಂದ ನಿನಗೆ ದೊರೆಯಲಾರಳು. ಅದೃಷ್ಟವಿಲ್ಲದುದನ್ನು ಪಡೆ ಯಲಿಕ್ಕಾಗುವುದಿಲ್ಲ. ಮಗನೇ, ನಿನಗೆ ಅವಳಲ್ಲಿರುವ ಪ್ರೀತಿಯನ್ನು ಬಿಟ್ಟುಬಿಡು"— ಎಂದು ಹೇಳಿದನು. ಆಗ ಕುಬೇರಕಾಂತನು ಕಾಮವಿದ್ಯೆಯಿಂದ ಆನೆ, ಕುದುರೆ, ರಥ, ಕಾಲಾಳುಗಳ ಎಷ್ಟೋ ಸೈನ್ಯದ ಸಮೂಹವನ್ನು, ವೈಭವಸಂಪತ್ತುಗಳಿಂದ ಕೂಡಿದವ ನಾಗಿ ತಂದೆಗೆ ತೋರಿಸಿದನು. ಮಗನ ಸಾಮರ್ಥ್ಯವನ್ನು ಕಂಡು ತಂದೆ ಅತಿಶಯವಾಗಿ

ಮಗನ ಸಾಮರ್ಥ್ಯಮಂ ಕಂಡಾದಮಾನುಂ ಸಂತಸಂಬಟ್ಟಿರ್ದಂ ಮತ್ತೊಂದು ದಿವಸಂ ಅತಿರಥ ಮಹಾರಾಜಂ ಮಂತ್ರಿಯರ್ಕಳೊಡನೆ ಮಂತಣಮಿರ್ದಲ್ಲಿ ಮಂತ್ರಿಯರ್ಕಳನಿಂತು ಬೆಸಗೊಂಡಂ ಮನೋಹರಿಗೆ ಯೌವನಂ ನೆಱೆದುದು ಕೂಸು ಕುಡಲ್ಕಾದುದಾರ್ಗೆ ಕುಡುವಮೆಂದು ಮಂತ್ರಿಯ ರ್ಕಳಂ ಬೆಸಕೊಂಡೊಡೆ ಉೞಿದ ಮಂತ್ರಿಯರ್ಕಳೆಲ್ಲಂ ತಂತಮ್ಮ ಬಗೆದರಸುಗಳ ಪೆಸರ್ಗಳಂ ಪೇೞ್ದವರ್ಗೆ ಕುಡುವಮೆಂದೊಡೆ ಕುಬೇರಕಾಂತನ ತಂದೆಯಪ್ಪ ವಿಜಯನೆಂಬ ಮಂತ್ರಿ ಯುರ್ಕೆಯಿಂದವರ ಪೇೞ್ದ ಮದವಕ್ಕಳಂ ನಿರಾಕರಿಸಿ ಮನೋಹರಿಯ ರೂಪಿಂಗಂ ಜವ್ವನಕ್ಕಂ ಕಳಾಗುಣಂಗಳನಱಿವುದರ್ಕ್ಕಮವರ್ ಯೋಗ್ಯರ್ ಮದವಕ್ಕಳಲ್ಲರ್ ಕೂಸಿಂಗೆ ಸ್ವಯಂಬರಮಂ ಪಣ್ಣುವಂ ಸ್ವಯಂಬರದೊಳ್ ತನ್ನ ಭಾಗ್ಯದೊಳ್ ಮೆಚ್ಚಿದವರಂ ಕಯ್ಕೊಳ್ಗೆಂದು ನುಡಿದೊ ಡರಸನುಮಾತನ ಮಾತನೊಡಂಬಟ್ಟು ಸ್ವಯಂವರಸಾಲೆಯಂ ಮಾಡಿಸಿ ಅರಸುಗಳ್ಗೆಲ್ಲಂ ಬೞಿಯ ನಟ್ಟಿ ಬರಿಸೆ ಸ್ವಯಂವರಸಾಲೆಯೊಳ್ ನೆರೆದಿರ್ದ್ದರಂಗ ವೆಂಗಿ ಕಳಿಂಗ ಕಾಂಭೋಜ ಕಾಶಿ ಕೌಶಲ ಪಲ್ಲವ ಪಾಂಚಾಳ ಮಗಧ ಮಾಳವ ವತ್ಸ ಮಹಾರಾಷ್ಟ್ರ ಕುಣಾಳ ಕುರುಜಾಂಗಣ ದ್ರವಿಳ ಲಾಳ ಕರ್ಣಾಟ ಗೌಳ ಸುಹುಮ ಸುರಕಾಂತ ಸೂರಸೇನೀಯ ಪ್ರಭೃತಿ ನಾನಾ ವಿಷಯಾಧಿಪತಿಗಳಪ್ಪರಸು ಗಳೆಲ್ಲಂ ನೆರೆದಿರ್ದ್ದಲ್ಲಿಯಾರುಮಂ ಮೆಚ್ಚದೆ ದಾಂಟಿ ಪೋಗಿ ಕುಬೇರಕಾಂತಂಗೆ ಮಾಲೆಯಂ

ಸಂತೋಷಪಟ್ಟಿದ್ದನು. ಆಮೇಲೆ ಒಂದು ದಿನಸ ಅತಿರಥಮಹಾರಾಜನು ಮಂತ್ರಿ ಗಳೊಂದಿಗೆ ಮಂತ್ರಾಲೋಚನೆ ನಡೆಸುತ್ತಿದ್ದಾಗ ತನ್ನ ಮಂತ್ರಿಗಳೊಡನೆ ಹೀಗೆ ಕೇಳಿ ದನು—"ಮನೋಹರಿಗೆ ಯೌವನ ತುಂಬಿದೆ. ಮದುವೆ ಮಾಡಲಿಕ್ಕೆ ಆಗಿದೆ. ಯಾರಿಗೆ ಕೊಡೋಣ?" ಹೀಗೆ ಮಂತ್ರಿಗಳನ್ನು ಕೇಳಿದಾಗ ಉಳಿದ ಮಂತ್ರಿಗಳೆಲ್ಲರೂ ತಾವುತಾವು ಭಾವಿಸಿಕೊಂಡ ರಾಜರುಗಳ ಹೆಸರುಗಳನ್ನು ಹೇಳಿ, ಅವರಿಗೆ ಕೊಡೋಣ ಎಂದು ಹೇಳಿ ದರು. ಕುಬೇರಕಾಂತನ ತಂದೆಯಾದ ವಿಜಯನೆಂಬ ಮಂತ್ರಿ ಉಪಾಯದಿಂದ ಆ ಇತರ ಮಂತ್ರಿಗಳು ಹೇಳಿದ ಮದುಮಕ್ಕಳನ್ನು ತಿರಸ್ಕರಿಸಿದನು. "ಅವರು ಮನೋಹರಿಯ ರೂಪಕ್ಕೂ ತಾರುಣ್ಯಕ್ಕೂ ತಕ್ಕವರಲ್ಲ. ಅವಳ ಕಲೆಗಳನ್ನು ಮತ್ತು ಗುಣಗಳನ್ನು ತಿಳಿಯುವುದಕ್ಕೂ ಅವರು ಯೋಗ್ಯರಾದ ಮದುಮಕ್ಕಳಲ್ಲ. ಕನ್ಯೆಗೆ ಸ್ವಯಂವರವನ್ನು ಮಾಡೋಣ. ಆ ಸ್ವಯಂವರದಲ್ಲಿ ಆಕೆ ತನ್ನ ಅದೃಷ್ಟದಂತೆ ಮೆಚ್ಚಿದವನನ್ನು ವರನಾಗಿ ಸ್ವೀಕರಿಸಲಿ"—ಎಂದು ಹೇಳಿದನು. ರಾಜನು ಅವನ ಮಾತಿಗೆ ಒಪ್ಪಿ, ಸ್ವಯಂವರ ಶಾಲೆಯನ್ನು ಮಾಡಿಸಿದನು. ರಾಜರುಗಳಿಗೆಲ್ಲ ದೂತರನ್ನು ಕಳುಹಿಸಿ, ಬರಮಾಡಿಸಿ ದನು. ಸ್ವಯಂವರ ಶಾಲೆಯಲ್ಲಿ ಅಂಗ, ವೆಂಗಿ, ಕಳಿಂಗ, ಕಾಂಭೋಜ, ಕಾಶಿ, ಕೌಶಲ, ಪಲ್ಲವ, ಪಾಂಚಾಳ, ಮಗಧ, ಮಾಳವ, ವತ್ಸ, ಮಹಾರಾಷ್ಟ್ರ, ಕುಣಾಳ, ಕುರು ಜಾಂಗಣ, ದ್ರವಿಳ, ಲಾಳ, ಕರ್ಣಾಟ, ಗೌಳ, ಸುಹುಮ, ಸುರಕಾಂತ, ಶೂರ ಸೇನೀಯ-ಮುಂತಾದ ಹಲವಾರು ದೇಶಗಳ ಒಡೆಯರಾದ ಅರಸುಗಳೆಲ್ಲಾ ನೆರೆದಿದ್ದರು. ಹಾಗೆ ನೆರೆದಿದ್ದವರಲ್ಲಿ ಯಾರೊಬ್ಬನನ್ನು ಮೆಚ್ಚದೆ, ಮನೋಹರಿಯು ದಾಟುತ್ತ ಹೋಗಿ ಕುಬೇರಕಾಂತನಿಗೆ ವರಮಾಲಿಕೆಯನ್ನು ಮುಡಿಸಿದಳು. ಆಗ ಅರಸುಗಳೆಲ್ಲರೂ

ಸೂಡಿದಳಾಗಳರಸುಗಳೆಲ್ಲಂ ನೆರೆದಾಮೇಕೈಕ ಪ್ರಧಾನರೆವಿರ್ದ್ದಂತಿರೆ ಬಡವಂಗೇನುಮಲ್ಲದೊಂಗೆ ಮಾಲೆಯಂ ಸೂಡಿದಳೆಂದು ಸಭಾಕ್ಷೋಭಮಾಗಿ ಕುಬೇರಕಾಂತನೊಳನಿಬರುಂ ನೆರೆದು ಯುದ್ಧಂ ಗೆಯ್ವೊಡೆ ಸಂಗ್ರಾಮರಂಗದೊಳ್ ಸುವರ್ಮವರ್ಮಂ ಮೊದಲಾಗೊಡೆಯರರ್ಕ್ಕಳೆಲ್ಲರುಮಂ ಗೆಲ್ದು ಮನೋಹರಿಯುಂ ಪಾಣಿಗ್ರಹಣ ಪುರಸ್ಸರಂ ಮದುವೆ ನಿಂದು ಸೊಪಾರಕ್ಕಧಿಪತಿಯಾಗಿ ರ್ದ್ದನ್ ಇಂತು ಕುಬೇರಕಾಂತಂ ಮನೋಹರಿಯೊಳಿಷ್ಟ ವಿಷಯ ಕಾಮಭೋಗಂಗಳನನುಭವಿಸಿ ಮಿರೆಯುರೆ ಸುವರ್ಮ್ಮವರ್ಮನೆಂಬರಸಂ ರಾಜ್ಯಪರಿಭ್ರಷ್ಟನಾಗಿ ತಾಪಸ ತಪಮಂ ಕೈಕೊಂಡು ನೆಗಟ್ದು ಸತ್ತು ಪ್ರತಿಸೂರ್ಯನೆಂಬ ವ್ಯಂತರದೇವನಾಗಿ ಪುಟ್ಟಿದೊಂ ಮತ್ತೆ ಶ್ರೀಧರನುಂ ಕುಬೇರ ಕಾಂತನುಂ ಮನೋಹರಿಯುಮನ್ಯೋನ್ಯಾತಿ ಸ್ನೇಹದೊಳ್ ಕೂಡಿ ರಾಜ್ಯಂಗೆಯ್ದು ತಮ್ಮ ಗೆಯ್ದ ದಾನಧರ್ಮದ ಫಲದಿಂದಂ ಅನ್ಯಜನ್ಮದೊಳಿಂತಪ್ಪ ವಿದ್ಯೆಯಕ್ಕೆಂದು ಮೂವರುಂ ನಿದಾನಂ ಗೆಯ್ದು ಮುನ್ನಂ ಶ್ರೀಧರಂ ಸತ್ತು ವಿಜಯಾರ್ಧಪರ್ವತದ ಉತ್ತರ ಶ್ರೇಣಿಯೊಳ್ ಅಳಕಾಪುರಮೆಂಬುದು ಪೊಟಲದನಾಳ್ವೊಂ ಗಗನವಲ್ಲಭನೆಂಬೊನಾತನ ಭಾರ್ಯೆ ಅನಂಗಮಾಲೆ ಯೆಂಬೊಳಾಯಿರ್ವ್ವರ್ಗ್ಗಂ ಶ್ರೀಧರಂ ಚಂಡವೇಗನೆಂಬೊಂ ಮಗನಾಗಿ ಪುಟ್ಟಿದೊಂ ಆ ಚಂಡ ವೇಗನ ಮಹಾದೇವಿ ವಿದ್ಯುಲ್ಲತೆಯೆಂಬೊಳಾಯಿರ್ವ್ವರ್ಗಂ ಕುಬೇರಕಾಂತಂ ಸತ್ತು ವಿದ್ಯುನ್ಮಾಳಿ

ಒಟ್ಟಾಗಿ ನಾವು ಒಬ್ಬೊಬ್ಬರೇ ಶ್ರೇಷ್ಠವ್ಯಕ್ತಿಗಳಾಗಿದ್ದೇವೆ. ನಾವು ಇದ್ದ ಹಾಗೆಯೇ ಏನೂ ಅಲ್ಲದಿರುವ ಬಡವನಿಗೆ ಮಾಲೆ ಹಾಕಿದಳು ಎಂದು ಸಭೆಯಲ್ಲಿ ಗದ್ದಲವಾಗಿ ಅವರೆಲ್ಲರೂ ಸೇರಿ ಕುಬೇರಕಾಂತನೊಡನೆ ಯುದ್ಧಮಾಡಿದರು. ಕುಬೇರಕಾಂತನು ಯುದ್ಧರಂಗದಲ್ಲಿ ಸುವರ್ಮವರ್ಮ ಮುಂತಾಗಿ ಉಳ್ಳವರೆಲ್ಲರನ್ನೂ ಗೆದ್ದು ಮನೋಹರಿ ಯನ್ನು ಕೈಹಿಡಿವ ಮೂಲಕವಾಗಿ ಮದುವೆಯಾಗಿ ಸೋಪಾರನೆಂಬ ದೇಶಕ್ಕೆ ಒಡೆಯ ನಾಗಿ ಇದ್ದನು. ಈ ರೀತಿಯಾಗಿ ಕುಬೇರಕಾಂತನು ಮನೋಹರಿಯಲ್ಲಿ ತನ್ನ ಪ್ರೀತಿಯ ವಿಷಯದ ಕಾಮಸುಖಗಳನ್ನು ಅನುಭವಿಸುತ್ತ ಇರುತ್ತಿರಲು ಸುವರ್ಮವರ್ಮ ಎಂಬ ರಾಜನು ರಾಜ್ಯವನ್ನು ಕಳೆದುಕೊಂಡು ಋಷಿಗಳ ತಪಸ್ಸನ್ನು ಸ್ವೀಕರಿಸಿ. ಆಚರಿಸಿ, ಸತ್ತು ಪ್ರತಿಸೂರ್ಯನೆಂಬ ಪಿಶಾಚದೇವತೆಯಾಗಿ ಹುಟ್ಟಿದನು. ಅನಂತರ ಶ್ರೀಧರನೂ ಕುಬೇರ ಕಾಂತನೂ ಮನೋಹರಿಯೂ ಪರಸ್ಪರವಾಗಿ ಕಡುಗೆಳೆತನದಿಂದ ಕೂಡಿ ರಾಜ್ಯವನ್ನಾಳಿ ದರು. ತಾವು ಮಾಡಿದ ದಾನಧರ್ಮದ ಫಲದಿಂದ ಬೇರೆ ಜನ್ಮದಲ್ಲಿ ಇದೇ ರೀತಿಯ ಇರವು ಉಂಟಾಗಲೆಂದು ಮೂವರೂ ಸಂಕಲ್ಪಮಾಡಿಕೊಂಡು ಸತ್ತರು. ಮೊತ್ತ ಮೊದಲು ಶ್ರೀಧರನು ಸತ್ತನು. ವಿಜಯಾರ್ಧ ಪರ್ವತದ ಬಡಗಣ ಸಾಲಿನಲ್ಲಿ ಅಳಕಾ ಪುರನೆಂಬ ಪಟ್ಟಣವಿದೆ. ಅದನ್ನು ಆಳುವವನು ಗಗನವಲ್ಲಭನೆಂಬವನು. ಅವನ ಹೆಂಡತಿ ಅನಂಗಮಾಲೆಯೆಂಬವಳು. ಆ ಇಬ್ಬರಿಗೆ ಶ್ರೀಧರನು ಚಂಡವೇಗನೆಂಬ ಮಗ ನಾಗಿ ಹುಟ್ಟಿದನು. ಆ ಚಂಡವೇಗನ ಪತ್ನಿ ವಿದ್ಯುಲ್ಲತೆ ಎಂಬವಳು. ಆ ಇಬ್ಬರಿಗೆ ಕುಬೇರಕಾಂತನು ಮಗನಾಗಿ ವಿದ್ಯುನ್ಮಾಳಿ ಎಂಬವನಾಗಿ ಹುಟ್ಟಿದನು. ಆಮೇಲೆ

ಯೆಂಬ ಮಗನಾಗಿ ಪುಟ್ಟಿದೊಂ ಮತ್ತಂ ದಕ್ಷಿಣ ಶ್ರೇಣಿಯೊಳ್ ವಿದ್ಯುಲ್ಲತೆಯ ಸೋದರ ತಮ್ಮಂ ಮೇಘಕೂಟಾಧಿಪತಿ ಮೇಘಮಾಳಿಯೆಂಬೊಂ ವಿದ್ಯಾಧರನಾತನ ಮಹಾದೇವಿ ರತಿಬಿಂದು ವೆಂಬೊಳಾಯಿರ್ವರ್ಗ್ಗಂ ಮನೋಹರಿ ಸತ್ತು ವಿರಳವೇಗೆಯೆಂಬೊಳ್ ಮಗಳಾಗಿ ಪುಟ್ಟಿದಳ್ ಮತ್ತೊಂದು ದಿವಸಂ ಚಂಡವೇಗನುಂ ವಿದ್ಯುನ್ಮಾಲಿಯುಮಂತು ತಮ್ಮಿರ್ವರುಂ ಉಜ್ಜಯಂತ ಪರ್ವತದ ಶಿಖರದೊಳ್ ಅರಿಷ್ಟನೇಮಿ ಭಟ್ಟಾರರ ಪರಿನಿರ್ವಾಣ ಭೂಮಿಯೊಳ್ ಭಕ್ತಿಯಿಂ ಪೂಜಿಸಲೆಂದರ್ಚನೆಯುಂಕೊಂಡು ಪೋದೊಡಾ ಪರ್ವತದ ಶಿಖರಮಂ ಕಂಡು ವಿದ್ಯುನ್ಮಾಲಿ ಮೂರ್ಛೆವೋಗಿ ಜಾತಿಸ್ಮರನಾಗಿ ಮನೋಹರಿಯುಂ ನೆನೆದು ಮಾಸೋಪ ವಾಸಂಗೆಯ್ದು ಪ್ರಜ್ಞಪ್ತಿಯೆಂಬ ಮಹಾವಿದ್ಯೆಯುಂ ಸಾಧಿಸಿದೊಡಾ ವಿದ್ಯೆ ಬೆಸನೇನೆಂದು ಮುಂದೆ ನಿಲೆ ಎನ್ನ ಮುನ್ನಿನ ಭವದ ಪ್ರಾಣವಲ್ಲಭೆಯಪ್ಪ ಮನೋಹರಿ ಈಗಳೀಲೋಕ ದೊಳೆಲ್ಲಿರ್ದಳೆಂಬುದನಱಿಸಿ ಬೇಗಮೆನಗೆ ಪೇೞೆಂದೊಡಾ ವಿದ್ಯೆಯಿಂತೆಂದು ಪೇೞ್ದಿತ್ತು ವಿಜಯಾರ್ಧಪರ್ವತದ ದಕ್ಷಿಣಶ್ರೇಣಿಯೊಳ್ ಮೇಘಕೂಟಪುರಾಧಿಪತಿ ಮೇಘಮಾಳಿಯೆಂಬೊಂ ವಿದ್ಯಾಧರಂ ನಿನ್ನ ಸೋದರ ಮಾವನಾತಂಗೆ ಮನೋಹರಿ ಸತ್ತು ವಿರಳವೇಗೆ ಯೆಂಬೊಳ್ ಮಗಳಾಗಿರ್ದೊಳೆಂದೊಡಂತಪ್ಪೊಡೆ ನೀನೆನ್ನ ಮಾವನ ಮನೆಗೆ ಪೋಗಿ

ವಿಜಯಾರ್ಧ ಪರ್ವತದ ತೆಂಕಣ ಸಾಲಿನಲ್ಲಿ ಮೇಘಕೂಟಕ್ಕೆ ಒಡೆಯನಾಗಿ ವಿದ್ಯುಲ್ಲತೆಯ ಸೋದರ ತಮ್ಮನು ಮೇಘಮಾಳಿ ಎಂಬ ವಿದ್ಯಾಧರನಿದ್ದನು. ಅವನ ಪತ್ನಿ ರತಿಬಿಂದು ಎಂಬುವಳು. ಆ ದಂಪತಿಗಳಿಗೆ ಮನೋಹರಿಯು ವಿರಳವೇಗೆ ಎಂಬ ಮಗಳಾಗಿ ಹುಟ್ಟಿದಳು. ಇಬ್ಬರೂ ಉಜ್ಜಯಂತ ಪರ್ವತದ ತುದಿಯಲ್ಲಿ ಅರಿಷ್ಟನೇಮಿ ಜಿನೇಂದ್ರರು ಮೋಕ್ಷಕ್ಕೆ ಹೋದ ಸ್ಥಳದಲ್ಲಿ, ಭಕ್ತಿಯಿಂದ ಪೂಜೆಮಾಡುವುದಕ್ಕಾಗಿ ಪೂಜಾವಸ್ತು ಗಳನ್ನು ತೆಗೆದುಕೊಂಡು ಹೋದರು. ಆಗ ಆ ಪರ್ವತದ ತುದಿಯನ್ನು ನೋಡಿ ವಿದ್ಯುನ್ಮಾಲಿ ಮೂರ್ಛೆಹೋದನು. ಅವನಿಗೆ ಪೂರ್ವಜನ್ಮದ ಸ್ಮರಣೆಯುಂಟಾಯಿತು. ಅವನು ಮನೋಹರಿಯನ್ನು ನೆನೆಸಿಕೊಂಡು ಒಂದು ತಿಂಗಳು ಉಪವಾಸಮಾಡಿ ಪ್ರಜ್ಞ ಪ್ತಿಯೆಂಬ ಮಹಾವಿದ್ಯೆಯನ್ನು ಸಾಧಿಸಿದನು. ಆ ವಿದ್ಯೆ 'ನನಗೇನಪ್ಪಣೆ ?' ಎಂದು ಅವನ ಮುಂದೆ ಬಂದು ನಿಂತಿತು. ಆಗ ವಿದ್ಯುನ್ಮಾಲಿ– " ಹಿಂದಿನ ಜನ್ಮದಲ್ಲಿ ನನ್ನ ಪ್ರಾಣದರಸಿಯಾದ ಮನೋಹರಿಯು ಈಗ ಈ ಲೋಕದಲ್ಲಿ ಎಲ್ಲಿ ಇದ್ದಾಳೆ–ಎಂಬುದನ್ನು ಹುಡುಕಿ ಹಿಡಿದು ನನಗೆ ಬೇಗ ಹೇಳು " ಎಂದನು. ಅದಕ್ಕೆ ಆ ವಿದ್ಯೆ ಈ ರೀತಿಯಾಗಿ ಹೇಳಿತು.– " ವಿಜಯಾರ್ಧಪರ್ವತದ ತೆಂಕಣ ಸಾಲಿನಲ್ಲಿ ಮೇಘಕೂಟವೆಂಬ ಪಟ್ಟಣಕ್ಕೆ ಒಡೆಯನಾದ ಮೇಘಮಾಳಿಯೆಂಬ ವಿದ್ಯಾಧರನು ನಿನ್ನ ಸೋದರ ಮಾವನು. ಮನೋಹರಿ ಸತ್ತು ಆ ಮೇಘಮಾಳಿಗೆ ವಿರಳವೇಗೆಯೆಂಬ ಮಗಳಾಗಿ ಇದ್ದಾಳೆ"–ಎಂದು ಹೇಳಲು, ವಿದ್ಯುನ್ಮಾಲಿ ಹೀಗೆಂದನು–"ಹಾಗಾದರೆ ನೀನು ನನ್ನ ಮಾವನ ಮನೆಗೆ ಹೋಗಿ ವಿರಳವೇಗೆಗೆ ಈ ರೀತಿಯಾಗಿ ಹೇಳು–ಎಲ್ಲೆ ಮನೋಹರೀ,

ವಿರಳವೇಗೆಗಿಂತೆಂದು ಪೇೞ್ ಎಲೆ ಮನೋಹರಿ ನೀಂ ಮುನ್ನಿನ ಭವದೊಳ್ ಕುಬೇರಕಾಂತನೊಡನೆ ಕ್ರೀಡಿಸಿದ ಕ್ರೀಡೆಗಳಂ ನೆನೆದಾ ಎಂದು ಪೇೞೆಂದು ವಿದ್ಯೆಯುಂ ಕಲ್ಪಿಸಿಯಟ್ಟಿದೊಡಾ ವಿದ್ಯೆಯುಂ ಪೋಗಿ ಕಲ್ಪಿಸಿದ ಪಾಂಗಿನೊಳೆ ನುಡಿದೊಡೆ ವಿರಳವೇಗೆ ಮೂರ್ಛೆವೋಗಿರ್ದು ನೀಡಱಿಂದೆೞ್ಚತ್ತು ಜಾತಿಸ್ಮರೆಯಾಗಿ ವಿರಹ ಸಂತಾಪದಿಂ ತನ್ನ ಮುನ್ನಿನ ಭರ್ತಾರನಂ ನೆನೆಯುತ್ತಿರೆ ವಿದ್ಯುನ್ಮಾಳಿಯುಂ ತನ್ನ ಮನೆಗೆ ವೋಗಿ ತಂದೆ ಚಂಡವೇಗಂಗೆ ತನ್ನ ವೃತ್ತಾಂತಮೆಲ್ಲಮಂ ಪೇೞ್ದೊಡಾತನುಮಾದಮಾನುಮೊಸೆದು ತನ್ನ ಮೈದುನನಪ್ಪ ಮೇಘಮಾಳಿ ವಿದ್ಯಾಧರನಲ್ಲಿಗೆ ಪೆರ್ಗಡೆಗಳಂ ಕೂಸಂ ಬೇಡಿಯಟ್ಟಿ ಪೆತ್ತು ವಿರಳವೇಗೆಯುಮಂ ವಿದ್ಯುನ್ಮಾಲಿ ಮದುವೆನಿಂದಾಕೆಯೊಳಿಷ್ಟವಿಷಯ ಕಾಮಭೋಗಂಗಳನನುಭವಿಸುತ್ತಂ ಪಲಕಾಲಂ ಸಲೆ ಮತ್ತೊಂದು ದಿವಸಂ ವಿದ್ಯಾನಿರ್ಮಿತ ವಿಚಿತ್ರಮಾಗುತ್ತಿರ್ದ ವಿಮಾನಮನೇಱಿಕೊಂಡು ಪೋಪಲ್ಲಿ ಹಿಮವಂತ ಪರ್ವತದ ಮೇಗೆ ಪಾಱುವ ವಿಮಾನಮಂ ಮುಂ ಪೇೞ್ದ ಪ್ರತಿಸೂರ್ಯನೆಂಬ ವ್ಯಂತರದೇವಂ ಕಂಡು ತನ್ನ ಸುವರ್ಣವರ್ಣನಪ್ಪ ಭವದ ಪಗೆಯಂ ನೆನೆದಿರ್ವ್ವರುಮಂ ಕೂಡಿ ಕೊಂದನಿಂತಿರ್ವರುಂ ಸತ್ತು ಗಂಗೆಯೆಂಬ ಮಹಾನದಿಯ ತೆಂಕಣ ಪಡುವಣ ಕೋಣೆಯೊಳ್ ಸುಕೌಶಳಮೆಂಬ ವಿಷಯದೊಳಯೋಧ್ಯಾಪುರಮೆಂಬ ಪೊೞಲೊಳ್ ಸಾಗರಸೇನನೆಂಬೊಂ ರಾಜಶ್ರೇಷ್ಠಿಯಾತನ ಭಾರ್ಯೆ

ನೀನು ಹಿಂದಿನ ಜನ್ಮದಲ್ಲಿ ಕುಬೇರಕಾಂತನೊಡನೆ ಆಡಿದ ಆಟಗಳನ್ನು ನೆನಪಿಟ್ಟಿರುವೆಯಾ ಎಂದು ಹೇಳು"–ಎಂದು ವಿದ್ಯೆಗೆ ಹೇಳಿಕೊಟ್ಟು ಕಳುಹಿಸಿದನು. ಆ ವಿದ್ಯೆಯು ಹೋಗಿ, ಕಲಿಸಿ ಕೊಟ್ಟ ರೀತಿಯಲ್ಲಿಯೇ ಹೇಳಿತು. ಆಗ ವಿರಳವೇಗೆ ಮೂರ್ಛೆಹೋದಳು. ಹೆಚ್ಚು ಹೊತ್ತಿನ ಮೇಲೆ ಎಚ್ಚೆತ್ತಳು. ಪೂರ್ವಜನ್ಮದ ಸ್ಮರಣೆಯುಂಟಾಗಿ ಅವಳು ಅಗಲಿಕೆಯ ದುಃಖದಿಂದ ತನ್ನ ಗಂಡನನ್ನು ಸ್ಮರಿಸುತ್ತ ಇದ್ದಳು. ಹೀಗಿರಲು ವಿದ್ಯುನ್ಮಾಲಿಯು ತನ್ನ ಮನೆಗೆ ತೆರಳಿ ತಂದೆಯಾದ ಚಂಡವೇಗನಿಗೆ ತನ್ನ ಎಲ್ಲಾ ಸಂಗತಿಯನ್ನೂ ಹೇಳಿದನು. ಆಗ ಚಂಡವೇಗನು ಬಹಳವಾಗಿ ಸಂತೋಷಪಟ್ಟು ತನ್ನ ಮೈದುನನಾದ ಮೇಘಮಾಳಿ ವಿದ್ಯಾಧರನಲ್ಲಿಗೆ ಕನ್ಯಾರ್ಥಿಯಾಗಿ ಹೆಗ್ಗಡೆ (ಅರಮನೆಯ ಅಧಿಕಾರಿ) ಗಳನ್ನು ಕಳುಹಿಸಿ ಒಪ್ಪಿಗೆಯನ್ನು ಪಡೆದನು. ವಿದ್ಯುನ್ಮಾಲಿಯು ವಿರಳವೇಗೆಯನ್ನು ಮದುವೆಯಾಗಿ ಅವಳಲ್ಲಿ ತನ್ನ ಇಚ್ಛೆಯ ವಿಷಯದ ಕಾಮಸುಖಗಳನ್ನು ಸವಿಯುತ್ತಿರಲು ಹಲವು ಕಾಲ ಸಂದಿತು. ಆಮೇಲೆ ಒಂದು ದಿವಸ ವಿದ್ಯೆಯಿಂದ ನಿರ್ಮಿತವಾದ ಆಶ್ಚರ್ಯಕರವಾಗಿದ್ದ ವಿಮಾನವನ್ನು ಹತ್ತಿಕೊಂಡು ವಿದ್ಯುನ್ಮಾಲಿಯು ವಿರಳವೇಗೆಯೊಡನೆ ಹೋಗುತ್ತಿದ್ದನು. ಹಿಮಾಲಯ ಪರ್ವತದ ಮೇಲೆ ಹಾರುವ ಅವನ ವಿಮಾನವನ್ನು ಹಿಂದೆ ಹೇಳಿದ ಪ್ರತಿಸೂರ್ಯನೆಂಬ ಪಿಶಾಚದೇವತೆ ಕಂಡು, ತಾನು ಸುವರ್ಣವರ್ಣನಾಗಿದ್ದ ಜನ್ಮದ ಹಗೆತನವನ್ನು ಸ್ಮರಿಸಿಕೊಂಡು, ಇಬ್ಬರನ್ನೂ ಒಟ್ಟಿಗೆ ಕೊಂದಿಕ್ಕಿದನು. ಹೀಗೆ ಇಬ್ಬರೂ ಸತ್ತರು. ಗಂಗೆಯೆಂಬ ದೊಡ್ಡ ನದಿಯ ನೈಋತ್ಯದ ಮೂಲೆಯಲ್ಲಿ ಸುಕೌಶಳವೆಂಬ ದೇಶದಲ್ಲಿ ಅಯೋಧ್ಯಾಪುರನೆಂಬ ಪಟ್ಟಣದಲ್ಲಿ ಸಾಗರಸೇನನೆಂಬ ರಾಜ

ಧರಣಿಯೆಂಬೊಳಾಯಿರ್ವರ್ಗ್ಗಂ ವಿದ್ಯುನ್ಮಾಳಿಯೆಂಬ ವಿದ್ಯಾಧರಂ ಕಾಲಂಗೆಯ್ದು ಸಿದ್ಧಾರ್ಥನೆಂಬೊಂ ಮಗನಾಗಿ ಪುಟ್ಟಿದೊಂ ಪಿತೃಮಾತೃಗಳೊಸಗೆಯಂ ಮಾಡುತ್ತಂ ಶ್ರೀ ವಿಭವ ರೂಪ ಕಾಂತಿ ಸೌಭಾಗ್ಯಾದಿ ಗುಣಂಗಳಿಂ ನೆಗೞ್ದೊಂ ಮತ್ತಿತ್ತ ಮಗಧೆಯೆಂಬುದು ನಾಡಲ್ಲಿ ರಾಜಗೃಹಮೆಂಬ ಪೊೞಲೊಳ್ ಸಮುದ್ರವಿಜಯನೆಂಬೊಂ ರಾಜಶ್ರೇಷ್ಠಿಯಾತಂಗೆ ಸಾಗರಸೆಟ್ಟಿಯ ಸೋದರ ತಂಗೆ ಸುಮತಿಯೆಂಬೊಳಂ ಕೊಟ್ಟರಾಯಿರ್ವರ್ಗ್ಗಂ ವಿರಳವೇಗೆಯೆಂಬ ವಿದ್ಯಾಧರಿ ಕಾಲಂಗೆಯ್ದು ಶ್ರೀಕಾಂತೆಯೆಂಬೊಳ್ ಮಗಳಾಗಿ ಪುಟ್ಟಿದೊಳತ್ಯಂತ ರೂಪಲಾವಣ್ಯ ಸೌಭಾಗ್ಯ ಕಾಂತಿ ಹಾವಭಾವವಿಲಾಸವಿಭ್ರಮಂಗಳಿಂ ಕೂಡಿದೊಳ್ ದೇವಗಣಿಕೆಯನೆ ಪೋಲ್ವಳಾಕೆಯಂ ಸೋದರಮಾವನ ಮಗಂಗೆ ಪಿರಿದುಂ ವಿಸ್ತಾರದಿಂ ಸಿದ್ಧಾರ್ಥಂಗೆ ಕೊಟ್ಟರಂತು ಸಿದ್ಧಾರ್ಥನುಂ ಶ್ರೀಕಾಂತೆಯುಂ ತಮ್ಮೊಳನ್ಯೋನ್ಯ ಸ್ನೇಹದೊಳ್ ಕೂಡಿ ಇಷ್ಟವಿಷಯ ಕಾಮಭೋಗಂಗಳನನುಭವಿಸುತ್ತಂ ಪಲಕಾಲಂ ಸಲೆ ಮತ್ತೊಂದು ದಿವಸಂ ಸಪ್ತತಳ ಪ್ರಾಸಾದದ ಮೇಲಿರ್ವರುಮಿಷ್ಟಪರಿವಾರ ಸಹಿತಂ ದಿಶಾವಳೋಕನಂ ಗೆಯ್ಯುತ್ತಂ ಸುಖಸಂಕಥಾವಿನೋದದಿಂದಿರ್ಪನ್ನೆಗಂ ವಿಚಿತ್ರಮಾಗುತ್ತಿರ್ದ್ದ ವಿಮಾನಮನೇಱಿ ಆಕಾಶಪಥಕ್ಕೊಗೆದು ಮೇಗೆವೋಪ ವಿದ್ಯಾಧರ ಯುಗಳಮಂ ಕಂಡಿರ್ವರುಂ ಮೂರ್ಛೆವೋಗಿ ನೀಡಱಿಂದೆೞ್ಚೆತ್ತು ಜಾತಿಸ್ಮರನಾಗಿ ತಮ್ಮ

ವರ್ತಕನಿದ್ದನು. ಆತನ ಹೆಂಡತಿ ಧರಣಿಯೆಂಬವಳು. ಆ ದಂಪತಿಗಳಿಗೆ ವಿದ್ಯುನ್ಮಾಳಿಯೆಂಬ ವಿದ್ಯಾಧರನು ಸತ್ತು ಸಿದ್ಧಾರ್ಥನೆಂಬ ಮಗನಾಗಿ ಹುಟ್ಟಿದನು. ಅವನು ತಂದೆ ತಾಯಿಗಳಿಗೆ ಸಂತೋಷವನ್ನು ಉಂಟುಮಾಡುತ್ತ ಸಂಪತ್ತು–ವೈಭವ–ಸೌಂದರ್ಯ–ತೇಜಸ್ಸು-ಅದೃಷ್ಟ ಮುಂತಾದ ಗುಣಗಳಿಂದ ಕೂಡಿದವನಾದನು. ಆ ಮೇಲೆ ಇತ್ತ ಮಗಧೆಯೆಂಬ ನಾಡಿದ್ದಿತು. ಅಲ್ಲಿ ರಾಜಗೃಹವೆಂಬ ಪಟ್ಟಣದಲ್ಲಿ ಸಮುದ್ರವಿಜಯನೆಂಬ ರಾಯಸೆಟ್ಟಿಯಿದ್ದನು. ಅವನಿಗೆ ಸಾಗರಸೆಟ್ಟಿಯ ಸೋದರದ ತಂಗಿಯಾದ ಸುಮತಿ ಎಂಬವಳನ್ನು ಕೊಟ್ಟಿದ್ದರು. ಆ ಇಬ್ಬರಿಗೂ, ವಿರಳವೇಗೆಯೆಂಬ ವಿದ್ಯಾಧರಿ ಸತ್ತು ಶ್ರೀಕಾಂತೆಯೆಂಬ ಮಗಳಾಗಿ ಹುಟ್ಟಿದಳು. ಅವಳು ಹೆಚ್ಚಾದ ರೂಪ-ಸೌಂದರ್ಯ-ಅದೃಷ್ಟ-ತೇಜಸ್ಸು ಒಯ್ಯಾರ–ಭಾವ-ಬೆಡಗು ವಿಭ್ರಮಗಳಿಂದ ಕೂಡಿದವಳಾಗಿ ದೇವತಾ ವಾರನಾರಿಯನ್ನು ಹೋಲುತ್ತಿದ್ದಳು. ಅವಳನ್ನು ಸೋದರಮಾವನ ಮಗನಾದ ಸಿದ್ಧಾರ್ಥನಿಗೆ ಹಿರಿದಾದ ವೈಭವದ ವಿಸ್ತಾರದಿಂದ ಕೊಟ್ಟರು. ಅಂತು ಸಿದ್ಧಾರ್ಥನೂ ಶ್ರೀಕಾಂತೆಯೂ ತಮ್ಮೊಳಗೆ ಪರಸ್ಪರ ಪ್ರೀತಿಯಿಂದ ಕೂಡಿ ತಮ್ಮ ಇಚ್ಛೆಯ ವಿಷಯದ ಕಾಮಸುಖಗಳನ್ನು ಅನುಭವಿಸುತ್ತ ಹಲವು ಕಳೆದರು. ಹೀಗಿರಲು ಒಂದು ದಿವಸ ಅವರಿಬ್ಬರು ಏಳು ಉಪ್ಪರಿಗೆಗಳುಳ್ಳ ಅರಮನೆಯ ಮೇಲುಗಡೆ ಇಷ್ಟರಾದ ಪರಿವಾರದವರೊಂದಿಗೆ ದಿಕ್ಕುಗಳನ್ನು ನೋಡುತ್ತ ಸುಖವಿಷಯದ ಕಥೆಗಳ ವಿನೋದದಿಂದ ಇದ್ದರು. ಆ ವೇಳೆಗೆ ಆಶ್ಚರ್ಯಕರವಾಗಿದ್ದ ವಿಮಾನವನ್ನು ಏರಿಕೊಂಡು ಆಕಾಶಮಾರ್ಗಕ್ಕೆ ಹಾರಿ ಮೇಲುಗಡೆ ಹೋಗತಕ್ಕ ಇಬ್ಬರು ವಿದ್ಯಾಧರರನ್ನು ಕಂಡು ಇಬ್ಬರೂ ಮೂರ್ಛೆಹೋದರು. ಬಹಳ

ಮುನ್ನಿನ ಭವಮಂ ನೆನೆದು ಸಂಸಾರದ ಪೊಲ್ಲಮೆಯುಮನನಿತ್ಯತೆಯುಮಂ ಬಗೆದು ವೈರಾಗ್ಯ ಪರರಾಗಿ ಇರ್ವರುಂ ತಪಂಬಡುವ ಬುದ್ಧಿಯನೊಡೆಯರಾಗಿ ಸ್ವಜನ ಪರಿಜನ ಮಂತ್ರಿ ಮಿತ್ರವರ್ಗಕ್ಕೆಲ್ಲಂ ಬಟ್ಟೆಯನಟ್ಟಿ ಬರಿಸಿ ಸಂಸಾರದ ಪೊಲ್ಲಮೆಯುಮಂ ತಂತಮ್ಮ ಬಗೆದ ಕಾರ್ಯಮುಮನವರ ಮುಂದೆ ನುಡಿದೊಡವರ್ಗ್ಗಳೆಲ್ಲಂ ನೆರೆದಿಂತೆಂದರಪ್ಪಾ ಪೂರ್ವದಿಂದಂ ಬಂದ ಕುಲಸಂತತಿಯಂ ಕಾಪೊರಾರುಮಿಲ್ಲಿನಿತು ಭಾರಮನಾರ್ಗ್ಗೊಪ್ಪಿಸಿ ತಪಂ ಬಟ್ಟಪ್ಪಿರದಱಿಂ ಕೆಲವು ಕಾಲದಿಂ ಮಗನಾದೊಡೆ ಮಗಂಗೆ ಸಮಸ್ತ ಭಾರಮಂ ನಿರೂಪಿಸಿ ತಪಂಬಡುವುದೆಂದು ನುಡಿದೊಡೆ ಸಿದ್ಧಾರ್ಥನೆಂದಂ ನಿಮ್ಮೆಲ್ಲರ ಪೇೞ್ದುದನಿಂಬುಗೆಯ್ದಪ್ಪೆನೆಂದು ಮಗನಾದಂದೆನ್ನ ತಪಂಬಡುವಂದಾರುಂ ವಕ್ರಂಬರಸಲ್ವೇಡೆಂದು ನುಡಿದೊಡಂಬಡಿಸಿ ಕೆಲವು ಕಾಲಂ ಪರಿವಾರಂ ಬಾರಿಸೆ ಮಾಣ್ದಿರ್ದಿಷ್ಟವಿಷಯ ಕಾಮಭೋಗಂಗಳನನುಭವಿಸುತ್ತಿರೆಯಿರೆ ಮತ್ತೆ ಸಿದ್ಧಾರ್ಥನ ಪಿರಿಯರಸಿ ಜಯಾವತಿಯೆಂಬೊಳ್ ಮಕ್ಕಳಂ ಬೇಡಿ ದೇವರ್ಗ್ಗಂ ದೇವತೆಗಳ್ಗಂ ಪರಸಿ ಪೂಜೆಯಂ ಮಾಡುತ್ತಿರ್ಪೊಳೊಂದು ದಿವಸಂ ವಿಜಯಭದ್ರರೆಂಬ ಭಟಾರರವಧಿಜ್ಞಾನಿಗಳ್ ಚರಿಗೆವೊಕ್ಕೊಡೆ

ಹೊತ್ತಿನ ಮೇಲೆ ಎಚ್ಚರಗೊಂಡು ಜನ್ಮವೃತ್ತಾಂತದ ಸ್ಮರಣೆಯುಳ್ಳವರಾಗಿ ತಮ್ಮ ಪೂರ್ವ ಜನ್ಮವನ್ನು ನೆನಸಿ ಸಂಸಾರದ ಕೆಡುಕನ್ನು ಕ್ಷಣಿಕತೆಯನ್ನೂ ಭಾವಿಸಿಕೊಂಡು ವೈರಾಗ್ಯದಲ್ಲಿ ತತ್ಪರರಾಗಿ ಇಬ್ಬರೂ ತಪಸ್ಸುಮಾಡುವ ಬುದ್ಧಿಯುಳ್ಳವರಾದರು. ಬಂಧುಗಳನ್ನೂ ಮಂತ್ರಿವರ್ಗ ಸ್ನೇಹಿತರ ವರ್ಗಗಳನ್ನೂ ದೂತರನ್ನು ಕಳುಹಿಸಿ ಬರಮಾಡಿಸಿದರು. ಸಂಸಾರದ ಕೆಡುಕನ್ನೂ ತಾವು ಭಾವಿಸಿಕೊಂಡ ಕಾರ್ಯವನ್ನೂ ಅವರ ಎದುರಿನಲ್ಲಿ ತಿಳಿಸಿದರು. ಆಗ ಅವರೆಲ್ಲರೂ ಒಟ್ಟಾಗಿ ಹೀಗೆಂದರು—"ಅಪ್ಪಾ, ಹಿಂದಿನಿಂದಲೇ ಬಂದ ವಂಶದ ಸಂತತಿಯನ್ನು ಕಾಪಾಡುವವರು ಬೇರೆ ಯಾರೂ ಇಲ್ಲ. ಇಷ್ಟೊಂದು ಭಾರವನ್ನು ನೀವು ಯಾರಿಗೆ ಒಪ್ಪಿಸಿಕೊಟ್ಟು ತಪಸ್ಸು ಮಾಡುವಿರಿ ! ಆದುದರಿಂದ ಕೆಲವು ಕಾಲದ ಮೇಲೆ ನಿಮಗೆ ಮಗನು ಹುಟ್ಟಿದರೆ, ಆ ಮಗನಿಗೆ ಎಲ್ಲಾ ಭಾರವನ್ನು ತಿಳಿಸಿ (ವಹಿಸಿಕೊಟ್ಟು) ತಪಸ್ಸಿಗೆ ಹೋಗಬಹುದು"—ಹೀಗೆ ಹೇಳಲು, ಸಿದ್ಧಾರ್ಥ ಹೇಳಿದನು—ನೀವೆಲ್ಲರು ಹೇಳಿದುದನ್ನು ಒಪ್ಪುತ್ತೇನೆ. ಮುಂದೆ ನನಗೆ ಮಗನಾದಾಗ ನಾನು ತಪಸ್ಸು ಮಾಡುವಾಗ ಯಾರೂ ಅಡ್ಡಿ ಬರಬಾರದು—ಎಂದು ಹೇಳಿ ಒಪ್ಪುವಂತೆ ಮಾಡಿದನು. ಕೆಲವು ಕಾಲ ಪರಿವಾರದವರು ತಡೆದುದರಿಂದ ತಪಸ್ಸಿಗೆ ಹೋಗುವುದನ್ನು ಬಿಟ್ಟಿದ್ದು ಇಷ್ಟವಾದ ವಿಷಯದ ಕಾಮಸುಖಗಳನ್ನು ಅನುಭವಿಸುತ್ತಿದ್ದನು. ಅನಂತರ, ಸಿದ್ಧಾರ್ಥನ ಹಿರಿಯ ಹೆಂಡತಿಯಾದ ಜಯಾವತಿಯೆಂಬುವಳು ಮಕ್ಕಳನ್ನು ಅಪೇಕ್ಷಿಸಿ ದೇವರಿಗೂ ದೇವತೆಗಳಿಗೂ ಹರಕೆ ಹೇಳಿ ಪೂಜೆಯನ್ನು ಮಾಡುತ್ತಿದ್ದಳು. ಒಂದು ದಿವಸ ಅವಧಿಜ್ಞಾನ (ತ್ರಿಕಾಲಜ್ಞಾನ)ವುಳ್ಳ ವಿಜಯಭದ್ರರೆಂಬ ಮುನಿಗಳು ಭಿಕ್ಷಕ್ಕಾಗಿ ಮನೆಯನ್ನು ಪ್ರವೇಶಿಸಿದರು. ಜಯಾವತಿ ನೋಡಿ ಅವರನ್ನು ನಿಲ್ಲಿಸಿ, ಅತ್ಯಂತ ಭಕ್ತಿ

ಕಂಡವರಂ ಜಯಾವತಿ ನಿಱಿಸಿಯಾದವರಾನುಂ ಭಕ್ತಿಯಿಂದಂ ಕೈಯಲಿಕ್ಕಿ ನಿರಂತರಂ ಮಾಡಿ ಕುಳ್ಳಿರ್ದ ಬೞಿಕ್ಕಿಂತೆಂದು ಬೆಸಗೊಂಡಳ್ ಭಟಾರಾ ಎನಗೆ ಮಕ್ಕಳಕ್ಕುಮೋ ಆಗದೋ ಎಂದು ಬೆಸಗೊಂಡೊಡೆ ಭಟಾರರಿಂತೆಂದರ್ ವಿಭವೈಶ್ವರ್ಯರೂಪ ಕಾಂತಿ ಸೌಭಾಗ್ಯಾದಿಗುಣಗಳಿಂದಂ ಸಿದ್ಧಾರ್ಥನಿಂದಗ್ಗಳಂ ಕುಲತಿಲಕನಪ್ಪ ಮಗನಂ ಪೆಱುವಯ್ ಪೆತ್ತಾಗಳಿಂತು ಪುಣ್ಣಮಿಯಂದಿನ ಚಂದ್ರನಂ ಕಂಡಾಗಳಾದಿತ್ಯನಸ್ತಮಾನಕ್ಕೆ ಸಲ್ಗುಮಂತೆ ಮಗನಂ ಕಂಡಾಗಳೆ ನಿನ್ನ ಭರ್ತಾರನುಂ ತಪಂಬಡುಗುಮಾ ರಿಸಿಯರಂ ಕಂಡಾಗಳೆ ಮಗನುಂ ತಪಂಬಡುಗುಮೆಂದು ಭಟಾರರ್ ಪೇೞ್ದು ಪೋದರಿತ್ತ ಜಯಾವತಿಗೆ ಹರ್ಷವಿಷಾದಂಗಳೆರಡುಮೊರ್ಮೊದಲಾಗೆ ಕಾಲಂಸಲೆ ಮತ್ತಿತ್ತ ಚಂಡವೇಗಂ ಪಲಕಾಲಮರಸುಗೆಯ್ದು ಆಯುಷ್ಯಾಂತದೊಳ್ ಕೞಿದು ಜಯಾವತಿಯ ಗರ್ಭದೊಳ್ ನೆಲಸಿ ಗರ್ಭಮಾದೊಡೆ ಜಯಾವತಿ ಮುಂ ನೆಲಮನೆಯುಂ ಮಾಡಿಸಿ ಎನಗೆ ಕುತ್ತಂ ಜಲೋದರಮಾದುದದರ್ಕೆ ವೈದ್ಯಂಗೆಯ್ಸಿದಪ್ಪೆನೆಂದು ಸಿದ್ಧಾರ್ಥಂಗೆ ಪೇೞ್ದು ಕುತ್ತಮಂ ಭಾವಿಸಿ ನೆಲಮನೆಯೊಳಗಿರ್ದು ನವಮಾಸಂ ನಱೆದಂದು ಪ್ರಸೂತೆಯಾಗಿ ಮಗನಂ ಪೆತ್ತು ತಾನುಂ ದಾದಿಯುಂ ಮತ್ತಂ ಬೆಸಕೆಯ್ವ ತೊೞ್ತುಮಿಂತು ಮೂವರುಮಱಿವರುೞಿದರಾರು

ಯಿಂದ ಪಾಣಿತಲ ಭೋಜಿಗಳಾದ ಅವರಿಗೆ ಕೈಯಲ್ಲಿ ಆಹಾರವನ್ನಿತ್ತಳು. ಎಡಬಿಡದೆ ಪ್ರತಿ ದಿನ ಹೀಗೆಯೇ ಮಾಡಿ ಅವರನ್ನು ಕುಳ್ಳಿರಿಸಿದನಂತರ ಹೀಗೆ ಕೇಳಿದಳು—"ಸ್ವಾಮಿಗಳೇ, ನನಗೆ ಮಕ್ಕಳಾದಾರೋ ಆಗಲಿಕ್ಕಿಲ್ಲವೋ ?" ಎಂದು ಕೇಳಲು, ಸ್ವಾಮಿಗಳು ಹೀಗೆಂದರು—"ವೈಭವ, ಸಂಪತ್ತು, ಸೌಂದರ್ಯ, ತೇಜಸ್ಸು, ಅದೃಷ್ಟ ಮುಂತಾದ ಗುಣಗಳಿಂದ ತಂದೆಯಾದ ಸಿದ್ಧಾರ್ಥನಿಗಿಂತಲೂ ಶ್ರೇಷ್ಠನೂ ವಂಶಕ್ಕೆ ತಿಲಕದಂತಿರುವವನೂ ಆದ ಮಗನನ್ನು ನೀನು ಹೆರುವೆ. ಹೆತ್ತಾಗ, ಹುಣ್ಣಿಮೆಯ ದಿನ ಚಂದ್ರನನ್ನು ಕಂಡಾಗ ಸೂರ್ಯನು ಹೇಗೆ ಅಸ್ತಮಿಸುವನೋ ಹಾಗೆಯೇ ಮಗನನ್ನು ಕಂಡೊಡನೆಯೇ ನಿನ್ನ ಗಂಡನು ತಪಸ್ಸನ್ನು ಕೈಗೊಳ್ಳುವನು. ಆ ಋಷಿಗಳನ್ನು ಕಂಡೊಡನೆಯೇ ಮಗನೂ ತಪಸ್ಸನ್ನು ಕೈಗೊಳ್ಳುವನು" ಎಂದು ಮುನಿಗಳು ಹೇಳಿ ಹೋದರು. ಇತ್ತ ಜಯಾವತಿಗೆ ಸಂತೋಷದುಃಖಗಳೆರಡೂ ಏಕಕಾಲದಲ್ಲಿ ಉಂಟಾದವು. ಹೀಗೆಯೇ ಕಾಲ ಕಳೆಯಿತು. ಆಮೇಲೆ, ಇತ್ತ ಚಂಡವೇಗನು ಹಲವು ಕಾಲ ರಾಜ್ಯವಾಳಿ ಆಯುಷ್ಯ ತೀರಲು ಸತ್ತು ಜಯಾವತಿಯ ಬಸಿರಿನಲ್ಲಿ ನೆಲಸಿ ಗರ್ಭವಾಗಲು, ಜಯಾವತಿಯು ಮೊದಲಾಗಿ ನೆಲಮನೆಯನ್ನು ಮಾಡಿಸಿದಳು. "ನನಗೆ ಜಲೋದರ ರೋಗವಾಗಿದೆ ಅದಕ್ಕೆ ಚಿಕಿತ್ಸೆ ಮಾಡಿಸುತ್ತೇನೆ"- ಎಂದು ಸಿದ್ಧಾರ್ಥನಿಗೆ ಹೇಳಿ ರೋಗವೆಂಬ ಭಾವನೆ ಬರುವಂತೆ ಮಾಡಿ ನೆಲಮನೆಯೊಳಗೆ ಇದ್ದಳು. ಒಂಬತ್ತು ತಿಂಗಳು ತುಂಬಿದಾಗ ಪ್ರಸವವಾಯಿತು. ಮಗನನ್ನು ಹೆತ್ತು ತಾನು, ದಾದಿ, ಸೇವೆಮಾಡುವವಳು ಹೀಗೆ ಮೂರು ಮಂದಿ ಮಾತ್ರ ಬಲ್ಲರು-ಉಳಿದ ಯಾರೂ ತಿಳಿಯರು-ಹೀಗೆ ದಿನಗಳು ಕಳೆದುವು

ಮಱಿಯರಿಂತು ದಿವಸಂಗಳ್ ಸಲೆ ಮತ್ತೊಂದು ದಿವಸಂ ಬೆಸಕೈವ ತೊೞ್ತು ನೀರಂ ತರಲ್ ಪೋದಲ್ಲಿ ನೀರ ಪೊೞೆಯೊಳಾಕೆಯ ಕೆಳದಿ ನಾಗಬ್ಬೆಯೆಂಬೊಳಾಕೆಯಂ ಕಂಡಿಂತೆಂದು ಬೆಸಗೊಂಡಳ್ ಎಲೆಗೆ ಕುಂದಬೆ ಪಲದಿವಸದಿಂದಂ ನಿನ್ನಂ ಕಂಡೆನಿಲ್ಲಿನಿತು ದಿವಸದಿಂ ಮುಂ ಕಾಣದುದರ್ಕೆ ಕಾರಣಮಂ ಪೇೞೆಂದು ಬೆಸಗೊಂಡಳ್ ಕಾರಣಮಂ ನಿನಗೆ ಪೇೞ್ದಪ್ಪೆಂ ನೀನಾರ್ಗ್ಗಂ ಪೇೞೆಯಪ್ಪೊಡೆಂದು ಸೂರುಳಿಸಿ ಇಂತೆಂದು ಪೇೞ್ದಳ್ ನೋಡಾ ಎಮ್ಮ ಸೆಟ್ಟಿತಿ ಜಯಾವತಿ ಬೆಸಲೆಯಾದಳ್ ಕಿಱುಂಡೆಗನಂ ಪೆತ್ತಳ್ ಆರುಮನಱಿಯಲೀಯದೆ ನೆಲಮನೆಯೊಳಡಂಗಿರ್ಪ್ಪಳೆಂದು ಪೇೞ್ವೊಡಾ ಮಾತನಲ್ಲಿಯೊರ್ವಂ ಸಂಜೆವಾರಿಸುತ್ತಿದ್ದ ಬ್ರಾಹ್ಮಣಂ ದಾರಿದ್ರ್ಯಾಭಿಭೂತಂ ಸೋಮಶರ್ಮನೆಂಬಾತಂ ಕೇಳ್ದು ದಮಾನಂ ಸಂತೋಷಂಬಟ್ಟು ಪಿರಿದೊಂದು ಮಾದುಫಲಮಂ ಕೊಂಡು ಪೋಗಿ ಸಿದ್ಧಾರ್ಥನಂ ಕಂಡಿಂತೆಂದು ಬಿನ್ನಪಿಕತುಂ ಸಿದ್ಧಾರ್ಥಸೆಟ್ಟಿ ಮಹಾಪುರುಷಾ ನಿನಗಾನೊಂದೊಸಗೆಯುಂ ಪೇೞಲ್ ಬಂದೆಂ ಜಯಾವತಿ ಬೆಸಲೆಯಾದಳ್ ಮಗಂಬೆತ್ತಳೆಂದು ಪೇೞ್ವೊಡೆ ಪೇೞ್ದ ಭಟ್ಟಂಗೆ ಕಟಕ ಕಟಿಸೂತ್ರಂ ಮೊದಲಾಗೊಡೆಯ ಅಂಗಚಿತ್ತವುಮಂ ಪಿರಿದು ಕಸವರವುಮಂ ಕೊಟ್ಟು ಪಾರ್ವಂಗೆ ದಾರಿದ್ರ್ಯಮೋಕ್ಷಮಂ ಮಾಡಿ ಸಿದ್ಧಾರ್ಥನೀ

ಆಮೇಲೆ ಒಂದು ದಿವಸ ಚಾಕರಿ ಮಾಡುವ ದಾಸಿ ನೀರನ್ನು ತರಲು ಹೋದ ವೇಳೆಯಲ್ಲಿ ಹೊಳೆಯಲ್ಲಿ ಆಕೆಯ ಗೆಳತಿಯಾದ ನಾಗಬ್ಬೆಯೆಂಬವಳು ಆಕೆಯನ್ನು ಕಂಡು ಹೀಗೆ ಕೇಳಿದವಳು–"ಎಲೈ ಕುಂದಬ್ಬೆಯೇ, ಹಲವು ದಿವಸಗಳಿಂದ ನಾನು ನಿನ್ನನ್ನು ಕಂಡಿಲ್ಲ. ಇಷ್ಟುದಿವಸಗಳಿಂದಲೂ ಮೊದಲು ನೀನು ಕಾಣಿಸದುದಕ್ಕೆ ಕಾರಣವನ್ನು ಹೇಳು" ಎಂದು ಕೇಳಿದಳು. ಅದಕ್ಕೆ ನಾಗಬ್ಬೆ "ಕಾರಣವನ್ನು ನೀನು ಯಾರಿಗೂ ಹೇಳ ಕೂಡದು. ಹಾಗಿದ್ದರೆ ಮಾತ್ರ ಹೇಳುವೆನು" ಎಂದಳು. ಯಾರಿಗೂ ಹೇಳುವುದಿಲ್ಲ ವೆಂದು ಕುಂದಬ್ಬೆಯಿಂದ ಪ್ರತಿಜ್ಞೆಮಾಡಿಸಿ ಅವಳು ಹೀಗೆಂದಳು—"ನೋಡು, ನಮ್ಮ ಸೆಟ್ಟಿತಿಯಾಗಿರುವ ಜಯಾವತಿ ಚಿಕ್ಕಸೆಟ್ಟಿ (ಮಗು)ವನ್ನು ಹೆತ್ತಿದ್ದಾಳೆ. ಈ ಸಂಗತಿ ಯನ್ನು ಯಾರಿಗೂ ತಿಳಿಯಲು ಬಿಡದೆ ನೆಲಮನೆಯಲ್ಲಿ ಅಡಗಿಕೊಂಡಿದ್ದಾಳೆ." ಈ ಮಾತನ್ನು ಅಲ್ಲಿಯೇ ಸಂಧ್ಯಾವಂದನೆಯನ್ನು ಮಾಡುತ್ತಿದ್ದ ಸೋಮಶರ್ಮನೆಂಬವನು ಕೇಳಿದನು. ಅತ್ಯಂತ ಬಡವನಾದ ಆ ಬ್ರಾಹ್ಮಣನು ಇದರಿಂದ ಬಹಳ ಸಂತೋಷ ಪಟ್ಟನು. ಅವನು ದೊಡ್ಡದೊಂದು ಮಾದಳದ ಹಣ್ಣನ್ನು ತೆಗೆದುಕೊಂಡು ಹೋಗಿ ಸಿದ್ಧಾರ್ಥನನ್ನು ಕಂಡು ಹೀಗೆ ವಿಜ್ಞಾಪನೆ ಮಾಡಿದನು. "ಎಲೈ ಮಹಾಪುರುಷನಾದ ಸಿದ್ಧಾರ್ಥಸೆಟ್ಟಿಯೇ, ನಿನಗೆ ನಾನು ಒಂದು ಶುಭವಾರ್ತೆಯನ್ನು ಹೇಳಲಿಕ್ಕಾಗಿ ಬಂದಿ ದ್ದೇನೆ. ನಿನ್ನ ಹೆಂಡತಿ ಜಯಾವತಿ ಗಂಡುಮಗುವನ್ನು ಹೆತ್ತಿದ್ದಾಳೆ" ಹೀಗೆ ಹೇಳಿದ ಬ್ರಾಹ್ಮಣನಿಗೆ ಸಿದ್ಧಾರ್ಥನು ಚಿನ್ನದ ಬಳೆ, ಉಡಿದಾರ ಮುಂತಾಗಿರುವ ಸ್ವೈವೇರಿ ಧರಿಸುವ ಆಭರಣಗಳ ರೂಪದ ಬಹುಮಾನವನ್ನು ಕೊಟ್ಟು ಆ ಬ್ರಾಹ್ಮಣನನ್ನು ಬಡತನ ದಿಂದ ಬಿಡುಗಡೆ ಮಾಡಿದನು. ಅನಂತರ ಸಿದ್ಧಾರ್ಥನು ಒಡನೆಯೆ ಮಗನ ಮುಖವನ್ನು

ಪಾರ್ವನ ಮಾತಂ ಕೇಳ್ದಾಗಳೆ ಪುತ್ರಮುಖಮಂ ನೋೞ್ಪೆನೆಂದು ಭೋಂಕನೆ ನೆಲಮನೆಯೊಳಗಂ ಪೊಕ್ಕು ನೋೞ್ಪನ್ನೆಗಂ ಜಯಾವತಿ ತನ್ನ ಸೋಂಕಿಲ ಮೇಗಿಟ್ಟಾಡಿಸುತ್ತಿರ್ಪ ಕೂಸಂ ಎಳನೇಸಱ ತೇಜದೊಳೋರಂತಪ್ಪಸಂ ಕಂಡು ಪಲವು ಕಾಲಂ ಬಾೞ್ವೆಯಾಗೆಂದು ಮಗನಂ ಪರಸಿ ಮತ್ತಮಿಂತೆಂದನೆನ್ನ ಮೂವತ್ತೆರಡು ಕೋಟಿ ಕಪವರಕ್ಕಂ ರಾಜಶ್ರೇಷ್ಠ ಪದಕ್ಕಮೆನ್ನ ಸಂತತಿಗಮೆಲ್ಲಮಿನ್ನಿಂದಿತ್ತ ನೀನೆ ಅರಸನೆಂದು ನುಡಿದು ಸಮಸ್ತಭಾರಮೆಲ್ಲಮಂ ಕೂಸಿಂಗೆ ಸಮರ್ಪಿಸಿ ಸೋಂಕಿಲೊಳಗಿರ್ದ ಕೂಸಿಂಗೆ ಸೆಟ್ಟಿವಟ್ಟಂಗಟ್ಟಿ ಪರಸಿ ಸೇಸೆಯನಿಕ್ಕಿ [ಸೋಂಕಿಲೊಳಿರ್ದನಂ ಕಂಡನಪ್ಪುದಱಿಂ ಸುಕೌಶಲಸ್ವಾಮಿಯೆಂದು ಪೆಸರನಿಟ್ಟು ನೆಲಮನೆಯಂ] ಪೊಱಮಟ್ಟು ಸ್ವಜನ ಪರಿಜನ ಬಂಧುವರ್ಗಕ್ಕೆಲ್ಲಂ ನಿಶ್ಶಲ್ಯಂ ಗೆಯ್ದು ನೀಮಿನಿಬರುಂ ಸುಕೌಶಲಸ್ವಾಮಿಯಂ ಪಿಡಿದು ಬಾೞಿಮೆಂದು ಕಲ್ಪಿಸಿ ಸಂತಯಿಸಿ ವಿನಯಂಧರರೆಂಬಾಚಾರ್ಯರ ಪಕ್ಕದೆ ಪಲಂಬರುಂ ಬೆರಸು ತಪಂ ಬಟ್ಟಂ ಮತ್ತೆ ಶ್ರೀಕಾಂತೆ ಮೊದಲಾಗೊಡೆಯ ಪಲಂಬರ್ ಪೆಂಡಿರ್ಕಳ್ ವಿನಯಂಧರ ಭಟ್ಟಾರರ್ ಗುರುಗಳಾಗೆ ಗುಣಮತಿಕಂತಿಯರ್ ಕಂತಿಯರಾಗೆ ತಪಂಬಟ್ಟು ಪಲಕಾಲಮುಗ್ರೋಗ್ರ ತಪಶ್ಚರಣಂ ಗೆಯ್ದು ಸಮಾಧಿಮರಣದಿಂದಂ ಮುಡಿಪಿ ದೇವಲೋಕದೊಳನಿಬರುಂ ಪುಟ್ಟಿದರ್

ನೋಡುವೆನೆಂದು ಬೇಗನೆ ನೆಲಮನೆಯ ಒಳಗೆ ಹೊಕ್ಕನು. ಆ ವೇಳೆಗೆ ಜಯಾವತಿ ಬಾಲಸೂರ್ಯನ ತೇಜಸ್ಸಿಗೆ ಸಮಾನವಾದ ಮಗುವನ್ನು ತನ್ನ ಮಡಿಲಲ್ಲಿ ಆಡಿಸುತ್ತಿರುವುದನ್ನು ಕಂಡನು. "ಚಿರಂಜೀವಿಯಾಗು ('ದೀರ್ಘಾಯುರ್ಭವ') ಎಂದು ಆಶೀರ್ವಾದ ಮಾಡಿದನು. ಆಮೇಲೆ ಹೀಗೆಂದನು— "ನನ್ನ ಮೂವತ್ತೆರಡು ಕೋಟಿ ಹೊನ್ನಿಗೂ ರಾಜಶ್ರೇಷ್ಠಿ ಪದವಿಗೂ ನನ್ನ ಸಂತತಿಯವರಿಗೂ ಎಲ್ಲಾ ಇವತ್ತಿನಿಂದ ಮುಂದೆ ನೀನೆ ಒಡೆಯನು." ಹೀಗೆ ಹೇಳಿ, ತನ್ನ ಎಲ್ಲ ಭಾರವನ್ನು ಮಗುವಿಗೆ ಸಲ್ಲಿಸಿದನು. ಮಡಿಲಿನಲ್ಲಿದ್ದ ಮಗುವಿಗೆ ಸೆಟ್ಟಿ ಪಟ್ಟವನ್ನು ಕಟ್ಟಿ ಆಶೀರ್ವದಿಸಿ ಮಂತ್ರಾಕ್ಷತೆಯನ್ನು ಹಾಕಿದನು. ಮಡಿಲಲ್ಲಿ ಇದ್ದ ಮಗುವನ್ನು ಕಂಡ ಕಾರಣದಿಂದ ಸುಕೌಶಲಸ್ವಾಮಿ ಎಂದು ಹೆಸರನ್ನಿಟ್ಟನು. ಸಿದ್ಧಾರ್ಥನು ಆಮೇಲೆ ನೆಲಮನೆಯಿಂದ ಹೊರಟು ಬಂದು ತನ್ನ ಜನರಿಗೂ ಸೇವಕರಿಗೂ ಬಂಧು ವರ್ಗಕ್ಕೂ ತೊಂದರೆಗಳಿಲ್ಲದಂತೆ ಮಾಡಿ (ಸಂತೋಷವನ್ನುಂಟುಮಾಡಿ) ನೀವು ಈ ಎಲ್ಲರೂ ಸುಕೌಶಲ ಸ್ವಾಮಿಯನ್ನು ಕೂಡಿಕೊಂಡು ಬಾಳಿರಿ, ಎಂದು ಹೇಳಿಕೊಟ್ಟು ಸಮಾಧಾನಪಡಿಸಿದನು. ಆಮೇಲೆ ಅವನು ಹಲವರನ್ನು ಕೂಡಿಕೊಂಡು ವಿನಯಂಧರರೆಂಬ ಆಚಾರ್ಯರ ಬಳಿಯಲ್ಲಿ ತಪಸ್ಸಿನ ಆಚರಣೆಯನ್ನು ಪಡೆದನು. ಅನಂತರ ಶ್ರೀಕಾಂತೆ ಮುಂತಾಗಿರುವ ಹಲವು ಹೆಂಡಿರು ವಿನಯಂಧರ ಸ್ವಾಮಿಗಳು ಗುರುಗಳಾಗಿರಲು ಗುಣಮತಿ ಕಂತಿಯರು ಭಿಕ್ಷುಣಿ ಸನ್ಯಾಸಿನಿಯರಾಗಿರಲು ತಪಸ್ಸಿಗೆ ಉಪದೇಶವನ್ನು ಪಡೆದು ಹಲವು ಕಾಲ ಅತ್ಯಂತ ಘೋರವಾದ ತಪಸ್ಸನ್ನು ಆಚರಿಸಿ, ಸಮಾಧಿ ಮರಣದಿಂದ ದೇಹತ್ಯಾಗಮಾಡಿದರು. ಅವರೆಲ್ಲರೂ ದೇವಲೋಕದಲ್ಲಿ ಹುಟ್ಟಿದರು. ಆಮೇಲೆ ಇತ್ತ ಸಿದ್ಧಾರ್ಥ ಋಷಿ ಹನ್ನೆರಡು ವರ್ಷಗಳವರೆಗೆ ಗುರು

ಮತ್ತಿತ್ತ ಸಿದ್ಧಾರ್ಥ ರಿಸಿಯುಂ ಪನ್ನೆರಡು ವರುಷಂ ಬರಂ ಗುರುಗಳನಗಲದೆ ದ್ವಾದಶಾಂಗ ಚತುರ್ದಶಪೂರ್ವಮಪ್ಪಾಗಮಮೆಲ್ಲಮಂ ಕಲ್ತೇಕವಿಹಾರಿಯಪ್ಪೆಂ ಭಟಾರಾ ಎಂದು ಗುರುಗಳಂ ಬೆಸಗೊಂಡವರನುಮತದಿಂದೇಕವಿಹಾರಿಯಾಗಿ ಗ್ರಾಮೇ ಏಕರಾತ್ರಂ ನಗರೇ ಪಂಚರಾತ್ರಂ ಅಟವ್ಯಾಂ ದಶರಾತ್ರಮೆಂಬೀ ನ್ಯಾಯದಿಂ ವಿಹಾರಿಸುತ್ತಂ ಛಟ್ಠಟ್ಠಮ ದಸಮ ದುವಾಳಸಾಷ್ಟೋಪವಾಸ ಪಕ್ಷೋಪವಾಸ ಮಾಸೋಪವಾಸಂಗಳಂ ಮಾಡುತ್ತಂ ಪಲಕಾಲಂ ತಪಂಗೆಯ್ಯುತ್ತಮಿರ್ದರ್, ಇತ್ತ ಜಯಾವತಿ ಮುಂ ಭಟ್ಟಾರರ್ ಪೇೞ್ದಾದೇಶಮಂ ನೆನೆದು ತನ್ನ ಮನೆಯಂ ರಿಸಿಯರಂ ಪುಗಲೀಯದಂತಿರೆ ಬಾಗಿಲ್ಗಾಪಿನವರಂ ಕಲ್ಪಿಸಿದೊಳ್ ಮತ್ತೆ ಸಿದ್ಧಾರ್ಥರಿಸಿಯರ ಮೇಗೆ ಕ್ರೋಧಮಂ ಭಾವಿಸಿ ಬಾಲವದ್ದೆಯಂ ಕೂಸಂ ಸಿಸುವನವ್ಯಕ್ತನಂ ವಿಸುಟ್ಟೆಂತು ತಪಂಬಟ್ಟೆ ಪಾಪಕರ್ಮ ದಯೆಯಿಲ್ಲದೊಂ ನಿಷ್ಕರುಣ ಎಂದು ಬಯ್ದಳ್ ಮತ್ತೆ ಸುಕೌಸಳಸ್ವಾಮಿಯಂ ಮೊಲೆಯೂಡುವ ದಾದಿ ಸುಬ್ರತೆಯೆಂಬೊಳ್ ಸುಮತಿಯೆಂಬೊಳೂಡುವ ದಾದಿ ನಂದೆಯೆಂಬೊಳಾಡಿಸುವ ದಾದಿ ಸುಪ್ರಭೆಯೆಂಬೊಳ್ ಮಜ್ಜನಂಬುಗಿಸುವ ದಾದಿ ಮೇಘಮಾಲೆಯೆಂಬೊಳ್

ಗಳ ಒಡನಾಟವನ್ನು ಬಿಡದೆ, "ಗುರುಗಳೇ, ಹನ್ನೆರಡು ಅಂಗಗಳೂ (ಆಚಾರಾಂಗ, ಸೂತ್ರಕೃತಾಂಗ...ಇತ್ಯಾದಿ) ಹದಿನಾಲ್ಕು ಪೂರ್ವಗಳೂ (ಉತ್ಪಾದಪೂರ್ವ, ಆಗ್ರಾಯಣೀ ಪೂರ್ವ....ಇತ್ಯಾದಿ) ಇರತಕ್ಕ ಶಾಸ್ತ್ರಗಳೆಲ್ಲವನ್ನೂ ಕಲಿತು ಒಂಟಿ ಪರಿವ್ರಾಜಕನಾಗುವೆನು" ಎಂದು ಗುರುಗಳನ್ನು ಕೇಳಿಕೊಂಡನು. ಅವರ ಅಪ್ಪಣೆಯಂತೆ ಏಕವಿಹಾರಿ (ಒಂಟಿ ಪರಿವ್ರಾಜಕನು) ಆಗಿ, 'ಗ್ರಾಮದಲ್ಲಿ ಒಂದು ರಾತ್ರಿ ನಗರದಲ್ಲಿ ಐದುರಾತ್ರಿ ಕಾಡಿನಲ್ಲಿ ಹತ್ತು ರಾತ್ರಿ' ಎಂಬ ನ್ಯಾಯದಂತೆ ಸಂಚರಿಸುತ್ತಾ ಆರು, ಎಂಟು, ಹತ್ತು, ಹನ್ನೆರಡು ದಿನಗಳು ಮಾಡತಕ್ಕ ಅಷ್ಟೋಪವಾಸ, ಪಕ್ಷೋಪವಾಸ, ಮಾಸೋಪವಾಸಗಳನ್ನು ಮಾಡುತ್ತ ಹಲವು ಕಾಲದವರೆಗೆ ತಪಸ್ಸನ್ನು ಮಾಡುತ್ತಿದ್ದರು. ಇತ್ತಲಾಗಿ ಜಯಾವತಿ ಹಿಂದೆ ಸ್ವಾಮಿಗಳು ಹೇಳಿದ ಆಜ್ಞೆಯನ್ನು ಸ್ಮರಿಸಿಕೊಂಡು, ಋಷಿಗಳು ತನ್ನ ಮನೆಯನ್ನು ಪ್ರವೇಶಿಸಲಿಕ್ಕೆ ಬಿಡದ ಹಾಗೆ ದ್ವಾರರಕ್ಷಕರಿಗೆ ಹೇಳಿಕೊಟ್ಟಳು. ಆಮೇಲೆ ಸಿದ್ಧಾರ್ಥ ಋಷಿಗಳ ಮೇಲೆ ಕೋಪಗೊಂಡವಳಾಗಿ ಎಲೈ ಪಾಪಕೃತ್ಯ ಮಾಡಿದವನೇ, ದಯೆಯಿಲ್ಲದವನೇ, ಕರುಣಾಹೀನನೇ, ಬಾಣಂತಿಯಾಗಿರುವ ಹೆಂಡತಿಯನ್ನು ಬರೇ ಚಿಕ್ಕದಾಗಿದ್ದ ಶಿಶುವನ್ನು ತೊರೆದು ಹೇಗೆ ನೀನು ತಪಸ್ಸನ್ನು ಮಾಡಲು ಹೋದೆ ?— ಎಂದು ನಿಂದಿಸಿದಳು. ಆಮೇಲೆ, ಸುಕೌಶಲಸ್ವಾಮಿಗೆ ಸುವ್ರತೆ ಎಂಬ ದಾದಿಯು ಮೊಲೆಯೂಡುತ್ತಿದ್ದಳು. ಸುಮತಿ ಎಂಬವಳು ಲೇಪನಾದಿಗಳನ್ನು ಸಿದ್ಧಪಡಿಸಿ ಹಚ್ಚುವವಳಾಗಿದ್ದಳು. ನಂದೆ ಎಂಬವಳು ಆಟವಾಡಿಸುವ ದಾದಿಯಾಗಿದ್ದಳು. ಸುಪ್ರಭೆ ಎಂಬವಳು ಸ್ನಾನಮಾಡಿಸುವಳು. ಮೇಘಮಾಲೆಯೆಂಬವಳು ಅಲಂಕಾರ

ಪಸವನಂ ಗೊಳಿಸುವ ದಾದಿ ಇಂತಯ್ವರ್ ದಾದಿಯರ್ಕಳ್ ನಡಪೆ ಸುಖದಿಂದಂ ಬಳೆದು ಪದಿನಾಱುಂ ವರುಷಂ ಬೋಗಿ ಯೌವನವಾದೊಡೆ ಮೂವತ್ತಿರ್ವರರಸು ಮಕ್ಕಳ ಕೂಸುಗಳನತ್ಯಂತ ಲಾವಣ್ಯ ಸೌಭಾಗ್ಯ ಕಾಂತಿ ಹಾವ ಭಾವ ವಿಲಾಸ ವಿಭ್ರಮಂಗಳಿಂ ಕೂಡಿದೊರಂ ಬೇಡಿಯೊಂದೆ ಪಸೆಯೊಳ್ ಮದುವೆ ನಿಱಿಸಿದಳ್ ಮತ್ತೇಕಶಾಲ ದ್ವಿಶಾಲ ತ್ರಿಶಾಲ ಚತುಶ್ಶಾಲ ಸ್ವಸ್ತಿಕ ನಂದ್ಯಾವರ್ತಂ ಮೊದಲಾಗೊಡೆಯ ಮಾಡಂಗಳುಂ ಮೂವತ್ತೆರೞ್ಬಳಿ ಮಾಡಂಗಳುಮಂ ಮಾಡಿಸಿ ತನ್ನ ಮನೆಯಂಗಣದೊಳ್ ಸೆಂಡಾಡುವ ತಱಿಯುಂ ಮಾನೆಯ ನೇಱುವ ವಿನೋದಂ ಮೊದಲಾಗೊಡೆಯ ವಿನೋದಸ್ಥಾನಂಗಳೆಲ್ಲಮಂ ಮಾಡಿಸಿ ಪೊಱಮಡಲೀಯದಂತು ಕಾಪಂ ಮಾಡಿ ಮಗನೈಶ್ವರ್ಯಮಂ ವಿನೋದಮುಮನಱ್ತಿಯಿಂದಂ ದಿವಸಕ್ಕಂ ನೋಡುತಿರ್ಪಮಾ ಸುಕೌಶಳಸ್ವಾಮಿಯುಂ ಮೂವತ್ತಿರ್ವ್ವರ್ ಪೆಂಡಿರ್ಕಳೊಡನೆ ಇಷ್ಟವಿಷಯ ಕಾಮ ಭೋಗ ಸುಖಂಗಳಂ ಪಲಕಾಲಮನುಭವಿಸುತ್ತಿರೆ ಮತ್ತೊಂದು ದಿವಸಂ ಸುಕೌಶಳಸ್ವಾಮಿಯುಂ ಪೃಥ್ವೀಧರವೆಂಬ ಪ್ರಾಸಾದದೇೞನೆಯ ನೆಲೆಯ ಮೇಗೆ ತಾನುಂ ತಾಯುಂ ಸುವ್ರತೆ ಮೊದಲಾಗೊಡೆಯ ಅಯ್ವರ್ ದಾದಿಯರುಂ ಸ್ವಯಂಪ್ರಭೆ ಮೊದಲಾಗೊಡೆಯ

ಮಾಡತಕ್ಕವಳಾಗಿದ್ದಳು. ಈ ರೀತಿಯಾಗಿ ಐದು ಮಂದಿ ದಾದಿಗಳು (ಕ್ಷೀರ ಧಾತ್ರಿ, ಮಂಡನಧಾತ್ರಿ, ಮಜ್ಜನಧಾತ್ರಿ, ಕ್ರೀಡನ (ಕ್ರೀಡೆಯ) ಧಾತ್ರಿ, ಮತ್ತು ಅಂಕಧಾತ್ರಿ–ಎಂಬವರು) ಸಾಕುತ್ತಿರಲು ಸುಕೌಶಳಸ್ವಾಮಿ ಸುಖದಿಂದ ಬೆಳೆದನು. ಅವನು ಹದಿನಾರು ವರ್ಷ ಪ್ರಾಯದವನಾಗಿ ಯುವಕನಾದನು. ಅವನಿಗೆ ಮೂವತ್ತೆರಡು ಮಂದಿ ರಾಜಕುಮಾರಿಯರನ್ನು– ಅತಿಶಯವಾದ ಲಾವಣ್ಯ, ಸೌಭಾಗ್ಯ, ಕಾಂತಿ, ಹಾವ, ಭಾವ, ವಿಲಾಸ, ವಿಭ್ರಮಗಳಿಂದ ಕೂಡಿದವರನ್ನು, ಕೇಳಿ ತಂದು ಒಂದೇ ಹಸೆಯಲ್ಲಿ (ಏಕಕಾಲದಲ್ಲಿ) ಜಯಾವತಿ ಮದುವೆ ಮಾಡಿಸಿದಳು. ಆಮೇಲೆ–ಒಂದು, ಎರಡು, ಮೂರು, ನಾಲ್ಕು ಕೊಠಡಿಗಳುಳ್ಳ ಸ್ವಸ್ತಿಕ, ನಂದ್ಯಾವರ್ತ ಮುಂತಾಗಿರುವ ಮನೆಗಳನ್ನು – ಮೂವತ್ತೆರಡು ಬಗೆಯ ಸಾಲು ಕಟ್ಟಡಗಳನ್ನು ಮಾಡಿಸಿದಳು. ತನ್ನ ಮನೆಯ ಅಂಗಳದಲ್ಲಿ ಚೆಂಡಾಡುವುದಕ್ಕೆ ತಕ್ಕುದಾದ ಜಗಲಿಗಳನ್ನೂ ಆನೆಯ ಮೇಲೇರಿ ಸವಾರಿಮಾಡುವ ವಿನೋದ ಮುಂತಾಗಿರುವ ವಿನೋದಸ್ಥಾನಗಳೆಲ್ಲವನ್ನೂ ಮಾಡಿ ಅಲ್ಲಿಂದ ಹೊರಟುಹೋಗದಂತೆ ರಕ್ಷಣೆಯ ಏರ್ಪಾಡನ್ನು ಮಾಡಿ, ಮಗನ ಸಂಪತ್ತನ್ನೂ ವಿನೋದವನ್ನೂ ಪ್ರತಿದಿನವೂ ಆಕೆ ತಪ್ಪದೆ ನೋಡುತ್ತಿದ್ದಳು. ಆ ಸುಕೌಶಲಸ್ವಾಮಿ, ಮೂವತ್ತೆರಡು ಮಂದಿ ಹೆಂಡಿರೊಡನೆ ತನಗೆ ಪ್ರೀತಿಯಡೆಸಿಸುವ ಕಾಮಸುಖಾನುಭವಗಳನ್ನು ಹಲವು ಕಾಲದವರೆಗೆ ಅನುಭವಿಸುತ್ತ ಇದ್ದನು– ಹೀಗಿರಲು ಆಮೇಲೆ ಒಂದು ದಿವಸ ಸುಕೌಶಲಸ್ವಾಮಿ ಪೃಥ್ವೀಧರ (ಪರ್ವತ) ಎಂಬ ಮನೆಯ ಏಳನೆಯ ಉಪ್ಪರಿಗೆಯ ಮೇಲೆ ತಾನೂ ತಾಯಿ ಜಯಾವತಿಯೂ ಸುವ್ರತೆ ಮುಂತಾಗಿ ಇರತಕ್ಕ ಐದು ಮಂದಿ ದಾದಿಯರೂ ಸ್ವಯಂಪ್ರಭೆ ಮೊದಲಾಗಿರುವ ಮೂವತ್ತೆರಡು ಮಂದಿ ಹೆಂಡಿರೂ ಹೀಗೆ

ಮೂವತ್ತಿರ್ವ್ವರ್ ಪೆಂಡಿರ್ಕಳಿಂತಿಸಿಬರಿಂದಂ ಪರಿವೇಷ್ಟಿತನಾಗಿ ಗವಾಕ್ಷಜಾಲಾಂತರದೊಳ್ ದಿಶಾವಳೋಕನಂ ಗೆಯ್ಯುತ್ತುಂ ಸುಖಸಂಕಥಾವಿನೋದದಿಂದಿರ್ಪ್ಪನ್ನೆಗಮಿತ್ತ ಸಿದ್ಧಾರ್ಥರಿಸಿಯರ್ ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ ವಿಹಾರಿಸುತ್ತಯೋಧ್ಯಾನಗರಮಂ ಬಂದು ಮಾಸೋಪವಾಸದ ಪಾರಣೆಯಂದು ಚರಿಗೆವೊಕ್ಕು ಕಿಱುಮನೆ ಪೆರ್ಮನೆಯೆನ್ನದುಣಲ್ ತಕ್ಕ ಮನೆಗಳಂ ಯಥಾಕ್ರಮದಿಂ ಪುಗುತ್ತಂ ಬರ್ಪರ್ ಸುಕೌಶಳ ಸ್ವಾಮಿಯ ಮನೆಯಂ ಪೊಕ್ಕು ಪೊಱಮಡುವರ್ ಗಿಡಿ ಗಿಡಿ ಜಂತ್ರಂ ಮಿಳಿಮಿಳಿ ನೇತ್ರರಪ್ಪ ಮಾಸೋಪವಾಸಂಗೆಯ್ದ ರಿಸಿಯರ್ ಪೋಪುದಂ ಸುಕೌಶಳಸ್ವಾಮಿ ಕಂಡೀ ಪೋಪರೇನೆಂಬರಬ್ಬಾ ಅಪೂರ್ವ ರೂಪರಿನ್ನರನೆಂದುಂ ಕಂಡಱಿಯೆನೆಂದು ತಾಯುಂ ಬೆಸಗೊಂಡೊಡೆ ತಾಯ್ ಇಂತೆಂದು ಪೇೞ್ದಳ್ ಮಗನೆ ಈತನಂಗಡಿಯುಲವಡಂ ಪೆಱುಕಿ ತಿಂದು ಬಾೞ್ವಂ ಬೈಕಂಗುಳಿ ಬೇಡಿ ಪೊಟಲೆಲ್ಲವಂ ತೊಟಲ್ದು ಬಸಿಱಂ ಪೊರೆವೊಂ ದೇಸಿಗನಾರುಮಿಲ್ಲದೊಂ ಕೋವಣಕ್ಕಪ್ಪುದಂ ಭಾಗಸವಿಲ್ಲದೊನೆಂದತ್ತ ಜಯಾವತಿ ಪೇೞ್ದೊಡೆ ಸುವ್ರತೆಯೆಂಬ ದಾದಿ ಮಾಕೊರ್ಂಡಿತೆಂದಳ್ ಹಾ ಪೊಲ್ಲದಂ ನುಡಿದಯ್ ಸ್ವಾಮಿಯುಂ ಪರಮೇಶ್ವರನಂ

ಇಪ್ಪತ್ತುಮಂದಿಯಿಂದ ಆವರಿಸಿಕೊಂಡು, ಗವಾಕ್ಷದ (ಗಾಳಿಕಿಂಡಿನ) ಬಲೆಯ ಎಡೆಯಲ್ಲಿ ದಿಕ್ಕುಗಳನ್ನೆಲ್ಲಾ ನೋಡುತ್ತ ಸುಖದ ಸಂಗತಿಯನ್ನೇ ಹೇಳುವ ವಿನೋದದಿಂದ ಇದ್ದನು. ಆ ವೇಳೆಗೆ ಇತ್ತಲಾಗಿ, ಸಿದ್ಧಾರ್ಥ ಋಷಿಗಳು ಸಂಚಾರಮಾಡುತ್ತ – ಗ್ರಾಮ, ನಗರ, ಖೇಡ, ಖರ್ವಡ, ಮಡಂಬ, ಪತ್ತನ, ದ್ರೋಣಾಮುಖ ಎಂಬ ಭೂವಿಭಾಗಗಳಲ್ಲಿ ಸಂಚರಿಸುತ್ತ, ಅಯೋಧ್ಯಾನಗರಕ್ಕೆ ಬಂದರು. ಒಂದು ತಿಂಗಳ ಉಪವಾಸದನಂತರ ಪಾರಣೆಯ ದಿನ ಭಿಕ್ಷೆಗೆ ಹೋದರು. ಚಿಕ್ಕಮನೆ ದೊಡ್ಡಮನೆ ಎನ್ನದೆ ಊಟಮಾಡಲು ತಕ್ಕುದಾದ ಮನೆಗಳನ್ನು ಯಥಾರೀತಿಯಾಗಿ ಪ್ರವೇಶಿಸುತ್ತ ಬರುತ್ತಿದ್ದವರು ಸುಕೌಶಳ ಸ್ವಾಮಿಯ ಮನೆಯನ್ನು ಹೊಕ್ಕು ಹೊರಟುಹೋಗುತ್ತಿದ್ದರು. ತಿಂಗಳುಗಟ್ಟಳೆ ಉಪವಾಸ ಮಾಡಿ ಕದಿರಕಡ್ಡಿಯಂತೆ ಕೃಶವಾದ ದೇಹವುಳ್ಳ ಮತ್ತು ಗುಳಿಬಿದ್ದ ಕಣ್ಣುಗಳಿಂದ ಮಿಳಮಿಳನೆ ನೋಡುತ್ತಿದ್ದ ಋಷಿಗಳು ಹೋಗುವುದನ್ನು ಸುಕೌಶಲ ಸ್ವಾಮಿ ಕಂಡು ತಾಯಿಯೊಡನೆ—"ಅಮ್ಮಾ, ಈಗ ಹೋಗುತ್ತಿರುವವರು ಯಾರು? ಅಪೂರ್ವವಾದ ರೂಪುಳ್ಳವರು; ಇಂಥವರನ್ನು ನಾನು ಎಂದಿಗೂ ಕಂಡಿಲ್ಲ, ತಿಳಿದಿಲ್ಲ" ಎಂದು ಕೇಳಿದನು. ಆಗ ತಾಯಿ ಈ ರೀತಿಯಾಗಿ ಹೇಳಿದಳು—ಇವನು ಅಂಗಡಿಯಲ್ಲಿ ಬಿಸಾಡಿದ ಅವಡೆ (ಅಲಸಂಡೆ) ಬೀಜವನ್ನು ಹೆಕ್ಕಿತಿಂದು ಬದುಕುವವನು. ಭಿಕ್ಷೆ ಬೇಡುವುದೇ ಶೀಲವಾಗಿ ಇರುವವನು. ಬೇಡಿಕೊಂಡು ಪಟ್ಟಣವನ್ನೆಲ್ಲ ಸುತ್ತಾಡಿಕೊಂಡು ಹೊಟ್ಟೆಹೊರೆಯ ತಕ್ಕವನು. ಮನೆಮಾರು ಇಲ್ಲದವನು. ಕೌಪೀನ ಕೊಂಡುಕೊಳ್ಳುವುದಕ್ಕೂ ಹಣವಿಲ್ಲದವನು— ಎಂದು ಜಯಾವತಿ ಹೇಳಿದಳು. ಆಗ ಸುವ್ರತೆಯೆಂಬ ದಾದಿ ಪ್ರತಿಭಟಿಸಿ ಹೀಗೆಂದಳು—"ಆಹಾ! ಕೆಟ್ಟಮಾತನ್ನಾಡಿದೆಯಲ್ಲವೆ? ನೀನೇ ಮೊದಲಾಗುಳ್ಳ ಮೂವ

ನೀಂ ಮೊದಲಾಗೊಡೆಯ ಮೂವತ್ತಿರ್ವರುಮೊಳ್ವೆಂಡಿರ್ಕಳುಮಂ ಮೂವತ್ತೆರೞ್ಕೋಟಿ ಕಸವರಮುಮಂ ಕೊಳದ ಪುಲ್ಲಿದರ್ಕಂ ತೊಱೆವಂತನಿತುಮಂ ತೊಱೆದು ಕರ್ಮಕ್ಷಯಾರ್ಥಂ ತಪಂಬಟ್ಟಾತನನಿಳಿಸಿ ಪರಿಭವಿಸಿ ಮುಟ್ಟುಗಿಡಿಸಿ ನುಡಿಯಲ್ವೇಡೆಂದು ಬಾರಿಸಿದೊಳಂ ಜಯಾವತಿ ಕಣ್ಕಿತ್ತಿ ಬಾರಿಸಿದೊಡೆ ಕಿಮ್ಮಗಿರ್ದು ಪೆಱಪೆಱವನೆ ನುಡಿಯಲ್ ತಗುಳ್ದೊಡೆ ಸುಕೌಶಳಸ್ವಾಮಿಯುಮವರಿರ್ವರ ನುಡಿಗಳ್ ಸಗರ್ಭವಚನಂಗಳೆಂದು ತನ್ನ ಮನದೊಳೆ ಬಗೆಯುತ್ತಿರ್ಪಿನಂ ಬಾಣಸಿಗಂ ಬಂದು ಬೋನಮೆತ್ತಿಯೋಗರವಾಱಿದಪ್ಪುದೆಂದು ಪೇೞ್ದೊಡೆ ತಾಯುಂ ಸುವ್ರತೆ ಮೊದಲಾಗೊಡೆಯ ದಾದಿಯರಯ್ವರುಮಾತನ ಪೆಂಡಿರ್ಕಳ್ ಸ್ವಯಂಪ್ರಭೆ ಶ್ರೀದತ್ತೆ ಬಂಧುಮತಿ ಭಾನುಮತಿ ಮಿತ್ರಸೇನೆ ಪ್ರಿಯಂಗು ಸುಂದರಿ ಪ್ರಿಯದೆ ಶ್ಯಾಮಲತೆ ವಿದ್ಯುಲ್ಲತೆ ಅಚಲೆ ವಿಮಳಮತಿ ಶ್ರೀಕಾಂತೆ ಶಶಿಪ್ರಭೆ ಸೂರಸೇನೆ ಅನಂತಮತಿ ಸರಸ್ವತಿ ವಿಜಯೆ ವೈಜಯಂತೆ ಅಪರಾಜಿತೆ ಕನಕಮಾಳೆ ಧಾನ್ಯೆ ಧನಶ್ರೀ ವಸುಂಧರೆಯೆಂದಿವರ್ ಮೊದಲಾಗೊಡೆಯರೆಲ್ಲರ್ ನೆರೆದಿಂತೆಂದರ್ ವೇಳಾತಿಕ್ರಮಮಾದಪುದಾರೊಗಿಸಲ್ಕೇೞ್ವೆಂದು ನುಡಿದೊಡೆ ಸುಕೌಶಳಸ್ವಾಮಿಯಿಂತೆಂದನೀ ವೃತ್ತಾಂತಮೆಲ್ಲಮನಱಿದೊಡಲ್ಲದುಣ್ಣೆನಲ್ಲೆನದಱಿಂ ಪೇೞ್ ಸುವ್ರತೆ ಏನಂ ಕಂಡಿರಾರುಳ್ಳುದನುಳ್ಳಂತೆ ಪೇೞೆಯಪ್ಪೊಡೆ ನಿನಗೆನ್ನಾಣೆಯೆಂದು

ತ್ತೆರಡು ಮಂದಿ ಒಳ್ಳೆಯ ಹೆಂಡಿರನ್ನೂ ಮೂವತ್ತೆರಡು ಕೋಟಿ ಹೊನ್ನನ್ನೂ ಕೊಳದ ಹುಲ್ಲಿನ ಕೊಳೆಯನ್ನು ಬಿಟ್ಟುಬಿಡುವ ಹಾಗೆ ಅಷ್ಟೆಲ್ಲವನ್ನೂ ತೊರೆದು ಕರ್ಮವನ್ನು ನಾಶಪಡಿಸುವುದಕ್ಕಾಗಿ ತಪಸ್ಸನ್ನು ಕೈಗೊಂಡ ಸ್ವಾಮಿಯೂ ಪರಮೇಶ್ವರನೂ ಆದವನನ್ನು ಹೀನಯಿಸಿ ಅವಮಾನಗೊಳಿಸಿ ಅಸ್ಪೃಶ್ಯನನ್ನಾಗಿ ಭಾವಿಸಿ ನುಡಿಯಬೇಡ !"—ಎಂದು, ಆತಂಕಮಾಡಿದಳು. ಅವಳನ್ನು ಜಯಾವತಿ ಕಣ್ಣುಲುಗಿಸಿ ತಡೆಯಲು ಸುಮ್ಮನಿದ್ದು ಬೇರೆಬೇರೆಯಾದ ಮಾತುಗಳನ್ನಾಡಲು ಪ್ರಾರಂಭಿಸಿದಳು. ಆಗ ಸುಕೌಶಳ ಸ್ವಾಮಿ ಅವರಿಬ್ಬರ ಮಾತುಗಳು ಗೂಢಾರ್ಥವುಳ್ಳ ಮಾತುಗಳೆಂದು ತನ್ನ ಮನಸ್ಸಿನಲ್ಲಿ ಭಾವಿಸುತಿದ್ದನು. ಆ ವೇಳೆಗೆ ಅಡಿಗೆಯವನು ಬಂದು ಭೋಜನವನ್ನು ಬಡಿಸಿ, 'ಅನ್ನ ತಣ್ಣಗಾಗುತ್ತಿದೆ' ಎಂದು ಹೇಳಿದನು. ತಾಯಿಯೂ ಸುವ್ರತೆ ಮುಂತಾಗಿರುವ ಐದುಮಂದಿ ದಾದಿಯರೂ ಅವನ ಹೆಂಡಿರಾದ ಸ್ವಯಂಪ್ರಭೆ, ಶ್ರೀದತ್ತೆ, ಬಂಧುಮತಿ, ಭಾನುಮತಿ, ಮಿತ್ರಸೇನೆ, ಪ್ರಿಯಂಗು, ಸುಂದರಿ, ಪ್ರಿಯದೆ, ಶ್ಯಾಮಲತೆ, ವಿದ್ಯುಲ್ಲತೆ, ಅಚಲೆ, ವಿಮಳಮತಿ, ಶ್ರೀಕಾಂತೆ, ಶಶಿಪ್ರಭೆ, ಸೂರಸೇನೆ, ಅನಂತಮತಿ, ಸರಸ್ವತಿ, ವಿಜಯೆ, ವೈಜಯಂತೆ, ಅಪರಾಜಿತೆ, ಕನಕಮಾಳೆ, ಧಾನ್ಯೆ, ಧನಶ್ರೀ, ವಸುಂಧರೆ—ಎಂದು ಇವರೇ ಮೊದಲಾಗಿ ಉಳ್ಳ ಎಲ್ಲರೂ ಕೂಡಿ ಹೀಗೆ ಹೇಳಿದರು—"ಸಮಯ ಮೀರುತ್ತದೆ, ಊಟಮಾಡಲಿಕ್ಕೆ ಏಳಿರಿ" ಎಂದು ಹೇಳಲು ಸುಕೌಶಲಸ್ವಾಮಿ ಹೀಗೆಂದನು—"ಈ ಸಂಗತಿಯೆಲ್ಲವನ್ನೂ ತಿಳಿದ ಹೊರತು ಊಟಮಾಡೆನು. ಆದುದರಿಂದ ಎಲೈ ಸುವ್ರತೆ, ಹೇಳು. ಏನನ್ನು ಕಂಡಿದ್ದೀರಿ ? ಯಾರು ? ಇದ್ದುದನ್ನು ಇದ್ದಂತೆ ಹೇಳೆಯಾದರೆ ನಿನಗೆ ನನ್ನ ಆಣೆಯುಂಟು."

ತನ್ನ ಮೇಗೆ ಸೂಱುಳಿಸಿ ಬೆಸಗೊಂಡೊಡೆ ಸುವ್ರತೆಯೆಂಬೊಳ್ ಮೊಲೆಯೂಡಿದ ದಾದಿಯಿಂತೆಂದು ಪೇೞ್ದಳ್ ಕೇಳ್ ಮಗನೆ ಇವರ್ ನಿನ್ನ ತಂದೆವಿರ್ ಸಿದ್ಧಾರ್ಥರೆಂಬೊರ್ ನೀನ್ ತೊಟ್ಟಿಲೊಳಿರ್ದಂತೆ ನಿನಗೆ ಸೆಟ್ಟಿವಟ್ಟಂಗಟ್ಟಿ ಸಂಸಾರಕ್ಕೆ ಪೇಸಿ ಕರ್ಮಕ್ಷಯಾರ್ಥಂ ತಪಂಬಟ್ಟು ಮೆಯ್ಯಂ ನಿಱಿಸಲ್ವೇಡಿ ಪೊೞಲೊಳಗೆ ಚರಿಗೆವೊಕ್ಕು ಭ್ರಾಮರಿವೃಗುತ್ತುಂ ಬಂದು ನಿನ್ನ ಮನೆಯುಂ ಪೊಕ್ಕು ಪೊಱಮಟ್ಟು ಪೋದರೆಂದು ಪೇೞ್ದಿನ್ನಾರೋಗಿಸಲ್ವೇೞ್ಕುಂ ಏೞು ಮಗನೆ ಎಂದೊಡೆ ಸುಕೌಶಳಸ್ವಾಮಿಯೊಂದನಿತಪ್ಪೊಡಾನುಮವರಂತಪ್ಪ ರೂಪಂ ಕೈಕೊಂಡಲ್ಲದುಣ್ಣೆನೆಂದು ಪ್ರತಿಜ್ಞೆಗೆಯ್ದಿರ್ದೊಡೆ ಸ್ವಜನ ಪರಿಜನ ಬಂಧುವರ್ಗಮೆಲ್ಲಂ ನೆರೆದಿಂತೆಂದರ್ ನೀನಿನ್ನುಂ ಕೂಸಯ್ ಕಾಮಭೋಗಂಗಳನನುಭವಿಸುವ ದಿವಸಂಗಳ್ ತಪಂಬಡುವ ದಿವಸಮಲ್ಲಂ ಪ್ರಾಯಂಬೋದಿಂ ಬೞಿಕ್ಕೆ ನಿನ್ನಮ್ಮನೆಂತು ನಿನಗೆ ಸೆಟ್ಟಿವಟ್ಟಂಗಟ್ಟಿ ಸಮಸ್ತ ಭಾರಮಂ ಸಮರ್ಪಿಸಿ ತಪಂಬಟ್ಟನಂತೆ ನೀನುಂ ನಿನಗೆ ಮಗನಾದೊಡೆ ಮಗಂಗೆ ಸೆಟ್ಟಿವಟ್ಟಂಗಟ್ಟಿ ಸಮಸ್ತ ಭಾರಮಂ ನಿರೂಪಿಸಿ ತಪಂಬಡುವುದೆಂದೆಲ್ಲರುಂ ನುಡಿದೊಡಿಂತೆಂದ ನನ್ನಿಗಮೇಂ ಸಾವರೊ ಬಾೞ್ವರೊ ಎಂತಱಿಯಲಕ್ಕುಂ ಮಾನಸವಾೞ್ತೆಂಬುದು ಪನಿ ಪುಲ್ಲ

ಹೀಗೆ ತನ್ನ ಮೇಲೆ ಪ್ರತಿಜ್ಞೆಯನ್ನು ಮಾಡಿ ಕೇಳಿದನು. ಅದಕ್ಕೆ, ಮೊಲೆಕೊಟ್ಟದಾದಿಯಾದ ಸುವ್ರತೆಯೆಂಬವಳು ಹೀಗೆ ಹೇಳಿದಳು—"ಮಗನೇ, ಕೇಳು. ಇವರು ನಿನ್ನ ತಂದೆಯವರು, ಸಿದ್ಧಾರ್ಥ ಎಂಬ ಹೆಸರಿನವರು. ನೀನು ತೊಟ್ಟಿಲಲ್ಲಿ ಇದ್ದಹಾಗೆಯೇ ನಿನಗೆ ಸೆಟ್ಟಿಪಟ್ಟವನ್ನು ಕಟ್ಟಿ, ಸಂಸಾರಕ್ಕೆ ಜುಗುಪ್ಸೆಪಟ್ಟು ಕರ್ಮವನ್ನು ಕುಗ್ಗಿಸುವುದಕ್ಕಾಗಿ ತಪಸ್ಸನ್ನು ಕೈಗೊಂಡರು. ಈ ದೇಹಧಾರಣೆಗೋಸ್ಕರವಾಗಿ ಭಿಕ್ಷೆಬೇಡುವುದಕ್ಕೆಂದು ಈ ಪಟ್ಟಣದ ಒಳಗೆ ಪ್ರವೇಶಿಸಿ, ತುಂಬಿ ಹೇಗೆ ಹೂವಿನಿಂದ ಹೂವಿಗೆ ಹೋಗುವುದೋ ಹಾಗೆಯೇ ಭಿಕ್ಷಾರ್ಥಿಯಾಗಿ ಮನೆಯಿಂದ ಮನೆಗೆ ಹೊಗುತ್ತ ಬಂದು, ನಿನ್ನ ಮನೆಯನ್ನು ಹೊಕ್ಕು ಹೊರಟುಹೋದರು" ಎಂದು ಹೇಳಿ, "ಇನ್ನು ಊಟಮಾಡಬೇಕು, ಮಗನೇ ಏಳು"-ಎಂದಳು. ಆಗ ಸುಕೌಶಳಸ್ವಾಮಿಯು-"ಹಾಗಾದರೆ ನಾನೂ ಅವರಂತಹ ರೂಪವನ್ನು ಕೈಕೊಳ್ಳುವೆನು. ಅಲ್ಲದೆ ಊಟಮಾಡೆನು" ಎಂದು ಪ್ರತಿಜ್ಞೆ ಮಾಡಿದನು. ಹೀಗಿರಲು, ಸ್ವಜನರು ಸೇವಕರು ಬಂಧುಗಳು ಎಲ್ಲ ಒಟ್ಟಾಗಿ ಹೀಗೆಂದರು "ನೀನಿನ್ನೂ ಮಗುವಾಗಿರುವೆ. ಕಾಮಸುಖಗಳನ್ನು ಅನುಭವಿಸುವ ದಿವಸಗಳು, ತಪಸ್ಸನ್ನಾಚರಿಸುವ ದಿವಸಗಳಲ್ಲ. ಪ್ರಾಯಹೋದನಂತರ (ಮುದುಕನಾದಮೇಲೆ) ನಿನ್ನ ತಂದೆ ಹೇಗೆ ನಿನಗೆ ಸೆಟ್ಟಿಪಟ್ಟವನ್ನು ಕಟ್ಟಿ ಎಲ್ಲಾ ಭಾರವನ್ನೂ ವಹಿಸಿಕೊಟ್ಟು ತಪಸ್ಸಿಗೆ ತೆರಳಿದನೋ ಹಾಗೆಯೇ ನೀನೂ ನಿನಗೆ ಮಗನಾದಾಗ ಅವನಿಗೆ ಸೆಟ್ಟಿಪಟ್ಟವನ್ನು ಕಟ್ಟಿ ಎಲ್ಲಾ ಭಾರವನ್ನು ಸೂಚಿಸಿ ತಪಸನ್ನು ಆಚರಿಸಬಹುದು"—ಹೀಗೆ ಎಲ್ಲರೂ ಹೇಳಿದರು. ಆಗ ಸುಕೌಶಳನು ಹೀಗೆಂದನು—"ಅಷ್ಟರೊಳಗೆ ಏನು, ಸಾಯುತ್ತಾರೊ? ಬದುಕುತ್ತಾರೊ? ತಿಳಿಯಲು ಹೇಗೆ ಸಾಧ್ಯ? ಮನುಷ್ಯನ ಜೀವನವೆಂಬುದು ಹುಲ್ಲು

ಮುಗಿಲ ಸಂಜೆಯೊಳೋರಂತಪ್ಪುದಱಿಂದಾರ್ ಬಾರಿಸಿದೊಡಂ ನಿಲ್ವೆನಲ್ಲೆಂದು ಸ್ವಯಂಪ್ರಭೆ
ಯೆಂಬೊಳ್ ಬಸಿಱ ಪೆಂಡತಿಯಾಕೆಯ ಬಸಿಱ ಕೂಸಿಂಗೆ ಸೆಟ್ಟಿವಟ್ಟಂಗಟ್ಟಿ ಮನೆಯಿಂದಂ
ಪೊಱಮಟ್ಟು ರಿಸಿಯರಿರ್ದ್ದೆಡೆಯಂ ಬೆಸಗೊಳುತ್ತುಂ ಪೋಗಿ ಬಹಿರುದ್ಯಾನ ವನದೊಳ್
ಸ್ಫಟಿಕಶಿಲಾತಲದ ಮೇಗಿರ್ದ ಸಿದ್ಧಾರ್ಥ ಭಟ್ಟಾರರಂ ಕಂಡು ಸುಕೌಶಳಸ್ವಾಮಿ ಜಾತಿಸ್ಮರನಾಗಿ
ದರ್ಶನವಿಶುದ್ಧಿಯೊಳ್ ಕೂಡಿದ ಶುಭ ಪರಿಣಾಮದಿಂದಂ ಬಂದಿಸಿದಾಗಳವಧಿಜ್ಞಾನಮುಮಾಗೆ
ಅವರ ತನ್ನ ಮುನ್ನಿನ ಭವಾಂತರಗಳೆಲ್ಲಮಂ ಪ್ರತ್ಯಕ್ಷಮಾಗಱಿದು ಮದೊಳಿಂತೆಂದು ಬಗೆದನಿವಂ
ಮುನ್ನಿನ ಭವಾಂತರದೊಳ್ ಪ್ರಿಯದರ್ಶನನೆಂಬ ಸೆಟ್ಟಿ ಕಾಲಂಗೆಯ್ದು ಮಲಯ
ಸುಂದರನೆಂಬಾನೆಯಾಗಿ ಪುಟ್ಟಿದನಲ್ಲಿಂ ಬಱಿಯಂ ಕುಬೇರಕಾಂತನೆಂಬೊನಾದನಲ್ಲಿಂ ಬಱಿಯಂ
ವಿದ್ಯುನ್ಮಾಳಿಯೆಂಬ ವಿದ್ಯಾಧರನಾದನಲ್ಲಿಂ ಬಱಿಯಂ ಸಿದ್ಧಾರ್ಥನೆಂಬೊನೀಗಳಾಗಿ ತಪಂಬಟ್ಟ
ನಂತು ಸಿದ್ಧಾರ್ಥ ಭಟ್ಟಾರರ ಭವಂಗಳೈದು ಮತ್ತಾಂ ಮುನ್ನಿನ ಭವದೊಳ್ ಪ್ರಿಯಸೇನೆ
ಯೆಂಬ ಮಾಲೆಗಾರ್ತಿಯಂ ಕಾಲಂಗೆಯ್ದು ಪದ್ಮಾವತಿಯೆಂಬ ಪಿಡಿಯಾಗಿ ಪುಟ್ಟಿದೆನಲ್ಲಿಂ
ಬಱಿಯಂ ವರಾಂಗನಾದೆನಲ್ಲಿಂ ಬಱಿಯಂ ಶ್ರೀಧರನಾದೆನಲ್ಲಿಂ ಬಱಿಯಂ ಚಂಡವೇಗನೆಂಬ

ಮೇಲಿನ ಹನಿ, ಮೋಡ, ಸಂಜೆಗೆಂಪು—ಇವುಗಳಿಗೆ ಸಮಾನವಾದುದು. ಆದುದರಿಂದ
ಯಾರು ತಡೆದರೂ ನಾನು ನಿಲ್ಲುವವನಲ್ಲ.” ಹೀಗೆ ಹೇಳಿ, ಸ್ವಯಂಪ್ರಭೆ ಎಂಬ ಗರ್ಭಿಣಿ
ಯಾದ ಪತ್ನಿಯ ಗರ್ಭದಲ್ಲಿದ್ದ ಶಿಶುವಿಗೆ ಸೆಟ್ಟಿಪಟ್ಟವನ್ನು ಕಟ್ಟಿ ಮನೆಯಿಂದ ಹೊರಟನು.
ಋಷಿಗಳಿರುವ ಸ್ಥಾನವನ್ನು ಕೇಳಿ ತಿಳಿದುಕೊಳ್ಳುತ್ತ ಹೋಗಿ, ಪಟ್ಟಣದ ಹೊರಗಿನ
ಉದ್ಯಾನದಲ್ಲಿ ಚಂದ್ರಕಾಂತ ಶಿಲಾಸ್ಥಳದ ಮೇಲೆ ಇದ್ದ ಸಿದ್ಧಾರ್ಥ ತಪಸ್ವಿಗಳನ್ನು
ಕಂಡನು. ಆಗ ಸುಕೌಶಳಸ್ವಾಮಿ ತನ್ನ ಪೂರ್ವಜನ್ಮದ ಸ್ಮರಣೆಯನ್ನು ಹೊಂದಿ,
ಸಮ್ಯಗ್ದರ್ಶನದಲ್ಲಿ ಕೂಡಿದ ಮಂಗಳಕರ ಪರಿಣಾಮದಿಂದ ವಂದಿಸಿದಕೂಡಲೇ ಅವನಲ್ಲಿ
ಅವಧಿ ಜ್ಞಾನವುಂಟಾಯಿತು. ಸಿದ್ಧಾರ್ಥಮುನಿಯ ಮತ್ತು ತನ್ನ ಹಿಂದಿನ ಬೇರೆಬೇರೆ
ಜನ್ಮಗಳ ವಿವರವೆಲ್ಲವನ್ನೂ ಪ್ರತ್ಯಕ್ಷವಾಗಿ ತಿಳಿದು ಮನಸ್ಸಿನಲ್ಲಿ ಹೀಗೆ ಭಾವಿಸಿದನು—
“ಇವನು (ಸಿದ್ಧಾರ್ಥಭಟಾರರು) ಹಿಂದಿನ ಒಂದು ಜನ್ಮದಲ್ಲಿ ಪ್ರಿಯದರ್ಶನನೆಂಬ ಸೆಟ್ಟಿ
ಯಾಗಿದ್ದನು. ಅವನು ಸತ್ತು ಮಲಯಸುಂದರನೆಂಬ ಆನೆಯಾಗಿ ಹುಟ್ಟಿದನು. ಆಮೇಲೆ
ಕುಬೇರಕಾಂತನೆಂಬವನಾದನು. ಅನಂತರದಲ್ಲಿ ವಿದ್ಯುನ್ಮಾಳಿಯೆಂಬ ವಿದ್ಯಾಧರನಾದನು.
ಅಲ್ಲಿಂದನಂತರ ಈಗ ಸಿದ್ಧಾರ್ಥನೆಂಬವನಾಗಿ ತಪಸ್ಸನ್ನು ಆಚರಿಸಿದನು. ಅಂತೂ
ಸಿದ್ಧಾರ್ಥಮುನಿಗಳಿಗೆ ಇದುವರೆಗೆ ಆದ ಜನ್ಮಗಳು ಐದು. ಆಮೇಲೆ, ನಾನು ಹಿಂದಿನ
ಒಂದು ಜನ್ಮದಲ್ಲಿ ಪ್ರಿಯಸೇನೆಯೆಂಬ ಮಾಲೆಗಾರ್ತಿಯಾಗಿದ್ದೆನು. ಅನಂತರ ಸತ್ತು
ಪದ್ಮಾವತಿ ಎಂಬ ಹೆಣ್ಣಾನೆಯಾಗಿ ಜನಿಸಿದೆನು. ಆಮೇಲೆ ವರಾಂಗನಾದೆನು. ಅದಾದ
ಮೇಲೆ ಶ್ರೀಧರನಾದೆನು. ಅಲ್ಲಿಂದ ಬಳಿಕ ಚಂಡವೇಗನೆಂಬ ವಿದ್ಯಾಧರನಾದೆನು. ಆಮೇಲೆ

ವಿದ್ಯಾಧರನಾದೆನಲ್ಲಿಂ ಬೞಿಯಂ ಸಿದ್ಧಾರ್ಥಂಗಂ ಜಯಾವತಿಗಂ ಮಗನೆನಾಂ ಸುಕೌಶಳ
ಸ್ವಾಮಿಯಾಗಿ ಪುಟ್ಟಿದೆನಿಂತೆನ್ನ ಭವಾಂತರಮಾಱು ಮತ್ತಾಂ ಪ್ರಿಯಸೇನೆಯಪ್ಪಂದೆನ್ನ ಕೆಳದಿ
ಸುಕೀರ್ತಿಯೆಂಬಳ್ ಪ್ರಿಯದರ್ಶನನ ಭಾರ್ಯೆ ಕಾಲಂಗೆಯ್ದು ಮಲಯಾವತಿಯೆಂಬ ಪಿಡಿ
ಯಾಗಿ ಪುಟ್ಟಿದೊಳಲ್ಲಿಂ ಬೞಿಯಂ ಸುಕೇಶಿನಿಯಾದಳಲ್ಲಿಂ ಬೞಿಯಂ ಮನೋಹರಿಯಾದಳಲ್ಲಿಂ
ಬೞಿಯಂ ವಿರಳವೇಗೆಯೆಂಬ ವಿದ್ಯಾಧರಿಯಾದಳಲ್ಲಿಂ ಬೞಿಯಂ ಶ್ರೀಕಾಂತೆಯಾದೊಳಾಕೆಯುಂ
ಸಿದ್ಧಾರ್ಥಂಗೆ ಕೊಟ್ಟುದಂತು ಶ್ರೀಕಾಂತೆಯ ಭವಾಂತರಮಾಱಿಂತು ಮೂವರ ಭವಾಂತರಂಗ
ಳನಱಿದು ಸಂಸಾರಕ್ಕೆ ವೈರಾಗ್ಯಮಾಗಿ ಸಿದ್ಧಾರ್ಥ ಭಟ್ಟಾರರ ಪಕ್ಕದೆ ಸುಕೌಶಳಸ್ವಾಮಿ
ತಪಂಬಟ್ಟಂ ಸುಭದ್ರೆಯುಮಂ ಬೞಿಯೆ ಉೞಿದ ಮೂವತ್ತಿರ್ವರ್ ಪೆಂಡಿರುಂ ಸಿದ್ಧಾರ್ಥ
ಭಟಾರರ್ ಗುರುಗಳಾಗೆ ಗುಣಮತಿ ಕಂತಿಯರ್ ಕಂತಿಯರಾಗೆ ತಪಂಬಟ್ಟು ಪಲಕಾಲಮು
ಗ್ರೋಗ್ರ ತಪಶ್ಚರಣಂಗೆಯ್ದು ಸಮಾಧಿಮರಣದಿಂ ಮುಡಿಪಿ ದೇವಲೋಕದೊಳ್ ಪುಟ್ಟಿದರ್
ಮತ್ತಿತ್ತ ಜಯಾವತಿಯುಂ ತನ್ನಂ ಬಾರಿಸೆವಾರಿಸೆ ಸುಕೌಶಲಸ್ವಾಮಿ ತಪಂಬಟ್ಟನೆಂದು ಮುಳಿದು
ಜಿನಧರ್ಮಮಂ ಪೞಿದು ಉನ್ಮಾರ್ಗೋಪದೇಶದಿಂದಾರ್ತಧ್ಯಾನದೊಳ್ ಕೂಡಿ ಸತ್ತು
ಮೊಗ್ಗಲಗಿರಿಯೆಂಬ ಪರ್ವತದೊಳ್ ಪೆಣ್ಬುಲಿಯಾಗಿ ಪುಟ್ಟಿದಳ್ ಮತ್ತಿತ್ತ ಸುಕೌಸಲಸ್ವಾಮಿ



ಸಿದ್ಧಾರ್ಥನಿಗೂ ಜಯಾವತಿಗೂ ಮಗನಾದ ನಾನು ಸುಕೌಶಳ ಸ್ವಾಮಿಯಾಗಿ ಜನಿಸಿ
ದೆನು. ಈ ರೀತಿಯಾಗಿ ನನ್ನ ಜನ್ಮಾಂತರಗಳು ಆರು. ಆಮೇಲೆ, ನಾನು ಪ್ರಿಯಸೇನೆ
ಎಂಬವಳಾಗಿದ್ದಾಗ ನನ್ನ ಗೆಳತಿಯಾದ ಸುಕೀರ್ತಿ ಎಂಬುವಳು ಪ್ರಿಯದರ್ಶನನ ಪತ್ನಿ
ಯಾಗಿದ್ದು ಸತ್ತ ಮೇಲೆ, ಮಲಯಾವತಿ ಎಂಬ ಹೆಣ್ಣಾನೆಯಾಗಿ ಹುಟ್ಟಿದಳು. ಆಮೇಲೆ
ಸುಕೇಶಿನಿಯಾದಳು. ಅನಂತರ ಮನೋಹರಿ ಎಂಬವಳಾದಳು. ಆಮೇಲೆ ವಿರಳವೇಗೆ
ಯೆಂಬ ವಿದ್ಯಾಧರಿಯಾದಳು. ಆ ಬಳಿಕ ಶ್ರೀಕಾಂತೆಯಾದಳು. ಅವಳನ್ನು ಸಿದ್ಧಾರ್ಥ
ನಿಗೆ ಕೊಟ್ಟು ಮದುವೆ ಮಾಡಲಾಗಿತ್ತು. ಆ ರೀತಿಯಲ್ಲಿ ಶ್ರೀಕಾಂತೆಯ ಜನ್ಮಾಂತರ
ಗಳು ಆರು. ಅಂತೂ ಮೂವರ ಬೇರೆಬೇರೆ ಜನ್ಮಗಳ ವಿಚಾರವನ್ನು ತಿಳಿದು, ಸಂಸಾರ
ವಿಷಯದಲ್ಲಿ ವೈರಾಗ್ಯವುಂಟಾಗಿ ಸುಕೌಶಳಸ್ವಾಮಿ ಸಿದ್ಧಾರ್ಥಮುನಿಗಳ ಬಳಿಯಲ್ಲಿ
ತಪಸ್ಸನ್ನು ಆಚರಿಸಿದನು. ಸುಭದ್ರೆ ಎಂಬವಳನ್ನು ಬಿಟ್ಟು ಉಳಿದ ಮೂವತ್ತೆರಡು
ಮಂದಿ ಹೆಂಡಿರು, ಸಿದ್ಧಾರ್ಥಮುನಿಗಳೇ ಗುರುಗಳಾಗಲು ಗುಣಮತಿ ಕಂತಿಯರು,
ಮಾರ್ಗದರ್ಶಕ ಭಿಕ್ಷುಣಿಯರಾಗಲೂ ತಪಸ್ಸನ್ನು ಸ್ವೀಕರಿಸಿ ಹಲವು ಕಾಲ ಬಹಳ ಘೋರ
ವಾದ ತಪಸ್ಸನ್ನು ಮಾಡಿ ಸಮಾಧಿಮರಣದಿಂದ ಸತ್ತು ದೇವಲೋಕದಲ್ಲಿ ಹುಟ್ಟಿದರು.
ಆಮೇಲೆ ಇತ್ತ ಜಯಾವತಿ ತಾನು ಎಷ್ಟೊಂದು ತಡೆದರೂ ಸುಕೌಶಳಸ್ವಾಮಿ ತಪಸ್ಸಿಗೆ
ಹೋದನೆಂದು ಕೋಪಗೊಂಡಳು. ಜೈನಧರ್ಮವನ್ನು ನಿಂದಿಸಿದಳು. ಕುಟಿಲವಾದ
ಉಪದೇಶದಿಂದ ಆರ್ತಧ್ಯಾನದಲ್ಲಿ ಸತ್ತು ಮೊಗ್ಗಲಗಿರಿ ಎಂಬ ಪರ್ವತದಲ್ಲಿ ಹೆಣ್ಣು
ಹುಲಿಯಾಗಿ ಹುಟ್ಟಿದಳು. ಆಮೇಲೆ ಇತ್ತ ಸುಕೌಶಳಸ್ವಾಮಿ ಆಚಾರಾಂಗ, ಸೂತ್ರ

ದ್ವಾದಶಾಂಗ ಚತುರ್ದಶಪೂರ್ವಮಪ್ಪಾಗಮಮೆಲ್ಲಮಂ ಕಲ್ತು ಗುರುಗಳೊಡನೆ ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ ವಿಹಾರಿಸುತ್ತಂ ಪಲಕಾಲಂ ತಪಂಬಟ್ಟು ಮೊಗ್ಗಳ ಗಿರಿಯೆಂಬ ಪರ್ವತಕ್ಕೆ ವಂದು ಮೞೆಗಾಲದೊಳಿರ್ವರುಮೊಂದೆ ಗುಹೆಯೊಳ್ ಜೋಗು ಗೊಂಡು ನಾಲ್ಕು ತಿಂಗಳುಮಿರ್ವರುಮುಪವಾಸಂಗೆಯ್ದು ಜೋಗು ನೆಱೆದೊಡೆ ಚಾತುರ್ಮಾಸದ ಪಾರಣೆಯೆಂದು ಸುಕೌಶಲಸ್ವಾಮಿಯುಪ್ಪ ರಿಸಿಯರ್ ಗುಹೆಯಿಂದಂ ಮುನ್ನ ಪೊಱಮಟ್ಟು ದೆಸೆಗಳಂ ನೋೞ್ಪನ್ನೆಗಂ ತಾಯುಪ್ಪ ಪೆಣ್ಬುಲಿ ಪಲವುದಿವಸಮಾಹಾರಮಂ ಪೆಱದೆ ಪಸಿದು ಮಲ್ಮಲ ಮಱುಗುತ್ತಿರ್ದು ರಿಸಿಯರಂ ಕಂಡು ಮುಳಿದು ಮಸಗಿ ಮೇಲ್ವಾಯಲ್ ಪರಿತಪ್ಪುದಂ ಕಂಡು ಸುಕೌಶಲಸ್ವಾಮಿ ಆಹಾರ ಶರೀರಕ್ಕೆ ಯಾವಜ್ಜೀವಂ ನಿವೃತ್ತಿಯೆಂದು ಕಾಯೋತ್ಸರ್ಗಂ ಗೆಯ್ದು

ಗಾಹೆ ॥ ಖಮ್ಮಾಮಿ ಸವ್ವಜೀವಾಣಂ ಸವ್ವೇ ಜೀವಾ ಖಮಂತು ಮೇ
ಮೆತ್ತೀ ಮೇ ಸವ್ವಭೂದೇಸು ವೇರಂ ಮಜ್ಝಣ ಕೇಣ ಚಿ ॥
ಮಜ್ಝಸಹಾವಂ ಣಾಣಂ ದಂಸಣ ಚರಣಾಂ ನ ಕಿಂಪಿ ಆವರಣಂ

ಕೃತಾಂಗ ಮುಂತಾದ ಹನ್ನೆರಡು ಅಂಗಗಳಿಂದಲೂ ಉತ್ಪಾದಪೂರ್ವ ಮುಂತಾದ ಹದಿನಾಲ್ಕು ಬಗೆಯ ಪೂರ್ವಗಳಿಂದಲೂ ಕೂಡಿದ ಆಗಮಗಳೆಲ್ಲವನ್ನೂ ಕಲಿತು ಗುರುಗಳೊಂದಿಗೆ ಗ್ರಾಮ, ನಗರ, ಖೇಡ, ಖರ್ವಡ, ಮಡಂಬ, ಪಟ್ಟಣ, ದ್ರೋಣಾಮುಖಗಳಲ್ಲಿ ಸಂಚರಿಸುತ್ತ ಹಲವು ಕಾಲ ತಪಸ್ಸನ್ನು ಮಾಡಿ, ಮೊಗ್ಗಳಗಿರಿಯೆಂಬ ಪರ್ವತಕ್ಕೆ ಬಂದು ಮಳೆಗಾಲದಲ್ಲಿ ಗುರು ಶಿಷ್ಯರಿಬ್ಬರೂ ಒಂದೇ ಗುಹೆಯಲ್ಲಿ ಯೋಗಸ್ಥರಾದರು. ಇಬ್ಬರೂ ನಾಲ್ಕುತಿಂಗಳ ಕಾಲ ಉಪವಾಸ ಮಾಡಿ ಯೋಗನಿರತರಾದರು. ಚಾತುರ್ಮಾಸದ ಪಾರಣೆಗಾಗಿ ಸುಕೌಶಳಸ್ವಾಮಿಯಾಗಿರುವ ಋಷಿಯು ಗುಹೆಯಿಂದ ಮೊದಲು ಹೊರಟು ದಿಕ್ಕುಗಳ ಕಡೆಗೆ ನೋಡುತ್ತಿದ್ದನು. ಆ ವೇಳೆಗೆ ಅವನ ತಾಯಿಯಾಗಿದ್ದ ಹೆಣ್ಣು ಹುಲಿಯು ಹಲವು ದಿನಸಗಳಿಂದ ಆಹಾರವನ್ನು ಪಡೆಯದೆ ಹಸಿದು ಅತ್ಯಂತ ಸಂತಾಪ ಪಡುತ್ತಿತ್ತು. ಅದು ಋಷಿಗಳನ್ನು ಕಂಡಿತು. ಕೋಪದಿಂದ ಉದ್ರೇಕಗೊಂಡು, ಮೈಮೇಲೆ ಹಾರಲು ಬರುತ್ತಿರುವುದನ್ನು ಸುಕೌಶಳಸ್ವಾಮಿ ಕಂಡು, ಆಹಾರಕ್ಕೂ ಈ ಶರೀರಕ್ಕೂ ಜೀವವಿರುವ ಪರ್ಯಂತ ನಿವೃತ್ತಿಯಾಗಲೆಂದು ದೇಹತ್ಯಾಗ ಮಾಡಲು ನಿಶ್ಚಯಿಸಿದನು—[ಎಲ್ಲ ಜೀವಗಳನ್ನೂ ನಾನು ಕ್ಷಮಿಸುತ್ತೇನೆ ಸಮಸ್ತ ಜೀವಗಳೂ ನನ್ನನ್ನು ಕ್ಷಮಿಸಲಿ. ಎಲ್ಲ ಪ್ರಾಣಿಗಳಲ್ಲಿಯೂ ನನಗೆ ಸ್ನೇಹವಿದೆ. ಎಲ್ಲಿಯೂ ನನಗೆ ದ್ವೇಷವಿಲ್ಲ. ನನ್ನ ಸ್ವಭಾವವು ಸಮ್ಯಕ್‌ಜ್ಞಾನ, ಸಮ್ಯಗ್ದರ್ಶನ, ಸಮ್ಯಕ್‌ಚಾರಿತ್ರ- ಎಂಬವು. ನನಗೆ ಯಾವ ಕರ್ಮಲೇಪವೂ ಇಲ್ಲ. ಯಾವನು ಸಂವೇದನೆಯುಳ್ಳವನೋ ಅವನೇ

ಜೋ ಸಂವೇಯಣ ಗಾಹಿ ಸೋಹಂ ಣಾದಾ ಹವೇ ಆದಾ
ಛಿಜ್ಜಉ ಭಿಜ್ಜಉ ಜಾಉ ಖಉ ಜೋಇಯ ಏಹು ಸರೀರು
ಅಪ್ಪಾ ಭಾವಹಿಣಿಮ್ಮಲ ಉ ಜೇಂ ಪಾವಹಿ ಭವತೀರು ॥

ಎಂದಿಂತು ಕ್ಷಮೆಯುಂ ಭಾವಿಸಿ ಧರ್ಮಧ್ಯಾನ ಶುಕ್ಲಧ್ಯಾನಂಗಳಂ ಧ್ಯಾನಿಸುತಮಿರೆ ಪುಲಿ ಬಂದು ಪಾಯ್ದು ಬಸಿಱಂ ಪೋೞ್ದು ನೆತ್ತರಂ ಕುಡಿದು ತೆಗಲೆಯುಂ ಪೋೞ್ದು ತಿನ್ಬಾಗಳ್ ಸಿದ್ಧಾರ್ಥರಿಸಿಯುಂ ಗುಹೆಯುಂ ಪೊಱಮಟ್ಟು ಬಂದು ಕಂಡು ಹಾ ಪಂಚಮಹಾಪಾತಕಿ ಮಗನನೇಕೆ ಕೊಂದು ತಿಂದೆ ಮುನ್ನೆ ಕುಂಕುಮ ಪಂಕಿತಮಪ್ಪ ದಿಬ್ಯ ದೇಹದೊಳ್ ಬೆಮರ ಬಿಂದುಗಳಂ ಕಂಡು ನೆತ್ತರೆಂದು ಬಗೆದು ಮೂರ್ಛೆಗೆ ಸಲ್ವಾಕೆಯೋ ಈಗಳ್ ಮಗನಂ ಪೋೞ್ದು ತಿಂದಪ್ಪಯ್ ಅಹೋ ಕಷ್ಟಂ ಸಂಸಾರಮೆಂದು ಸಿದ್ಧಾರ್ಥಭಟ್ಟಾರರ್ ನುಡಿವ ವಚನಮಂ ಕೇಳ್ದು ವಕ್ಷಃಸ್ಥಳದ ಶ್ರೀಲಾಂಛನಮಂ ಕಂಡು ಜಾತಿಸ್ಮರೆಯಾಗಿ ಮೂರ್ಛೆಗೆ ಸಂದು ನೀಡಱಿಂದೆೞ್ಚತ್ತು ಹಾ ಪಂಚಮಹಾಪಾತಕಿಯೆನೆನ್ನ ಮಗನಂ ಪೋೞ್ದು ತಿಂದೆನೆಂದು ತನ್ನಂ ತಾಂ ನಿಂದಿಸಿ ತಲೆಯುಂ ಕಾಲ್ಗಳಂ ಪಾಷಾಣವೃಕ್ಷಂಗಳೊಳ್ ಶತಚೂರ್ಣಮಾಗೆ ಬಡಿದುಕೊಂಡು

ನಾನು. ಆತ್ಮನು ಜ್ಞಾತೃ (ತಿಳಿಯುವವನು) ಆಗುತ್ತಾನೆ. ಈ ಶರೀರ ಕತ್ತರಿಸಲ್ಪಡಲಿ, ಭೇದಿಸಲ್ಪಡಲಿ, ಸೀಳಲ್ಪಡಲಿ, ನಾಶವಾಗಲಿ, ಎಲೈ ಯೋಗಿಯೇ, ಯಾವುದರಿಂದ ಸಂಸಾರದ ಆಚೆಯ ದಡವನ್ನು ಪಡೆಯುವೆಯೋ ಆ ನಿರ್ಮಲವಾದ ಆತ್ಮನನ್ನು ಧ್ಯಾನಿಸು.] ಹೀಗೆನ್ನುತ್ತ ಕ್ಷಮೆಯನ್ನೇ ಭಾವಿಸಿಕೊಂಡು ಧರ್ಮಧ್ಯಾನ ಶುಕ್ಲಧ್ಯಾನಗಳನ್ನು ಧ್ಯಾನಿಸುತ್ತಿದ್ದನು. ಆಗ ಹುಲಿ ಬಂದು ಹಾರಿ ಹೊಟ್ಟೆಯನ್ನು ಸೀಳಿತು. ರಕ್ತವನ್ನು ಕುಡಿಯತೊಡಗಿತು. ಎದೆಯನ್ನು ಸೀಳಿ ತಿನ್ನುತ್ತಿರಲು ಸಿದ್ಧಾರ್ಥಮುನಿ ಗುಹೆಯಿಂದ ಹೊರಗೆ ಬಂದು ನೋಡಿ "ಆಹಾ, ಪಂಚಮಹಾಪಾಪ ಮಾಡಿದ ಜಂತುವೇ, ಮಗನನ್ನು ಯಾಕೆ ಕೊಂದು ತಿಂದೆ ? ಹಿಂದೆ ನೀನು ಕುಂಕುಮದ ಕೆಸರಿನಿಂದ ಕೂಡಿದ ದಿವ್ಯವಾದ ಶರೀರದಲ್ಲಿ ಬೆವರಿನ ಹನಿಗಳನ್ನು ಕಂಡಾಗ ರಕ್ತವೆಂದು ಭಾವಿಸಿ ಮೂರ್ಛೆ ಹೋಗುವವಳಾಗಿದ್ದೆ ! ಅಂತಹ ನೀನು ಈಗ ಮಗನನ್ನು ಸೀಳಿ ತಿನ್ನುತ್ತಿರುವೆ ! ಆಹಾ, ಸಂಸಾರವೇ ! ಕಷ್ಟ !" ಎಂದು ಸಿದ್ಧಾರ್ಥಋಷಿಗಳು ಹೇಳುವ ಮಾತನ್ನು ಕೇಳಿ, ಎದೆಯ ಮೇಲಿರುವ ಶ್ರೀ ಲಾಂಛನವನ್ನು ಕಂಡು ಆ ಹೆಣ್ಣುಹುಲಿಗೆ ಪೂರ್ವಜನ್ಮದ ಸ್ಮರಣೆಯುಂಟಾಯಿತು. ಅದು ಕೂಡಲೇ ಮೂರ್ಛೆಹೋಯಿತು. ಹೆಚ್ಚು ಹೊತ್ತಾದ ಮೇಲೆ ಎಚ್ಚತ್ತು "ಆಹಾ, ನಾನು ಪಂಚಮಹಾಪಾತಕಿಯಾಗಿರುತ್ತೇನೆ. ನನ್ನ ಮಗನನ್ನೇ ನಾನು ಸೀಳಿ ತಿಂದುಬಿಟ್ಟೆನು" ಎಂದು ತನ್ನನ್ನು ತಾನು ನಿಂದಿಸಿತು. ಆ ಮೇಲೆ ತನ್ನ ತಲೆಯನ್ನೂ ಕಾಲುಗಳನ್ನೂ ಕಲ್ಲುಗಳಿಗೂ ಮರಗಳಿಗೂ ಬಡಿದು

ಹಾ ಮಗನೆ ಪೊಲ್ಲದಂಗೆಯ್ದೆನೆಂದು ಪ್ರಳಾಪಂಗೆಯ್ದು ಮಹಾಶೋಕಂಗೆಯ್ಯುತ್ತಿರೆ ಭಟ್ಟಾರ
ರದರ್ಕೆ ಧರ್ಮಶ್ರವಣಂಗೆಯ್ದು ಸಂಸಾರಸ್ಥಿತಿಯನಱಿಯೆ ಪೇೞ್ದು ವ್ರತಂಗಳನೇಱಿಸಿದೊ
ಡುಪಶಮಕ್ಕೆ ಸಂದಾಹಾರ ಶರೀರಕ್ಕೆ ಯಾವಜ್ಜೀವಂ ನಿವೃತ್ತಿಗೆಯ್ದು ಶುಭ ಪರಿಣಾಮದೊಳ್
ಕೂಡಿ. ಮುಡಿಪಿ ಸೌಧರ್ಮಕಲ್ಪದೊಳ್ ಪುಟ್ಟಿತ್ತು ಸಿದ್ಧಾರ್ಥ ರಿಸಿಯರುಂ ಸಮ್ಯಗ್ದರ್ಶನಜ್ಞಾನ
ಚಾರಿತ್ರಂಗಳಂ ಸಾಧಿಸಿ ಕರ್ಮಕ್ಷಯಂಗೆಯ್ದು ಮೋಕ್ಷವನೆಯ್ದಿದರ್ ಸುಕೌಶಲಸ್ವಾಮಿಯುಂ
ತಿರಿಕೋಪಸರ್ಗಮಂ ಸೈರಿಸಿ ಸರ್ವಾರ್ಥ ಸಿದ್ಧಿಯೊಳ್ ಸಯುಸತ್ತಮದೇವನಾಗಿ ಪುಟ್ಟಿ
ಮೂವತ್ತುಮೂಱು ಸಾಗರೋಪಮಾಯುಷ್ಯಮನೊಡೆಯನಪ್ಪಹಮಿಂದ್ರನಾದೊನ್ ಎಂಬಿ
ದೆಲ್ಲಮಂ ಯಶೋಧರ ಕೇವಲಿಗಳ್ ಪೇೞೆ ಚಂಪಾಪುರಾಧಿಪತಿಯಪ್ಪ ಗಂಧಭಾಜನನೆಂಬರಸಂ
ಕೇಳ್ದಾದಮಾನುಂ ಸಂತುಷ್ಟ ಚಿತ್ತನಾಗಿ ಭಟಾರರ್ಗೆಱಗಿ ಪೊಡೆಮಟ್ಟು ಸಂಸಾರ ಶರೀರ
ಭೋಗನಿರ್ವೇಗ ಪರಾಯಣನಾಗಿ ಧಾತ್ರಿವಾಹನನೆಂಬ ತನ್ನ ಪಿರಿಯ ಮಗಂಗೆ ರಾಜ್ಯ ಪಟ್ಟಂಗಟ್ಟಿ
ನೂರ್ವರರಸು ಮಕ್ಕಳ್ವೆರಸು ಯಶೋಧರ ಕೇವಲಿಗಳ ಪಕ್ಕದೆ ತಪಂ ಬಟ್ಟಂ ಮತ್ತಪ್ಸರೆಯ
ರ್ಕಳೊಳೋರನ್ನರಪ್ಪರಸಿಯರ್ ನೂರ್ವರುಂ ಯಶೋಧರ ಕೇವಲಿಗಳ್ ಗುರುಗಳಾಗೆ

ನೂರಾರು ಚೂರಾಗುವಂತೆ ಮಾಡಿ, “ಹಾ ಮಗನೇ, ಕೆಟ್ಟುದನ್ನು ಮಾಡಿದೆನು
ಎಂದು ಅಳುತ್ತ, ಮಹಾದುಃಖವನ್ನು ತಾಳಿರಲು, ಸಿದ್ಧಾರ್ಥ ಮುನಿಗಳು ಅದಕ್ಕೆ
ಧರ್ಮವಿಚಾರವನ್ನು ತಿಳಿಸಿ, ಸಂಸಾರದ ಸ್ಥಿತಿಯನ್ನು ತಿಳಿಯುವ ಹಾಗೆ ಹೇಳಿ
ವ್ರತಗಳನ್ನು ಧರಿಸುವಂತೆ ಮಾಡಿದರು. ಆ ಹೆಣ್ಣು ಹುಲಿ ಮನೋನಿಗ್ರಹಕ್ಕೆ ಒಳ
ಗಾಗಿ ಬದುಕಿರುವವರೆಗೂ ಆಹಾರವನ್ನು ನಿವೃತ್ತಿಗೊಳಿಸಿ ಶುಭಕರವಾದ ಪರಿಣಾಮ
ದಲ್ಲಿ ಕೂಡಿ, ಸತ್ತು ಸೌಧರ್ಮವೆಂಬ ಕಲ್ಪದಲ್ಲಿ ಹುಟ್ಟಿತು. ಸಿದ್ಧಾರ್ಥಋಷಿಗಳು
ಸಮ್ಯಗ್ದರ್ಶನ ಸಮ್ಯಗ್ಜ್ಞಾನ ಸಮ್ಯಕ್ಚಾರಿತ್ರ ಎಂಬ ರತ್ನತ್ರಯವನ್ನು ಸಾಧಿಸಿ ಘಾತಿ-
ಅಘಾತಿ ಎಂಬ ಕರ್ಮಗಳನ್ನು ನಾಶಗೊಳಿಸಿ ಮೋಕ್ಷವನ್ನು ಹೊಂದಿದರು. ಸುಕೌಶಳ
ಸ್ವಾಮಿ ತಿರ್ಯಕ್ಕುಗಳಿಂದ ಒದಗುವ ತಪೋವಿಘ್ನಗಳನ್ನು ಸಹಿಸಿಕೊಂಡು ‘ಸರ್ವಾರ್ಥ
ಸಿದ್ಧಿ’ ಎಂಬ ಎಲ್ಲಕ್ಕೂ ಮೇಲಿನದಾದ ಮತ್ತು ಅತ್ಯುತ್ತಮವಾದ ಸ್ಥಾನದಲ್ಲಿ ಸಯು ಸತ್ತ
ಮನೆಂಬ ದೇವನಾಗಿ ಹುಟ್ಟಿ, ಮೂವತ್ತಮೂರು ಸಾಗರೋಪಮವಾದ ಆಯುಷ್ಯವನ್ನುಳ್ಳ
ಅಹಮಿಂದ್ರನಾದನು. ಈ ರೀತಿಯ ಸಂಗತಿಯೆಲ್ಲವನ್ನೂ ಯಶೋಧರ ಕೇವಲಿಗಳು
ಹೇಳಲು, ಚಂಪಾಪುರದ ರಾಜನಾದ ಗಂಧಭಾಜನನು ಕೇಳಿ ಅತ್ಯಂತ ಸಂತೋಷ ಪಟ್ಟ
ಮನಸ್ಸುಳ್ಳವನಾಗಿ ಋಷಿಗಳಿಗೆ ಸಾಷ್ಟಾಂಗ ವಂದನೆ ಮಾಡಿದನು. ಸಂಸಾರ ಶರೀರದ
ಸುಖದಲ್ಲಿ ವೈರಾಗ್ಯತತ್ಪರನಾದನು. ಧಾತ್ರಿವಾಹನನೆಂಬ ತನ್ನ ಹಿರಿಯ ಮಗನಿಗೆ
ರಾಜ್ಯದ ಪಟ್ಟವನ್ನು ಕಟ್ಟಿ, ನೂರು ಮಂದಿ ರಾಜಕುಮಾರರನ್ನೂ ಮಕ್ಕಳನ್ನೂ ಕೂಡಿ
ಕೊಂಡು ಯಶೋಧರನೆಂಬ ತಪಸ್ವಿಗಳ ಬಳಿಯಲ್ಲಿ ತಪಸ್ಸನ್ನು ಕೈಗೊಂಡನು. ಆಮೇಲೆ,
ದೇವಸ್ತ್ರೀಯರಿಗೆ ಸಮಾನರಾದ ನೂರು ಮಂದಿ ರಾಣಿಯರು ಯಶೋಧರ ಕೇವಲಿಗಳನ್ನೇ

ಪದ್ಮಾವತಿ ಕಂತಿಯರ್ ಕಂತಿಯರಾಗೆ ತಪಂ ಬಟ್ಟು ಸಮಾಧಿ ಮರಣದಿಂದಂ ಮುಡಿಪಿ ಸೌಧರ್ಮಂ ಮೊದಲಾಗೊಡೆಯ ದೇವಲೋಕದೊಳ್ ಪುಟ್ಟಿದರಿತ್ತ ಗಂಧಭಾಜನ ಮುನಿಯುಂ ದ್ವಾದಶಾಂಗ ಚತುರ್ದಶ ಪೂರ್ವಮಪ್ಪಾಗಮಮೆಲ್ಲಮಂ ಕಲ್ತು ಪಲಕಾಲಮುಗ್ರೋಗ್ರ ತಪಶ್ಚರಣಂ ಗೆಯ್ದು ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ ವಿಹಾರಿಸುತ್ತಂ ಪೋಗಿ ಪಾಂಡ್ಯವಿಷಯದೊಳ್ ಪಳಿ ಕುಂತಳೆಯೆಂಬ ಪರ್ವತದ ಮೇಗಿರ್ದು ಬಾಹ್ಯಾಭ್ಯಂತರ ಪರಿಗ್ರಹ ಪರಿತ್ಯಾಗ ಪೂರ್ವಕಂ ಕಾಯೋತ್ಸರ್ಗಂಗೆಯ್ದು ಧರ್ಮಧ್ಯಾನ ಶುಕ್ಲಧ್ಯಾನಂಗಳಂ ಧ್ಯಾನಿಸಿ ಕರ್ಮಕ್ಷಯಂಗೆಯ್ದು ಸುರಾಸುರೇಂದ್ರರ್ಕಳಿಂ ಪೂಜೆಯನೆಯ್ದಿ ಮೋಕ್ಷಕ್ಕೆ ಪೋದರ್. ಮತ್ತಾರಾಧಕರಪ್ಪವರ್ಗಳ್ ಸುಕೌಶಲ ಸ್ವಾಮಿಯ ತಿರಿಕೋಪಸರ್ಗಮಂ ಮನದೆ ಬಗೆದು ಪಸಿವುಂ ನೀರಟ್ಕೆ ದಾಹ ವಾತಂ ಸೂಲೆಯೆಂದಿವು ಮೊದಲಾಗೊಡೆಯ ವೇದನೆಗಳಂ ಸೈರಿಸಿ ದರ್ಶನ ಜ್ಞಾನ ಚಾರಿತ್ರಂಗಳಂ ಸಾಧಿಸಿ ಸಮಾಧಿ ಮರಣದಿಂ ಮುಡಿಪಿಯಭ್ಯುದಯ ನಿಃಶ್ರೇಯಸ ಸುಖಂಗಳನೆಯ್ದುಗೆ.

ಗುರುಗಳನ್ನಾಗಿ ಮಾಡಿಕೊಂಡು ಪದ್ಮಾವತಿ ಕಂತಿಯರು ಮಾರ್ಗದರ್ಶನ ಮಾಡುವ ಸನ್ಯಾಸಿನಿಯರಾಗಿರಲು ತಪಸ್ಸನ್ನು ಮಾಡಿ ಸಮಾಧಿಮರಣದಿಂದ ಸತ್ತು ಸೌಧರ್ಮ ಮುಂತಾಗಿ ಇರತಕ್ಕ ದೇವಲೋಕದಲ್ಲಿ ಹುಟ್ಟಿದರು. ಇತ್ತ ಗಂಧಭಾಜನ ಮುನಿ ಹನ್ನೆರಡು ಅಂಗಗಳು ಹದಿನಾಲ್ಕು ಪೂರ್ವಗಳು ಇರತಕ್ಕ ಶಾಸ್ತ್ರಗಳೆಲ್ಲವನ್ನೂ ಕಲಿತು ಹಲವು ಕಾಲ ಅತ್ಯಂತ ಘೋರವಾದ ತಪಸ್ಸನ್ನು ಮಾಡಿ, ಗ್ರಾಮ–ನಗರ–ಖೇಡ–ಖರ್ವಡ–ಮಡಂಬ–ಪಟ್ಟಣ–ದ್ರೋಣಾಮುಖ ಎಂಬ ಭೂಭಾಗಗಳಲ್ಲಿ ಸಂಚರಿಸುತ್ತ ಹೋಗಿ ಪಾಂಡ್ಯದೇಶದಲ್ಲಿ ಪಳಿಕುಂತಳೆ ಎಂಬ ಪರ್ವತದ ಮೇಲೆ ಇದ್ದು ಹೊರಗಿನ ಮತ್ತು ಒಳಗಿನ ಪರಿಗ್ರಹಗಳನ್ನು ತ್ಯಜಿಸಿ, ದೇಹತ್ಯಾಗ ಮಾಡಲು ನಿಶ್ಚಯಿಸಿ, ಧರ್ಮಧ್ಯಾನ ಶುಕ್ಲಧ್ಯಾನಗಳನ್ನು ಧ್ಯಾನಿಸುತ್ತ ಕರ್ಮಗಳನ್ನು ನಾಶಗೊಳಿಸಿ ದೇವತೆಗಳಿಂದಲೂ ದೇವತೆಗಳಲ್ಲದವರಿಂದಲೂ ಪೂಜಿತರಾಗಿ ಮೋಕ್ಷಕ್ಕೆ ತೆರಳಿದರು. ಮತ್ತೇನೆಂದರೆ, ಆರಾಧಕರಾಗಿರುವವರು ಸುಕೌಶಲಸ್ವಾಮಿ ಎಂತಹ ತಿರಿಕೋಪಸರ್ಗವನ್ನು ಸಹಿಸಿದ ನೆಂಬುದನ್ನು ಮನಸ್ಸಿನಲ್ಲಿ ಭಾವಿಸಿ ಹಸಿವು, ಬಾಯಾರಿಕೆ, ಸುಡುವಿಕೆ, ವಾತ, ಶೂಲೆ (ಸಿಡಿತ)—ಎಂದು ಇವೇ ಮೊದಲಾಗಿರುವ ನೋವುಗಳನ್ನು ಸಹಿಸಿ, ಸಮ್ಯಗ್ದರ್ಶನ–ಸಮ್ಯಗ್ಜ್ಞಾನ–ಸಮ್ಯಕ್ಚಾರಿತ್ರ ಎಂಬ ರತ್ನತ್ರಯವನ್ನು ಸಾಧಿಸಿಕೊಂಡು ಸಮಾಧಿಮರಣದಿಂದ ಸತ್ತು, ಅಭ್ಯುದಯ ಸುಖ ಮತ್ತು ಮೋಕ್ಷಸುಖ–ಎಂಬಿವೆರಡನ್ನೂ ಪಡೆಯಲಿ.

# ೩. ಗಜಕುಮಾರನ ಕಥೆ

ಗಜಕುಮಾರನ ಕಥೆಯಂ ಪೇೞ್ವೆಂ :

ಗಾಹೆ ॥ ಭೂಮೀಏ ಸಮಂ ಖೀಲಾಭಾ ಇದ ದೇಹೋವಿ ಅಲ್ಲಚಮ್ಮಂ ವ
ಭಗವಂ ಪಿ ಗಜಕುಮಾರೋ ಪಡಿವಣ್ಣೋ ಉತ್ತಮಂ ಅಟ್ಠಂ ॥

[ಭೂಮೀ ಏ ಸಮಂ– ನೆಲದೊಳೋರಂತಾಗೆ ಮಲರ್ಚಿಕ್ಕಿಯುರದಿಂ ತಗುಳ್ದು ನಾಭಿವರೆಗಂ ಬಸಿಱಿಂ ಪೋೞ್ದು, ಅಲ್ಲಚಮ್ಮಂ– ಪಂದೊವಲುಂ ತೆಗೆದು, ಖೀಲಾಭಾ ಇದ ದೇಹೋವಿ– ಕಾಯ್ದ ಕರ್ಬೊನ್ನ ನಿಡಿಯುವುಂ ತೋರಮುಮಪ್ಪ ಕೀಲ್ಗಳಿಂದಂ ಮೆಯ್ಯೆಲ್ಲಮುಂ ನಿರಂತರ ಮುರ್ಚಿ ಪೋಗಿ ನೆಲನಂ ತಾಪಿನಂ ಕೀಲಿಱಿಯೆ ಪಟ್ಟ ಮೆಯ್ಯನೊಡೆಯನಾಗಿಯುಂ, ಭಗವಂ– ಪಿರಿದಪ್ಪ ಪೆರ್ಮೆಯನೊಡೆಯಂ, ಗಜಕುಮಾರೋಪಿ– ಗಜಕುಮಾರನುಂ, ಪಡಿವಣ್ಣೋ– ಪೊರ್ದಿದೊಂ, ಉತ್ತಮ ಅಟ್ಠಂ– ಮಿಕ್ಕ ದರ್ಶನ ಜ್ಞಾನ ಚಾರಿತ್ರಂಗಳಾರಾಧನೆಯಂ.]

ಅದೆಂತೆಂದೊಡೆ : ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ಸುರಟಮೆಂಬುದು ನಾಡಲ್ಲಿ ದ್ವಾರಾವತಿಯೆಂಬುದು ಪೊೞಲದನಾಳ್ವೊಂ ವಿಷ್ಣು ಅರ್ಧಚಕ್ರಿಯಾತನ ತಂದೆ ವಸುದೇವ ಸ್ವಾಮಿಯೆಂಬೊನಾ ವಸುದೇವಸ್ವಾಮಿಯರಸಿ ಗಾಂಧರ್ವದತ್ತೆಯೆಂಬೊಳಾಯಿರ್ವರ್ಗ್ಗಂ ಗಜ ಕುಮಾರನೆಂಬೊಂ ಮಗನಪ್ಪೊನಂತವರ್ಗಳಿಷ್ಟವಿಷಯ ಕಾಮಭೋಗಂಗಳನನುಭವಿಸುತ್ತಂ ಕಾಲಂ

ಗಜಕುಮಾರನ ಕಥೆಯನ್ನು ಹೇಳುವೆನು :

ನೆಲದಮೇಲೆ ಕ್ರಮವಾಗಿ ಮಗುಚಿ (ಅಂದರೆ, ಹೊಟ್ಟೆ ಮೇಲ್ಗಡೆಯಾಗುವಂತೆ) ಮಲಗಿಸಿ ; ಎದೆಯಿಂದ ಹಿಡಿದು ಹೊಕ್ಕುಳಿನವರೆಗೆ ಹೊಟ್ಟೆಯನ್ನು ಸೀಳಿ, ಹಸಿಯ ಚರ್ಮವನ್ನು ಸುಲಿದುತೆಗೆದು, ಕಾದ ಕಬ್ಬಿಣದ ಉದ್ದವಾದ ಮತ್ತು ದಪ್ಪವಾದ ಮೊಳೆ ಗಳಿಂದ ಶರೀರವೆಲ್ಲವೂ ಸ್ವಲ್ಪವೂ ಬಿಡದೆ ಭೇದಿಸಿ ನೆಲವನ್ನು ತಾಗುವರೀತಿಯಲ್ಲಿ (ಮೊಳೆ) ಹೊಡೆದ ದೇಹವುಳ್ಳವನಾಗಿ, ಹಿರಿದಾದ ಗೌರವವನ್ನುಳ್ಳ ಗಜಕುಮಾರನು ಶ್ರೇಷ್ಠವಾದ ಸಮ್ಯಗ್ದರ್ಶನ, ಸಮ್ಯಕ್‌ಜ್ಞಾನ ಸಮ್ಯಕ್ಚಾರಿತ್ರಗಳುಳ್ಳ ಆರಾಧನೆಯನ್ನು ಪಡೆದನು. ಹೇಗೆಂದರೆ : ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಸುರಟ ಎಂಬ ನಾಡಿದೆ. ಅಲ್ಲಿ ದ್ವಾರಾ ವತಿಯೆಂಬ ಪಟ್ಟಣವಿದೆ. ಅದನ್ನು ಭರತಕ್ಷೇತ್ರದ ಆರು ಖಂಡಗಳಲ್ಲಿ ಮೂರು ಖಂಡಗಳಿಗೆ ಒಡೆಯನಾಗಿ ಅರ್ಧಚಕ್ರಿಯೆನಿಸಿದ ವಿಷ್ಣು ಆಳುತ್ತಿದ್ದನು. ಅವನ ತಂದೆ ವಸುದೇವ ಸ್ವಾಮಿಯೆಂಬವನು. ಆ ವಸುದೇವಸ್ವಾಮಿಯ ಪತ್ನಿ ಗಾಂಧರ್ವದತ್ತೆ ಎಂಬವಳು. ಆ ಇಬ್ಬರಿಗೂ ಗಜಕುಮಾರನೆಂಬವನು ಮಗನಾಗಿದ್ದನು. ಅಂತು ಅವರು ತಮ್ಮ ಪ್ರೀತಿ ವಿಷಯದ ಬಯಕೆಯ ಸುಖಗಳನ್ನು ಅನುಭವಿಸುತ್ತಿದ್ದರು. ಹೀಗೆ ಕಾಲ ಕಳೆಯು

ಸಲೆ ಮತ್ತಿತ್ತಸೂರದತ್ತಮೆಂಬುದು ನಾಡಲ್ಲಿ ಪೌದನಪುರಮೆಂಬುದು ಪೊೞಲದನಾಳ್ವೊ
ನಪರಾಜಿತನೆಂಬೊನರಸನಾದಮಾನುಂ ಪ್ರಚಂಡ ಬಳಗರ್ವಿತನಾರುಮನುೞಿದೊಂ ವಿಷ್ಣುಗಂ
ಬೆಸಕೆಯ್ಯನೊಂದು ದಿವಸಂ ವಿಷ್ಣುಪೊೞಲೊಳ್ ಗೋಸಣೆಯುಂ ತೊೞಲ್ಚಿದನಾವನೊರ್ವಂ
ಪೌದನಪುರಾಧಿಪತಿಯಪ್ಪಪರಾಜಿತನಂ ಸಂಗ್ರಾಮದೊಳ್ ಕಾದಿ ಗೆಲ್ದು ಪಿಡಿಕೊಂಡು ಬರ್ಕು
ಮಾತಂಗೆಯಾತನ ಬೇಡುವುದೆಲ್ಲಮಂ ಕುಡುವೆನೆಂದು ತೊೞಲ್ವ ಗೋಸಣೆಯುಂ ಗಜಕುಮಾರಂ
ಪಿಡಿದೊಡಾ ಮಾತನರಸಂ ಕೇಳ್ದು ಗಜಕುಮಾರನಂ ಕರೆಯಿಸಿಯಾತನೊಡನೆ ಚಾತುರ್ದಂತ
ಬಳಮುಂ ಕೂಡಿಯಟ್ಟಿದೊಡಾತನುಂ ಪೋಗಿಯಪರಾಜಿತನೊಡನೆ ಮಹಾಯುದ್ಧಂಗೆಯ್ದು ಗೆಲ್ದು
ಪೆಡಂಗಯ್ಯುಡಿಯೆ ಕಟ್ಟಿ ಗಜತುರಗ ವಸ್ತುವಾಹನ ಸಹಿತಂ ತಂದು ವಿಷ್ಣುಗೊಪ್ಪಿಸಿದೊಡಾತನು
ಮೊಸೆದು ನೀಂ ಮೆಚ್ಚಿದುದಂ ಬೇಡಿಕೊಳ್ಳೆನೆ ಪೆಱತೇನುಮನೊಲ್ಲೆನ್ ನಿಮ್ಮ ಪ್ರಸಾದದಿಂದೆನ
ಗೆಲ್ಲಮುಂಟು ಒಂದಂ ಬೇೞ್ಪೆಂ ನಿಮ್ಮಂತಃಪುರಮುೞಿಯೆ ಪೊೞಲೊಳಗೆನ್ನ ಮೆಚ್ಚಿದ ಪೆಂಡಿರನೆ
ಕೊಂಡೆನ್ನಿಚ್ಚೆಯೊಳ್ ಮೆಚ್ಚಿದಂತೆ ಬಾೞ್ವೆನೀ ದಾಯಮಂ ಬೇಡಿರ್ದೆನಿದನೆನಗೆ ದಯೆಗೆಯ್ದು
ಸಲಿಸುವುದೆಂದೊಡರಸನುಮಂತೆಗೆಯ್ಯೆಂದು ಗಜಕುಮಾರಂಗೆ ಬೇಡಿದುದಂ ಕೊಟ್ಟಂ ಗಜ

ತ್ತಿತ್ತು. ಇನ್ನೊಂದೆಡೆ ಸೂರದತ್ತ ಎಂಬ ನಾಡಿನಲ್ಲಿ ಪೌದನಪುರ ಎಂಬ ಪಟ್ಟಣವಿತ್ತು.
ಅದನ್ನು ಅಪರಾಜಿತನೆಂಬ ರಾಜನು ಆಳುತ್ತಿದ್ದನು. ಅವನು ಅತಿ ಪ್ರಚಂಡಬಲವುಳ್ಳವ
ನೆಂಬ ಗಮನದಿಂದ ಯಾರನ್ನೂ ಲಕ್ಷ್ಯಮಾಡದಿದ್ದನು. ವಿಷ್ಣುಗೆ ಕೂಡ ಅವನು
ಆಜ್ಞಾಧಾರಕನಾಗದೆ ಇದ್ದನು. ಒಂದು ದಿವಸ ವಿಷ್ಣು ತನ್ನ ಪಟ್ಟಣದಲ್ಲಿ ಹೀಗೆ
ಡಂಗೂರ ಸಾರಿಸಿದನು —ಪೌದನಪುರದ ರಾಜನಾದ ಅಪರಾಜಿತನನ್ನು ಯಾವಾತನು
ಯುದ್ಧದಲ್ಲಿ ಹೋರಾಡಿ ಗೆದ್ದು ಹಿಡಿದುಕೊಂಡು ಬರುವನೋ ಅವನು ಕೇಳಿದ್ದೆಲ್ಲವನ್ನೂ
ಕೊಡುವೆನು." ಈ ರೀತಿ ಸಾರುವ ಡಂಗೂರವನ್ನು ಗಜಕುಮಾರನು ಹಿಡಿದನು. ಈ
ಸುದ್ದಿಯನ್ನು ರಾಜನು ಕೇಳಿ ಗಜಕುಮಾರನನ್ನು ಕರೆಯಿಸಿದನು. ಅವನೊಡನೆ ಚತು
ರಂಗ ಸೈನ್ಯವನ್ನು ಕೂಡಿಸಿ ಕಳುಹಿಸಿದನು. ಗಜಕುಮಾರನು ಹೋಗಿ, ಅಪರಾಜಿತ
ನೊಡನೆ ಮಹಾಯುದ್ಧವನ್ನುಮಾಡಿ ಗೆದ್ದು ಅವನನ್ನುಹಿಡಿದು ಅವನ ಕೈಗಳು ಮುರಿ
ಯುವ ಹಾಗೆ ಹಿಂಗಡೆಗೆ ಕಟ್ಟಿ ಆನೆ ಕುದುರೆ ಒಡವೆ ವಾಹನಗಳ ಸಮೇತನಾಗಿ ತಂದು
ವಿಷ್ಣುಗೆ ಒಪ್ಪಿಸಿದನು. ಆಗ ವಿಷ್ಣು ಪ್ರೀತಿಪಟ್ಟು "ನಿನಗೆ ಇಷ್ಟವಾದುದನ್ನು ಬೇಡಿಕೋ"
ಎಂದನು. ಅದಕ್ಕೆ ಗಜಕುಮಾರನು "ನನಗೆ ಬೇರೆ ಯಾವುದೂ ಬೇಡ. ನಿಮ್ಮ ಅನು
ಗ್ರಹದಿಂದ ಎಲ್ಲವೂ ನನಗಿದೆ. ಒಂದನ್ನು ಕೇಳಿಕೊಳ್ಳುವೆನು; ನಿಮ್ಮ ರಾಣೀವಾಸ
ವೊಂದನ್ನು ಬಿಟ್ಟು ಈ ಪಟ್ಟಣದಲ್ಲಿ ನಾನು ನನಗೆ ಮೆಚ್ಚಿಕೆಯಾದ ಹೆಂಡಿರನ್ನು ಸ್ವೀಕರಿಸಿ
ನನ್ನ ಇಚ್ಛೆಗೆ ಮೆಚ್ಚಿಕೆಯಾದಂತೆ ಬಾಳುವೆನು. ಈ ಬಹುಮಾನವನ್ನು ಬಯಸಿದ್ದೇನೆ.
ಇದನ್ನು ನನಗೆ ದಯಪಾಲಿಸಿಕೊಡಬೇಕು" ಎಂದು ಹೇಳಿದನು. ರಾಜನು "ಹಾಗೆಯೇ
ಮಾಡು" ಎಂದು ಗಜಕುಮಾರನಿಗೆ ಆತನು ಬಯಸಿದುದನ್ನು ಕೊಟ್ಟನು. ಗಜ

ಕುಮಾರನುಂ ತನ್ನ ಬೇಡಿದ ವರಮಂ ಪೆತ್ತು ಪರದರ ಪಾರ್ವರೊಕ್ಕಲಿಗರ ಸಾಮಂತರ ಪೊೞಲೊಳಗುಳ್ಳ ಒಳ್ವೆಂಡಿರೆಲ್ಲರಂ ಕಣ್ಗಂ ಮನಕ್ಕಂ ಮೆಚ್ಚಿದವರೊಳ್ ತನ್ನಿಚ್ಚೆಯಿಂದಂ ಮೋಱೆದು ಮೊಟ್ಟಯಿಸಿಯುಯ್ದು ಬಾೞುತ್ತಿರೆ ಮತ್ತಮಾ ಪೊೞಲೊಳ್ ಪಂಗುಳನೆಂಬ ಸುವರ್ಣಕಾಱನ ಪೆಂಡತಿ ವಸುಂಧರಿಯೆಂಬೊಳತ್ಯಂತ ರೂಪ ಲಾವಣ್ಯ ಸೌಭಾಗ್ಯ ಕಾಂತಿ ಹಾವ ಭಾವ ವಿಲಾಸ ವಿಭ್ರಮಂಗಳನೊಡೆಯೊಳಂ ಕಂಡು ಗಜಕುಮಾರನಾಕೆಗಾಟಿಸಿ ತನ್ನ ಮನೆಯೊಳಿಟ್ಟಾಕೆಗಾಸಕ್ತನಾಗಿ ಬಾೞುತ್ತಿರ್ಕುಮಾ ಪಿರಣಿಗನುಂ ಪೆಂಡತಿಯ ವಿಯೋಗದೊಳ್ ಸಂತಾಪದಿಂದಮಿರುಳುಂ ಪಗಲುಮನವರತಂ ಬೇಯುತ್ತಮಸಮರ್ಥನಪ್ಪುದಱಿಂದಂ ಮನದೊಳ್ ಗಜಕುಮಾರಂಗೆ ಮುಳಿಯುತ್ತಿರ್ಕುಂ ಇಂತು ಪಲಕಾಲಂ ಸಲೆ ಮತ್ತೊಂದು ದಿವಸಮರಿಷ್ಟನೇಮಿ ಭಟ್ಟಾರರ ಸಮವಸರಣಂ ವಿಹಾರಿಸುತ್ತಂ ದ್ವಾರಾವತಿಗೆ ವಂದೊಡೆ ವಿಷ್ಣುವಿನೊಡನೆ ಗಜಕುಮಾರಂ ತ್ರಿಭುವನಪರಮೇಶ್ವರನಲ್ಲಿಗೆ ವೋಗಿ ವಂದಿಸಿ ಪೂಜಿಸಿರ್ದು ಭಟಾರರ್ ಧರ್ಮಮಂ ಪೇೞ್ವಲ್ಲಿ ಯುಗಮ್ಯಾಗಮನಂಗೆಯ್ವೊಡಂ ಪೆಱರ ಸಜ್ಜನಂಗಳೊಳ್ ಬರ್ದೊಡಮೆಯ್ದುವ ದುರ್ಗತಿಗಳೊಳಪ್ಪ ದುಃಖಂಗಳಂ ಪೇೞೆ ಕೇಳ್ದು ನಾನ್ಯಥಾ ಜಿನಭಾಷಿತಮೆಂದು ನಂಬಿ ಭೋಗಂಗಳ್ಗೆ ಪೇಸಿ

ಕುಮಾರನು ತಾನು ಬಯಸಿದ ವರವನ್ನು ಪಡೆದು, ಪಟ್ಟಣದಲ್ಲಿರತಕ್ಕ ವರ್ತಕರು, ಬ್ರಾಹ್ಮಣರು, ಒಕ್ಕಲಿಗರು, ಸಾಮಂತರಾಜರು—ಮುಂತಾದವರ ಒಳ್ಳೆಯ ಹೆಂಡಿರಲ್ಲಿ ತನ್ನ ಕಣ್ಣಿಗೂ ಮನಸ್ಸಿಗೂ ಮೆಚ್ಚಿಕೆಯಾದವರಲ್ಲಿ, ತನ್ನ ಇಚ್ಛೆಯ ಪ್ರಕಾರ ಸಂಬಂಧ ಮಾಡಿಯೂ ಒಟ್ಟುಗೂಡಿಯೂ ಬಾಳುತ್ತಿದ್ದನು. ಮತ್ತೇನೆಂದರೆ, ಆ ಪಟ್ಟಣದಲ್ಲಿ ಪಂಗುಳನೆಂಬ ಅಕ್ಕಸಾಲಿಯಿದ್ದನು. ಅವನ ಹೆಂಡತಿ ವಸುಂಧರಿಯೆಂಬವಳು ಅತಿಶಯವಾದ ರೂಪ–ಲಾವಣ್ಯ–ಸೌಭಾಗ್ಯ–ಕಾಂತಿ–ಹಾವ–ಭಾವ–ವಿಲಾಸ–ವಿಭ್ರಮಗಳಿಂದ ಕೂಡಿದ್ದಳು. ಗಜಕುಮಾರನು ಅವಳನ್ನು ಕಂಡು ಆಕೆಯಲ್ಲಿ ಆಸೆಪಟ್ಟು ತನ್ನ ಮನೆಯಲ್ಲಿ ಅವಳನ್ನು ಇಟ್ಟುಕೊಂಡು ಆಸಕ್ತನಾಗಿ ಬಾಳುತ್ತಿದ್ದನು. ಆ ಅಕ್ಕಸಾಲಿ ತನ್ನ ಹೆಂಡತಿಯ ಅಗಲಿಕೆಯ ದುಃಖದಿಂದ ಇರುಳೂ ಹಗಲೂ ಯಾವಾಗಲೂ ಬೇಯುತ್ತ, ತಾನು ಸಾಮರ್ಥ್ಯವಿಲ್ಲದವನಾದುದರಿಂದ ಮನಸ್ಸಿನಂತೆಯೇ ಗಜಕುಮಾರನ ಮೇಲೆ ಕೋಪಿಸಿಕೊಂಡಿದ್ದನು. ಹೀಗೆ ಹಲವು ಕಾಲ ಕಳೆಯಿತು. ಮತ್ತೊಂದು ದಿನ ಅರಿಷ್ಟನೇಮಿ ತೀರ್ಥಂಕರರ ಧರ್ಮೋಪದೇಶ ಸಭೆ ಸಂಚಾರಮಾಡುತ್ತ ದ್ವಾರಾವತಿಗೆ ಬಂದಿತು. ಗಜಕುಮಾರನು ವಿಷ್ಣುವಿನೊಂದಿಗೆ ಹೋಗಿ ಮೂರುಲೋಕಕ್ಕೂ ಪರಮೇಶ್ವರನೆನಿಸಿದ ಅರ್ಹಂತರನ್ನು ವಂದಿಸಿ ಪೂಜಿಸಿದನು. ಅಲ್ಲಿ ಅರಿಷ್ಟನೇಮಿ ಭಟಾರರು ಧರ್ಮದ ಕುರಿತು ಹೇಳುವಾಗ, ಕೂಡಬಾರದವರಲ್ಲಿ ಕೂಡಿದರೂ ಅನ್ಯರ ಕುಲಾಂಗನೆಯರೊಂದಿಗೆ ಬಾಳುವೆನಡೆಸಿದರೂ ಪಡೆಯುವ ದುರ್ಗತಿಗಳಲ್ಲಿ ಆಗತಕ್ಕ ದುಃಖಗಳನ್ನು ಹೇಳುತ್ತಿದ್ದರು. ಅವನ್ನು ಗಜಕುಮಾರನು ಕೇಳಿ 'ಜಿನೇಶ್ವರನು ಹೇಳಿದ್ದು ಸುಳ್ಳಾಗದು' ಎಂದು ನಂಬಿ, ಭೋಗಗಳಿಗೆ ಹೇಸಿದನು. ಅವನಲ್ಲಿ ವೈರಾಗ್ಯವುಂಟಾಯಿತು. ಎಲ್ಲವನ್ನೂ ಬಿಟ್ಟು

ವೈರಾಗ್ಯಮಾಗಿ ಎಲ್ಲಮಂ ತೊಱೆದರಿಷ್ಟನೇಮಿ ಭಟ್ಟಾರರ ಪಕ್ಕದೆ ತಪಂ ಬಟ್ಟುಗ್ರೋಗ್ರ ತಪಶ್ಚರಣಂ ಗೆಯ್ದು ಪನ್ನೆರಡು ವರ್ಷಂ ಪೋದೊಡೆ ಗ್ರಾಮನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹರಿಸುತ್ತಂ ಮತ್ತಮಾ ದ್ವಾರಾವತಿಗೆ ವಂದು ರೇವತೋದ್ಯಾನವನದೊಳ್ ರಾತ್ರಿ ಪ್ರತಿಮೆಯಿಂದೊಸಂ ಸ್ವಜನ ಪರಿಜನ ಬಂಧುವರ್ಗಮುಂ ಶ್ರಾವಕರ್ಕಳುಂ ಬಂದರ್ಚಿಸಿ ಪೊಡೆವಂಟು ಪೋಪರಂ ಪಂಗುಳನೆಂಬ ಸುವರ್ಣಕಾರಕಂ ಕಂಡು ಬೆಸಗೊಂಡು ಭಟಾರರ ಬರವಂ ಕೇಳ್ದಱಿದು ಪಗೆವನನಿಱಿಯಲ್ಪೆತ್ತೆನೆಂದು ರಾಗಿಸಿ ಪಲವು ಸಿದಿಯುವುಂ ತೋರಮುಮಪ್ಪ ಕರ್ಬೊನ್ನ ಕೀಲ್ಗಳಂ ಕೊಂಡು ಬಂದು ಕ್ಷಮಾಂಗನಾಲಿಂಗಿತನಪ್ಪ ಮಹಾಮುನಿಯುಂ ಮಲರ್ಚಿ ಪಟ್ಟಿರಿಸಿಯುರಃಸ್ಥಲಮುಂ ನಾಭಿವರೆಗಂ ವಿದಾರಿಸಿ ಪಂದೊವಲ್ ಪೊರತಾಪಿನೆಗಂ ಸಮಂತವಯವ ಪ್ರದೇಶಂಗಳೊಳ್ ಕಾಯ್ದು ಕರ್ಬೊನ್ನ ಕೀಲ್ಗಳಂ ನೆಲನಂ ತಾಪಿನಮರ್ಚಿ ಪೋಗಿಱಿದೊಡೆ ಕ್ಷಮೆಯುಂ ಭಾವಿಸಿ ಧರ್ಮಧ್ಯಾನ ಶುಕ್ಲಧ್ಯಾನಂಗಳಂ ಜಾಸಿಸಿ ರತ್ನತ್ರಯಮುಂ ಸಾಧಿಸಿ ಸಮಾಧಿಮರಣದಿಂ ಮುಡಿಪಿ ದೇವಲೋಕಮೆಂಬ ಪ್ರಾಸಾದಕ್ಕೆ ಕಳಸಮಾಗುತ್ತಿರ್ದ ಸರ್ವಾರ್ಥಸಿದ್ಧಿಯೆಂಬ ಸ್ವರ್ಗದೊಳ್ ಮೂವತ್ತುಮೂಱು ಸಾಗರೋಪ

ಅರಿಷ್ಟನೇಮಿ ಸ್ವಾಮಿಗಳ ಬಳಿಯಲ್ಲಿ ತಪವನ್ನು ಕೈಗೊಂಡು ಅತ್ಯಂತ ಉಗ್ರವಾದ ತಪಸ್ಸನ್ನು ಆಚರಿಸಿ, ಹನ್ನೆರಡು ವರ್ಷಗಳಾದನಂತರ ನಗರ–ಖೇಡ–ಖರ್ವಡ–ಮಡಂಬ–ಪಟ್ಟಣ–ದ್ರೋಣಾಮುಖಗಳಲ್ಲಿ ಸಂಚಾರಮಾಡುತ್ತ ಆ ಮೇಲೆ ದ್ವಾರಾವತಿಗೆ ಬಂದನು. ಅಲ್ಲಿ ರೇವತವೆಂಬ ಉದ್ಯಾನವನದಲ್ಲಿ ರಾತ್ರಿಯ ವೇಳೆ ಪ್ರತಿಮೆಯ ರೂಪದಲ್ಲಿ ತಪಸ್ಸಿಗೆ ನಿಂತನು. ಸ್ವಜನರೂ ಪರಿಜನರೂ ಬಂಧುಗಳೂ ಸದ್ಗೃಹಸ್ಥರೂ ಬಂದು ಅವನನ್ನು ಪೂಜಿಸಿ ಸಾಷ್ಟಾಂಗ ವಂದಿಸಿ ಹೋಗುತ್ತಿದ್ದರು. ಅವರನ್ನು ಪಂಗುಳನೆಂಬ ಅಕ್ಕಸಾಲಿ ಕಂಡು ಪ್ರಶ್ನೆಮಾಡಿ ಗಜಕುಮಾರ ಋಷಿಗಳ ಬರುವಿಕೆಯನ್ನು ಕೇಳಿ ತಿಳಿದುಕೊಂಡನು. 'ಶತ್ರುವನ್ನು ಹೊಡೆಯಲು (ಕೊಲ್ಲಲು) ಅವಕಾಶವನ್ನು ಪಡೆದೆನು' ಎಂದು ಅವನು ಸಂತೋಷಪಟ್ಟು ಉದ್ದ ಮತ್ತು ದಪ್ಪವುಳ್ಳ ಕಬ್ಬಿಣದ ಹಲವು ಮೊಳೆಗಳನ್ನು ತಂದು, ಕ್ಷಮಾಗುಣವೆಂಬ ಸ್ತ್ರೀಯಿಂದ ಆಲಿಂಗನಗೊಂಡ ಆ ಮಹರ್ಷಿಯನ್ನು ಮಗುಚಿ (ಎದೆ ಮೇಲಕ್ಕಾಗಿ) ಮಲಗಿಸಿ ಎದೆಯಿಂದ ಹೊಕ್ಕುಳವರೆಗೆ ಸೀಳಿದನು. ಹಸಿಯಾದ ಚರ್ಮದ ಪದರಗಳು ತಾಗುವ ರೀತಿಯಲ್ಲಿ, ಚೆನ್ನಾಗಿ, ಅವಯವಗಳ ಸ್ಥಾನಗಳಲ್ಲಿ ಕಾದ ಕಬ್ಬಿಣದ ಮೊಳೆಗಳನ್ನು—ಅವು ನೆಲಕ್ಕೆ ತಗಲುವ ರೀತಿಯಲ್ಲಿ ಭೇದಿಸುವಂತೆ ಹೊಡೆದನು. ಆಗ ಗಜಕುಮಾರಮುನಿ ಕ್ಷಮೆಯನ್ನೇ ಭಾವಿಸಿಕೊಂಡು ಧರ್ಮಧ್ಯಾನ ಶುಕ್ಲಧ್ಯಾನಗಳನ್ನು ಧ್ಯಾನಿಸುತ್ತ, ರತ್ನತ್ರಯವನ್ನು ಸಾಧಿಸಿ ಸಮಾಧಿಮರಣದಿಂದ ಸತ್ತು ದೇವಲೋಕವೆಂಬ ಸೌಧಕ್ಕೆ ಕಲಶದಂತಿರುವ ಸರ್ವಾರ್ಥ ಸಿದ್ಧಿಯೆಂಬ ಸ್ವರ್ಗದಲ್ಲಿ ಮೂವತ್ತಮೂರು ಸಾಗರದಷ್ಟು ಆಯುಷ್ಯಸ್ಥಿತಿಯುಳ್ಳ ಒಂದೇಮೊಳ ಅಳತೆಯುಳ್ಳ,

ಮಾಯುಃಸ್ಥಿತಿಯನೊಡೆಯನೇಕಹಸ್ತ ಪ್ರಮಾಣನುಂ ಪುಂಡರೀಕ ವರ್ಣಂಗಳನೊಡೆಯೊನಹ ಮಿಂದ್ರ ದೇವನಾಗಿ ಪುಟ್ಟಿದೊಂ ಮತ್ತಂ ಪೆಜಿರುಮಾರಾಧಕರಪ್ಪವರ್ಗಳ್ ಗಜಕುಮಾರನ ಮನುಷ್ಯೋಪಸರ್ಗದೊಳಾದ ವೇದನೆಯುಂ ಮನದೊಳ್ ಭಾವಿಸುತ್ತಂ ಪಸಿವು ನೀರಟ್ಟೆ ದಾಹ ವಾತಂ ಸೂಲೆ ಮೊದಲಾಗೊಡೆಯು ವೇದನೆಗಳಂ ಸೈರಿಸಿ ದರ್ಶನ ಜ್ಞಾನ ಚಾರಿತ್ರಂಗಳಂ ಸಾಧಿಸಿ ಸಮಾಧಿಮರಣದಿಂದಂ ಮುಡಿಪಿ ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

ಬಿಳಿಯ ತಾವರೆಯ ಬಣ್ಣವುಳ್ಳ ಅಹಮಿಂದ್ರ ದೇವನಾಗಿ ಹುಟ್ಟಿದನು. ಮತ್ತು, ಬೇರೆ ಆರಾಧಕರು—ಗಜಕುಮಾರನಿಗೆ ಮನುಷ್ಯ-ಉಪಸರ್ಗದಿಂದ ಆದ ನೋವನ್ನು ಮನಸ್ಸಿನಲ್ಲಿ ಭಾವಿಸುತ್ತ, ಹಸಿವು-ಬಾಯಾರಿಕೆ-ಸುಡುವಿಕೆ-ವಾತ-ಸಿಡಿತ-ಮುಂತಾಗಿರುವ ನೋವುಗಳನ್ನು ಸಹಿಸಿ, ರತ್ನತ್ರಯವನ್ನು ಸಾಧಿಸಿ, ಸಮಾಧಿ ಮರಣದಿಂದ ಸತ್ತು, ಸ್ವರ್ಗ-ಮೋಕ್ಷ ಸುಖಗಳನ್ನು ಪಡೆಯಲಿ!

# ೪. ಸನತ್ಕುಮಾರ ಚಕ್ರವರ್ತಿಯ ಕಥೆ

ಸನತ್ಕುಮಾರ ಚಕ್ರವರ್ತಿಯ ಕಥೆಯಂ ಪೇೞ್ವೆಂ :

ಗಾಹೆ॥ ಕಚ್ಚು ಜರಖಾಸ ಸೋಸೋ ಭತ್ತಚ್ಛದಿ ಅಚ್ಛಿ ಕುಚ್ಛಿ ದುಕ್ಖಾಣಿ
ಅಧಿಯಾಸಿ ವಾಣಿ ಸಮ್ಮಂ ಸಣಂಕುಮಾರೇಣ ವಾಸಸದಂ

[ಕಚ್ಚು-ಕಿರಕುಂ, ಜರ-ನರೆಯುಂ, ಖಾಸ-ಕೆಮ್ಮುಂ, ಸೋಸೋ-ಬಾಯ್ ಬತ್ತುವುದುಂ, ಭತ್ತಚ್ಛದಿ-ಛರ್ದಿಯುಂ, ಅಚ್ಛಿಕುಚ್ಛಿ ದುಕ್ಖಾಣಿ-ಕಣ್ಣ ಬಸಿಱ ಬೇನೆಗಳುಮೆಂದಿವು ಮೊದಲಾಗೊಡೆಯು. ಅಧಿಯಾಸಿದಾಣಿ-ಸೈರಿಸಪಟ್ಟುವು. ಸಮ್ಮಂ-ಒಳ್ಳಿತ್ತಾಗಿ ಸಣಂಕುಮಾರೇಣ-ಸನತ್ಕುಮಾರ ಚಕ್ರವರ್ತಿ ರಿಸಿಯಿಂದಂ. ವಾಸಸದಂ-ನೂಱುವರುಷಂ]

ಅದೆಂತೆಂದೊಡೆ: ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ಕುರುಜಾಂಗಣಮೆಂಬುದು ನಾಡಲ್ಲಿ ಹಸ್ತಿನಾಪುರಮೆಂಬುದು ಪೊಲದನಾಳ್ವೊಂ ವಿಶ್ವಸೇನ ಮಹಾರಾಜನೆಂಬರಸನಾತನ ಮಹಾದೇವಿ ಸಹ ದೇವಿಯೆಂಬೊಳಾಯಿರ್ವರ್ಗ್ಗಂ ಸನತ್ಕುಮಾರನೆಂಬೊಂ ಪುಟ್ಟಿದೊನಾತಂ ಸರ್ವಲಕ್ಷಣ ಸಂಪೂರ್ಣಂ ಸಕಳಕಳಾಪಾರಗಂ ಚೆಲ್ವಿನಿಂ ದೇವಾಸುರರ್ಕ್ಕಳಂ ಗೆಲ್ವ ರೂಪನೊಡೆಯನಾತಂಗೆ ಕೆಳೆಯುಂ ಸಿಂಹವಿಕ್ರಮನೆಂಬ ಸಾಮಂತನ ಮಗಂ ಮಹೇಂದ್ರಸಿಂಹನೆಂಬೊನಂತವರ್ಗ್ಗನ್ಯೋನ್ಯ ಪ್ರೀತಿಯಿಂದಂ ಕಾಲಂ ಸಲೆ ಮತ್ತೊಂದು ದಿವಸಂ ಏಕಚಕ್ರಪುರಾಧೀಶಂ ಭೂರಾಮನಾಮ

ಸನತ್ಕುಮಾರ ಚಕ್ರವರ್ತಿ ಕಥೆಯನ್ನು ಹೇಳುವೆನು : [ಸನತ್ಕುಮಾರ ಚಕ್ರವರ್ತಿ ಋಷಿಯು ತುರಿ (ಚರ್ಮರೋಗ), ನರೆ, ಕೆಮ್ಮು, ಬಾಯಾರಿಕೆ, ಭೇದಿ, ಕಣ್ಣನೋವು, ಹೊಟ್ಟೆನೋವು-ಎಂದು ಇವೇ ಮೊದಲಾಗಿ ಉಳ್ಳವನ್ನು ನೂರುವರ್ಷ ಚೆನ್ನಾಗಿ ಸೈರಿಸಿಕೊಂಡನು]. ಅದು ಹೇಗೆಂದರೆ : ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಕುರುಜಾಂಗಣ ಎಂಬ ಒಂದು ನಾಡಿದೆ. ಅಲ್ಲಿ ಹಸ್ತಿನಾಪುರ ಎಂಬ ಪಟ್ಟಣವಿದೆ. ಅದನ್ನು ವಿಶ್ವಸೇನ ಮಹಾರಾಜ ಎಂಬ ಅರಸನು ಆಳುತ್ತಿದ್ದನು. ಅವನ ಪಟ್ಟದ ರಾಣಿ ಸಹದೇವಿ ಯೆಂಬವಳು. ಆ ದಂಪತಿಗಳಿಗೆ ಸನತ್ಕುಮಾರನೆಂಬ ಮಗನು ಹುಟ್ಟಿದನು. ಅವನು ಎಲ್ಲ ಲಕ್ಷಣಗಳಿಂದ ತುಂಬಿದವನು, ಎಲ್ಲ ಕಲೆಗಳನ್ನೂ ಪೂರ್ಣವಾಗಿ ತಿಳಿದವನು. ದೇವತೆಗಳನ್ನೂ ದೇವತೆಗಳಲ್ಲದವರನ್ನೂ ಸೊಬಗಿನಿಂದ ಗೆಲ್ಲುವ ರೂಪವುಳ್ಳವನು. ಅವನಿಗೆ ಸಿಂಹವಿಕ್ರಮನೆಂಬ ಸಾಮಂತನ ಮಗನಾದ ಮಹೇಂದ್ರಸಿಂಹನೆಂಬವನು ಸ್ನೇಹಿತನಾಗಿದ್ದನು. ಅಂತು ಅವರಿಬ್ಬರು ಪರಸ್ಪರವಾಗಿ ಪ್ರೀತಿಯಿಂದಿದ್ದು ಹೀಗೆಯೇ ಕಾಲ ಕಳೆಯುತ್ತಿತ್ತು. ಆ ಮೇಲೆ ಒಂದು ದಿವಸ ಏಕಚಕ್ರವೆಂಬ ಪಟ್ಟಣದ ಒಡೆಯನೂ

ಧೇಯನಪ್ಪ ಶತ್ರುಂದಮಂ ವಿಶ್ವಸೇನ ಮಹಾರಾಜಂಗೆ ಪಾಗುಡಮನಟ್ಟೆ ಪಟ್ಟವಾರಮುರಗ ಮೆಂಬ ದುಷ್ಟಾಶ್ವಮಂ ಕುಮಾರನೇಱಿ ಲಕ್ಷ್ಮೀಗೃಹಮೆಂಬುದ್ಯಾನವನದ ಮಧ್ಯಸ್ಥಮಪ್ಪ ಸ್ಥಲದೊಳ್ ಸಲ್ವನಾ ದುಷ್ಟಾಶ್ವಮಂ ಕೊಸೆಗೊಳೆ ಗಾಳಿಯಿಂದಂ ಬೇಗವಾಗಿ ವಾರಿತಪೂರಿತಂ ಪರಿದು ಕುಮಾರನಂ ಕೊಂಡು ಮಹಾಟವಿಯುಂ ಪೊಕ್ಕೊಡಿತ್ತ ವಿಶ್ವಸೇನ ಮಹಾರಾಜನ ಮಹಾ ಸಾಮಂತರ್ಕಳುಂ ಪರಿವಾರಮುಮೆಲ್ಲಂ ಕುದುರೆವಡಿವಜ್ಜೆಯುಂ ನೋಡಿ ನಾಡೆಗೆಂಟುವೋಗಿ ಮೂಱನೆಯ ದಿವಸದಂದು ಅಡಿವಜ್ಜೆ ಕೆಟ್ಟೊಡೆ ಪೋದ ದೆಸೆಯನಱಿಯದೆ ಹಾ ಪುತ್ರಾ ಎಂದು ಮಹಾ ದುಃಖಾಕ್ರಾಂತನಾಗಿ ಪ್ರಲಾಪಂಗೆಯ್ವ ನೃಪತಿಯಂ ಮಹೇಂದ್ರಸಿಂಹಂ ಸಂತಯಿಸಿ ಇಂತೆಂದು ನುಡಿದಂ ಕುಮಾರನಂ ಪಾತಾಳಮಂ ಪೊಕ್ಕನಪ್ಪೊಡಮಱಿಸಿಕೊಂಡು ಬರ್ಪೆಂ ನಿಮ್ಮಡಿ ನೀಮುಬ್ಬೆಗಂ ಬಡದೆ ಮಗುೞಿಮೆಂದರಸನಂ ಮಗುೞ್ಚಿ ಪರಿವಾರಂ ಬೆರಸು ಮಹಾಟವಿಯುಂ ಪೊಕ್ಕು ತೊೞಲ್ದು ನೋೞ್ಪಿನಂ ಪರಿಜನಂಗಳ್ ಕುಮಾರನನಱಿಸಿ ಕಾಣದೆ ಬೇಸತ್ತು ಮಹೇಂದ್ರಸಿಂಹನಂ ಬಿಸುಟು ಪೊೞಲ್ಗೆವೋದರ್ ಇತ್ತ ಮಹೇಂದ್ರಸಿಂಹನೊರ್ವನೆ ನಾನಾವಿಧ ಗಿರಿಗಹನ ವಿಷಯ ವಿಷಮ ಪ್ರದೇಶಂಗಳುಮಂ ವ್ಯಾಧನಿವಾಸಂಗಳುಮಂ ಯಥಾ

ಶತ್ರುಗಳನ್ನು ದಮನ ಮಾಡತಕ್ಕವನೂ ಆದ ಭೂರಾಮನೆಂಬ ಹೆಸರುಳ್ಳ ರಾಜನು ವಿಶ್ವಸೇನ ಮಹಾರಾಜನಿಗೆ ಪಟ್ಟವಾರಮುರಗ ಎಂಬ ಕೆಟ್ಟ ಕುದುರೆಯನ್ನು ಕಾಣಿಕೆಯಾಗಿ ಕಳುಹಿಸಿಕೊಟ್ಟನು. ಆ ಕುದುರೆಯನ್ನು ಸನತ್ಕುಮಾರನು ಲಕ್ಷ್ಮೀಗೃಹವೆಂಬ ಉದ್ಯಾನದ ಮಧ್ಯಸ್ಥಳದಲ್ಲಿ ಏರಿದಾಗ ಅದು ವಾರಿತ-ಪೂರಿತ ಎಂಬ ಅಶ್ವಗತಿಗಳಲ್ಲಿ ಓಡಿತು. ಸನತ್ಕುಮಾರನನ್ನು ಏರಿಸಿಕೊಂಡು ದೊಡ್ಡ ಕಾಡಿನೊಳಗೆ ಹೊಕ್ಕಿತು. ಇತ್ತ ವಿಶ್ವಸೇನ ಮಹಾರಾಜನ ದೊಡ್ಡ ಸಾಮಂತರೂ ಪರಿವಾರವೂ ಎಲ್ಲರೂ ಕುದುರೆಯ ಕಾಲಿನ ಹೆಜ್ಜೆಯನ್ನು ನೋಡಿಕೊಳ್ಳುತ್ತ ಬಹಳ ದೂರದವರೆಗೆ ಹೋದರು. ಮೂರನೆಯ ದಿವಸದಂದು ಕುದುರೆಯ ಅಡಿ ಹೆಜ್ಜೆಯ ಗುರುತೂ ಸಿಕ್ಕದಾಯಿತು. ಆಗ ವಿಶ್ವಸೇನ ರಾಜನು ತನ್ನ ಮಗನು ಹೋದ ದಿಕ್ಕನ್ನು ತಿಳಿಯದೆ "ಹಾ ಮಗನೇ !" ಎಂದು ಬಹಳ ವ್ಯಸನದಿಂದ ಗೋಳಾಡಿದನು. ಅವನನ್ನು ಮಹೇಂದ್ರಸಿಂಹನು ಸಮಾಧಾನಪಡಿಸಿ, ಹೀಗೆ ಹೇಳಿದನು. "ಎಲೈ ಪ್ರಭುವೇ, ಸನತ್ಕುಮಾರನು ಪಾತಾಳವನ್ನು ಹೊಕ್ಕಿದ್ದರೆ ಕೂಡಾ ಅವನನ್ನು ಹುಡುಕಿ ಕರೆದುಕೊಂಡು ಬರುವೆನು. ನೀವು ವ್ಯಸನವನ್ನು ತಾಳದಿರಿ. ಹಿಂದಕ್ಕೆ ತೆರಳಿರಿ"–ಎಂದು ರಾಜನನ್ನು ಹಿಂದಿರುಗಿಸಿದನು. ಆ ಮೇಲೆ ಮಹೇಂದ್ರಸಿಂಹನು ಪರಿವಾರವನ್ನು ಕೂಡಿಕೊಂಡು ದೊಡ್ಡ ಕಾಡನ್ನು ಹೊಕ್ಕು ಸುತ್ತಾಡಿ ನೋಡುತ್ತಿರಲು, ಪರಿಜನರು ಕುಮಾರನನ್ನು ಹುಡುಕಿ ಕಾಣದೆ, ಬೇಸರಗೊಂಡು ಮಹೇಂದ್ರಸಿಂಹನನ್ನು ಬಿಟ್ಟು ಪಟ್ಟಣಕ್ಕೆ ಹೋದರು. ಇತ್ತ ಮಹೇಂದ್ರಸಿಂಹನೊಬ್ಬನೆ ಹಲವಾರು ಬೆಟ್ಟ, ಕಾಡುಗಳನ್ನೂ ಕಠಿನಕರವಾದ ಪ್ರದೇಶಗಳನ್ನೂ ಬೇಡರ

ಕ್ರಮದಿಂದಂ ಕಳಿದು ಪೋಗಿ ಪ್ರಿಯಂಗುಷಂಡವೆಂಬ ವನಮನೆಯ್ದಿ ತದ್ವನಮಧ್ಯಸ್ಥ ಗೃಹ
ದೊಳಿರುತಿರ್ದ್ದು ಮಿತ್ರನ ವಿಯೋಗದೊಳಪ್ಪ ದುಃಖದಿಂದಂ ಕಾರುಣ್ಯಮಾಗೆ ಪ್ರಳಾಪಂ
ಗೆಯ್ದುತ್ತು ದೇವತೆಯ ಮುಂದೆ ನಿದ್ರೆಗೆಯ್ದೊಂ ಮನೋಹರಿಯೆಂಬ ಜಾವದಾಗಳ್ ಕರಿಣೀ
ಶತಂಗಳಿಂ ಪರಿವೇಷ್ಟಿತನಾಗಿ ತಿಳಿನೀರ ಕೊಳದೊಳಗೆ ಕ್ರೀಡಿಸುವ ಸೊರ್ಕಾನೆಯುಮಂ ಫಲ
ಭರಿತಮಾದ ಮಾವಿನ ಮರನುಮಂ ಕನಸಿನೊಳ್ ಕಂಡು ಮನೋರಥಸಿದ್ಧಿಯಾಯ್ತೆಂದು
ಒಸೆದು ಮಗುಳ್ದು ನಿದ್ರಾವಶಗತನಾದೊನಂ ಕಂಡು ಕರುಣಿಸಿ ಭೂತಾಂಬರನೆಂಬ ವ್ಯಂತರದೇವ
ನೆತ್ತಿಕೊಂಡು ಪೋಗಿ ವಿಜಯಾರ್ಧಪರ್ವತಕ್ಕಾಸನ್ನಮಪ್ಪ ಭೂತರಮಣವೆಂಬ ವನದ ನಡುವಿ
ನೊಳಿರ್ದ್ದ ಕ್ಷುಲ್ಲಕಮಾನಸವೆಂಬ ಸರೋವರದ ತಡಿಯೊಳಿಕ್ಕಿ ಪೋದನ್ ಆಗಳಾತನುಂ ನೇಸ
ರ್ಮೂಡುವಾಗಳ್ ತೊಂಕಡುಗೆಟ್ಟು ದೆಸೆಗಳಂ ನೋೞ್ಪಂ ಸಮುದ್ರದೊಳೋರಂತಪ್ಪ ಕೋಕನದ
ಕುಮುದ ಕುವಲಯ ಕಲ್ಹಾರೇಂದೀವರಾದಿಗಳಿಂದಂ ಹಂಸ ಚಕ್ರವಾಕ ಬಳಾಕ ವಿಪಕ್ಷಿಗಣಂಗಳ್
ನೀರೊಳಗಾಡುತ್ತುಂ ಮುಳುಗುತ್ತುಂ ನಾನಾಪ್ರಕಾರದಿಂದಂ ಮಾಱುಲಿವ ದನಿಗಳಿಂದಮತಿ
ರಮಣೀಯಮಪ್ಪ ಕೊಳನಂ ಕಂಡಾದಮಾನುಂ ವಿಸ್ಮಯಚಿತ್ತನಾಗಿ ಆ ಭೂತರಮಣವೆಂಬ

ವಾಸಸ್ಥಾನಗಳನ್ನೂ ಯಥಾರೀತಿಯಿಂದ ದಾಟಿ ಹೋಗಿ 'ಪ್ರಿಯಂಗು ಷಂಡ' ಎಂಬ
ಕಾಡಿಗೆ ಹೋದನು. ಆ ಕಾಡಿನ ನಡುವೆ ಇದ್ದ ದೇವಾಲಯದಲ್ಲಿದ್ದು, ತನ್ನ ಗೆಳೆಯನ
ಅಗಲಿಕೆಯಿಂದುಂಟಾದ ವ್ಯಸನದಿಂದ ದೇವತೆಯ ಮುಂದೆ ಪ್ರಲಾಪಿಸುತ್ತ, ಅತ್ತು ನಿದ್ದೆ
ಮಾಡಿದನು. ಸೊಗಸಾದ ಬೆಳಗಿನ ಜಾವದ ವೇಳೆಗೆ ಒಂದು ಕನಸನ್ನು ಕಂಡನು.
ಅದರಲ್ಲಿ ನೂರಾರು ಹೆಣ್ಣಾನೆಗಳಿಂದ ಆವರಿಸಿಕೊಂಡು ತಿಳಿಯಾದ ನೀರಿನ ಕೊಳದಲ್ಲಿ
ಆಡುವ ಮದ್ದಾನೆಯನ್ನೂ ಹಣ್ಣಿನಿಂದ ತುಂಬಿದ ಮಾವಿನ ಮರವನ್ನೂ ಕಂಡು ಇಷ್ಟಾರ್ಥ
ಕೈಗೂಡಿತೆಂದು ಸಂತೋಷಪಟ್ಟು ಪುನಃ ನಿದ್ದೆಮಾಡಿದನು. ಅವನನ್ನು ಭೂತಾಂಬರ
ನೆಂಬ ಪಿಶಾಚದೇವನು ಕಂಡು ದಯೆಗೊಂಡು, ಎತ್ತಿಕೊಂಡು ಒಯ್ದು ವಿಜಯಾರ್ಧ
ಪರ್ವತಕ್ಕೆ ಸಮೀಪದಲ್ಲಿರುವ 'ಭೂತರಮಣ' ಎಂಬ ಕಾಡಿನ ನಡುವಿನಲ್ಲಿದ್ದ ಕ್ಷುಲ್ಲಕ
ಮಾನಸವೆಂಬ ಸರೋವರದ ತೀರದಲ್ಲಿ ಬಿಟ್ಟು ತೆರಳಿದನು. ಮಹೇಂದ್ರಸಿಂಹನಿಗೆ
ಸೂರ್ಯೋದಯವಾಗುವ ವೇಳೆಗೆ ನಿದ್ದೆ ಬಿಟ್ಟಿತು. ದಿಕ್ಕುಗಳ ಕಡೆಗೆ ನೋಡಿದನು.
ಆಗ ಸಮುದ್ರದ ಹಾಗೆಯೇ ಇರತಕ್ಕ ಒಂದು ಕೊಳವನ್ನು ಕಂಡನು. ಅದು ತಾವರೆ,
ಕುಮುದ, ಕುವಲಯ, ಕನ್ನೈದಿಲೆ, ನೀಲೋತ್ಪಲ ಮುಂತಾದ ಹೂವುಗಳಿಂದ
ಕೂಡಿಯೂ ಹಂಸ, ಚಕ್ರವಾಕ, ಕೊಕ್ಕರೆ ಮುಂತಾದ ವಿಶೇಷ ರೀತಿಯ ಹಕ್ಕಿ ಬಳಗಗಳು
ನೀರಿನಲ್ಲಿ ಆಡುತ್ತ ಮುಳುಗುತ್ತ ಹಲವಾರು ರೀತಿಯಲ್ಲಿ ಪ್ರತಿಶಬ್ದಗಳನ್ನು ಮಾಡತಕ್ಕ
ಧ್ವನಿಗಳಿಂದ ಕೂಡಿಯೂ ಬಹಳ ಮನೋಹರವಾಗಿದ್ದಿತು. ಮಹೇಂದ್ರಸಿಂಹನು ಆ ಕೊಳ
ವನ್ನು ಕಂಡು ಮನಸ್ಸಿನಲ್ಲಿ ಬಹಳ ಆಶ್ಚರ್ಯಪಟ್ಟನು. ಆ ಭೂತರಮಣವೆಂಬ ಕಾಡಿನಲ್ಲಿ

ವನದೊಳಶೋಕ ಪುನ್ನಾಗ ವಕುಲ ಚಂಪಕ ಸಹಕಾರ ಲವಂಗ ಕ್ರಮುಕ ನಾಳಿಕೇರ ನಾಗವಲ್ಲೀ ಪಿನದ್ಧ ದ್ರುಮಷಂಡ ಮಂಡಿತಮನಿಂದ್ರವನದೋಳೋರಂತಪ್ಪುದಂ ನೋಡುತ್ತುಂ ತೊಟಲ್ವೊಂ ತನಗನುಕೂಲಮಪ್ಪ ಶಕುನನಿಮಿತ್ತಂಗಳುಮಂ ಕಂಡಿಂದವೋಘಮೆನ್ನ ಸ್ವಾಮಿಯುಂ ಕಾಣ್ಬೆ ನೆಂದು ಸಂತುಷ್ಟಚಿತ್ತನಾಗಿಯಾ ಬನದ ನಡುವೆ ತೊಟಲ್ವೊಂ ಮೃದು ಮಧುರ ಗಂಭೀರ ಧ್ವನಿ ಯೊಳ್ ಕೂಡಿದ ಮೃದಂಗ ವಂಶ ತಾಳಾದಿಗಳ ಧ್ವನಿಗಳುಮಂ ಮಂದ್ರ ತಾರ ಲಯಾನ್ವಿತ ಮಾಗೆ ಕಿವಿಗಂ ಮನಕ್ಕಂ ಸೊಗಯಿಸುವಂತಪ್ಪ ಪಾಟಮುಮಂ ಕೇಳ್ದು ಹರಿಚಂದನ ಕಾಳಾಗರು ಮಲಯಜ ತುರುಷ್ಕಾದಿಗಳ ಕಂಪು ಬಂದು ತೀಡಿದೊಡಿದು ದೇವನಿವಾಸಮಕ್ಕುಮೆಂದು ಬಗೆದು ಭಯಾಶ್ಚರ್ಯದಿಂದಂ ವ್ಯಾಕುಳಿತಮನದೊನಾಗಿ ಇನ್ನಿದನವೋಘಂ ನೋೞ್ಪೆನೆಂದಾ ದೆಸೆಗಾಗಿ ಸಲ್ವೊನ್ ಕನತ್ಕನಕ ವಿನಿರ್ಮಿತಮುಂ ನಾನಾ ಮಣಿಗಣ ಪಿನದ್ಧಮುಂ ಚಳತ್‌ಕೇತುಪತಾಕಾ ಢ್ಯಮುಂ ವಿದ್ಯಾಧರಯುವತೀಜನ ಕ್ರೀಡನಾರ್ಥಮಪ್ಪ ಪ್ರಾಸಾದಮುಂ ಕಂಡು ವಿಸ್ಮಯಚಿತ್ತನಾಗಿ ಯದಱ ಸಮೀಪಕ್ಕೆ ಸಾರ್ದೊಂದು ಮರನಂ ಮಱೆಗೊಂಡು ನೋೞ್ಪೊಂ ತತ್ಪುರಃಸ್ಥಿತ ಮಪ್ಪ ಮಣಿಮಂಟಪದೊಳ್ ದಿವ್ಯಸ್ತ್ರೀಜನಂಗಳ್ ವಿಲಾಸದಿಂ ಚಾಮರಮಿಕ್ಕೆ ದಿವ್ಯಶಯ್ಯಾ

ಅಶೋಕ, ಪುನ್ನಾಗ, ಬಕುಳ (ರೆಂಜಿ), ಸಂಪಗೆ, ಮಾವು, ಲವಂಗ, ಅಡಕೆ ಮರ, ತೆಂಗಿನ ಮರ, ವೀಳ್ಯದೆಲೆ ಬಳ್ಳಿಗಳಿಂದ ಕೂಡಿದ ಮರಗಳ ಸಮೂಹದಿಂದ ಅಲಂಕೃತ ವಾಗಿದ್ದು ದೇವೇಂದ್ರನ ನಂದನವನದಂತಿದ್ದ ಆ ಕಾಡನ್ನು ನೋಡುತ್ತ ಸುತ್ತಾಡು ತ್ತಿದ್ದನು. ತನಗೆ ಅನುಕೂಲವಾದ ಶಕುನಗಳನ್ನು ಕಂಡು, 'ಇಂದು ನಿಶ್ಚಯವಾಗಿಯೂ ನನ್ನ ಪ್ರಭುವನ್ನು ಕಾಣುವೆನು' ಎಂದುಕೊಂಡು ಮಹೇಂದ್ರಸಿಂಹನು ಮನಸ್ಸಿನಲ್ಲಿ ಸಂತೋಷಗೊಂಡು ಆ ಕಾಡಿನ ನಡುವೆ ಸಂಚರಿಸುತ್ತಿದ್ದನು. ಆಗ ಅವನು ಮೃದುವೂ ಮಧುರವೂ ಉದಾತ್ತವೂ ಆದ ನಾದದಿಂದ ಕೂಡಿದ ಮೃದಂಗ, ಕೊಳಲು, ತಾಳಾದಿಗಳ ಧ್ವನಿಗಳನ್ನೂ ಮಂದ್ರ–ತಾರ ಸ್ವರಗಳಿಂದ ಲಯಬದ್ಧವಾಗಿ ಕಿವಿಗೂ ಮನಸ್ಸಿಗೂ ಸುಖವನ್ನುಂಟುಮಾಡುವ ಹಾಡನ್ನೂ ಕೇಳಿದನು. ಶ್ರೀಗಂಧ, ಕಪ್ಪುಅಗರು, ಗಂಧ, ಲೋಬಾನ ಮುಂತಾದುವುಗಳ ಸುವಾಸನೆ ಬಂದು ಅವನನ್ನು ಸೋಕಿತು. ಆಗ ಇದು ದೇವಾಲಯವಾಗಿರಬೇಕೆಂದು ಭಾವಿಸಿದನು. ಭಯದಿಂದಲೂ ಆಶ್ಚರ್ಯದಿಂದಲೂ ಕದಡಿದ ಮನಸ್ಸುಳ್ಳವನಾಗಿ ನಿಶ್ಚಯವಾಗಿಯೂ ನಾನಿದನ್ನು ನೋಡುವೆನು–ಎಂದು ಅದೇ ಕಡೆಗಾಗಿ ತೆರಳಿದನು. ಅಲ್ಲಿ ಹೊಳೆವ ಚಿನ್ನದಿಂದ ಮಾಡಿದ್ದೂ ಹಲವಾರು ರತ್ನ ಗಳನ್ನು ಕೆತ್ತಿಸಿದ್ದೂ ಚಲಿಸುವ ಧ್ವಜ ಬಾವುಟಗಳುಳ್ಳುದೂ ವಿದ್ಯಾಧರ ತರುಣಿಯರಿಗೆ ಆಡಲು ಉಪಯುಕ್ತವೂ ಆದ ಮಹಾಭವನವನ್ನು ಕಂಡು ಆಶ್ಚರ್ಯಪಟ್ಟನು. ಅದರ ಬಳಿಗೆ ಹೋಗಿ ಒಂದು ಮರದ ಮರೆಯಲ್ಲಿದ್ದು ನೋಡಿದನು. ಆ ಭವನದ ಎದುರುಗಡೆ ಇದ್ದ ರತ್ನಮಂಟಪದಲ್ಲಿ ದೇವತಾಸ್ತ್ರೀಯರು ಸೊಗಸಾಗಿ ಚಾಮರವನ್ನು ಬೀಸುತ್ತಿರಲು

ತಳದ ಮೇಗಿರ್ದು ನಾಟಕಮಂ ನೋಟ್ಪ ಕುಮಾರನಂ ಕಂಡು ಹರ್ಷಚಿತ್ತದಿಂದಂ ಕುಸುಮಿತ ಕದಂಬ ವೃಕ್ಷಂಬೊಲ್ ಕಂಟಕಿತ ರೋಮಾಂಚಿತ ಗಾತ್ರನಾಗಿ ಪರಿದುವರ್ಪೊನಂ ಕಂಡಿದಿರೆಯ್ದಿ ಯಾತನುಂ ಕುಮಾರನ ಚರಣಾರವಿಂದಂಗಳ್ಗೆಱಗಿ ಬಿರ್ದು ಮೂರ್ಛಾಗತನಾದೊಡಾಗಳ್ ಶೀತಳಕ್ರಿಯೆಗಳಿಂದೆಚ್ಚತ್ತಱುದಿಂಗಳಿಂ ಕಂಡೆಂ ಸ್ವಾಮಿ ನಿನ್ನಂ ನಂಬಿರ್ದೆ ನಾನೆಂದು ಮಹಾ ದುಃಖದಿಂದಳ್ವನಂ ಸಂತಯಿಸಿ ವಿಪುಳಶ್ರೀಯೆಂಬ ವಿದ್ಯಾಧರವಿಳಾಸಿನಿಯುಮಂ ಕರೆದಿಂತೆಂದು ಪೇೞ್ದನೆನ್ನ ಸಹೋದರನೆಂತುಂ ಶ್ರಮಮಂ ನೀಗಿ ಸುಖದಿಂ ತಣಿದೊಸಕ್ಕುಮಂತಾಗೆ ಸ್ನಾನ ಪಾನ ಭೋಜನಾದಿ ಕ್ರಿಯೆಗಳಿಂ ಬೇಗಂ ಮಾಡೆಂದು ಪೇೞ್ದೊಡಾಕೆಯುಮಂತೆಗೆಯ್ವೆನೆಂದಾ ತನಂ ಮಹಾವಿಭೂತಿಯಿಂದಂ ವಿದ್ಯಾಧರ ವಿಲಾಸಿನಿ ಮಜ್ಜನಂಬುಗಿಸಿ ದಿವ್ಯಾಹಾರಮನೂಡಿ ವಸ್ತ್ರಾಭರಣ ಗಂಧಮಾಲ್ಯಾದಿ ತಾಂಬೂಲಾದಿಗಳಿಂ ತಣಿಪಿದಾಗಳಾತನುಂ ಮುನ್ನಿನ ದುಃಖ ಮೆಲ್ಲಮಂ ಮಱೆದಂ ಮುನ್ನಂ ಕ್ಲೇಶಭಾಗಿಯಪ್ಪ ಪುರುಷಂ ಸ್ವರ್ಗಮನೆಯ್ದಿ ಮಾಱಪ್ಪವೊಲೆ ಆಯ್ತಾಗಳಲ್ಲಿಂ ಬಂದು ಕುಮಾರನೊರಾಸನದೊಳಿರ್ದು ಸರ್ವಾಭರಣಭೂಷಿತನಾಗಿ ನೇತ್ರ ಮನೋಹರಿಯೆಂಬ ದಿವ್ಯಸಭೆಯುಮಂ ನೋಡಿ ವಿಸ್ಮಯಚಿತ್ತನಾಗಿ ಇಂತೆಂದಂ ಸ್ವಾಮಿ ವ್ರತ

ದಿವ್ಯವಾದ ಹಾಸಿಗೆಯ ಮೇಲೆ ಕುಳಿತು ನಾಟಕವನ್ನು ನೋಡುವ ಸನತ್ಕುಮಾರನನ್ನು ಕಂಡು ಸಂತುಷ್ಟ ಮನಸ್ಕನಾದನು. ಹೂಬಿಟ್ಟ ಕಡವೆ ಮರದಂತೆ ರೋಮಾಂಚಗೊಂಡ ದೇಹವುಳ್ಳವನಾಗಿ ನಡೆದು ಬರುವವನನ್ನು ಕುಮಾರನು ಕಂಡು ಎದುರಿಗೆ ಬಂದನು. ಅವನು ಕುಮಾರನ ಪಾದಕಮಲಗಳಿಗೆ ವಂದಿಸಿ ಬಿದ್ದು ಮೂರ್ಛೆಹೋದನು. ಆಗ ಶೀತಳಕ್ರಿಯೆಗಳಿಂದ ಎಚ್ಚರಗೊಂಡು "ಪ್ರಭುವೇ, ನಿನ್ನನ್ನು ಆರು ತಿಂಗಳನಂತರ ಇದೀಗ ಕಂಡೆನು. ನಾನು ನಿನ್ನನ್ನು ನಂಬಿದ್ದೇನೆ" ಎಂದು ಮಹಾವ್ಯಸನದಿಂದ ಅತ್ತನು. ಸನತ್ಕುಮಾರನು ಅವನನ್ನು ಸಮಾಧಾನಪಡಿಸಿ ವಿಪುಳಶ್ರೀ ಎಂಬ ವಿದ್ಯಾಧರ ಸ್ತ್ರೀಯನ್ನು ಕರೆದು ಹೀಗೆಂದನು—"ನನ್ನ ಸಹೋದರನಾದ ಇವನು ಹೇಗಾದರೂ ಆಯಾಸವನ್ನು ಕಳೆದು ಸುಖದಿಂದ ತೃಪ್ತಿಗೊಳ್ಳುವ ಹಾಗೆ ಅವನಿಗೆ ಸ್ನಾನ–ಪಾನ–ಭೋಜನ ಮುಂತಾದುವನ್ನು ಬೇಗನೆ ನೆರವೇರಿಸು." ಹೀಗೆ ಹೇಳಲು, "ಹಾಗೆಯೇ ಮಾಡುವೆನು" ಎಂದು ಆ ವಿದ್ಯಾಧರ ಸ್ತ್ರೀಯು ಮಹೇಂದ್ರ ಸಿಂಹನಿಗೆ ಮಹಾವೈಭವದಿಂದ ಸ್ನಾನವನ್ನು ಮಾಡಿಸಿ ದಿವ್ಯವಾದ ಆಹಾರವನ್ನು ಕೊಟ್ಟು ಉಡಿಗೆ, ತೊಡಿಗೆ, ಗಂಧ, ಹೂಮಾಲೆ, ಎಲೆಯಡಕೆ–ಮುಂತಾದವುಗಳಿಂದ ತೃಪ್ತಿಪಡಿಸಿದಳು. ಅವನು ಆಗ ತನ್ನ ಹಿಂದಿನ ದುಃಖವೆಲ್ಲವನ್ನೂ ಮರೆತನು. ಹಿಂದೆ ಕಷ್ಟಗಳನ್ನು ಅನುಭವಿಸಿದವನು ಸ್ವರ್ಗಕ್ಕೆಹೋಗಿ ತನ್ನ ಹಿಂದಿನ ಕಷ್ಟಕ್ಕೆ ಸುಖವನ್ನು ವಿನಿಮಯ ಮಾಡಿಕೊಳ್ಳುವಂತೆಯೇ ಆಗ ಅವನಿಗಾಯಿತು. ಅಲ್ಲಿಂದ ಬಂದು ಸನತ್ಕುಮಾರನೊಂದಿಗೆ ಒಂದೇ ಪೀಠದಲ್ಲಿ ಕುಳಿತುಕೊಂಡು ಎಲ್ಲಾ ಆಭರಣಗಳಿಂದ ಅಲಂಕೃತನಾಗಿ ನೇತ್ರಮನೋಹರವಾದ ದಿವ್ಯ ಸಭೆಯನ್ನು ನೋಡಿ ಮನದಲ್ಲಿ ಆಶ್ಚರ್ಯಪಟ್ಟು ಹೀಗೆಂದನು—"ಪ್ರಭುವೇ, ವ್ರತ, ಶೀಲ, ಉಪ

ಶೀಲೋಪವಾಸ ತಪಶ್ಚರಣ ಸಂನ್ಯಸನಾದಿ ಶುಭಾನುಷ್ಠಾನ ಕ್ರಿಯೆಗಳಿಂ ಸತ್ಪುರುಷಂ ಮಱು ಭವದೊಳ್ ದೇವಾಂಗನೆಯರ್ಕಳೆಱೆಯನಕ್ಕುಂ ನೀಮೀಭವದಿಂದಿಂತಪ್ಪ ವಿಭವಮನೆಯ್ದಿದಿರಿ ದೆನಗೆ ಮಹಾವಿಸ್ಮಯಮೆನೆ ಕುಮಾರನಿಂತೆಂದನಿವರ್ಗಳ್ ದೇವಕನ್ನೆಯರಲ್ಲರ್ ವಿದ್ಯಾಧರಿ ಯರ್ಕಳೆನೆ ಇವರ್ಗಳಂ ನೀಮೆಂತು ಪೆತ್ತಿರೆಲ್ಲಿ ಮೇಣಾವ ಸ್ವರೂಪದಿಂ ಬಂದಿರಿದನೆನಗೆ ತಿಳಿಯೆ ಪೇೞಿಮೆನೆ ಕುಮಾರನಿರುಳೆಲ್ಲಮತಿರಂಜನೆಯೆಂಬ ನಾಟಕಮಂ ನೋಡಿ ನಿದ್ರಾಸುಖಮಂ ಪೞಿ ದೊನಾ ಕಮಳಮತಿಯೆಂಬ ವಿದ್ಯಾಧರ ವಿಳಾಸಿನಿಯುಂ ವಿದಗ್ಧೆಯುಂ ಕರೆದೆನ್ನ ಸಂಬಂಧಿಯಪ್ಪ ಕಥೆಯೆಲ್ಲಮಂ ಮಹೇಂದ್ರಸಿಂಹಂಗೆ ಪೇೞೆಂದು ನಿದ್ರಾವಶಗತನಾಗಿ ವಾಸಗೃಹಮಂ ಪೊಕ್ಕ ನಿತ್ತಾಕೆಯುಮಾತಂಗಿಂತೆಂದು ಪೇೞಲ್ ತಗುಳ್ದಳ್ ಕುಮಾರನಿಂದಾರೂಢಮಪ್ಪ ದುಷ್ಟಾಶ್ವಂ ಕುಮಾರನಂ ಕೊಂಡು ಮನೋವೇಗದಿಂ ಗಿರಿ ವನ ದರಿ ನದೀಪ್ರದೇಶಂಗಳೊಳ್ ಮೂಱುದಿವಸ ಮಿರುಳುಂ ಪಗಲುಂ ಪರಿಯುತ್ತಿರ್ದುದು ಕರುಳ್ ಪಱಿದು ತೆಗಲೆಯೊಡೆದು ಕಾಲಂಗೆಯ್ದುದಾ ಗಳ್ ಕುಮಾರನುಂ ಪಸಿವುಂ ನೀರಟ್ಕೆಯುಂದಮಾನುಂ ಬಾಧಿಸೆಪಟ್ಟು ಬಸಮೞಿದು ಪಿರಿದೊಂದಾ ಲದಮರದ ಕೆೞಗೆ ಶಿಲಾತಳದ ಮೇಗೆ ಪಟ್ಟಿರ್ದನಾಗಳಲ್ಲಿಯಾ ವಟವೃಕ್ಷವಾಸಿಯಪ್ಪ ಮನೋಹರ

ವಾಸ, ತಪಸ್ಸು, ಸಂನ್ಯಾಸ—ಮುಂತಾದ ಶುಭಕರ ಆಚರಣೆಗಳಿಂದ ಸತ್ಪುರುಷನು ಮುಂದಿನ ಜನ್ಮದಲ್ಲಿ ದೇವತಾಸ್ತ್ರೀಯರಿಗೆ ಒಡೆಯನಾಗುವನು. ನೀವು ಈ ಜನ್ಮದಲ್ಲಿಯೇ ಇಂತಹ ವೈಭವವನ್ನು ಹೊಂದಿದ್ದೀರಿ ! ಇದು ನನಗೆ ಮಹದಾಶ್ಚರ್ಯ !." ಆಗ ಕುಮಾರನು ಹೀಗೆಂದನು—"ಇವರು ಸುರಕನ್ಯೆಯರಲ್ಲ, ವಿದ್ಯಾಧರಿಯರು." ಅದಕ್ಕೆ ಮಹೇಂದ್ರಸಿಂಹನು—"ಇವರನ್ನು ನೀವು ಎಲ್ಲಿ ಹೇಗೆ ಪಡೆದಿರಿ ? ಅಲ್ಲದೆ ಯಾವ ರೀತಿ ಯಲ್ಲಿ ಇಲ್ಲಿಗೆ ಬಂದಿರಿ ? ಇದನ್ನು ನನಗೆ ತಿಳಿಸಿರಿ" ಎಂದನು, ಕುಮಾರನು ರಾತ್ರಿಯೆಲ್ಲ 'ಅತಿರಂಜನೆ' ಎಂಬ ನಾಟಕ ನೋಡಿ ನಿದ್ದೆಗೆಟ್ಟಿದ್ದುದರಿಂದ ಕಮಳಮತಿ ಎಂಬ ವಿದ್ಯಾ ಧರ ವಿದಗ್ಧೆಯಾದ ಸ್ತ್ರೀಯನ್ನು ಕರೆದು "ನನ್ನ ಸಂಬಂಧವಾದ ಎಲ್ಲ ಕಥೆಯನ್ನೂ ಮಹೇಂದ್ರಸಿಂಹನಿಗೆ ಹೇಳು" ಎಂದು ನುಡಿದು ನಿದ್ರೆಗೆ ವಶನಾಗಿ ಮಲಗುವ ಮನೆಯನ್ನು ಹೊಕ್ಕನು. ಇತ್ತ ಕಮಳಮತಿ ಮಹೇಂದ್ರಸಿಂಹನಿಗೆ ಈರೀತಿಯಾಗಿ ಹೇಳತೊಡಗಿದಳು— ಕುಮಾರನು ಕುಳಿತ ಕೆಟ್ಟಕುದುರೆ ಕುಮಾರನನ್ನು ತೆಗೆದುಕೊಂಡು ಮನೋವೇಗದಿಂದ ಬೆಟ್ಟ, ಕಾಡು, ತಪ್ಪಲು, ಹೊಳೆಗಳ ಸ್ಥಳಗಳಲ್ಲಿ ಮೂರು ದಿವಸ ಇರುಳೂ ಹಗಲೂ ಓಡುತ್ತಿದ್ದು ಕರುಳು ತುಂಡಾಗಿ ಎದೆ ಒಡೆದು ಸತ್ತುಹೋಯಿತು. ಆಗ ಸನತ್ಕು ಮಾರನು ಬಹಳವಾಗಿ ಹಸಿವು ಬಾಯಾರಿಕೆಗಳಿಂದ ಬಾಧಿತನಾಗಿ ಶಕ್ತಿಗುಂದಿದ್ದನು. ಅವನು ದೊಡ್ಡದಾದ ಒಂದು ಆಲದ ಮರದ ಕೆಳಗಿನ ಕಲ್ಲಿನ ತಳದಮೇಲೆ ಮಲಗಿದ್ದನು. ಆಗ ಅಲ್ಲಿ ಆ ಆಲದಮರದಲ್ಲಿ ವಾಸವಾಗಿದ್ದ ಮನೋಹರನೆಂಬ ಯಕ್ಷನು ಅವನನ್ನು

ನೆಂಬ ಯಕ್ಷಂ ಕಂಡೀ ಪುರುಷಂ ಸಕಲಚಕ್ರವರ್ತಿಯಪ್ಪನೆಂದಱಿದು ಗಂಧೋದಕಮಂ ಮೇಲೆ ತಳಿದು ತಣ್ಗಾಳಿಯಂ ವಿಗುರ್ವಿಸಿ ದೇಹಕ್ಕಾಪ್ಯಾಯನಂ ಮಾಡಿ ಸ್ವರ್ಣಭಾಜನದಿಂದಾಮೋದ ಸುಗಂಧಮಪ್ಪ ಕೋಡುವ ನೀರನಾತಂಗೆ ಕುಡಿಯಲೆಱೆದನಾಗಳ್ ಕುಮಾರಂ ನೀನಾರ್ಗ್ಗೀ ನೀರನೆಲ್ಲಿಂ ತಂದಯ್ ಪೇೞೆಂದು ಬೆಸಗೊಂಡೊಡಾತನಿಂತೆಂದನಾನೀ ವಟವೃಕ್ಷನಿವಾಸಿಯೆನ್ ಮನೋಹರನೆಂಬ ಯಕ್ಷನೆನ್ ಕ್ಷುಲ್ಲಕಮಾನಸಮೆಂಬ ಸರೋವರದಿಂ ತಂದೆನೀ ನೀರನೆನೆ ಅಂತಪ್ಪೊಡೆ ನೀನೆನ್ನನಾ ಕೊಳಕ್ಕೊಡಗೊಂಡು ಪೋಗಲ್ಲಿಯಾ ನೀರಂ ಮಿಂದು ಕುಡಿದೊಡಲ್ಲ ದೆನಗೆ ನೀರೞ್ಕೆ ಕಿಡದೆಂದು ಪೇೞ್ದೊಡೆ ಕುಮಾರನನೆತ್ತಿಕೊಂಡು ಪೋಗಿ ಯಕ್ಷನಾ ಸರೋವರದ ತಡಿಯೊಳಿೞಿಪಿ ಪೋದನ್ ಆ ಅವಸರದೊಳ್ ಸಿತಯಕ್ಷನೆಂಬ ವ್ಯಂತರದೇವಂ ಕುಮಾರನ ಪೂರ್ವವೈರಿ ಭೌಮವಿಹಾರಕ್ಕೆ ಬಂದು ಕುಮಾರನಂ ಕಂಡು ಕ್ರೋಧಾಗ್ನಿ ಪೆರ್ಚಿಭೈರವರೂಪಧಾರಿಯಾಗಿ ಕಳಕಳಧ್ವನಿಯಿಂದಂ ಗರ್ಜಿಸಿ ಬರ್ಪೊನಂ ಕಂಡಾಗಳ್ ಸಿಂಹನಾದಂ ಗೆಯ್ದು ಖಡ್ಗಸನ್ನಿಭಮಪ್ಪ ಮಹಾಶಿಲೆಯಂ ಕಿೞ್ತೆತ್ತಿಕೊಂಡು ಪ್ರತಿರಾಕ್ಷಸಂಬೊಲ್ ನಿಂದ ಕುಮಾರನಂ ನೋಡಿ ವ್ಯಂತರದೇವಂ ನಾಗಪಾಶದಿಂದಂ ವೇಷ್ಟಿಸಿದೊಡೆ ಕುಮಾರನದಂ ಹಸ್ತತಳದಿಂ ಪಱಿಯೆ

ಕಂಡನು. "ಈ ಪುರುಷನು ಭರತಕ್ಷೇತ್ರದ ಆರು ಖಂಡಗಳಿಗೂ ಅಧಿರಾಜನಾಗುವನು" ಎಂದು ತಿಳಿದುಕೊಂಡನು. ಕುಮಾರನ ಮೇಲೆ ಗಂಧದನೀರನ್ನು ಸೇಚಿಸಿದನು. ತಂಗಾಳಿಯನ್ನು ಮಾಯೆಯಿಂದ ಸೃಷ್ಟಿಸಿ ಅವನ ದೇಹಕ್ಕೆ ಹಿತವನ್ನುಂಟುಮಾಡಿ, ಚಿನ್ನದ ಪಾತ್ರೆಯಿಂದ ಸಂತೋಷಕರವೂ ಸುಗಂಧಯುಕ್ತವೂ ಆದ ತಣ್ಣೀರನ್ನೂ ಅವನಿಗೆ ಕುಡಿಯುವುದಕ್ಕಾಗಿ ಹೊಯ್ದನು. ಆಗ ಕುಮಾರನು "ನೀನು ಯಾರು? ಈ ನೀರನ್ನು ಎಲ್ಲಿಂದ ತಂದೆ? ಹೇಳು" ಎಂದು ಕೇಳಿದನು. ಅದಕ್ಕೆ ಅವನು—"ನಾನು ಈ ಆಲದ ಮರದಲ್ಲಿ ವಾಸಿಸುತ್ತಿರುವ ಮನೋಹರನೆಂಬ ಯಕ್ಷನಾಗಿರುವೆನು. ಈ ನೀರನ್ನು ಕ್ಷುಲ್ಲಕ ಮಾನಸವೆಂಬ ಕೊಳದಿಂದ ತಂದಿರುವೆನು" ಎಂದು ಹೇಳಿದನು. ಕುಮಾರನು ಅವನೊಡನೆ—"ಹಾಗಾದರೆ ನೀನು ನನ್ನನ್ನು ಆ ಕೊಳಕ್ಕೆ ಕರೆದುಕೊಂಡು ಹೋಗು. ಅಲ್ಲಿ ಆ ನೀರಿನಲ್ಲಿ ಸ್ನಾನಮಾಡಿ ಜಲಪಾನ ಮಾಡಿದಲ್ಲದೆ ನನಗೆ ಬಾಯಾರಿಕೆ ಪರಿಹಾರವಾಗದು" ಎಂದು ಹೇಳಲು, ಯಕ್ಷನು ಕುಮಾರನನ್ನು ಎತ್ತಿಕೊಂಡು ಹೋಗಿ ಆ ಸರೋವರದ ದಡದಲ್ಲಿ ಇಳಿಸಿ ಹೋದನು. ಆ ಸಂದರ್ಭದಲ್ಲಿ ಸನತ್ಕುಮಾರನ ಪೂರ್ವಜನ್ಮದ ಶತ್ರುವಾದ ಸಿತಯಕ್ಷನೆಂಬ ವ್ಯಂತರ ದೇವನು ಭೂಮಿಯಲ್ಲಿ ಸಂಚರಿಸುವುದಕ್ಕಾಗಿ ಬಂದು, ಕುಮಾರನನ್ನು ಕಂಡನು. ಆಗ ಸಿಟ್ಟೆಂಬ ಬೆಂಕಿ ಹೆಚ್ಚಾಗಿ ಭೈರವರೂಪವನ್ನು ಧರಿಸಿ ಗರ್ಜಿಸುತ್ತ ಬಂದನು. ಅವನನ್ನು ಕುಮಾರನು ಕಂಡು ಸಿಂಹಗರ್ಜನೆ ಮಾಡಿ ಖಡ್ಗವನ್ನು ಹೋಲುವ ದೊಡ್ಡ ಕಲ್ಲನ್ನು ಕಿತ್ತು ಎತ್ತಿಕೊಂಡು ಎದುರಾಗಿ ರಾಕ್ಷಸನೇ ಬಂದ ಹಾಗೆ ನಿಂತನು. ವ್ಯಂತರದೇವನು ಕುಮಾರನನ್ನು ನೋಡಿ ನಾಗಪಾಶದಿಂದ ಅವನನ್ನು ಸುತ್ತುವರಿಯಲು (ಬಂಧಿಸಲು) ಕುಮಾರನು ಅದನ್ನು ತನ್ನ ಅಂಗೈಯಿಂದ

ಪೊಯ್ದುದನಾಗಳಾ ದೇವಂ ನಾನಾ ವಿಧ ಮಾಯಾಯುದ್ಧಂಗಳಿಂ ಕಾದೆ ಕುಮಾರನಂ ಯುಷ್ಟಿಮುಷ್ಟಿ ಪ್ರಹಾರಾದಿಗಳಿಂ ಗೆಲ್ದಿರ್ದೊನನೆತ್ತಿಕೊಂಡು ಸಮುದ್ರದ ಬಡವಾಮುಖದೊಳಿಕ್ಕಿ ಕೊಲ್ವೆನವೋಘಮೆಂದು ನೆಲದಿಂದುರ್ಬಿ ಬಂದಾಕಾಶಕ್ಕೆ ನೆಗಪಿದೊನ ಸ್ಕಂಧಮಂ ತಿವಿದೊಂ ಕುಮಾರನ ಅವೃಷ್ಟಿವಜ್ರಘಾತಂಬೊಲಪ್ಪ ಮುಷ್ಟಿಯಿಂ ದಿವ್ಯಪುರುಷನ ಹಸ್ತಪ್ರಹಾರಮೆಂಬ ಮುದ್ರಾಪೀಡೆಯಿಂ ತ್ರಸ್ತಾಭಿಭೂತನಾಗಿ ಬೆನ್ನಿತ್ತೋಡಿದನಾಗಳ್ ತನ್ನಿವಾಸಿಗಳಪ್ಪ ಯಕ್ಷಕಿನ್ನರಾದಿಗಳ್ ಮಸ್ತಕದೊಳ್ ನ್ಯಸ್ತಹಸ್ತರ್ಕಳಾಗಿ ಜಯಜಯಶಬ್ದಂಗಳಿಂದಂ ಪುಷ್ಪಾದಿಗಳಿಂ ಕುಮಾರನಂ ಪೂಜಿಸಿದರ್ ಆ ಅವಸರದೊಳಿಂದ್ರಪ್ರಭನೆಂಬ ವಿದ್ಯಾಧರಂ ಬಂದು ಕುಮಾರನ ಚರಣಾರವಿಂದಂಗಳ್ಗೆಱಗಿ ಪೊಡೆವಟ್ಟಿಂತೆಂದನ್ ಸ್ವಾಮಿ ಮೂವತ್ತಾಱು ವರುಷಂ ನಿನ್ನ ಬರವನಾನೆನ್ನರಸನ ಬೆಸದಿಂ ಪಾರುತ್ತಿರ್ದ್ಪೆಂ ನೀನೆನ್ನ ಭಾಗ್ಯದಿನಿಲ್ಲಿಗೆ ಬಂದಯ್ ಏಱು ವಿಮಾನಮನೆನೆ ಅಂತೆಗೆಯ್ವೆನೆನ್ನ ಬಯಕೆಯುಂ ತೀರ್ಚಿದ ಬೞಿಕ್ಕೇಱುವೆನೆಂದು ಕೊಳನಂ ಪೊಕ್ಕು ಸ್ವೇಚ್ಛೆಯಿಂ ಕ್ರೀಡಿಸಿ ಪೋಱಮಟ್ಟನನಾ ಖೇಚರಂ ಕೊಂಡು ಪೋಗಿ ತದ್ವನದೊಳತಿ ರಮಣೀಯಮಪ್ಪ ಪ್ರದೇಶ

ಹೊಡೆದು ತುಂಡುಮಾಡಿದನು. ಆಗ ಸಿತಯಕ್ಷನು ಹಲವಾರು ರೀತಿಯ ಮಾಯೆಯ ಯುದ್ಧಗಳಿಂದ ಹೋರಾಡಲು ಕುಮಾರನು ದೊಣ್ಣೆ ಮುಷ್ಟಿಗಳ ಹೊಡೆತಗಳಿಂದ ಗೆದ್ದನು. ವ್ಯಂತರನು ಕುಮಾರನನ್ನು ಎತ್ತಿಕೊಂಡು, ಸಮುದ್ರದ ವಡಬಾಗ್ನಿಯ ಬಾಯಿಗೆ ಹಾಕಿ ಕೊಲ್ಲುವೆನು, ಈ ಕಾರ್ಯ ವ್ಯರ್ಥವಾಗದು-ಎಂದು ನೆಲದಿಂದ ಹಿಗ್ಗಿ ಬಂದು ಆಕಾಶಕ್ಕೆ ಎತ್ತಲು ಕುಮಾರನು ಅವನ ಹೆಗಲಿಗೆ ತಿವಿದನು. ಅವನ ಬರಸಿಡಿಲಿನ ಹೊಡೆತದಂತಹ ಮುಷ್ಟಿಯ ಹೊಡೆತದ ಹಿಂಸೆಯಿಂದ ಹೆದರಿದವನೂ ಹೊಡೆಯಲ್ಪಟ್ಟವನೂ ಆಗಿ ಬೆನ್ನುಕೊಟ್ಟು ಓಡಿಹೋದನು. ಆಗ ಅಲ್ಲಿ ವಾಸಮಾಡುತ್ತಿದ್ದ ಯಕ್ಷರು ಕಿನ್ನರರು ಮುಂತಾದವರು ತಲೆಯ ಮೇಲೆ ಕೈಯಿಟ್ಟವರಾಗಿ ಜಯ ಜಯ ಎಂಬ ಶಬ್ದಗಳಿಂದಲೂ ಹೂ ಮುಂತಾದವುಗಳಿಂದಲೂ ಸನತ್ಕುಮಾರನನ್ನು ಪೂಜಿಸಿದರು. ಆ ಸಂದರ್ಭದಲ್ಲಿ ಇಂದ್ರಪ್ರಭನೆಂಬ ವಿದ್ಯಾಧರನು ಬಂದು ಕುಮಾರನ ಪಾದಕಮಲಗಳಿಗೆ ಬಿದ್ದು ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಹೀಗೆ ಹೇಳಿದನು-"ಸ್ವಾಮೀ, ನಾನು ನನ್ನ ಅರಸನ ಆಜ್ಞೆಯ ಪ್ರಕಾರ ಮೂವತ್ತಾರು ವರ್ಷಗಳಿಂದ ನಿನ್ನ ಆಗಮನವನ್ನು ಎದುರು ನೋಡುತ್ತ ಇದ್ದೆನು. ನೀನು ನನ್ನ ಪುಣ್ಯದಿಂದ ಇಲ್ಲಿಗೆ ಬಂದಿರುತ್ತೀ. ಇಗೋ ವಿಮಾನ ಹತ್ತು ಹತ್ತು". ಹೀಗೆನ್ನಲು, "ಹಾಗೆಯೇ ಮಾಡುವೆನು ; ನನ್ನ ಬಯಕೆಯನ್ನು ತೀರಿಸಿ ಆದಮೇಲೆ ಹತ್ತುವೆನು" ಎಂದು ನುಡಿದು. ಕುಮಾರನು ಸರೋವರವನ್ನುಹೊಕ್ಕನು. ಅಲ್ಲಿ ತನ್ನ ಇಚ್ಛೆಗೆ ಬಂದಂತೆ ಜಲಕೇಳಿಯಾಡಿ ಹೊರಟನು. ಹೊರಟ ಅವನನ್ನು ವಿದ್ಯಾಧರನು ಎತ್ತಿಕೊಂಡು ಹೋಗಿ, ಆ ಕಾಡಿನಲ್ಲಿ ಅತ್ಯಂತ ಮನೋಹರವಾದ ಸ್ಥಳದಲ್ಲಿ ಆಡುತ್ತಿದ್ದ

ದೊಳಾಡುತ್ತಿರ್ದ್ದ ವಿದ್ಯಾಧರ ಕನ್ನೆಯರ್ಕಳ ಪಕ್ಕದಿರಿಸಿ ಪೋದನ್ ಇತ್ತ ಖೇಚರ ಕನ್ನೆಯರ್ಕಳ ಕಣ್ಗಳೆಂಬ ಮೀಂಗಳ್ ಕುಮಾರನ ರೂಪೆಂಬ ಗಾಳದಿಂ ತೆಗೆಯೆಪಟ್ಟು ತಪನ ತಾಪನ ದಹನ ವಿಮೋಹನ ಮರಣ ಸ್ವರೂಪದ ಕಾಮಶರಂಗಳವರ್ಗ್ಗಳೆರ್ದೆಯನುರ್ಚಿ ಪೋಗಿ ಪರವಸೆಯರಾಗಿ ಮಱುಗಿದಱುನೀರ ಮೀಂಗಳ್ವೊಲಾದರಿದೇಂ ಚೋದ್ಯಮೊ ಕುಸುಮಬಾಣನ ಬಿಲ್ಬಲ್ಮೆ

ಶ್ಲೋಕ ॥ ಅಹೋ ಧನುಷಿ ಕೌಶಲ್ಯಂ ಮನ್ಮಥಸ್ಯ ಮಹಾತ್ಮನಃ
ಅಸ್ಪೃಶನ್ನಪಿ ಗಾತ್ರಾಣಿ ಭಿನತ್ತ್ಯಂತರ್ಗತಂ ಮನಃ ॥

ಇವರ್ಗ್ಗಳ್ ತನ್ಮುಖನಿರೀಕ್ಷಣದೊಳಾಸಕ್ತೆಯರಾಗಿರ್ದ್ದರಾಗಳಾ ಇಂದ್ರಪ್ರಭನೆಂಬ ವಿದ್ಯಾಧರಂ ಪ್ರಿಯಸಂಗಮಮೆಂಬ ಪೊಲಲನೆಯ್ದಿ ಭಾನುವೇಗನೆಂಬ ವಿದ್ಯಾಧರಂಗೆ ಪೇೞ್ದನಾದೇಶ ಪುರುಷನಂ ತಂದು ಭೂತರಮಣದ ಜ್ಯೋತಿರ್ವಿತಾನಮೆಂಬ ಮಣಿಮಂಟಪದೊಳ್ ಕನ್ನೆಯರ ಪಕ್ಕದಿರಿಸಿ ಬಂದೆನೆನೆ ಆಗಳಾತಂಗೆ ತಣಿವಿನೆಗಂ ತುಷ್ಟಿದಾನಂಗೊಟ್ಟು ವಿಪುಳಶ್ರೀಯೆಂಬ ಖೇಚ

ಕನ್ಯೆಯರ ಬಳಿಯಲ್ಲಿರಿಸಿ ತೆರಳಿದನು. ಇತ್ತ ವಿದ್ಯಾಧರ ಕನ್ಯೆಯರ ಕಣ್ಣುಗಳೆಂಬ ಮೀನುಗಳು ಕುಮಾರನ ರೂಪವೆಂಬ ಗಾಳದಿಂದ ಹಿಡಿಯಲ್ಪಟ್ಟವು. ತಪನ, ತಾಪನ, ದಹನ, ವಿಮೋಹನ (ವಿಶೇಷವಾಗಿ ಮೋಹಗೊಳಿಸುವುದು), ಮರಣ–ಎಂಬ ಗುಣಸ್ವರೂಪವುಳ್ಳ[1] ಕಾಮ ಬಾಣಗಳು ಆ ಕನ್ಯೆಯರ ಎದೆಗೆ ನಾಟಿ ಬೆನ್ನಿನಲ್ಲಿ ಹೊರಟು, ಅವರು ಮೂರ್ಛೆಹೋಗಿ, ಕುದಿವ ಬತ್ತಿದ ನೀರಿನ ಮೀನುಗಳಂತೆ ಆದರು. ಪುಷ್ಪಬಾಣನಾದ ಮನ್ಮಥನ ಬಿಲ್ಲಿನ ಸಾಮರ್ಥ್ಯ ಏನೊಂದು ಆಶ್ಚರ್ಯವೋ! [ಮಹಾತ್ಮನಾದ ಮನ್ಮಥನ ಬಿಲ್ಲುವಿದ್ಯೆಯ ನೈಪುಣ್ಯ ಆಶ್ಚರ್ಯಕರ. ಅವನು ದೇಹಗಳನ್ನು ಮುಟ್ಟದೆ ಇದ್ದರೂ ಒಳಗಿರತಕ್ಕ ಮನಸ್ಸನ್ನು ತುಂಡರಿಸುತ್ತಾನೆ.] ಇವರು ಸನತ್ಕುಮಾರನ ಮುಖವನ್ನು ನೋಡುವುದರಲ್ಲೇ ಆಸಕ್ತೆಯರಾಗಿದ್ದರು. ಆಗ ಇಂದ್ರ ಪ್ರಭನೆಂಬ ವಿದ್ಯಾಧರನು ಪ್ರಿಯಸಂಗಮವೆಂಬ ಪಟ್ಟಣಕ್ಕೆ ಹೋಗಿ ಭಾನುವೇಗನೆಂಬ ವಿದ್ಯಾಧರರಾಜನಿಗೆ ಹೀಗೆಂದನು—"ನಾನು ನಿಮ್ಮ ಆದೇಶದಂತೆ ಆ ಮನುಷ್ಯನನ್ನು (ಸನತ್ಕುಮಾರನನ್ನು) ತಂದು ಭೂತರಮಣವೆಂಬ ಕಾಡಿನ ಜ್ಯೋತಿರ್ವಿತಾನವೆಂಬ ರತ್ನಮಂಟಪದಲ್ಲಿ ಕನ್ಯೆಯರ ಸಮೀಪದಲ್ಲಿರಿಸಿ ಬಂದಿರುತ್ತೇನೆ." ಹೀಗೆ ಹೇಳಲು, ಆತನಿಗೆ ಭಾನುವೇಗನು ತೃಪ್ತಿಯಾಗುವ ಮಟ್ಟಿಗೆ ತೃಪ್ತಿಕರವಾದ ದಾನವನ್ನು ಕೊಟ್ಟು ವಿಪುಳಶ್ರೀ ಎಂಬ ವಿದ್ಯಾಧರಿಯನ್ನು ಕರೆದು—" ನೀನು ಬೇಗನೆ ಹೋಗಿ ಧವಳ

---

1. ಅರವಿಂದ, ಅಶೋಕ, ಚೂತ, ನವಮಲ್ಲಿಕಾ, ನೀಲೋತ್ಪಲ–ಇವು ಐದು ಕಾಮಬಾಣಗಳು. ಉನ್ಮಾದನ, ತಾಪನ, ಶೋಷಣ, ಸ್ತಂಭನ, ಸಮ್ಮೋಹನ–ಇವು ಮನ್ಮಥನ ಪಂಚಬಾಣಗಳ ಗುಣಗಳು,–ಹೀಗೆ ಅಮರಕೋಶದಲ್ಲಿ ಹೇಳಿದೆ,

ರಿಯುಂ ಕರೆದಿಂತೆಂದಂ ಶೀಘ್ರಂ ಪೋಗಿ ಕೀರ್ತಿಧವಳಂಗೆ ಭೋಜನಾದಿ ವಿಧಿಯುಂ ಮಾಡೆಂದು ಪೇಳ್ದೊಡಾಕೆಯುಮಂತೆಗೆಯ್ವೆನೆಂದು ಸಪರಿವಾರಂ ಬೆರಸು ಬಂದಾತಂಗೆ ಮಜ್ಜನ ಭೋಜನ ಪ್ರಸಾಧನಾದಿಗಳುಮಂ ಮಾಡಿ ಮತ್ತೆ ಕುಮಾರನಂ ದಿವ್ಯಶಯ್ಯಾತಳದೊಳ್ ಸುಖದಿನಿರಿಸಿ ಅನಂಗಸುಂದರಿಯೆಂಬ ವಿದ್ಯಾಧರಿಯುನಾಡಪೇಳ್ದು ನಾಟಕಮನಭಿನಯಿಸುತ್ತುಂ ಕುಮಾರನ ಮುಂದೆ ವಿನಯಾನ್ವಿತೆಯಾಗಿರ್ದೊಳಂ ಕುಮಾರಂ ನೋಡಿ ಇಂತೆಂದಂ ನೀಮೆನಗೀದೃಗ್ವಿಧ ಮುಪ್ಪಕಾರಮನೇಕೆ ಗೆಯ್ದಪ್ಪಿರ್ ನೀಮೇನಾರ್ಗೆಂದು ಬೆಸಗೊಂಡೊಡಾಕೆಯಿಂತೆಂದಳ್ ಕೇಳ್ ಪೇಳ್ವೆಂ ಸ್ವಾಮಿ ವಿಜಯಾರ್ಧ ಪರ್ವತದೊಳ್ ಪ್ರಿಯಸಂಗಮ ಪುರಾಧಿಪತಿಯಪ್ಪ ಭಾನುವೇಗನೆಂಬ ವಿದ್ಯಾಧರಂಗೆ ಶ್ರೀಮಾಲೆ ಮೊದಲಾಗೊಡೆಯ ಮಹಾದೇವಿಯರೆಣ್ಬರವರ್ಗೆ ಪುಟ್ಟಿದೊರೀಯೆಣ್ಬರುಂ ಕನ್ನೆಯರ್ಕಳ್ ಲಕ್ಷ್ಮೀಮತಿ ಕನಕಕಾಂತೆ ಮಂದಾರಸೇನೆ ಅಳಕೆ ಅಲಂಭೂಷೆ ಹೇಮವತಿ ಹೇಮಮಾಳಿನಿ ವಿಜಯಾರ್ಧವತಿಯೆಂದೀ ಪೆಸರ್ಗಳನೊಡೆಯರೆಣ್ಬರುಂ ಮಕ್ಕಳನಾರ್ಗೆ ಕುಡುವಮೆಂದೊಂದು ದಿವಸಂ ನೈಮಿತ್ತಿಕನಂ ಭಾನುವೇಗಂ ಬೆಸಕೊಂಡೊಡಾತ ನಿಂತೆಂದಂ ಕ್ಷುಲ್ಲಕಮಾನಸಮೆಂಬ ಕೊಳದೊಳ್ ಸಿತಯಕ್ಷನೆಂಬ ದೇವನಂ ಸಂಗ್ರಾಮದೊಳಾವೊಂ ಗೆಲ್ದುಮಾತಂಗೆ ಕೂಸುಗಳಂ ಕುಡಿಮೆಂದು ಪೇಳ್ದನದಱಿಂ ನೀನೆಮ್ಮ ಸ್ವಾಮಿಯೆಂದು ಪೇಳ್ದವ

ಕೀರ್ತಿಶಾಲಿಯಾದ ಆತನಿಗೆ ಊಟ ಮುಂತಾದ ವ್ಯವಸ್ಥೆಯನ್ನು ಮಾಡು" ಎಂದು ಹೇಳಿದನು. ಆಕೆ "ಹಾಗೆಯೇ ಮಾಡುವೆನು" ಎಂದು ಹೇಳಿ ಪರಿವಾರದೊಡನೆ ಬಂದು ಅವನಿಗೆ ಸ್ನಾನ – ಭೋಜನ – ಅಲಂಕಾರಾದಿಗಳನ್ನು ಮಾಡಿದನಂತರ, ಕುಮಾರ ನನ್ನು ದಿವ್ಯವಾದ ಹಾಸಿಗೆಯ ಮೇಲೆ ಸುಖದಿಂದ ಇರುವಂತೆ ಮಾಡಿದಳು. ಅನಂಗ ಸುಂದರಿಯೆಂಬ ವಿದ್ಯಾಧರಿಯನ್ನು ನಾಟ್ಯವಾಡಲು ಹೇಳಿ, ನಾಟಕವನ್ನು ಅಭಿನಯಿ ಸುತ್ತ ಕುಮಾರನ ಮುಂದೆ ವಿನಯದಿಂದ ಕೂಡಿದವಳಾಗಿದ್ದಳು. ಅವಳನ್ನು ಕುಮಾರನು ನೋಡಿ– "ನೀವು ನನಗೆ ಈ ರೀತಿಯಾಗಿರುವ ಉಪಕಾರವನ್ನು ಯಾಕೆ ಮಾಡುತ್ತಿದ್ದೀರಿ ? ನೀವು ಯಾರು ? ಯಾರ ಸಂಬಂಧದವರು ?" ಎಂದು ಕೇಳಲು ಆಕೆ ಹೀಗೆಂದಳು– ಸ್ವಾಮಿಯೆ, ಕೇಳು ಹೇಳುತ್ತೇನೆ. ವಿಜಯಾರ್ಧ ಪರ್ವತ ದಲ್ಲಿ ಪ್ರಿಯಸಂಗಮನೆಂಬ ಪಟ್ಟಣದ ಒಡೆಯನಾದ ಭಾನುವೇಗನೆಂಬ ವಿದ್ಯಾಧರನಿಗೆ ಶ್ರೀಮಾಲೆ ಮೊದಲಾಗುಳ್ಳ ಎಂಟು ಮಂದಿ ರಾಣಿಯರು. ಅವರಿಗೆ ಹುಟ್ಟಿದ ಲಕ್ಷ್ಮೀ ಮತಿ, ಕನಕಕಾಂತೆ, ಮಂದಾರಸೇನೆ, ಅಳಕೆ, ಅಲಂಭೂಷೆ, ಹೇಮವತಿ, ಹೇಮಮಾಳಿನಿ, ವಿಜಯಾರ್ಧವತಿ– ಎಂದು ಹೆಸರುಳ್ಳ ಎಂಟು ಮಂದಿ ಕನ್ಯೆಯರನ್ನು ಯಾರಿಗೆ ಕೊಡೋಣ ? ಎಂದು ಭಾನುವೇಗನು ಒಂದು ದಿನ ಜೋಯಿಸನನ್ನು ಕೇಳಲು ಆತನು "ಕ್ಷುಲ್ಲಕಮಾನಸವೆಂಬ ಸರೋವರದಲ್ಲಿ ಸಿತಯಕ್ಷನೆಂಬ ವ್ಯಂತರದೇವನನ್ನು ಯಾವನು ಯುದ್ಧದಲ್ಲಿ ಗೆಲ್ಲುವನೋ ಅವನಿಗೆ ಹೆಣ್ಣುಮಕ್ಕಳನ್ನು ಕೊಡಿ" ಎಂದು ಹೇಳಿದನು.

ಸರದೊಳ್ ಮಹಾವಿಭೂತಿಯಿಂ ಬರ್ಪ ಖೇಚರೇಂದ್ರನಂ ತೋಱಿದೊಡೀತಂ ನಿಮ್ಮ ಮಾವನೆಂದಾಗಳ್ ಕುಮಾರನುಮಿದಿರೆೞ್ದು ತದ್ಯೋಗ್ಯಮಪ್ಪ ವಿನಯಮಂ ಗೆಯ್ದೊರ್ಡಂ ವಿದ್ಯಾಧರೇಂದ್ರಂ ಕುಮಾರನಂ ನೋಡಿ ತ್ರಿಭುವನಕ್ಕೆಲ್ಲಂ ತಿಳಕಮಾಗಿರ್ದ್ದಳಿಯನಂ ನಾನೆ ಪೆತ್ತೆನೆಂದಾದಮಾನುಂ ಸಂತುಷ್ಟಚಿತ್ತನಾಗಿ ಕುಮಾರನಂ ಕೊಂಡು ಪೋಗಿ ತನ್ನ ಪೊೞಲಂ ಪೊಕ್ಕಾ ದೆವಸದೊಳೆಣ್ಬರ್ ಕನ್ನೆಯರ್ಕಳಂ ಕೈನೀರೆಱೆದು ಕುಮಾರಂಗೆ ಕೊಟ್ಟಂ ಕುಮಾರನುಂ ದಿವ್ಯಾಂಗನೆಯರ್ಕಳೊಡನೆ ಸುಖದಿಂದೊಂದಿದನಾಗಳೊಂದು ವನದೇವತೆ ಬಂದು ಸುನಂದೆಯೆಂಬ ಕನ್ನೆಯ ದುಃಖಮಂ ಕಾಣಲಾಱದೆ ಕರುಣಿಸಿ ಕುಮಾರನನೆತ್ತಿಕೊಂಡು ಪೋಗಿ ಹರಿಕೂಟಮೆಂಬ ಪರ್ವತದ ಜ್ಯೋತಿರ್ವನದೊಳ್ ದಿವ್ಯಶಯ್ಯಾತಳಮಂ ವಿಗುರ್ವಿಸಿಯುದಱ ಮೇಗೆ ಕುಮಾರನನಿಟ್ಟು ಪೋದೊಡಾತನುಂ ಪ್ರಭಾತಸಮಯದೊಳೆೞ್ಚತ್ತು ದೆಸೆಗಳಂ ನೋೞ್ಪನ್ನಾ ವನಮುಮಂ ತನ್ನಿರ್ದ ಲತಾಮಂಟಪಮುಮಂ ನೋಡಿ ಎನಗಿದು ಮಹಾವಿಸ್ಮಯಂ ರಾತ್ರಿಯೊಳ್ ವಿವಾಹಕಲ್ಯಾಣಮೆನಗೆ ಸ್ವಪ್ನದೊಳಾದುದೊ ನಿರುತಮೊ ಎಂದು ಸಂದೇಹಚಿತ್ತನಾಗಿ ತನ್ನ ಕೈಯೊಳ್ ಕಟ್ಟಿದ ಕಂಕಣಮಂ ನೋಡಿ ಕಂಡು ಕುಮಾರನಿಂತೆಂದು ಬಗೆದಂ

ಆದುದರಿಂದ ನೀನು ನನಗೆ ಒಡೆಯನು – ಎಂದು ಹೇಳಿದಳು. ಅದೇ ಸಂದರ್ಭದಲ್ಲಿ ಬಹಳ ವೈಭವದಿಂದ ಬರುತ್ತಿದ್ದ ವಿದ್ಯಾಧರರಾಜನಾದ ಭಾನುವೇಗನನ್ನು ತೋರಿಸಿ, "ಈತನು ನಿನ್ನ ಮಾವ" ಎಂದು ಹೇಳಿದಳು. ಕುಮಾರನು ಆಗ ಇದಿರೆದ್ದು ಆತನಿಗೆ ಯೋಗ್ಯವೆನಿಸತಕ್ಕ ವಿನಯವನ್ನು ತೋರಿಸಿದನು. ಅಂತಹ ಸನತ್ಕುಮಾರನನ್ನು ವಿದ್ಯಾಧರರಾಜನು ನೋಡಿ, ಮೂರುಲೋಕಗಳಿಗೆಲ್ಲ ತಿಲಕದಂತೆ ಶ್ರೇಷ್ಠನಾಗಿರುವ ಅಳಿಯನನ್ನು ನಾನೇ ಪಡೆದಿದ್ದೇನೆ- ಎಂದು ಅತ್ಯಂತವಾಗಿ ಸಂತೋಷಪಟ್ಟನು. ಕುಮಾರನನ್ನು ಕರೆದುಕೊಂಡು ಹೋಗಿ ತನ್ನ ಪಟ್ಟಣವನ್ನು ಪ್ರವೇಶಿಸಿ ತನ್ನ ಎಂಟು ಮಂದಿ ಕನ್ನೆಯರನ್ನೂ ಕುಮಾರನಿಗೆ ಧಾರೆಯೆರೆದು ಕೊಟ್ಟನು. ಕುಮಾರನು ಆ ದಿವ್ಯ ಸ್ತ್ರೀಯರೊಂದಿಗೆ ಸುಖದಿಂದ ಕೂಡಿದನು. ಆಗ ಒಂದು ವನದೇವತೆ ಒಂದು ಸುನಂದೆ ಎಂಬ ಓರ್ವ ಕನ್ಯೆಯ ವ್ಯಸನವನ್ನು. ನೋಡಲಾರದೆ, ಆಕೆಯ ಮೇಲಿನ ಕರುಣೆಯಿಂದ ಕುಮಾರನನ್ನು ಎತ್ತಿಕೊಂಡು ಹೋಯಿತು. ಹರಿಕೂಟವೆಂಬ ಪರ್ವತದ ಜ್ಯೋತಿರ್ವನದಲ್ಲಿ ದಿವ್ಯವಾದ ಹಾಸಿಗೆಯನ್ನು ಮಾಯೆಯಿಂದ ಸೃಷ್ಟಿಸಿ, ಅದರಮೇಲೆ ಸನತ್ಕುಮಾರನನ್ನು ಇಟ್ಟು ತೆರಳಿತು. ಕುಮಾರನು ಪ್ರಾತಃಕಾಲದಲ್ಲಿ ಎಚ್ಚರಗೊಂಡು ದಿಕ್ಕುಗಳನ್ನು ನೋಡುತ್ತಿದ್ದನು. ಆ ಕಾಡನ್ನೂ ತಾನು ಇದ್ದ ಬಳ್ಳಿಮಂಟಪವನ್ನೂ ನೋಡಿ, "ನನಗೆ ಇದು ಬಹಳ ಆಶ್ಚರ್ಯ. ನನಗೆ ರಾತ್ರಿಯಲ್ಲಿ ಆದ ಮದುವೆ ಕನಸಿನಲ್ಲಿ ಆಯಿತೊ! ಅಥವಾ ನಿಜವಾಗಿ ಆಯಿತೋ ?" ಎಂದು ಮನಸ್ಸಿನಲ್ಲಿ ಸಂಶಯಪಟ್ಟನು. ತನ್ನ ಕೈಯಲ್ಲಿ ಕಟ್ಟಿದ ಕಂಕಣವನ್ನು ನೋಡಿ, ಕುಮಾರನು ಹೀಗೆ ಭಾವಿಸಿದನು.

ಶ್ಲೋಕ ॥ ಭವಿತವ್ಯಂ ಭವತ್ಯೇವ ಕರ್ಮಣಾಮೇಷ ನಿಶ್ಚಯಃ
ವಿಪತ್ತೌ ಕಿಂ ವಿಷಾದೇನ ಸಂಪತ್ತೌ ವಿಸ್ಮಯೇನ ಕಿಂ ॥

ಎಂದಿಂತು ವಸ್ತುಸ್ವರೂಪಮಂ ಕುಮಾರಂ ಬಗೆಯುತ್ತಿರ್ಪಿನೆಗಂ ದೂರಾಂತರದೊಳ್ ಸಂಛನ್ನಮಾಗುತ್ತಿರ್ದ್ದ ವನದೊಳಿರ್ದ ಕನ್ನೆಯಿಂತೆಂದು ಪುಯ್ಯಲಿಟ್ಟಳ್ ಸಾಕೇತಪುರಾಧಿಪತಿಯಪ್ಪ ಸುರಥನೆಂಬರಸಂಗಂ ಚಂದ್ರಯಶಿಯೆಂಬ ಮಹಾದೇವಿಗಂ ಪುಟ್ಟಿದೆನ್ ಸನತ್ಕುಮಾರನ ಭಾರ್ಯೆಯೆನ್ ಸುನಂದೆಯೆನೆಂಬೆನೆನ್ನನನ್ಯಾಯದಿಂ ವಜ್ರವೇಗನೆಂಬ ವಿದ್ಯಾಧರಂ ತಂದಂ ಕಿನ್ನರ ಕಿಂಪುರುಷ ಗರುಡಗಂಧರ್ವ ಯಕ್ಷರಾಕ್ಷಸಾದಿ ದೇವರ್ಕಳಿರಾ ವಿದ್ಯಾಧರರ್ಕ್ಕಳಿರಾ ಶರಣಾಗಿ ಮಾರಪ್ಪೊಡಮೆನ್ನಂ ರಕ್ಷಿಸಿಮೆಂಬ ಕಾರುಣ್ಯಸ್ವರಮಂ ಕೇಳ್ದಾಶ್ಚರ್ಯಮನದೊನಾಗಿ ದೆಸೆಯಂ ನೋಡಿ ಸಲ್ವೊಂ ಸ್ಫಟಿಕಮಯಮಪ್ಪ ಶಿಲಾಗೃಹದ ಕೆಲಗಿರ್ದ್ದ ಯಕ್ಷಕನ್ನೆಯುಂ ಕಂಡು ನೀನಾರ್ಗ್ಗೇನೆಂಬೆಯಾ ಸನತ್ಕುಮಾರನೆಂಬೊನಾರ್ಗ್ಗೆಂದು ಕುಮಾರಂ ಬೆಸಗೊಂಡೊಡಾಕೆ ಯಿಂತೆಂದು ಪೇಟ್ದಳ್ ಅಯೋಧ್ಯಾಪುರಮನಾಳ್ವೊಂ ಸುರಥನೆಂಬೊನರಸನಾತನ ಮಹಾದೇವಿ ಚಂದ್ರಯಶಿಯೆಂಬೊಳಾಯಿರ್ವರ್ಗ್ಗಂ ಪುಟ್ಟಿದೆಂ ಸುನಂದೆಯೆಂಬೆಂ ಸನತ್ಕುಮಾರಂಗೆ ಗರ್ಭ

[ಆಗಬೇಕಾದ್ದು ಆಗಿಯೇ ಆಗುತ್ತದೆ. ಕರ್ಮಗಳ ವಿಷಯದಲ್ಲಿ ಇದು ನಿಶ್ಚಯ. ವಿಪತ್ತು ಬಂದಾಗ ದುಃಖಿಸಿ ಪ್ರಯೋಜನವೇನು ? ಸಂಪತ್ತು ಬಂದಾಗ ಆಶ್ಚರ್ಯಪಡುವುದರಿಂದ ಉಪಯೋಗವೇನು ? ] ಈ ರೀತಿಯಾಗಿ ಕುಮಾರನು ನಿಜಸಂಗತಿಯನ್ನು ಯೋಚಿಸುತ್ತ ಇರುತ್ತಿರಲು, ದೂರವಾದ ಪ್ರದೇಶದಲ್ಲಿ ದಟ್ಟವಾಗುತ್ತಿದ್ದ ಕಾಡಿನಲ್ಲಿ ಕನ್ಯೆ ಈ ರೀತಿಯಾಗಿ ಮೊರೆಯಿಟ್ಟಳು— “ಸಾಕೇತ ಪಟ್ಟಣದ ಒಡೆಯನಾದ ಸುರಥನೆಂಬ ರಾಜನಿಗೂ ಚಂದ್ರಯಶಿಯೆಂಬ ರಾಣಿಗೂ ನಾನು ಮಗಳಾಗಿ ಜನಿಸಿದೆನು. ನಾನು ಸನತ್ಕುಮಾರನ ಹೆಂಡತಿಯಾಗಿರುವೆನು. ಸುನಂದೆ ಎಂಬವಳಾಗಿರುವೆನು. ವಜ್ರವೇಗನೆಂಬ ವಿದ್ಯಾಧರನು ನನ್ನನ್ನು ಅನ್ಯಾಯದಿಂದ ನನ್ನನ್ನು ತಂದಿದ್ದಾನೆ. ಕಿನ್ನರ ಕಿಂಪುರುಷ ಗರುಡ ಗಂಧರ್ವ ಯಕ್ಷ ರಾಕ್ಷಸರೇ, ದೇವತೆಗಳೇ, ವಿದ್ಯಾಧರರೇ, ನನಗೆ ಆಶ್ರಯವನ್ನು ಕೊಡಿ. ಯಾರಾದರೂ ನನ್ನನ್ನು ರಕ್ಷಿಸಿರಿ”. ಹೀಗೆನ್ನುತಕ್ಕ ಆರ್ತಧ್ವನಿಯನ್ನು ಕೇಳಿ ಕುಮಾರನು ಮನಸ್ಸಿನಲ್ಲಿ ಆಶ್ಚರ್ಯವನ್ನು ತಾಳಿದನು. ದಿಕ್ಕುಗಳನ್ನು ನೋಡುತ್ತ ಇದ್ದನು. ಬಿಳಿಕಲ್ಲಿನಿಂದ ಕೂಡಿದ ಕಲ್ಲುಮನೆಯ ಕೆಳಗೆ ಇದ್ದ ಯಕ್ಷಕನ್ಯೆಯನ್ನು ಕಂಡು “ನೀನು ಯಾರು ? ಏನು ಹೇಳುತ್ತಿರುವೆ ? ಆ ಸನತ್ಕುಮಾರನೆಂಬುವನು ಯಾರು ?” ಎಂದು ಕುಮಾರನು ಕೇಳಲು ಆಕೆ ಹೀಗೆ ನುಡಿದಳು— “ಅಯೋಧ್ಯಾ ಪಟ್ಟಣವನ್ನು ಆಳತಕ್ಕ ರಾಜನು ಸುರಥನೆಂಬುವನು. ಅವನ ರಾಣಿ ಚಂದ್ರಯಶಿಯೆಂಬುವಳು, ಆ ಇಬ್ಬರಿಗೆ ಹುಟ್ಟಿದ ಸುನಂದೆ ಎಂಬಾಕೆ ನಾನು. ನಾನು ಗರ್ಭ

ದೊಳಿರ್ದಂತೆ ನಿವೇದಿಸೆಪಟ್ಟೆನೆನ್ನಂ ಮದನೋದ್ಯಾನದೊಳುಯ್ಯಲಾಡುತ್ತಿರ್ದೊಳೆಂ ಭೌಮ ವಿಹಾರಾರ್ಥಂ ಬಂದು ವಜ್ರವೇಗನೆಂಬ ವಿದ್ಯಾಧರಂ ಕಂಡೆನ್ನನೆತ್ತಿಕೊಂಡು ಪುಯ್ಯಲಿಡೆಯಿಡೆ ಬಂದನಿಂದಿಂಗೇೞು ದಿವಸಮುಂಟು ಮತ್ತಾ ಸನತ್ಕುಮಾರನೆಂಬೊಂ ಹಸ್ತಿನಾಪುರವನಾಳ್ವೊಂ ವಿಶ್ವಸೇನ ಮಹಾರಾಜನೆಂಬೊನರಸನಾತನ ಮಹಾದೇವಿ ಸಹದೇವಿಯೆಂಬೊಳಾಯಿರ್ವರ್ಗ್ಗಂ ಪುಟ್ಟಿದಂ ಸನತ್ಕುಮಾರನೆಂಬೊನೆಂದು ಪೇೞ್ದೊಡೆ ಕುಮಾರನೆಂದನಾತನಂ ಕಂಡೊಡೇನಱಿವೋ ಎಂದು ಬೆಸಗೊಂಡೊಡೆ ಸುನಂದೆಯಿಂತೆಂದಳ್ ಎನ್ನ ತಂದೆ ವಿಶ್ವಸೇನಮಹಾರಾಜನೊಳಪ್ಪ ಮಿತ್ರಸಂಬಂಧದಿನೊಂದು ದಿವಸಂ ಹಸ್ತಿನಾಪುರಕ್ಕೆ ಪೋಗಿ ಕುಮಾರನಂ ಕಂಡಾತನ ರೂಪಂ ಪಟದೊಳ್ ಬರೆದು ತಂದಾ ರೂಪನೆಲ್ಲಾ ಪೊೞ್ತುಂ ನೋೞ್ಪೆನುಂ ಬರೆವೆನುಂ ಭಾವಿಸುತ್ತಿರ್ಪೆ ನಪ್ಪುದಱಿಂದಱಿವೆನಾ ರೂಪುಂ ನಿಮ್ಮನೆ ಪೋಲ್ಕುಮೆನೆಯುಂತಪ್ಪೊಡಾಂ ಸನತ್ಕುಮಾರನೆನಪ್ಪೆ ನೆಂದಾಗಳ್ ಹರ್ಷರೋಮಾಂಚ ಕಂಚುಕಿತೆ ವಿಕಸಿತವದನೆಯುಮಾಗಿಯಱಿಪ ಬಳ್ಳಿ ಕಾಲ್ತೊಡರ್ದ ತ್ತೆಂಬಂತೆವೊಲಾಯ್ತೆನ್ನ ಭಾಗ್ಯದಿಂದಂ ಸ್ವಾಮಿ ನೀಮಿಲ್ಲಿಗೆ ಬಂದಿರಾ ವಜ್ರವೇಗಂ ತನ್ನ ತಂಗೆಯನೆನಗೆ ಕಾಪಿಟ್ಟು ತನ್ನ ಪೊೞಲ್ಗೆ ನಿದ್ರೆಗೆಯ್ಯೆ ಪೋದನಾಕೆಯುಂ ಜಳಕ್ರೀಡೆಗೆ ಪೋದ

ದಲ್ಲಿದ್ದಾಗಲೇ ಸನತ್ಕುಮಾರನಿಗೆ ಅರ್ಪಿತಳಾಗಿದ್ದೇನೆ. ನಾನು ಮದನೋದ್ಯಾನದಲ್ಲಿ ಉಯ್ಯಾಲೆಯಾಡುತ್ತಿದ್ದಾಗ ವಜ್ರವೇಗನೆಂಬ ವಿದ್ಯಾಧರನು ಭೂಮಿಯಲ್ಲಿ ಸಂಚಾರ ಮಾಡುವುದಕ್ಕಾಗಿ ಬಂದು ನನ್ನನ್ನು ಕಂಡು ಎತ್ತಿಕೊಂಡನು. ನಾನು ಹುಯ್ಯಲಿಟ್ಟರೂ ಕೂಡ ಕೇಳದೆ ತೆಗೆದುಕೊಂಡು ಬಂದನು. ಇಂದಿಗೆ ಏಳು ದಿವಸಗಳಾಗಿವೆ. ಇನ್ನು ಆ ಸನತ್ಕುಮಾರನೆಂಬವನಾದರೋ, ಹಸ್ತಿನಾಪುರವನ್ನು ಆಳತಕ್ಕ ಮಹಾರಾಜ ವಿಶ್ವಸೇನ ನೆಂಬವನಿದ್ದನು. ಅವನ ಮಹಾರಾಣಿ ಸಹದೇವಿಯೆಂಬುವಳು. ಆ ಇಬ್ಬರಿಗೆ ಜನಿಸಿ ದವನು ಸನತ್ಕುಮಾರನೆಂಬುವನು" ಎಂದು ಹೇಳಿದಳು. ಆಗ ಕುಮಾರನು "ಅವನನ್ನು ಕಂಡರೆ ನಿನಗೆ ಗೊತ್ತಾಗುವುದೇ ?" ಎಂದು ಕೇಳಲು, ಸುನಂದೆ ಹೀಗೆಂದಳು–"ನನ್ನ ತಂದೆಯಾದ ಸುರಥನು ವಿಶ್ವಸೇನ ಮಹಾರಾಜನಲ್ಲಿದ್ದ ಸ್ನೇಹ ಸಂಬಂಧದಿಂದ ಒಂದು ದಿವಸ ಹಸ್ತಿನಾಪುರಕ್ಕೆ ಹೋಗಿ ಕುಮಾರನನ್ನು ಕಂಡು ಅವನ ರೂಪವನ್ನು ಪಟದಲ್ಲಿ (ಬಟ್ಟೆಯಲ್ಲಿ) ಬರೆದು ತಂದನು. ಆ ರೂಪವನ್ನು ನಾನು ಎಲ್ಲ ಹೊತ್ತಿನಲ್ಲಿಯೂ ನೋಡುತ್ತಿರುವೆನು, ಬರೆಯುತ್ತಿರುವೆನು, ಭಾವಿಸುತ್ತಿರುವೆನು–ಆದುದರಿಂದ ಬಲ್ಲೆನು. ಆ ರೂಪವು ನಿಮ್ಮನ್ನೇ ಹೋಲುತ್ತಿದೆ". ಸುನಂದೆ ಹೀಗೆ ಹೇಳಿದಾಗ ಕುಮಾರನು "ಹಾಗಾದರೆ ನಾನು ಸನತ್ಕುಮಾರನೇ ಆಗಿರುವೆನು" ಎಂದನು. ಸುನಂದೆ ಆಗ ಸಂತೋಷದ ರೋಮಾಂಚವೆಂಬ ರವಿಕೆಯುಳ್ಳವಳೂ ಅರಳಿದ ಮುಖವುಳ್ಳವಳೂ ಆಗಿ "ಹುಡುಕುವ ಬಳ್ಳಿ ಕಾಲಿಗೆ ತೊಡರಿತು (ಸಿಕ್ಕಿಕೊಂಡಿತು) ಎಂಬ ಹಾಗೆ ಆಯಿತು. ಸ್ವಾಮೀ, ನೀವು ನನ್ನ ಪುಣ್ಯದಿಂದ ಇಲ್ಲಿಗೆ ಬಂದಿದ್ದೀರಿ. ಆ ವಜ್ರವೇಗನು ತನ್ನ ತಂಗಿ ಯನ್ನು ನನಗೆ ಕಾವಲಿಟ್ಟು, ನಿದ್ದೆ ಮಾಡಲು ತನ್ನ ಪಟ್ಟಣಕ್ಕೆ ಹೋಗಿದ್ದಾನೆ. ಆಕೆ

ಳವಳ್ ಬಾರದನ್ನೆಗಂ ಬೇಗಂ ಪೋಪಮೆನೆ ಕುಮಾರನಿಂತೆಂದನಂಜದಿರ್ ನಿನ್ನ ತಂದೊನನಮೋಘಂ ಮೃತ್ಯುಮುಖಕ್ಕಯ್ದೊಡಲ್ಲದೆ ಪೋಗೆನೆನೆ ಭಯದಿಂದಂ ನಡುಗಿ ಇಂತೆಂದಳಾತನಾಕಾಶಗಾಮಿ ನೀಮೆಂತು ಕೊಲ್ವಿರೆನೆ ಕುಮಾರಂ ನಕ್ಕಿಂತೆಂದಂ ಆಕಾಶಗಾಮಿಯುಪ್ಪ ಕಾಗೆಯುಮೇಂ ಕೊಲ್ವದರಿದೆ ಎಂದು ನುಡಿಯುತ್ತಿರ್ಪನ್ನೆಗಂ ವಜ್ರವೇಗನ ಬರವಂ ಕಂಡಾ ಕನ್ನೆಯಂಜಿ ಪ್ರಾಸಾದದೊಳಗೆ ಪೋಗಿ ಪೊಕ್ಕಿರ್ದಳ್ ಖೇಚರನುಂ ಕುಮಾರನಂ ಕಂಡು ಪುರುಡಿಂ ಮುಳಿಸು ಪೆರ್ಚಿಯೆನ್ನ ಪೆಂಡತಿಯೊಡನೆ ನುಡಿಯುತ್ತಿರ್ದ್ದನನಮೋಘಂ ಕೊಲ್ವೆನೆಂದು ಕಿೞ್ತು ಬಾಳ್ವೆರಸು ಬಂದೆಱಗಿ ಇಱಿದಾತನೇಱಂ ಬಂಚಿಸಿ ಸಿಂಹಲಂಘನದಿಂ ಮೇಗೆನೆಗೆದು ವಜ್ರಸಮಾನಮಪ್ಪ ಕೈಯಿಂದಂ ಕುಮಾರನಾತನ ತೆಗಲೆಯುಂ ತಿವಿದೊಡಾತನಲ್ಲಿ ತನ್ನ ವಿದ್ಯಾಧರಕರಣಮಂ ತೋರ್ಪ್ಪಂಬೊಲೆ ಮೇಗುಚ್ಚಳಿಸಿ ಬಿೞ್ದಾಗಡೆ ಮಡಿದಂ ಕುಮಾರನಿಂತೆಂದು ಬಗೆದನೊರ್ವಳೆ ಇರ್ದ ಸ್ತ್ರೀಯು ಪಕ್ಕದೆ ಸತ್ಪುರುಷಂಗಿರಲ್ ತಕ್ಕುದಲ್ಲೆಂದು ಮುನ್ನೆ ತನ್ನಿರ್ದ ಲತಾಮಂಟಪದೊಳ್ ಪೋಗಿರ್ದನನ್ನೆಗಮಿತ್ತ ವಜ್ರವೇಗನ ತಂಗೆ ಸಂಧ್ಯಾವಳಿಯೆಂಬೊಳ್ ಮಾನಸಸರೋವರದೊಳ್

ಜಲಕ್ರೀಡೆಗೆ ಹೋಗಿದ್ದಾಳೆ. ಅವಳು ಬರುವುದರೊಳಗಾಗಿ ಬೇಗನೆ ಹೋಗೋಣ" ಎಂದು ಹೇಳಿದಳು. ಆಗ ಕುಮಾರನು–"ಹೆದರಬೇಡ. ನಿನ್ನನ್ನು ತಂದವನನ್ನು ನಿಶ್ಚಯವಾಗಿಯೂ ಮೃತ್ಯುವಿನ ಬಾಯಿಗೆ ಒಯ್ಯದೆ ನಾನು ಹೋಗುವವನಲ್ಲ" ಎಂದನು. ಸುನಂದೆ ಆಗ ಹೆದರಿಕೆಯಿಂದ ನಡುಗಿ "ಆತನು ಆಕಾಶದಲ್ಲಿ ಹೋಗಬಲ್ಲವನು, ಅವನನ್ನು ನೀವು ಹೇಗೆ ಕೊಲ್ಲುವಿರಿ" ಎಂದು ಕೇಳಿದಳು. ಕುಮಾರನು ನಕ್ಕು ಇಂತೆಂದನು–"ಆಕಾಶದಲ್ಲಿ ಹೋಗುವ ಕಾಗೆಯನ್ನು ಕೊಲ್ಲುವುದು ಅಸಾಧ್ಯವೆ ?" ಹೀಗೆ ಮಾತಾಡುತ್ತಿರುವಾಗ ವಜ್ರವೇಗನು ಬರುವುದನ್ನು ಆ ಕನ್ಯೆ ಕಂಡು ಹೆದರಿ ಮಹಾಭವನದೊಳಗೆ ಹೋಗಿ ಹೊಕ್ಕು ಇದ್ದಳು. ವಜ್ರವೇಗನು ಕುಮಾರನನ್ನು ಕಂಡು ಹೊಟ್ಟೆಕಿಚ್ಚಿನಿಂದ ಕೋಪ ಹೆಚ್ಚಾಗಿ "ನನ್ನ ಹೆಂಡತಿಯೊಡನೆ ಮಾತಾಡುತ್ತಿದ್ದವನನ್ನು ನಿಶ್ಚಯವಾಗಿ ಕೊಲ್ಲುವೆನು" ಎಂದು ಹಿರಿದ ಖಡ್ಗದೊಂದಿಗೆ ಬಂದು ಮೇಲೆ ಬಿದ್ದು ಹೊಡೆದನು. ಹಾಗೆ ಹೊಡೆದವನ ಏಟನ್ನು ತಪ್ಪಿಸಿಕೊಂಡು ಕುಮಾರನು ಸಿಂಹವು ಹಾರುವಂತೆ ಮೇಲಕ್ಕೆ ಹಾರಿ ವಜ್ರಾಯುಧಕ್ಕೆ ಸಮಾನವಾದ ತನ್ನ ಕೈಯಿಂದ ಅವನ ಎದೆಯನ್ನು ತಿವಿದನು. ಆಗ ವಜ್ರವೇಗನು ತನ್ನ ವಿದ್ಯಾಧರ ಕಾರ್ಯವನ್ನು ತೋರಿಸುತ್ತಾನೋ ಎಂಬಂತೆ ಮೇಲಕ್ಕೆ ನೆಗೆದು ಬಿದ್ದು ಆ ಕ್ಷಣವೇ ಸತ್ತುಹೋದನು. ಕುಮಾರನು "ಏಕಾಂಗಿಯಾಗಿ ಇದ್ದ ಹೆಂಗುಸಿನ ಬಳಿಯಲ್ಲಿ ಸತ್ಪುರುಷನು ಇರುವುದು ಯೋಗ್ಯವಲ್ಲ" ಎಂದು ಈ ರೀತಿಯಾಗಿ ಯೋಚಿಸಿ, ತಾನು ಮೊದಲು ಇದ್ದ ಬಳ್ಳಿಮಂಟಪಕ್ಕೆ ಹೋಗಿ ಅಲ್ಲಿದ್ದನು. ಅಷ್ಟರಲ್ಲಿ ಇತ್ತ ವಜ್ರವೇಗನ ತಂಗಿಯಾದ ಸಂಧ್ಯಾವಳಿಯೆಂಬುವಳು ಮಾನಸ ಸರೋವರಕ್ಕೆ ಜಲಕ್ರೀಡೆಯಾಡುವುದಕ್ಕಾಗಿ ಹೋಗಿದ್ದಳು.

ಜಲಕ್ರೀಡೆಯಾಡಿ ಬರ್ಪ್ಪೊಳನ್ನೆಗಂ ತಮ್ಮಣ್ಣಂ ಸತ್ತುದಂ ಕಂಡು ಮೂರ್ಛಾಗತೆಯಾಗಿ ಬಿೞ್ದು ನೀಡಱಿಂದೆೞ್ಚೆತ್ತು ಕ್ರೋಧಾಗ್ನಿ ಪೆರ್ಚೆ ಎಮ್ಮಣ್ಣನಂ ಕೊಂದ ದುರಾತ್ಮನಂ ಪಾತಾಳಮಂ ಪೊಕ್ಕಿರ್ದನಪ್ಪೊಡಮಱಿಸಿ ಕೊಲ್ವೆನಮೋಘಮೆಂದು ಭಯಂಕರ ರೂಪಂ ಕೈಕೊಂಡು ದೆಸೆಗಳಂ ನೋೞ್ಪಳನ್ನೆಗಮಾರುಮಂ ಕಾಣದೆ ಸುನಂದೆಯುಂಬೆ ಸಗೊಂಡೊಡಾಕೆಯಿಂತೆಂದಳ್ ದುಷ್ಟ ನಿಗ್ರಹ ಶಿಷ್ಟಪ್ರತಿಪಾಲನ ಸ್ವರೂಪದಿಂ ಪೃಥ್ವಿಯುಂ ರಕ್ಷಿಸುವ ಸ್ವಾಮಿ ಚೋರ ಜಾರ ಪಾದರಿಗರ್ಕಳಂ ಕೊಲ್ಲದಿರ್ಕುಮೆ ಎಂದೊಡಾತನಾವೊನೆಲ್ಲಿದೊಂ ತೋಱೆಂದು ಬೆಸಗೊಂಡೊಡೆ ಸುನಂದೆಯುಂ ಪೋಗಿ ಕುಮಾರನಂ ತೋಱಿದೊಡಾಕೆಯುಮಸಿಖೇಟಕಹಸ್ತೆಯಾಗಿ ವಿಭೀಷಣಮಪ್ಪ ರೂಪುಮಂ ವಿಗುರ್ವಿಸಿ ಕೊಲ್ವೆನೆಂದು ಸಾರ್ದಾಗಳ್ ಕುಮಾರಂ ಸೌಷ್ಠವದೊಳಿರ್ದ್ದೊನಂ ನೋಡಿ ಕ್ರೋಧಂಗೆಟ್ಟು ಸ್ನೇಹಂ ಪೆರ್ಚೆ ಕಾಮಶರಂಗಳಿಂ ಸ್ಮರವಶಹೃದಯೆಯಾಗಿ ಇಂತೆಂದು ತನ್ನೊಳ್ ಬಗೆದೊಳೆಮ್ಮಣ್ಣಂ ತನ್ನ ದೋಷದಿಂ ಸತ್ತೊನೀತಂಗೇನುಂ ದೋಷಮಿಲ್ಲೆಂದು ವಿಕಾರಮಪ್ಪ ರೂಪಮನುಪಸಂಹರಿಸಿ ತನ್ನ ಮುನ್ನಿನ ಸ್ವಾಭಾವಿಕಮಪ್ಪ ರೂಪಂ ಕೈಕೊಂಡು ತಮ್ಮಣ್ಣನಂ ಸಂಸ್ಕರಿಸಿ ನೀರಿೞಿದು ತದ್ವಿರಹಾನಳನಿಂ ಬೆಂದು ಕರಗಿ ಕೊರಗಿ ಬಸಮೞಿದಿರ್ದ್ದ ಮೆಯ್ಯನೊಡೆ

ಜಲಕ್ರೀಡೆ ಮುಗಿಸಿ ಬರುತ್ತ, ತನ್ನ ಅಣ್ಣನು ಸತ್ತುದನ್ನು ಕಂಡು ಮೂರ್ಛೆಹೋಗಿ ಬಿದ್ದಳು. ಬಹಳ ಹೊತ್ತಿನ ನಂತರ ಎಚ್ಚೆತ್ತಳು. ಸಿಟ್ಟಿನ ಬೆಂಕಿ ಹೆಚ್ಚಾಗಿ–"ನನ್ನ ಅಣ್ಣನನ್ನು ಕೊಂದ ದುಷ್ಟನನ್ನು, ಆತನು ಪಾತಾಳವನ್ನು ಹೊಕ್ಕಿದವನಾದರೂ ವ್ಯರ್ಥವಾಗದಂತೆ ಹುಡುಕಿ ಕೊಂದು ಬಿಡುವೆನು" ಎಂದು ಭೀಕರವಾದ ರೂಪವನ್ನು ತಾಳಿದಳು. ದಿಕ್ಕುಗಳ ಕಡೆಗೆ ನೋಡಿದಳು. ಆ ಸಂದರ್ಭದಲ್ಲಿ ಯಾರನ್ನೂ ಕಾಣದೆ ಸುನಂದೆಯನ್ನು ಕೇಳಿದಾಗ ಅವಳು ಹೀಗೆಂದಳು–"ಕೆಟ್ಟವರನ್ನು ನಾಶಮಾಡುವ ಮತ್ತು ಸತ್ಪುರುಷರನ್ನು ರಕ್ಷಣೆ ಮಾಡುವ ಸ್ವರೂಪದಿಂದ ಲೋಕವನ್ನು ಕಾಪಾಡತಕ್ಕ ಪ್ರಭುವು ಕಳ್ಳರನ್ನೂ ಜಾರರನ್ನೂ ಹಾದರಿಗರನ್ನೂ ಕೊಲ್ಲದಿರುವನೆ ?" ಎಂದು ಹೇಳಿದಾಗ "ಆತನು ಯಾವನು ? ಎಲ್ಲಿದ್ದಾನೆ ? ತೋರಿಸು" ಎಂದು ಕೇಳಿದಳು. ಸುನಂದೆ ಹೋಗಿ ಸನತ್ಕುಮಾರನನ್ನು ತೋರಿಸಿದಳು. ಆಗ ಸುಧ್ಯಾವಳಿ ಕತ್ತಿ ಗುರಾಣಿಗಳನ್ನು ಹಿಡಿದುಕೊಂಡು ಮಾಯೆಯಿಂದ ಭಯಂಕರವಾದ ರೂಪವನ್ನು ತಾಳಿ "ಕೊಲ್ಲುತ್ತೇನೆ" ಎಂದು ಸಮೀಪಕ್ಕೆ ಬಂದಳು. ಸುಂದರವಾದ ರೂಪದಲ್ಲಿದ್ದ ಕುಮಾರನನ್ನು ನೋಡಿ, ಕೋಪವನ್ನು ಬಿಟ್ಟು ಪ್ರೀತಿ ಹೆಚ್ಚಾಗಿ ಕಾಮನ ಬಾಣಗಳಿಂದ ಮನ್ಮಥನಿಗೆ ಅಧೀನವಾದ ಮನಸ್ಸುಳ್ಳವಳಾಗಿ ತನ್ನಲ್ಲಿಯೇ ಹೀಗೆ ಯೋಚಿಸಿದಳು. "ನನ್ನ ಅಣ್ಣನು ತನ್ನ ದೋಷದಿಂದ ಸತ್ತನು. ಈತನಿಗೆ ಏನೂ ದೋಷವಿಲ್ಲ"–ಎಂದುಕೊಂಡು ತನ್ನ ವಿಕಾರವಾದ ರೂಪವನ್ನು ಕೊನೆಗಾಣಿಸಿ, ಹಿಂದಿನ ನೈಜವಾದ ರೂಪವನ್ನು ತಾಳಿಕೊಂಡು. ತನ್ನ ಅಣ್ಣನಿಗೆ ತಕ್ಕ ಶವಸಂಸ್ಕಾರವನ್ನು ಮಾಡಿ, ಸ್ನಾನಮಾಡಿ, ಕುಮಾರನ ವಿರಹದ ಬೆಂಕಿಯಿಂದ ಬೆಂದು ಕರಗಿ ಕೊರಗಿ ಶಕ್ತಿಕುಂದಿಹೋದ ಶರೀರವುಳ್ಳವಳಾಗಿ ಸುನಂದೆಯು

ಯೊಳ್ ಬಂದು ಸುನಂದೆಗಿಂತೆಂದಳ್ ನಿನ್ನ ಪ್ರಸಾದದಿಂ ಬಾೞ್ವೆಂ ನೀನೆನಗೆ ಸೋದರಮುಂ ಕಲ್ಯಾಣ ಮಿತ್ರೆಯುಮಪ್ಪುದಱಿಂ ನೀನೀ ಕುಮಾರಂಗೆ ಪೋಗಿ ಇಂತೆಂದು ಪೇೞು ವಿಜಯಾರ್ಧ ಪರ್ವತದೊಳಗ್ರಮಂದಿರ ಪುರಾಧಿಪತಿಯಪ್ಪಶನಿವೇಗನೆಂಬ ವಿದ್ಯಾಧರಂಗಂ ವಿದ್ಯುತ್ಪ್ರಭೆಯೆಂಬ ಮಹಾದೇವಿಗಂ ಮಗಳ್ ಸಂಧ್ಯಾವಳಿಯೆಂಬೊಳ್ ನೀಮೆ ಶರಣೆಂದಿರ್ದೊಳಾಕೆಯುಂ ನೀಮ ಮೋಘಂ ಕೈಕೊಳಲ್ವೇೞ್ಕುಮೆಂದಿಂತು ನುಡಿಯೆಂದು ಕಲ್ಪಿಸಿಯಟ್ಟಿದೊಡಾಕೆಯುಂ ಕುಮಾರಂಗೆ ತದ್ವೃತ್ತಾಂತಮೆಲ್ಲಮಂ ಪೇೞ್ದೊಡಾತನುಂ ಪಿತೃಮಾತೃಗಳೀಯದ ಸ್ತ್ರೀಯರಂ ಕೈಕೊಳ್ವುದೆನಗಯೋಗ್ಯಮೆಂದು ಮಱುಮಾತುಗೊಟ್ಟೊಡೆ ಸುನಂದೆಯೆಂಬೊಳ್ ಮಿತ್ರಸಂಬಂಧಿಗಳಪ್ಪ ಜನಂಗಳ್ ಮುಂತಿಟ್ಟುಕುಡೆ ಕೊಳಲ್ ತಕ್ಕುದೆಂದು ನುಡಿದೊಡಂಬಡಿಸಿ ದಿವ್ಯದೇವತೆಗಳನೆ ಬಾಂಧವಜನಮಾಗೊಡೆಯುಳಂ ಮಹಾವಿಭೂತಿಯಿಂದಂ ಪಾಣಿಗ್ರಹಣ ಪುರಸ್ಸರಂ ಸಂಧ್ಯಾವಳಿಯುಂ ಕುಮಾರಂಗೆ ಕೊಟ್ಟಳ್ ಸಂಧ್ಯಾವಳಿಯುಂ ಸುನಂದೆಯುಂ ಕುಮಾರಂಗೆ ಕೊಟ್ಟಳಿಂ ತನ್ನೊನ್ಯ ಸಂಬಂಧದಿಂ ಗಾಂಧರ್ವ ವಿವಾಹದಿಂ ಕಲ್ಯಾಣದೊಳ್ ಕೂಡಿ ಸುಖದಿಂದಿರ್ಪೋರ್ ಅನ್ನೆಗಮಿತ್ತಶನಿವೇಗಂ ತನ್ನ ಮಗಂ ಪಿರಿದು ಪೊೞ್ತು ಪೋಗಿ ತಡೆದನೆಂದು ಮಗನವಸ್ಥೆಯ

ಬಳಿಗೆ ಬಂದು ಹೀಗೆಂದಳು–"ನಿನ್ನ ಅನುಗ್ರಹವಿದ್ದರೆ ಮಾತ್ರ ಬದುಕುವೆನು. ನೀನು ನನಗೆ ಸಹೋದರಿಯೂ ಮಂಗಳಕರಳಾದ ಗೆಳತಿಯೂ ಆಗಿರುವೆ. ಆದುದರಿಂದ ನೀನು ಈ ಕುಮಾರನಲ್ಲಿಗೆ ಹೋಗಿ ಹೀಗೆ ಹೇಳು–ವಿಜಯಾರ್ಧ ಪರ್ವತದಲ್ಲಿರುವ ಅಗ್ರಮಂದಿರವೆಂಬ ಪಟ್ಟಣದ ಒಡೆಯನಾದ ಅಶನಿವೇಗನೆಂಬ ವಿದ್ಯಾಧರನಿಗೂ ವಿದ್ಯುತ್ಪ್ರಭೆಯೆಂಬ ಮಹಾರಾಣಿಗೂ ಮಗಳಾಗಿರುವ ಸಂಧ್ಯಾವಳಿ ಎಂಬವಳು ನೀವೇ ತನಗೆ ಆಶ್ರಯವೆಂದು ಇದ್ದಾಳೆ. ಅವಳನ್ನು ನೀವು ನಿಶ್ಚಯವಾಗಿಯೂ ಸ್ವೀಕರಿಸಬೇಕು–ಎಂದು ಈ ರೀತಿಯಾಗಿ ಹೇಳು"–ಹೀಗೆ ಹೇಳಿಕೊಟ್ಟು ಸುನಂದೆಯನ್ನು ಕಳುಹಿಸಿದಳು. ಸುನಂದೆ ಈ ಸಂಗತಿಯೆಲ್ಲವನ್ನೂ ಕುಮಾರನಿಗೆ ತಿಳಿಸಿದಳು. ಆದಕ್ಕೆ ಕುಮಾರನು–"ತಂದೆ ತಾಯಿಗಳು ಕೊಡದೆ ಇರತಕ್ಕ ಹೆಣ್ಣುಗಳನ್ನು ಸ್ವೀಕರಿಸುವುದು ನನಗೆ ಯೋಗ್ಯವಲ್ಲ" ಎಂದು ಪ್ರತ್ಯುತ್ತರ ಕೊಟ್ಟನು. ಆಗ ಸುನಂದೆ ಕುಮಾರನೊಡನೆ "ಮಿತ್ರಸಂಬಂಧವುಳ್ಳ ಜನರು ಮುಂದೆ ಇದ್ದುಕೊಂಡು ಹೆಣ್ಣನ್ನು ಕೊಟ್ಟರೆ ಸ್ವೀಕರಿಸಲು ಯೋಗ್ಯವಾಗುತ್ತದೆ" ಎಂದು ಹೇಳಿ, ಅವನನ್ನು ಒಪ್ಪುವಂತೆ ಮಾಡಿದಳು. ದೇವಲೋಕದ ದೇವತೆಗಳೇ ಬಂಧು ಜನವಾಗಿರತಕ್ಕ ಸಂಧ್ಯಾವಳಿಯನ್ನು ಬಹಳ ವೈಭವದಿಂದ ಪಾಣಿಗ್ರಹಣ ಕ್ರಮಪೂರ್ವಕವಾಗಿ ಕುಮಾರನಿಗೆ ಮದುವೆಮಾಡಿಕೊಟ್ಟಳು. ಸಂಧ್ಯಾವಳಿ ಸುನಂದೆಯನ್ನು ಕುಮಾರನಿಗೆ ಮದುವೆಮಾಡಿಕೊಟ್ಟಳು. ಹೀಗೆ ಪರಸ್ಪರ ಸಂಬಂಧದಿಂದ ಗಾಂಧರ್ವ ವಿವಾಹ ಕ್ರಮದಿಂದ ಅವರು ಮಂಗಳದಲ್ಲಿ ಕೂಡಿ ಸುಖದಿಂದ ಇದ್ದರು. ಆ ವೇಳೆಗೆ ಇತ್ತ ಅಶನಿವೇಗನು ತನ್ನ ಮಗನು ಹೋಗಿ ಬಹಳ ಹೊತ್ತು ತಡೆದನೆಂದು ಮಗನ ಸ್ಥಿತಿ

ನಱಿದು ಬಾಯೆಂದವಳೋಕಿನಿಯೆಂಬ ವಿದ್ಯೆಯನಾರಯ್ಯಲಟ್ಟಿದೊಡಾ ವಿದ್ಯೆಯುಂ ಪಾರಾವತ ರೂಪದಿಂದಾರೈದು ಪೋಪುದಂ ಸಂಧ್ಯಾವಳಿಯಱಿದಿಂತೆಂದು ತನ್ನ ಭರ್ತಾರಂಗೆ ಪೇೞ್ಗುಂ ಸ್ವಾಮಿ ಎನ್ನ ತಂದೆ ವಿದ್ಯಾಧರನಾದವಮಾನುಂ ಪ್ರಚಂಡ ಮಹಾಬಳ ಪರಾಕ್ರಮಂ ವಜ್ರವೇಗನ ಸಾವನಱಿದಮೋಘಂ ನಿಮ್ಮ ಮೇಲೆ ಬರ್ಕುಮದಱಿಂ ನೀಮೀ ಪ್ರಜ್ಞಪ್ತಿಯೆಂಬ ಮಹಾ ವಿದ್ಯೆಯುಮಂ ಕೊಳ್ಳಿಮೆನೆ ಕುಮಾರಂ ನಕ್ಕು ಪ್ರಹಸಿತವದನನಾಗಿ ಖೇಚರರೆಂಬೆರಲೆಗಳಂ ನಿಪಾತಿ ಸಲ್ಕೆನಗೆ ವಿದ್ಯೆಯುಂ ಬೇೞ್ಕುಮೆ ಎಂದೊಲ್ಲದಿರ್ದೊನ ಪಾದದ್ವಯಂಗಳ್ಗೆಱಗಿ ಪೊಡೆವಟ್ಟು ಮೋಘಂ ಕೊಳಲೆವೇೞ್ಕುಮೆಂದು ಬಲಾತ್ಕಾರದಿಂ ವಿದ್ಯೆಯುಂ ಕೊಟ್ಟೊಡಾ ಅವಸರದೊಳ್ ಮತ್ತಿತ್ತ ರಥನೂಪುರ ಚಕ್ರವಾಳ ಪುರಾಧಿಪತಿಯಪ್ಪ ಚಂದ್ರಯಶನೆಂಬ ವಿದ್ಯಾಧರಂಗಂ ವಿದ್ಯುದ್ವೇಗಿಯೆಂಬ ಮಹಾದೇವಿಗಮಂತಿರ್ವರ್ಗಂ ಪುಟ್ಟಿದರ್ ಚಂದ್ರವೇಗನುಂ ಭಾನುವೇಗನುಮೆಂಬರ್ ಮಕ್ಕಳಾಗಿ ಇಂತಿಷ್ಟವಿಷಯ ಕಾಮ ಭೋಗಂಗಳನನುಭವಿಸುತ್ತಿರೆ ಮತ್ತೊಂದು ದಿವಸಂ ನೃಪತಿಗೆ ಸಂಸಾರ ವೈರಾಗ್ಯಮಾಗಿ ಚಂದ್ರವೇಗನೆಂಬ ಪಿರಿಯ ಮಗಂಗೆ ರಾಜ್ಯ ಪಟ್ಟಂ ಗಟ್ಟಿ ಕಿಱಿಯಾತನಪ್ಪ ಭಾನುವೇಗಂಗೆ ಯುವರಾಜ ಪಟ್ಟಮಂ ಕಟ್ಟಿ ಗುಣಧರರೆಂಬ ಚಾರಣರಿಸಿಯರ

ಯೇನೆಂಬುದನ್ನು ವಿಚಾರಿಸಿ ತಿಳಿದುಬರುವಂತೆ ಅವಲೋಕಿನಿ ಎಂಬ ವಿದ್ಯೆಯನ್ನು ಕಳುಹಿಸಿದನು. ಆ ವಿದ್ಯೆ ಪಾರಿವಾಳರೂಪದಿಂದ ಬಂದು ವಿಚಾರಿಸಿ ಹೋಗುವುದನ್ನು ಸಂಧ್ಯಾವಳಿ ತಿಳಿದು ತನ್ನ ಗಂಡನಿಗೆ (ಸನತ್ಕುಮಾರನಿಗೆ) ಹೀಗೆಂದಳು- "ಸ್ವಾಮಿ, ನನ್ನ ತಂದೆ ಅಶನಿವೇಗ ವಿದ್ಯಾಧರನು ಅತ್ಯಂತ ಭಯಂಕರವಾದ ಮಹಾಶಕ್ತಿಸಾಮರ್ಥ್ಯವುಳ್ಳವನು. ಅವನು ವಜ್ರವೇಗನು ಸತ್ತುದನ್ನು ತಿಳಿದು ನಿಶ್ಚಯವಾಗಿಯೂ ನಿಮ್ಮ ಮೇಲೆ ದಂಡೆತ್ತಿ ಬರುವನು. ಆದುದರಿಂದ ನೀವು ಪ್ರಜ್ಞಪ್ತಿಯೆಂಬ ಈ ಮಹಾವಿದ್ಯೆಯನ್ನು ಸ್ವೀಕರಿಸಿಕೊಳ್ಳಿ" ಎಂದು ಹೇಳಿದಳು. ಆಗ ಕುಮಾರನು ನಕ್ಕು, ನಗೆಯಿಂದ ಕೂಡಿದ ಮುಖವುಳ್ಳವನಾಗಿ "ವಿದ್ಯಾಧರರೆಂಬ ಹುಲ್ಲೆ ಮರಿಗಳನ್ನು ಬೀಳಿಸುವುದಕ್ಕೆ ನನಗೆ ವಿದ್ಯೆಯೂ ಬೇಕೆ?" ಎಂದು ನಿರಾಕರಿಸಿದನು. ಸಂಧ್ಯಾವಳಿ ಅವನ ಎರಡೂ ಪಾದಗಳಿಗೆ ಬಿದ್ದು ಸಾಷ್ಟಾಂಗವಂದಿಸಿ ನಿಶ್ಚಯವಾಗಿಯೂ ಸ್ವೀಕರಿಸಲೇಬೇಕು ಎಂದು ಒತ್ತಾಯದಿಂದ ವಿದ್ಯೆಯನ್ನು ಆ ಸಂದರ್ಭದಲ್ಲಿ ಕೊಟ್ಟಳು. ಅನಂತರ ಇತ್ತ ರಥನೂಪುರ ಚಕ್ರವಾಳ ಎಂಬ ಪಟ್ಟಣದ ಒಡೆಯನಾದ ಚಂದ್ರಯಶನೆಂಬ ವಿದ್ಯಾಧರನಿಗೂ ವಿದ್ಯುದ್ವೇಗೆ ಎಂಬ ಮಹಾರಾಣಿಗೂ ಅಂತೂ ಇಬ್ಬರಿಗೂ ಚಂದ್ರವೇಗ ಭಾನುವೇಗ ಎಂಬಿಬ್ಬರು ಮಕ್ಕಳಾಗಿ ಜನಿಸಿದರು. ಹೀಗೆ ಇಷ್ಟವಿಷಯದ ಕಾಮಸುಖಗಳನ್ನು ಅನುಭವಿಸುತ್ತ ಇರಲು, ಆಮೇಲೆ ಒಂದಾನೊಂದು ದಿವಸ ರಾಜನಿಗೆ ಸಂಸಾರದಲ್ಲಿ ವೈರಾಗ್ಯವುಂಟಾಗಿ ಹಿರಿಯ ಮಗನಾದ ಚಂದ್ರವೇಗನಿಗೆ ರಾಜ್ಯಪಟ್ಟವನ್ನು ಕಟ್ಟಿ ಕಿರಿಯ ಮಗನಾದ ಭಾನುವೇಗನಿಗೆ ಯುವರಾಜ ಪಟ್ಟವನ್ನು ಕಟ್ಟಿ ಗುಣಧರರೆಂಬ ಚಾರಣಋಷಿಗಳ ಬಳಿಯಲ್ಲಿ ಜೈನದೀಕ್ಷೆಯನ್ನು ಸ್ವೀಕರಿಸಿ, ಹಲವು ಕಾಲ

ಪಕ್ಕದೆ ಜೈನದೀಕ್ಷೆಯುಂ ಕೈಕೊಂಡು ಪಲಕಾಲಂ ತಪಂಗೆಯ್ದು ಸಮ್ಮೇದ ಪರ್ವತದೊಳ್ ಮೋಕ್ಷಕ್ಕೆ ಪೋದರ್ ಮತ್ತಾ ಚಂದ್ರವೇಗಂಗೆ ನೂರ್ವರ್ ಪೆಣ್ಗೂಸುಗಳಾದೊರವರ್ಗ್ಗಳತಿಶಯ ರೂಪು ಲಾವಣ್ಯಮನೊಡೆಯೊರವರನಾ ಅಶನಿವೇಗಂ ತನ್ನ ಮಗಂ ವಜ್ರವೇಗಂಗನವರತಂ ಪಾಗುಡಮುಂ ಪೆರ್ಗ್ಗಡೆಗಳುಮನಟ್ಟುತ್ತಿರ್ಕ್ಕುಂ ಮತ್ತಂ ಪೆಱರುಂ ವಿದ್ಯಾಧರರ್ಕ್ಕಳನವರತಂ ಕೂಸುಗಳಂ ಬೇಡಿಯಟ್ಟುತ್ತಿರೆ ಆರ್ಗಂ ಕುಡಲೊಲ್ಲದೆ ಮತ್ತೊಂದು ದಿವಸಂ ಮಕ್ಕಳನಾರ್ಗೆ ಕುಡುವಮೆಂದು ದೈವಜ್ಞನಂ ಬೆಸಗೊಂಡೊಡಾತನಿಂತೆಂದು ಪೇಱ್ದಂ ಮಾನಸಸರೋವರದೊಳ್ ಸಿತಯಕ್ಷನಂ ಯುದ್ಧದೊಳಾವೊಂ ಗೆಲ್ವೊಂ ಮತ್ತಶನಿವೇಗನ ಮಗಂ ವಜ್ರವೇಗನುಮಂ ಮುಷ್ಟಿಪ್ರಹಾರದಿಂ ಕೊಲ್ವೊನಾ ಅಶನಿವೇಗನುಮಂ ಸಂಗ್ರಾಮದೊಳ್ ನಿಪಾತಿಸುವನಾವನೊರ್ವ್ವನಾತಂಗೆ ನಿಮ್ಮ ಮಗಳಂ ಕುಡಿಮೆಂದು ದೇವಗುರುವೆಂಬ ನೈಮಿತ್ತಿಕಂ ಪೇಱ್ದಂ ಮತ್ತೆಯಾತನುಪದೇಶದಿಂ ತಱಿಸಂದ ಮನದೊನಾಗಿ ಸರ್ವಾಯುಧ ಸನ್ನದ್ಧರಾಗಿ ದಿವ್ಯರಥಂಬೆರಸು ಹರಿಶ್ಚಂದ್ರ ಚಂದ್ರ ಸೇನರ್ಕ್ಕಳೆಂಬ ಮಕ್ಕಳನಟ್ಟಿದೊಳವರ್ಗ್ಗಳುಂ ಬಂದು ಕುಮಾರಂಗೆಱಗಿ ಪೊಡೆವಟ್ಟಿಂತೆಂದರ್ ರಥನೂಪುರಚಕ್ರವಾಳ ಪುರೇಶ್ವರನಪ್ಪ ಚಂದ್ರವೇಗಂಗಂ ಮಣಿದೇವಿಗಂ ಪುಟ್ಟಿದೆವು ಹರಿಶ್ಚಂದ್ರ

ತಪಸ್ಸನ್ನು ಮಾಡಿ ಸಮ್ಮೇದ ಪರ್ವತದಲ್ಲಿ ಮೋಕ್ಷಕ್ಕೆ ತೆರಳಿದರು. ಆಮೇಲೆ ಚಂದ್ರವೇಗನಿಗೆ ನೂರು ಮಂದಿ ಹೆಣ್ಣು ಮಕ್ಕಳಾದರು. ಅವರು ಹೆಚ್ಚಾದ ರೂಪ ಲಾವಣ್ಯವುಳ್ಳರಾಗಿದ್ದರು. ಅವರನ್ನು ಅಶನಿವೇಗನು ತನ್ನ ಮಗನಾದ ವಜ್ರವೇಗನಿಗೆ ತರಬೇಕೆಂದು ಎಡೆಬಿಡದೆ ಕಾಣಿಕೆಯನ್ನೂ ಹೆಗ್ಗಡೆ (ಅರಮನೆಯ ಅಧಿಕಾರಿ)ಗಳನ್ನೂ ಕಳುಹಿಸುತ್ತಿದ್ದನು. ಅದಲ್ಲದೆ ಬೇರೆ ವಿದ್ಯಾಧರರೂ ಯಾವಾಗಲೂ ಆ ಕನ್ಯೆಯರನ್ನು ಕೇಳುವುದಕ್ಕೆ ಕಳುಹಿಸುತ್ತಲೇ ಇದ್ದರು. ಚಂದ್ರವೇಗನು ಅವರಲ್ಲಿ ಯಾರಿಗೂ ಕೊಡಲು ಒಪ್ಪದೆ ಅನಂತರ ಒಂದು ದಿವಸ ತನ್ನ ಹೆಣ್ಣುಮಕ್ಕಳನ್ನು ಯಾರಿಗೆ ಕೊಡೋಣ ಎಂದು ದೈವಜ್ಞನಾದ ಜೋಯಿಸನನ್ನು ಕೇಳಿದನು. ಆಗ ಅವನು ಹೀಗೆಂದನು— "ಮಾನಸ ಸರೋವರದಲ್ಲಿ ಸಿತಯಕ್ಷನನ್ನು ಯುದ್ಧದಲ್ಲಿ ಯಾವನು ಗೆಲ್ಲುವನೋ ಮತ್ತು ಅಶನಿವೇಗನ ಮಗನಾದ ವಜ್ರವೇಗನನ್ನು ಮುಷ್ಟಿಯ ಪೆಟ್ಟಿನಿಂದ ಯಾವನು ಕೊಲ್ಲುವನೋ ಆ ಅಶನಿವೇಗನನ್ನೂ ಯುದ್ಧದಲ್ಲಿ ಯಾವನೊಬ್ಬನು ಬೀಳಿಸುವನೋ ಆತನಿಗೆ ನಿಮ್ಮ ಮಕ್ಕಳನ್ನು ಕೊಡಿ" ಎಂದು ದೇವಗುರುವೆಂಬ ಜ್ಯೋತಿಷ್ಕನು ಹೇಳಿದನು. ಅನಂತರ ಅವನ ಉಪದೇಶದಿಂದ ನಿಶ್ಚಯಮಾಡಿದ ಮನಸ್ಸಿನವನಾಗಿ ತನ್ನ ಮಕ್ಕಳಾದ ಹರಿಶ್ಚಂದ್ರ ಚಂದ್ರಸೇನರೆಂಬವರನ್ನು ಎಲ್ಲ ವಿಧವಾದ ಆಯುಧಗಳಿಂದ ಸನ್ನದ್ಧರಾಗಿ ದಿವ್ಯವಾದ ರಥದಿಂದ ಕೂಡಿ ಕಳುಹಿಸಿದನು. ಅವರು ಬಂದು ಸನತ್ಕುಮಾರನಿಗೆ ಎರಗಿ ಸಾಷ್ಟಾಂಗ ವಂದನೆಯನ್ನು ಮಾಡಿ ಹೀಗೆ ಹೇಳಿದರು—"ರಥನೂಪುರ ಚಕ್ರವಾಳನೆಂಬ ಪಟ್ಟಣದ ಒಡೆಯನಾದ ಚಂದ್ರವೇಗನಿಗೂ ಮಣಿದೇವಿಗೂ ಜನಿಸಿದ ಹರಿಶ್ಚಂದ್ರ ಚಂದ್ರಸೇನ ಎಂಬ

ಚಂದ್ರಸೇನರ್ಕಳೆಮಮ್ಮಮ್ಮನ ಬೆಸದಿಂ ನಿಮ್ಮನೋಲಗಿಸಲ್ ಬಂದೆವೆಂದು ಪೇೞ್ದು ಸುಖ ಸಂಕಥಾವಿನೋದದಿಂದಿರ್ಪ್ಪನ್ನೆಗಮವರ ಸಹೋದರರ್ಕಳಪ್ಪ ಚಂದ್ರವೇಗನುಂ ಭಾನುವೇಗನುಂ ತಮ್ಮುಮ್ಮಳ್ಳ ಸಮಸ್ತ ಬಲಂ ಬೆರಸು ಕುಮಾರನಂ ಕೂಡಿದರ್ ಮತ್ತಿತ್ತ ಅಶನಿವೇಗಂ ತನ್ನ ಮಗನ ಕೞಿದ ವೃತ್ತಾಂತಮೆಲ್ಲಮನವಳೋಕಿನಿಯೆಂಬ ವಿದ್ಯೆ ಪೇೞೆ ಕೇಳ್ದಱಿದು ಮುಳಿದು ಗರ್ಜಿಸಿ ಮಸಗಿ ಸಮಸ್ತ ಬಲಂಬೆರಸಿಂದ್ರನ ಮಱೆವೊಕ್ಕೊಡಮಮೋಘಂ ಕೊಲ್ವೆನೆಂದು ಮೇಲೆೞ್ತಂದನಂ ಚಂದ್ರವೇಗಂ ಕಂಡು ಸನತ್ಕುಮಾರಂಗಿಂತೆಂದಂ ದೇವಾ ನಾನಾವಿಧಮಪ್ಪ ವಿದ್ಯಾಧರಯುದ್ಧಮಂ ನೀಂ ಕೆಮ್ಮನೆ ನೋಡುತ್ತಿರಾನೆ ಸಾಲ್ವೆನೆಂದು ಸಂಗ್ರಾಮಕ್ಕಭಿಮುಖನಾಗಿ ಕಾದಲ್ ತಗುಳ್ದನಿತ್ತ ಕುಮಾರನುಂ ಗಗನತಳದೊಳ್ ವಜ್ರಸಾರಮೆಂಬ ರಥಮನೇಱಿ ಛತ್ರ ಚಾಮರ ಪಿಂಛಾತಪತ್ರ ಪಾಳಿಧ್ವಜ ಪತಾಕಾದ್ಯನೇಕ ಮಹಾವಿಭೂತಿಯೊಳ್ ಕೂಡಿ ಸಂಗ್ರಾಮಮಂ ನೋಡುತ್ತಮಿರೆ ಮತ್ತಶನಿವೇಗಂ ಕುಮಾರನಂ ಕಂಡು ಕ್ರೋಧಾಗ್ನಿ ಪೆರ್ಚಿ ಎನ್ನ ಮಗನಂ ಕೊಂದೊನಂ ಬೇಗಂ ಮೃತ್ಯುರಾಜನಂ ಕಾಣ್ಬಂತಿರೆ ಮಾೞ್ಪೆನೆಂದು ಮುಳಿದು ಮಸಗಿ ಬರ್ಪೋನಂ ಕುಮಾರಂ ಕಂಡಾಗಡೆ ಬಾಣಾಸನಹಸ್ತನಾಗಿ ಅರ್ಧಚಂದ್ರಮೆಂಬ ಸರದಿಂ

ಮಕ್ಕಳು ನಾವು. ನಮ್ಮ ತಂದೆಯ ಆಜ್ಞೆಯಂತೆ ನಿಮ್ಮನ್ನು ನೋಡುವುದಕ್ಕಾಗಿ ಬಂದಿದ್ದೇವೆ." ಎಂದು ಹೇಳಿ ಸುಖ ಸಂಕಥೆಗಳ ವಿನೋದದಿಂದ ಇದ್ದರು. ಅವರ ಹಿಂದಿನಿಂದಲೇ ಸಹೋದರರಾದ ಚಂದ್ರವೇಗನೂ ಭಾನುವೇಗನೂ ತಮ್ಮಲ್ಲಿ ಇದ್ದ ಎಲ್ಲಾ ಸೈನ್ಯವನ್ನೂ ಕೂಡಿಕೊಂಡು ಸನತ್ಕುಮಾರನನ್ನು ಸೇರಿಕೊಂಡರು. ಆ ಮೇಲೆ ಅಶನಿವೇಗನು ತನ್ನ ಮಗನು ಸತ್ತುಹೋದ ಸಂಗತಿಯನ್ನೆಲ್ಲ ಅವಲೋಕಿನೀ ವಿದ್ಯೆ ಹೇಳಲು, ಕೇಳಿ ತಿಳಿದುಕೊಂಡು ಕುಪಿತನಾಗಿ ಗರ್ಜಿಸಿ ಉದ್ರೇಕಗೊಂಡು ಎಲ್ಲಾ ಸೈನ್ಯವನ್ನು ಕೂಡಿಕೊಂಡು ಸನತ್ಕುಮಾರನು ದೇವೇಂದ್ರನನ್ನು ಮರೆಹೊಕ್ಕರೂ ಕೊಲ್ಲುವೆನೆಂದು ದಂಡೆತ್ತಿಕೊಂಡು ಬಂದನು. ಹಾಗೆ ಬಂದವನನ್ನು ಚಂದ್ರವೇಗನು ಕಂಡು ಸನತ್ಕುಮಾರನಿಗೆ ಹೀಗೆಂದನು–"ದೇವಾ, ನೀನು ಸುಮನೆ ಇದ್ದು ಹಲವಾರು ರೀತಿಯ ವಿದ್ಯಾಧರ ಯುದ್ಧವನ್ನು ನೋಡುತ್ತಿರು. ಈಗ ಹೋರಾಡಲು ನಾನೇ ಸಾಕಾಗುವೆನು" ಎಂದು ಯುದ್ಧಕ್ಕೆ ಅಭಿಮುಖನಾಗಿ ಕಾದಾಡಲು ಪ್ರಾರಂಭಿಸಿದನು. ಇತ್ತ ಕುಮಾರನು ಆಕಾಶ ತಳದಲ್ಲಿ ವಜ್ರಸಾರವೆಂಬ ರಥವನ್ನೇರಿ ಛತ್ರ (ಕೊಡೆ), ಚಾಮರ (ಚೌರಿ), ನವಿಲುಗರಿಯ ಕೊಡೆ, ಪಾಳಿಧ್ವಜ (ಹಾರ, ವಸ್ತ್ರ, ನವಿಲು, ಕಮಲ, ಹಂಸೆ, ಮೀನ, ಸಿಂಹ, ವೃಷಭ, ಆನೆ, ಚಕ್ರ–ಈ ಲಾಂಛನಗಳುಳ್ಳ ಬಾವುಟಗಳ ವ್ಯೂಹ), ಪತಾಕೆ–ಮುಂತಾದ ಮಹಾ ವೈಭವದಿಂದ ಕೂಡಿ ಯುದ್ಧವನ್ನು ನೋಡುತ್ತ ಇದ್ದನು. ಆ ಮೇಲೆ ಅಶನಿವೇಗನು ಕುಮಾರನನ್ನು ಕಂಡಾಗ ಕೋಪವೆಂಬ ಬೆಂಕಿ ಹೆಚ್ಚಾಗಿ "ನನ್ನ ಮಗನನ್ನು ಕೊಂದವನನ್ನು ಬೇಗನೆ ಮರಣದ ರಾಜನನ್ನು ಕಾಣುವ ಹಾಗೆ ಮಾಡುವೆನು" ಎಂದು ಕೋಪೋದ್ರೇಕಗೊಂಡು ಬರುತ್ತಿದ್ದನು. ಅವನನ್ನು ಕುಮಾರನು ಕಂಡೊಡನೆಯೇ ಬಿಲ್ಲನ್ನು ಹಿಡಿದು

ದಾತನ ತಲೆಯುಂ ಮೊಕ್ಕನೆಪೋಗೆಚ್ಚಂ ಅದು ಜ್ವಲನ್ಮಣಿಮಕುಟ ಕುಂಡಲಂಗಳಿಂದೊಪ್ಪುತ್ತಿರ್ದುದು ವಿದ್ಯುತ್ಕಪಾಲಂಬೊಲ್ ನೆಲದೊಳ್ ಬಿಟ್ಟುತ್ತಾಗಳಾ ತಲೆಯುಂ ಮಱುವಕ್ಕದರ್ ಕಂಡು ಕೆಲರಂಜಿ ತ್ರಸ್ತಾಭಿಭೂತರಾಗಿಯೋಡಿ ಕೆಲರ್ ಶರಣೆಂದು ಕುಮಾರನ ಕಾಲ್ಗೆಱಗಿ ಪುಲ್ಲಂ ಕರ್ಚಿ ಪೊಡೆವಟ್ಟರ್ ಕುಮಾರನುಮಾಗಳಭಯ ಘೋಷಣೆಯುಂ ಪೊಯ್ಸಿಯುವಗ್ರ್ಯಭಯ ದಾನಮಂ ಕೊಟ್ಟನಾಗಳ್ ಚಂದ್ರವೇಗನುಂ ಸಂಗ್ರಾಮಭೂಮಿಯುನರ್ಚಿಸಿ ಮಹಾವಿಭೂತಿಯಿಂ ಕುಮಾರನನೊಡಗೊಂಡು ಪೋಗಿ ಪೊಟಲಂ ಪೊಕ್ಕು ಪ್ರಶಸ್ತ ದಿನ ವಾರ ನಕ್ಷತ್ರ ಹೋರಾ ಮುಹೂರ್ತ ಲಗ್ನದೊಳ್ ತನ್ನ ಮಕ್ಕಳ್ ಚಂದ್ರಮತಿ ಚಂದ್ರಶ್ರೀ ಚಂದ್ರಲೇಖೆ ಶಶಿಕಾಂತೆ ಮನೋಹಾರಿಣಿ ಹರಿಣಾಂಕೆ ಕಮಲಮುಖಿ ಪ್ರಿಯದರ್ಶನೆಯೆಂದಿವರ್ ಮೊದಲಾಗೊಡೆಯ ನೂರ್ವರ್ ಕನ್ನೆಯರ್ಕ್ಕಳಂ ಪಾಣಿಗ್ರಹಣ ಪುರಸ್ಸರಂ ಕೊಟ್ಟನಂತಾ ನೂರ್ವರ್ ಕನ್ನೆಯರ್ಕ್ಕಳುಂ ಮುನ್ನಿನ ಖೇಚರಿಯರ್ಕ್ಕಳುಂ ಪೆಱವುಮೆಂದಿವರೊಳ್ ಕೂಡಿ ಕುಮಾರಂ ವಿದ್ಯಾಧರ ಶ್ರೇಣಿಯೊಳ್ ಸುಖಮನನುಭವಿಸುತ್ತಿರ್ಪನ್ನೆಗಂ ಮತ್ತೊಂದು ದಿವಸಂ ಚಂದ್ರವೇಗಂ ಸಿದ್ಧಕೂಟಕ್ಕೆ ವಂದನಾಭಕ್ತಿಗೆ ಪೋಗಿ ದೇವರನರ್ಚಿಸಿ ವಂದಿಸಿ ಸುಮಾಳಿಗಳೆಂಬವಧಿಜ್ಞಾನಿ

ಅರ್ಧಚಂದ್ರವೆಂಬ ಬಾಣದಿಂದ ಆತನ ತಲೆಯನ್ನು ಮೊಕ್ಕೆಂದು ಕತ್ತರಿಸಿ ಹೋಗುವಂತೆ ಹೊಡೆದನು. ಆ ತಲೆ ಹೊಳೆಯುವ ರತ್ನಗಳ ಕಿರೀಟಕುಂಡಲಗಳಿಂದ ಶೋಭಿಸುತ್ತಿದ್ದುದು ಮಿಂಚಿನ ತಲೆ ಬುರುಡೆಯೋ ಎಂಬಂತೆ ನೆಲದ ಮೇಲೆ ಬಿದ್ದಿತು. ಆಗ ಆ ತಲೆಯನ್ನು ಪ್ರತಿಪಕ್ಷದವರು ಕಂಡರು. ಅವರಲ್ಲಿ ಕೆಲವರು ಹೆದರಿ, ಭಯದಿಂದ ಹೊಡೆಯಲ್ಪಟ್ಟವರಾಗಿ ಓಡಿದರು. ಕೆಲವರು 'ಶರಣು' ಎಂದು ಕುಮಾರನ ಕಾಲಿಗೆರಗಿದರು, ಕೆಲವರು ಹುಲ್ಲನ್ನು ಕಚ್ಚಿ ಸಾಷ್ಟಾಂಗವಂದನೆ ಮಾಡಿದರು. ಆಗ ಕುಮಾರನು ಅಭಯಘೋಷಣೆಯನ್ನು ಹೊಡೆಸಿ ಅವರಿಗೆಲ್ಲ ಅಭಯದಾನವನ್ನಿತ್ತನು. ಆಗ ಚಂದ್ರವೇಗನು ಯುದ್ಧರಂಗವನ್ನು ಪೂಜಿಸಿ ದೊಡ್ಡ ವೈಭವದಿಂದ ಕುಮಾರನನ್ನು ಕೂಡಿಕೊಂಡು ಹೋಗಿ ಪಟ್ಟಣವನ್ನು ಹೊಕ್ಕು ಒಳ್ಳೆಯ ದಿನ ವಾರ ನಕ್ಷತ್ರ ಹೋರಾ ಮುಹೂರ್ತ ಲಗ್ನದಲ್ಲಿ ತನ್ನ ಮಕ್ಕಳಾದ ಚಂದ್ರಮತಿ ಚಂದ್ರಶ್ರೀ ಚಂದ್ರಲೇಖೆ ಶಶಿಕಾಂತೆ ಮನೋಹಾರಿಣಿ ಹರಿಣಾಂಕೆ ಕಮಲಮುಖಿ ಪ್ರಿಯದರ್ಶನೆ—ಎಂದು ಇವರೇ ಮೊದಲಾಗಿರುವ ನೂರು ಮಂದಿ ಕನ್ಯೆಯರನ್ನು ಪಾಣಿಗ್ರಹಣ ಪೂರ್ವಕವಾಗಿ ಕೊಟ್ಟನು. ಅಂತು ಆ ನೂರು ಮಂದಿ ಕನ್ಯೆಯರೂ ಹಿಂದಿನ ಬೇರೆ ವಿದ್ಯಾಧರ ಯುವತಿಯರು—ಎಲ್ಲರನ್ನೂ ಕೂಡಿಕೊಂಡು ಸನತ್ಕುಮಾರನು ವಿದ್ಯಾಧರರ ಸಾಲಿನಲ್ಲಿದ್ದು ಸುಖವನ್ನು ಅನುಭವಿಸುತ್ತ ಇದ್ದನು. ಹೀಗಿರಲು, ಮತ್ತೊಂದು ದಿವಸ ಚಂದ್ರವೇಗನು ಸಿದ್ಧಕೂಟಕ್ಕೆ ಪರ್ವತ ಶಿಖರಕ್ಕೆ ವಂದನೆಯ ಭಕ್ತಿಗೋಸ್ಕರ ಹೋದನು. ಅಲ್ಲಿ ದೇವರನ್ನು ಪೂಜಿಸಿ, ನಮಸ್ಕರಿಸಿ ಸುಮಾಳಿಗಳೆಂಬ ಅವಧಿಜ್ಞಾನಿಗಳಾದ ಚಾರಣಋಷಿಗಳಲ್ಲಿ ಗುರುಭಕ್ತಿಯನ್ನು ಆಚರಿಸಿ

ಗಳಪ್ಪ ಚಾರಣರಿಸಿಯರಂ ಗುರುಭಕ್ತಿಗೆಯ್ದು ವಂದಿಸಿ ಧರ್ಮಮಂ ಕೇಳ್ದು ತದನಂತರ ಮಿಂತೆಂದಂ ಭಟಾರಾ ಸನತ್ಕುಮಾರಂಗಂ ಸಿತಯಕ್ಷಂಗಂ ವೈರಸಂಬಂಧಕ್ಕೆ ಕಾರಣಮೇನೆಂದು ಬೆಸಗೊಂಡೊಡೆ ಭಟಾರರುಂ ತತ್ಸಂಬಂಧಿಯಪ್ಪ ಕಥೆಯನಿಂತೆಂದು ಪೇಟಲ್ ತೊಡಗಿದರ್ ಈ ಜಂಬೂದ್ವೀಪದ ಭರತ ಕ್ಷೇತ್ರದೊಳ್ ಮಗಧೆಯೆಂಬುದು ನಾಡಲ್ಲಿ ಕಾಂಚನವೆಂಬುದು ಪೊಟಲದನಾಳ್ವೊಂ ಪ್ರತಿಮುಖನೆಂಬರಸಂನಪ್ಪ ಶತಮಂತಃಪುರಕ್ಕಧಿಪನಾಗಿ ಕಾಲಂ ಸಲೆ ಮತ್ತಾ ಪೊಟಲೊಳ್ ನಾಗಚಂದ್ರನೆಂಬೊಂ ಸಾರ್ಥಾಧಿಪತಿಯಾತನ ಭಾರ್ಯೆ ವಿಷ್ಣುಶ್ರೀಯೆಂಬೊಳತ್ಯಂತ ರೂಪ ಲಾವಣ್ಯ ಸೌಭಾಗ್ಯ ಕಾಂತಿ ಹಾವ ಭಾವ ವಿಳಾಸ ವಿಭ್ರಮಂಗಳಿಂ ಕೂಡಿದೊಳೊಂದು ದಿವಸಂ ಅರಸನುದ್ಯಾನವನಕ್ಕೆ ಪೋಗುತ್ತಂ ಪ್ರಾಸಾದದೊಳಿರ್ದ ದೇವಾಂಗನಾ ಸನ್ನಿಭೆಯಪ್ಪಳಂ ಕಂಡು ಕಾಮಶರಂಗಳಿಂ ಜರ್ಝರಿತ ಹೃದಯನಾಗಿ ಮಂತ್ರಪ್ರಯೋಗದಿಂದಂ ವಿಷ್ಣುಶ್ರೀಯನೊಳಕೊಂಡನಾಕೆಯುಮಾತಂಗಗ್ರವಲ್ಲಭೆಯಾಗಿ ಸಲ್ವೊಳಂ ಸಮಸ್ತಮಂತಃಪುರ ಮಾಕೆಗೆ ಮುಳಿಯುತ್ತಿರ್ಪವೊಂದು ದಿವಸಂ ಸಾರ್ವಭೌಮನೆಂಬ ಪಟ್ಟವರ್ಧನಗಜಂ ಸೊರ್ಕಿ ಮಸಗಿ ಕಟ್ಟುಗಳೆಲ್ಲವಂ ಪಱಿದು ಹತತವಿತತ ಕೋಳಾಹಳವೆಟ್ಟಿದು ಪೊಟಲೆಲ್ಲಮಂ

ಅವರನ್ನು ವಂದಿಸಿ ಧರ್ಮೋಪದೇಶವನ್ನು ಕೇಳಿದನು. ಅನಂತರ ಹೀಗೆಂದನು— "ಪೂಜ್ಯರೇ, ಸನತ್ಕುಮಾರನಿಗೂ ಸಿತಯಕ್ಷನಿಗೂ ದ್ವೇಷ ಸಂಬಂಧಕ್ಕೆ ಕಾರಣವೇನು ?" ಎಂದು ಕೇಳಲು ಸ್ವಾಮಿಗಳು ಅದಕ್ಕೆ ಸಂಬಂಧಿಸಿದ ಕಥೆಯನ್ನು ಹೀಗೆ ಹೇಳತೊಡಗಿದರು. ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಮಗಧೆಯೆಂಬ ನಾಡಿನಲ್ಲಿ ಕಾಂಚನವೆಂಬ ಪಟ್ಟಣ ವಿದೆ. ಅದನ್ನು ಪ್ರತಿಮುಖನೆಂಬ ರಾಜನು ಆಳುತ್ತಿದ್ದನು. ಅವನು ಎಂಟುನೂರು ಅಂತಃ ಪುರ ಸ್ತ್ರೀಯರಿಗೆ ಒಡೆಯನಾಗಿದ್ದನು. ಹೀಗೆ ಕಾಲ ಕಳೆಯಿತು. ಅನಂತರ, ಆ ಪಟ್ಟಣ ದಲ್ಲಿ ನಾಗಚಂದ್ರನೆಂಬ ವ್ಯಾಪಾರಿಯಿದ್ದನು. ಅವನು ಸಾರ್ಥಾಧಿಪತಿಯಾಗಿದ್ದನು. (ಊರಿಂದೂರಿಗೆ ಹೋಗಿ ಸರಕುಗಳನ್ನು ಮಾರುವವರ ಶ್ರೇಣಿಗೆ ಒಡೆಯ). ಅವನ ಪತ್ನಿ ಯಾದ ವಿಷ್ಣುಶ್ರೀಯೆಂಬವಳು ಅತಿಶಯ ರೂಪ-ಲಾವಣ್ಯ-ಸೌಭಾಗ್ಯ ಕಾಂತಿ-ಹಾವ-ಭಾವ–ವಿಳಾಸ-ವಿಭ್ರಮಗಳಿಂದ ಕೂಡಿದವಳು. ಒಂದು ದಿನ ರಾಜನು ಉದ್ಯಾನಕ್ಕೆ ಹೋಗುವಾಗ ದೊಡ್ಡ ಮನೆಯಲ್ಲಿ ಇದ್ದ ದೇವತಾಸ್ತ್ರೀಯಂತಿದ್ದ ಆಕೆಯನ್ನು ಕಂಡನು ಕಾಮನ ಬಾಣಗಳಿಂದ ನಜ್ಜುಗುಜ್ಜಾದ ಮನಸುಳ್ಳವನಾಗಿ ಮಂತ್ರ ಶಕ್ತಿಯನ್ನು ಉಪ ಯೋಗಿಸಿ ವಿಷ್ಣುಶ್ರೀಯನ್ನು ವಶಪಡಿಸಿಕೊಂಡನು. ಆಕೆ ಅವನಿಗೆ ಇತರರಿಗಿಂತ ಮೇಲಿನ ಹೆಂಡತಿಯಾಗಿ ನಡೆಯುತ್ತಿದ್ದಳು. ರಾಜನ ಅಂತಃಪುರದವರೆಲ್ಲ ಆಕೆಯ ಮೇಲೆ ಸಿಟ್ಟಿನಿಂದಿದ್ದರು. ಒಂದು ದಿವಸ ಸಾರ್ವಭೌಮ ಎಂಬ ಪಟ್ಟದಾನೆ ಸೊಕ್ಕಿ ಉದ್ರೇಕಗೊಂಡು ಕಟ್ಟುಗಳನ್ನೆಲ್ಲ ಕಡಿದುಕೊಂಡು ಯದ್ವಾತದ್ವಾ ಗದ್ದಲವನ್ನುಂಟುಮಾಡಿ ಎಳೆದು. ಕೊಂಡು ಪಟ್ಟಣದಲ್ಲೆಲ್ಲಾ ಸಿಕ್ಕಿಸಿಕ್ಕಿದವರನ್ನು ಕೊಲ್ಲತೊಡಗಿತು. ರಾಜನು ಇದನ್ನು

ಕೊಲ್ವುದನರಸಂ ಕೇಳ್ದಾನೆಯಂ ಕಟ್ಟಿಸಲೆಂದು ಪೋದನನ್ನೆಗಮಿತ್ತ ಅನಿಬರರಸಿಯರ್ಕಳ್ ನೆರೆದು ವಿಷಪ್ರಯೋಗದಿಂವಂ ಕೊಂದಾರುಮಱಿಯದಂತಿರೆ ಶ್ಮಶಾನದೊಳೀಡಾಡಿದೊರನ್ನೆಗಮರಸನು ಮಾನೆಯುಮಂ ಕಟ್ಟಿಸಿ ಬಂದರಸಿಯಂ ಕಾಣದೆಲ್ಲಿರ್ದಳೆಂದು ಬೆಸಗೊಂಡೊಡೆ ಸತ್ತಳೆಂಬಾ ಮಾತಂ ಕೇಳ್ದು ಮೂರ್ಛಿತನಾಗಿ ನೀಡಱಿಂದೆಟ್ಟೆತ್ತು ಮಹಾದುಃಖಂಗೆಯ್ದು ಶ್ಮಶಾನಕ್ಕಾಕೆಯ ದೇಹಮಂ ನೋಡಲೆಂದು ಪೋಗಿಯದಱ ಬೀಭತ್ಸಮಂ ಕಂಡಾದಮಾನುಂ ಪೇಸಿ ಶರೀರವೈರಾಗ್ಯಮನೊಡೆಯನಾಗಿ ಅನ್ಯಾಯದಿಂ ಪರಸ್ತ್ರೀಹರಣಂ ಗೆಯ್ದೆಂ ಮಹಾಪಾತಕನೆನೆಂದು ತನ್ನಂ ತಾನಾದಮಾನುಂ ನಿಂದಿಸಿ ವಿಮಳವಾಹನನೆಂಬ ಪಿರಿಯ ಮಗಂಗೆ ರಾಜ್ಯಪಟ್ಟಂಗಟ್ಟಿ ಸುವ್ರತರೆಂಬಾಚಾರ್ಯರ ಪಕ್ಕದೆ ದೀಕ್ಷೆಯಂ ಕೈಕೊಂಡು ಪಲಕಾಲಂ ತಪಂಗೆಯ್ದು ಸಮಾಧಿಮರಣದಿಂ ಮುಡಿಪಿ ಪ್ರಾಣತಕಲ್ಪದೊಳಿರ್ಪತ್ತು ಸಾಗರೋಪಮಾಯುಷ್ಯಸ್ಥಿತಿಯನೊಡೆಯೊಂ ಪ್ರತೀಂದ್ರನಾಗಿ ಪುಟ್ಟಿ ದೇವಲೋಕದ ದಿವ್ಯಸುಖಮಂ ಪಲಕಾಲಮನುಭವಿಸಿ ಬಂದಿಲ್ಲಿ ಜಂಬೂದ್ವೀಪದ ಭರತ ಕ್ಷೇತ್ರದೊಳ್ ಮಗಧೆಯೆಂಬುದು ನಾಡಲ್ಲಿ ಕನಕಮೆಂಬುದು ಪೊಟಿಲದನಾಳ್ವೊಂ ಹರಿವಾಹನನೆಂಬರಸಂ ಮತ್ತಮಾ ಪೊಟಿಲೊಳ್ ರಾಜಶ್ರೇಷ್ಠಿ ಅರ್ಹ

ಕೇಳಿ ಆನೆಯನ್ನು ಹಿಡಿದು ಬಂಧಿಸುವುದಕ್ಕಾಗಿ ಹೋದನು. ಆ ವೇಳೆಯಲ್ಲಿ ಇತ್ತ ಅಂತಃಪುರದ ಅಷ್ಟೊಂದು ಮಂದಿ ಅರಸಿಯರು ಒಟ್ಟುಗೂಡಿ ವಿಷ್ಣುಶ್ರೀಯನ್ನು ವಿಷಪ್ರಯೋಗದಿಂದ ಕೊಂದು ಯಾರೊಬ್ಬರೂ ತಿಳಿಯದ ಹಾಗೆ ಶ್ಮಶಾನದಲ್ಲಿ ಬಿಸಾಡಿದರು. ಅಷ್ಟರಲ್ಲಿ ರಾಜನು ಆನೆಯನ್ನು ಕಟ್ಟಿಸಿ ಹಿಂದಕ್ಕೆ ಬಂದು ರಾಣಿಯನ್ನು ಕಾಣದೆ, 'ಆಕೆ ಎಲ್ಲಿದ್ದಾಳೆ?' ಎಂದು ಕೇಳಿದನು. 'ಸತ್ತಳು' ಎಂಬ ಸುದ್ದಿಯನ್ನು ಕೇಳಿ ಮೂರ್ಛೆ ಹೋದನು. ಹೆಚ್ಚು ಹೊತ್ತಿನ ಮೇಲೆ ಎಚ್ಚರಗೊಂಡು ಮಹಾದುಃಖವನ್ನು ತಾಳುತ್ತ ಆಕೆಯ ಶರೀರವನ್ನು ನೋಡುವುದಕ್ಕಾಗಿ ರುದ್ರಭೂಮಿಗೆ ಹೋದನು. ಅಲ್ಲಿ ಜುಗುಪ್ಸೆಯನ್ನುಂಟುಮಾಡುವ ಹೆಣದ ರೂಪವನ್ನು ಕಂಡು ಅತಿಶಯವಾಗಿ ಹೇಸಿಕೆ ಪಟ್ಟು ದೇಹದ ಮೇಲೆ ವೈರಾಗ್ಯವುಳ್ಳವನಾದನು. "ಅನ್ಯಾಯದಿಂದ ಬೇರೆಯವರ ಹೆಂಡತಿಯನ್ನು ಅಪಹರಣ ಮಾಡಿದೆನು, ಮಹಾಪಾಪಿಯಾಗಿರುವೆನು" ಎಂದು ತನ್ನನ್ನು ತಾನು ಅತ್ಯಂತವಾಗಿ ಹಳಿದುಕೊಂಡನು. ಆಮೇಲೆ ವಿಮಳವಾಹನನೆಂಬ ಹಿರಿಯ ಮಗನಿಗೆ ರಾಜ್ಯಪಟ್ಟವನ್ನು ಕಟ್ಟಿ ಸುವ್ರತರೆಂಬ ಆಚಾರ್ಯರ ಬಳಿಯಲ್ಲಿ ಜೈನದೀಕ್ಷೆಯನ್ನು ಸ್ವೀಕರಿಸಿದನು. ಹಲವು ಕಾಲದವರೆಗೆ ತಪಸ್ಸನ್ನು ಆಚರಿಸಿ ಸಮಾಧಿ ಮರಣದಿಂದ ಸತ್ತು ಪ್ರಾಣತವೆಂಬ ಸ್ವರ್ಗದಲ್ಲಿ ಇಪ್ಪತ್ತು ಸಾಗರವನ್ನು ಹೋಲುವ ದೀರ್ಘಕಾಲದ ಆಯುಷ್ಯವುಳ್ಳ ಪ್ರತಿ ದೇವೇಂದ್ರನಾಗಿ ಹುಟ್ಟಿದನು. ಹಲವು ಕಾಲ ದೇವಲೋಕದ ಸುಖವನ್ನನುಭವಿಸಿ ಬಂದನು—ಇಲ್ಲಿ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಮಗಧೆಯೆಂಬ ನಾಡಿನ ಕನಕಪುರವನ್ನು ಆಳುವ ಹರಿವಾಹನನೆಂಬ ರಾಜನಿದ್ದನು. ಅನಂತರ, ಅದೇ ಪಟ್ಟಣದಲ್ಲಿ ರಾಜಶ್ರೇಷ್ಠಿಯಾಗಿ ಅರ್ಹದ್ದಾಸನೆಂಬವನಿದ್ದನು. ಅವನ ಹೆಂಡತಿ ಜಿನದತ್ತೆ. ಆ

ದ್ದಾಸನೆಂಬೊನಾತನ ಭಾರ್ಯೆ ಜಿನದತ್ತೆಯೆಂಬೊಳಾ ಇರ್ವರ್ಗಂ ಮಗಂ ಜಿನವರ್ಮನೆಂಬೊ
ನಾಗಿ ಪುಟ್ಟಿ ರೂಪ ಲಾವಣ್ಯ ಸೌಭಾಗ್ಯ ಕಾಂತಿತ್ವದಿಂದಾದಮಾನುಂ ನೆಱೆದೊನಾಗಿ ಇಂತು
ಕಾಲಂ ಸಲೆ ಅರ್ಹದ್ದಾಸಂಗೇನಾನುಮೊಂದು ಕಾರಣದಿಂದಂ ವೈರಾಗ್ಯಮಾಗಿ ಜಿನವರ್ಮಂಗೆ
ರಾಜಶ್ರೇಷ್ಠಿಪದಮಂ ಕೊಟ್ಟು ಶಿವಗುಪ್ತಾಚಾರ್ಯರ ಪಕ್ಕದೆ ದೀಕ್ಷೆಯಂ ಕೈಕೊಂಡು ತಪಂಗೆಯ್ದು
ಮೋಕ್ಷಕ್ಕೆ ಪೋದನ್ ಮತ್ತಿತ್ತ ಜಿನವರ್ಮನುಂ ಪಲವುಂ ಜಿನಾಲಯಂಗಳಂ ಮಾಡಿಸಿ ದಾನ
ಶ್ರೀಯೆಂಬ ಪೂಜೆ ಶೀಲೋಪವಾಸಮೆಂದಿಂತು ಚತುರ್ವಿಧಮಪ್ಪ ಶ್ರಾವಕಧರ್ಮದೊಳಗ್ಗಳನಾಗಿ
ನೆಗಳುತ್ತ ಮಿಂತು ಪಲಕಾಲಂ ಸಲೆ ಮತ್ತಾ ಮುನ್ನಿನ ಭವದ ನಾಗಚಂದ್ರನೆಂಬೊಂ ಸಾರ್ಥಾಧಿ
ಪತಿ ವಿಷ್ಣು ತನ್ನ ಭಾರ್ಯೆಯ ವಿಯೋಗಂ ಕಾರಣಮಾಗಿ ಆರ್ತಧ್ಯಾನದಿಂ ಸತ್ತು ತಿರ್ಯಙ್ನರಕಾದಿಗ
ಳೊಳ್ ಪಲಕಾಲಂ ತೊಳಲ್ದೀ ಭರತಕ್ಷೇತ್ರದೊಳ್ ಕಪಿಲನೆಂಬ ಪಾರ್ವಂಗಂ ಗಂಗೆಯೆಂಬ
ಪಾರ್ವಂತಿಗಂ ಭಾರದ್ವಾಜನೆಂಬ ಮಗನಾಗಿ ಪುಟ್ಟಿ ಕನಕದಂಡಿಯೆಂಬ ಪರಿವ್ರಾಜಕಂಗೆ ಶಿಷ್ಯನಾಗಿ
ನಾನಾದೇಶಂಗಳಂ ವಿಹಾರಿಸುತ್ತಂ ಕನಕಪುರಕ್ಕೆ ವಂದು ಮಾಸೋಪವಾಸಂ ಗೆಯ್ಯುತ್ತಂ ಮಹಾ
ತಪಸ್ವಿಯಾಗಿ ನೆಗಳುತ್ತಿರೆ ತತ್ಪುರಾಧಿಪಂ ಹರಿವಾಹನನೆಂಬರಸಂ ಕಂಡಾದಮಾ ನುಮಾ ತಪಸ್ವಿಗೆ
ಭಕ್ತನಾಗಿ ಬೆಸಕೆಯ್ಯೆ ಕಾಲಂ ಸಲೆ ಮತ್ತೊಂದು ದಿವಸಮರಸನೊಡನೆ ಜಿನವರ್ಮ ನಾ ಪರಿವ್ರಾಜ
ಕನ ನಿವಾಸಕ್ಕೆ ಪೋದೊಡೆ ಜಿನವರ್ಮನಂ ಕಂಡು ಪೂರ್ವವೈರ ಸಂಬಂಧದಿಂದಾದ ಕ್ರೋಧಾಗ್ನಿ

ಇಬ್ಬರಿಗೆ ಜಿನವರ್ಮನೆಂಬ ಮಗನಾಗಿ (ಆ ಪ್ರತಿಮುಖನಾಗಿದ್ದವನು) ಹುಟ್ಟಿದನು.
ಜಿನವರ್ಮನು ಹೆಚ್ಚಾದ ರೂಪ–ಲಾವಣ್ಯ–ಸೌಭಾಗ್ಯ–ತೇಜಸ್ಸುಗಳಿಂದ ಕೂಡಿದ್ದನು.
ಹೀಗೆಯೇ ಕಾಲ ಕಳೆಯಲು ಅರ್ಹದ್ದಾಸನಿಗೆ ಏನೋ ಒಂದು ಕಾರಣದಿಂದ ವೈರಾಗ್ಯ
ವುಂಟಾಯಿತು. ಅವನು ಜಿನವರ್ಮನಿಗೆ ರಾಜಶ್ರೇಷ್ಠಿ ಪದವಿಯನ್ನು ಕೊಟ್ಟು ಶಿವ
ಗುಪ್ತಾಚಾರ್ಯರ ಬಳಿಯಲ್ಲಿ ದೀಕ್ಷೆಯನ್ನು ಸ್ವೀಕರಿಸಿ ತಪಸ್ಸನ್ನು ಮಾಡಿ ಮೋಕ್ಷಕ್ಕೆ
ಹೋದನು. ಆಮೇಲೆ ಇತ್ತ ಜಿನವರ್ಮನು ಹಲವು ಜಿನಾಲಯಗಳನ್ನು ಮಾಡಿಸಿ ದಾನ-
ಪೂಜೆ–ಶೀಲ–ಉಪವಾಸ ಎಂಬ ನಾಲ್ಕು ವಿಧದ ಶ್ರಾವಕಧರ್ಮದಲ್ಲಿ (ಜೈನಗೃಹಸ್ಥಧರ್ಮ
ದಲ್ಲಿ) ಶ್ರೇಷ್ಠನಾಗಿ ಆಚರಿಸುತ್ತ ಹೀಗೆಯೇ ಹಲವು ಕಾಲ ಕಳೆಯಿತು. ಆಮೇಲೆ, ಆ
ಹಿಂದಿನ ಜನ್ಮದ ನಾಗಚಂದ್ರನೆಂಬ ವರ್ತಕನು ವಿಷ್ಣುಶ್ರೀಯೆಂಬ ತನ್ನ ಹೆಂಡತಿಯ
ಅಗಲಿಕೆಯ ಕಾರಣದಿಂದ ಆರ್ತಧ್ಯಾನದಿಂದ ಸತ್ತು ಪ್ರಾಣಿಪಕ್ಷಿ ಜನ್ಮಗಳಲ್ಲಿಯೂ ನರಕ
ಗಳಲ್ಲಿಯೂ ಹಲವು ಕಾಲ ಸುತ್ತಾಡಿ ಈ ಭರತಕ್ಷೇತ್ರದಲ್ಲಿ ಕಪಿಲನೆಂಬ ಬ್ರಾಹ್ಮಣನಿಗೂ
ಗಂಗೆಯೆಂಬ ಬ್ರಾಹ್ಮಣಿತಿಗೂ ಭಾರದ್ವಾಜನೆಂಬ ಮಗನಾಗಿ ಹುಟ್ಟಿದನು. ಅವನು
ಕನಕದಂಡಿಯೆಂಬ ಸಂನ್ಯಾಸಿಗೆ ಶಿಷ್ಯನಾಗಿ ಹಲವಾರು ದೇಶಗಳನ್ನು ಸಂಚಾರಮಾಡುತ್ತ
ಕನಕಪುರಕ್ಕೆ ಬಂದು ಒಂದು ತಿಂಗಳ ಉಪವಾಸವನ್ನು ಮಾಡುತ್ತ ದೊಡ್ಡ ತಪಸ್ವಿಯಾಗಿ
ಆಚರಿಸುತ್ತಿದ್ದನು. ಆ ಪಟ್ಟಣದ ಹರಿವಾಹನನೆಂಬ ರಾಜನು ಕಂಡು ಆ ತಪಸ್ವಿಗೆ
ವಿಶೇಷ ಭಕ್ತನಾಗಿ ಸೇವೆಮಾಡುತ್ತಿದ್ದನು. ಕಾಲ ಕಳೆಯಲು ಮತ್ತೊಂದು ದಿನ ಜಿನ
ವರ್ಮನು ಅರಸನೊಂದಿಗೆ ಆ ಸಂನ್ಯಾಸಿಯ ವಾಸಸ್ಥಳಕ್ಕೆ ಹೋದನು. ಆಗ ತಪಸ್ವಿಯು

ಪೆರ್ಚಿ ಮಱುಗುತ್ತಿರ್ದ್ದ ಮನಮನೊಡೆಯ ತಪಸ್ವಿಯನರಸನಿಂತೆಂದಂ ನೀಮೆಮ್ಮ ಮನೆಯೊಳ್ ಪಾರಿಸಲ್ವೇಳ್ಪುದೆಂದು ಪ್ರಾರ್ಥಿಸಿದೊಡಾತನಿಂತೆಂದಂ ಒಂದು ಪಾಂಗಿನೊಳ್ ನಿಮ್ಮ ಮನೆಯೊಳ್ ಪಾರಿಸುವೆನೀ ಜಿನವರ್ಮನ ಬೆನ್ನೊಳಡಿಯಿಲ್ಲದ ತಳಿಗೆಯನಿಟ್ಟು ಬಿಸಿಯ ತುಯ್ಯಲನುಣ್ಬುದೆನ ಗಱಿಸ್ತಿಯೀ ಪಾಂಗಿನೊಳೆನ್ನನೂಡಲಾರ್ಪೊಡುಣ್ಬೆನಲ್ಲದಾಗಳುಣ್ಣೆನೆಂದು ಪೇೞ್ದೊಡೆ ಕೇಳ್ದಚ್ಚಿಗನಾದರಸನಂ ಜಿನವರ್ಮಂ ಕಂಡಿಂತೆಂದಂ ದೇವಾ ತಪಸ್ವಿಗಾವ ಪಾಂಗಿನೊಳ್ ಮೆಚ್ಚು ಮೆಚ್ಚಿದ ಪಾಂಗಿನೊಳುಣ್ಗೆಂದೊಡಂಬಟ್ಟನಾಗಳಾ ಗರ್ಭಸುಖಿಯ ಬೆನ್ನೊಳ್ ಪಿರಿಯ ಪರಿಯಾಣಮನಿಟ್ಟದಂ ತೆಕ್ಕನೆ ತೀವಿ ಬಡ್ಡಿಸಿದೊಡೆ ಕುದಿಯುತ್ತಿರ್ದ್ದ ತುಯ್ಯಲಂ ತಣ್ಣಿತ್ತಾಗಿಯಾಱುವನ್ನೆಗಂ ಪಾರುತ್ತಿರ್ದ್ದು ನೀಡುಂ ಬೇಗಮುಂಡು ಸಮೆದ ಬೞಿಕ್ಕೆ ತಳಿಗೆಯನೆತ್ತಿದೊಡಾ ತಳಿಗೆಯೊಡನೆ ಬೆನ್ನತೊವಲೆಲ್ಲಮೆರ್ದ್ದುಪೋದುದನರಸಂ ಕಂಡೀತಂ ತಪಸ್ವಿಯಲ್ಲಂ ರಾಕ್ಷಸಂ ಪಂಚಮಹಾಪಾತಕನನೀ ಪೊೞಲೊಳಿರಲೀಯದಟ್ಟಿ ಕಳೆಯಿಮೆಂದು ನೃಪತಿ ಮುಳಿದೊಡೆ ಜಿನವರ್ಮಂ ತಪಸ್ವಿಗೆ ಮುಳಿಯಲ್ವೇಡೆಂದು ಬಾರಿಸಿ ಈತಂಗೇನುಂ ದೋಷಮಿಲ್ಲೆನ್ನ ಪೂರ್ವಕೃತಕರ್ಮಫಳವಿಪಾಕಮೆಂದು ನೃಪತಿಗೆ ಪೇೞ್ದು ಪರಿವ್ರಾಜಕಂಗೆ ನಿಶ್ಶಲ್ಯಂಗೆಯ್ದರಸನುಮಂ ಸ್ವಜನ ಪರಿಜನ ಬಂಧುವರ್ಗ

ಜಿನವರ್ಮನನ್ನು ಕಂಡು ಪೂರ್ವಜನ್ಮದ ವೈರದಿಂದ ಸಿಟ್ಟೆಂಬ ಬೆಂಕಿ ಹೆಚ್ಚಾಗಿ, ಕುದಿಯುವ ಮನಸ್ಸುಳ್ಳವನಾಗಿದ್ದನು. ಅಂತಹ ತಪಸ್ವಿಯನ್ನು ಕುರಿತು ರಾಜನು—"ನೀವು ನಮ್ಮ ಮನೆಯಲ್ಲಿ ಊಟವನ್ನು ಸ್ವೀಕರಿಸಬೇಕು" ಎಂದು ಪ್ರಾರ್ಥಿಸಿದನು. ಆಗ ಅವನು ಹೀಗೆಂದನು–"ಒಂದು ರೀತಿಯಲ್ಲಿ ನಿಮ್ಮ ಮನೆಯಲ್ಲಿ ಊಟ ಮಾಡುವೆನು- ಈ ಜಿನವರ್ಮನ ಬೆನ್ನಿನ ಮೇಲೆ ಅಡಿಯಿಲ್ಲದ ತಟ್ಟೆಯನ್ನಿಟ್ಟು ಬಿಸಿ ಪಾಯಸವನ್ನು ಉಣ್ಣುವುದು ನನಗೆ ಪ್ರೀತಿ ಈ ರೀತಿಯಲ್ಲಿ ನನಗೆ ಬಡಿಸುವುದಾದರೆ ಊಟಮಾಡುವೆನು, ಆದಲ್ಲವಾದರೆ ಉಣ್ಣೆನು"– ಎಂದು ಹೇಳಿದಾಗ ಕೇಳಿ ವ್ಯಥಿತನಾದ ಅರಸನನ್ನು ಜಿನವರ್ಮನು ಕಂಡು ಹೀಗೆಂದನು– "ದೇವಾ, ಸನ್ಯಾಸಿಗೆ ಯಾವರೀತಿ ಮೆಚ್ಚುಗೆಯೋ ಅಂತಹ ಮೆಚ್ಚಿನ ರೀತಿಯಲ್ಲಿಯೇ ಉಣ್ಣಲಿ" ಎಂದು ಒಪ್ಪಿದನು. ಆಗ ಜನ್ಮಸುಖಿಯಾದ ಅವನ ಬೆನ್ನ ಮೇಲೆ ದೊಡ್ಡ ಹರಿವಾಣವನ್ನಿಟ್ಟು, ಕುದಿಯುವ ಪಾಯಸವನ್ನು ಅದು ಭರ್ತಿಯಾಗಿ ತುಂಬುವಂತೆ ಬಡಿಸಲು ಅದು ತಣ್ಣಗೆ ಆರುವ ತನಕವೂ ನಿರೀಕ್ಷಿಸುತ್ತಿದ್ದು ಬಹಳ ಬೇಗ ಊಟಮಾಡಿ ಮುಗಿದಮೇಲೆ ತಟ್ಟೆಯನ್ನು ಎತ್ತಿದಾಗ ಆ ತಟ್ಟೆಯೊಂದಿಗೆ ಬೆನ್ನ ಚರ್ಮವೆಲ್ಲಾ ಎದ್ದುಹೋದುದನ್ನು ರಾಜನು ಕಂಡನು. "ಇವನು ಸನ್ಯಾಸಿಯಲ್ಲ ರಾಕ್ಷಸನು. ಪಂಚಮಹಾಪಾಪ ಮಾಡಿದವನು. ಇವನನ್ನು ಈ ಪಟ್ಟಣದಲ್ಲಿ ಇರಲಿಕ್ಕೆ ಬಿಡದೆ ಓಡಿಸಿಬಿಡಿ!" ಎಂದು ರಾಜನು ಕೋಪದಿಂದ ನುಡಿದನು. ಆಗ ಜಿನವರ್ಮನು –"ತಪಸ್ವಿಯ ಮೇಲೆ ಕೋಪಿಸಬೇಡ" ಎಂದು ಅವನನ್ನು ತಡೆದು, "ಇವನಿಗೆ ಏನೊಂದು ದೋಷವಿಲ್ಲ, ನಾನು ಹಿಂದೆ ಮಾಡಿದ ಕರ್ಮದ ಫಲದ ಪಕ್ವತೆಯಿದು" ಎಂದು ರಾಜನಿಗೆ ಹೇಳಿ, ಸಂನ್ಯಾಸಿಗೆ ತೊಂದರೆಯಾಗದಂತೆ ಮಾಡಿ, ರಾಜನನ್ನೂ ಸ್ವಜನನನ್ನೂ ಸೇವಕರನ್ನೂ ಬಂಧುವರ್ಗವನ್ನೂ ಬಿಡಿಸಿದನು. ಆಮೇಲೆ, ಶ್ರೀವರ್ಮ

ಮುಮಂ ಬಿಡಿಸಿ ಶ್ರೀವರ್ಮರೆಂಬಾಚಾರ್ಯರ ಪಕ್ಕದೆ ದೀಕ್ಷೆಯಂ ಕೈಕೊಂಡು ಮಹಿಪಗಿರಿಯೆಂಬ ಪರ್ವತದೊಳೀ ಪುಣ್ ತೀರ್ವನ್ನೆಗಂ ಕೈಯನೆತ್ತಿಕೊಳ್ಳೆನೆಂದು ಕಾಯೋತ್ಸರ್ಗದಿಂ ನಿಂದೊಸಂ ಗೃಧ್ರುವಾಯಸಾದಿಗಳ್ ಪುಣ್ಣಂ ತೋಡಿ ತಿನೆ ಮೇರುಪರ್ವತಂಬೊಲಚಳಿತ ಧೈರ್ಯನಾಗೊಂದು ತಿಂಗಳ್ವರೆಗಂ ಸೈರಿಸಿ ಸಮಾಧಿಮರಣದಿಂ ಮುಡಿಪಿಯಚ್ಯುತಕಲ್ಪದೊಳಿಪ್ಪತ್ತೆರಡು ಸಾಗರೋಪ ಮಾಯುಷ್ಯಸ್ಥಿತಿಯ ನೊಡೆಯೊನಚ್ಯುತೇಂದ್ರನಾಗಿ ಪುಟ್ಟಿಯಲ್ಲಿಯ ದೇವಲೋಕದ ದಿವ್ಯಸುಖ ಮಂ ಪಲಕಾಲಮನುಭವಿಸಿ ಬಂದಿಲ್ಲಿ ಸನತ್ಕುಮಾರನಾದನಾ ಪರಿವ್ರಾಜಕನುಮಾಯಚ್ಯುತೇಂ ದ್ರಂಗೆ ವಾಹನದೇವನಾದೊನಲ್ಲಿಂ ಬಟ್ಟ್ ಬಂದಿಲ್ಲಿ ಚತುರ್ಗತಿ ಸಂಸಾರದೊಳ್ ನೀಡುಂ ತೊಟ ಲ್ದಂಜನಗಿರಿಯೆಂಬ ಪರ್ವತದ ತಟದೊಳ್ ತಾಪಸಾತ್ರಮದೊಳ್ ವಸಿಷ್ಠನೆಂಬ ತಾಪಸಂಗಂ ಘೂಕೆಯೆಂಬ ತಾಪಸಿಗಂ ಬಕನೆಂಬೊಂ ಮಗನಾಗಿ ಪುಟ್ಟಿ ತಾಪಸತಪಮಂ ಕೈಕೊಂಡು ನೆಗಟ್ದು ಮಡಿದು ಸಿತಯಕ್ಷನಾದನೆಂದಿಂತಿರ್ವ್ವರ ಪೂರ್ವಭವವೈರಸಂಬಂಧಿಯಪ್ಪ ಕಥೆಯಂ ಸವಿಸ್ತರ ಮಾಗಿ ಸುಮಾಳಿಗಳೆಂಬವಧಿ ಜ್ಞಾನಿಗಳಪ್ಪ ಚಾರಣರಿಸಿಯರ್ ಪೇಟ³ ಎನ್ನ ಸ್ವಾಮಿಯಪ್ಪ ಖಚರೇಂದ್ರಂ ಕೇಳ್ದಾದಮಾನುಂ ಸಂತುಷ್ಟಚಿತ್ತನಾಗಿ ಭಟಾರರಂ ಬಂದಿಸಿ ತನ್ನ ಪೊಟಲ್ಗೆವೋ ದನ್ ಎಂದಿಂತು ಕಥಾಸಂಬಂಧಮೆಲ್ಲಮಂ ಕಮಳಮತಿಯೆಂಬ ಖೇಚರವಿಳಾಸಿನಿ ಸನತ್ಕುಮಾರಂ

ರೆಂಬ ಆಚಾರ್ಯರ ಬಳಿಯಲ್ಲಿ ದೀಕ್ಷೆಯನ್ನು ಸ್ವೀಕರಿಸಿ, ಮಹಿಪಗಿರಿ ಎಂಬ ಪರ್ವತದಲ್ಲಿ "ಈ ಜೆನ್ನಿನ ಹುಣ್ಣು ಗುಣವಾಗುವವರೆಗೂ ಕೈಯನ್ನು ಎತ್ತಿಕೊಳ್ಳುವುದಿಲ್ಲ" ಎಂದು ದೇಹತ್ಯಾಗಕ್ಕಾಗಿ ನಿಂತುಕೊಂಡನು. ಹದ್ದು ಕಾಗೆಗಳು ಅವನ ಹುಣ್ಣನ್ನು ತೋಡಿ ತಿನ್ನುತ್ತಿರಲು, ಅವನು ಮೇರುಪರ್ವತದಂತೆ ಅಲುಗಾಡದಂತಹ ಧೈರ್ಯವುಳ್ಳವನಾಗಿ ಒಂದುತಿಂಗಳವರೆಗೂ ಸಹಿಸಿದನು. ಆಮೇಲೆ ಸಮಾಧಿ ಮರಣದಿಂದ ಸತ್ತು ಅಚ್ಯುತ ಎಂಬ ಸ್ವರ್ಗದಲ್ಲಿ ಇಪ್ಪತ್ತೆರಡು ಸಾಗರದಷ್ಟು ಆಯುಷ್ಯವುಳ್ಳವನಾದ ಅಚ್ಯುತೇಂದ್ರ ನಾಗಿ ಹುಟ್ಟಿದನು. ಅಲ್ಲಿಯ ದೇವಲೋಕದ ದಿವ್ಯವಾದ ಸುಖವನ್ನು ಹಲವು ಕಾಲ ಅನುಭವಿಸಿ ಮತ್ತೆ ಇಲ್ಲಿಗೆ ಬಂದು ಸನತ್ಕುಮಾರನಾದನು. ಆ ಸಂನ್ಯಾಸಿ ಆ ಅಚ್ಯು ತೇಂದ್ರನಿಗೆ ವಾಹನದೇವತೆಯಾಗಿದ್ದನು. ಅವನು ಅಲ್ಲಿಂದ ಕೆಳಕ್ಕೆ ಜಾರಿ ಬಂದು ಇಲ್ಲಿ ನಾಲ್ಕು ಗತಿಗಳುಳ್ಳ ಈ ಪ್ರಪಂಚದಲ್ಲಿ ಬಹಳಕಾಲ ಸುತ್ತಿ ಅಂಜನಗಿರಿಯೆಂಬ ಪರ್ವ ತದ ತಪ್ಪಲಿನ ಋಷ್ಯಾಶ್ರಮದಲ್ಲಿ ವಸಿಷ್ಠನೆಂಬ ಋಷಿಗೂ ಘೂಕೆಯೆಂಬ ಋಷ್ಯಾಂಗನೆಗೂ ಬಕನೆಂಬ ಮಗನಾಗಿ ಹುಟ್ಟಿದನು. ಅವನು ಋಷಿಯಂತೆ ತಪಸ್ಸನ್ನು ಆಚರಿಸಿ ಸತ್ತು ಸಿತಯಕ್ಷನಾದನು. ಹೀಗೆ ಇಬ್ಬರ ಪೂರ್ವಜನ್ಮದ ದ್ವೇಷಕ್ಕೆ ಸಂಬಂಧಿಸಿದ ಕಥೆಯನ್ನು ಸುಮಾಳಿ ಎಂಬ ತ್ರಿಕಾಲಜ್ಞಾನಿಗಳಾದ ಚಾರಣ ಋಷಿಗಳು ವಿಸ್ತಾರವಾಗಿ ಹೇಳಿದರು. ಆಗ ನನ್ನ ಸ್ವಾಮಿಯಾದ ವಿದ್ಯಾಧರ ರಾಜನು ಕೇಳಿ ಅತ್ಯಂತ ಸಂತೋಷಗೊಂಡ ಮನಸ್ಸಿನವನಾಗಿ ಋಷಿಗಳಿಗೆ ನಮಸ್ಕರಿಸಿ ತನ್ನ ಪಟ್ಟಣಕ್ಕೆ ತೆರಳಿದನು. ಸನತ್ಕುಮಾರನು ಹೇಳಲು ಸೂಚಿಸಿದ ಪ್ರಕಾರ, ಕಮಳಮತಿಯೆಂಬ ವಿದ್ಯಾಧರ ಸ್ತ್ರೀಯು ಮಹೇಂದ್ರ

**ಪೇಱವೇೞ್ದೊಡೆ ಮಹೇಂದ್ರಸಿಂಹಂಗೆ ಪೇೞ್ದಳಾ ಅವಸರದೊಳ್ ಕುಮಾರಂ ನಿದ್ರಾಸುಖ ವಿಮುಕ್ತನಾದೊಡಾತನ ಸಮೀಪಕ್ಕೆ ಮಹೇಂದ್ರಸಿಂಹಂ ಪೋಗಿ ಇಂತೆಂದಂ ನಿನ್ನ ವಿಯೋಗ ದೊಳಪ್ಪ ದುಃಖದಿಂದಂ ವಿಶ್ವಸೇನ ಮಹಾರಾಜನುಂ ಸಹದೇವಿ ಮಹಾದೇವಿ ಮೊದಲಾಗೊಡೆಯ ವರ್ಗಂಗಳೆಲ್ಲಂ ಪ್ರಾಣಸಂದೇಹಮಾಗಿರ್ಕುಂ ಮದಱಿಂ ನಿಮ್ಮ ಪೊೞಲ್ಗೆ ಪೋಗಲ್ವೇೞ್ಕುಮೆಂದು ಪೇೞ್ದೊಡಾತನುಮಂತೆಗೆಯ್ವೆನೆಂದು ತಮ್ಮ ಮಾವಂಗಳಂ ಬಿಡಿಸಿ ವಿಚಿತ್ರಮಪ್ಪ ರಥಗಜತುರಗ ಗರುಡ ಕಳಹಂಸ ಮಯೂರ ಮಕರ ಸಿಂಹ ವಿಮಾನಾಧಿರೂಢರ್ಕಳಪ್ಪ ವಿದ್ಯಾಧರರ್ಕಳುಮಪ್ಪ ಸಹಸ್ರ ಸಂಖ್ಯಾ ಪ್ರಮಾಣಮಪ್ಪರಸಿಯರ್ಕಳುಂ ಬೆರಸು ಮಹಾವಿಭೂತಿಯಿಂದಂ ಬಂದು ಹಸ್ತಿನಾಪುರಮಂ ಪೊಕ್ಕನಿಬರುಂ ವಿಶ್ವಸೇನ ಮಹಾರಾಜಂಗಂ ಸಹದೇವಿ ಮಹಾದೇವಿಗಂ ಸಾಷ್ಟಾಂಗಮೆಱಗಿ ಪೊಡೆವಟ್ಟು ಅವರಾಶೀರ್ವಚನ ಸಹಸ್ರಂಗಳನಾಂತು ಕೊಂಡು ಸುಖದಿಂದಿರೆ ಸನತ್ಕುಮಾರಂಗೆ ಚಕ್ರಂ ಪುಟ್ಟಿ ಸಕಳ ಚಕ್ರವರ್ತಿಯಾಗಿ ಭೋಗೋಪಭೋಗಂಗಳೆಂಬ ಮಹಾ ಸಮುದ್ರದೊಳ್ ಪಲಕಾಲಂ ಕ್ರೀಡಿಸುತ್ತಿರ್ಪನ್ನೆಗಂ ಮತ್ತೊಂದು ದಿವಸಂ ಸೌಧರ್ಮಕಲ್ಪ ದೊಳಾ ಸೌಧರ್ಮೇಂದ್ರಂ ತನ್ನ ದೇವಸಭೆಯ ನಡುವೆ ಸಿಂಹಾಸನಮಸ್ತಕಸ್ಥಿತಂ ದೇವರ್ಕಳಿಂ**

ಸಿಂಹನಿಗೆ ಈ ರೀತಿಯಾಗಿ ಕಥೆಯ ಸಂಬಂಧನನ್ನೆಲ್ಲಾ ಹೇಳಿದಳು. ಆ ಸಂದರ್ಭದಲ್ಲಿ ಸನತ್ಕುಮಾರನು ನಿದ್ರೆಯ ಸುಖದಿಂದ ಬಿಡುಗಡೆ (ಎಚ್ಚರ) ಗೊಳ್ಳಲು ಅವನ ಬಳಿಗೆ ಮಹೇಂದ್ರಸಿಂಹನು ಹೋಗಿ ಹೀಗೆಂದನು– “ನಿನ್ನ ಅಗಲಿಕೆಯಿಂದಾದ ದುಃಖದಿಂದ ವಿಶ್ವಸೇನ ಮಹಾರಾಜನೂ ಸಹದೇವಿ ಮಹಾರಾಣಿ ಮುಂತಾಗಿರುವವರೆಲ್ಲ ಜೀವಿ ಸಿರುವುದೇ ಸಂಶಯವೆಂಬ ಸ್ಥಿತಿಯಲ್ಲಿದ್ದಾರೆ. ಆದುದರಿಂದ ನಿಮ್ಮ ಪಟ್ಟಣಕ್ಕೆ ಈಗ ಹೋಗಬೇಕಾಗಿದೆ” ಎನ್ನಲು ಸನತ್ಕುಮಾರನು “ಹಾಗೆಯೇ ಮಾಡುವೆನು” ಎಂದು ತನ್ನ ಮಾವನನ್ನು ಅಗಲಲು ಅಪ್ಪಣೆ ಪಡೆದನು. ಆಶ್ಚರ್ಯಕರವಾದ ರಥ, ಆನೆ, ಕುದುರೆ, ಗರುಡ, ಹಂಸ, ನವಿಲು, ಮೊಸಳೆ, ಸಿಂಹ, ವಿಮಾನ – ಮುಂತಾದವುಗಳಲ್ಲಿ ಕುಳಿತ ವಿದ್ಯಾಧರರನ್ನೂ ಎಂಟು ಸಾವಿರ ಸಂಖ್ಯೆಯ ಗಣನೆಯುಳ್ಳ ರಾಣಿಯರನ್ನೂ ಕೂಡಿ ಕೊಂಡು ಮಹಾ ವೈಭವದಿಂದ ಬಂದು ಹಸ್ತಿನಾಪುರವನ್ನು ಪ್ರವೇಶಿಸಿದನು. ಅವರೆಲ್ಲರೂ ವಿಶ್ವಸೇನ ಮಹಾರಾಜನಿಗೂ ಸಹದೇವಿ ಮಹಾರಾಜ್ಞಿಗೂ ಸಾಷ್ಟಾಂಗ ವಂದನೆಯನ್ನು ಮಾಡಿ ಅವರಿಂದ ಲಕ್ಷಗಟ್ಟಳೆಯ ಆಶೀರ್ವಾದಗಳನ್ನು ಸ್ವೀಕರಿಸಿಕೊಂಡು ಸುಖದಿಂದಿ ದ್ದನು. ಹೀಗಿರಲು ಅವನ ಆಯುಧಾಗಾರದಲ್ಲಿ ಒಂದು ಚಕ್ರ ಉದ್ಭವಿಸಿತು. ಅವನು ಸಮಸ್ತ ಭೂಮಂಡಲಕ್ಕೂ ಒಡೆಯನಾದ ಸಾರ್ವಭೌಮನಾಗಿ ಭೋಗ– ಉಪಭೋಗಗಳೆಂಬ ದೊಡ್ಡ ಸಮುದ್ರದಲ್ಲಿ ಹಲವು ಕಾಲ ಆಡುತ್ತ ಇದ್ದನು. ಆ ಮೇಲೆ, ಒಂದು ದಿವಸ ಸೌಧರ್ಮವೆಂಬ ಸ್ವರ್ಗದಲ್ಲಿ ಸೌಧರ್ಮೇಂದ್ರನು ತನ್ನ ದೇವತೆಗಳ ಸಭೆಯ ಮಧ್ಯದಲ್ಲಿ ಸಿಂಹಾಸನದ ಮೇಲೆ ಕುಳಿತು ದೇವತೆಗಳಿಂದ ಸುತ್ತು

ಪರಿವೇಷ್ಟಿತನಾಗಿ ಸೌದಾಮಿನಿಯೆಂಬ ನಾಟಕಮಂ ನೋಡುತ್ತಿರ್ಪನ್ನೆಗಂ ಈಶಾನ ಕಲ್ಪದಿಂದಂ ಸಹೋತ್ಪನ್ನ ಸಂಗಮದೇವಂ ಬಂದು ಸೌಧರ್ಮೇಂದ್ರನ ಸಭೆಯನವಯವದಿಂ ಪೊಕ್ಕಿರ್ದಾಗಳಾ ಸಭೆಯೊಳಿರ್ದ್ದ ದೇವರ್ಕಳ ರೂಪುಂ ತೇಜಮುಂ ಲಾವಣ್ಯಮುಮೆಲ್ಲಮಂ ಮಾಸಿಸಿ ತನ್ನ ತೇಜ ಮೆಯುಗ್ಗಳವಾಗಿರ್ದ್ದೋರ್ಪಂತೆ ಚಂದ್ರನುದಯಂಗೆಯ್ವಾಗಳ್ ಗ್ರಹನಕ್ಷತ್ರತಾರೆಗಳ ತೇಜಂ ಕುಂದುಗುಮಂತೆಲ್ಲರ ತೇಜಮುಮಂ ಕುಂದಿಸಿ ತಾನೆಯುಗ್ಗಳವಾಗೆ ಬೆಳಗುತ್ತಿರ್ದೋನಂ ದೇವರ್ಕಳೆಲ್ಲಂ ವಿಸ್ಮಯಂಬಟ್ಟು ನೋಡಿ ಸೌಧರ್ಮೇಂದ್ರನನಿಂತೆಂದು ಬೆಸಗೊಂಡರ್ ಸ್ವಾಮಿ ಈ ಸಂಗಮನೆಂಬ ದೇವನತಿಶಯಮಪ್ಪ ರೂಪುಂ ಲಾವಣ್ಯಮುಂ ತೇಜಮುಂ ದ್ವಾದಶಾದಿತ್ಯರ್ಕಳೊರ್ಮೊದಲೆ ಉದಯಂಗೆಯ್ವಂತೆ ಬೆಳಗಿಪ್ಪುದೇಕಾರಣದಿಂದಾದುದೆಂದು ಬೆಸಗೊಂಡೊಡಿಂತೆಂದು ಸೌಧರ್ಮೇಂದ್ರಂ ಪೇಟಲ್ ತೊಡಂಗಿದನ್ ಈತಂ ಮುನ್ನಿನ ಭವದೊಳ್ ಈ ಜಂಬೂದ್ವೀಪದ ಪೂರ್ವವಿದೇಹದೊಳ್ ಸೀತೆಯೆಂಬ ತೊಱೆಯ ಬಡಗಣದೆಸೆಯೊಳ್ ಪುಷ್ಕಳಾವತಿಯೆಂಬುದು ನಾಡಲ್ಲಿ ಪುಂಡರೀಕಿಣಿಯೆಂಬುದು ಪೊೞಲದನಾಳ್ವೊಂ ಸಕಳ ಚಕ್ರವರ್ತಿ ವಿಮಳವಾಹನನೆಂಬರಸನಾತನ ಮಹಾದೇವಿ ವಿಮಳಮತಿಯೆಂಬೊಳಾ ಇರ್ವ್ವರ್ಗ್ಗಂ ಪುಟ್ಟಿದೊಂ ಮಗಂ ಕ್ಷೀರಕುಮಾರನೆಂಬೊನಾತಂ ವೈರಾಗ್ಯಮನೊಡೆಯನಾಗಿ ತಪಂಬಡಲ್ಕೆಂದು ಬಗೆದಿ

ಪರಿಯಲ್ಪಟ್ಟವನಾಗಿ ಸೌದಾಮಿನಿ ಎಂಬ ನಾಟಕವನ್ನು ನೋಡುತ್ತಿದ್ದನು. ಆಗ ಈಶಾನ ಎಂಬ ಸ್ವರ್ಗದಿಂದ ತನ್ನ ಸಂಗಡವೇ ಹುಟ್ಟಿದ್ದ ಸಂಗಮದೇವನು ಬಂದು ಸೌಧರ್ಮೇಂದ್ರನ ಸಭೆಯನ್ನು ಸುಲಭವಾಗಿ ಪ್ರವೇಶಿಸಿದನು. ಆಗ ಆ ಸಭೆಯಲ್ಲಿದ್ದ ದೇವತೆಗಳ ರೂಪ, ಕಾಂತಿ, ಸೌಂದರ್ಯವೆಲ್ಲವನ್ನೂ ಮಸುಕಾಗಿ ಕಾಣಿಸುವ ತನ್ನ ಕಾಂತಿಯೇ ಅತಿಶಯವಾಗಿ ಕಾಣಿಸುತ್ತಿದ್ದು, ಚಂದ್ರನು ಮೂಡಿಕೊಂಡು ಬಂದಾಗ ಗ್ರಹ ನಕ್ಷತ್ರ ತಾರೆಗಳ ಕಾಂತಿ ಹೇಗೆ ಕುಗ್ಗಿದುದಾಗಿ ಕಾಣುವುದೋ ಹಾಗೆಯೇ ಸಂಗಮದೇವನ ಕಾಂತಿ ಇತರ ಎಲ್ಲರ ಕಾಂತಿಯನ್ನೂ ಕುಂದಿಸಿ ತನ್ನದೇ ಹೆಚ್ಚಾಗಿ ಕಾಣುತ್ತಿತ್ತು. ಈ ರೀತಿ ಬೆಳಗುತ್ತಿದ್ದವನನ್ನು ದೇವತೆಗಳೆಲ್ಲ ಆಶ್ಚರ್ಯಪಟ್ಟು ನೋಡಿ, ಸೌಧರ್ಮೇಂದ್ರನನ್ನು ಹೀಗೆ ಕೇಳಿದರು-"ಪ್ರಭೂ, ಈ ಸಂಗಮದೇವನ ಹೆಚ್ಚಾದ ರೂಪವೂ ಸೌಂದರ್ಯವೂ ಕಾಂತಿಯೂ ಹನ್ನೆರಡು ಸೂರ್ಯರು ಏಕಕಾಲದಲ್ಲಿ ಉದಯಿಸಿದ ಹಾಗೆ ಬೆಳಕು ಕೊಡುವುದಕ್ಕೆ ಕಾರಣವೇನು?" ಎಂದು ದೇವತೆಗಳು ಕೇಳಲು, ಸೌಧರ್ಮೇಂದ್ರನು ಈ ರೀತಿ ಹೇಳತೊಡಗಿದನು—ಈತನು ಹಿಂದಿನ ಜನ್ಮದಲ್ಲಿ ಕ್ಷೀರಕುಮಾರನಾಗಿದ್ದನು. ಈ ಜಂಬೂ ದ್ವೀಪದ ಪೂರ್ವವಿದೇಹದಲ್ಲಿ ಸೀತಾನದಿಯ ಉತ್ತರ ದಿಕ್ಕಿನಲ್ಲಿ ಪುಷ್ಕಳಾವತಿ ಎಂಬ ನಾಡಿದೆ. ಅಲ್ಲಿ ಪುಂಡರೀಕಿಣಿಯೆಂಬ ಪಟ್ಟಣವನ್ನು ಇಡೀ ಭೂಮಂಡಲಕ್ಕೆ ಒಡೆಯನಾದ ವಿಮಳವಾಹನನೆಂಬ ರಾಜನು ಆಳುತ್ತಿದ್ದನು. ಅವನ ಮಹಾರಾಣಿ ವಿಮಳಮತಿ ಎಂಬವಳು. ಆ ದಂಪತಿಗಳಿಗೆ ಕ್ಷೀರಕುಮಾರನೆಂಬವನು ಮಗನು. ಅವನು ವೈರಾಗ್ಯವಂತನಾಗಿ ತಪಸ್ಸು ಮಾಡಬೇಕೆಂದು ಬಗೆದನು. ಆದರೆ ಅವನ ತಾಯಿ

**ದೊಡೆ ತಾಯ್ ತಪಂಬಡಲೀಯದೆನಿತಾನುಂ ತೆಱದಿಂ ನುಡಿದು ತಗುಳ್ದೊಡೆ ತಾಯವಚನ ಮನತಿಕ್ರಮಿಸಲಾಱದೆ ಮನೆಯೊಳಿರ್ದ್ದಂತೆ ಬ್ರಹ್ಮಚರ್ಯಂ ಮೊದಲಾಗೊಡೆಯ ಬ್ರತಂಗಳಂ ಪ್ರತಿಪಾಳಿಸಿ ಆಚಾಮ್ಲವರ್ಧನವೆಂಬ ನೋಂಪಿಯುಂ ಪನ್ನೆರಡು ವರ್ಷಂಬರಂ ನೋಂತು ಸಮಾಧಿಮರಣದಿಂದಂ ಮುಡಿಪೆ ಇಂತಪ್ಪ ರೂಪುಂ ತೇಜಮುಂ ಲಾವಣ್ಯಮುಮುದಱಿಂದೀತಂ ಗಾದುವೆಂದು ಸೌಧರ್ಮೇಂದ್ರಂ ಪೇೞ್ದೊಡೆ ಮತ್ತಂ ದೇವರ್ಕಳಿಂತೆಂದು ಬೆಸಗೊಂಡರ್ ಸ್ವಾಮಿ ಈತನಂತಪ್ಪ ರೂಪುಂ ತೇಜಮುಂ ಲಾವಣ್ಯಮುಮನೊಡೆಯರ್ ಪೆಱರಾರಾನುಮೊಳರೆ ಎಂದು ಬೆಸಗೊಂಡೊಡೆ ಸೌಧರ್ಮೇಂದ್ರನೆಂದನೊಳನ್ ಹಸ್ತಿನಾಪುರದೊಳ್ ಕುರುವಂಶದಾತಂ ಸನತ್ಕುಮಾರನೆಂಬೊಂ ಚಕ್ರವರ್ತಿಯಾತಂ ದೇವರ್ಕಳ ರೂಪುಂ ಲಾವಣ್ಯಮುಂ ತೇಜಮು ಮನೊಡೆಯ ನಾವಮಾನುಮಗ್ಗಳಮೆಂದು ಪೇೞ್ದೊಡೆ ಇಂದ್ರನ ಮಾತಂ ನಂಬದೆ ವಿಜಯ ವೈಜಯಂತರೆಂಬರಿರ್ವರ್ ದೇವರ್ಕಳ್ ಪಾರ್ವರ ರೂಪಂ ಕೈಕೊಂಡು ಹಸ್ತಿನಾಪುರಕ್ಕೆ ಸನತ್ಕು ಮಾರ ಚಕ್ರವರ್ತಿಯ ರೂಪಂ ನೋಡಲೆಂದು ಬಂದು ಬಾಗಿಲೊಳಿರ್ದ್ದ ಪಡಿಯಱರನೆಂದರ್— ನಿಮ್ಮರಸಂಗಿಂತೆಂದು ಪೇೞಿಂ ಗೆಂಟಱಿಂ ಬಂದೆವು ನಿಮ್ಮ ರೂಪನೞ್ತಿವಟ್ಟು ನೋಡಲ್ಕೆಂ**

ಅವನನ್ನು ತಪಸ್ಸಿಗೆ ಹೋಗಲು ಬಿಡದೆ, ಎಷ್ಟೋ ರೀತಿಯಿಂದ ನುಡಿದು ಒತ್ತಾಯ ಪಡಿಸಿದಳು. ಕ್ಷೀರಕುಮಾರನು ತಾಯಿಯ ಮಾತನ್ನು ಮೀರಲಾರದೆ ಮನೆಯಲ್ಲಿದ್ದು ಕೊಂಡೇ ಬ್ರಹ್ಮಚರ್ಯ ಮುಂತಾಗಿರುವ ವ್ರತಗಳನ್ನು ನಡೆಸಿಕೊಂಡು ಆಚಾಮ್ಲವರ್ಧನ ಎಂಬ ವ್ರತವನ್ನು ಹನ್ನೆರಡು ವರ್ಷಗಳವರೆಗೆ ನಡೆಸಿಕೊಂಡು ಬಂದು ಸಮಾಧಿ ಮರಣ ದಿಂದ ಸತ್ತುಹೋದನು. ಆದರಿಂದಲೇ ಈತನಿಗೆ ಇಂತಹ ರೂಪವೂ ಕಾಂತಿಯೂ ಸೌಂದರ್ಯವೂ ಆಗಿವೆ—ಎಂದು ಸೌಧರ್ಮೇಂದ್ರನು ಹೇಳಿದನು. ಅನಂತರ ದೇವತೆಗಳು ಹೀಗೆ ಕೇಳಿದರು—"ಪ್ರಭೂ, ಈ ಸಂಗಮದೇವನಂತಹ ರೂಪವೂ ಕಾಂತಿಯೂ ಸೌಂದರ್ಯವೂ ಉಳ್ಳವರು ಬೇರೆ ಯಾರಾದರೂ ಇರುವರೆ?" ಎಂದು ಕೇಳಲು ಸೌಧರ್ಮೇಂದ್ರನು ಹೇಳಿದನು—"ಇರುವನು. ಹಸ್ತಿನಾಪುರದಲ್ಲಿ ಕುರುವಂಶದವನಾದ ಸನತ್ಕುಮಾರನೆಂಬ ಚಕ್ರವರ್ತಿ ಇರುವನು. ಅವನು ದೇವತೆಗಳ ರೂಪ, ಸೌಂದರ್ಯ, ಕಾಂತಿಗಳನ್ನು ಉಳ್ಳವನು. ಅವರಿಗಿಂತಲೂ ಅತ್ಯತಿಶಯನಾಗಿ ಶ್ರೇಷ್ಠನಾದವನು"— ಎಂದು ಹೇಳಿದನು. ಇಂದ್ರನು ಹೇಳಿದ ಮಾತನ್ನು ನಂಬದೆ, ವಿಜಯ ಮತ್ತು ವೈಜಯಂತ ಎಂಬ ಇಬ್ಬರು ದೇವತೆಗಳು ಬ್ರಾಹ್ಮಣರ ರೂಪವನ್ನು ತಾಳಿದರು. ಸನತ್ಕುಮಾರ ಚಕ್ರವರ್ತಿಯ ರೂಪವನ್ನು ನೋಡುವುದಕ್ಕಾಗಿ ಹಸ್ತಿನಾಪುರಕ್ಕೆ ಬಂದರು. ಅವರು ಬಾಗಿಲಿನಲ್ಲಿದ್ದ ದ್ವಾರಪಾಲಕರೊಡನೆ ಹೀಗೆಂದರು—"ನಿಮ್ಮ ರಾಜನಿಗೆ ಈ ರೀತಿಯಾಗಿ ತಿಳಿಸಿ—ನಿಮ್ಮ ರೂಪವನ್ನು ಆಸಕ್ತಿಯಿಂದ ನೋಡುವುದಕ್ಕಾಗಿ ನಾವು ದೂರದಿಂದ ಬಂದಿದ್ದೇವೆ" ಹೀಗೆ ಹೇಳಲು ಪ್ರತೀಹಾರರು ಒಳಗೆ ಹೋಗಿ ಅರಸನಿಗೆ ತಿಳಿಸಿದರು.

ದೊಡವರುಂ ಪೋಗಿ ತಮ್ಮರಸಂಗಱಿಪಿದೊಡೆ ಅರಸನನುಮತದಿಂದವರರಮನೆಯಂ ಪೊಕ್ಕರಸನ ಸಾರೆವೋಗಿ ನೋೞ್ಪಾಗಳರಸಂ ಸುಗಂಧತೈಲದಿಂ ಮೆಯ್ಯನಭ್ಯಂಗನಂ ಗೆಯ್ದು ಮಜ್ಜನಂಬುಗ ಲೆಂದಿರ್ದ್ದವಸರದೊಳ್ ದೇವರ್ಕ್ಕಳ್ ಸನತ್ಕುಮಾರ ಚಕ್ರವರ್ತಿಯ ರೂಪಂ ವಾಳಾಗ್ರದಿಂ ತೊಟ್ಟು ನಖಾಗ್ರಂ ಬರೆಗಗ್ರದಿಂತೊಟ್ಟು ವಾಳಾಗ್ರಂ ಬರೆಗಂ ಏಱಿಯುಮಿೞಿಯೆಯುಂ ನೀಡುಂ ಭಾವಿಸಿ ನೋಡಿ ಚೋದ್ಯಂ ಬಟ್ಟಿಂತು ರೂಪುಂ ತೇಜಮುಂ ಗಾಡಿಯುಂ ಯೌವನಮುಂ ದೇವ ರ್ಕ್ಕಳ್ಗಮಿಲ್ಲೆಂದು ಚಕ್ರವರ್ತಿಯ ರೂಪಂ ಪೊಗೞ್ದೊಡರಸನಿಂತೆಂದಂ ನೀವಾರ್ಗ್ಗೇನೆಂಬಿರೆಲ್ಲಿಂ ಬಂದಿರೆಂದು ಬೆಸಗೊಂಡೊಡವರೆಂದರ್ ದೇವಲೋಕದಿಂ ಬಂದೆವು ದೇವರ್ಕಳೆವು ಸೌಧರ್ಮ ಕಲ್ಪದೊಳ್ ದೇವರ್ಕಳ ಸಭೆಯ ನಡುವೆ ಸೌಧರ್ಮೇಂದ್ರಂ ನಿಮ್ಮ ರೂಪನಾದಮಾನುಂ ನಚ್ಚಿ ಬಣ್ಣಿಸಿದೊಡಿಂದ್ರನ ಮಾತಂ ನಂಬದೆ ನಿಮ್ಮಂ ನೋಡಲ್ ಬಂದೆವಿಂದ್ರನ ವ್ಯಾವರ್ಣಿಸುವುದ ರ್ಕ್ಕಗ್ಗಳಮೆ ನಿಮ್ಮ ರೂಪುಂ ಯೌವನಮುಂ ಲಾವಣ್ಯಮುಮಂ ಕಂಡೆವೆಂದು ಪೇೞ್ದಾಮಿನ್ನೆಮ್ಮ ದೇವಲೋಕಕ್ಕೆ ಪೋಪೆವೆಂದೊಡರಸಂ ಮನಂ ಪೆರ್ಚಿ ತನ್ನೊಳ್ ತನ್ನ ರೂಪಂ ನಚ್ಚಿ ಕಿಱಿದು ಬೇಗಂ ಮಾಣಿಮಭ್ಯಂಗನಂ ಗೆಯ್ದ ರೂಪಂ ಕಂಡಿರಿಂ ಮಜ್ಜನಂ ಬೊಕ್ಕು ಪಸದನಂ

ರಾಜನ ಅಪ್ಪಣೆಯಂತೆ ಆ ದೇವತೆಗಳು ಅರಮನೆಯೊಳಗೆ ಹೋದರು. ಅರಸನ ಸಮೀಪಕ್ಕೆ ಹೋಗಿ ನೋಡುವಾಗ, ಅರಸನು ಸುವಾಸಿತವಾದ ತೈಲವನ್ನು ಮೈಗೆ ಲೇಪಿಸಿದ್ದನು. ಸ್ನಾನಕ್ಕೆ ಹೋಗಲು ಸಿದ್ಧನಾಗಿದ್ದನು. ಈ ಸಂದರ್ಭದಲ್ಲಿ ದೇವತೆಗಳು ಸನತ್ಕುಮಾರ ಚಕ್ರವರ್ತಿಯ ರೂಪವನ್ನು ತಲೆಯ ಕೂದಲ ತುದಿಯಿಂದ ಹಿಡಿದು ಕಾಲ ಹೆಬ್ಬೆರಳಿನ ಉಗುರ ತುದಿವರೆಗೂ ಉಗುರು ತುದಿಯಿಂದ ಹಿಡಿದು ತಲೆಗೂದಲ ತುದಿಯ ವರೆಗೂ ಏರುವಂತೆಯೂ ಇಳಿಯುವಂತೆಯೂ ಅತಿಶಯವಾಗಿ ಭಾವಿಸಿ ನೋಡಿದರು. ಆಶ್ಚರ್ಯಪಟ್ಟು "ಈ ರೀತಿಯ ರೂಪ, ಕಾಂತಿ, ಚೆಲುವು, ಯೌವನಗಳು ದೇವತೆಗಳಿಗೂ ಇಲ್ಲ" ಎಂದು ಸನತ್ಕುಮಾರ ಚಕ್ರವರ್ತಿಯ ರೂಪವನ್ನು ಹೊಗಳಿದರು. ಆಗ ಅರಸನು "ನೀವು ಯಾರು ? ಏನು ಹೇಳಲಿರುವಿರಿ ? ಎಲ್ಲಿಂದ ಬಂದಿರಿ ?" ಎಂದು ಕೇಳಲು ಅವರು ಹೀಗೆಂದರು—"ನಾವು ದೇವಲೋಕದಿಂದ ಬಂದಿದ್ದೇವೆ, ದೇವತೆಗಳಾಗಿದ್ದೇವೆ. ಸೌಧರ್ಮ ವೆಂಬ ಸ್ವರ್ಗದಲ್ಲಿ ಸೌಧರ್ಮೇಂದ್ರನು ದೇವತೆಗಳ ಸಭೆಯ ನಡುವೆ ನಿಮ್ಮ ರೂಪವನ್ನು ಅತಿಶಯವಾಗಿ ನಂಬಿ ವರ್ಣಿಸಿದಾಗ, ನಾವು ಇಂದ್ರನ ಮಾತನ್ನು ನಂಬದೆ ನಿಮ್ಮನ್ನು ನೋಡುವುದಕ್ಕಾಗಿ ಬಂದಿದ್ದೇವೆ. ಇಂದ್ರನು ವರ್ಣಿಸಿದುದಕ್ಕಿಂತ ಶ್ರೇಷ್ಠವಾಗಿ ನಾವು ನಿಮ್ಮ ರೂಪ-ಯೌವನ-ಸೌಂದರ್ಯಗಳನ್ನು ಕಂಡೆವು"—ಎಂದು ಹೇಳಿ "ನಾವು ಇನ್ನು ನಮ್ಮ ದೇವಲೋಕಕ್ಕೆ ಹೋಗುವೆವು" ಎಂದರು. ಆಗ ರಾಜನು ಮನಸ್ಸಿನಲ್ಲಿ ಹಿಗ್ಗಿದನು. ತನ್ನ ರೂಪದ ಹಿರಿಮೆಯನ್ನು ತನ್ನಲ್ಲೇ ನಂಬಿ—"ಸ್ವಲ್ಪ ಹೊತ್ತು ತಡೆಯಿರಿ. ಮೈಗೆ ತೈಲ ಹಚ್ಚಿದ ರೂಪವನ್ನು ಕಂಡಿದ್ದೀರಿ. ಸ್ನಾನಮಾಡಿ ಅಲಂಕರಿಸಿಕೊಂಡ ರೂಪವನ್ನು

ಗೊಂಡಿರ್ದ ರೂಪಂ ನೋಡಿ ಪೋಗಿ ಮೆಂದರಸಂ ನುಡಿದೊಡಂತೆ ಗೆಯ್ವೆವೆಂದು ದೇವರ್ಕಳಿರ್ದೊ ಡರಸನುಂ ಮಜ್ಜನಂ ಬೊಕ್ಕು ಬೇಗಂ ಸರ್ವಾಭರಣಭೂಷಿತನಾಗಿ ಆಸ್ಥಾನಮಂಟಪದೊಳ್ ಸಿಂಹಾಸನಮಸ್ತಕಸ್ಥಿತನಾಗಿ ಸಾಮಂತಮಹಾಸಾಮಂತರ್ ಮೂವತ್ತಿರ್ಛಾಸಿರ್ವರ್ ಮಕುಟ ಬದ್ಧರ್ಕ್ಕಳುಂ ವಿದ್ಯಾಧರರ್ಕ್ಕಳುಂ ಯಕ್ಷದೇವರ್ಕ್ಕಳುಂ ಬಳಸಿಯುಮಿರ್ದೋಲಗಿಸೆ ಮೂವತ್ತೆ ರಡುಂ ಚಾಮರಂಗಳಿಕ್ಕೆ ಸೌಧರ್ಮೇಂದ್ರನಿಪ್ಪಂತಿರ್ದು ದೇವರ್ಕಳ್ಗೆ ಬಟಿಯಟ್ಟಿ ಬರಿಸಿ ನೋಡಿ ಮಿನ್ನೆನ್ನ ರೂಪನೆಂದು ತನ್ನಂ ತೋಱಿದೊಡೆ ದೇವರ್ಕಳ್ ನೋಡಿ ವಿಸ್ಮಯಂಬಟ್ಟಿದೇಂ ಚೋದ್ಯಮೋ

ಶ್ಲೋ ॥ · ಅನೇಕ ರಾಗಸಂಕೀರ್ಣಂ ಘನಲಗ್ನಮಪಿ ಕ್ಷಣಾತ್
ಮಾನುಷಂ ಯೌವನಂ ಕಷ್ಟಂ ನಶ್ಯತೀಂದ್ರಧನುರ್ಯಥಾ ॥

ಎಂದೀ ಕ್ಷಣಮಾತ್ರದೊಳೆ ಮನುಷ್ಯರ ರೂಪುಂ ಗಾಡಿಯುಂ ಚೆಲ್ವಂ ತೇಜಮುಂ ಯೌವನಮುಂ ಕುಂದಿತ್ತೆನೆ ಚಕ್ರವರ್ತಿಯೆಂದನೆನ್ನ ರೂಪಂ ಮುನ್ನ ನೀಮೆ ಪೊಗೞ್ದಿರೀಗಳೇಕೆ ಪೞಿದಪ್ಪಿರೆನೆ ದೇವರೆಂದರ್ ಕೇಳರಸಾ ದೇವರ್ಕಳ ತೇಜಮುಂ ಲಾವಣ್ಯಮುಂ ಪುಟ್ಟಿದ ಪ್ರಥಮ ಸಮಯದಿಂ ತೊಟ್ಟು ಪೆರ್ಚುತ್ತುಂ ಪೋಕುಮಾಯುಷ್ಯದ ನಡುವರೆಗಮಲ್ಲಿಂದತ್ತ ಕುಂದುತ್ತುಂ ಪೋಕು

ನೋಡಿದನಂತರ ಹೋಗಿ" ಎಂದು ಅರಸನು ಹೇಳಿದನು. "ಹಾಗೆಯೇ ಮಾಡುವೆವು" ಎಂದು ನುಡಿದು ದೇವತೆಗಳು ನಿಂತುಕೊಂಡರು. ರಾಜನು ಸ್ನಾನವನ್ನು ಮಾಡಿ ಬೇಗನೆ ಎಲ್ಲಾ ಆಭರಣಗಳಿಂದ ಸಿಂಗರಿಸಿಕೊಂಡನು. ಆಸ್ಥಾನದ ಮಂಟಪದಲ್ಲಿ ಸಿಂಹಾಸನದ ಮೇಲೆ ಕುಳಿತುಕೊಂಡನು. ಸಾಮಂತರೂ ಮಹಾಸಾಮಂತರೂ ಮೂವತ್ತೆರಡು ಸಾವಿರ ಕಿರೀಟಧಾರಿಗಳಾದ ರಾಜರೂ ವಿದ್ಯಾಧರರೂ ಯಕ್ಷರೂ ದೇವತೆಗಳೂ ಆವರಿಸಿ ಕೊಂಡಿದ್ದು ಸಭೆಯಲ್ಲಿ ಸೇರಿದ್ದರು. ಮೂವತ್ತೆರಡು ಚಾಮರಗಳನ್ನು ಬೀಸುತ್ತಿರಲು ಸನತ್ಕುಮಾರನು ಸೌಧರ್ಮೇಂದ್ರನ ಹಾಗೆ ವೈಭವದಿಂದ ಇದ್ದು ದೇವತೆಗಳಿಗೆ ದೂತರನ್ನು ಕಳುಹಿಸಿ ಬರಮಾಡಿದನು. "ಇನ್ನು ನನ್ನ ರೂಪವನ್ನು ನೋಡಿ" ಎಂದು ಅವರಿಗೆ ತನ್ನನ್ನು ತೋರಿಸಿದನು. ಆಗ ಅವರು ಸನತ್ಕುಮಾರನನ್ನು ನೋಡಿ ಆಶ್ಚರ್ಯ ಪಟ್ಟರು. "ಇದೇನು ಆಶ್ಚರ್ಯವೋ ! [ಕ್ಲೇಶಕರವಾದ ಮನುಷ್ಯನ ಯೌವನವು ಹಲವಾರು ಪ್ರೀತಿ ಸಂಬಂಧಗಳಿಂದ ಕೂಡಿದ್ದರೂ ಗಟ್ಟಿಯಾಗಿ ಹೊಂದಿಕೊಂಡಿದ್ದರೂ, ಮಳೆಬಿಲ್ಲಿನ ಹಾಗೆ, ಅದು ಹಲವಾರು ಬಣ್ಣಗಳಿಂದ ತುಂಬಿದ್ದರೂ ಮೋಡಕ್ಕೆ ಅಂಟಿ ಕೊಂಡಿದ್ದರೂ ಹೇಗೆ ನಾಶವಾಗುವುದೋ ಹಾಗೆಯೇ ಕ್ಷಣದಲ್ಲಿ ನಾಶವಾಗುತ್ತದೆ.] ಕ್ಷಣದಲ್ಲೇ ಮನುಷ್ಯರ ರೂಪವೂ, ಸೌಂದರ್ಯವೂ ಸೊಬಗೂ ಕಾಂತಿಯೂ ಯೌವನವೂ ಕುಂದುತ್ತದೆ" ಎಂದು ಹೇಳಲು ಚಕ್ರವರ್ತಿಯು "ನನ್ನ ರೂಪವನ್ನು ಮೊದಲು ನೀವೇ ಹೊಗಳಿದಿರಿ, ಈಗ ಯಾಕೆ ನಿಂದಿಸುತ್ತೀರಿ ?" ಎಂದು ಕೇಳಿದನು. ಅದಕ್ಕೆ ಅವರು—"ದೇವತೆಗಳ ಅರಸನೇ, ಕೇಳು. ಮನುಷ್ಯರ ಕಾಂತಿ ಸೌಂದರ್ಯಗಳು

ಮಾಯುಷ್ಯಾಂತಂ ಬರೆಗಂ ಮತ್ತಾಮುಂ ನಿಮ್ಮ ರೂಪಂ ಯೌವನ ಭರದೊಳಿರ್ದ್ದುದುಮಂ ಕಂಡೆವೀಗಳಾಯುಷ್ಯಮುಂ ತೇಜಮುಂ ರೂಪುಂ ಲಾವಣ್ಯಮುಂ ಯೌವನಮುಂ ಕಿಱಿದು ಕುಂದಿದುದಂ ಕಂಡೆಮೆನೆ ಚಕ್ರವರ್ತಿ ನೀಮೆಂತಱಿದಿರೆಂದು ಬೆಸಗೊಂಡೊಡೆ ದೇವರ್ಕ್ಕಳಿಂದರೆ ಮಗವಧಿ ಜ್ಞಾನಮುಂಟಪ್ಪುದಱಿಂದಱಿದೆವು ಮನುಷ್ಯರ್ಗ್ಗಱಿಯಲಾಗದೆಂದೊಂದು ದೋಣಿ ಕೊಂಡಮಂ ತರಿಸಿ ನೀರಂ ತೆಕ್ಕನೆ ತೀವಿಯದಱೊಳಗೆ ಚಮರಿಯನರ್ದ್ದಿ ತೆಗೆದು ಬಳಸಿಯುಂ ಬೀಸಿದಾಗಳ್ ಸಭೆಯೊಳಿರ್ದ ಮಾನಸರ ಮೇಗೆಲ್ಲಂ ನೀರ್ ಪನಿತುದಂ ತೋಱಿ ದೇವರೆಂದರ್ ಪೇೞ್ವೀ ಚಮರಿಯೊಳ್ ತಗುಳ್ದ್ದು ಬಿಯಮಾದನಿತು ನೀರಂ ಕೊಂಡದೊಳ್ ಕುಂದಿಮಂ ತೋಱಿಮೆಂದೊಡವರುಮಱಿಯದಿರ್ದ್ದೊಡೆಂತಿದಂ ನೀಮಱಿಯಲಾಗದಂತೆ ಮಾನಸರಾ ಯುಷ್ಯಮುಂ ತೇಜಮುಂ ಲಾವಣ್ಯಮುಂ ಯೌವನಮುಂ ಪ್ರತಿಸಮಯಂ ಕುಂದುತಿರ್ಕ್ಕುಮಾ ವೀಚಿಮರಣಮಂ ನಿಮಗಱಿಯಲಾಗದೆಂದು ಪೇೞ್ದು ಹೇತು ದೃಷ್ಟಾಂತಂಗಳಿಂದಂ ಪ್ರತ್ಯಕ್ಷಮಂ ತೋಱಿ ಚಕ್ರವರ್ತಿಯುಂ ನಂಬೆ ನುಡಿದು ದೇವರ್ಕ್ಕಳ್ ತಮ್ಮ ಸೌಧರ್ಮಕಲ್ಪಕ್ಕೆ ಪೋದರ್

ಜನನದ ಮೊದಲ ಸಮಯದಿಂದ ಪ್ರಾರಂಭವಾಗಿ ಆಯುಷ್ಯದ ನಡುವಿನವರೆಗೆ ಹೆಚ್ಚುತ್ತ ಹೋಗುತ್ತವೆ. ಅಲ್ಲಿಂದನಂತರ ಆಯುಷ್ಯದ ಕೊನೆವರೆಗೆ ಕಡಮೆಯಾಗುತ್ತ ಹೋಗುತ್ತವೆ. ನಾವು ಯೌವನದ ಭರದಲ್ಲಿದ್ದ ನಿಮ್ಮ ರೂಪವನ್ನು ಕಂಡೆವು. ಈಗ ಆಯುಷ್ಯವೂ ಕಾಂತಿಯೂ ರೂಪವೂ ಸೌಂದರ್ಯವೂ ಯೌವನವೂ ತುಸು ಕಡಮೆಯಾದುದನ್ನು ಕಂಡಿದ್ದೇವೆ" ಎಂದರು. "ನೀವು ಹೇಗೆ ತಿಳಿದುಕೊಂಡಿರಿ ?" ಎಂದು ಚಕ್ರವರ್ತಿ ಕೇಳಿದನು. ಆಗ ದೇವತೆಗಳು—"ನಮಗೆ ಅವಧಿಜ್ಞಾನ (ತ್ರಿಕಾಲಜ್ಞಾನ) ವಿರುವುದರಿಂದ ತಿಳಿದಿದ್ದೇವೆ. ಮನುಷ್ಯರಿಗೆ ಇದನ್ನು ತಿಳಿಯಲು ಸಾಧ್ಯವಿಲ್ಲ" ಎಂದರು. ಆ ಮೇಲೆ ಒಂದು ದ್ರೋಣಿ ಕುಂಡವನ್ನು (ದೊನ್ನೆಯಂತಹ ಹರವಿಯನ್ನು) ತರಿಸಿ, ಅದರಲ್ಲಿ ನೀರನ್ನು ಭರ್ತಿಯಾಗಿ ತುಂಬಿಸಿ ಅದರೊಳಗೆ ಚಾಮರವನ್ನು ಅದ್ದಿ ತೆಗೆದು ಸುತ್ತಲೂ ಬೀಸಿದರು. ಆಗ ಸಭೆಯಲ್ಲಿದ್ದ ಮನುಷ್ಯರ ಮೇಲೆಲ್ಲ ನೀರು ಹನಿಗಳಾಗಿ ಬಿದ್ದುದನ್ನು ತೋರಿಸಿ ದೇವತೆಗಳು ಹೀಗೆಂದರು—"ಈ ಚಾಮರದಲ್ಲಿ ಸೇರಿಕೊಂಡು ವ್ಯಯವಾದುದು ಎಷ್ಟು ನೀರು ಎಂಬುದನ್ನು-ಹರವಿಯಲ್ಲಿ ಕಡಮೆಯಾದುದನ್ನು ತೋರಿಸಿ" ಎನ್ನಲು ಅವರು ತಿಳಿಯದವರಾಗಿದ್ದರು. "ಇದನ್ನು ಹೇಗೆ ನೀವು ತಿಳಿಯಲಾರಿರೋ ಹಾಗೆಯೇ ಮನುಷ್ಯರ ಆಯುಷ್ಯವೂ ಕಾಂತಿ-ಸೌಂದರ್ಯ-ಯೌವನಗಳೂ ಪ್ರತಿಯೊಂದು ಹೊತ್ತಿನಲ್ಲೂ ಕುಂದಿಹೋಗುತ್ತಿರುವುದು. ಆ ಅಲೆಯ ಸಾವನ್ನು (ಕ್ಷಿಪ್ರಮರಣವನ್ನು) ನಿಮಗೆ ತಿಳಿಯಲು ಸಾಧ್ಯವಿಲ್ಲ" ಎಂದು ಆ ದೇವತೆಗಳು ಹೇಳಿ ಕಾರಣಗಳಿಂದಲೂ ದೃಷ್ಟಾಂತಗಳಿಂದಲೂ ಸಂಗತಿಯನ್ನು ಕಣ್ಣೆದುರಿನಲ್ಲಿ ಕಾಣಿಸಿ, ಚಕ್ರವರ್ತಿ ನಂಬುವ ಹಾಗೆ ಹೇಳಿ, ತಮ್ಮ ಸೌಧರ್ಮಸ್ವರ್ಗಕ್ಕೆ ತೆರಳಿದರು. ಆ ಮೇಲೆ, ಇತ್ತ ಸನತ್ಕುಮಾರ

ಮಿತ್ತಿತ್ತ ಸನತ್ಕುಮಾರ ಚಕ್ರವರ್ತಿಗದುವೆ ನಿರ್ವೇಗಕ್ಕೆ ಕಾರಣಮಾಗಿ ಶರೀರಭೋಗಕ್ಕೆ ಪೇಸಿ ಇಂತೆಂದು ಮನದೊಳ್ ಬಗೆಗುಂ

ವೃತ್ತ॥ ರೂಪಂ ಯೌವನಮಾಯುರಕ್ಷವಿಷಯಾ ಭೋಗೋಪಭೋಗಾ ವಪುಃ
ವೀರ್ಯಂ ಸ್ನೇಹಸಮಾಗಮೋ ವಸುಮತಿಸೌಭಾಗ್ಯ ಭಾಗ್ಯಾದಯಃ
ನೋ ನಿತ್ಯಾಃ ಸ್ಫುಟಮಾತ್ಮನಸ್ಸಮುದಿತ ಜ್ಞಾನೇಕ್ಷಣಾಭ್ಯಾಮೃತೇ
ಶೇಷಾ ಇತ್ಯನುಚಿಂತಯಂತು ಸುಧಿಯಃ ಸರ್ವೇ ಸದ್ಯಾನಿತ್ಯತಾಂ

ಶ್ಲೋಕ॥ ಆದೌ ಜನ್ಮಜರಾರೋಗೌ ಮಧ್ಯೇಪ್ಯಂತೇ ಖಳಾಂತಕಃ
ಇತಿ ಚಕ್ರೈಕ ಸಂಭ್ರಾಂತಿರ್ಜಂತೋರ್ಮಧ್ಯೇ ಭವಾರ್ಣವಂ

ಎಂದಿಂತು ವೈರಾಗ್ಯಮಂ ಭಾವಿಸಿ ವಿಜಯಕುಮಾರನೆಂಬ ಪಿರಿಯ ಮಗಂಗೆ ರಾಜ್ಯಪಟ್ಟಂಗಟ್ಟಿ ಪರಿವಾರಕ್ಕೆಲ್ಲಂ ನಿಶ್ಶಲ್ಯನಾಗಿ ಬಾಹ್ಯಾಭ್ಯಂತರ ಪರಿಗ್ರಹಂಗಳೆಲ್ಲಮಂ ತೊಱೆದು ಪಲಂಬರ್ ಮಕುಟಬದ್ಧರ್ಕಳಪ್ಪರಸುಮಕ್ಕಳ್ವೆರಸು ವಿನಯಂಧರ ಭಟಾರರ ಪಕ್ಕದೆ ತಪಂಬಟ್ಟು ದೀಕ್ಷೋಪವಾಸ ತ್ರಿರಾತ್ರಂಗೆಯ್ದು ಶರೀರಸಂಧಾರಣನಿಮಿತ್ತಂ ಚರಿಗೆವೊಕ್ಕೊಡೊರ್ವಳ್ ಬಡಬಿರ್ದಿನಿಱಿಸಿ ಪ್ರಥಮ ದಿವಸದೊಳೆ ಪಾರಕಿನ ಕೊಟಿಮುವರೆಯುಮೆಣ್ಣೆಯುಮಾಡಿನಳಿಯುಮಂ ಬಡ್ಡಿಸಿ

ಮಹಾರಾಜನಿಗೆ ಅದೇ ಘಟನೆ ವೈರಾಗ್ಯಕ್ಕೆ ಕಾರಣವಾಯಿತು. ಅವನು ದೇಹ ಸುಖಕ್ಕೆ ಅಸಹ್ಯಪಟ್ಟು ಮನಸ್ಸಿನಲ್ಲಿ ಹೀಗೆ ಭಾವಿಸಿದನು. [ರೂಪ, ಪ್ರಾಯ, ಆಯುಸ್ಸು, ಇಂದ್ರಿಯ ಗೋಚರ ವಿಷಯಗಳು, ಸುಖಾನುಭವಗಳು, ದೇಹ, ಶಕ್ತಿ, ತನ್ನ ಪ್ರೀತಿಯವರ ಸಹವಾಸ, ಭೂಮಿ (ರಾಜ್ಯಾಧಿಕಾರ), ಸೊಬಗು ಐಶ್ವರ್ಯಗಳು, ಶಾಶ್ವತಗಳಲ್ಲ. ಹೀಗೆ ಉಳಿದ ಎಲ್ಲಾ ಬುದ್ಧಿವಂತರು (ಜ್ಞಾನಿಗಳು) ತಮ್ಮಲ್ಲಿ ಸರಿಯಾಗಿ ಮೂಡಿದ ಜ್ಞಾನವೆಂಬ ಕಣ್ಣುಗಳಿಂದ ಸರಿಯಾಗಿ ಅನಿತ್ಯವೆಂಬುದನ್ನು ಸ್ಪಷ್ಟವಾಗಿ ಯೋಚಿಸಲಿ.] [ಮೊತ್ತ ಮೊದಲು ಜನಿಸುವುದು, ನಡುವೆ ಮುಪ್ಪು ಮತ್ತು ರೋಗಗಳು. ಮತ್ತು ಕೊನೆಯಲ್ಲಿ ಕೆಟ್ಟವನಾದ ಯಮನು, ಈ ರೀತಿಯಾಗಿ ಹುಟ್ಟುಸಾವುಗಳೆಂಬ ಪರಂಪರೆಯ ಸಮುದ್ರವು (ಭವಸಾಗರವು) ಜೀವಿಗಳ ನಡುವೆ ಚಕ್ರಾಕಾರದಲ್ಲಿ ತಿರುಗುತ್ತ ಇರುತ್ತದೆ.] ಎಂದು ಈ ರೀತಿಯಾಗಿ ಸನತ್ಕುಮಾರನು ವೈರಾಗ್ಯವನ್ನು ಯೋಚಿಸಿ ವಿಜಯಕುಮಾರನೆಂಬ ಹಿರಿಯ ಮಗನಿಗೆ ಅರಸುತನವನ್ನು ಕೊಟ್ಟು ಪರಿವಾರಕ್ಕೆಲ್ಲ ತೊಂದರೆಯಿಲ್ಲದಂತೆ ಮಾಡಿ, ಒಳಗಿನ ಮತ್ತು ಹೊರಗಿನ ಪರಿಗ್ರಹಗಳನ್ನೆಲ್ಲ ಬಿಟ್ಟು ಹಲವರು ರಾಜರನ್ನು ರಾಜಕುಮಾರರನ್ನು ಕೂಡಿ ವಿನಯಂಧರಸ್ವಾಮಿಗಳ ಬಳಿಯಲ್ಲಿ ತಪಸ್ಸನ್ನು ಸ್ವೀಕರಿಸಿ ಮೂರು ರಾತ್ರಿ ದೀಕ್ಷೆಯ ಉಪವಾಸವನ್ನು ಮಾಡಿ ದೇಹಧಾರಣೆಗಾಗಿ ಭಿಕ್ಷಾಟನಕ್ಕೆ ಹೋದನು. ಆ ಸಂದರ್ಭದಲ್ಲಿ ಓರ್ವ ಬಡ ಮುದುಕಿ ಅವನನ್ನು ಪಾರಣೆಗಾಗಿ ನಿಲ್ಲಿಸಿ, ಹಾರಕದ ಅಕ್ಕಿಯ ಅನ್ನವನ್ನೂ ಅವರೆಕಾಯಿ ಹುಳಿಯನ್ನೂ ಎಣ್ಣೆಯನ್ನೂ ಆಡಿನ ಮಜ್ಜಿಗೆಯನ್ನೂ ಬಡಿಸಿದಳು. ಸನತ್ಕುಮಾರ ಋಷಿ ಅಪ್ಪಸ

ದೊಡದನವ್ಯುತಮನುಣ್ಬಂತುಂಡು ಮತ್ತಂ ತ್ರಿರಾತ್ರಕ್ಕೆ ಪಚ್ಚಖ್ಖಾಣಂಗೊಂಡರಾ ಕಾಲದಿ ತೊಟ್ಟಾಹಾರದೊಳಪ್ಪ ದೋಷದಿಂದಂ ಕಚ್ಛುಜರಖಾಸ ಸೋಸೋ ಛತ್ತಚ್ಛದಿ ಅಚ್ಛಿಕುಚ್ಛಿದು ಕ್ಖಾಣ ಎಂದಿವು ಮೊದಲಾಗೊಡೆಯುವೇೞುನೂಱು ಬ್ಯಾಧಿಗಳಂ ನೂಱುವರುಷಂ ಬರಂ ಒಳ್ಳಿತ್ತಾಗೆ ಸೈರಿಸಿ ಉಗ್ರೋಗ್ರತಪದಿಂ ದೀಪ್ತತಪಂ ಮಹಾತಪಂ ಘೋರತಪಮೆಂದಿವು ಮೊದಲಾಗೊಡೆಯ ತಪಂಗಳಂ ಗೆಯ್ದು ತಪದ ಮಹಾತ್ಮ್ಯದಿಂದಂ ಆಮೋಷಧಿ ಖೇಳೋಷಧಿ ಜಲ್ಲೋಷಧಿ ವಿಪ್ರೋಷಧಿ ಸರ್ವೋಷಧಿ ಯೆಂಬಿವು ಮೊದಲಾಗೊಡೆಯ ಋದ್ಧಿಗಳ್ ಪುಟ್ಟಿದೊಡಂ ವ್ಯಾಧಿಗೆ ತಕ್ಕ ಪ್ರತೀಕಾರಮಂ ಮಾಡದಿಂತು ಘೋರವೀರ ತಪಶ್ಚರಣಂಗೆಯ್ಯೆ ಮತ್ತೊಂದು ದಿವಸಂ ಸೌಧರ್ಮೇಂದ್ರಂ ತನ್ನ ಸಭೆಯೊಳ್ ಸಿಂಹಾಸನ ಮಸ್ತಕಸ್ಥಿತನಾಗಿ ಧರ್ಮಶ್ರವಣಾನಂತರಂ ರಿಸಿಯರ್ಕಳ ಗುಣಂಗಳಂ ವ್ಯಾವರ್ಣಿಸುತ್ತಿರ್ದು ಸನತ್ಕುಮಾರರಿಸಿಯ ಗುಣಗಣಮನಾದಮಾನುಂ ಕೈಕೊಂಡಿಂತೆಂದು ಪೇೞಲ್ ತಗುಳ್ದನ್ ವಾತಪಿತ್ತಶ್ಲೇಷ್ಮ ಶ್ವಾಸ ಖಾಸ ಜರಾರುಚಿ ಛರ್ದ್ಯತಿಸಾರಾಕ್ಷಿ ಕುಕ್ಷಿವೇದನಾಸ್ಫೋಟಕಂ ಪಿಟಕಂ ಶೂಲ ಭಗಂದರಂ ಕುಷ್ಠ ಕ್ಷಯ ಗಂಡ ಶಿರೋವೇದನೆ ಮೊದಲಾಗೊಡೆಯುವೇೞುನೂಱು ವ್ಯಾಧಿಗಳೊರ್ಮೊದಲೆ ಮೆಯ್ಯೊಳ್ ಪುಟ್ಟಿದೊಡಂ

ವನ್ನು ಉಣ್ಣುವಹಾಗೆ ಅದನ್ನು ಉಂಡು, ಆ ಮೇಲೆ ಮೂರು ರಾತ್ರಿಗಳ ಮಟ್ಟಿಗೆ ಆಹಾರ ನಿವೃತ್ತಿಯ ಪ್ರತಿಜ್ಞೆಯನ್ನು ಸ್ವೀಕರಿಸಿದನು. ಅಂದಿನಿಂದ ತೊಡಗಿ ಆಹಾರದಲ್ಲಿ ಆದ ದೋಷದಿಂದ ಕಜ್ಜಿ, ಜ್ವರ, ಕೆಮ್ಮು, ಉಬ್ಬಸ, ಅತಿಸಾರ, ಕಣ್ಣುನೋವು–ಹೊಟ್ಟೆನೋವುಗಳು–ಎಂದು ಇವೇ ಮೊದಲಾಗುಳ್ಳ ಏಳುನೂರು ರೋಗಗಳನ್ನು ನೂರುವರ್ಷಗಳವರೆಗೆ ಚೆನ್ನಾಗಿ ಸಹಿಸಿ ಅತ್ಯಂತ ಭಯಂಕರವಾದ ದೀಪ್ತತಪ, ಮಹಾತಪ, ಘೋರತಪ ಎಂದಿವೇ ಮೊದಲಾಗುಳ್ಳ ತಪಸ್ಸುಗಳನ್ನು ಮಾಡಿದರು. ತಪಸ್ಸಿನ ಮಹತ್ವದಿಂದ ಅವರಿಗೆ ಆಮೋಷಧಿ, ಖೇಳೋಷಧಿ, ಜಲ್ಲೋಷಧಿ, ವಿಪ್ರೋಷಧಿ, ಸರ್ವೋಷಧಿ–ಎಂಬವೇ ಮುಂತಾಗಿರುವ ಸಿದ್ಧಿಸಂಪತ್ತುಗಳು (ದಿವ್ಯಶಕ್ತಿಗಳು) ಉಂಟಾದವು. ಆದರೂ ರೋಗಕ್ಕೆ ತಕ್ಕುದಾದ ಪರಿಹಾರೋಪಾಯವನ್ನು (ಚಿಕಿತ್ಸೆಯನ್ನು) ಮಾಡದೆ ಈ ರೀತಿಯಾಗಿ ಉಗ್ರರೀತಿಯ ವೀರತ್ವದ ತಪಸ್ಸನ್ನು ಮಾಡಿದನು. ಆ ಮೇಲೆ, ಒಂದು ದಿವಸ ಸೌಧರ್ಮೇಂದ್ರನು ತನ್ನ ಸಭೆಯಲ್ಲಿ ಸಿಂಹಾಸನದ ಮೇಲೆ ಮಂಡಿಸಿದ್ದು ಧರ್ಮವಿಚಾರವನ್ನು ಕೇಳಿದ ನಂತರ ಋಷಿಗಳ ಗುಣಗಳನ್ನು ವಿಶೇಷವಾಗಿ ವರ್ಣಿಸುತ್ತಿದ್ದನು. ಆ ಸಂದರ್ಭದಲ್ಲಿ ಸನತ್ಕುಮಾರಋಷಿಯ ಗುಣಗಳ ಸಮೂಹವನ್ನು ವಿಶೇಷವಾಗಿ ವರ್ಣಿಸಲು ಉದ್ಯುಕ್ತನಾಗಿ ಈ ರೀತಿಯಾಗಿ ಹೇಳತೊಡಗಿದನು–"ಸನತ್ಕುಮಾರ ಋಷಿಗಳು ತಮ್ಮ ಶರೀರದಲ್ಲಿ ವಾತ (ವಾಯು), ಪಿತ್ತ, ಕಫ, ಕೆಮ್ಮು, ಮುಪ್ಪು, ಬಾಯಿರುಚಿಯಿಲ್ಲದಿರುವುದು, ವಾಂತಿ, ಭೇದಿ, ಕಣ್ಣುನೋವು, ಹೊಟ್ಟೆನೋವು, ಬಾವು, ಕುರು, ನೋವು, ಮೂಲವ್ಯಾಧಿ, ಕುಷ್ಠ, ಕ್ಷಯ, ಗಂಡಮಾಲೆ, ತಲೆಸಿಡಿತ–ಮುಂತಾಗಿರುವ ಏಳುನೂರು ರೋಗಗಳು ಒಮ್ಮೆಗೇ ಉಂಟಾದರೂ ತಾವು ಆ ರೀತಿ ತಪಸ್ಸಿದ್ಧಿ ಸಂಪತ್ತಿನಿಂದ ಕೂಡಿದವ

ತಾಮುಂ ಋದ್ಧಿಸಂಪನ್ನರಾಗಿಯುಂ ವ್ಯಾಧಿಗೆ ತಕ್ಕ ಪ್ರತೀಕಾರಂಗೆಯ್ಯದೆ ನೂಱುವರುಷಂ ಬರೆಗಂ ಒಳ್ಳಿತ್ತಾಗಿ ಸೈರಿಸಿ ತಪಂಗೆಯ್ದಪ್ಪರೆಂದು ಸೌಧರ್ಮೇಂದ್ರಂ ಪೊಗೞ್ದೊಡೆ ಕೇಳ್ದು ಮುನ್ನೆ ಬಂದ ದೇವರ್ಕಳಿರ್ವರುಂ ವೈದ್ಯರ ರೂಪಿನೊಳ್ ಮರ್ದುಗಳಂ ಪಸುಂಬೆಯೊಳ್ ತೆಕ್ಕನೆ ತೀ ಪರೀಕ್ಷಿಸಲ್ಕೆಂದು ಸಾರೆವಂದು ವಂದಿಸಿ ಇಂತೆಂದರ್ ಭಟಾರಾ ನಿಮ್ಮ ಮೆಯ್ಯ ಕುತ್ತಂಗಳೆಲ್ಲಮಂ ಮರ್ದಂ ಮಾಡಿ ಕಿಡಿಸಲ್ ನೆಱೆವೆವು ಮರ್ದಂ ಮಾಡುವುದನೊಡಂಬಡವೇೞ್ಕುಮೆಂದೊಡೆ ಭಟ್ಟಾರರುಂ ಮೋನಂಗೊಂಡು ನುಡಿಯದೆ ಕೆಮ್ಮಗಿರ್ದೊಡೆ ಪಿರಿದುಂ ಬೇಗಮಿರ್ದೆೞ್ದು ಪೋಗಿ ಮಱುದಿವಸಂ ಮಗುೞ್ದು ಬಂದಿಂತೆಂದರ್ ಭಟಾರಾ ವೈದ್ಯಶಾಸ್ತ್ರದೊಳಾದಮಾನುಂ ಕುಶಲರೆಮುಂ ಗ್ರಂಥಾರ್ಥಸ್ವರೂಪದಿಂದೆಲ್ಲಾ ಕುಶಲರೆಮುಂ ಕರ್ಮಜ್ಞರೆಮುಂ ಮರ್ದುಗಳುಮಭಿನವಂಗಳಾದವೊಳ್ಳಿದುವಿರ್ದುವುಂ ನಿಮ್ಮ ಮೆಯ್ಯ ಕುತ್ತಂಗಳೆಲ್ಲಮನೇೞು ದಿವಸದಿಂದೊಳಗೆ ಕಿಡಿಸಿ ನೀರೋಗಮಪ್ಪಂತಿರೆ ಮಾಡುವೆವು ಬೞಿಕ್ಕೇನುಂ ಸಂಕ್ಲೇಶಮಿಲ್ಲದೆ ತಪಂಗೆಯ್ಯಿಮೆಂದೊಡೆ ಭಟಾರರವರೊಡನೆ ನುಡಿವಾಗಳುಗುೞ ಸೀಕರಂಗಳ್ ತಮ್ಮ ಮುಂಗೆಯ್ಯ ಮೇಗೆ ಬೀೞ್ದೊಡೆ ಬೆರಲಿಂ ಸೀಂಟಿತೋಱಿದಾಯೆಡೆ ಸುವರ್ಣಾಯಮಾನಮಾಗಿ ತೊಳಗುತ್ತಿರ್ದ ಮೆಯ್ಯ ತೇಜ

ರಾಗಿದ್ದರೂ ರೋಗಕ್ಕೆ ತಕ್ಕುದಾದ ಚಿಕಿತ್ಸೆಯನ್ನು ಮಾಡದೆ, ನೂರುವರ್ಷಗಳವರೆಗೆ ಚೆನ್ನಾಗಿ ಸಹಿಸಿಕೊಂಡು ತಪಸ್ಸು ಮಾಡುತ್ತಿದ್ದಾರೆ" ಎಂದು ಸೌಧರ್ಮೇಂದ್ರನು ಹೊಗಳಿದನು. ಇದನ್ನು ಕೇಳಿ ಹಿಂದೆ ಒಮ್ಮೆ ಬಂದಿದ್ದ ದೇವತೆಗಳಿಬ್ಬರೂ ವೈದ್ಯರ ರೂಪದಲ್ಲಿ ಔಷಧಿಗಳನ್ನು ಹಸುಬೆ ಚೀಲದಲ್ಲಿ ಭರ್ತಿಯಾಗಿ ತುಂಬಿಸಿಕೊಂಡು ಪರೀಕ್ಷಿಸುವ ಉದ್ದೇಶದಿಂದ ಸಮೀಪಕ್ಕೆ ಬಂದು ನಮಸ್ಕರಿಸಿ ಹೀಗೆಂದರು "ಪೂಜ್ಯರೇ, ನಿಮ್ಮ ದೇಹದ ರೋಗಗಳೆಲ್ಲವನ್ನೂ ಔಷಧ ಮಾಡಿ ಪರಿಹರಿಸಲು ನಾವು ಸಮರ್ಥರಾಗಿದ್ದೇವೆ. ಮದ್ದು ಮಾಡಲು ನೀವು ಒಪ್ಪಬೇಕು". ಹೀಗೆ ಹೇಳಿದಾಗ ಋಷಿಗಳು ಮೌನವನ್ನು ತಾಳಿ, ಮಾತಾಡದೆ ಸುಮ್ಮನಿರಲು, ಬಹಳ ಹೊತ್ತು ಇದ್ದು ಎದ್ದುಹೋದರು. ಮರುದಿವಸ ಆ ದೇವತೆಗಳು ಮರಳಿ ಬಂದು ಹೀಗೆಂದರು–"ಪೂಜ್ಯರೇ, ನಾವು ವೈದ್ಯಶಾಸ್ತ್ರದಲ್ಲಿ ಅತ್ಯಂತ ಪ್ರವೀಣರಾಗಿದ್ದೇವೆ, ಮತ್ತು ವೈದ್ಯಗ್ರಂಥಗಳ ಅರ್ಥವನ್ನು ತಿಳಿದು ಕುಶಲರಾಗಿದ್ದೇವೆ. ಕಾರ್ಯವನ್ನು ಬಲ್ಲವರೂ ಆಗಿದ್ದೇವೆ. ಮದ್ದುಗಳು ಹೊಸತಾಗಿವೆ, ಬಹಳ ಒಳ್ಳೆಯುವಾಗಿವೆ. ನಿಮ್ಮ ಶರೀರದ ಎಲ್ಲ ರೋಗಗಳನ್ನೂ ಏಳುದಿವಸಗಳೊಳಗೆ ಗುಣಪಡಿಸಿ ರೋಗವೇ ಇಲ್ಲದವರನ್ನಾಗಿ ಮಾಡುವೆವು. ಆ ಮೇಲೆ ಏನೊಂದೂ ಕಷ್ಟವಿಲ್ಲದೆ ತಪಸ್ಸನ್ನು ಮಾಡಿ" ಎಂದು ಹೇಳಿದರು. ಹೀಗೆ ಹೇಳಿದಾಗ ಋಷಿಗಳು ಅವರೊಂದಿಗೆ ಮಾತಾಡುವಾಗ ಎಂಜಲಿನ ತುಂತುರು ಹನಿಗಳು ಅವರ ಮುಂಗೈಯ ಮೇಲೆ ಬೀಳಲು, ಅವನ್ನು ಬೆರಳಿನಿಂದ ತೊಡೆದರು. ಆಗ ಕಾಣಿಸಿದ ಆ ಸ್ಥಳ ಚಿನ್ನದ ಬಣ್ಣದಂತಾಗಿ ಹೊಳೆಯುತ್ತಿತ್ತು. ಅಂತಹ ಋಷಿಯ ದೇಹಕಾಂತಿಯನ್ನು ದೇವತೆಗಳು ಆಶ್ಚರ್ಯಪಟ್ಟು ನೋಡುತ್ತಿದ್ದರು. ಆಗ ಋಷಿಗಳು ಅವರೊಡನೆ ಹೀಗೆಂದರು–"ನಮಗೆ

ಮುಮಂ ದೇವರ್ಕಳ್ ವಿಸ್ಮಯಂಬಟ್ಟು ನೋಡುತ್ತಿರೆ ಭಟಾರರಿಂತೆಂದರೆಮಗೆ ಮರ್ದು ಬೇೞ್ತಿ ಯಪ್ಪೊಡೆಮಗಾಮೆ ಮರ್ದಂ ಬಲ್ಲೆಮೆಮಗದು ಬೇೞ್ತಿಯಲ್ತು ನೀಮುಂ ಜಾತಿಜರಾ ಮರಣಂಗಳೆಂಬೆಮ್ಮ ಕುತ್ತಮಂ ಕಿಡಿಸಲಾರ್ಪೊಡಾ ಮರ್ದನೊಡಂಬಡುವೆಮುೞಿದಾವ ಮರ್ದುಮನೊಡಂಬಡುವೆಮಲ್ಲೆಮೆಂದೊಡೆ ದೇವರ್ಕಳುಮಿಂತೆಂದರ್ ಜಾತಿ ಜರಾಮರಣಂ ಗಳೆಂಬ ಕುತ್ತಮಂ ಕಿಡಿಸಲ್ಕಾಮಾಱೆವಾ ಕುತ್ತಮಂ ಕಿಡಿಸಲ್ಕೆ ಭಟಾರಾ ನೀಮೆ ಸಮರ್ಥರಿರ್ ಪರಮ ವೈದ್ಯರಿರದರ್ಕೆಂದು ಮತ್ತಂ ದೇವರ್ಕಳೆಂದರ್ ಭಟಾರಾ ಸೌಧರ್ಮೇಂದ್ರಂ ನಿಮ್ಮ ತಪದೊಳಪ್ಪ ಗುಣಂಗಳುಮಂ ವ್ಯಾಧಿಗಳಂ ಸೈರಿಸಿ ನೆಗೞ್ವ ನೆಗೞ್ತಿಯುಮಂ ದೇವರ್ಕಳ ಸಭೆಯ ನಡುವೆಯಾದಮಾನಂ ಕೈಕೊಂಡು ಪೊಗೞ್ದೊ ಡಾಮಿಂದ್ರನ ಮಾತಂ ನಂಬದೆ ನಿಮ್ಮಂ ಪರೀಕ್ಷಿಸಲ್ಕೆಂದು ಬಂದೆವು ಸೌಧರ್ಮೇಂದ್ರನ ಪೊಗೞ್ದುದೇನುಂ ತಪ್ಪಿಲ್ಲೆಂದು ನುಡಿದು ಗುಣಂಗೊಂಡು ಮಗುೞ್ದು ವಂದಿಸಿ ಮರ್ದುಗಳೆಲ್ಲ ಮನೊಂದು ಪೞವಾವಿಯೊಳ್ ಪೊಯ್ದು ದೇವರ್ಕಳ್ ತಮ್ಮ ದೇವಲೋಕಕ್ಕೆ ಪೋದೊರಾ ಮರ್ದಿನ ಬಾವಿಯ ನೀರಂ ಮಿಂದರ್ಗೆಲ್ಲಂ ಕುತ್ತಂಗಳ್ ಕಿಡುವುವಾದವು ಸನತ್ಕುಮಾರ ಭಟಾರರುಮೇೞುನೂಱುಂ ವ್ಯಾಧಿಗಳಂ ನೂಱುವರುಷಂಬರೆಗಂ ಸೈರಿಸಿ ಘೋರವೀರ ತಪಶ್ಚ

ಮದ್ದಿನಿಂದ ಉಪಯೋಗವಾಗುವುದಾದರೆ ನಮಗೆ ಬೇಕಾದ ಮದ್ದು ನಮಗೇ ಗೊತ್ತಿದೆ. ನಮಗದು ಪ್ರಯೋಜನವಿಲ್ಲ. ನೀವು ಹುಟ್ಟು–ಮುಪ್ಪು-ಸಾವುಗಳೆಂಬ ನಮ್ಮ ರೋಗ ವನ್ನು ಪರಿಹಾರಮಾಡಬಲ್ಲವರಾದರೆ ಆ ಮದ್ದನ್ನು ಮಾಡಲು ಒಪ್ಪುತ್ತೇವೆ. ಇನ್ನುಳಿದ ಯಾವ ಮದ್ದನ್ನು ಮಾಡುವುದಕ್ಕೂ ಒಪ್ಪುವುದಿಲ್ಲ" ಎಂದರು. ಅದಕ್ಕೆ ದೇವತೆಗಳು– "ಪೂಜ್ಯರೇ, ಹುಟ್ಟು–ಮುಪ್ಪು-ಸಾವುಗಳೆಂಬ ರೋಗವನ್ನು ಪರಿಹಾರ ಮಾಡಲು ನಾವು ಸಮರ್ಥರಲ್ಲ. ಆ ರೋಗವನ್ನು ವಾಸಿಮಾಡಲು ನೀವೇ ಸಮರ್ಥರು. ಅದಕ್ಕೆ ನೀವು ಅತಿ ಶ್ರೇಷ್ಠ ವೈದ್ಯರಾಗಿರುವಿರಿ" ಎಂದರು. ಆಮೇಲೆ ದೇವತೆಗಳು ಹೀಗೆಂದರು–"ಋಷಿಗಳೇ, ಸೌಧರ್ಮೇಂದ್ರನು ನಿಮ್ಮ ತಪಸ್ಸಿನಿಂದಾದ ಗುಣಗಳನ್ನೂ (ಸಿದ್ಧಿಸಂಪತ್ತುಗಳನ್ನೂ) ರೋಗಗಳನ್ನು ಸಹಿಸಿಕೊಂಡು ಮಾಡುವ ಕಾರ್ಯಗಳನ್ನೂ ದೇವತೆಗಳ ಸಭಾಮಧ್ಯದಲ್ಲಿ ಅತಿಶಯವಾಗಿ ಹೇಳಲು ಉದ್ಯೋಗಿಸಿ, ಹೊಗಳಿದನು. ಆಗ ನಾವು ಇಂದ್ರನ ಮಾತನ್ನು ನಂಬದೆ ನಿಮ್ಮನ್ನು ಪರೀಕ್ಷಿಸಿ ತಿಳಿಯುವುದಕ್ಕಾಗಿ ಬಂದಿರುತ್ತೇವೆ. ಸೌಧರ್ಮೇಂದ್ರನು ಹೊಗಳಿರುವುದರಲ್ಲಿ ಏನೂ ತಪ್ಪಿಲ್ಲ" ಎಂದು ಹೇಳಿದರು. ಋಷಿಗಳ ಗುಣವನ್ನು ಗ್ರಹಿಸಿ ಕೊಂಡು ಪುನಃ ನಮಸ್ಕರಿಸಿ ಮದ್ದುಗಳನ್ನೆಲ್ಲ ಒಂದು ಹಳೆಯ ಬಾವಿಯೊಳಗೆ ಹೊಯಿದು, ಆ ದೇವತೆಗಳು ತಮ್ಮ ದೇವಲೋಕಕ್ಕೆ ತೆರಳಿದರು. ಆ ಮದ್ದಿನ ಬಾವಿಯ ನೀರಿನಲ್ಲಿ ಸ್ನಾನ ಮಾಡಿದವರಿಗೆಲ್ಲ ರೋಗಗಳು ಪರಿಹಾರಗೊಳ್ಳುವವಾದವು. ಸನತ್ಕುಮಾರ ಋಷಿಗಳು ಏಳುನೂರು ಬಗೆಯ ರೋಗಗಳನ್ನು ನೂರು ವರ್ಷಗಳವರೆಗೂ ಸಹಿಸಿಕೊಂಡು ಉಗ್ರವೂ ಶಕ್ತಿಶಾಲಿಯೂ ಆದ ತಪಸ್ಸನ್ನು ಆಚರಿಸಿ ಆಲದ ಮರದ ಕೆಳಗೆ ಸಂನ್ಯಾಸವನ್ನು

ರಣಂಗೆಯ್ದು ಆ ನಮರದ ಕೆಟಿಗೆ ಸಂನ್ಯಸನಂಗೆಯ್ದು ಸಮಾಧಿಮರಣದಿಂ ಮುಡಿಪಿ ಮಿಕ್ಕ ರತ್ನ ತ್ರಯಂಗಳಂ ಸಾಧಿಸಿ ಸನತ್ಕುಮಾರಕಲ್ಪದೊಳ್ ಏೞು ಸಾಗರೋಪಮಾಯುಃಪ್ಯಸ್ಥಿತಿಯನೊಡೆ ಯೊನಿಂದ್ರನಾಗಿ ಪುಟ್ಟಿದೊಂ ಮತ್ತಾರಾಧಕರಪ್ಪ ಭವ್ಯರ್ಕಳೆಲ್ಲಂ ಸನತ್ಕುಮಾರ ಭಟಾರರಂ ಮನದೊಳ್ ಬಗೆದು ವ್ಯಾಧಿಗಳೊಳಪ್ಪ ವೇದನೆಗಳುಮಂ ಪಸಿವುಂ ನೀರಟ್ಕೆ ಮೊದಲಾ ಗೊಡೆಯ ಬಾಧೆಯುಮಂ ಸೈರಿಸಿ ದೇವರಂ ಧ್ಯಾನಿಸುತ್ತಂ ಪಂಚನಮಸ್ಕಾರಮಂ ಮನದೊಳು ಚ್ಚರಿಸುತ್ತಂ ಮಿಕ್ಕದರ್ಶನ ಜ್ಞಾನ ಚಾರಿತ್ರಂಗಳಂ ಸಾಧಿಸಿ ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

ಸ್ವೀಕರಿಸಿ ಸಮಾಧಿಮರಣದಿಂದ ತೀರಿಹೋಗಿ ಸಮ್ಯಗ್ದರ್ಶನ, ಸಮ್ಯಗ್ಜ್ಞಾನ, ಸಮ್ಯ ಕ್ಚಾರಿತ್ರಗಳೆಂಬ ಶ್ರೇಷ್ಠವಾದ ರತ್ನತ್ರಯವನ್ನು ಪಡೆದು ಸನತ್ಕುಮಾರ ಎಂಬ ಸ್ವರ್ಗದಲ್ಲಿ ಏಳು ಸಾಗರಕ್ಕೆ ಸಮಾನವಾದ ಆಯುಷ್ಯವನ್ನು ಉಳ್ಳ ಇಂದ್ರನಾಗಿ ಜನಿಸಿದನು. ಆರಾಧನೆ ಮಾಡತಕ್ಕವರಾದ ಭವ್ಯ (ಮೋಕ್ಷಾಪೇಕ್ಷಿ) ಜನರೆಲ್ಲರೂ ಸನತ್ಕುಮಾರ ಋಷಿಗಳನ್ನು ಮನಸ್ಸಿನಲ್ಲಿ ಧ್ಯಾನಿಸಿಕೊಂಡು ರೋಗಗಳು ಬಂದಾಗ ಉಂಟಾಗುವ ನೋವುಗಳನ್ನೂ ಹಸಿವು ಬಾಯಾರಿಕೆ ಮುಂತಾಗಿರುವ ತೊಂದರೆಯನ್ನೂ ಸಹಿಸಿ ದೇವರನ್ನು ಧ್ಯಾನಮಾಡುತ್ತ ಅರ್ಹಂತರು, ಸಿದ್ಧರು, ಆಚಾರ್ಯರು, ಉಪಾಧ್ಯಾಯರು, ಸಾಧುಗಳು-ಎಂಬ ಪಂಚಪರಮೇಷ್ಠಿಗಳಿಗೆ ಮಾಡುವ ಪಂಚನಮಸ್ಕಾರದ ಮಂತ್ರವನ್ನು ಮನಸ್ಸಿನಲ್ಲಿಯೇ ಉಚ್ಚಾರಣೆ ಮಾಡುತ್ತ ಶ್ರೇಷ್ಠವಾದ ದರ್ಶನ-ಜ್ಞಾನ-ಚಾರಿತ್ರಗಳೆಂಬ ಮೂರು ರತ್ನಗಳನ್ನು ಪಡೆದು ಸ್ವರ್ಗ-ಮೋಕ್ಷಗಳ ಸುಖಗಳನ್ನು ಪಡೆಯಲಿ !



# ೫. ಅಣ್ಣಿಕಾಪುತ್ರನ ಕಥೆ

ಅಣ್ಣಿಕಾಪುತ್ರನ ಕಥೆಯಂ ಪೇೞ್ವೆಂ :

ಗಾಹೆ ॥ ಣಾವಾ ಏ ಣಬ್ಬುಡಾಏ ಗಂಗಾಮಜ್ಝೇ ಅಮೂಢವಾಣಮದೀ
ಆರಾಧಣಂ ಪವಣ್ಣೋ ಕಾಲಗದೋ ಏಣಿಯಾ ಪುತ್ತೋ ॥

[ ಣಾವಾ ಏ – ನಾವೆ, ಣಬ್ಬುಡಾ ಏ – ಮುೞುಗಿದುದಾದೊಡೆ, ಗಂಗಾಮಜ್ಝೇ – ಗಂಗಾಮಹಾನದಿಯ ನಡುವೆ, ಅಮೂಢಮಾಣಮದೀ–ಮೋಹಿಸದ ಬುದ್ಧಿಯನೊಡೆಯನಾಗಿ, ಆರಾಧಣಂ – ನಿಜಾತ್ಮಾರಾಧನೆಯಂ, ಪವಣ್ಣೋ – ಲೇಸಾಗಿ ಪೊರ್ದಿದೊಂ, ಕಾಲಗದೊ – ಕಾಲಂಗಯ್ದೊನಾಗಿ, ಏಣಿಯಾಪುತ್ತೋ – ಅಣ್ಣಿಕೆಯ ಮಗಂ. ] ಅದೆಂತೆಂದೊಡೆ : ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ಮಗಧೆಯೆಂಬುದು ನಾಡಲ್ಲಿ ಉತ್ತರ ಮಧುರೆ ಯೆಂಬುದು ಪೊೞಲದನಾಳ್ವೊಂ ಪ್ರಜಾಪಾಳನೆಂಬೊನರಸನಾತನ ಮಹಾದೇವಿ ಸುಪ್ರಭೆ ಯೆಂಬೊಳಂತವರ್ಗ್ಗಿಷ್ಟವಿಷಯ ಕಾಮಭೋಗಂಗಳನನುಭವಿಸುತ್ತಿರೆ ಮತ್ತಾ ಪೊೞ ಲೊಳ್ ಸಾರ್ಥಾಧಿಪತಿ ಧನದತ್ತನೆಂಬೊಂ ಪರದಂ ಧನಕನಕಸಮೃದ್ಧನಾತನ ಭಾರ್ಯೆ ಧನಶ್ರೀ ಯೆಂಬೊಳಾಯಿರ್ವರ್ಗಂ ಮಗಂ ಧನದೇವನೆಂಬೊನಂತವರ್ಗಳ್ಗೆ ಸುಖದಿಂ ಕಾಲಂ ಸಲೆ ಮತ್ತೊಂದು ದಿವಸಂ ಧನದೇವಂ ಪರದಿಂಗೆಂದು ಪಿರಿದುಂ ಸಾರಮಪ್ಪ ಭಂಡಮಂ ತೀವಿ ಕೊಂಡು ಪಿರಿದುಂ ಸಾರ್ಥಂ ಬೆರಸು ದಕ್ಷಿಣ ಮಧುರೆಗೆ ಪೋದೊಡಾ ಪೊೞಲ ರಾಜಶ್ರೇಷ್ಠಿ

ಅಣ್ಣಿಕಾ ಪುತ್ರನ ಕಥೆಯನ್ನು ಹೇಳುವೆನು. [ಗಂಗಾನದಿಯ ನಡುವೆ ದೋಣಿ ಮುಳುಗಿಹೋದಾಗ ಅದರಲ್ಲಿದ್ದ ಮೋಹಗೊಳ್ಳದ ಬುದ್ಧಿಯುಳ್ಳ ಅಣ್ಣಿಕಾಪುತ್ರನೆಂಬ ಋಷಿ ಕಾಲವಶನಾಗಿ ತನ್ನ ಆತ್ಮದ ಆರಾಧನೆಯನ್ನು ನೆರವೇರಿಸಿದನು.] ಅದು ಹೇಗೆಂದರೆ. ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಮಗಧೆ ಎಂಬ ನಾಡಿದೆ. ಅಲ್ಲಿ ಉತ್ತರಮಧುರೆ ಎಂಬ ಪಟ್ಟಣವಿದೆ. ಅದನ್ನು ಪ್ರಜಾಪಾಳನೆಂಬ ಅರಸನು ಆಳುತ್ತಿದ್ದನು. ಅವನ ಮಹಾ ರಾಣಿ ಸುಪ್ರಭೆಯೆಂಬವಳು. ಅಂತು ಅವರು ತಮ್ಮ ಇಷ್ಟವಾದ ವಿಷಯದ ಬಯಸಿದ ಸುಖಗಳನ್ನು ಅನುಭವಿಸುತ್ತ ಇದ್ದರು. ಅದಲ್ಲದೆ, ಆ ಪಟ್ಟಣದಲ್ಲಿ ಸರಕಿನ ವ್ಯಾಪಾರಿಗಳಿಗೆ ಒಡೆಯನಾದ ಧನದತ್ತನೆಂಬ ವರ್ತಕನು ಐಶ್ವರ್ಯದಿಂದಲೂ ಹೊನ್ನಿನಿಂದಲೂ ಸಮೃದ್ಧ ನಾಗಿದ್ದನು. ಅವನ ಪತ್ನಿ ಧನಶ್ರೀ ಎಂಬುವಳು. ಆ ದಂಪತಿಗಳಿಗೆ ಧನದೇವನೆಂಬ ಮಗನಿದ್ದನು. ಅಂತು ಸುಖದಿಂದ ಅವರ ಕಾಲ ಕಳೆಯುತ್ತಿತ್ತು. ಅನಂತರ ಒಂದು ದಿವಸ ಧನದೇವನು ವ್ಯಾಪಾರಕ್ಕಾಗಿ ಅಧಿಕವಾದ ಮೌಲ್ಯವುಳ್ಳ ಸರಕನ್ನು ತುಂಬಿಕೊಂಡು ಹೆಚ್ಚು ಮಂದಿ ಸರಕು ವ್ಯಾಪಾರಿಗಳೊಂದಿಗೆ ದಕ್ಷಿಣಮಧುರೆಗೆ ಹೋದನು. ಆ ಪಟ್ಟಣ

ತಿಳಕಶ್ರೇಷ್ಠಿಯೆಂಬೊನಾತನ ಭಾರ್ಯೆ ನಂದೆಯೆಂಬೊಳಾಯಿರ್ವರ್ಗಂ ಮಕ್ಕಳ್ ಪದ್ಮಾವತಿ ಸುಮತಿ ಗುಣಮತಿಯೆಂದಿವರ್ ಮೊದಲಾಗೊಡೆಯ ಎಣ್ಬರ್ ಪೆಣ್ಗೂಸುಗಳಾದೊಡವರೊಳಗೆಲ್ಲರಿಂ ಕಿಱಿಯಳಣ್ಣಿಕೆಯೆಂಬೊಳಾಕೆಯುಂ ಧನದತ್ತನ ಮಗನಪ್ಪ ಧನದೇವನಂ ರೂಪಲಾವಣ್ಯ ಸೌಭಾಗ್ಯ ಕಾಂತಿಗುಣಂಗಳಿಂ ಕೂಡಿದೊನಂ ತಿಳಕಶ್ರೇಷ್ಠಿಯುಂ ನಂದೆಯುಂ ಕಂಡಾತಂಗೆ ಬಯಸಿ ಅಣ್ಣಿಕೆಯೆಂಬ ಕೂಸಂ ಕೊಟ್ಟೊಡೆ ಕೆಲವು ದಿವಸಮಾ ಪೊೞಲೊಳಿರ್ದು ತಮ್ಮ ಕೊಂಡು ಪೋದ ಭಂಡಮಂ ಮಾಱಿ ಪೆಱದಂ ತಮ್ಮ ನಾಡ್ಗಪೂರ್ವಮಪ್ಪ ಭಂಡಮಂ ತೀವಿಕೊಂಡು ತಮ್ಮ ಪೊೞಲುತ್ತರ ಮಧುರೆಗೆ ಬಂದಿರ್ದರನ್ನೆಗಮಣ್ಣಿಕೆಗೆ ಗರ್ಭಮಾಗಿ ಮಗಂ ಪುಟ್ಟಿದೊಡೆ ಧನದೇವನ ತಾಯುಂ ತಂದೆಯುಂ ನಂಟರುಮೆಲ್ಲಂ ನೆರೆದಣ್ಣಿಕೆಯ ಮಗನೆಂದಾತಂಗಣ್ಣಿಕಾಪುತ್ರನೆಂದು ಪೆಸರನಿಟ್ಟೊಡಾತಂ ಕ್ರಮಕ್ರಮದಿಂ ಸುಖದಿಂ ಬಳೆದು ನವಯೌವನನಾಗಿರ್ಪನ್ನೆಗಂ ಇತ್ತ ದಮಸೂರಿಗಳೆಂಬವರವಧಿ ಜ್ಞಾನಿಗಳಪ್ಪ ಅಚಾರ್ಯರ್ ಪಿರಿದುಂ ರಿಸಿಸಮುದಾಯಂ ಬೆರಸು ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಬರ್ಪೊರುತ್ತರ ಮಧುರೆಗೆ ಬಂದು ಬಹಿರುದ್ಯಾನವನದೊಳಿರ್ದರನಣ್ಣಿಕಾ ಪುತ್ರಂ ಪೋಗಿ ವಂದಿಸಿ ಧರ್ಮಮಂ ಕೇಳ್ದು

ದಲ್ಲಿ ರಾಜ ಶ್ರೇಷ್ಠಿಯೆನಿಸಿಕೊಂಡ ತಿಳಕ ಶ್ರೇಷ್ಠಿ ಎಂಬವನಿದ್ದನು. ಅವನ ಪತ್ನಿ ನಂದೆ ಎಂಬುವಳು. ಆ ದಂಪತಿಗಳಿಗೆ ಪದ್ಮಾವತಿ, ಸುಮತಿ, ಗುಣಮತಿ ಎಂದು ಇವರೇ ಮೊದಲಾಗಿ ಉಳ್ಳ ಎಂಟುಮಂದಿ ಹೆಣ್ಣುಮಕ್ಕಳಾದರು. ಅವರಲ್ಲಿ ಎಲ್ಲರಿಂದಲೂ ಕಿರಿಯಳು ಅಣ್ಣಿಕೆ. ತಿಳಕಶ್ರೇಷ್ಠಿ ಮತ್ತು ನಂದೆ ಎಂಬುವರು ಧನದತ್ತನ ಮಗನೂ ರೂಪ-ಸೌಂದರ್ಯ-ಸೌಭಾಗ್ಯ-ಕಾಂತಿ-ಗುಣಗಳಿಂದ ಕೂಡಿದವನೂ ಆದ ಧನದೇವನನ್ನು ಕಂಡು, ಅವನನ್ನು ಬಯಸಿ, ಅವನಿಗೆ ಅಣ್ಣಿಕೆಯೆಂಬ ತಮ್ಮ ಮಗಳನ್ನು ಮದುವೆ ಮಾಡಿ ಕೊಟ್ಟರು. ಸರಕಿನ ವ್ಯಾಪಾರಿಗಳು ಕೆಲವು ದಿವಸಗಳವರೆಗೆ ಆ ಪಟ್ಟಣದಲ್ಲಿದ್ದು ತಾವು ಕೊಂಡು ಹೋದ ಸರಕನ್ನು ಮಾರಿ, ತಮ್ಮ ನಾಡಿಗೆ ಅಪೂರ್ವವೆನಿಸತಕ್ಕ ಬೇರೆ ಇತರ ಸರಕುಗಳನ್ನು ತುಂಬಿಕೊಂಡು ತಮ್ಮ ಪಟ್ಟಣವಾಗಿರುವ ಉತ್ತರಮಧುರೆಗೆ ಬಂದರು. ಹೀಗೆ ಇರುತ್ತಿರಲು ಅಣ್ಣಿಕೆಗೆ ಗರ್ಭವಾಗಿ ಮಗನು ಹುಟ್ಟಿದನು. ಧನದೇವನ ತಾಯಿಯೂ ತಂದೆಯೂ ನಂಟರೂ ಎಲ್ಲ ಸೇರಿ ಅಣ್ಣಿಕೆಯ ಮಗನಾದುದರಿಂದ ಅವನಿಗೆ ಅಣ್ಣಿಕಾಪುತ್ರನೆಂಬ ಹೆಸರಿಟ್ಟರು. ಆತನು ಅನುಕ್ರಮವಾಗಿ ಸುಖದಿಂದ ಬಳೆದು ಯೌವನಸ್ಥನಾದನು. ಹೀಗಿರಲು ಇತ್ತ ಅವಧಿಜ್ಞಾನಿಗಳಾದ ದಮಸೂರಿಗಳೆಂಬ ಆಚಾರ್ಯರು ಹೆಚ್ಚಾದ ಋಷಿಸಮೂಹವನ್ನು ಕೂಡಿಕೊಂಡು ಗ್ರಾಮ-ನಗರ-ಖೇಡ-ಖರ್ವಡ-ಮಡಂಬ-ಪಟ್ಟಣ-ದ್ರೋಣಾಮುಖ-ಎಂಬ ಭೂಭಾಗಗಳಲ್ಲಿ ಸಂಚಾರಮಾಡುತ್ತ ಬರತಕ್ಕವರು ಉತ್ತರ ಮಧುರೆಗೆ ಬಂದು ಹೊರಗಿನ ಉದ್ಯಾನದಲ್ಲಿದ್ದರು. ಅಣ್ಣಿಕಾಪುತ್ರನು ಅವರ ಬಳಿಗೆ ಹೋಗಿ ವಂದಿಸಿ ಧರ್ಮ ಬೋಧನೆಯನ್ನು ಕೇಳಿ ತತ್ತ್ವವಿಚಾರದಲ್ಲಿ

ಸಮ್ಯಕ್ತ್ವಪೂರ್ವಕಂ ಶ್ರಾವಕವ್ರತಂಗಳೆಲ್ಲಮಂ ಕೈಕೊಂಡು ತದನಂತರಮೆ ಭಟಾರಾ ಎನಗಾಯುಷ್ಯಮೆನಿತೆಂದು ತನ್ನಾಯುಷ್ಯ ಪ್ರಮಾಣಮಂ ಬೆಸಗೊಂಡೊಡೆ ಭಟಾರರುಂ ಕಿಱಿದೆ ನಿನಗಾಯುಷ್ಯಮೆಂದು ಪೇೞ್ದೊಡೆ ವೈರಾಗ್ಯಪರಾಯಣನಾಗಿ ತಾಯುಮಂ ತಂದೆಯುಮಂ ನಂಟರುಮಂ ಬಿಡಿಸಿ ನಿಶ್ಶಲ್ಯಂಗೆಯ್ದು ದಮಸೂರಿಗಳೆಂಬಾಚಾರ್ಯರ ಪಕ್ಕದೆ ತಪಂಬಟ್ಟು ದ್ವಾದಶಾಂಗ ಚತುರ್ದಶಪೂರ್ವಮಪ್ಪಾಗಮಮೆಲ್ಲಮಂ ಕಲ್ತು ಗುರುಗಳನೊಡಂಬಡಿಸಿ ಏಕವಿಹಾರಿಯಾಗಿ ಗ್ರಾಮೇಕರಾತ್ರಂ ನಗರೇ ಪಂಚರಾತ್ರಂ ಅಟವ್ಯಾಂ ದಶರಾತ್ರಮೆಂಬೀನ್ಯಾಯದಿಂ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ತೀರ್ಥಂಗಳೆಲ್ಲಮಂ ವಂದಿಸಲ್ಕೆಂದು ಗಂಗಾಮಹಾನದಿಯಂ ಪಾಯ್ದು ಪೋಪ ಬಗೆಯಿಂದಂ ನಾವೆಯನೇಱಿದೊಡದೊಂದುತ್ಪಾತವಾತದಿಂದಂ ಗಂಗಾಮಹಾನದಿಯ ನಡುವೆ ಮಡುವಿನೊಳ್ ಭಯಂಕರಮಾಗುತ್ತಿರ್ದ ತೆರೆಯನೊಡೆಯದಱೊಳ್ ಮುೞುಗಿದೊಡಾ ಅಣ್ಣಿಕಾಪುತ್ರನೆಂಬ ರಿಸಿ ಪಿರಿದಪ್ಪ ಮಹಾತ್ಮ್ಯಮಂ ಮೋಹಿಸದ ಬುದ್ಧಿಯನೊಡೆಯೊಂ ಚತುರ್ವಿಧಮಪ್ಪಾಹಾರಕ್ಕಂ ಶರೀರಕ್ಕಂ ಯಾವಜ್ಜೀವಂ ನಿವೃತ್ತಿಗೆಯ್ದು ಕಾಯೋತ್ಸರ್ಗಂ ನಿಂದು ಧರ್ಮಧ್ಯಾನ ಶುಕ್ಲ

ನಂಬಿಕೆಯೊಂದಿಗೆ ಶ್ರಾವಕ (ಜೈನಗೃಹಸ್ಥ) ವ್ರತಗಳೆಲ್ಲವನ್ನೂ ಸ್ವೀಕರಿಸಿಕೊಂಡನು. ಆಮೇಲೆ "ಪೂಜ್ಯರೇ, ನನಗೆ ಆಯುಷ್ಯವು ಎಷ್ಟಿದೆ" ಎಂದು ತನ್ನ ಆಯುಷ್ಯದ ಪ್ರಮಾಣವನ್ನು ಕೇಳಿದನು. ಆಗ ಋಷಿಗಳು "ನಿನಗೆ ಆಯುಷ್ಯ ಇನ್ನು ಸ್ವಲ್ಪವೇ ಇದೆ" ಎಂದು ಹೇಳಿದರು. ಅಣ್ಣಿಕಾಪುತ್ರನು ವೈರಾಗ್ಯತತ್ಪರನಾಗಿ ತನ್ನ ತಾಯನ್ನೂ ತಂದೆಯನ್ನೂ ನೆಂಟರನ್ನೂ ಬಿಟ್ಟು ತೊಂದರೆಯಿಲ್ಲದಂತೆ ಮಾಡಿ, ದಮಸೂರಿಗಳೆಂಬ ಆಚಾರ್ಯರ ಬಳಿಯಲ್ಲಿ ತಪಸ್ಸನ್ನು ಪಡೆದು ಹನ್ನೆರಡು ಅಂಗಗಳುಳ್ಳದೂ ಹದಿನಾಲ್ಕು ಪೂರ್ವಗಳುಳ್ಳದೂ ಆದ ಶಾಸ್ತ್ರಗಳನ್ನೆಲ್ಲಾ ಕಲಿತು ಗುರುಗಳು ಒಪ್ಪುವಂತೆ ಮಾಡಿ ಒಬ್ಬನೇ ಸಂಚಾರ ಮಾಡುತ್ತ "ಗ್ರಾಮದಲ್ಲಿ ಒಂದು ರಾತ್ರಿ, ನಗರದಲ್ಲಿ ಐದು ರಾತ್ರಿ, ಕಾಡಿನಲ್ಲಿ ಹತ್ತು ರಾತ್ರಿಗಳು" ಎಂಬ ಈ ನ್ಯಾಯದಂತೆ ಗ್ರಾಮ–ನಗರ–ಖೇಡ–ಖರ್ವಡ–ಮಡಂಬ–ಪಟ್ಟಣ–ದ್ರೋಣಾಮುಖಗಳೆಂಬ ಭೂಭಾಗಗಳನ್ನು ಸುತ್ತುತ್ತ ಪುಣ್ಯತೀರ್ಥಗಳಿಗೆಲ್ಲಾ ನಮಸ್ಕರಿಸುವುದಕ್ಕಾಗಿ ಗಂಗಾಮಹಾನದಿಗೆ ಬಂದರು. ಅದನ್ನು ದಾಟಿ ಹೋಗುವ ಭಾವನೆಯಿಂದ ದೋಣಿಯನ್ನು ಹತ್ತಿದರು. ಆಗ ಒಂದು ವಿಪತ್ಕಾರಕವಾದ ಬಿರುಗಾಳಿ ಎದ್ದಿತು. ಆ ಬಿರುಗಾಳಿಗೆ ಗಂಗಾನದಿಯ ನಡುವೆ ಭಯಂಕರವಾಗಿ ಕಾಣಿಸಿದ ಅಲೆಯುಳ್ಳ ಮಡುವಿನಲ್ಲಿ ದೋಣಿ ಮುಳುಗಿತು. ಮುಳುಗುತ್ತಿದ್ದಾಗ ಆ ಅಣ್ಣಿಕಾಪುತ್ರನೆಂಬ ಋಷಿ ಹಿರಿದಾಗಿರುವ ಮಹತ್ವಕ್ಕೆ ಮೋಹಗೊಳ್ಳದ ಬುದ್ಧಿಯುಳ್ಳವನಾಗಿ ಭಕ್ಷ್ಯ, ಭೋಜ್ಯ, ಚೋಷ್ಯ, ಲೇಹ್ಯ–ಎಂಬ ನಾಲ್ಕು ವಿಧವಾದ ಶರೀರಕ್ಕೂ ಆಹಾರಕ್ಕೂ ಪ್ರಾಣವಿರುವ ವರೆಗೂ ನಿವೃತ್ತಿ ಮಾಡಿ, ದೇಹತ್ಯಾಗಕ್ಕೆ ಸಿದ್ಧನಾಗಿ ಧರ್ಮಧ್ಯಾನ ಶುಕ್ಲಧ್ಯಾನಗಳನ್ನು ಮಾಡಿ ಎಲ್ಲಾ ಕರ್ಮ

ಧ್ಯಾನಂಗಳಂ ಜಾನಿಸಿ ಸಕಳ ಕರ್ಮಂಗಳಂ ಕಿಡಿಸಿ ಅಂತರ್ಗತ ಕೇವಲಿಯಾಗಿ ಮೋಕ್ಷಕ್ಕೆ ಪೋದರ್ ಮತ್ತಂ ಪೆಱರಾರಾಧಕರಪ್ಪವರ್ಗಳೆಲ್ಲಮಣ್ಣಿಕಾಪುತ್ರನೆಂಬ ರಿಸಿಯಂ ಮನದೊಳಿಟ್ಟು ಅಚೇತನೋಪಸರ್ಗಂ ಮೊದಲಾಗೊಡೆಯ ಉಪಸರ್ಗಂಗಳುಮಂ ನೀರಟ್ಕೆ ಮೊದಲಾಗೊಡೆಯ ಪರೀಷಹಂಗಳುಮಂ ಸೈರಿಸಿ ದರ್ಶನ ಜ್ಞಾನ ಚಾರಿತ್ರಂಗಳಂ ಸಾಧಿಸಿ ಸ್ವರ್ಗಾಪವರ್ಗದ ಸುಖಂಗಳಂ ಭವ್ಯರ್ಕಳೆಯ್ದುಗೆ

ಗಳನ್ನೂ ನಾಶಗೊಳಿಸಿ ತನ್ನೊಳಗೆ ಕೇವಲ ಜ್ಞಾನವನ್ನು ಪಡೆದು ಮೋಕ್ಷಕ್ಕೆ ತೆರಳಿದರು. ಆಮೇಲೆ, ಬೇರೆ ಆರಾಧಕರಾಗಿರುವ ಭವ್ಯರೆಲ್ಲರೂ ಅಣ್ಣಿಕಾಪುತ್ರನೆಂಬ ಋಷಿಯನ್ನು ಮನಸ್ಸಿನಲ್ಲಿಟ್ಟುಕೊಂಡು ಅಚೇತನೋಪಸರ್ಗವೇ ಮೊದಲಾದ ಉಪಸರ್ಗಗಳನ್ನೂ ಬಾಯಾರಿಕೆ ಮುಂತಾಗಿರುವ ಪರೀಷಹಗಳನ್ನೂ ಸಹಿಸಿಕೊಂಡು ಸಮ್ಯಗ್ದರ್ಶನ-ಜ್ಞಾನ-ಚಾರಿತ್ರಗಳೆಂಬ ಮೂರುರತ್ನಗಳನ್ನು ಸಾಧಿಸಿ ಸ್ವರ್ಗ-ಮೋಕ್ಷ ಸುಖಗಳನ್ನು ಹೊಂದಲಿ.

## ೬. ಭದ್ರಬಾಹು ಭಟ್ಟಾರರ ಕಥೆ

ಭದ್ರಬಾಹು ಭಟ್ಟಾರರ ಕಥೆಯಂ ಪೇಳ್ವೆಂ :

ಗಾಹೆ॥ ಓಮೋದರಿ ಏ ಘೋರಾ ಏ ಭದ್ದಬಾಹೂ ಅಸಂಕಿಲಿಟ್ಠಮದೀ
ಘೋರಾ ಏ ತಿಗಿಂಛಾ ಏ ಪಡಿವಣ್ಣೋ ಉತ್ತಮಂ ಅಟ್ಠಂ ॥

[ ಓಮೋದರಿ ಏ – ಅರೆಉಣಿಸಿನಿಂದಂ, ಘೋರಾ ಏ – ಆದಮಾನುಂ ಕಡಿದಪ್ಪುದಱಿಂದಂ, ಭದ್ದಬಾಹೂ – ಭದ್ರಬಾಹು ಭಟ್ಟಾರರ್, ಅಸಂಕಿಲಿಟ್ಠಮದೀ – ಸಂಕ್ಲೇಶ ಪರಿಣಾಮಮಿಲ್ಲದೊನಾಗಿ, ಘೋರಾ ಏ – ಕಡಿದಪ್ಪ, ತಿಗಿಂಛಾ ಏ – ಪಸಿವಿನಿಂದಂ, ಪಡಿವಣ್ಣೋ–ಪೊರ್ದಿದೊಂ, ಉತ್ತಮಂ ಅಟ್ಠಂ – ಸಮ್ಯಕ್ದರ್ಶನಜ್ಞಾನ ಚಾರಿತ್ರಾರಾಧನೆಯಂ ] ಅದೆಂತೆಂದೊಡೆ : ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ಪುರವರ್ಧನಮೆಂಬುದು ನಾಡದಲ್ಲಿ ಕೌಂಡಿನೀನಗರಮೆಂಬುದು ಪೊಳಲದನಾಳ್ವೊಂ ಪದ್ಮರಥನೆಂಬೊನರಸನಾತನ ಮಹಾದೇವಿ ಪದ್ಮಶ್ರೀಯೆಂಬೊಳಂತವರ್ಗಳಿಷ್ಟವಿಷಯ ಕಾಮ ಭೋಗಂಗಳನನುಭವಿಸುತ್ತಿರೆ ಮತ್ತಾ ಅರಸನ ಪುರೋಹಿತಂ ನಾಲ್ಕು ವೇದಮುಮಾಱಂಗಮುಂ ಪದಿನೆಂಟು ಧರ್ಮಶಾಸ್ತ್ರಂಗಳುಮಂ ಬಲ್ಲೋಂ ಸೋಮಶರ್ಮನೆಂಬೊಂ ಪಾರ್ವನಾತನ ಭಾರ್ಯೆ ಪ್ರತ್ಯಕ್ಷ ಶ್ರೀಯಾದೇವತೆಯೆನೆ ಪೋಲ್ವ ಸೋಮಶ್ರೀಯೆಂಬೊಳಾಯಿರ್ವರ್ಗ್ಗಂ ಮಗಂ ಪುಟ್ಟಿದೊಂ ತಾಯ್ಗಂ ತಂದೆಗಮೆಲ್ಲಾ ನಂಟರ್ಗೆಯುತ್ಸಾಹಮುಂ ಸುಖಮುಂ ವಿಭವಮುಮಂ ಪಡೆವುದಱಿಂದಮಾ ಕೂಸಿಂಗೆ ಭದ್ರ



ಭದ್ರಬಾಹುಭಟ್ಟಾರರ (ಋಷಿಗಳ) ಕಥೆಯನ್ನು ಹೇಳುವೆನು: [ಭದ್ರಬಾಹು ಋಷಿ ಅರೆ ಉಣಿಸಿನಿಂದ ಅತ್ಯಂತ ಕಠಿನವಾದ ಕಷ್ಟದ ಪರಿಣಾಮವಿಲ್ಲದೆ ಅಂದರೆ ಪರಿಣಾಮವನ್ನು ಸಹಿಸಿ ತೀವ್ರವಾದ ಹಸಿವಿನಿಂದಲೇ ಶ್ರೇಷ್ಠವಾದ ದರ್ಶನ-ಜ್ಞಾನ-ಚಾರಿತ್ರಗಳ ಆರಾಧನೆಯನ್ನು ಮಾಡಿದನು ] ಅದು ಹೇಗೆಂದರೆ : ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಪುರವರ್ಧನವೆಂಬ ನಾಡಿದೆ. ಅಲ್ಲಿ ಕೌಂಡಿನೀನಗರವೆಂಬ ಪಟ್ಟಣವನ್ನು ಪದ್ಮರಥನೆಂಬ ರಾಜನು ಆಳುತ್ತಿದ್ದನು. ಅವನ ಮಹಾರಾಣಿ ಪದ್ಮಶ್ರೀ ಎಂಬವಳು. ಅಂತು ಅವರು ಇಷ್ಟವಿಷಯದ ಕಾಮಸುಖಗಳನ್ನು ಅನುಭವಿಸುತ್ತಿದ್ದರು. ಆ ರಾಜನ ಪುರೋಹಿತನಾದ ಸೋಮಶರ್ಮನೆಂಬ ಬ್ರಾಹ್ಮಣನು ನಾಲ್ಕು ವೇದಗಳನ್ನೂ ಆರು ವೇದಾಂಗಗಳನ್ನೂ ಹದಿನೆಂಟು ಧರ್ಮಶಾಸ್ತ್ರಗಳನ್ನೂ ಬಲ್ಲವನಾಗಿದ್ದನು. ಅವನ ಹೆಂಡತಿಯಾದ ಸೋಮಶ್ರೀ ಎಂಬವಳು ಪ್ರತ್ಯಕ್ಷ ಲಕ್ಷ್ಮೀದೇವಿಯನ್ನೇ ಹೋಲುತ್ತಿದ್ದಳು. ಆ ಇಬ್ಬರಿಗೆ ಒಬ್ಬ ಮಗನು ಹುಟ್ಟಿದನು. ತಾಯಿಗೆ, ತಂದೆಗೆ ಮತ್ತು ಎಲ್ಲ ನಂಟರಿಗೆ ಉತ್ಸಾಹವನ್ನೂ ಸುಖವನ್ನೂ ಐಶ್ವರ್ಯವನ್ನೂ ಉಂಟುಮಾಡುವವನೆಂಬ ಅರ್ಥದಿಂದ ಎಲ್ಲರೂ ಕೂಡಿ

ಬಾಹುವೆಂಬ ಪೆಸರನೆಲ್ಲರುಂ ನೆರೆದಿಟ್ಟೊಡಾತನುಂ ಬಿದಿಗೆಯ ಚಂದ್ರನಂತೆ ಕ್ರಮಕ್ರಮದಿಂ ಸುಖದಿಂ ಬಳೆದು ಮುಂಜಿಗಟ್ಟುವ ಪ್ರಾಯಮಾದೊಡೆ ಪ್ರಶಸ್ತ ದಿವಸ ವಾರ ನಕ್ಷತ್ರ ಮುಹೂರ್ತದೊಳ್ ಮುಂಜಿಬಂಧನಕ್ರಿಯೆಯುಂ ಮಾಡಿದ ಬಱಿಕ್ಕೆ ತನ್ನೋರಗೆಗಳಪ್ಪ ಪಲಂಬರ್ ಮಾಣಿಗಳ್ವೆರಸು ಪೊಱವೊಟಲೊಳ್ ಬಟ್ಟಾಡುತ್ತಿರೆ ಭದ್ರಬಾಹುವೆಂಬ ಮಾಣಿಯೊಂದುಬಟ್ಟಿನ ಮೇಗೆ ಪದಿನಾಲ್ಕು ಬಟ್ಟನೊಂದೊಂದಱ ಮೇಗೋಳಿಯೊಳಿಟ್ಟಾಡುತ್ತಿರ್ಪನ್ನೆಗಂ ಇತ್ತ ವರ್ಧಮಾನ ಭಟ್ಟಾರರ್ ಮೋಕ್ಷಕ್ಕೆಪೋದಿಂ ಬಱಿಕ್ಕೆ ಚತುರ್ದಶ ಪೂರ್ವಧಾರಿಗಳಪ್ಪ ಶ್ರುತಕೇವಳಿಗಳ್ ನಾಲ್ಕನೆಯುವರ್ ಗೋವರ್ಧನರೆಂಬ ಭಟಾರರುಜ್ಜಯಂತಮಂ ವಂದಿಸಲೆಂದು ವಿಹಾರಿಸುತ್ತುಂ ಬರ್ಪೊರಾ ಕೌಂಡಿನೀ ನಗರಕ್ಕೆವಂದು ಪೊಱವೊಟಲೊಳೊಂದು ಬಟ್ಟಿನ ಮೇಗೆ ಪದಿನಾಲ್ಕುಂ ಬಟ್ಟನೊಂದೊಂದಱ ಮೇಗೋಳಿಯೊಳಿಟ್ಟಾಡುತ್ತಿರ್ಪ ಭದ್ರಬಾಹುಮಾಣಿಯುಂ ಗೋವರ್ಧನ ಭಟ್ಟಾರರ್ ಪಿರಿದುಂ ಬೇಗಂ ನೋಡುತ್ತಿರ್ದಿಂತೆಂದುದ್ದೇಶಂ ಗೆಯ್ದೊರೀತನೆಮ್ಮಿಂ ಬಱಿಕ್ಕೆ ಚತುರ್ದಶಪೂರ್ವಧಾರಿಯುಪ್ಪ ಮಹಾತ್ಮ್ಯಮನೊಡೆಯೊಂ ಭದ್ರಬಾಹು ಭಟಾರರೆಂಬೊರಪ್ಪೊರೆಂದು ಬಗೆದಾತನನವರ ಮನೆಗೊಡಗೊಂಡು ಪೋಗಿಯುವರ ತಾಯ್ತುಂದೆಗಮಿಂ

ಆ ಮಗುವಿಗೆ ಭದ್ರಬಾಹು ಎಂಬ ಹೆಸರನ್ನಿಟ್ಟರು. ಅವನು ಬಿದಿಗೆಯ ಚಂದ್ರನ ಹಾಗೆ ಕ್ರಮಕ್ರಮವಾಗಿ ಸುಖದಿಂದ ಬಳೆದನು. ಉಪನಯನ ಮಾಡುವ ಪ್ರಾಯವಾಗಲು ಉತ್ತಮವಾದ ದಿನಸ, ವಾರ, ನಕ್ಷತ್ರ, ಮುಹೂರ್ತದಲ್ಲಿ ಉಪನಯನ ಸಂಸ್ಕಾರವನ್ನು ಮಾಡಿದರು. ಆ ಮೇಲೆ, ತನ್ನ ಸಂಗಡಿಗರಾದ ಹಲವರು ಬ್ರಹ್ಮಚಾರಿಗಳನ್ನು ಕೂಡಿಕೊಂಡು ಪಟ್ಟಣದ ಹೊರಗೆ ಬಿಲ್ಲೆಯಾಟವನ್ನು ಆಡುತ್ತಿದ್ದಾಗ, ಭದ್ರಬಾಹುವೆಂಬ ವಟು ಒಂದು ಬಿಲ್ಲೆಯಮೇಲೆ ಒಂದೊಂದರಂತೆ ಮೇಲೆಮೇಲೆ ಹದಿನಾಲ್ಕು ಬಿಲ್ಲೆಗಳನ್ನು ಸಾಲಾಗಿಟ್ಟು ಆಡುತ್ತಿದ್ದನು. ಇತ್ತ ವರ್ಧಮಾನ ತೀರ್ಥಂಕರರು ಮೋಕ್ಷಕ್ಕೆ ಹೋದ ಮೇಲೆ ಜೈನಧರ್ಮಶಾಸ್ತ್ರದ ಹದಿನಾಲ್ಕು ಪೂರ್ವಗ್ರಂಥಗಳನ್ನು ಬಲ್ಲವರಾದ, ಜೈನಾಗಮದ ಪರಿಪೂರ್ಣ ಜ್ಞಾನವುಳ್ಳವರಾದ, ವರ್ಧಮಾನರಿಂದ ನಾಲ್ಕನೆಯವರಾದ ಗೋವರ್ಧನರೆಂಬ ಋಷಿಗಳು ಉಜ್ಜಯಂತವೆಂಬ ಪರ್ವತವನ್ನು ವಂದಿಸುವುದಕ್ಕಾಗಿ ಸಂಚಾರ ಮಾಡುತ್ತ ಬರುತ್ತಿದ್ದರು. ಅವರು ಕೌಂಡಿನೀನಗರಕ್ಕೆ ಬಂದು, ಪಟ್ಟಣದ ಹೊರಗೆ ಬಿಲ್ಲೆಯಾಟವನ್ನು ಆಡುತ್ತಿದ್ದ ಮಕ್ಕಳಲ್ಲಿ ಒಬ್ಬನಾದ ಭದ್ರಬಾಹು ಒಂದು ಬಿಲ್ಲೆಯ ಮೇಲೆ ಇನ್ನೊಂದರಂತೆ ಹದಿನಾಲ್ಕು ಬಿಲ್ಲೆಗಳನ್ನು ಸಾಲಿನಲ್ಲಿ ಇಟ್ಟು ಆಡುತ್ತಿರುವುದನ್ನು ಕಂಡರು. ಅವರು ಭದ್ರಬಾಹು ಮಾಣಿಯನ್ನು ಬಹಳ ಹೊತ್ತು ನೋಡಿ ತಮ್ಮ ಮನಸ್ಸಿನಲ್ಲಿಯೇ ಹೀಗೆ ಹೇಳಿಕೊಂಡರು–"ಈತನು ನಮ್ಮ ಅನಂತರದಲ್ಲಿ ಹದಿನಾಲ್ಕು ಪೂರ್ವಗ್ರಂಥಗಳನ್ನು ಬಲ್ಲ ಮಾಹಾತ್ಮ್ಯವನ್ನುಳ್ಳ ಭದ್ರಬಾಹುವೆಂಬ ಮಹರ್ಷಿಯಾಗಲಿರುವನು". ಹೀಗೆ ಭಾವಿಸಿ, ಆ ಋಷಿಗಳು ಭದ್ರಬಾಹುವನ್ನು ಕೂಡಿಕೊಂಡು ಅವನ ಮನೆಗೆ ಹೋಗಿ ಅವನ ತಾಯಿತಂದೆಯರಿಗೆ ಹೀಗೆ ಹೇಳಿದರು–"ಈತನನ್ನು

ತೆಂದ ರೀತನನೆಮಗೊಪ್ಪಿಸಿಮೆಲ್ಲಾ ಶಾಸ್ತ್ರಂಗಳುಮಂ ಕಲ್ಪಿಸಿ ಪಂಡಿತನಂ ಮಾಡಿ ನಿಮಗೊಪ್ಪಿಸುವೊಮೆಂದೊಡವರುಮಂತೆಗೆಯ್ಯಮೇದೊಡಾತನನೊಡಗೊಂಡು ಪೋಗಿ ಕೆಲವು ದಿವಸದಿಂದೊಳಗೆ ವ್ಯಾಕರಣಂ ಪ್ರಮಾಣಂ ಛಂದಮಲಂಕಾರ ನಿಘಂಟು ಕಾವ್ಯ ನಾಟಕಂ ಮೊದಲಾಗೊಡೆಯ ಲೋಕದೊಳುಳ್ಳ ಶಾಸ್ತ್ರಂಗಳೆಲ್ಲಮಂ ಕಲ್ಪಿಸಿದೊಡಧಿಗಮ ಸಮ್ಯಗ್ ದೃಷ್ಟಿಯಾಗಿಯಾಗಮದೊಳೆಲ್ಲಮನಱಿದು ಸಂಸಾರ ಶರೀರ ಭೋಗ ವೈರಾಗ್ಯ ಪರಾಯಣನಾಗಿ ಭಟ್ಟಾರಾ ಎನಗೆ ದೀಕ್ಷೆಯಂ ದಯೆಗೆಯ್ಯಮೆನೆ ಭಟಾರರೆಂದರೆಮಗಂತು ದೀಕ್ಷೆಯಂ ಕುಡಲಾಗ ಮಗನೆ ನಿನ್ನಪೊಬಲ್ಗೆ ನೀಂ ಪೋಗಿ ನಿನ್ನ ಕಲ್ತ ವಿದ್ಯೆಯುಂ ಪಂಡಿತಿಕ್ಕೆಯುಮನಾ ಪೊಬಲೊಳ್ ನೆಗಟ್ಟೆ ನೆಗಟ್ದ ಪಂಡಿತರ್ಕಳೊಡನೆ ವಾದಂಗೆಯ್ದುವರಂ ಗೆಲ್ದು ದಶದಿಶೆಗಳೊಳೆಲ್ಲಂ ನಿನ್ನ ಪಾಂಡಿತ್ಯದ ಯಶಮಂ ಪಸರಿಸಿ ನಿನ್ನ ಪೊಬಲೊಳ್ ನಾಮೊಡಗೊಂಡು ಬಂದುದರ್ಕೆ ತಾಯ್ತುಂದೆಗಂ ಸಂತೋಸಂಮಾಡಿಯುವರಂ ಬಿಡಿಸಿಯೊಡಂಬಡಿಸಿ ಬಂದೊಡೆ ತಪಮಂ ಕುಡಲಕ್ಕುಮಂತೆಯಾಗದೆಂದೊಡೆ ಭದ್ರಬಾಹುಮಾಣಿಯುಂ ಭಟ್ಟಾರರಂ ವಂದಿಸಿ ತನ್ನ ಪೊಬಲ್ಗೆವೋಗಿ ತಾಯುಂ ತಂದೆಯುಮಂ ಕಂಡು ಪೊಬಲೊಳ್ ನೆಗಟ್ದ ಪಂಡಿತರ್ಕಳೊಡನೆ ವಾದಂಗೆಯ್ದು ಗೆಲ್ದು ದಶದಿಶೆಗಳೊಳೆಲ್ಲಂ ತನ್ನ ಪಾಂಡಿತ್ಯದ ಯಶಮಂ

ನಮಗೆ ಕೊಡಿರಿ. ಇವನಿಗೆ ನಾವು ಎಲ್ಲಾ ಶಾಸ್ತ್ರಗಳನ್ನು ಅಭ್ಯಾಸ ಮಾಡಿಸಿ ವಿದ್ವಾಂಸನ್ನಾಗಿ ಮಾಡಿ ನಿಮಗೆ ಒಪ್ಪಿಸುವೆವು". ಹೀಗೆನ್ನಲು ಅವರು "ಹಾಗೆಯೇ ಮಾಡಿ" ಎಂದರು. ಋಷಿಗಳು ಅವನನ್ನು ಕರೆದುಕೊಂಡು ಹೋಗಿ ಕೆಲವು ದಿವಸಗಳ ಒಳಗಾಗಿ ವ್ಯಾಕರಣ, ಪ್ರಮಾಣ, ಛಂದಸ್ಸು, ಅಲಂಕಾರ, ನಿಘಂಟು, ಕಾವ್ಯ, ನಾಟಕ ಮೊದಲಾಗಿ ಲೋಕದಲ್ಲಿ ಇರತಕ್ಕ, ಎಲ್ಲ ಶಾಸ್ತ್ರಗಳನ್ನೂ ಕಲಿಸಿದರು. ಇದರಿಂದ ಭದ್ರಬಾಹು ಸಮ್ಯಕ್‌ದೃಷ್ಟಿಯನ್ನು ಪಡೆದು ಧರ್ಮಶಾಸ್ತ್ರಗಳೆಲ್ಲವನ್ನೂ ತಿಳಿದು ಸಂಸಾರದಲ್ಲಿಯೂ ಶರೀರದಲ್ಲಿಯೂ ಸುಖಾನುಭವದಲ್ಲಿಯೂ ವೈರಾಗ್ಯಾಸಕ್ತನಾಗಿ ಗೋವರ್ಧನ ಭಟಾರರೊಡನೆ-"ಪೂಜ್ಯರೇ ನನಗೆ ಜೈನದೀಕ್ಷೆಯನ್ನು ಕರುಣಿಸಿರಿ" ಎಂದು ಕೇಳಿದನು. ಅದಕ್ಕೆ ಭಟಾರರು ಹೀಗೆಂದರು-"ನಮಗೆ ಹಾಗೆ ಸುಲಭದಲ್ಲಿ ದೀಕ್ಷೆ ಕೊಡಲಿಕ್ಕೆ ಆಗುವುದಿಲ್ಲ. ಮಗನೇ, ನೀನು ನಿನ್ನ ಪಟ್ಟಣಕ್ಕೆ ಹೋಗಿ ನಿನ್ನ ಕಲಿತ ವಿದ್ಯೆಯನ್ನೂ ವಿದ್ವತ್ತೆಯನ್ನೂ ಆ ಪಟ್ಟಣದಲ್ಲಿ ತೋರಿಸಿ ಪ್ರಸಿದ್ಧರಾದ ವಿದ್ವಾಂಸರೊಡನೆ ವಾದ ಮಾಡಿ, ಅವರನ್ನು ಸೋಲಿಸಿ ಹತ್ತು ದಿಕ್ಕುಗಳಲ್ಲೆಲ್ಲ ನಿನ್ನ ಪಾಂಡಿತ್ಯದ ಕೀರ್ತಿಯನ್ನು ಹಬ್ಬಿಸು. ನಿನ್ನನ್ನು ನಾವು ಕರೆದುಕೊಂಡು ಬಂದುದಕ್ಕೆ ನಿನ್ನ ತಂದೆತಾಯಿಗಳಿಗೆ ಸಂತೋಷವನ್ನುಂಟುಮಾಡಿ, ಅವರು ಒಪ್ಪುವಂತೆ ಮಾಡಿ ಅವರನ್ನು ಬಿಟ್ಟು ಬಂದರೆ, ತಪಸ್ಸನ್ನು ನಿನಗೆ ಉಪದೇಶಿಸಬಹುದು. ಅದಲ್ಲವಾದರೆ ಸಾಧ್ಯವಾಗದು" ಎಂದರು. ಭದ್ರಬಾಹು ವಟು ಋಷಿಗಳನ್ನು ನಮಸ್ಕರಿಸಿ ತನ್ನ ಪಟ್ಟಣಕ್ಕೆ ಹೋದನು. ತನ್ನ ತಾಯಿತಂದೆಯರನ್ನು ಕಂಡು ಪಟ್ಟಣದಲ್ಲಿ ಪ್ರಸಿದ್ಧರಾದ ವಿದ್ವಾಂಸರೊಡನೆ ವಾದಮಾಡಿ ಗೆದ್ದು ಹತ್ತು ದಿಕ್ಕುಗಳಲ್ಲೆಲ್ಲ ತನ್ನ

ಪಸರಿಸಿ ತಾಯ್ತಂದೆಗಂ ಸಂತೋಷಂ ಮಾಡಿಯವರನೊಡಂಬಡಿಸಿ ಬಂದು ಗೋವರ್ಧನ ಭಟ್ಟಾರರ ಪಕ್ಕದೆ ಕುಮಾರಬ್ರಹ್ಮಚಾರಿಯಾಗಿ ಭದ್ರಬಾಹು ತಪಂಬಟ್ಟು ಕೆಲವು ದಿವಸದಿಂದೊಳಗೆ ದ್ವಾದಶಾಂಗ ಚತುರ್ದಶಪೂರ್ವಮಪ್ಪಾಗಮಮೆಲ್ಲಮಂ ಗ್ರಂಥಾರ್ಥಸ್ವರೂಪದಿಂ ಕಲ್ತು ಸಕಲಶಾಸ್ತ್ರಪಾರಾವಾರಗನಾಗಿ ಎಲ್ಲಾ ವೋದುಗಳುಮಂ ನೆಱೆಯೋದಿ ಕಲ್ತು ಶ್ರುತದೊಳಪ್ಪ ಭಕ್ತಿಕಾರಣಮಾಗಿ ಪ್ರತಿಮಾಯೋಗಂನಿಂದೊರಂ ದೇವರ್ಕಳುಂ ಮನುಷ್ಯರ್ಕಳುಂ ಬಂದು ಪಿರಿದಪ್ಪ ಪೂಜೆಯಂ ಮಾಡಿಯರ್ಚಿಸಿ ಪೂಜಿಸಿ ಬಂದಿಸಿದೊಡೆಲ್ಲಾ ಋಷಿಸಮುದಾಯಮುಮಂ ಪ್ರತಿಪಾಲಿಸಲ್ಕೆ ಸಮರ್ಥರಾಗಿರ್ಪ್ಪನ್ನೆಗಂ ಗೋವರ್ಧನ ಭಟ್ಟಾರರ್ ಸಮಾಧಿಮರಣದಿಂದಂ ರತ್ನತ್ರಯಮಂ ಸಾಧಿಸಿ ಮುಡಿಪಿ ದೇವಲೋಕಕ್ಕೆ ವೋದರ್ ಇತ್ತ ಭದ್ರಬಾಹು ಭಟ್ಟಾರರ್ ಚತುರ್ದಶ ಪೂರ್ವಧಾರಿಗಳುಂ ಕಡೆಯಾ ರಿಸಿಯುಯ್ವನೆಯ ಶ್ರುತಕೇವಳಿಗಳವಧಿಜ್ಞಾನಿಗಳುಂ ಪಲವುಂ ಋದ್ಧಿಗಳಿಂ ಕೂಡಿದೊರೆಲ್ಲಾ ಋಷಿಸಮುದಾಯಮುಮಂ ಪ್ರತಿಪಾಳಿಸುತ್ತಂ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಿರ್ಪ್ಪನ್ನೆಗಂ ಮತ್ತಿತ್ತ ಮಗಧೆಯೆಂಬುದು ನಾಡಲ್ಲಿ ಪಾಟಳೀಪುತ್ರಮೆಂಬುದುಪೊಲದನಾಳ್ವಂ ನಂದನೆಂಬರಸಂ ಪಲಕಾಲಮರಸುಗೆಯ್ಯುತ್ತಿರೆ ಮತ್ತೊಂದುದಿವಸಂ ಚಾಣಕ್ಯನೆಂಬ

ವಿದ್ವತ್ತಿನ ಕೀರ್ತಿಯನ್ನು ಹಬ್ಬಿಸಿದನು. ತಾಯಿತಂದೆಗಳಿಗೆ ಸಂತೋಷವನ್ನುಂಟುಮಾಡಿ, ಅವರನ್ನು ಒಪ್ಪುವಂತೆ ಮಾಡಿ ಬಂದು ಗೋವರ್ಧನ ಋಷಿಗಳ ಬಳಿಯಲ್ಲಿ ಭದ್ರಬಾಹು ಬಾಲಬ್ರಹ್ಮಚಾರಿಯಾಗಿ ತಪಸ್ಸನ್ನು ಮಾಡಿದನು. ಕೆಲವು ದಿವಸಗಳೊಳಗಾಗಿ ಹನ್ನೆರಡು ಅಂಗ ಮತ್ತು ಹದಿನಾಲ್ಕು ಪೂರ್ವಗಳು ಉಳ್ಳ ಶಾಸ್ತ್ರಗಳನ್ನೆಲ್ಲ ಗ್ರಂಥದ ಅರ್ಥದೊಂದಿಗೆ ಕಲಿತನು. ಎಲ್ಲ ಶಾಸ್ತ್ರಗಳಲ್ಲಿಯೂ ಪಾರಂಗತನಾಗಿ ಎಲ್ಲಾ ವಿದ್ಯೆಗಳನ್ನೂ ವಿಶೇಷವಾಗಿ ಓದಿ, ಶಾಸ್ತ್ರಗಳಲ್ಲಿರುವ ಭಕ್ತಿಯೇ ಕಾರಣವಾಗಿ ಕಲಿತು ಪ್ರತಿಮಾಯೋಗದಲ್ಲಿ ನಿಂತನು. ದೇವತೆಗಳೂ ಮನುಷ್ಯರೂ ಬಂದು ಭದ್ರಬಾಹು ಋಷಿಗಳನ್ನು ಅತಿಶಯವಾಗಿ ಗೌರವಿಸಿ, ಪೂಜಿಸಿದರು. ಎಲ್ಲಾ ಋಷಿಗಳ ಸಮೂಹಕ್ಕೂ ಪಾಲಕರಾಗಿ ಸಮರ್ಥರಾಗಿ ಭದ್ರಬಾಹು ಋಷಿಗಳು ಇದ್ದರು. ಆಗ ಗೋವರ್ಧನ ಋಷಿಗಳು ರತ್ನತ್ರಯವನ್ನು ಸಂಪಾದಿಸಿ ಸಮಾಧಿ ಮರಣದಿಂದ ಸತ್ತು ದೇವಲೋಕಕ್ಕೆ ಹೋದರು. ಇತ್ತ ಭದ್ರಬಾಹು ಋಷಿಗಳು ಹದಿನಾಲ್ಕು ಪೂರ್ವಗಳುಳ್ಳ ಶಾಸ್ತ್ರಗಳನ್ನರಿತವರೂ ಋಷಿ ಪರಂಪರೆಯಲ್ಲಿ ಐದನೆಯವರೂ ಕೇವಲಜ್ಞಾನ ಅವಧಿ ಜ್ಞಾನಗಳನ್ನು ಪಡೆದವರೂ ಹಲವು ತಪಸ್ಸಿದ್ಧಿಗಳುಳ್ಳವರೂ ಆಗಿ, ಎಲ್ಲಾ ಋಷಿ ಸಮೂಹವನ್ನೂ ಪಾಲಿಸುತ್ತ ಗ್ರಾಮ-ನಗರ-ಖೇಡ-ಖರ್ವಡ-ಮಡಂಬ-ಪಟ್ಟಣ-ದ್ರೋಣಾಮುಖಗಳಲ್ಲಿ ಸಂಚರಿಸುತ್ತ ಇದ್ದರು. ಹೀಗಿರಲು, ಇತ್ತ ಮಗಧೆ ಎಂಬ ನಾಡಿನಲ್ಲಿ ಪಾಟಳೀ ಪುತ್ರವೆಂಬ ಪಟ್ಟಣವನ್ನಾಳುವ ನಂದನೆಂಬ ರಾಜನಿದ್ದನು. ಅವನು ಹಲವು ಕಾಲ ರಾಜ್ಯಭಾರಮಾಡುತ್ತ ಇದ್ದನು. ಅನಂತರ, ನಂದನು ಒಂದು ದಿವಸ ಚಾಣಕ್ಯನೆಂಬ ಭಟ್ಟನನ್ನು ಅಪಮಾನಗೊಳಿಸಿ, ನೂಕಿ, ಅಟ್ಟಿ ಹೊರಪಡಿಸಿದನು,

ನೆಂಬ ಭಟ್ಟನಂ ನಂದಂ ಪರಿಭವಿಸಿ ನೂಂಕಿಯುಟ್ಟಿ ಕಳಿಯಿಸಿದೊಡಾತನುಂ ಮುಳಿದು ನಂದನಂ ಕೆಡಿಸಿ ನಂದನ ರಾಜ್ಯಸ್ಥಾನದೊಳ್ ಪೆಜನೊರ್ವನಂ ಚಂದ್ರಗುಪ್ತನೆಂಬೊನಂ ನಿಱಿಸಿದೊಡಾತನುಂ ಪಲಕಾಲಮರಸುಗೆಯ್ದು ಕೞಿದೊಡಾತನ ಮಗಂ ಬಿಂದುಸಾಗರನೆಂಬೊನರಸುಗೆಯ್ದು ಕೞಿದ ಬೞಿಕ್ಕಾತನ ಮಗನಶೋಕನೆಂಬೊನರಸುಗೆಯ್ಯುತ್ತಿರೆ ಆತನ ಮಗಂ ಪ್ರತಾಪದಿಂ ತೇಜದಿಂದಾದಿತ್ಯನೊಳೊರನ್ನನಪ್ಪೊಂ ಕುಣಾಳನೆಂಬೊನಂತವರ್ಗಳಿಷ್ಟವಿಷಯ ಕಾಮಭೋಗಂಗಳನನುಭವಿಸುತ್ತಂ ಕಾಲಂ ಸಲೆ ಮತ್ತೊಂದು ದಿವಸಮಶೋಕಮಹಾರಾಜಂ ಪರಚಕ್ರದ ಮೇಗೆತ್ತಿ ಪೋಗಿ ಅಲ್ಲಿಂದಂ ಮಂತ್ರಿ ಪುರೋಹಿತ ತಳವಱಾದಿಗಳ್ಗಿಂತೆಂದೋಲೆಯನಟ್ಟಿದೊನುಪಾಧ್ಯಾಯಂಗೆ ಕೞಮೆಯ ಕೂೞುಂ ತುಪ್ಪಮುಂ ತೊವೆಯುಮನುಣಲ್‌ಕೊಟ್ಟು ಕುಮಾರನನೋದಿಸುಗೆಂದೋಲೆಯನಟ್ಟಿದೊಡೆ ವಾಚಕನೋಲೆಯರ್ಥಮನಱಿಯದೆ ವಿಪರೀತಮಾಗಿಂತೆಂದು ಬಾಚಿಸಿದನ್ ಉಪಾಧ್ಯಾಯಂ ಶಾಲಿಂ ಕೂರಂ ಚ ಮಷಿಂ ಘೃತಂ ದತ್ವಾ ಕುಮಾರಮಂಧಾಪಯೇತ್ ಎಂದಿಂತು ವಿಪರೀತಮಾಗಿ ಲೇಖಾರ್ಥಮಂ ಬಾಚಿಸಿದೊಡನಿಬರುಂ ಕೇಳ್ದು ಅಪ್ರತಿಹತ ಶಾಸನನಪ್ಪ ನೃಪತಿಯಾಜ್ಞೆಗೆ ಭಯಸ್ಥರ್ಕಳಾಗಿ ಉಪಾಧ್ಯಾಯಂಗೆ ಕೞಮೆಯ ಕೂೞುಂ ಮಷಿಯುಂ ತುಪ್ಪಮುಂ

ಚಾಣಾಕ್ಯನು ಕೋಪಗೊಂಡು ನಂದನನ್ನು ನಾಶಗೊಳಿಸಿ ನಂದನ ರಾಜ್ಯದ ಅಧಿಕಾರ ಸ್ಥಾನದಲ್ಲಿ ಚಂದ್ರಗುಪ್ತನೆಂಬ ಬೇರೊಬ್ಬನನ್ನು ನಿಲ್ಲಿಸಿದನು. ಆತನು ಹಲವು ಕಾಲ ಅರಸುತನವನ್ನು ನಡೆಸಿ ಸತ್ತುಹೋಗಲು, ಅವನ ಮಗನಾದ ಬಿಂದುಸಾಗರನೆಂಬಾತನು ರಾಜ್ಯಭಾರ ಮಾಡಿ ತೀರಿಹೋದನು. ಅವನ ನಂತರ, ಅವನ ಮಗನಾದ ಅಶೋಕನೆಂಬವನು ರಾಜ್ಯಭಾರ ಮಾಡುತ್ತಿದ್ದನು. ಅಶೋಕನ ಮಗನಾದ ಕುಣಾಳನು ಪರಾಕ್ರಮದಲ್ಲಿಯೂ ತೇಜಸ್ಸಿನಲ್ಲಿಯೂ ಸೂರ್ಯನಂತಿದ್ದನು. ಅಂತು ಅವರು ಇಷ್ಟವಾದ ವಿಷಯದ ಬಯಕೆಯ ಸುಖಗಳನ್ನು ಅನುಭವಿಸುತ್ತಿದ್ದು ಹೀಗೆಯೇ ಕಾಲ ಕಳೆಯಿತು. ಆ ಮೇಲೆ ಒಂದು ದಿವಸ ಅಶೋಕ ಮಹಾರಾಜನು ಶತ್ರುಗಳ ರಾಜ್ಯದ ಮೇಲೆ ದಂಡೆತ್ತಿಕೊಂಡು ಹೋದನು. ಅಲ್ಲಿಂದ ಮಂತ್ರಿ–ಪುರೋಹಿತ– ನಗರ ರಕ್ಷಕ ಮುಂತಾದವರಿಗೆ ಈ ರೀತಿಯಾಗಿ ಪತ್ರವನ್ನು ಕಳುಹಿಸಿದನು– "ಉಪಾಧ್ಯಾಯನಿಗೆ ಕಳಮೆಯ ಅನ್ನ, ತುಪ್ಪ, ತೊವ್ವೆಗಳನ್ನು ಉಣಲಿಕ್ಕೆ ಕೊಟ್ಟು ರಾಜಕುಮಾರನನ್ನು (ಅಧ್ಯಾಪಯೇತ್) ಓದಿಸತಕ್ಕದ್ದು". ಹೀಗೆ ಪತ್ರವನ್ನು ಕಳುಹಿಸಲು ಅದನ್ನು ಓದುವವನು ಪತ್ರದ ಅರ್ಥವನ್ನು ತಿಳಿಯದೆ ವ್ಯತ್ಯಸ್ತವಾಗಿ ಅದನ್ನು ಓದಿದನು. "ಉಪಾಧ್ಯಾಯನಿಗೆ ಶಾಲ್ಯನ್ನವನ್ನೂ ಮಸಿಯನ್ನೂ ತುಪ್ಪವನ್ನೂ ಕೊಟ್ಟು ರಾಜಕುಮಾರನನ್ನು (ಅಂಧಾಪಯೇತ್) ಕುರುಡನನ್ನಾಗಿ ಮಾಡತಕ್ಕದ್ದು" ಈ ರೀತಿಯಾಗಿ ನಿಜವಾದ ಅರ್ಥಕ್ಕೆ ವ್ಯತಿರಿಕ್ತವಾಗಿ ಆ ಬರವಣಿಗೆಯ ಅರ್ಥವನ್ನು ಓದಿದನು. ಅವರೆಲ್ಲರೂ ಇದನ್ನು ಕೇಳಿ ತಡೆಯಿಲ್ಲದ ಶಾಸನವುಳ್ಳವನಾದ ರಾಜನ ಆಜ್ಞೆಗೆ ಹೆದರಿ, ಉಪಾಧ್ಯಾಯನಿಗೆ ಶಾಲ್ಯನ್ನವನ್ನೂ ತುಪ್ಪವನ್ನೂ ಮಸಿ (ಶಾಯಿ)ಯನ್ನೂ ಉಣ್ಣಲು ಕೊಟ್ಟು

ಮನುಂಣಲ್ಕೊಟ್ಟು ಕುಣಾಳನೆಂಬ ಕುಮಾರನೆರಡುಂ ಕಣ್ಗಳುಮನೊಡೆದು ಕುರುಡಂ ಮಾಡಿದ ಕೆಲವು ದಿವಸದಿಂದರಸಂ ಪರಚಕ್ರಮಂ ಸಾಧಿಸಿ ಬಂದು ಮಗಂ ಕುರುಡಾದುದಂ ಕಂಡಾದಮಾನು ಮುಬ್ಬೆಗಂ ಬಟ್ಟು ಸೈರಿಸಲಾಱದೆ ಕುಣಾಳನರಸಿ ಚಂದ್ರಾನನೆಯೆಂಬೊಳ್ಗೆ ಮಗಂ ಪುಟ್ಟಿದೊಡಾತಂಗೆ ಸಂಪ್ರತಿ ಚಂದ್ರಗುಪ್ತನೆಂದು ಪೆಸರನಿಟ್ಟು ರಾಜ್ಯಾಭಿಷೇಕಂಗೆಯ್ದು ಪಟ್ಟಂಗಟ್ಟಿ ಸಮಸ್ತ ರಾಜ್ಯಭಾರಮೆಲ್ಲಮಂ ನಿರೂಪಿಸಿ ಕುಣಾಳನುಮನೆಂದಂ ಮಗನೆ ಬೇಡು ನೀನೆಂದೊಡಾತನುಂ ಕಾಕಿಣೀರತ್ನಮಂ ಬೇಡಿದೊಡಾ ರತ್ನಂ ಚಕ್ರವರ್ತಿಗಲ್ಲದಿಲ್ಲೆಂದು ಮಗಂಗೆ ಮಱುಮಾತುಗೊಟ್ಟು ಸಂಸಾರವೈರಾಗ್ಯಮಾದಮಾನುಂ ಪೆರ್ಚಿ ಸುವ್ರತರೆಂಬ ಭಟ್ಟಾರರ ಪಕ್ಕದೆ ಜಿನದೀಕ್ಷೆಯಂ ಕೈಕೊಂಡು ಪರತ್ರಯಂ ಸಾಧಿಸಿದೊಂ ಮತ್ತಿತ್ತ ಸಂಪ್ರತಿ ಚಂದ್ರಗುಪ್ತಮಹಾರಾಜನರಸುಗೆಯ್ಯುತ್ತಿರೆ ಸಮಾಧಿಗುಪ್ತರೆಂಬಾಚಾರ್ಯರವಧಿಜ್ಞಾನಿಗಳ್ ವಿಹಾರಿಸುತ್ತಂ ಬರ್ಪರಾ ಪಾಟಳೀಪುತ್ರಕ್ಕೆ ವಂದು ಪೊಱವೊಟಲ ಬಹಿರುದ್ಯಾನವನದೊಳಿರ್ದೊರಂ ಸಂಪ್ರತಿ ಚಂದ್ರಗುಪ್ತಂ ಪೋಗಿ ವಂದಿಸಿ ಧರ್ಮಮಂ ಕೇಳ್ದು ತದನಂತರಂ ತನ್ನ ಭವಾಂತರಂಗಳಂ ಬೆಸಗೊಂಡೊಡೆ ಭಟಾರರ್ ಪೇಟಿಲ್ ತೊಡಗಿದರ್ ಈ ಜಂಬೂದ್ವೀಪದ ಭರತಕ್ಷೇತ್ರದೊಳವಂತಿಯೆಂಬುದು ನಾಡಲ್ಲಿ

ಕುಣಾಳನೆಂಬ ರಾಜಕುಮಾರನ ಕಣ್ಣುಗಳನ್ನು ಒಡೆದು ಕುರುಡನನ್ನಾಗಿ ಮಾಡಿದರು. ಕೆಲ ದಿನಗಳಲ್ಲಿ ಅಶೋಕರಾಜನು ಶತ್ರುಗಳ ರಾಜ್ಯವನ್ನು ಗೆದ್ದು ಬಂದಾಗ ಮಗನು ಕುರುಡನಾದುದನ್ನು ಕಂಡನು. ಅವನು ಅತ್ಯಂತ .ದುಃಖವನ್ನು ಹೊಂದಿ ಸಹಿಸಲಾರದಾದನು. ಕುಣಾಳನ ಪತ್ನಿಯಾದ ಚಂದ್ರಾನನೆ ಎಂಬವಳಿಗೆ ಒಬ್ಬ ಮಗನು ಹುಟ್ಟಲು ಅವನಿಗೆ ಸಂಪ್ರತಿ ಚಂದ್ರಗುಪ್ತನೆಂದು ನಾಮಕರಣವನ್ನು ಮಾಡಿ, ರಾಜ್ಯಾಭಿಷೇಕ ಮಾಡಿ, ಪಟ್ಟವನ್ನು ಕಟ್ಟಿ ತನ್ನ ಸಮಸ್ತ ರಾಜ್ಯಭಾರವನ್ನು ಅವನಿಗೆ ಒಪ್ಪಿಸಿದನು. ಆಮೇಲೆ ಅಶೋಕನು ಕುಣಾಳನೊಡನೆ–"ಮಗನೇ ನಿನಗೆ ಏನು ಬೇಕು, ಕೇಳು" ಎಂದನು. ಆಗ ಕುಣಾಳನು ಅಶೋಕನ ವಶದಲ್ಲಿದ್ದ ಕಾಕಿಣಿ ಎಂಬ ಚಿಂತಾರತ್ನವನ್ನು ತನಗೆ ಕೊಡಬೇಕೆಂದು ಕೇಳಿದನು. ಅದಕ್ಕೆ ಅಶೋಕನು ಆ ರತ್ನವು ಚಕ್ರವರ್ತಿಗೆ ಮಾತ್ರ ಸಲ್ಲತಕ್ಕದ್ದು, ಇತರರಿಗೆ ಸಲ್ಲತಕ್ಕದ್ದಲ್ಲವೆಂದು ಮಗನಿಗೆ ಪ್ರತ್ಯುತ್ತರಕೊಟ್ಟು ಸಂಸಾರದಲ್ಲಿ ಅತಿಶಯ ವೈರಾಗ್ಯವು ಹೆಚ್ಚಾಗಿ ಸುವ್ರತರೆಂಬ ಋಷಿಗಳ ಬಳಿಯಲ್ಲಿ ಜಿನದೀಕ್ಷೆ ಸ್ವೀಕರಿಸಿ ಪರಗತಿಯನ್ನು ಪಡೆದನು. ಆಮೇಲೆ, ಇತ್ತ ಸಂಪ್ರತಿ ಚಂದ್ರಗುಪ್ತ ಮಹಾರಾಜನು ರಾಜ್ಯವಾಳುತ್ತ ಇದ್ದನು. ಹೀಗಿರಲು ಅವಧಿಜ್ಞಾನಿ (ತ್ರಿಕಾಲಜ್ಞಾನಿ) ಗಳಾದ ಸಮಾಧಿ ಗುಪ್ತರೆಂಬ ಆಚಾರ್ಯರು ಸಂಚಾರಮಾಡುತ್ತ ಬರತಕ್ಕವರು ಪಾಟಳೀಪುತ್ರಕ್ಕೆ ಬಂದರು. ಅಲ್ಲಿ ಪಟ್ಟಣದ ಹೊರಗಿನ ಉದ್ಯಾನದಲ್ಲಿದ್ದರು. ಸಂಪ್ರತಿ ಚಂದ್ರಗುಪ್ತನು ಅವರಲ್ಲಿಗೆ ಹೋಗಿ ನಮಸ್ಕರಿಸಿ ಧರ್ಮಬೋಧನೆಯನ್ನು ಕೇಳಿದನಂತರ ತನ್ನ ಬೇರೆಬೇರೆ ಜನ್ಮಗಳ ಸಂಗತಿಯೇನೆಂದು ಕೇಳಿದನು. ಋಷಿಗಳು ಆಗ ಹೇಳತೊಡಗಿದರು. ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಅವಂತಿ ಎಂಬ ನಾಡಿದೆ. ಅಲ್ಲಿ ವೈದಿಶವೆಂಬ ಪಟ್ಟಣವಿದೆ.

ವೈದಿಶಮೆಂಬುದು ಪೊಟಲದನಾಳ್ವೊಂ ಜಯವರ್ಮನೆಂಬೊನರಸನಾತನ ಮಹಾದೇವಿ ಧಾರಿಣಿಯೆಂಬೊಳಂತವರ್ಗಳಿಷ್ಟವಿಷಯ ಕಾಮ ಭೋಗಂಗಳನನುಭವಿಸುತ್ತಿರೆ ಮತ್ತಾ ಪೊಟಲ ಸಾರೆ ಪರಾಳಕೂಟಮೆಂಬೂರೊಳ್ ದೇವಿಲನೆಂಬೊಂ ಶಾಕಟಿಕಂ ಪರದನಾತನ ಭಾರ್ಯೆ ಪೃಥ್ವಿಶ್ರೀ ಯೆಂಬೊಳಾಕೆಯ ಗರ್ಭದೊಳ್ ಪಾಪಕರ್ಮಜೀವಂ ನೆಲಸಿದೊಡೇನುಂ ನೆವಮಿಲ್ಲದೆ ಕಸವರ ಮೆಲ್ಲಂ ಕೆಟ್ಟತ್ತು ಮತ್ತೊಂದು ದಿವಸಂ ಪಲಂಬರ್ ಶಾಕಟಿಕ ಪರದರುಂ ಬೆರಸು ಬಂಡಿಗಳೊಳ್ ಪತ್ತಿಯುಂ ಧಾನ್ಯಮುಂ ತೀವಿಕೊಂಡು ಪೊಟಲ್ಗೆ ಮಾಱಲೆಂದು ಪೋಪನ್ನೆಗಮೆಡೆಯೊಳಡವಿ ಯೊಳ್ ಕಳ್ಳರ್ ಬಟ್ಟೆಗಟ್ಟಿ ಮೇಲ್ವಾಯ್ದಿಱಿದೊಡೆ ದೇವಿಲಂ ಮೊದಲಾಗೊಡೆಯ ಪಲಂಬರ್ ಪರದರ್ ಸತ್ತರುೞಿದರೆಲ್ಲಮೋಡಿ ಕೆಟ್ಟೊಡೆ ಬಂಡಮುಮೆತ್ತುಗಳುಂ ಮೊದಲಾಗೆಲ್ಲಮಂ ಕಳ್ಳರ್ ಕೊಂಡುಪೋದರಾ ಪ್ರಸ್ತಾವದೊಳ್ ಪೃಥ್ವಿಶ್ರೀ ಬೆಸಲೆಯಾಗಿ ನಂದಿಮಿತ್ರನೆಂದಾ ಕೂಸಿಂಗೆ ಪೆಸರ ನಿಟ್ಟು ಎರಡುಮೂಱು ತಿಂಗಳಿಂಗೆ ತಾಯ್ ಕೞಿದೊಡೆ ಬಂದ ನಂಟರ್ ನಡಪೆ ಬಳೆದೊಡಾ ನಂಟ ರುಂ ಕೞಿದುಳ್ಳರೆಲ್ಲಂ ಸತ್ತು ಕುಲಕ್ಷಯಮಾದೊಡೂರವರೆಲ್ಲಮಿಂತೆಂದರೀ ತರುವಲಿ ನಮ್ಮೂರೊಳಿರೆ ನಮಗೆ ಸಾವುಂ ಕೇಡುಮಮೋಘಮಕ್ಕುಮಿವನನಟ್ಟಿ ಕಳೆಯಿಮೆಂದೂರಿಂದನಿಬರುಮಟ್ಟಿ ಕಳೆದೊ

ಅದನ್ನು ಜಯವರ್ಮನೆಂಬ ಅರಸನು ಆಳುತ್ತಿದ್ದನು. ಅವನ ಮಹಾರಾಣಿ ಧಾರಿಣಿ ಎಂಬುವಳು. ಅಂತು ಅವರು ತಮಗೆ ಮೆಚ್ಚುಗೆಯಾದ ವಿಷಯದ ಇಷ್ಟಸುಖಗಳನ್ನು ಅನುಭವಿಸುತ್ತ ಇದ್ದರು. ಆ ಪಟ್ಟಣದ ಸಮೀಪದಲ್ಲಿರುವ ಪರಾಳಕೂಟವೆಂಬ ಊರಿನಲ್ಲಿ ದೇವಿಲನೆಂಬ ಸರಕು ಸಾಗಿಸುವ ಗಾಡಿಗಳನ್ನುಳ್ಳ ವರ್ತಕನಿದ್ದನು. ಅವನ ಹೆಂಡತಿ ಪೃಥ್ವಿಶ್ರೀ ಎಂಬುವಳು. ಆಕೆಯ ಬಸಿರಿನಲ್ಲಿ ಪಾಪಕೃತ್ಯವನ್ನು ಮಾಡಿದ ಒಂದು ಜೀವವು ನೆಲಸಿತು. ಇದರಿಂದ ಏನೊಂದು ಕಾರಣವೂ ಇಲ್ಲದೆ ಅವನ ಹೊನ್ನೆಲ್ಲ (ಐಶ್ವರ್ಯವೆಲ್ಲ) ಹಾಳಾಯಿತು. ಆ ಮೇಲೆ ಒಂದು ದಿವಸ ಅವನು ಹಲವು ಮಂದಿ ಗಾಡಿಯುಳ್ಳ ವ್ಯಾಪಾರಿಗಳನ್ನು ಕೂಡಿಕೊಂಡು ಗಾಡಿಗಳಲ್ಲಿ ಹತ್ತಿಯನ್ನೂ ಧಾನ್ಯ ವನ್ನೂ ತುಂಬಿಸಿಕೊಂಡು ಪಟ್ಟಣಕ್ಕೆ ಮಾರಲಿಕ್ಕೆಂದು ಹೋಗುತ್ತಿದ್ದನು. ಹಾಗೆ ಹೋಗುವಾಗ ನಡುವೆ ಕಾಡಿನಲ್ಲಿ ಕಳ್ಳರು ಇವರ ದಾರಿಯನ್ನು ಕಟ್ಟಿ ಮೇಲೆ ಹಾರಿ ಬಂದು ತಿವಿಯಲು; ದೇವಿಲ ಮೊದಲಾಗಿ ಉಳ್ಳ ಹಲವರು ವರ್ತಕರು ಸತ್ತರು. ಉಳಿದವರೆಲ್ಲ ಓಡಿ ತಪ್ಪಿಸಿಕೊಂಡರು. ಸರಕುಗಳು ಎತ್ತುಗಳು ಮುಂತಾದ ಎಲ್ಲವನ್ನೂ ಕಳ್ಳರು ಕೊಂಡು ಹೋದರು. ಆ ಸಂದರ್ಭದಲ್ಲಿ ಪೃಥ್ವಿಶ್ರೀ ಗಂಡುಮಗುವನ್ನು ಹೆತ್ತಳು. ಆ ಮಗುವಿಗೆ ನಂದಿಮಿತ್ರನೆಂದು ಹೆಸರಿಟ್ಟು, ಎರಡು ಮೂರು ತಿಂಗಳಾಗಲು ತಾಯಿ ಮಡಿದಳು. ನಂಟರು ಆ ಮಗುವನ್ನು ಸಾಕಿಸಲಹಲು ನಂದಿಮಿತ್ರನು ದೊಡ್ಡವನಾದನು. ಅವನನ್ನು ಸಾಕಿದ ನಂಟರೂ ಸತ್ತರು. ಇನ್ನೂ ಇದ್ದ ಇತರರೂ ಸತ್ತು ಅವರ ಕುಲವೇ ನಾಶವಾಯಿತು. ಆಗ ಊರಿನವರೆಲ್ಲ ಹೀಗೆ ಹೇಳಿಕೊಂಡರು– "ಈ ಬಾಲಕನು ನಮ್ಮ ಊರಿನಲ್ಲಿದ್ದರೆ ನಮಗೆಲ್ಲ ನಿಶ್ಚಯವಾಗಿಯೂ ಮರಣವೂ ಕೇಡೂ ಉಂಟಾಗುವುದು;

ಡಾತಂ ಕೆಲದೂರ್ಗಳುಮಂ ನಾಡ್ಗಳುಮಂ ತೊೞಲ್ದು ಬೈಕಂದಿರಿದೆಲ್ಲಿಯಾನುಂ ಪೆತ್ತುಂ ಪೆಱದೆಯುಂ
ಮಿಂತು ಬಾೞುತ್ತುಂ ಪದಿನೈದು ಪದಿನಾಱು ವರುಷದ ಪ್ರಾಯದಾತನಾಗಿ ವೈದಿಶಮೆಂಬ ಪೊೞ
ಲ್ಗೆವರ್ಪೊನ್ ಅನ್ನೆಗಂ ಕಾಷ್ಠಕೂಟನೆಂಬ ಬೆಸದವಂ ಪುಳ್ಳಿಯ ಪೊಱೆಯುಂ ಪೊತ್ತು ಪೊೞಲ್ಗೆವ
ರ್ಪೊನಂ ಕಂಡಾತನೊಡನೆ ಗೊಟ್ಟಿಯೊಳ್ ಬಂದು ಪೊಱಪೊೞಲೊಳಾರವೆಯೊಳ್ ಕಾಷ್ಠಕೂಟಂ
ಸೇದೆಗೆಟ್ಟು ಪುಳ್ಳಿಯ ಪೊಱೆಯನಿೞಿಪಿ ಪಟ್ಟಿರ್ದೊಡೆ ತಾನುಂ ಪಟ್ಟಿರಲೆಂದು ಬಗೆದು ತಲೆಯು
ತ್ತಿವಲ್ಕರಸಿಯೇನುಮಂ ಕಾಣದೆ ತರ್ಪೊನೆಣ್ಬರಿಂದಂ ತಳರ್ಚಲಾಱದಂತಪ್ಪ ಪಿರಿದೊಂದು ಸಿಲೆಯುಂ
ತಂದು ತಲೆಯುತ್ತಿಟ್ಟು ಪಟ್ಟಿರ್ದುದಂ ಕಾಷ್ಠಕೂಟನಾತನ ಬಲಮಂ ಕಂಡು ತನ್ನ ಮನೆಗೊಡ
ಗೊಂಡು ಪೋಗಿಯೂಡಿ ನಿನಗೀ ಪೊೞಲೊಳಾರಾನುಂ ನಂಟರೊಳರೆಯೆಂದು ಬೆಸಗೊಂಡೊಡಾ
ರುಮಿಲ್ಲೆಂದೊಡಂತಪ್ಪೊಡೆ ನೀನೆನ್ನೊಡನಿರೆತ್ತಲುಂ ಪೋಗದಿರೆಂದು ತಾಂಗಿ ತಾನುಮಾತನುಮಂ
ತಿರ್ವರುಂ ದಿವಸಕ್ಕಂ ಪುಳ್ಳಿಯುಂ ತರೆ ಪದಿಂಬರ್ ತರ್ಪ ಪೊಱೆಯನೊರ್ವನೆ ತರ್ಪನಂತು
ಪಲವು ದಿವಸಂ ಸಲೆ ಕಾಷ್ಠಕೂಟಂ ತನ್ನ ಪೆಂಡತಿ ಜಯಘಂಟೆಯೆಂಬೊಳನಿಂತೆಂದು ಕಲ್ಪಿಸಿದ

ಇವನನ್ನು ಇಲ್ಲಿಂದ ಓಡಿಸಿ ಕಳೆದು ಬಿಡಿ". ಹೀಗೆಂದು ಅವರೆಲ್ಲರೂ ನಂದಿಮಿತ್ರನನ್ನು ಊರಿನಿಂದ ಓಡಿಸಿಬಿಟ್ಟರು. ಅವನು ಸಮೀಪದ ಊರುಗಳನ್ನೂ ನಾಡುಗಳನ್ನೂ ಸುತ್ತಾಡುತ್ತ ಭಿಕ್ಷೆ ಬೇಡಿಕೊಂಡು ಅಲೆಯುತ್ತ ಎಲ್ಲಿಯಾದರೂ ಭಿಕ್ಷೆ ಸಿಕ್ಕಿದರೂ ಆಯಿತು ಸಿಕ್ಕದಿದ್ದರೂ ಆಯಿತು ಎಂಬ ರೀತಿಯಲ್ಲಿ ಬಾಳುತ್ತ ಹದಿನೈದು ಹದಿನಾರು ವರ್ಷ ವಯಸ್ಸಿನವನಾಗಿ ವೈದಿಶವೆಂಬ ಪಟ್ಟಣಕ್ಕೆ ಬರುತ್ತಿದ್ದನು. ಆ ವೇಳೆಗೆ ಕಾಷ್ಠಕೂಟನೆಂಬ ಕೆಲಸದವನು (ಕಾರ್ಮಿಕನು) ಸೌದೆಯ ಹೊರೆಯನ್ನು ಹೊತ್ತುಕೊಂಡು ಪಟ್ಟಣಕ್ಕೆ ಬರುತ್ತಿದ್ದನು. ನಂದಿಮಿತ್ರನು ಅವನನ್ನು ಕಂಡು, ಅವನ ಜೊತೆಯಲ್ಲಿ ಬಂದನು. ಪಟ್ಟಣದ ಹೊರಗಿನ ಉದ್ಯಾನದಲ್ಲಿ ಕಾಷ್ಠಕೂಟನು ಆಯಾಸದಿಂದ ಅಶಕ್ತನಾಗಿ ತಲೆಯಲ್ಲಿದ್ದ ಸೌದೆ ಹೊರೆಯನ್ನು ಇಳಿಸಿ ಮಲಗಿದನು. ಆಗ ನಂದಿಮಿತ್ರನು ತಾನೂ ಮಲಗಬೇಕೆಂದು ಯೋಚಿಸಿ ತಲೆಯ ಕಡೆ ಒತ್ತಾಗಿ (ತಲೆದಿಂಬಾಗಿ) ಇಡಲಿಕ್ಕೆ ಹುಡುಕಿ ಏನೂ ಕಾಣದೆ, ಎಂಟು ಜನರಿಂದ ಅಲುಗಾಡಿಸಲು ಕೂಡ ಸಾಧ್ಯವಾಗದಂತಹ ದೊಡ್ಡದೊಂದು ಕಲ್ಲನ್ನು ತರತೊಡಗಿದನು. ಅದನ್ನು ತಂದು ತಲೆಯ ಕಡೆ ಇಟ್ಟು ಮಲಗಿದನ್ನು ಕಾಷ್ಠಕೂಟನು ಇದನ್ನು ನೋಡಿ, ಅವನ ಬಲವನ್ನು ಕಂಡು ತನ್ನ ಮನೆಗೆ ಅವನನ್ನು ಕರೆದುಕೊಂಡು ಹೋದನು. "ಈ ಪಟ್ಟಣದಲ್ಲಿ ನಿನಗೆ ಯಾರಾದರೂ ನಂಟರಿರುವರೆ ? ಎಂದು ಕೇಳಲು, "ಯಾರೂ ಇಲ್ಲ" ಎಂದು ನಂದಿಮಿತ್ರನು ಉತ್ತರ ಕೊಟ್ಟನು. ಆಗ ಕಾಷ್ಠಕೂಟನು– "ಹಾಗಾದರೆ ನೀನು ನನ್ನೊಡನೆ ಇರು. ಎಲ್ಲಿಗೂ ಹೋಗಬೇಡ"– ಎಂದು ಅವನಿಗೆ ಆಶ್ರಯಕೊಟ್ಟನು. ತಾನೂ ಅವನೂ ಹೀಗೆ ಇಬ್ಬರೂ ಪ್ರತಿದಿನವೂ ಸೌದೆ ತರುತ್ತಿದ್ದರು. ಹತ್ತು ಮಂದಿ ತರತಕ್ಕ ಹೊರೆಯನ್ನು ನಂದಿಮಿತ್ರನೊಬ್ಬನೆ ತರುತ್ತಿದ್ದನು. ಅಂತೂ ಹಲವು ದಿವಸ ಕಳೆಯಲು ಕಾಷ್ಠಕೂಟನು ತನ್ನ ಹೆಂಡತಿಯಾದ ಜಯಘಂಟೆಗೆ ಹೀಗೆ ಹೇಳಿಕೊಟ್ಟನು–"ಈತನಿಗೆ ನೀನು ಹೊಟ್ಟೆ

ನೀತಂಗೆ ನೀಂ ಬಸಿಱ್ತೀವೆ ಬಡ್ಡಿಸದಿರೆಣ್ಣೆಯುಂ ತಿಣ್ಣಮೆಱೆಯದಿರ್ ಮೀಯಲ್ವೇಡಿದೊಡ ಮೆಱೆಯದಿರೆಂದು ಕಲ್ಪಿಸಿದೊಡಾಕೆಯುಮಾ ಪಾಂಗಿನೊಳ್ ದಿವಸಕ್ಕಂ ಬಡ್ಡಿಸೆ ನಂದಿಮಿತ್ರನುಂ ಪಿರಿಯ ಪುಳ್ಳಿಯ ಪೊಱೆಗಳಂ ದಿವಸಕ್ಕಂ ತಂದು ಕುಡಲವಂ ಮಾಱಿ ಕಾಷ್ಠಕೂಟನೊಡೆಯೊನಾದೊನಿಂತು ದಿವಸಂಗಳ್ಸಲೆ ಮತ್ತೊಂದು ದಿವಸಂ ಜಯಘಂಟೆ ಕರುಣಿಸಿ ತಣಿಯೆ ಬಡ್ಡಿಸಿದೊಡುಂಡು ಮಱುದಿವಸಮಿರ್ವರುಂ ಪುಳ್ಳಿಗೆ ಪೋದಲ್ಲಿ ನಂದಿಮಿತ್ರನೆಂದನಯ್ಯಾ ಎನಗುಡಲಿಲ್ಲೇನುಮೊಂದು ದಮ್ಮಕ್ಕಾದೊಡಂ ಸೀರೆಯುಂ ಕೊಂಡೀಯಿಮೆಂದೊಡಂತೆಗೆಯ್ವೆಮೆಂದು ಮಱುಮಾತುಗೊಟ್ಟಿರ್ವರುಂ ಪುಳ್ಳಿಯ ಪೊಱೆಯುಂ ಮನೆಗೆ ತಂದ ಬೞಿಕ್ಕೆ ಕಾಷ್ಠಕೂಟಂ ಪೆಂಡತಿಯನೆಂದನೀತಂಗೆ ನೀಂ ಬಸಿಱ್ ತೀವೆಯುಣಲಿಕ್ಕಿದಾ ಎಂದೊಡೆ ಕರುಣಿಸಿ ಪರ್ವಮೆಂದು ತಣಿಯುಣಲಿಕ್ಕಿದೆನೆಂದೊಡೆ ಮುಳಿದು ಸಾಯೆ ಬಡಿದು ಮನೆಯಿಂ ಪೆಂಡತಿಯನಟ್ಟಿ ಕಳೆದೊಡೆ ನಂದಿಮಿತ್ರಂ ಪೋಗಿ ಜಯಘಂಟೆಯುಂ ಬೆಸಗೊಂಡನ್ ನಿನ್ನನೇಕೆ ಕಾಷ್ಠಕೂಟಂ ಬಡಿದನಬ್ಬಾ ಎಂದು ಬೆಸಗೊಂಡೊಡೆ ನಿನಗೆ ನಿನ್ನೆ ತಣಿಯೆಯುಣಲಿಕ್ಕಿದನೆಂದು ಮುಳಿದು ಬಡಿದಟ್ಟಿ ಕಳೆದೊನೆಂ

ತುಂಬುವಷ್ಟು ಬಡಿಸಬೇಡ. ಎಣ್ಣೆಯನ್ನು ಹೆಚ್ಚು ಹೊಯ್ಯಬೇಡ. ಸ್ನಾನಕ್ಕಾಗಿ ಕೇಳಿದರೆ ಕೂಡ ಎಣ್ಣೆಯನ್ನು ಹೊಯ್ಯಬೇಡ" ಹೀಗೆ ಹೇಳಿಕೊಡಲು, ಆಕೆ ಅದೇ ರೀತಿಯಲ್ಲಿಯೇ ಬಡಿಸುತ್ತಿದ್ದಳು. ನಂದಿಮಿತ್ರನು ಪ್ರತಿದಿನವೂ ಕಟ್ಟಿಗೆಯ ದೊಡ್ಡ ದೊಡ್ಡ ಹೊರೆಗಳನ್ನು ತಂದು ಕೊಡುತ್ತಿದ್ದನು. ಕಾಷ್ಠಕೂಟನು ಅವನ್ನು ಮಾರಿ ಧನಿಕನಾದನು. ಹೀಗೆ ದಿವಸಗಳು ಕಳೆದುವು. ಒಂದು ದಿನ ಜಯಘಂಟೆ ಕನಿಕರಪಟ್ಟು ನಂದಿಮಿತ್ರನಿಗೆ ತೃಪ್ತಿಯಾಗುವಷ್ಟು ಬಡಿಸಿದಳು. ಅದನ್ನು ಉಂಡು ಮೂರನೆಯ ದಿನ ಇಬ್ಬರೂ ಸೌದೆ ತರಲು ಹೋದಾಗ ನಂದಿಮಿತ್ರನು–"ಅಯ್ಯಾ, ನನಗೆ ಉಡಲಿಕ್ಕೆ ಗತಿಯಿಲ್ಲ. ಎಲ್ಲಾದರೊಂದು ದಮ್ಮಕ್ಕೆ (ದಮ್ಮ–ಒಂದು ನಾಣ್ಯ) ಸಿಗುವಷ್ಟಾದರೂ ಬಟ್ಟೆ ತಂದುಕೊಡಿ" ಎಂದನು. "ಹಾಗೆ ಮಾಡೋಣ" ಎಂದು ಕಾಷ್ಠಕೂಟನು ಪ್ರತ್ಯುತ್ತರ ಕೊಟ್ಟನು. ಇಬ್ಬರೂ ಸೌದೆಯ ಹೊರೆಯನ್ನು ಮನೆಗೆ ತಂದ ನಂತರ ಕಾಷ್ಠಕೂಟನು ತನ್ನ ಹೆಂಡತಿಯೊಡನೆ "ಇವನಿಗೆ ನೀನು ಹೊಟ್ಟೆತುಂಬ ಉಣಬಡಿಸಿದೆಯಾ ?" ಎಂದು ಕೇಳಿದನು. ಅದಕ್ಕೆ ಆಕೆ–"ನಾನು ಕನಿಕರಪಟ್ಟು ಹಬ್ಬವೆಂದು ಅವನಿಗೆ ತೃಪ್ತಿಯಾಗುವಷ್ಟು ಉಣಬಡಿಸಿದೆನು" ಎಂದಳು. ಆಗ ಕಾಷ್ಠಕೂಟನು ಸಿಟ್ಟಾಗಿ, ಸಾಯುವಂತೆ ಬಡಿದು ತನ್ನ ಮನೆಯಿಂದ ಹೆಂಡತಿಯನ್ನು ಓಡಿಸಿಬಿಟ್ಟನು. ನಂದಿಮಿತ್ರನು ಜಯಘಂಟೆಯ ಬಳಿಗೆ ಹೋಗಿ–"ತಾಯೇ, ನಿನ್ನನ್ನು ಕಾಷ್ಠಕೂಟನು ಯಾಕೆ ಬಡಿದನು ?" ಎಂದು ಕೇಳಿದನು. "ನಿನ್ನೆ ನಿನಗೆ ತೃಪ್ತಿಯಾಗುವಷ್ಟು ಉಣಬಡಿಸಿದನೆಂದು ಕೋಪಗೊಂಡು ಅವನು ನನ್ನನ್ನು ಹೊಡೆದು ಓಡಿಸಿದನು"–ಎಂದು ಜಯಘಂಟೆ ನುಡಿದಳು. ಆಗ ನಂದಿಮಿತ್ರನು–"ಇಂತಹ ಪಂಚಮಹಾಪಾಪ ಮಾಡಿ

ದೊಡಿಂತಪ್ಪ ಪಂಚ ಮಹಾಪಾತಕನ ಮನೆಯೊಳ್ ಮಾರಿಯಿರ್ಕೆಂದು ಕಾಷ್ಠಕೂಟನಂ ಬಿಸುಟ್ಟು ಪೋಗಿ ಬೇಱೆ ತನಗೆ ಪುಳ್ಳಿಗಳಂ ದಿವಸಕ್ಕಂ ತಂದು ಮಾಱಿಲ್ ತಗುಳ್ದೊಡೆಂಟು ದಮ್ಮದ ಪುಳ್ಳಿಯಂ ತಂದೊಡವೊಂದು ಪಣಮನಪ್ಪೊಡಂ ಪೆಱದೆ ಬಸಿಱ್ಗಟ್ಟಿಗಮಂಬಲಿಗಮೆಣ್ಣೆಗಂ ಕೞಿಗಂ ಕೊಟ್ಟು ಪೋಕುಮಿಂತು ಬಾೞುತ್ತುಮಿರೆ ಮತ್ತೊಂದು ದಿವಸಂ ಪುಳ್ಳಿಗೆ ಪೋಗಿ ಪುಳ್ಳಿಯ ಪೊಱೆಯಂ ಪೊತ್ತು ಬರ್ಪೊನನ್ನೆಗಮೆಡೆಯೊಳ್ ಶಿವಗುಪ್ತಾಚಾರ್ಯರಷ್ಟಾಂಗ ನಿಮಿತ್ತಂಗಳಂ ಬಲ್ಲೋರಡವಿಗೆ ಪೋಗಿ ಸಿದ್ಧಾಂತಮಂ ಪರಿವಿಡಿಗೆಯ್ದಂದಿನ ದಿವಸಮಲ್ಲಿಯೆ ದೇವರಂ ವಂದಿಸಿ ಪಕ್ಷೋಪವಾಸದ ಪಾರಣೆಗೆಂದು ಪೊೞಲ್ಗೆ ಚರಿಗೆವುಗುತಂದೊಡೆ ನಂದಿಮಿತ್ರಂ ಕಂಡಾಶ್ಚರ್ಯಭೂತನಾಗಿ ನೀಡುಂ ನೋಡಿಯಿವರೆಲ್ಲಿಗೆ ಪೋದಪ್ಪರೋ ಎಂದು ಬೞಿವೞಿಯನೆವಂದು ಪೊಱಪೊೞಲ ಬಸದಿಯ ಪ್ರಾಕಾರದೊಳಗೆ ಪುಳ್ಳಿಯ ಪೊಱೆಯನಿಕ್ಕಿ ನೋೞ್ಪನನ್ನೆಗಮಿವರನೆಂದವರಂ ಬೞಿವೞಿಯನೆ ಬರ್ಪನ್ನೆಗಮಾ ದಿವಸಮರಸಂ ಶಿವಗುಪ್ತ ಭಟ್ಟಾರಕರ್ಗಂ ಪಾರಣೆಯಂ ಮಾಡುವೆಂ ಪೆಱರಾರುಂ ನಿಱಿಸಲ್ ಸಲ್ಲೆಂದು ಪೊೞಲೊಳಗೆಲ್ಲಂ ಗೋಸನೆಯಂ ತೊೞಲ್ಚಿದೊಡಂಜಿಯಾರುಂ ನಿಱಿಸುವರಿಲ್ಲದೆ ಭಟಾರರುಂ ಕಿಱುಮನೆ ಪೆರ್ಮನೆಯೆನ್ನದುಣಲ್ತಕ್ಕ ಮನೆ

ದವನ ಮನೆಯಲ್ಲಿ ಮಾರಿದೇವತೆ ನೆಲಸಲಿ !" ಎಂದು ಹೇಳಿ, ಕಾಷ್ಠಕೂಟನನ್ನು ಬಿಟ್ಟು ಹೋದನು. ತಾನು ಬೇರೆಯಾಗಿ ಪ್ರತಿದಿನವೂ ಸೌದೆಹೊರೆಗಳನ್ನು ತಂದು ಮಾರಲು ತೊಡಗಿದನು. ಎಂಟು ದಮ್ಮದ ಸೌದೆಯನ್ನು ತಂದರೂ ಚಿಕ್ಕನಾಣ್ಯವಾದ ಒಂದು ಹಣವೂ ಸಂಪಾದನೆಯಾಗದೆ, ಅದನ್ನು ಹೊಟ್ಟೆಯ ಅನ್ನಕ್ಕೂ ಅನ್ನದ ಗಂಜಿಗೂ ಎಣ್ಣೆಗೂ ಹುಳಿಗಂಜಿಗೂ ಕೊಟ್ಟು ಹೋಗುತ್ತಿದ್ದನು. ಹೀಗೆ ಅವನು ಜೀವನ ಸಾಗಿಸುತ್ತಿದ್ದನು. ನಂದಿಮಿತ್ರನು ಒಂದು ದಿನಸ ಸೌದೆಗೆ ಹೋಗಿ, ಸೌದೆಯ ಹೊರೆಯನ್ನು ಹೊತ್ತುಕೊಂಡು ಬರುತ್ತಿದ್ದನು. ಆಗ ದಾರಿಯಲ್ಲಿ ಲಕ್ಷಣ, ಅಂಗ, ಸ್ವರ, ವ್ಯಂಜನ, ಭೌಮ, ಅಂತರಿಕ್ಷ, ಸ್ವಪ್ನ, ಛಿನ್ನ–ಎಂಬ ಎಂಟು ಅಂಗಗಳುಳ್ಳ ಶಕುನ ಶಾಸ್ತ್ರವನ್ನು ಬಲ್ಲವರಾದ ಶಿವಗುಪ್ತಾಚಾರ್ಯರು ಕಾಡಿಗೆ ಹೋಗಿ ಶಾಸ್ತ್ರಸಿದ್ಧಾಂತವನ್ನು ಅನುಕ್ರಮವಾಗಿ ಹೇಳಿ ಆದಿನ ಅಲ್ಲಿಯೇ ದೇವರನ್ನು ವಂದಿಸಿ, ಎರಡುವಾರಗಳ ಉಪವಾಸ ಮಾಡಿ, ಆ ಉಪವಾಸ ಮುಗಿಸುವ ಊಟಕ್ಕೆಂದು ಪಟ್ಟಣಕ್ಕೆ ಭಿಕ್ಷೆಗಾಗಿ ಪ್ರವೇಶಿಸುತ್ತಿದ್ದರು. ಅವರನ್ನು ನಂದಿಮಿತ್ರನು ಕಂಡು ಆಶ್ಚರ್ಯಪಟ್ಟು, ಹೆಚ್ಚು ಹೊತ್ತು ನೋಡಿ "ಇವರು ಎಲ್ಲಿಗೆ ಹೋಗುತ್ತಾರೋ !" ಎಂದು ಹಿಂದಿನಿಂದಲೇ ಬಂದು ಪಟ್ಟಣದ ಹೊರಗಿನ ಬಸದಿಯ ದರೆಯ ಒಳಗೆ ಸೌದೆಹೊರೆಯನ್ನಿಟ್ಟು ನೋಡಿದನು. ಅವರ ಹಿಂದು ಹಿಂದಿನಿಂದಲೇ ಬಂದನು. ಆ ದಿವಸ ರಾಜನು ಶಿವಗುಪ್ತ ಋಷಿಗಳಿಗೆ ತಾನು ಪಾರಣೆಯ ಊಟ ಕೊಡುವೆನು, ಬೇರೆ ಯಾರೂ ಅವರನ್ನು ನಿಲ್ಲಿಸಕೂಡದೆಂದು ಪಟ್ಟಣದ ಹೊರಗೆಲ್ಲ ಡಂಗುರವನ್ನು ಸಾರಿಸಿದ್ದನು. ಇದರಿಂದ ಹೆದರಿ, ಯಾರೊಬ್ಬರೂ ನಿಲ್ಲಿಸುವವರಿಲ್ಲದೆ, ಋಷಿಗಳು ಚಿಕ್ಕಮನೆ ದೊಡ್ಡಮನೆ ಎನ್ನದೆ ಭೋಜನ ಮಾಡಲು ತಕ್ಕುದೆನಿಸಿದ

ಗಳಂ ಚರಿಗೆವುಗುತ್ತಂ ಬರ್ಪೊರರಮನೆಯಂ ಪೊಕ್ಕಾಗಳ್ ಕಂಡರಸನುಂ ಮಹಾದೇವಿಯುಂ ಸುವರ್ಣಪೂರ್ಣಕಳಶಮುಂ ಕನ್ನಡಿಯುಂ ಪೂವುಮಕ್ಕಿಯುಂ ಮಾದುಫಲಮುಂ ಮೊದಲಾಗೊಡೆಯನೇಕಾರ್ಚನೆಯಿಂದಿದಿರಂ ಬಂದು ನಿಱಿಸಿ ಬಲಗೊಂಡು ಬಂದು ಭಟಾರರ ಕಾಲಂ ಮಹಾದೇವಿ ನೀರ್ವೊಯ್ಯೆ ಅರಸಂ ತಾನೆ ಪ್ರಕ್ಷಾಳಿಸಿ ಬೞಿಕ್ಕೊಡ ವೋದ ಬೋೞದಲೆಯ ದೇಸಿಗನ ಕಾಲಂ ಬ್ರಹ್ಮಯ್ಯಾ ನೀಡಿಂ ನಿಮ್ಮ ಕಾಲಂ ತೊಳೆದಪೆಮೆಂದು ಮಹಾದೇವಿ ತಾನೆ ಕಾಲಂ ಕರ್ಚಿ ಭಟ್ಟಾರಕರ್ಗೆಱಗಿ ಕುಳ್ಳಿರಿಸಿ ಪಿರಿಯ ಪೊನ್ನ ತಳಿಗೆಯುಮುಚ್ಚಮಪ್ಪಡ್ಡವಣಿಗೆಯುಮನಿಟ್ಟು ಬ್ರಹ್ಮಚಾರಿಗಂ ಪೊನ್ನತಳಿಗೆಯುಮಡ್ಡಣಿಗೆಯುಮನಿಟ್ಟು ಭಟ್ಟಾರಕರ್ಗರಸಂ ತಾನೆ ಬಡ್ಡಿಸಲ್ತಗುಳ್ದ ಬೞಿಯಂ ರಾಜಾನ್ನದ ಕೂೞಂ ಪೆಸಱತೊವೆಯುಂ ಬೆಣ್ಣೆಗಾಸಿದಾಮೋದ ಸುಗಂಧ ಪರಿಮಳಂ ನಾರ್ಪ ತುಪ್ಪಮುಂ ಪಲವುಂ ತೆಱದ ಬಾಡುಗಳುಂ ತುಯ್ಯಲುಂ ಪೂರಿಗೆಯಿಡ್ಡಲಿಗೆ ಸೋದಿಗೆ ಲಾವಣಿಗೆ ಘೃತಪೂರಂ ಲಡ್ಡುಗೆ ಮಂಡಗೆ ಮೊದಲಾಗೊಡೆಯ ಪದಿನೆಂಟುಂ ತೆಱದ ಭಕ್ಷ್ಯರೂಪಂಗಳುಮಂ ನಾನಾಪ್ರಕಾರದ ಪಾನಂಗಳುಮಂ ಭಟ್ಟಾರರ್ಗೆ ಬಡ್ಡಿಸಿದಂತೆ ಬ್ರಹ್ಮಯ್ಯಂಗೆ ಮಹಾದೇವಿ ಬಡ್ಡಿಸಿದೊಡೆ ದೇಸಿಗಂ ಕಂಡು ಬೆಱಗಾಗಿ

ಮನೆಗಳನ್ನೆಲ್ಲಾ ಭಿಕ್ಷೆಗೆಂದು ಪ್ರವೇಶ ಮಾಡುತ್ತ ಬರುತ್ತಿದ್ದು ಅರಮನೆಯನ್ನು ಪ್ರವೇಶಿಸಿದರು. ಆಗ ರಾಜನು ಕಂಡು ಮಹಾರಾಣಿಯನ್ನೂ ಕೂಡಿಕೊಂಡು, ಚಿನ್ನದ ಪೂರ್ಣ ಕಲಶ, ಹೂವು, ಅಕ್ಕಿ, ಮಾವಿನಹಣ್ಣು–ಮುಂತಾದವುಗಳುಳ್ಳ ಅನೇಕ ವಿಧವಾದ ಅರ್ಚನೆಯ ವಸ್ತುಗಳಿಂದ ಎದುರುಗೊಂಡು ಅವರನ್ನು ನಿಲ್ಲಿಸಿ, ಪ್ರದಕ್ಷಿಣೆ ಬಂದನು. ಮಹಾರಾಣಿ ನೀರು ಹೊಯ್ಯುತ್ತಿರಲು ರಾಜನು ಸ್ವತಃ ಋಷಿಗಳ ಕಾಲನ್ನು ತೊಳೆದನು. ಆಮೇಲೆ ಒಟ್ಟಿಗೆ ಹೋದ ಬೋಳು ತಲೆಯ ಈ ದೇಶಿಕನನ್ನು (ದೇಶವನ್ನು ಅಲೆದಾಡುವವನ) ಕುರಿತು ರಾಣಿಯು "ಬ್ರಹ್ಮಯ್ಯಾ ನಿಮ್ಮ ಕಾಲು ತೊಳೆಯುವೆನು, ನೀಡಿರಿ" ಎಂದು ಆ ಮಹಾದೇವಿ ಅವನ ಕಾಲನ್ನು ತೊಳೆದಳು. ಋಷಿಗಳಿಗೆ ವಂದಿಸಿ ಕುಳ್ಳಿರಿಸಿದಳು. ದೊಡ್ಡದಾದ ಹೊಂದಟ್ಟೆಯನ್ನೂ ಎತ್ತರದ ಅಡ್ಡಣಿಗೆ (ತಟ್ಟೆಯಿಡಲು ಮೂರುಕಾಲಿನ ಮಣೆ)ಯನ್ನೂ ಇಟ್ಟಳು. ಬ್ರಹ್ಮಚಾರಿಗೂ ಚಿನ್ನದ ತಟ್ಟೆ–ಅಡ್ಡಣಿಗೆಗಳನ್ನಿಟ್ಟಳು. ಋಷಿಗಳಿಗೆ ರಾಜನು ಸ್ವತಃ ಉಣಬಡಿಸಲು ಪ್ರಾರಂಭಿಸಿದ ನಂತರ ಮಹಾರಾಣಿ ಬಡಿಸತೊಡಗಿದಳು. ರಾಜಾನ್ನ ಎಂಬ ಅಕ್ಕಿಯ ಅನ್ನ, ಹೆಸರುಬೇಳೆಯ ತೊವ್ವೆ, ಬೆಣ್ಣೆಯನ್ನು ಕಾಸಿ ಬಹಳ ವಿಶೇಷವಾಗಿ ಘಮಘಮಿಸುತ್ತಿರುವ ತುಪ್ಪ, ಹಲವು ರೀತಿಯ ಕಾಯಿಪಲ್ಲೆಯುಗಳು, ಪಾಯಸ, ಪೂರಿ, ಇಡ್ಡಲಿ, ಗೋಧಿರವೆಯ ಭಕ್ಷ್ಯ, ಉಪ್ಪಿನಕಾಯಿ. ತುಪ್ಪದ ಪೂರಿ, ಲಾಡು, ಮಂಡಿಗೆ–ಮುಂತಾಗಿ ಇರತಕ್ಕ ಹದಿನೆಂಟು ರೀತಿಯ ಭಕ್ಷ್ಯರೂಪಗಳನ್ನೂ ಹಲವಾರು ರೀತಿಯ ಪಾನೀಯಗಳನ್ನೂ ಮಹಾದೇವಿಯು ಋಷಿಗಳಿಗೆ ಬಡಿಸಿದಂತೆ ಬ್ರಹ್ಮಚಾರಿಗೂ ಬಡಿಸಿದಳು. ದೇಸಿಗನಾದ ನಂದಿಮಿತ್ರನು ಕಂಡು

ಪುಟ್ಟಿದಂದಿಂ ತೊಟ್ಟಿಂತಪ್ಪೂಣಸಂ ಕನಸಿನೊಳಪ್ಪೊಡಂ ಕಂಡಱಿಯದ ಮಗಂ ಚೋದ್ಯಂಬಟ್ಟಿಂ ದಪ್ಪೊಡಂ ತಣಿಯುಣಲ್ವಡೆದ ದೇಸಿಗಂ ನಾನಾಪ್ರಕಾರದುಣಿಸಂ ಸುಗಂಧಮಪ್ಪ ದಿವ್ಯಾಹಾರಮುಮಾಕಂಠಪ್ರಮಾಣಂ ಬರೆಗಂ ತಣಿಯುಂಡು ಬೞಿಕ್ಕೆ ಕರ್ಪೂರಸಮ್ಮಿಶ್ರಮಪ್ಪ ನೆಲವತ್ತಿಯುಮಡಕೆಯುಂ ಪೋೞ್ಗಳುಮಂ ಕೈತೀವಿದೆಲೆಯುಮಂ ಬ್ರಹ್ಮಯ್ಯಂಗೆ ಕೊಟ್ಟು ಭಟಾರರ್ ಚರಿಗೆ ಮಾಡಿದ ಬೞಿಕ್ಕರಸನುಮಂ ಮಹಾದೇವಿಯುಮಂ ಕರ್ಮಕ್ಷಯಮಕ್ಷಯದಾನಮುಮಕ್ಕೆಂದು ಪರಸಿ ಪೊಱಮಟ್ಟು ಬಸದಿಗೆ ಪೋಪಾಗಳ್ ಭಟ್ಟಾರರ ಬೞಿವೞಿಯನೆ ಪೋದಂ ಭಟ್ಟಾರರ್ ಬಸದಿಯಂ ಬಲಗೊಂಡು ಕಾಲಂ ಕರ್ಚಿಯೊಳಗಂ ಪೊಕ್ಕೀರ್ಯಾಪತ್ತಿಯಂ ಬಿಡಿಸಿ ಗೋಚಾರ ನಿಯಮಂಗೆಯ್ವುದಂ ನಂದಿಮಿತ್ರಂ ನೋಡುತ್ತಿರ್ದಿಂತೆಂದು ಮನದೊಳ್ ಬಗೆದಪ್ಪನಿಂತಪ್ಪ ರೂಪಮಂ ಕೈಕೊಂಡೊಡೆ ಲೋಕದೊಳ್ ಗೌರವಮುಂ ಪೂಜೆಯುಮಂ ಪೆಱಲಕ್ಕುಮೊಂದುಂ ಕ್ಲೇಶಮಿಲ್ಲದೆ ದಿವ್ಯಾಹಾರಮನೆಲ್ಲಾ ಕಾಲಮುಣಲ್ಪೆಱಲಕ್ಕುಮೆಂದು ಬಗೆದು ಭಟಾರರ್ ನಿಯಮಂಗೆಯ್ದು ಸಮೆದಿರ್ದ ಬೞಿಕ್ಕೆ ಬಂದು ಮುಂದೆ ನಿಂದು ಕೈಗಳಂ ಮುಗಿದಿಂತೆಂದನ್ ಭಟಾರಾ ಎನ್ನಂ ನಿಮ್ಮಂತೆ ಮಾಡಿಮೆಂದೊಡೆ ಭಟಾರರಾತನಂ ನೋಡಿಯಲ್ಪಾಯುಷ್ಯನುಮಾ

ಬೆರಗಾದನು. ಹುಟ್ಟಿದಂದಿನಿಂದ ಇಂಥದೊಂದು ಊಟವನ್ನು ಕನಸಿನಲ್ಲಿಯೂ ಕಂಡರಿಯದ ಮಗನೂ ಎಂದಿಗೂ ತೃಪ್ತಿಯಾಗುವಷ್ಟು ಊಟಮಾಡುವ ಯೋಗ್ಯತೆಯನ್ನೇ ಪಡೆಯದ ದೇಸಿಗನೂ ಆದ ನಂದಿಮಿತ್ರನು ಹಲವಾರು ವಿಧದ ಉಣಿಸನ್ನು-ಸುವಾಸನೆಯಿಂದ ಕೂಡಿದ ದಿವ್ಯವಾದ ಆಹಾರವನ್ನು ಕುತ್ತಿಗೆಯವರೆಗೂ ಪೂರ್ಣ ತೃಪ್ತಿಯಾಗುವ ತನಕವೂ ಉಂಡನು. ಆಮೇಲೆ ಕರ್ಪೂರದಿಂದ ಸರಿಯಾಗಿ ಬೆರಕೆಯಾದ ನೆಲನತ್ತಿಯ ಅಡಕೆಯ ಹೋಳುಗಳನ್ನೂ ಕೈತುಂಬ ವೀಳೆಯವನ್ನೂ ಬ್ರಹ್ಮಚಾರಿಗೆ ಕೊಟ್ಟರು. ಶಿವಗುಪ್ತಾಚಾರ್ಯರು ಭಿಕ್ಷೆ ಸ್ವೀಕರಿಸಿ (ಊಟ ಮಾಡಿ) ಆದನಂತರ ಅರಸನನ್ನೂ ಮಹಾರಾಣಿಯನ್ನೂ "ನಿಮ್ಮ ಕರ್ಮವು ಅಳಿಯಲಿ! ದಾನವು ಅಕ್ಷಯವಾಗಲಿ!" ಎಂದು ಆಶೀರ್ವದಿಸಿ ಹೊರಟು ಬಸದಿಗೆ ಹೋಗುವಾಗ ಅವರ ಹಿಂದಿನಿಂದಲೇ ಅವನೂ ಹೋದನು. ಋಷಿಗಳು ಬಸದಿಗೆ ಪ್ರದಕ್ಷಿಣೆ ಮಾಡಿ, ಕಾಲು ತೊಳೆದು ಒಳಹೊಕ್ಕು ಈರ್ಯಾಪತ್ತಿಯನ್ನು ಬಿಡಿಸಿ (ಹಿಂಸೆಯಾಗದಂತೆ ಸೂಕ್ಷ್ಮ ಜೀವಿಗಳನ್ನು ಪರಿಹರಿಸಿಕೊಂಡು), ಸಾಧುವಿನ ಭಿಕ್ಷಾಕ್ರಮದಂತೆ ಗೋಚಾರ ನಿಯಮವನ್ನು ಮಾಡಿದರು. ನಂದಿಮಿತ್ರನು ಇದನ್ನು ನೋಡುತ್ತಿದ್ದು ಮನಸ್ಸಿನಲ್ಲಿ ಹೀಗೆ ಭಾವಿಸಿದನು-"ಈ ರೀತಿಯ ರೂಪವನ್ನು ತಾಳಿದರೆ ಲೋಕದಲ್ಲಿ ಗೌರವವನ್ನೂ ಪೂಜೆಯನ್ನೂ ಪಡೆಯಬಹುದು. ಏನೊಂದೂ ಕಷ್ಟವಿಲ್ಲದೆ ದಿವ್ಯವಾದ ಆಹಾರವನ್ನು ಎಲ್ಲ ಕಾಲದಲ್ಲಿಯೂ ಉಣ್ಣಲು ಪಡೆಯಬಹುದು". ಹೀಗೆ ಯೋಚಿಸಿ, ಋಷಿಗಳು ತಮ್ಮ ನಿಯಮಗಳನ್ನು ಮಾಡಿ ಮುಗಿಸಿದ ನಂತರ ಅವರ ಹತ್ತಿರಕ್ಕೆ ಬಂದು ಮುಂದೆ ನಿಂತು ಕೈಗಳನ್ನು ಮುಗಿದು ಅವರೊಡನೆ "ಪೂಜ್ಯರೇ ನನ್ನನ್ನು ನಿಮ್ಮ ಹಾಗೆಯೇ ಮಾಡಿ" ಎಂದನು. ಭಟಾರರು ಅವನನ್ನು

ಸನ್ನ ಭವ್ಯನಪ್ಪುದನಱಿದೊಳ್ಳಿತಪ್ಪ ಮುಹೂರ್ತದೊಳ್ ತಪಂಬಡಿಸಿದೊಡಾತನುಂ ತಪಂಬಟ್ಟು ದೀಕ್ಷೋಪವಾಸಂ ಗೆಯ್ದಿರ್ದನ್ ಅನ್ನೆಗಮರಸನುಮರಸಿಯುಂ ಭಟ್ಟಾರರೊಡವಂದ ಬ್ರಹ್ಮಚಾರಿ ತಪಂಬಟ್ಟನೆಂಬುದಂ ಕೇಳ್ದೊಸೆದು ಮುನ್ನೆಮ್ಮ ಮನೆಯೊಳುಂಡು ತಪಂಬಟ್ಟನಿಂ ನಾಳೆ ನಮ್ಮ ಮನೆಯೊಳ್ ಪಾನಿಗಟ್ಟುವಮೆಂದು ಬಗೆದಿರ್ದು ಮಱುದಿವಸಂ ಸಾಮಂತ ಮಹಾಸಾಮಂತರ್ಕಳುಂ ರಾಜ್ಯಚಿಹ್ನಂಗಳುಂ ಬೆರಸು ಮಹಾವಿಭೂತಿಯಿಂದರಸಂ ಪೊೞ್ತಿಡಿನ ಬೇಗಂ ಬಸದಿಗೆ ವಂದು ವಾಹನದಿಂದಿೞಿದು ಬಲಗೊಂಡು ಬಂದು ಗಂಧಪುಷ್ಪ ದೀವ ಧೂಪಾಕ್ಷತೆಗಳಿಂ ದೇವರನರ್ಚಿಸಿ ಕ್ರಿಯಾಪೂರ್ವಕಂ ವಂದಿಸಿ ಭಟ್ಟಾರರ್ಗೆ ಗುರುಭಕ್ತಿಗೆಯ್ದು ಪಂಚಮುಷ್ಟಿಯಿಂ ವಂದಿಸಿಯುಂತೆ ಕಿತ್ತಯ್ಯಂಗಳುಮನಾ ಮಾರ್ಗದಿಂ ವಂದಿಸಿ ಭಟಾರರಲ್ಲಿಗೆ ವಂದು ಕುಳ್ಳಿರ್ದು ಧರ್ಮಮುಂ ಕೇಳ್ದು ತದನಂತರಮೆೞ್ದು ಭಟಾರಾ ಬಿನ್ನಪಂ ಕಿತ್ತಯ್ಯಂಗಳನಿಂದೆಮಗೆ ಕಾರುಣ್ಯಂ ಗೆಯ್ವುದಾವು ನಿಱಿಸಿ ಪಾನಿಗಟ್ಟಿ ಪುಣ್ಯಮುಂ ನೆರಪಿಕೊಳ್ವಮೆಂದೊಡಂತೆಗೆಯ್ವೆಮೆಂದಾನುಡಿಯುಂ ಕಿತ್ತಯ್ಯಂಗಳ್ ಕೇಳ್ದು ಸಾಮಂತ ಮಹಾಸಾಮಂತರ್ಗೆ ಸ್ವಾಮಿಯುಪ್ಪೀ ಪೃಥ್ವೀಶ್ವರಂ ಬಂದೆನ್ನುಮನರ್ಚಿಸಿ ಬಂದಿಸಿ ನೀಚವೃತ್ತಿಯಿಂ ಕಿಂಕುರ್ವಾಣಂ ಗೆಯ್ವುಪ್ಪನಹೋ ಆಶ್ಚರ್ಯಮೀ

ನೋಡಿ, ಅವನು ಸ್ವಲ್ಪಮಾತ್ರ ಆಯುಷ್ಯವುಳ್ಳವನೂ ಮೋಕ್ಷಕ್ಕೆ ಹೋಗುವ ಪುಣ್ಯಜೀವಿಯೂ ಆದುದರಿಂದ ಸುಮುಹೂರ್ತದಲ್ಲಿ ತಪಸ್ಸಿಗೆ ಉಪದೇಶಕೊಟ್ಟರು. ನಂದಿಮಿತ್ರನು ತಪಸ್ಸನ್ನು ಸ್ವೀಕರಿಸಿ ದೀಕ್ಷೆ-ಉಪವಾಸಗಳನ್ನು ಆಚರಿಸುತ್ತಿದ್ದನು. ಆ ವೇಳೆಗೆ ರಾಜನೂ ರಾಣಿಯೂ ಶಿವಗುಪ್ತ ಋಷಿಗಳೊಂದಿಗೆ ಬಂದ ಬ್ರಹ್ಮಚಾರಿ ತಪಸ್ಸನ್ನು ಆಚರಿಸಿದ್ದಾನೆ–ಎಂಬುದನ್ನು ಕೇಳಿ ಪ್ರೀತಿಪಟ್ಟು, ಹಿಂದೆ ನಮ್ಮ ಮನೆಯಲ್ಲಿ ಊಟಮಾಡಿ ತಪಸ್ಸು ಮಾಡಿದವನನ್ನು ನಾಳೆ ನಮ್ಮ ಮನೆಗೆ ಕರೆದು ಪಾದತೊಳೆದು ಊಟಹಾಕೋಣ –ಎಂದು ಬಗೆದರು. ಮರುದಿನ ರಾಜನು ಹೊತ್ತಾರೆಯ ಸಮಯದಲ್ಲಿ ಸಾಮಂತರು, ಮಹಾಸಾಮಂತರು, ರಾಜ್ಯ ಚಿಹ್ನೆಗಳು–ಇವನ್ನು ಕೂಡಿಕೊಂಡು ಬಹಳ ವೈಭವದಿಂದ ಬಸದಿಗೆ ಬಂದನು. ವಾಹನದಿಂದ ಕೆಳಗಿಳಿದು ಪ್ರದಕ್ಷಿಣೆ ಮಾಡಿ ಬಂದು ಗಂಧ, ಪುಷ್ಪ, ದೀಪ, ಧೂಪ, ಅಕ್ಷತೆಗಳಿಂದ ಜಿನದೇವರನ್ನು ಪೂಜಿಸಿ, ಕ್ರಿಯೆಗಳನ್ನು ಮಾಡಿ ನಮಸ್ಕರಿಸಿದರು. ಶಿವಗುಪ್ತಾಚಾರ್ಯರಿಗೆ ಗುರುಭಕ್ತಿಯನ್ನು ಸಲ್ಲಿಸಿ ಕೈಮುಗಿದು, ಹಾಗೆಯೇ ಚಿಕ್ಕಸ್ವಾಮಿಗಳನ್ನು (ನಂದಿಮಿತ್ರನನ್ನು) ಅದೇ ರೀತಿಯಾಗಿ ನಮಸ್ಕರಿಸಿದನು. ಆಮೇಲೆ ಋಷಿಗಳ ಬಳಿಗೆ ಬಂದು ಕುಳಿತು ಧರ್ಮೋಪದೇಶವನ್ನು ಕೇಳಿದನಂತರ ಎದ್ದು– "ಪೂಜ್ಯರೇ, ನನ್ನ ವಿಜ್ಞಾಪನೆಗಳು. ಚಿಕ್ಕಸ್ವಾಮಿಗಳನ್ನು ನಮಗೆ ಇಂದು ಕರುಣಿಸಬೇಕು. ನಾವು ಅವರನ್ನು ನಿಲ್ಲಿಸಿ ಕಾಲುತೊಳೆದು ಊಟಹಾಕಿ ಪುಣ್ಯವನ್ನು ಕೂಡಿಸುವೆವು" ಎಂದಾಗ, "ಹಾಗೆಯೇ ಮಾಡಿ" ಎಂದರು. ಆ ಮಾತನ್ನು ಚಿಕ್ಕಸ್ವಾಮಿಗಳು ಕೇಳಿ–"ಸಾಮಂತರಿಗೂ ಮಹಾ ಸಾಮಂತರಿಗೂ ಒಡೆಯನಾಗಿರುವ ಈ ಭೂಪನು ಬಂದು ನನ್ನನ್ನು ಕೂಡ ಪೂಜಿಸಿ ವಂದಿಸಿರುತ್ತಾನೆ. ಕೀಳು ವೃತ್ತಿಯಿಂದ ಸೇವೆಯನ್ನು

ತಪದ ಧರ್ಮದ ಫಲವಿಲ್ಲಿಯೆ ಪ್ರತ್ಯಕ್ಷವಾಯ್ತಿನ್ನುಂ ಮುಂದೆ ಪಿರಿದಾಗದೆ ಮಾಣದೆಂದು ತನ್ನೊಳೆ ತಱಿಸಂದು ಮತ್ತಮಾ ದಿವಸಮುಪವಾಸಮಂ ಕೈಕೊಂಡರ್ ಇತ್ತಲ್ ಜಯವರ್ಮ ಮಹಾರಾಜಂ ಭಟಾರರುಮಂ ಕಿತ್ತಯ್ಯಂಗಳುಮಂ ಬಂದಿಸಿದುದಂ ಭಟಾರರಱಿದೆ ಕಿತ್ತಯ್ಯಂಗಳ್ಗೆ ಏಷಣಾಸಮಿತಿ ಮೊದಲಾಗೊಡೆಯ ಬ್ರತಂಗಳಂ ಮತ್ತಂ ಸಂಕ್ಷೇಪದಿಂ ಪೇೞ್ದು ಕಿತ್ತಯ್ಯಂಗಳಿರಾ ನಿಮಗೆ ಶ್ರಮಮಾದಪ್ಪುದು ದೇವರಂ ಬಂದಿಸಿ ಚರಿಗೆಗೆ ಪೊಱಮಡುವುದೆನೆ ಮತ್ತಂ ತಾವು ಕೊಂಡು ಪವಾಸಮಂ ಗುರುಗಳ್ಗೆ ಪ್ರಕಟಿಸಿದನರಸಂ ಜಯವರ್ಮ ಮಹಾರಾಜಂ ಕೇಳ್ದು ಬಿನ್ನನೆ ಮೊಗಂ ಮಾಡಿ ಭಟಾರರುಮಂ ಕಿತ್ತಯ್ಯಂಗಳುಮಂ ಬಂದಿಸಿ ತನ್ನರಮನೆಗೆ ವೋಗಿ ಮಹಾದೇವಿಗೆಂದನಿಂದೆನಗೆ ರಿಸಿಯರಂನಿಱಿಸಿ ಪುಣ್ಯಂಗೊಳ್ವ ಭಾಗ್ಯಮಿಲ್ಲೆಂದೊಡೆ ಮಹಾದೇವಿಯಂತಪ್ಪೊಡೆ ನಾಳೆ ಯಾಂ ನಿಱಿಸಿ ಪುಣ್ಯಮಂ ಕೈಕೊಳ್ವೆನೆಂದೊಡರಸನೆಂದೊಂ ನಿನಗಮೆನಗಂ ಸಮಭಾಗಂ ಪುಣ್ಯಮೆಂದುಸಿರೆ ನೀಮೇಕೆನಗಿಂದು ಸಮಭಾಗಮೀಯದಾದಿರೀ ಪುಣ್ಯಮನಾನಿಂದಂನಿಱಿಸಿ ಕೈಕೊಳ್ವೆಂ ನೀಂ ನಾಳೆ ನಿಱಿಸೆಂದು ನುಡಿದು ಬಸದಿಗೆ ಪೋಗಿರೆನ್ನ ಭಾಗ್ಯಮೇಂ ಕಿಡಿಸುಗುಮೆ ನಾಳೆಯುಂ ನಿಱಿಸಿಯಾವಗಂ ಪುಣ್ಯಮಂ ಕೈಕೊಳ್ವೆನೆಂದರಸಂಗೆ ಮಱುಮಾತುಗೊಟ್ಟು ಮಱುದಿವಸಂ

ಮಾಡುತ್ತಾನೆ! ಆಹಾ, ಆಶ್ಚರ್ಯವೆ! ಈ ತಪೋಧರ್ಮದ ಫಲ ಇಲ್ಲಿಯೇ ಕಾಣುವಂತಾಯಿತು. ಇನ್ನೂ ಮುಂದೆ ಹೋದರೆ ಇದಕ್ಕಿಂತ ಹಿರಿದಾದ ಫಲ ಆಗದೆ ಇರದು" ಎಂದು ತನ್ನಲ್ಲಿಯೇ ನಿಶ್ಚಯ ಮಾಡಿಕೊಂಡು, ಆಮೇಲೆ ಆ ದಿವಸ ಉಪವಾಸವನ್ನು ಕೈಕೊಂಡರು. ಇತ್ತ ಜಯವರ್ಮ ಮಹಾರಾಜನು ಭಟಾರರನ್ನೂ ಚಿಕ್ಕಸ್ವಾಮಿಗಳನ್ನೂ ವಂದಿಸಿದ್ದನ್ನು ಭಟಾರರು ತಿಳಿದೇ ಚಿಕ್ಕಸ್ವಾಮಿಗಳಿಗೆ ಏಷಣಾ ಸಮಿತಿ ಮುಂತಾಗಿರತಕ್ಕ ವ್ರತಗಳನ್ನು ಆಮೇಲೆ ಸಂಕ್ಷೇಪದಿಂದ ತಿಳಿಸಿದರು. "ಚಿಕ್ಕಸ್ವಾಮಿಗಳೇ ನಿಮಗೆ ಶ್ರಮವಾಗುತ್ತದೆ, ದೇವರನ್ನು ವಂದಿಸಿ ಭಿಕ್ಷಾಟನೆಗೆ ಹೊರಡಿರಿ" ಎಂದರು. ಆಗ ತಾನು ಸ್ವೀಕರಿಸಿರುವ ಉಪವಾಸದ ಸಂಗತಿಯನ್ನು ಗುರುಗಳಿಗೆ ತಿಳಿಸಿದನು. ಜಯವರ್ಮ ಮಹಾರಾಜನು ಕೇಳಿ, ಮೌನಮುಖಮುದ್ರೆಯನ್ನು ತಾಳಿ ಋಷಿಗಳನ್ನೂ ಚಿಕ್ಕಸ್ವಾಮಿಗಳನ್ನೂ ವಂದಿಸಿ ತನ್ನ ಅರಮನೆಗೆ ತೆರಳಿದನು. ಅರಸನು ರಾಣಿಯೊಡನೆ – "ಇಂದು ನನಗೆ ಋಷಿಗಳನ್ನು ನಿಲ್ಲಿಸಿ ಪುಣ್ಯವನ್ನು ಪಡೆಯುವ ಯೋಗ್ಯತೆಯಿಲ್ಲ" ಎಂದು ಹೇಳಿದನು. ಆಗ ಮಹಾರಾಣಿ– "ಹಾಗಾದರೆ ನಾಳೆ ನಾನು ಅವರನ್ನು ಕರೆದು ನಿಲ್ಲಿಸಿ ಪುಣ್ಯವನ್ನು ಪಡೆಯುವೆನು" ಎಂದಳು. ಅದಕ್ಕೆ ರಾಜನು– "ನಿನಗೂ ನನಗೂ ಪುಣ್ಯವು ಸಮಪಾಲು" ಎಂದು ಹೇಳಲು ಆಕೆ ಹೀಗೆಂದಳು– "ನೀವು ಇಂದು ನನಗೆ ಯಾಕೆ ಸಂಪಾಲನ್ನು ಕೊಡಲಿಲ್ಲ? ಈ ಪುಣ್ಯವನ್ನು ನಾನು ಮರಿಸ್ವಾಮಿಗಳನ್ನು ಮನೆಗೆ ಕರೆದು ನಿಲ್ಲಿಸಿ ಪಡೆಯುತ್ತೇನೆ. ನೀನು ನಾಳೆ ನಿಲ್ಲಿಸು ಎಂದು ಹೇಳಿ ಬಸದಿಗೆ ಹೋದಿರಿ. ಇದರಿಂದ ನನ್ನ ಭಾಗ್ಯ ಕೆಟ್ಟುಹೋಗುವುದೆ? ನಾಳೆ ನಾನೇ ಅವರನ್ನು ನಿಲ್ಲಿಸಿ ಪುಣ್ಯವನ್ನು ಪಡೆಯುವೆನು." ಹೀಗೆಂದು ರಾಣಿ ಪ್ರತ್ಯುತ್ತರಕೊಟ್ಟು ಮಾರನೆಯ

ಧಾರಿಣಿ ಮಹಾದೇವಿಯುಮಯ್ನೂರ್ವರರಸಿಯರ್ಕಳುಂ ಪೆಂಡವಾಸದಗ್ಗಳದ ಸೂಳೆಯರ್ಕಳುಂಬೆರಸು ವೇಸರಿಗೞ್ತೆಗಳುಂ ಪಿಡಿಗಳುಂ ಸಿವಿಗೆಗಳುಮನೇಱಿ ಸೀಗುರಿಗಳುಮಂ ಕೊಡೆಗಳುಮಂ ಪಿಡಿಯಿಸಿ ಎಕ್ಕಮದ್ದಳೆಯ ಕೊೞಲ ಝುಂಕಾರದ ಪಱೆಗಳ್ ಮುಂದೆ ಬಾಜಿಸುತ್ತಂ ಬೞಿಯಂ ಕಾಪಿನವರ್ವರೆ ಮುಂದಣ ಮಾನಸರಂ ಪಡಿಯಱರ್ ತೊಲಗಿಸುತ್ತುಂ ಬರೆ ವಿದ್ಯಾಧರಿಯರ್ಕಳ್ ಬರ್ಪಂತೆ ಬಂದು ಬಾಗಿಲ್ವಾಡದ ಪೊಱಗಣ ದೆಸೆಯೊಳ್ ತಂತಮ್ಮ ವಾಹನಂಗಳಿಂದಿೞಿದು ಪೊಕ್ಕು ಬಸದಿಯಂ ಬಲಗೊಂಡು ಬಂದೊಳಗಂ ಪೊಕ್ಕು ದರ್ಶನವಂದನೆಗಳುಮಂ ಪೇೞ್ದೀರ್ಯಾಪಥಿಯುಂ ಬಿಡಿಸಿ ಗಂಧ ಪುಷ್ಪ ದೀಪ ಧೂಪಾಕ್ಷತಂಗಳಿಂ ದೇವರನರ್ಚಿಸಿ ಕ್ರಿಯಾಪೂರ್ವಕಂ ದೇವರಂ ಬಂದಿಸಿ ಶಿವಗುಪ್ತ ಭಟಾರರುಮನರ್ಚಿಸಿ ಗುರುಭಕ್ತಿಗೆಯ್ದು ಬಂದಿಸಿ ಶ್ರಾವಕವ್ರತಂಗಳನೇಱಿಸಿಕೊಂಡು ಬೞಿಕಿಂತೆಂದಳ್ ಭಟಾರಾ ಇಂದೆಮ್ಮಲ್ಲಿಗೆ ನೀಮುಂ ಕಿತ್ತಯ್ಯಂಗಳನೊಡಗೊಂಡು ಬಂದು ಪಕ್ಕದಿರ್ದು ಪಾಸಿಗಟ್ಟಿ ಮಾರ್ಗಮಂ ತೋಱಿ ಮಗುೞೆ ಬಿಜಯಂಗೆಯ್ಯಮೆನೆ ಕಿತ್ತಯ್ಯಂಗಳಂ ನೀಮೆ ಬೆಸಗೊಳ್ಳಿಮವರೊಡಂಬಟ್ಟೊಡಾಮೊಡಗೊಂಡು

ದಿನ ಧಾರಿಣಿ ಮಹಾದೇವಿ ಚಿಕ್ಕಸ್ವಾಮಿಗಳನ್ನು ಕರೆಯಲು ಹೊರಟಳು. ಐನೂರು ಮಂದಿ ಅರಸಿಯರೂ ರಾಣೀವಾಸದಲ್ಲಿದ್ದ ಶ್ರೇಷ್ಠರಾದ ದಾಸಿಯರೂ ಅವಳ ಒಡನಿದ್ದರು. ಅವರು ಹೇಸರಕತ್ತೆಗಳನ್ನೂ ಹೆಣ್ಣಾನೆಗಳನ್ನೂ ಪಲ್ಲಕ್ಕಿಗಳನ್ನೂ ಏರಿದ್ದರು. ಚಾಮರಗಳನ್ನೂ ಛತ್ರಗಳನ್ನೂ ಹಿಡಿಸಿಕೊಂಡು, ಮುಂಗಡೆಯಲ್ಲಿ ಎಕ್ಕಮದ್ದಳೆ ಕೊಳಲು ಝುಂಕಾರವನ್ನು ಕೊಡುವ ಚರ್ಮವಾದ್ಯಗಳನ್ನು ಬಾರಿಸುತ್ತಿರಲು ಹಿಂದಿನಿಂದ ಅಂಗರಕ್ಷಕರು ಬರುತ್ತಿರಲು, ಮುಂದುಗಡೆ ಅಡ್ಡವಾಗಿ ಬರುತ್ತಿದ್ದವರನ್ನು ಪ್ರತೀಹಾರರು ತೊಲಗಿಸುತ್ತ ಬರಲು ವಿದ್ಯಾಧರಿಯರು ಬರುವ ರೀತಿಯಲ್ಲಿ ಅವರೆಲ್ಲರೂ ಬಂದರು. ಪಟ್ಟಣದ ಗೋಪುರದ ಹೊರಗಡೆಯಲ್ಲಿ ಅವರು ತಮ್ಮ ತಮ್ಮ ವಾಹನಗಳಿಂದ ಇಳಿದು ಹೊಕ್ಕರು. ಬಸದಿಗೆ ಪ್ರದಕ್ಷಿಣೆಮಾಡಿ ಬಂದು ಒಳಗೆ ಹೋಗಿ ದರ್ಶನ ವಂದನೆಗಳನ್ನು ಹೇಳಿ ದಾರಿಯನ್ನು ಸೂಕ್ಷ್ಮಜಂತುಗಳಿಲ್ಲದಂತೆ ಗುಡಿಸಿ ಗಂಧ ಪುಷ್ಪದೀಪ ಧೂಪ ಅಕ್ಷತೆಗಳಿಂದ ಜಿನ ದೇವರನ್ನು ಪೂಜಿಸಿ ಕ್ರಿಯೆಗಳ ಮೂಲಕ ದೇವರಿಗೆ ವಂದಿಸಿದರು ಶಿವಗುಪ್ತಾಚಾರ್ಯರನ್ನೂ ಪೂಜಿಸಿ ಗುರುಭಕ್ತಿಯನ್ನು ತೋರಿಸಿ ನಮಸ್ಕರಿಸಿ ಶ್ರಾವಕ ವ್ರತಗಳನ್ನೂ ಸ್ವೀಕರಿಸಿಕೊಂಡು ಮಹಾರಾಣಿ ಅವರೊಡನೆ—"ಪೂಜ್ಯರೇ, ಈ ದಿವಸ ನೀವು ಚಿಕ್ಕಸ್ವಾಮಿಗಳೊಂದಿಗೆ ನಮ್ಮಲ್ಲಿಗೆ ಬಂದು ಒಟ್ಟಿಗೆ ಇದ್ದು ನಮ್ಮ ಉಪಚಾರವನ್ನು ಸ್ವೀಕರಿಸಿ ಮಾರ್ಗದರ್ಶನವನ್ನು ಮಾಡಿ ಆಮೇಲೆ ಹಿಂದೆರಳಬಹುದು" ಎಂದು ಹೇಳಿದಳು. ಅದಕ್ಕೆ ಅವರು "ಚಿಕ್ಕಸ್ವಾಮಿಗಳನ್ನು ನೀವೇ ಕೇಳಿಕೊಳ್ಳಿ. ಅವರು ಒಪ್ಪಿದರೆ ನಾವು ಕೂಡಿಕೊಂಡು ಬರೆವೆವು" ಎಂದರು. ಧಾರಿಣಿದೇವಿ ಚಿಕ್ಕಸ್ವಾಮಿಗಳ ಬಳಿಗೆ ಹೋದಳು ಅವರನ್ನು ಪಾದಮುಟ್ಟಿ ವಂದಿಸಿದಳು. "ಚಿಕ್ಕಸ್ವಾಮಿಗಳೇ, ನಿಮಗೆ ಇಂದು ನಾವು

ಬರ್ಪೆವೆಂದೊಡೆ ಧಾರಿಣಿ ಮಹಾದೇವಿ ಕಿತ್ತಯ್ಯಂಗಳಲ್ಲಿಗೆ ಪೋಗಿ ಕಾಲಂ ಪಿಡಿದು ವಂದಿಸಿ ಇಂತೆಂದಳ್ ಕಿತ್ತಯ್ಯಾ ನಿಮಗಿಂದು ನಾವ್ ಪಾನಿಗಟ್ಟುವೆವೆಮ್ಮ ಮನೆಗೆಟ್ಟರವೇಟ್ಪುದೆಂದು ಕಾಲಂ ಪಿಡಿದು ಪೊಡೆವಟ್ಟಿರ್ದಾಗಳರಸಿಯ ಮೊಗಮಂ ನೋಡಿ ನೆಱೆಯುತ್ತೊಟ್ಟುಟ್ಟು ಪಸದನಂಗೊಂಡಿರ್ದ ದೇವಗಣಿಕೆಯರನೆ ಪೋಲ್ವಯ್ನೂರ್ವರರಸಿಯರ್ಕಳಿಂದಂ ಸೂಳೆಯರ್ಕಳಿಂದಂ ಪರಿವೇಷ್ಟಿತೆಯಾಗಿರ್ದ ಶಚೀ ಮಹಾದೇವಿಯನೆ ಪೋಲ್ವ ಧಾರಿಣಿ ಮಹಾದೇವಿಯೆನ್ನ ಕಾಲ್ಗೆಱಗಿ ಪೊಡೆವಟ್ಟಿರ್ದಳಿದೆಲ್ಲಮೀ ತಪದ ಫಲಮಿನ್ನುಂ ಮುಂದೆ ಪಿರಿದುಂಟೆಂದು ಬಗೆದರಸಿಗೆಂದರಬ್ಬಾ ಇಂದೆಮಗುಣಲ್ಕೆ ಬಗೆಯಿಲ್ಲುಪವಾಸಂ ಗೆಯ್ದಪ್ಪೆವೆಂದು ಪರಿಚ್ಛೇದಿಸಿ ನುಡಿದೊಡೆ ಬಿನ್ನನೆ ಮೊಗಂ ಮಾಡಿ ಭಟಾರರಂ ವಂದಿಸಿ ಪೋಗಿಯರಸಂಗೆ ಕಿತ್ತಯ್ಯಗಳಿಂದು ಪವಾಸಂಗೆಯ್ದೊರೆಂದು ಪೇಟ್ದಾಗಳ್ ಮತ್ತಿರುಳಿನ ಕರಣವೇಳೆಯೊಳ್ ವಜ್ರಸೇನನೆಂಬ ಮಂತ್ರಿಯರಸಂಗಿಂತೆಂದು ಬಿನ್ನಪಂ ಗೆಯ್ದಂ ದೇವಾ ನಾಳೆಯಾಂ ನಿಱಿಸಿ ಕಿತ್ತಯಂಗಳ್ಗೆ ಪಾರಣೆಯುಂ ಮಾಡುವೆನೆನೆ ಅಂತೆಗೆಯ್ಯೆಂದೊಡೆ ಮಱುದಿವಸಂ ಬಸದಿಗೆ ವಂದು ಭಟ್ಟಾರಾ ಕಿತ್ತಯ್ಯಂಗಳ ನಮ್ಮಲ್ಲಿಗೊಡಗೊಂಡು ಬಂದು ಚರಿಗೆದೋಱಿ ನೀವುಂ ಬಿಜಯಂಗೆ

ಭೋಜನ ಮಾಡಿಸಬೇಕೆಂದಿದ್ದೇವೆ. ನಮ್ಮ ಮನೆಗೆ ನೀವು ಬರಬೇಕು" ಎಂದು ಕಾಲು ಹಿಡಿದು ಸಾಷ್ಟಾಂಗ ವಂದನೆ ಮಾಡಿದಳು. ಆಗ ಚಿಕ್ಕಸ್ವಾಮಿಗಳು ಅವಳ ಮುಖವನ್ನು ನೋಡಿದರು. "ಅತ್ಯಂತ ವಿಶೇಷವಾಗಿ ಉಡಿಗೆ ತೊಡಿಗೆಗಳನ್ನು ಧರಿಸಿ ಶೃಂಗಾರ ಮಾಡಿಕೊಂಡಿರುವ ದೇವತಾಸ್ತ್ರೀಯರನ್ನು ಹೋಲುವಂತಹ ಐನೂರು ಮಂದಿ ರಾಣಿಯರಿಂದಲೂ ದಾಸಿಯರಿಂದಲೂ ಈಕೆ ಸುತ್ತುವರಿಯಲ್ಪಟ್ಟಿದ್ದಾಳೆ. ಇಂದ್ರನ ಪತ್ನಿಯಾದ ಶಚೀದೇವಿಯನ್ನೇ ಹೋಲುತ್ತಿದ್ದಾಳೆ. ಅಂತಹ ಧಾರಿಣಿ ಮಹಾದೇವಿ ನನ್ನ ಕಾಲಿಗೆ ಎರಗಿ ಸಾಷ್ಟಾಂಗ ವಂದನೆಯನ್ನು ಮಾಡಿದ್ದಾಳೆ. ಇದೆಲ್ಲವು ಈ ತಪಸ್ಸಿನ ಫಲವಾಗಿದೆ. ಇನ್ನೂ ಮುಂದೆ ಇದಕ್ಕಿಂತ ಹೆಚ್ಚಿನ ಫಲ ಕಾಣಲಿಕ್ಕಿದೆ"–ಎಂದು ಭಾವಿಸಿಕೊಂಡರು. ರಾಣಿಯೊಡನೆ–"ಅಮ್ಮಾ ಈ ದಿವಸ ನಮಗೆ ಊಟ ಮಾಡಲು ಮನಸ್ಸಿಲ್ಲ ; ಉಪವಾಸ ಮಾಡುತ್ತೇವೆ" ಎಂದು ನಿಶ್ಚಯವಾಗಿ ಹೇಳಿದರು. ಆಗ ರಾಣಿಯು ಮಾತಿಲ್ಲದ ಮೋರೆ ಮಾಡಿಕೊಂಡು ಋಷಿಗಳಿಗೆ ವಂದಿಸಿ, ತೆರಳಿದಳು. ರಾಜನೊಡನೆ, ಚಿಕ್ಕಸ್ವಾಮಿಗಳು ಈ ದಿವಸ ಉಪವಾಸ ಕೈಕೊಂಡಿದ್ದಾರೆ ಎಂದು ಹೇಳಿದಳು. ಅನಂತರ ರಾತ್ರಿಯ ಕರಣದ ಹೊತ್ತಿನಲ್ಲಿ (ಸುಮಾರು ಐದೂವರೆಗಳಿಗೆ) ವಜ್ರಸೇನನೆಂಬ ಮಂತ್ರಿಯು ರಾಜನಿಗೆ ಈ ರೀತಿಯಾಗಿ ವಿಜ್ಞಾಪನೆ ಮಾಡಿದನು–"ದೇವಾ, ನಾಳೆ ನಾನು ಚಿಕ್ಕಸ್ವಾಮಿಗಳನ್ನು ಕರೆದು ನಿಲ್ಲಿಸಿ, ಭೋಜನ ಮಾಡಿಸುವೆನು". ಹೀಗೆ ನುಡಿದಾಗ "ಹಾಗೆಯೇ ಮಾಡು" ಎಂದು ಅರಸನು ಹೇಳಿದನು. ಮರುದಿವಸ ಮಂತ್ರಿ ಬಸದಿಗೆ ಹೋಗಿ ಶಿವಗುಪ್ತಚಾರ್ಯರೊಡನೆ–"ಪೂಜ್ಯರೇ ಚಿಕ್ಕಸ್ವಾಮಿಗಳನ್ನು ಕೂಡಿಕೊಂಡು ನೀವು ನಮ್ಮಲ್ಲಿಗೆ ಬಂದು ಭಿಕ್ಷೆಮಾಡಿಸಿ ನೀವು ದಯಮಾಡಿಸಿ" ಎಂದು ಹೇಳಿದನು. ಅದಕ್ಕೆ ಋಷಿಗಳು–"ಚಿಕ್ಕಸ್ವಾಮಿಗಳು ಬಹಳ

ಯ್ಯುಮನೆ ಕಿತ್ತಯ್ಯಂಗಳೊಡಂಬಟ್ಟೊಡೊಡಗೊಂಡು ಬರ್ಪೆಮವರನೊಡಂಬಡಿಸಿಮೆಂದೊಡೆ ಕಿತ್ತ
ಯ್ಯಂಗಳಲ್ಲಿಗೆ ಪೋಗಿ ಕಿತ್ತಯ್ಯಾ ಇಂದೆಮ್ಮ ಮನೆಯೊಳ್ ಪಾರಿಸಲ್ವೇಳ್ಕುಮೆಂದು ಕಾಲಂ
ಪಿಡಿದು ಪೊಡೆವಟ್ಟಿರ್ದೊನಂ ನೋಡಿ 'ರಾಜೋ ವಾ ಮರ್ತ್ಯೋ ವಾ' ಎಂದು ಸಾಮಂತ
ಮಹಾಸಾಮಂತರ್ಕಳಿಂ ಪರಿವೇಷ್ಟಿತನಾಗಿರ್ದ ಮಂತ್ರಿಯೆನಗೆ ಪೊಡೆಮಟ್ಟನಿವೆಲ್ಲಂ ತಪದ
ಮಹಾತ್ಮ್ಯಮಿನ್ನುಂ ಮುಂದೆ ಪಿರಿದುಂಟೆಂದು ಬಗೆದಿಂತೆಂದರಾಮಿಂದುಪವಾಸಂಗೆಯ್ದಿಮೆಂದೊ
ಡಾತನೆನಗೆ ಪುಣ್ಯಮಿಲ್ಲಾಗದೆ ಎಂದು ನುಡಿದು ಭಟ್ಟಾರರಂ ವಂದಿಸಿ ಪೋದಂ ಮತ್ತಮಿರುಳಿನ
ಕರಣವೇಳೆಯೊಳರ್ಹದ್ದಾಸನೆಂಬೊಂ ರಾಜಶ್ರೇಷ್ಠಿಯರಸಂಗೆ ಬಿನ್ನಪಂಗೆಯ್ದಂ ನಾಳೆಯಾಂ ಕಿತ್ತ
ಯ್ಯಂಗಳ್ಗೆ ಪಾರಣೆಯುಂ ಮಾಡುವೆನೆಂದೊಡರಸನಂತೆ ಗೆಯ್ಯಿಮೆಂದೊಡಾತನುಂ ಬಸದಿಗೆ ಪೋಗಿ
ಭಟ್ಟಾರರಂ ವಂದಿಸಿ ಕಿತ್ತಯ್ಯಗಳುಮಂ ವಂದಿಸಿ ಗುರುಗಳನುಮತದಿಂದೆಮ್ಮ ಮನೆಗೆ ಚರಿಗೆ
ವರಲ್ವೇಳ್ಕುಮೆಂದು ನುಡಿದೊಡುಪವಾಸಂ ಗೆಯ್ದೆನೆಂದೊಡಾತನುಂ ಭಟ್ಟಾರರಂ ವಂದಿಸಿಪೋದಂ
ಇತ್ತ ನಂದಿಮಿತ್ರ ಕಿತ್ತಯ್ಯಂಗಳ್ಗೆ ಶ್ರಮಮಂ ಭಟ್ಟಾರರರಿದು ಕಿತ್ತಯ್ಯಾ ಪಂಚನಮಸ್ಕಾರಮಂ
ಮಾಣದಿರುಳುಂ ಪಗಲುಂ ಪೋದುತ್ತಮಿರಿಮೆಂದು ಕಲ್ಪಿಸಿದೊಡವರುಮಿರುಳುಂ ಪಗಲುಂ ಪೋದು

ಒಪ್ಪುವುದಾದರೆ ಒಟ್ಟಿಗೆ ಕರೆದುಕೊಂಡು ಬರುತ್ತೇವೆ. ಅವರು ಒಪ್ಪುವಂತೆ ನೀವೇ ಮಾಡ
ಬೇಕು" ಎಂದರು. ಮಂತ್ರಿಯು ಚಿಕ್ಕಸ್ವಾಮಿಗಳ ಬಳಿಗೆ ಹೋಗಿ–"ಚಿಕ್ಕಸ್ವಾಮಿಗಳೇ,
ಇಂದು ನಮ್ಮ ಮನೆಯಲ್ಲಿ ನೀವು ಪಾರಣೆ ಮಾಡಬೇಕು" ಎಂದು ಕಾಲು ಹಿಡಿದು
ಸಾಷ್ಟಾಂಗ ವಂದನೆ ಮಾಡಿದನು. ಅವನನ್ನು ಚಿಕ್ಕಸ್ವಾಮಿಗಳು ನೋಡಿ ತಮ್ಮ ಮನಸ್ಸಿನಲ್ಲಿ
ಹೀಗೆ ಯೋಚಿಸಿದರು. "ರಾಜನೋ ರಾಜನ ಜನವೋ! ಎಂಬ ಹಾಗೆ ಸಾಮಂತರಿಂದಲೂ
ಮಹಾಸಾಮಂತರಿಂದಲೂ ಸುತ್ತುವರಿದಿರುವ ಮಂತ್ರಿ ಬಂದು ನನಗೆ ನಮಸ್ಕರಿಸಿದ್ದಾನೆ.
ಇವೆಲ್ಲವೂ ನನ್ನ ತಪಸ್ಸಿನ ಮಹಾತ್ಮ್ಯೆ! ಇನ್ನು ಮುಂದೆ ಇದಕ್ಕಿಂತಲೂ ಹೆಚ್ಚಿನದು ಉಂಟು"
ಈ ರೀತಿ ಭಾವಿಸಿ ಮಂತ್ರಿಯೊಡನೆ–"ನಾವು ಈ ದಿವಸ ಉಪವಾಸ ಮಾಡಿರುತ್ತೇವೆ".
ಎನ್ನಲು ಆತನು "ನನಗೆ ಪುಣ್ಯವಿಲ್ಲದಾಯಿತೆ !" ಎಂದು ಹೇಳಿಕೊಂಡು ಋಷಿಗಳನ್ನು
ವಂದಿಸಿ ತೆರಳಿದನು. ಅನಂತರದ ರಾತ್ರಿಯ ಕರಣದ ವೇಳೆಯಲ್ಲಿ ಅರ್ಹದ್ದಾಸನೆಂಬ ರಾಜ
ಶ್ರೇಷ್ಠಿ ಅರಸನಿಗೆ–"ನಾಳೆ ನಾನು ಚಿಕ್ಕಸ್ವಾಮಿಗಳಿಗೆ ಪಾರಣೆಯನ್ನು ಏರ್ಪಡಿಸುವೆನು"
ಎಂದು ವಿಜ್ಞಾಪನೆ ಮಾಡಿದನು. ರಾಜನು "ಹಾಗೆಯೇ ಮಾಡು" ಎನ್ನಲು ಆತನು
ಬಸದಿಗೆ ಹೋಗಿ ಶಿವಗುಪ್ತ ಋಷಿಗಳನ್ನು ವಂದಿಸಿದನು. ಚಿಕ್ಕಸ್ವಾಮಿಗಳನ್ನೂ ವಂದಿಸಿ–
"ನೀವು ಗುರುಗಳ ಒಪ್ಪಿಗೆಯಿಂದ ನಮ್ಮ ಮನೆಗೆ ಭಿಕ್ಷಕ್ಕೆ ಬರಬೇಕು" ಎಂದನು. ಆಗ
'ನಾನು ಉಪವಾಸದಲ್ಲಿದ್ದೇನೆ, ಎಂದು ಹೇಳಲು, ಅರ್ಹದ್ದಾಸಸೆಟ್ಟಿಯು ಋಷಿಗಳಿಗೆ
ವಂದಿಸಿ ಹೋದನು. ಇತ್ತ ನಂದಿಮಿತ್ರ ಚಿಕ್ಕಸ್ವಾಮಿಗಳಿಗೆ ಆದ ಶ್ರಮವನ್ನು ಋಷಿಗಳು
ತಿಳಿದು-"ಚಿಕ್ಕಸ್ವಾಮಿಗಳೇ, ನೀವು ಪಂಚನಮಸ್ಕಾರಗಳನ್ನು ಬಿಡದೆ ಇರುಳೂ ಹಗಲೂ
ಹೇಳುತ್ತಾ ಇರಿ" ಎಂದು ತಿಳಿಸಿದರು. ಅವರು ಅವರಂತೆ ಇರುಳೂ ಹಗಲೂ ಅದನ್ನು

ತ್ತಿರೆ ಮತ್ತಿತ್ತ ಇರುಳಿನೋಲಗದೊಳ್ ನೆರೆದಿರ್ದ ನೆರವಿಯೊಳರಸನುಂ ಮಹಾದೇವಿಯುಂ ತಪಮುಂ ಗುಣಮುಮಂ ಪೊಗಟುತ್ತೆ ತಪಂಬಟ್ಟ ದಿವಸದಿಂ ತಗುಳ್ದಿಂದಿಗಯ್ದು ದಿವಸಮುಣ್ಬದಿಲ್ಲ ಕುಡಿವುದಿಲ್ಲುಪವಾಸಂಗೆಯ್ದಿರ್ದರಾವೆನಿತು ಕೇಱಿ ನುಡಿದೊಡಂ ಚರಿಗೆಮಾಡಲೊಲ್ಲರಿನ್ನವು ಸಾಹಸಮುಂ ಸತ್ವವುಮಾರ್ಗಮೊಳವೆ ಎಂದರಸನುಮರಸಿಯುಂ ಪೊಗಟ್ವುದಂ ಕೇಳ್ದು ಯುವರಾಜನೆರ್ದು ಬಿನ್ನಪಂಗೆಯ್ದು ದೇವಾ ಕಿತ್ತಯ್ಯಂಗಳ್ಗೆ ನಾಳೆಯಾಂ ಪಾರಣೆಯಂ ಮಾಡಿಸುವೆನೆಂದೊಡರಸನಂತೆಗೆಯ್ಯೆಂದೊಡೆ ಮಱುದಿವಸಂ ಯುವರಾಜಂ ಮಹಾವಿಭೂತಿವೆರಸು ಬಸದಿಗೆವೋಗಿ ದೇವರಂ ಭಟ್ಟಾರರುಮನರ್ಚಿಸಿ ಬಂದಿಸಿ ಭಟಾರಾ ಕಿತ್ತಯ್ಯಂಗಳಿಂದೆಮ್ಮ ಮನೆಯೊಳ್ ಪಾರಿಸುವಂತಿರೆ ಬೆಸಸಿಮೆನೆ ಕಿತ್ತಯ್ಯಂಗಳನೊಡಂಬಡಿಸಿ ನಿಱಿಸಿಮೆನೆ ಕಿತ್ತಯ್ಯಂಗಳ ಕಾಲಂ ಪಿಡಿದು ಪೊಡೆವಟ್ಟು ಕಿತ್ತಯ್ಯಾ ಎಮ್ಮ ಮನೆಯೊಳಿಂದು ನೀಮುಂ ಪಾರಿಸಲ್ವೇಟ್ಬುದೆಂದೊಡೆ ಕಿತ್ತಯ್ಯಂಗಳಾತನ ಶ್ರೀಯುಂ ವಿಭೂತಿಯುಂ ತೇಜಮುಮಂ ಕಂಡು ಇಂತಪ್ಪ ಕ್ಷತ್ರಿಯ ಪುತ್ರಾದಿಗಳೆಲ್ಲಮೆನಗೆಱಗಿಪೊಡೆವಟ್ಟು ಕಿಂಕುರ್ವಾಣಂಗೆಯ್ದಪ್ಪರುಣ್ಬುದರ್ಕೇನಿಗಳ್ ಸಂಕಟಮೀ ತಪದ ಫಲಮಿನ್ನುಂ ಮುಂದೆ ಪಿರಿದುಂಟೆಂದು ಬಗೆದಿಂದುಪವಾಸಂಗೆಯ್ದಪೆಂದು ಮಱು

ಹೇಳುತ್ತಾ ಇದ್ದರು. ಆ ಮೇಲೆ ಇತ್ತ ರಾಜನೂ ರಾಣಿಯೂ ರಾತ್ರಿಯ ಸಭೆಯಲ್ಲಿ ಸೇರಿದ್ದ ಸಮುದಾಯದ ಮುಂದೆ ಚಿಕ್ಕಸ್ವಾಮಿಗಳ ತಪಸ್ಸನ್ನೂ ಗುಣವನ್ನೂ ಹೊಗಳುತ್ತಿದ್ದರು. "ಅವರು ತಪಸ್ಸನ್ನು ಆಚರಿಸಿದ ದಿನದಿಂದ ಪ್ರಾರಂಭವಾಗಿ ಇಂದಿನ ತನಕ ಐದು ದಿವಸವೂ ಉಣ್ಣದೆ, ಕುಡಿಯದೆ ಉಪವಾಸ ಮಾಡಿದ್ದಾರೆ. ನಾವು ಎಷ್ಟು ಒತ್ತಾಯ ಮಾಡಿ ಹೇಳಿದರೂ ಭಿಕ್ಷೆ ಸ್ವೀಕರಿಸಲು ಒಪ್ಪಲಿಲ್ಲ. ಇಂತಹ ಸಾಹಸವೂ ಸತ್ವವೂ ಯಾರಿಗಾದರೂ ಇದೆಯೆ ?" ಎಂದು ಅರಸನೂ ಅರಸಿಯೂ ಹೊಗಳುವುದನ್ನು ಯುವರಾಜನು ಕೇಳಿ ಎದ್ದು ವಿಜ್ಞಾಪನೆ ಮಾಡಿದನು. "ಪಿತೃದೇವನೇ ಚಿಕ್ಕಸ್ವಾಮಿಗಳಿಗೆ ನಾನು ನಾಳೆ ಪಾರಣೆ ಮಾಡಿಸುವೆನು" ಎಂದು ಹೇಳಿದನು. "ಹಾಗೆಯೇ ಮಾಡು" ಎಂದು ರಾಜನು ಹೇಳಲು, ಮಾರನೆಯ ದಿನ ಯುವರಾಜನು ಬಹಳ ವೈಭವದಿಂದ ಕೂಡಿ ಬಸದಿಗೆ ಹೋದನು. ಅಲ್ಲಿ ಜಿನದೇವರನ್ನೂ ಋಷಿಗಳನ್ನೂ ವಂದಿಸಿ–"ಸ್ವಾಮಿ, ಚಿಕ್ಕಸ್ವಾಮಿಗಳು ಈ ದಿನಸ ನಮ್ಮ ಮನೆಯಲ್ಲಿ ಪಾರಣೆ ಮಾಡುವಂತೆ ಅಪ್ಪಣೆ ಮಾಡಿ" ಎಂದನು. ಋಷಿಗಳು ಆಗ "ಚಿಕ್ಕಸ್ವಾಮಿಗಳನ್ನು ಒಪ್ಪುವಂತೆ ಮಾಡಿಕೊಂಡು ಹೋಗಿ ನಿಲ್ಲಿಸಿ" ಎಂದರು. ಯುವರಾಜನು ಚಿಕ್ಕಸ್ವಾಮಿಗಳ ಕಾಲನ್ನು ಹಿಡಿದು ಸಾಷ್ಟಾಂಗ ವಂದಿಸಿ "ಚಿಕ್ಕಸ್ವಾಮಿಗಳೇ, ನಮ್ಮ ಮನೆಯಲ್ಲಿ ಇಂದು ನೀವು ಪಾರಣೆ ಮಾಡಬೇಕು" ಎಂದನು. ಚಿಕ್ಕಸ್ವಾಮಿಗಳು ಅವನ ಐಶ್ವರ್ಯ ವೈಭವ ತೇಜಸ್ಸುಗಳನ್ನು ಕಂಡು– "ಇಂತಹ ರಾಜಕುಮಾರ ಮುಂತಾದವರು ನನಗೆ ವಂದಿಸಿ ಅಡ್ಡಬಿದ್ದು ಸೇವೆ ಮಾಡುತ್ತಾರೆ. ಊಟ ಮಾಡುವುದಕ್ಕೆ ಈಗ ಸಂಕಷ್ಟವೇನಿದೆ? ಈ ತಪಸ್ಸಿನ ಫಲ ಮುಂದೆ ಇನ್ನೂ ಹೆಚ್ಚಾಗ ಲಿಕ್ಕಿದೆ" ಎಂದು ಭಾವಿಸಿದನು "ಈ ದಿವಸ ನಾವು ಉಪವಾಸ ಮಾಡಿರುತ್ತೇವೆ"

ಮಾತುಗೊಟ್ಟೊಡೆ ವಿರಾಗನಾಗಿ ಯುವರಾಜಂ ಭಟಾರರಂ ವಂದಿಸಿ ಪೋದನಿಂತಾಱು ದಿವಸಂ ಪೋದ ಬೞಿಕ್ಕೇೞನೆಯ ದಿವಸದಂದು ನೇಸಱ್ ಮೂಡಿದೊಡೆ ಭಟಾರರಲ್ಲಿಗೆ ನಂದಿಮಿತ್ರಂ ವಂದು ಬಂದಿಸಿ ಇಂತೆಂದಂ ಭಟಾರಾ ಇನಿತುಕಾಲಮುಂಡುದು ಸಾಲ್ಗುಮೆನಗೆ ಯಾವಜ್ಜೀವಂ ಬಾೞ್ವನ್ನೆಗಮುಪವಾಸ ಪಚ್ಚಕ್ಖಾಣಂ ಗುಡುವುದೆಂದೊಡೆ ಭಟಾರರೆಂದರ್ ನೀಮುಂ ಮಹಾಪುರುಷರಿರ್ ನಿಮ್ಮನ್ನರ್ ಧೈರ್ಯವಂತರುಂ ಸತ್ವವಂತರುಮಾರುಮಿಲ್ಲಂ ಇನಿತುಕಾಲಂ ತಪಂಗೆಯ್ಯೆಪ್ಪೆಮಗಪ್ಪೊಡಮಿನಿತು ಧೈರ್ಯಮುಂ ಸತ್ವಮುಮಿಲ್ಲೆಂದು ಗುರುಗಳ್ ಪೊಗೞ್ದೊಡೆ ಗುರುಗಳ ಪೊಗೞ್ತೆಗೆ ರಾಗಿಸಿ ಸಂತೋಷಂಬಟ್ಟಿರ್ದೊಡೆ ಭಟಾರರೆಂದರ್ ನಿಮಗಿಂದಿನ ದಿವಸದ ನಿತೆಯಾಯುಷ್ಯಮೆಂದು ಪೇೞ್ದುಂ ಜಾವಜ್ಜೀವಂ ಚತುರ್ವಿಧಮಪ್ಪಾಹಾರಕ್ಕಂ ಶರೀರಕ್ಕಂ ನಿವೃತ್ತಿಗೆಯ್ಯೆಂದು ಪಚ್ಚಕ್ಖಾಣಂಗೊಟ್ಟು ಬಸದಿಯೊಳೊಂದು ಕೋಣೆಯೊಳ್ ಎಡೆಯೊಳ್ ನೀವೊಂದು ಕೆಲದೊಳ್ ಮಗುೞದೆ ತಳರದೆ ಕೈಯುಂ ಕಾಲ್ಗಳುಮನುಡುಗದೆ ನೀಡದೆ ಬಾೞ್ವನ್ನೆಗಂ ಪಟ್ಟಿರ್ದು ಪಂಚನಮಸ್ಕಾರಮಂ ಮನದೊಳೋದುತ್ತಿರಿಮೆಂದು ಕಲ್ಪಿಸಿ ಪಟ್ಟಿರಿಸಿ ಆರಾಧನೆಯುಮರ್ಚಿಸಿ ಭಟ್ಟಾರರಾಧನೆಯುಂ ವಕ್ಖಾಣಿಸುವುದಂ ಕೇಳುತ್ತಿರ್ದಂ ಮತ್ತಿತ್ತ ಕಿತ್ತಯ್ಯಂಗಳ್

ಎಂದು ಪ್ರತ್ಯುತ್ತರ ಕೊಟ್ಟರು. ಯುವರಾಜನು ಬೇಸರಗೊಂಡು ಋಷಿಗಳಿಗೆ ವಂದಿಸಿ ಹೋದನು. ಈ ರೀತಿಯಾಗಿ ಆರು ದಿನಸಗಳು ಕಳೆದ ನಂತರ ಏಳನೆಯ ದಿವಸ ಸೂರ್ಯೋದಯದ ವೇಳೆಗೆ ನಂದಿಮಿತ್ರನು ಋಷಿಗಳ ಬಳಿಗೆ ಬಂದು ವಂದಿಸಿ ಹೀಗೆ ಹೇಳಿದನು— "ಪೂಜ್ಯರೇ, ಇಷ್ಟು ಕಾಲ ಊಟ ಮಾಡಿದ್ದು ಸಾಕು. ನನಗೆ ಪ್ರಾಣವಿರುವವರೆಗೆ ಬದುಕುವ ತನಕ ಉಪವಾಸವಿರಲು ಉಪದೇಶ ಕೊಡಿ" ಎಂದು ಹೇಳಲು, ಋಷಿಗಳು "ನೀವು ಮಹಾಪುರುಷರಾಗಿದ್ದೀರಿ. ನಿಮ್ಮಂತೆ ಧೈರ್ಯಶಾಲಿಗಳೂ ಸತ್ವವಂತರೂ ಯಾರೂ ಇಲ್ಲ. ಇಷ್ಟು ಕಾಲವೂ ತಪಸ್ಸು ಮಾಡುತ್ತಿರುವ ನಮಗಾದರೂ ಕೂಡ ಇಷ್ಟು ಧೈರ್ಯವೂ ಇಲ್ಲ" ಎಂದು ಶಿಷ್ಯನನ್ನು ಹೊಗಳಿದರು. ಗುರುಗಳ ಹೊಗಳಿಕೆಗೆ ನಂದಿಮಿತ್ರನು ಪ್ರೀತಿಗೊಂಡು ಸಂತೋಷಪಟ್ಟು ಇರಲು, ಋಷಿಗಳು ಅವನಿಗೆ ಹೀಗೆಂದರು– "ನಿಮಗೆ ಇಂದಿನ ದಿವಸದ ವರೆಗೆ ಮಾತ್ರವೇ ಆಯುಷ್ಯ. ಜೀವವಿರುವ ತನಕವೂ ನಾಲ್ಕು ವಿಧವಾದ ಆಹಾರಕ್ಕೂ ದೇಹಕ್ಕೂ ಪರಿಹಾರ ಮಾಡಿ" ಎಂದು ಉಪದೇಶಕೊಟ್ಟರು. "ಈ ಬಸದಿಯ ಒಂದು ಮೂಲೆಯಲ್ಲಿ ಈ ಸ್ಥಳದಲ್ಲಿ ಬದಿಯಲ್ಲಿದ್ದು ಮಗುಚಿಕೊಳ್ಳದೆ, ಅಲುಗಾಡದೆ, ಕೈಕಾಲುಗಳನ್ನು ಮುದುಡಿಸಿಕೊಳ್ಳದೆ ಬದುಕಿರುವವರೆಗೂ ಮಲಗಿರಬೇಕು. ಮನಸ್ಸಿನಲ್ಲಿ ಅರ್ಹಂತರು, ಸಿದ್ಧರು, ಆಚಾರ್ಯರು, ಉಪಾಧ್ಯಾಯರು, ಸಾಧುಗಳು ಎಂಬ ಪಂಚಪರಮೇಷ್ಠಿಗಳಿಗೆ ಪಂಚ ನಮಸ್ಕಾರಗಳನ್ನು ಮನಸ್ಸಿನಲ್ಲೇ ಹೇಳುತ್ತಿರಬೇಕು" ಎಂದು ಹೇಳಿಕೊಟ್ಟು ಮಲಗಿಸಿ ಆರಾಧನೆ ಮಾಡಿ, ಋಷಿಗಳು ಆರಾಧನೆಯನ್ನು ವ್ಯಾಖ್ಯಾನಿಸುವುದನ್ನು ಕೇಳುತ್ತಿದ್ದನು. ಇತ್ತ ಚಿಕ್ಕಸ್ವಾಮಿಗಳು ವೈರಾಗ್ಯ ಸ್ವೀಕರಿಸಿದರೆಂಬ

ಸಂನ್ಯಸನಂಗೆಯ್ಗುರೆಂಬಾ ಮಾತನರಸನಾದಿಯಾಗಿ ಪೊೞಲ ಜನಂಗಳೆಲ್ಲಂ ಕೇಳ್ದು ಪಿರಿದುಂ ಸಂಭ್ರಮ ಮಾಗಿಯರಸನುಂ ಮಹಾದೇವಿಯುಂ ಮಂತ್ರಿಯುಂ ರಾಜಶ್ರೇಷ್ಠಿಯುಂ ಯುವರಾಜಂ ಮೊದಲಾಗಿ ಪೊೞಲ ಜನಮೆಲ್ಲಮಿರ್ಪೊತ್ತುಮರ್ಚನೆಯುಂ ಕೊಂಡುಬಂದರ್ಚಿಸಿ ಕಿಱಿದು ಬೇಗಮಿರ್ದಾರಾಧನೆಯುಂ ವಕ್ಕಾಣಿಸುವುದಂ ಕೇಳ್ದು ಮಿಥ್ಯಾದೃಷ್ಟಿಗಳಪ್ಪವರ್ ಶ್ರಾವಕವ್ರತಂಗಳಂ ಕೈಕೊಂಡರ್ ಶ್ರಾವಕರುಂ ದೃಢಸಮ್ಯಗ್ ದೃಷ್ಟಿಗಳಾಗಿ ಬಂದಿಸಿ ಪೋದರ್ ಇತ್ತ ನೇಸಱ್ ಪಟ್ಟೊಡೆ ಕಿತ್ತಯ್ಯಂಗಳ್ಗಾಸನ್ನಕಾಲಮಾದುದೆಂಬುದಂ ಭಟಾರರಱಿದಿಂತೆಂದರ್ ಕಿತ್ತಯ್ಯಾ ನಿಮಗೀಗಳ್ ಪ್ರಾಣಂಪೋಗಲ್ ಬಗೆದಪ್ಪುದು ದೇವರಂ ಧ್ಯಾನಿಸುವುದು ಪಂಚನಮಸ್ಕಾರಮನೋದುತ್ತಮುಚ್ಚಾರಿಸುವುದಂ ಕೇಳುತ್ತಮಿರಿಮೆಂದು ಕಲ್ಪಿಸಿ ಭಟಾರರ್ ಪಂಚನಮಸ್ಕಾರಮಂ ಪಿರಿದು ಬೇಗಂ ಪೇೞೆ ಪ್ರಾಯೋಪಗಮನದಿನೆಂತಂತೆ ಶುಭಪರಿಣಾಮದಿಂ ಸಮ್ಯಗ್‌ದರ್ಶನ ಜ್ಞಾನಚಾರಿತ್ರಂಗಳಂ ಸಾಧಿಸಿ ಮುಡಿಪಿ ಸೌಧರ್ಮ ಕಲ್ಪದೊಳೆರಡು ಸಾಗರೋಪಮಾಯುಷ್ಯಮನೊಡೆಯೊಂ ಕನಕಧ್ವಜನೆಂಬೊಂ ದೇವನಾಗಿ ಪುಟ್ಟಿಯುವಧಿಜ್ಞಾನದಿಂ ತನ್ನ ಭವಮನಱಿದೀ ಶರೀರದಿಂದಮಿಂತಪ್ಪ ದಿವ್ಯ ಶರೀರಮುಂ ದೇವಲೋಕದೊಳಪ್ಪ ಸುಖಮೈಶ್ವರ್ಯಮುಮಾದುದೆಂದು ಮೂಱುಕೋಟಿ ಪರಿವಾರ ದೇವರ್ಕಳುಂ ಮೂಱುಲಕ್ಕೆ ದೇವಿಯರಪ್ಪರಸಿಯರ್ಕಳುಂ ಗಣಿಕೆಯರ್ಕಳುಂ ಬೆರಸು ಸುರತ್ನ

ಮಾತನ್ನು ಅರಸನೇ ಮೊದಲಾಗಿ ಪಟ್ಟಣಿಗರೆಲ್ಲ ಕೇಳಿ ಬಹಳ ಸಂಭ್ರಮಗೊಂಡರು. ಅರಸ, ಅರಸಿ, ಮಂತ್ರಿ, ರಾಜಶ್ರೇಷ್ಠಿ, ಯುವರಾಜ ಮುಂತಾದ ಪಟ್ಟಣಿಗರೆಲ್ಲರೂ ಎರಡೂ ಹೊತ್ತೂ ಪೂಜಾ ದ್ರವ್ಯಗಳನ್ನು ತೆಗೆದುಕೊಂಡು ಬಂದು ಪೂಜಿಸಿ ಸ್ವಲ್ಪ ಹೊತ್ತಿನ ವರೆಗೆ ಇದ್ದು ಆರಾಧನೆಯನ್ನು ವ್ಯಾಖ್ಯಾನಿಸುವುದನ್ನು ಕೇಳಿದ ಮಿಥ್ಯಾ ದೃಷ್ಟಿಯುಳ್ಳವರಾದ ಜನರು ಶ್ರಾವಕವ್ರತಗಳನ್ನು ಸ್ವೀಕರಿಸಿದರು. ಶ್ರಾವಕರಾದವರು ಅಲುಗಾಡದಿರುವ ಸಮ್ಯಕ್ ದೃಷ್ಟಿಯುಳ್ಳವರಾಗಿ ವಂದಿಸಿ ತೆರಳಿದರು. ಇತ್ತ ಸೂರ್ಯಾಸ್ತಮಾನವಾಗಲು, ಚಿಕ್ಕಸ್ವಾಮಿಗೆ ಮರಣದ ಹೊತ್ತು ಬಂತೆಂಬುದನ್ನು ಋಷಿಗಳು ತಿಳಿದು ಹೀಗೆಂದರು– “ಚಿಕ್ಕಸ್ವಾಮಿಗಳೇ ನಿಮಗೆ ಈಗ ಪ್ರಾಣವು ಹೋಗಲು ಯೋಚಿಸುತ್ತಿದೆ. ದೇವರನ್ನು ಧ್ಯಾನಿಸಿರಿ ಪಂಚನಮಸ್ಕಾರವನ್ನು ಓದುತ್ತ ಉಚ್ಚಾರಣೆ ಮಾಡುವುದನ್ನು ಕೇಳುತ್ತಾ ಇರಿ” ಎಂದು ಕಲಿಸಿಕೊಟ್ಟು, ಋಷಿಗಳು ಪಂಚನಮಸ್ಕಾರದ ಮಂತ್ರವನ್ನು ಬಹಳ ಬೇಗನೆ ಹೇಳಿದರು. ಆಗ ನಂದಿಮಿತ್ರನು ಪ್ರಾಣಾಂತ ಉಪವಾಸವ್ರತದಿಂದ ಹೇಗೋ ಹಾಗೆ ಶುಭವಾದ ಪರಿಣಾಮದಿಂದ ಸಮ್ಯಗ್‌ದರ್ಶನ–ಜ್ಞಾನ–ಚಾರಿತ್ರಗಳೆಂಬ ರತ್ನತ್ರಯವನ್ನು ಪಡೆದು, ಸತ್ತು, ಸೌಧರ್ಮ ಎಂಬ ಸ್ವರ್ಗದಲ್ಲಿ ಎರಡು ಸಾಗರದಷ್ಟು ಆಯುಷ್ಯವುಳ್ಳ ಕನಕಧ್ವಜನೆಂಬ ದೇವನಾಗಿ ಹುಟ್ಟಿದರು. ಅವನು ಅವಧಿಜ್ಞಾನದಿಂದ ತನ್ನ ಜನ್ಮವಿಚಾರವನ್ನು ತಿಳಿದು, “ಈ ಶರೀರದಿಂದ ಇಂತಹ ದಿವ್ಯವಾದ ಶರೀರವೂ ದೇವಲೋಕದಲ್ಲಿ ಆಗತಕ್ಕ ಸುಖೈಶ್ವರ್ಯಗಳೂ ಆದುವು” ಎಂದುಕೊಂಡು, ಮೂರು ಕೋಟಿ ಪರಿವಾರ ದೇವತೆಗಳನ್ನೂ ಮೂರು ಲಕ್ಷ ದೇವಾಂಗನೆಯರಾದ ರಾಣಿಯ

ಮಯಮಪ್ಪ ದಿವ್ಯವಿಮಾನಮುಮಂ ಘಂಟಾಜಾಳ ಮುಕ್ತಾಜಾಳ ಹೇಮಜಾಳಂಗಳಿಂದೊಪ್ಪುವ ವಿಮಾನಮನೇಱಿ ಮಹಾ ವಿಭೂತಿಯಿಂ ತಗುಳ್ದುರಗಾಮರಂಬೆರಸು ಪಾಡುತ್ತಂ ಬರ್ಪನ್ನೆಗಮಿತ್ತ ವೈದಿಶಮೆಂಬ ಪೊೞಲೊಳ್ ನಂದಿಮಿತ್ರ ಕಿತ್ತಯ್ಯಂಗಳ್ ಮುಡಿಪಿದರೆಂಬುದಂ ಕೇಳ್ದರಸನುಂ ಮಹಾದೇವಿಯುಂ ಮಂತ್ರಿಯುಂ ಪೆರ್ಗಡೆಯುಂ ಮೊದಲಾಗಿ ಪೊೞಲೊಳಗುಳ್ಳ ಜನಮೆಲ್ಲಮರ್ಚನೆಗಳಂ ಕೊಂಡು ಬಂದರಸಂ ತಾಂ ಪಕ್ಕದಿರ್ದು ಕ್ಷಪಣಕನನುಯ್ವ ವಿಮಾನಮುಮಂ ಮತ್ತಂ ಶೋಭೆಗೆಂದು ಪಲವು ವಿಮಾನಂಗಳುಮನೊಳ್ಳಿದುವಾಗಿ ಮಾಡಿಸಿ ಪಲವುಂ ನೇತ್ರದ ಪಟ್ಟವುಲ್ಲವಂಗಳ್ ಧ್ವಜ ಪತಾಕೆಗಳುಮನೆತ್ತಿಸಿ ಚಾತುರ್ವರ್ಣ ಶ್ರವಣ ಸಂಘ ಸಹಿತಂ ಪಟು ಪಟಹ ತುಣವ ಭಂಭಾ ಮರ್ದಳೆ ಝಲ್ಲರಿ ಮುಕುಂದ ತಾಳ ಕಾಹಳ ಶಂಖ ವಂಶ ವೀಣಾಸ್ವರಂಗಳೆಸೆಯೆ ಕವಿವರರುಂ ಪೆಂಡವಾಸದೊಳ್ವೆಂಡಿರ್ಕಳುಂ ವಿಮಾನಂಗಳ ಮುಂದಾಡುತ್ತಂ ದಮ್ಮಮುಮಂ ಪೊನ್ನುಮಂ ಕೇಳಿಮಾಡಿ ಮುಂದೆ ಸೂಸುತ್ತಮೊಯ್ವುದಂ ಕನಕಧ್ವಜನೆಂಬ ದೇವಂ ಕಂಡೆನ್ನ ದೇಹಕ್ಕಿವರೆಲ್ಲಮಿನಿವಿರಿದರ್ಚನೆಯುಮಂ ಪೂಜೆಯುಮಂ ವಿಭವಮುಂ

ರನ್ನೂ ದಾಸಿಯರನ್ನೂ ಕೂಡಿಕೊಂಡು ಒಳ್ಳೆಯ ರತ್ನಗಳಿಂದ ಕೂಡಿದ ಮತ್ತು ಘಂಟೆ, ಮುತ್ತು, ಚಿನ್ನಗಳ ಸಮೂಹದಿಂದ ಮೆರೆಯುವ, ದಿವ್ಯವಾದ ವಿಮಾನವನ್ನೇರಿ ಮಹಾ ವೈಭವದಿಂದ ಅನುಸರಿಸಿ ಬರುತ್ತಿದ್ದ ಉರಗ ಲೋಕದವರೂ ದೇವಲೋಕದವರೂ ಸೇರಿಕೊಂಡಿದ್ದು, ಹಾಡುತ್ತ ಬರುತ್ತಿದ್ದನು. ಆ ವೇಳೆಗೆ ಇತ್ತ ವೈದಿಶವೆಂಬ ಪಟ್ಟಣದಲ್ಲಿ ನಂದಿಮಿತ್ರ ಚಿಕ್ಕಸ್ವಾಮಿಗಳು ಸತ್ತು ಹೋದರೆಂಬುದನ್ನು ಕೇಳಿ ರಾಜನೂ ಮಹಾರಾಣಿಯೂ ಮಂತ್ರಿಯೂ ಹೆಗ್ಗಡೆ (ಅರಮನೆಯ ಅಧಿಕಾರಿ)ಯೂ ಮುಂತಾದ ಪಟ್ಟಣದಲ್ಲಿದ್ದ ಜನರೆಲ್ಲರೂ ಪೂಜಾವಸ್ತುಗಳನ್ನು ತೆಗೆದುಕೊಂಡು ಬಂದರು. ಅರಸನು ತಾನು ಪಕ್ಕದಲ್ಲೇ ಇದ್ದು ಜೈನಸನ್ಯಾಸಿಯನ್ನು ಒಯ್ಯುತ್ತಿದ್ದ ಮಂಟಪವನ್ನಲ್ಲದೆ ಮತ್ತೂ ಹೆಚ್ಚಿನ ಶೋಭೆಗಾಗಿ ಹಲವು ಮಂಟಪಗಳನ್ನು ಒಳ್ಳೆಯ ರೀತಿಯವಾಗಿ ಮಾಡಿಸಿದನು. ಹಲವು ಬಗೆಯ ನೇತ್ರವೆಂಬ ರೇಷ್ಮೆವಸ್ತ್ರದ ಮೇಲ್ಕಟ್ಟುಗಳನ್ನೂ ಧ್ವಜಪತಾಕೆಗಳನ್ನೂ ಎತ್ತಿಸಿದನು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣದವರು ಜೈನ ಸನ್ಯಾಸಿಗಳ ವೃಂದ ಸಮೇತವಾಗಿದ್ದರು. ಸಮರ್ಥವಾದ ತಮಟೆ, ತುಣವ ಭಂಭಾ (ಭೇರಿ), ಮದ್ದಳೆ, ಝಲ್ಲರಿ (ವಲಯಾಕಾರದ ವಾದ್ಯ), ಮುಕುಂದ (ಒಂದು ಬಗೆಯ ಮದ್ದಳೆ), ತಾಳ, ಕಾಹಳೆ (ತುತೂರಿ), ಶಂಖ, ಕೊಳಲು, ವೀಣೆ–ಇವುಗಳ ನಾದ ಶೋಭಿಸುತ್ತಿತ್ತು. ಕವಿ ಶ್ರೇಷ್ಠರೂ ರಾಣೀ ವಾಸದ ಒಳ್ಳೆಯ ಹೆಂಡಿರೂ ಆ ಮಂಟಪಗಳ ಮುಂದೆ ಆಡುತ್ತ ದಮ್ಮ ಎಂಬ ನಾಣ್ಯಗಳನ್ನೂ ಹೊನ್ನುಗಳನ್ನೂ ಆಟದಂತೆ ಮುಂದೆ ಚೆಲ್ಲುತ್ತಿದ್ದರು. ನಂದಿಮಿತ್ರನ ಶವವನ್ನು ಈ ರೀತಿಯಾಗಿ ಒಯ್ಯುವುದನ್ನು ಕನಕಧ್ವಜನೆಂಬ ದೇವನು ಕಂಡನು. “ನನ್ನ ಹಿಂದಿನ ಮೃತದೇಹಕ್ಕೆ ಇವರೆಲ್ಲ ಇಷ್ಟೊಂದು ಹಿರಿದಾದ ಅರ್ಚನೆಯನ್ನೂ ಪೂಜೆಯನ್ನೂ ವೈಭವ

ಪ್ರಭಾವನೆಯುಮಂ ಮಾಡಿದಪ್ಪರೆಂದೊಡಾನೆನ್ನ ದೇಪಕ್ಕೆ ಮಾಡದಿರ್ಪೆನೆಯೆಂದು ಪಲವು ವಿಮಾನಂಗಳಂ ವಿಗುರ್ವಿಸಿ ಕ್ಷಪಣಕನ ವಿಮಾನದ ಮುಂದೆ ಬಳಸಿಯುಂ ಪೋಪಂತು ಮಾಡಿ ಯಾಕಾಶಮೆಲ್ಲಮಂ ವಿಮಾನಮಯಮಾಗೆ ವಿಗುರ್ವಿಸಿ ದೇವಲೋಕದ ಪಱೆಗಳಂ ಬಾಜಿಸುತ್ತಂ ನಮೇರು ಮಂದಾರ ಸಂತಾನಕ ಪಾರಿಜಾತಂಗಳೆಂಬ ಪೂಗಳಂ ಸುರಿಯುತ್ತಂ ದೇವರ್ಕಳ ದೇವಿಯರ್ಕಳ್ ಸಹಿತಂ ಕ್ಷಪಣಕನ ವಿಮಾನದ ಮುಂದೆ ಇಂತೆಂದು ಪೇೞ್ದಾಡಿದಂ :



ಗಾಹೆ ॥ ಪೆಚ್ಛಹ ಪೆಚ್ಛಹ ಓದಣ ಮುಂಡಂ
ಅಚ್ಛರ ಮಜ್ಝಗಯಂ ರಮಣಿಜ್ಜಂ
ಜಂಜೇಣ ಮಂತೇಣ ಕಾರಣ ಯೇಣ
ಪಚ್ಚ ಇಯವ್ವಂಹೋ ಇಣರೇಣ

ಎಂದು ಛಂದಛಂದದಿಂ ಪೇೞ್ದಾಡುವುದಂ ಕಂಡರಸಂ ಮೊದಲಾಗಿ ಪೊೞಲ ಜನವೆಲ್ಲಂ ಚೋದ್ಯಂಬಟ್ಟು ಬೆಱಗಾಗಿ ನೋಡುತ್ತಿರ್ದಿಂತೆಂದರಸಂ ಬೆಸಗೊಂಡಂ ನೀವಾರ್ಗೇನೆಂಬಿರೆಲ್ಲಿಂ ಬಂದಿರಿಂತೇಕೆ ಪೇೞ್ದಾಡಿದಪ್ಪಿರೆಂದು ಬೆಸಗೊಂಡೊಡಾನಲ್ತೆ ನಂದಿಮಿತ್ರನಪ್ಪ ಕಿತ್ತಯ್ಯನೆ ನುಣಿಸಿಂಗೆಂದು ತಪಂಬಟ್ಟೇೞುದಿವಸಮುಪವಾಸಂಗೆಯ್ದು ಮುಡಿಪಿ ಸಂನ್ಯಸನಂಗೆಯ್ದು ಮುಡಿಪಿ

ವನ್ನೂ ಗೌರವವನ್ನೂ ಮಾಡುತ್ತಿರುವಾಗ ನಾನು ನನ್ನ ದೇಹಕ್ಕೆ ಮಾಡದಿರುವೆನೆ?" ಎಂದು ಕನಕಧ್ವಜನು ಹಲವು ವಿಮಾನಗಳನ್ನು ಮಾಯೆಯಿಂದ ಸೃಷ್ಟಿಸಿ ಜೈನಸಂನ್ಯಾಸಿ ನಂದಿಮಿತ್ರನ ಶವದ ವಿಮಾನದ (ಮಂಟಪದ) ಮುಂದೆ ಬಳಸಿ ಹೋಗುವಂತೆ ಮಾಡಿದನು. ಆಕಾಶವೆಲ್ಲವೂ ತುಂಬಿ ಹೋಗುವಂತೆ ಮಾಯೆಯಿಂದ ವಿಮಾನಗಳನ್ನು ಸೃಷ್ಟಿಸಿ ದೇವಲೋಕದ ಚರ್ಮವಾದ್ಯಗಳನ್ನು ಬಾರಿಸಿಕೊಂಡು, ಸುರಪುನ್ನಾಗ (ನಮೇರು), ಮಂದಾರ, ಸಂತಾನಕ, ಪಾರಿಜಾತ-ಎಂಬ ದೇವಲೋಕದ ಮರಗಳ ಹೂಗಳನ್ನು ಸುರಿಸುತ್ತ, ದೇವತಾ ಪುರುಷರಿಂದಲೂ ಸ್ತ್ರೀಯರಿಂದಲೂ ಕೂಡಿ ನಂದಿಮಿತ್ರ ಜೈನ ಸಂನ್ಯಾಸಿಯ ಶವಮಂಟಪದ ಮುಂದೆ ಹೀಗೆ ಹೇಳಿಕೊಂಡು ನೃತ್ಯಮಾಡಿದನು-[ಅನ್ನಕ್ಕಾಗಿ ತಲೆಯನ್ನು ಬೋಳಿಸಿರುವ ಬೋಳನನ್ನು-ಅಪ್ಸರಸ್ತ್ರೀಯರ ನಡುವೆ ಸುಂದರನಾಗಿ ಇರುವವನನ್ನು ನೋಡು ನೋಡು. ಯಾವುದಾದರೂ ಕಾರಣದಿಂದ ಮನುಷ್ಯನು ಇಂತಹದನ್ನು ನಂಬುತ್ತಾನೆ ] ಈ ರೀತಿಯಾಗಿ ಬೇರೆ ಬೇರೆ ಛಂದಸ್ಸುಗಳಿಂದ (ಪದ್ಯಧಾಟಿಗಳಿಂದ) ಹೇಳಿ ನರ್ತಿಸುವುದನ್ನು ರಾಜನೇ ಮುಂತಾದ ಪಟ್ಟಣಿಗರೆಲ್ಲ ಆಶ್ಚರ್ಯಚಕಿತರಾಗಿ ನೋಡುತ್ತಿದ್ದರು. ರಾಜನ ಕನಕಧ್ವಜನೊಡನೆ-" ನೀವು ಯಾರ ಸಂಬಂಧದವರು? ಏನು ಹೇಳಲಿದ್ದೀರಿ? ಎಲ್ಲಿಂದ ಬಂದಿರಿ? ಈ ರೀತಿ ಹೇಳಿಕೊಂಡು ಯಾಕೆ ಕುಣಿದಾಡುತ್ತೀರಿ?" ಎಂದು ಕೇಳಿದನು. ಆಗ ಅವನು- "ನಾನು ನಂದಿಮಿತ್ರನೆಂಬ ಚಿಕ್ಕಸ್ವಾಮಿಯಾಗಿದ್ದವನಲ್ಲವೆ? ಊಟಕ್ಕಾಗಿ ತಪಸ್ಸನ್ನು ಸ್ವೀಕರಿಸಿ ಏಳು ದಿನಸ ಉಪವಾಸ ಮಾಡಿ ಸತ್ತು-ಸಂನ್ಯಾಸ

ದೇವಲೋಕದೊಳ್ ಕನಕಧ್ವಜನೆಂಬೊಂ ದೇವನಾಗಿ ಪುಟ್ಟಿ ಎನ್ನ ದೇಹಮಂ ಪೂಜಿಸಲುಂ ನಿಮಗೆನ್ನ ವಿಭವಮಂ ತೋಱಲ್ ಬಂದೆನೆಂದು ಪೇೞ್ದು ತನ್ನ ಶರೀರಮಂ ದಿವ್ಯಮಪ್ಪ ಗಂಧ ಪುಷ್ಪ ದೀಪ ಧೂಪಾಕ್ಷತೆಗಳಿಂದರ್ಚಿಸಿ ತನ್ನ ಗುರುಗಳಪ್ಪ ಶಿವಗುಪ್ತರೆಂಬಾಚಾರ್ಯರುಮಂ ಪೂಜಿಸಿ ನಿಮ್ಮ ಪ್ರಸಾದದಿಂದೆನಗಿನಿತಿರಿದು ಶ್ರೀಯುಂ ಮಹಾವಿಭೂತಿಯುಮೈಶ್ವರ್ಯಮುಂ ದೇವತ್ವಮುಮಾದುದೆಂದು ಪೇೞ್ದು ಬಂದಿಸಿ ತನ್ನ ದೇವಲೋಕಕ್ಕೆ ಪೋದನ್ ಇತ್ತಲರಸನುಮ ದೆಲ್ಲಮಂ ಕಂಡು ಸಂಸಾರ ಶರೀರ ಭೋಗ ವೈರಾಗ್ಯಪರಾಯಣನಾಗಿ ಶ್ರೀವರ್ಮನೆಂಬ ತನ್ನ ಪಿರಿಯ ಮಗಂಗೆ ರಾಜ್ಯ ಪಟ್ಟಂಗಟ್ಟಿ ಪಲಂಬರರಸುಮಕ್ಕಳುಂ ಮಹಾದೇವಿ ಮೊದಲಾಗಿ ಪಲಂಬರರಸಿಯರ್ಕಳುಂ ಪರಿವಾರದವರುಂ ಪೊೞಲ ಪಲಂಬರ್ ಜನಂಗಳೆಲ್ಲಂ ಬೆರಸು ಶಿವ ಗುಪ್ತ ಭಟ್ಟಾರರ ಪಕ್ಕದೆ ತಪಂಬಟ್ಟು ಸಮ್ಯಗ್ ಜ್ಞಾನ ಚಾರಿತ್ರಂಗಳೊಳಗೊಳ್ಳಿತಾಗಿ ನೆಗೞ್ದು ಪಶ್ಚಾತ್ಕಾಲದೊಳ್ ಸಂನ್ಯಸನಂಗೆಯ್ದು ಮುಡಿಪಿಯನಿಬರುಂ ದೇವಲೋಕಕ್ಕೆ ಪೋದರ್ ಮತ್ತಂ ಕನಕಧ್ವಜನೆಂಬ ದೇವಂ ಪಲಕಾಲಂ ದೇವಲೋಕದ ಸುಖಮನನುಭವಿಸಿ ಬಂದಿಲ್ಲಿ ನೀಂ ಸಂಪ್ರತಿ ಚಂದ್ರಗುಪ್ತನಾಗಿ ಪುಟ್ಟಿದೆಯೆಂದು ಸಮಾಧಿಗುಪ್ತ ಭಟ್ಟಾರರ್ ತನ್ನ ಭವಮಂ

ಕೈಕೊಂಡು ಸತ್ತು ದೇವಲೋಕದಲ್ಲಿ ಕನಕಧ್ವಜನೆಂಬ ದೇವನಾಗಿ ಹುಟ್ಟಿದೆನು. ನನ್ನ ಹಿಂದಿನ ಶರೀರವನ್ನು ಪೂಜಿಸುವುದಕ್ಕೂ ನಿಮಗೆ ನನ್ನ ವೈಭವವನ್ನು ತೋರಿಸು ವುದಕ್ಕೂ ಬಂದಿದ್ದೇನೆ" ಎಂದು ಹೇಳಿದನು. ಆಮೇಲೆ ತನ್ನ ಶರೀರವನ್ನು ದೇವಲೋಕ ದಿಂದ ತಂದ ಗಂಧ-ಪುಷ್ಪ-ದೀಪ-ಧೂಪ - ಅಕ್ಷತೆಗಳಿಂದ ಪುಜಿಸಿದನು. ತನ್ನ ಗುರುಗಳಾದ ಶಿವಗುಪ್ತರೆಂಬ ಆಚಾರ್ಯರನ್ನು ಪೂಜಿಸಿ, "ನಿಮ್ಮ ಅನುಗ್ರಹದಿಂದ ನನಗೆ ಇಷ್ಟೊಂದು ಹಿರಿದಾದ ಕಾಂತಿಯೂ ಐಶ್ವರ್ಯವೂ ಮಹಾಸಂಪತ್ತೂ ದೇವತ್ವವೂ ಆಗಿದೆ" ಎಂದು ಹೇಳಿ ವಂದಿಸಿ ತನ್ನ ದೇವಲೋಕಕ್ಕೆ ತೆರಳಿದನು. ಇತ್ತ ಜಯವರ್ಮ ಮಹಾರಾಜನು ಅದೆಲ್ಲವನ್ನೂ ಕಂಡು ಸಂಸಾರದಲ್ಲಿಯೂ ಶರೀರದಲ್ಲಿಯೂ ಸುಖ ದಲ್ಲಿಯೂ ವೈರಾಗ್ಯವೇ ಮುಖ್ಯ ಗುರಿಯುಳ್ಳವನಾಗಿ ಶ್ರೀವರ್ಮನೆಂಬ ತನ್ನ ಹಿರಿಯ ಮಗನಿಗೆ ರಾಜ್ಯ ಪಟ್ಟ ಕಟ್ಟಿದನು. ಅವನೂ ಹಲವು ಮಂದಿ ರಾಜಕುಮಾರರೂ ಮಹಾ ರಾಣಿ ಮುಂತಾದ ಹಲವು ಮಂದಿ ರಾಣಿಯರೂ ಪರಿವಾರದವರೂ ಪಟ್ಟಣದ ಹಲವು ಜನರೂ ಒಟ್ಟಾಗಿ ಶಿವಗುಪ್ತ ಋಷಿಗಳ ಬಳಿಯಲ್ಲಿ ತಪಸ್ಸನ್ನು ಸ್ವೀಕರಿಸಿದರು. ಸಮ್ಯಗ್ ಜ್ಞಾನ ಸಮ್ಯಕ್‌ಚಾರಿತ್ರಗಳನ್ನು ಚೆನ್ನಾಗಿ ಆಚರಿಸಿ ಅನಂತರದ ಕಾಲದಲ್ಲಿ ಸಂನ್ಯಾಸ ವನ್ನು ಮಾಡಿ ಸತ್ತು ಅವರೆಲ್ಲರೂ ದೇವಲೋಕಕ್ಕೆ ಹೋದರು. ಆಮೇಲೆ ಕನಕಧ್ವಜ ನೆಂಬ ದೇವನು ಹಲವು ಕಾಲ ದೇವಲೋಕದ ಸುಖವನ್ನು ಅನುಭವಿಸಿ ಮತ್ತೆ ಈ ಭೂಮಿಗೆ ಬಂದು ನೀನೀಗ ಸಂಪ್ರತಿ ಚಂದ್ರಗುಪ್ತನಾಗಿ ಹುಟ್ಟಿರುತ್ತೀಯೆ-ಎಂದು ಸಮಾಧಿ ಗುಪ್ತ ಋಷಿಗಳು ಅವನ ಜನ್ಮವೃತ್ತಾಂತವನ್ನು ಹೇಳಿದರು. ಇದರಿಂದ ಅತ್ಯಂತ ಪ್ರೀತಿ ಗೊಂಡು ಸಂತೋಷಪಟ್ಟು ಸಂಪ್ರತಿ ಚಂದ್ರಗುಪ್ತ ಮಹಾರಾಜನು ಸಮಾಧಿಗುಪ್ತ ಋಷಿ

ಪೇಳ್ದೊಡಾದವಮಾನುವೊಸೆದು ಸಂತೋಷಂಬಟ್ಟು ಭಟ್ಟಾರರಂ ವಂದಿಸಿ ತನ್ನರಮನೆಗೆ ಪೋಗಿ ಇಂತು ಸಂಪ್ರತಿ ಚಂದ್ರಗುಪ್ತ ಮಹಾರಾಜಂ ಪೃಥ್ವಿಯನೇಕಚ್ಛತ್ರಚ್ಛಾಯೆಯಿಂದ ಮಾಳುತ್ತಮುಜ್ಜೇನಿಯೊಳ್ ಸುಖದಿಂದಿರ್ಪನ್ನೆಗಂ ಇತ್ತ ದ್ವಾದಶಾಂಗ ಚತುರ್ದಶಪೂರ್ವಧಾರಿಗಳಪ್ಪ ಭದ್ರಬಾಹು ಭಟ್ಟಾರರ್ ಪಿರಿದು ಋಷಿ ಸಮುದಾಯಂ ಬೆರಸು ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಬರ್ಪೋರುಜ್ಜೇನಿಗೆ ವಂದಾ ಪೊಟಲ ಬಹಿರುದ್ಯಾನವನದೊಳಿರ್ದರದನರಸಂ ಕೇಳ್ದು ಪರಿವಾರಸಹಿತಂ ಪೋಗಿ ಭಟಾರರಂ ವಂದಿಸಿ ಸದ್ಧರ್ಮಮಂ ಕೇಳ್ದು ಶ್ರಾವಕವ್ರತಂಗಳನೇಱಿಸಿಕೊಂಡು ವಂದಿಸಿ ತನ್ನರಮನೆಗೆ ಪೋದನಿತ್ತ ಭಟಾರರುಂ ಪಲವು ದಿವಸಮಾ ಪೊಟಲೊಳಿರೆ ಮತ್ತೊಂದು ದಿವಸಂ ಋಷಿಸಮುದಾಯಮೆಲ್ಲಮಂ ಚರಿಗೆವೊಗಿಸುತ್ತಮೆಲ್ಲರುಮಂ ನಿಱಿಸಿ ತಾಮೊರ್ವರೆಯೊಂದು ಮನೆಯುಂ ಪೊಕ್ಕಾಗಳಾ ಮನೆಯೊಳಾರು ಮಿಲ್ಲೋಸರಿಗೆಯೊಳ್ ತೊಟ್ಟಿಲೊಳಿರ್ದವ್ಯಕ್ತ ಕಿಱುಗೂಸು ಬೋಳಹ ಬೋಳಹ ಭಟ್ಟಾರಾ ಎಂದತ್ತಾಗಳಾ ವಚನಮಂ ಭಟ್ಟಾರರ್ ಕೇಳ್ದು ದಿವ್ಯವಾಕ್ಯಮೆಂದಱಿದು ಕಾಲ ಪ್ರಮಾಣಮಂ ಬೆಸಗೊಂಡೊಡೆ ದ್ವಾದಶವರ್ಷಮೆಂದು ಪೇಳ್ದತ್ತು ಭಟ್ಟಾರರ್ ಕಾಲ ದೋಷದಿಂ ಪ್ರಜಾಪೀಡೆಯಾದಪ್ಪುದೆಂದಱಿದು ಕಾರುಣ್ಯ ಬುದ್ಧಿಯಿಂದಾ

ಗಳನ್ನು ವಂದಿಸಿ ತನ್ನ ಅರಮನೆಗೆ ಹೋಗಿ ಈ ರೀತಿಯಾಗಿ ಭೂಮಿಯನ್ನು ಏಕಚ್ಛತ್ರದ ನೆರಳಿನಲ್ಲಿ (ಚಕ್ರವರ್ತಿಯಾಗಿ) ಆಳುತ್ತ ಉಜ್ಜಯನಿಯಲ್ಲಿ ಸುಖದಿಂದ ಇದ್ದನು. ಇತ್ತ ಹನ್ನೆರಡು ಅಂಗಗಳನ್ನೂ ಹದಿನಾಲ್ಕು ಪೂರ್ವವೆನಿಸಿದ ಶಾಸ್ತ್ರಗಳನ್ನೂ ಬಲ್ಲ ಭದ್ರಬಾಹು ಋಷಿಗಳು ಹೆಚ್ಚು ಋಷಿಗಳ ಸಮೂಹವನ್ನು ಕೂಡಿಕೊಂಡು ಗ್ರಾಮ-ನಗರ-ಖೇಡ-ಖರ್ವಡ–ಮಡಂಬ–ಪಟ್ಟಣ–ದ್ರೋಣಾಮುಖಗಳನ್ನು ಸಂಚಾರಮಾಡುತ್ತ ಬರುತ್ತಿದ್ದವರು ಉಜ್ಜಯಿನಿಗೆ ಬಂದು ಆ ಪಟ್ಟಣದ ಬಾಹ್ಯೋದ್ಯಾನದಲ್ಲಿದ್ದರು. ಅವರು ಅಲ್ಲಿದ್ದುದನ್ನು ರಾಜನು ಕೇಳಿ ಪರಿವಾರದೊಡನೆ ಹೋಗಿ ಋಷಿಗಳನ್ನು ವಂದಿಸಿ ಅವರಿಂದ ಒಳ್ಳೆಯ ಧರ್ಮದ ಉಪದೇಶವನ್ನು ಕೇಳಿ, ಶ್ರಾವಕವ್ರತಗಳನ್ನು ಸ್ವೀಕರಿಸಿ, ವಂದಿಸಿ ತನ್ನ ಅರಮನೆಗೆ ತೆರಳಿದನು. ಇತ್ತ ಋಷಿಗಳು ಹಲವು ದಿವಸ ಆ ಪಟ್ಟಣದಲ್ಲಿದ್ದರು. ಹೀಗಿರಲು ಒಂದು ದಿವಸ ಅವರು ಋಷಿಸಮೂಹವನ್ನು ಅಲ್ಲಲ್ಲಿ ಭಿಕ್ಷೆಗೆ ಕಳುಹಿಸಿ ಅವರೆಲ್ಲರೂ ಅಲ್ಲಲ್ಲೇ ಊಟಮಾಡುವಂತೆ ಹೇಳಿ ತಾವು ಒಬ್ಬರೇ ಒಂದು ಮನೆಯನ್ನು ಹೊಕ್ಕರು. ಆ ಮನೆಯಲ್ಲಿ ಯಾರೂ ಇರಲಿಲ್ಲ. ಒಳಕೋಣೆಯಲ್ಲಿ ತೊಟ್ಟಿಲಲ್ಲಿ ಇದ್ದಂತಹ ಮತ್ತು ಅಸ್ಪಷ್ಟವಾಗಿ ಕಾಣುತ್ತಿದ್ದಂತಹ ಒಂದು ಚಿಕ್ಕ ಮಗು “ಎಲೈ ಋಷಿಯೇ, ಹೋಗು ಹೋಗು” ಎಂಬಂತೆ ಕೂಗಿತು. ಆ ಮಾತನ್ನು ಭದ್ರಬಾಹು ಭಟ್ಟಾರರು ಕೇಳಿ, ಇದು ದೇವರ ಮಾತೆಂತಲೇ ತಿಳಿದು “ಎಷ್ಟು ಕಾಲ ?” ಎಂಬುದಾಗಿ ಕೇಳಿದರು. ಆಗ ಅದು “ಹನ್ನೆರಡು ವರ್ಷ” ಎಂದು ಹೇಳಿತು. ಕಾಲದೋಷದಿಂದ ಪ್ರಜೆಗಳಿಗೆ ತೊಂದರೆಯಾಗುವುದೆಂದು ಋಷಿಗಳು ತಿಳಿದು, ಕರುಣೆಯ ಬುದ್ಧಿಯಿಂದ

ಹಾರಮುಂ ಕೊಳ್ಳದೆ ಅಲಾಭಂ ಮಾಡಿಯುಂತೆ ಬಸದಿಗೆ ವೋಗಿ ಗೋಚಾರನಿಯಮಮಂ ಗೆಯ್ದು ಬೞಿಕ್ಕೆ ರಿಸಿಯರ್ಕಳ್ಗೆಲ್ಲಂ ಬೞಿಯನಟ್ಟಿ ಬರಿಸಿ ಇಂತೆಂದರೀ ನಾಡೊಳ್ ಪನ್ನೆರಡು ವರುಷಂ ಬರೆಗಮನಾವೃಷ್ಟಿಯಾಗಿ ದುರ್ಭಿಕ್ಷಮಾದಪ್ಪುದೀ ನಾಡೊಳಗಿರ್ದ ರಿಸಿಯರ್ಕಳ್ಗೆಲ್ಲಂ ಬೇಗಂ ಬೞಿಯಟ್ಟಿ ಬರಿಸಿಂ ಪೋಪಂ ದಕ್ಷಿಣಾಪಥಕ್ಕೆಂದು ರಿಸಿಯರ್ಕಳ್ಗೆಲ್ಲಂ ಬೞಿಯನಟ್ಟಿದರಿತ್ತರಸನುಮಾ ದಿವಸದಿರುಳ್ ಪದಿನಾಱುಂ ಪೊಲ್ಲಕನಸುಗಳಂ ಕಂಡನವಾವುವೆಂದೊಡೆ ಆದಿತ್ಯನಸ್ತಮಾನಕ್ಕೆ ಸಲ್ವುದುಮಂ ಕಲ್ಪವೃಕ್ಷದ ಕೋಡುಱಿವುದುಮಂ ನೆಲಕ್ಕೆವರುತಿರ್ದ ವಿಮಾನಂ ಬಾರದೆಡೆಯಿಂದೆ ಮೇಗೆ ಮಗುೞ್ದುದುಮಂ, ಪನ್ನೆರಡುಂ ತಲೆಯ ಪಾವುಮಂ ಚಂದ್ರನೊಡೆದುದುಮಂ ಕಡುಗಡಿಯುವಪ್ಪೆರಡಾನೆಗಳ್ ತಮ್ಮೊಳ್ ಪೋರಲ್ ಸಾರ್ದು ಪೆಱಪಿಂಗಿ ಪೋದುದುಮಂ ಮಿಂಚಂ ಬುೞುವುದುಮಂ ನೀರಿಲ್ಲದ ಕೆಱೆಯ ನಡುವುಮಂ ಪೊಗೆ ಪೆರ್ಚಿ ನೆಗೆದ ಕಾೞ್ಕಿಚ್ಚುಮಂ ಸಿಂಹಾಸನದ ಮೇಗೇಱಿದ ಕೋಡಗಮುಮಂ ಪೊನ್ನ ತಳಿಗೆಯೊಳ್ ನಾಯ್ ತುಯ್ಯಲುಣ್ಬುದುಮಂ ಕೋಡಗವೇಱಿರ್ದ ಸೊರ್ಕಾನೆಯುಮಂ ಕಸಕುಪ್ಪೆಯೊಳ್ ತಾಮರೆ ಮೂಡಿದುದಂ ಸಮುದ್ರಂ ಮೇರೆದಪ್ಪಿದುದುಮಂ ಬೆಳ್ಗೞ್ತೆ ಪೂಡಿದ ಪೊನ್ನ ರಥಮಂ ಬೆಳ್ಗೞ್ತೆಯ

ಆಹಾರವನ್ನು ಸ್ವೀಕರಿಸದೆ (ಅಲಾಭ ಮಾಡಿ) ಹಾಗೆಯೇ ಬಸದಿಗೆ ಹೋಗಿ ಗೋಚಾರ ನಿಯಮವನ್ನು ಮಾಡಿ (ಬೇರೆ ಯಾವ ಕಡೆಗೂ ಮನಸ್ಸು ಕೊಡದೆ) ಮತ್ತೆ ಋಷಿಗಳಿಗೆಲ್ಲ ಕರೆ ಕಳುಹಿಸಿ ಬರಮಾಡಿ ಅವರೊಡನೆ ಹೀಗೆಂದರು—"ಈ ನಾಡಿನಲ್ಲಿ ಹನ್ನೆರಡು ವರ್ಷಗಳವರೆಗೆ ಮಳೆಬಾರದೆ ದುರ್ಭಿಕ್ಷ (ಬರಗಾಲ)ವುಂಟಾಗುವುದು. ಈ ನಾಡಿನಲ್ಲಿರುವ ಋಷಿಗಳಿಗೆಲ್ಲ ಬೇಗ ಕರೆ ಕಳುಹಿಸಿ ಬರಮಾಡಿ, ದಕ್ಷಿಣದೇಶಕ್ಕೆ ಹೋಗೋಣ." ಈ ರೀತಿಯಾಗಿ ಋಷಿಗಳಿಗೆಲ್ಲ ಕರೆ ಕಳುಹಿಸಿದರು. ಇತ್ತ ರಾಜನು ಅಂದಿನ ರಾತ್ರಿ ಹದಿನಾರು ದುಃಸ್ವಪ್ನಗಳನ್ನು ಕಂಡನು. ಅವು ಯಾವುವೆಂದರೆ: (೧) ಸೂರ್ಯನು ಅಸ್ತಂಗತನಾಗುವುದು, (೨) ಕಲ್ಪವೃಕ್ಷದ ಕೊಂಬೆ ಮುರಿಯುವುದು, (೩) ನೆಲಕ್ಕೆ ಬರುವ ವಿಮಾನ ಬಾರದೆ ಮಧ್ಯದಿಂದಲೇ ಮೇಲಕ್ಕೆ ತಿರುಗಿಹೋದುದು, (೪) ಹನ್ನೆರಡು ತಲೆಗಳುಳ್ಳ ಹಾವು ಕಾಣಿಸಿದುದು, (೫) ಚಂದ್ರಬಿಂಬ ಒಡೆದುದು, (೬) ಅತ್ಯಂತ ಬಲಿಷ್ಠವಾದ ಎರಡು ಆನೆಗಳು ತಮ್ಮೊಳಗೆ ಹೋರಾಡುವುದಕ್ಕಾಗಿ ಹತ್ತಿರ ಬಂದು ಹಿಂದಕ್ಕೆ ಸರಿದು ಹೋದುದು, (೭) ಮಿಂಚುಹುಳು ಕಾಣಿಸಿದುದು, (೮) ನೀರಿಲ್ಲದ ಕೆರೆಯ ಮಧ್ಯಭಾಗ, (೯) ಹೊಗೆ ಹೆಚ್ಚಾಗಿ ಮೇಲೆದ್ದ ಕಾಡುಗಿಚ್ಚು, (೧೦) ಸಿಂಹಾಸನದ ಮೇಲೆ ಏರಿದ ನರಿ, (೧೧) ಚಿನ್ನದ ತಟ್ಟೆಯಲ್ಲಿ ನಾಯಿ ಪಾಯಸವನ್ನು ಉಣ್ಣುವುದು, (೧೨) ಮದ್ದಾನೆಯ ಮೇಲೆ ಕೋತಿ ಕುಳಿತದುದು, (೧೩) ಕಸದ ರಾಶಿಯಲ್ಲಿ ತಾವರೆ ಹುಟ್ಟಿದುದು, (೧೪) ಸಾಗರವು ತನ್ನ ಎಲ್ಲೆಯನ್ನು ದಾಟಿದುದು, (೧೫) ಬಿಳಿಯ ಕತ್ತೆಯನ್ನು ಕಟ್ಟಿದ ಚಿನ್ನದ ತೇರು, (೧೬) ರಾಜರುಗಳು ಬಿಳಿ ಕತ್ತೆಯ ಮೇಲೆ ಸವಾರಿಮಾಡುವುದು—ಈ

ನರಪರ್ಕಳೇಱುವುದುಮಂ – ಇಂತೀ ಪದಿನಾಱುಂ ಕನಸುಗಳಂ ಸಮ್ಯಗ್ದರ್ಶನ ಶುದ್ಧಿ ಮೊದಲಾಗೊಡೆಯ ಗುಣಂಗಳಿಂ ಕೂಡಿದ ಸಂಪ್ರತಿ ಚಂದ್ರಗುಪ್ತಮಹಾರಾಜಂ ಪೊಲ್ಲ ಕನಸುಗಳಂ ಕಂಡೆನೆಂದಂಜಿ ನೇಸಱ್ ಮೂಡಿದಾಗಳ್ ಭದ್ರಬಾಹು ಭಟ್ಟಾರರಲ್ಲಿಗೆ ಪೋಗಿ ವಂದಿಸಿ ತನ್ನ ಕಂಡ ಕನಸುಗಳಂ ಭಟಾರರ್ಗೆ ಪೇೞ್ದವರ ಫಲಂಗಳಂ ಬೆಸಗೊಂಡೊಡೆ ಭಟಾರರಿಂತೆಂದು ಪೇೞಲ್ ತೊಡಗಿದರ್ ಆದಿತ್ಯನಸ್ತಮಾನಕ್ಕೆ ಸಲ್ವುದಂ ಕಂಡುದಱಿಂದೀ ಭರತ ಕ್ಷೇತ್ರದೊಳ್ ಚತುರ್ದಶಪೂರ್ವಧಾರಿಗಳುಮವಧಿಜ್ಞಾನಿಗಳುಮಿಲ್ಲಿಂದಿತ್ತಲಾಗರ್ ಕಲ್ಪವೃಕ್ಷದ ಕೊಂಬುಮುಱಿದುದುಮಂ ಕಂಡುದಱಿಂದಿಂದಿನ ದಿವಸಂ ಕೞಿದೊಡೆ ಕುಲಬಲವಿಭವದಿಂ ಪಿರಿಯರಪ್ಪ ಮಕುಟಬದ್ಧರಪ್ಪರಸುಗಳ್ ತಪಂ ಬಡುವರಲ್ಲರ್ ನೆಲಕ್ಕೆವರುತ್ತಿರ್ದ ವಿಮಾನ ಮೆಡೆಯಿಂದಂ ಮೇಗೆ ಮಗುೞ್ದುದಂ ಕಂಡುದಱಿಂ ದೇವರ್ಕಳುಂ ವಿದ್ಯಾಧರರ್ಕಳುಮಿಲ್ಲಿಂದಿತ್ತೀ ಕ್ಷೇತ್ರಕ್ಕೆ ವಾರರ್ ಪನ್ನೆರಡು ತಲೆಯ ಪಾವಂ ಕಂಡುದಱಿಂದಿಲ್ಲಿಂ ತೊಟ್ಟೀ ನಾಡೊಳ್ ಪನ್ನೆರಡು ವರ್ಷಂಬರಂ ರೌದ್ರ ಪಸವಮಕ್ಕುಂ ಚಂದ್ರನೊಡೆದುದಂ ಕಂಡುದಱಿಂ ಸದ್ಧರ್ಮದ ಮೊದಲ ಪೊರ್ದಿದ ಮಾರ್ಗದಿಂ ಬೆಳೆಯೊಳ್ ಪುಲ್ಗಳ್ ಪಲವಕ್ಕುಂ ಕಡುಗಡಿಯ ವಪ್ಪೆರಡಾನೆಗಳ್ ತಮ್ಮೊಳ್ ಪೋರಲ್ ಸಾರ್ದು ಪೆಱಪಿಂಗುವುದಂ ಕಂಡುದಱಿಂ ಪ್ರಜೆಗಳ

ರೀತಿಯಾಗಿ ಹದಿನಾರು ಕೆಟ್ಟ ಕನಸುಗಳನ್ನು ಸಮ್ಯಗ್ದರ್ಶನ–ಶುದ್ಧಿ ಮುಂತಾಗಿರುವ ಗುಣಗಳಿಂದ ಕೂಡಿದ ಸಂಪ್ರತಿ ಚಂದ್ರಗುಪ್ತ ಮಹಾರಾಜನು ತಾನು ಕಂಡೆನೆಂದು ಹೆದರಿದನು. ಸೂರ್ಯೋದಯವಾದ ವೇಳೆಗೆ ಆವನು ಭದ್ರಬಾಹು ಋಷಿಗಳಲ್ಲಿಗೆ ಹೋಗಿ ನಮಸ್ಕರಿಸಿ, ತಾನು ಕಂಡ ಕನಸುಗಳನ್ನು ಋಷಿಗಳಿಗೆ ಹೇಳಿ ಅವುಗಳ ಫಲವೇನೆಂಬುದಾಗಿ ಕೇಳಲು ಭದ್ರ ಬಾಹು ಮುನಿಗಳ ಹೀಗೆ ಹೇಳತೊಡಗಿದರು–ಸೂರ್ಯನು ಮುಳುಗುವುದನ್ನು ಕಂಡುದರಿಂದ ಈ ಭರತಕ್ಷೇತ್ರದಲ್ಲಿ ಹದಿನಾಲ್ಕು ಪೂರ್ವಗಳನ್ನು ತಿಳಿದವರೂ ಅವಧಿ ಜ್ಞಾನಿಗಳೂ ಇನ್ನು ಮುಂದೆ ಆಗರು. ಕಲ್ಪವೃಕ್ಷದ ಕೊಂಬೆ ಮುರಿದುದನ್ನು ಕಂಡುದರಿಂದ ಈ ದಿವಸ ದಾಟಿದರೆ, ಕುಲ– ಸಾಮರ್ಥ್ಯ– ವೈಭವದಿಂದ ದೊಡ್ಡವರೆನಿಸಿದ ಕಿರೀಟ ಧಾರಿಗಳಾದ ರಾಜರುಗಳು ತಪಸ್ಸು ಮಾಡಲು ಉದ್ಯುಕ್ತರಾಗರು. ನೆಲಕ್ಕೆ ಬರುತ್ತಿದ್ದ ವಿಮಾನವು ಮಧ್ಯದಿಂದಲೇ ಮೇಲಕ್ಕೆ ತಿರುಗಿದುದನ್ನು ಕಂಡುದರಿಂದ ದೇವತೆಗಳೂ ವಿದ್ಯಾಧರರೂ ಇಲ್ಲಿಂದ ಮುಂದೆ ಈ ಕ್ಷೇತ್ರಕ್ಕೆ ಬರಲಿಕ್ಕಿಲ್ಲ. ಹನ್ನೆರಡು ತಲೆಗಳಿರುವ ಹಾವನ್ನು ಕಂಡುದರಿಂದ ಇಲ್ಲಿಂದ ಹಿಡಿದು ಈ ನಾಡಿನಲ್ಲಿ ಹನ್ನೆರಡು ವರ್ಷಗಳವರೆಗೆ ಘೋರವಾದ ಕ್ಷಾಮ ತಲೆದೋರುವುದು. ಚಂದ್ರಬಿಂಬ ಹೋಳಾದುದನ್ನು ಕಂಡುದರಿಂದ ಸದ್ಧರ್ಮದ ಮೂಲದ ಮಾರ್ಗದಲ್ಲಿರುವ ಬೆಳೆಯಲ್ಲಿ ಹಲವು ಹುಲ್ಲುಗಳು ಕಳೆಯಾಗಿ ಉಂಟಾಗಿರುವವು (ಧರ್ಮ ಕೆಡುವುದು). ಬಲಿಷ್ಠವಾದ ಎರಡು ಆನೆಗಳು ಹೋರಾಡಲು ಬಂದು ಹಿಂಜರಿದುದನ್ನು ಕಂಡುದರಿಂದ ಪ್ರಜೆಗಳು ಇಚ್ಛಿಸಿದ ಹಾಗೆ ಮಳೆ

ಮೆಚ್ಚಿದಂತೆ ಮೞೆಕೊಳ್ವವು ಮಂಡಲ ವರ್ಷಂಗಳಕ್ಕುಂ ಮಿಂಚುಂಬುೞುವಂ ಕಂಡುದಱಿಂ ಮಿಂಚುಂಬುೞುವಿನೋಳೋರನ್ನವು ಶಾಸ್ತ್ರಂಗಳುಮಂಗ ಬಾಹ್ಯಮಪ್ಪ ಚತುರ್ದಶ ವಿದ್ಯಾಸ್ಥಾನಂಗಳುಂ ಕುಂದಿಯುಪದೇಶ ತನುಮಾತ್ರಮೆ ನಿಲ್ಕುಂ ನೀರಿಲ್ಲದ ಕೆಱೆಯ ನಡುವಂ ಕಂಡುದಱಿಂ ತೀರ್ಥಂಕರ ಚಕ್ರವರ್ತಿಗಳ ಪುಟ್ಟಿದ ಮಧ್ಯದೇಶದೊಳ್ ಪಿನ್ನ ನೆಗೞ್ತಿಯಾಗದು ಆ ಮಧ್ಯ ಪ್ರದೇಶಕ್ಕೆ ಸಂಬಂಧಿಯೀ ಗಾಹೆ :

ಪುವ್ವೇಣ ಅಂಗವಿಸಓ ದಕ್ಖಿಣ ದೋ ಜಾವಹೋ ಇ ಕೋಸಂಬೀ
ಅವರೇಣ ಜಾವ ದೂಣಾ ಕುಣಾಳ ವಿಸಯೋಯ ಉತ್ತರದೋ ॥

ಎಂದು ಮಧ್ಯದೇಶಪ್ರಮಾಣಂ ಮತ್ತಂ ಪೊಗೆಯಿಂದಂ ಪೆರ್ಚಿ ನೆಗೆದ ಕಾೞ್ಕಿರ್ಚಂ ಕಂಡುದಱಿಂ ಧೂರ್ತರಪ್ಪ ಪೊಲ್ಲಲಿಂಗಿಗಳ ಪೆರ್ಚಕ್ಕುಂ ಮತ್ತಂ ದಯೆ ಮೊದಲಾಗೊಡೆಯ ಸದ್ಧರ್ಮಕ್ಕೆ ವಿರುದ್ಧಮಾಗಿ ನೆಗೞ್ವ ಪಿರಿದಪ್ಪ ಹಿಂಸಾದಿಗಳಂ ಗೆಯ್ವ ವೇದಾದಿಶಾಸ್ತ್ರಂಗಳ ಪೆರ್ಚಕ್ಕುಂ ಸಿಂಹಾಸನಮನೇಱಿರ್ದ ಕೋಡಗಮಂ ಕಂಡುದಱಿಂ ಕುಲಜರಲ್ಲದವರರಸುಗೆಯ್ವರ್ ಪೊನ್ನತಳಿಗೆಯೊಳ್ ನಾಯ್ ತುಪ್ಪಲನುಣ್ಬುದಂ ಕಂಡುದಱಿಂ ಪೊಲ್ಲಲಿಂಗಿಗಳರಸರ್ಕಳಿಂದಂ ಪೂಜಿಸೆ ಪಡುವರ್ ಕೋಡಗಮಾನೆಯನೇಱುವುದಂ ಕಂಡುದಱಿಂದಾದಮಾನುಂ ಶುದ್ಧ ಕುಲದೊಳ್ ಪುಟ್ಟಿದರಸುಮಕ್ಕಳುತ್ತಮ ಕುಲದೊಳಪ್ಪಭಿಮಾನಮಂ ತೊಱೆದು ಚಾಟುಕಾರಣಮಾಗಿ ಕುಲಜರಲ್ಲದ

ಗಳಾಗವು, ಕೆಲಕೆಲವು ಪ್ರದೇಶಗಳಲ್ಲಿ ಮಾತ್ರ ಮಳೆಗಳು ಸುರಿದಾವು. ಮಿಂಚು ಹುಳವನ್ನು ಕಂಡುದರಿಂದ ಮಿಂಚು ಹುಳುವಿನಂತಾಗಿ ಶಾಸ್ತ್ರಗಳು ಕುಂದಿಹೋಗಿ ಹೊರವ್ಮೈ ಮಾತ್ರ ಕಾಣಿಸುವಂತಾಗಿ ಹದಿನಾಲ್ಕು ವಿದ್ಯಾಸ್ಥಾನಗಳು ಕುಂದಿ ಹೋಗಿ ಉಪದೇಶದ ಭಾಗ ಮಾತ್ರ ನಿಲ್ಲುವುದು. ನೀರಿಲ್ಲದ ಕೆರೆಯ ಮಧ್ಯಭಾಗವನ್ನು ಕಂಡುದರಿಂದ ತೀರ್ಥಂಕರ ಚಕ್ರವರ್ತಿಗಳು ಜನಿಸಿದ ಮಧ್ಯದೇಶದಲ್ಲಿ ಹಿಂದಿನ ಕಾಲದ ಖ್ಯಾತಿ ಇಲ್ಲವಾಗವುದು. ಆ ಮಧ್ಯದೇಶವನ್ನು ಸಂಬಂಧಿಸಿದ ಗಾಹೆಯ ಅರ್ಥ ಹೀಗಿದೆ– [ಪೂರ್ವದಲ್ಲಿ ಅಂಗದೇಶ. ದಕ್ಷಿಣದಲ್ಲಿ ಕೌಶಂಬೀನಗರ. ಪಶ್ಚಿಮದಲ್ಲಿ ದಾಣ, ಉತ್ತರದಲ್ಲಿ ಕುಣಾಳ ದೇಶ– ಈ ಭಾಗವೇ ಮಧ್ಯದೇಶ.] ಮಧ್ಯದೇಶದ ಹರಹು ಹೀಗಿದೆ. ಆ ಮೇಲೆ ಹೊಗೆ ಹೆಚ್ಚಾಗಿ ಮೇಲೆದ್ದ ಕಾಡುಗಿಚ್ಚನ್ನು ಕಂಡುದರಿಂದ ದುಷ್ಟರಾದ ಕೆಟ್ಟ ಲಾಂಛನವುಳ್ಳವರ ಹೆಚ್ಚಳವಾಗುವುದು, ಮತ್ತು ದಯೆ ಮುಂತಾಗಿರುವ ಸದ್ಧರ್ಮಕ್ಕೆ ವಿರುದ್ಧವಾಗಿ ವರ್ತಿಸುವ ಹೆಚ್ಚಿನ ಹಿಂಸೆ ಮುಂತಾದುವನ್ನು ಮಾಡುವ ವೇದಶಾಸ್ತ್ರಗಳು ಹೆಚ್ಚಾಗುವವು. ಸಿಂಹಾಸನವೇರಿದ ಕೋತಿಯನ್ನು ಕಂಡುದರಿಂದ ಕುಲೀನರಲ್ಲದವರು ರಾಜ್ಯವಾಳುವರು. ಹೊಂದಟ್ಟೆಯಲ್ಲಿ ನಾಯಿ ಪಾಯಸವುಣ್ಣುವುದನ್ನು ಕಂಡದ್ದರಿಂದ ಕೆಟ್ಟಲಾಂಛನದವರು ರಾಜರಿಂದ ಪೂಜಿಸಲ್ಪಡುವರು. ಮಂಗವು ಆನೆಯ ಮೇಲೆ ಏರಿದುದನ್ನು ಕಂಡುದರಿಂದ ಅತ್ಯಂತ ಪವಿತ್ರವಾದ ವಂಶದಲ್ಲಿ ಜನಿಸಿದ ರಾಜಕುಮಾರರು ತಮ್ಮ ಶ್ರೇಷ್ಠವಂಶದ ಗೌರವವನ್ನು ಬಿಟ್ಟು ಜೀವನೋಪಾಯಕ್ಕಾಗಿ ಕುಲೀನರಲ್ಲದವರಿಗೆ

ವರ್ಗಾಳಾಗಿ ಬಾೞ್ವರ್ ಕಸಕುಪ್ಪೆಯೊಳ್ ತಾವುರೆ ಮೂಡಿದುದಂ ಕಂಡುದಱಿಂ ದಯೆಯುಮುಪಶ ಮಮುಂ ಪರಿಗ್ರಹ ಪರಿತ್ಯಾಗಮುಂ ಸಮಾಧಿಯುಂ ಸತ್ಯಮುಂ ಶೌಚಮುಂ ಕ್ಷಮೆಯುಮೆಂಬಿವು ಮೊದಲಾಗೊಡೆಯುವಱೊಳ್ ಕೂಡಿದ ಮಿಕ್ಕ ಸದ್ಧರ್ಮಮಾರ್ಗಮಂ ದ್ರವ್ಯಪತಿಗಳುಮರಸು ಮಕ್ಕಳುಂ ತಮ್ಮ ದ್ರವ್ಯಾದಿ ಮದದಿಂದಂ ತೊಱೆವರ್ ನೀಚಜಾತಿಗಳುಂ ಬಡವರುಂ ಸದ್ಧರ್ಮಮಂ ಕೈಕೊಂಡು ನೆಗೞ್ವರ್ ಸಮುದ್ರಂ ಮೇರೆದಪ್ಪುವುದಂ ಕಂಡುದಱಿಂದರಸುಮಕ್ಕಳ್ ತಮ್ಮ ಮರ್ಯಾದೆಯುಂ ಮಿಕ್ಕು ದ್ರವ್ಯಂ ಮೊದಲಾಗೊಡೆಯುವಱೊಳ್ ಲೋಭಿಷ್ಠರಪ್ಪರ್ ಒಳ್ಳಿತಪ್ಪ ಸತ್ಯ ಶೌಚ ಚಾರಿತ್ರಮೆಂದಿವಱಿಂ ಕುಂದಿಯಾದಮಾನುಂ ನಿರ್ದಯರ್ಕಳಪ್ಪರ್ ಬೆಳ್ಗೊಡೆ ಪೂಡಿದ ಪೊನ್ನರಥಮಂ ಕಂಡುದಱಿಂದಂ ಸಮ್ಯಗ್ದರ್ಶನ ಜ್ಞಾನ ಚಾರಿತ್ರಂಗಳಿಂದಂ ಪವಿತ್ರಮಪ್ಪ ನಿರ್ಗ್ರಂಥ ಲಿಂಗಮುಪ್ಪುದನೞಿದೊಳ್ಳಿತಪ್ಪ ತಪಮಂ ಕೈಕೊಳೆಪಟ್ಟುಂ ಪಿರಿದಪ್ಪ ಪುರುಷಕಾರಮುಂ ಸತ್ಯಮುಂ ಮನೋಬಲಮುಂ ವೀರ್ಯಮುಮೆಂದಿವಱಿಂದಂ ಕೂಡಿದವರ್ಗ ಳಿಂದಮೊಳ್ಳಿದರಪ್ಪ ತೀರ್ಥಕರ ಪರಮ ದೇವರ್ಕಳಿಂದಂ ಚಕ್ರವರ್ತಿಗಳಿಂದಂ ಚರಮದೇಹ ಧಾರಿಗಳಿಂದಂ ನೆಗೞೆಪಟ್ಟುದನೊಳ್ಳಿತಪ್ಪ ಮೋಕ್ಷಮಾರ್ಗಮಂ ಪೊರ್ದಿಯುಂ ವಿಷಯ ಸುಖಂ ಗಳೊಳ್ ಮೋಹಿತರ್ಕಳಾಗಿ ಕಿಡುವರ್ ಬೆಳ್ಗೊಡೆಯುನರಸರ್ಕಳೇಱುವುದಂ ಕಂಡುದಱಿಂದುತ್ತಮ

ದಾಸರಾಗಿ ಬಾಳುವರು. ಕಸದ ರಾಶಿಯಲ್ಲಿ ತಾವರೆ ಹುಟ್ಟಿದುದನ್ನು ಕಂಡುದ ರಿಂದ ದಯೆ, ಶಾಂತಿ, ಅಪರಿಗ್ರಹ, ಸಮಾಧಿ, ಸತ್ಯ, ಶುಚಿತ್ವ, ಕ್ಷಮೆ–ಮುಂತಾದವು ಗಳಿಂದ ಕೂಡಿದ ಶ್ರೇಷ್ಠವಾದ ಸದ್ಧರ್ಮದ ಹಾದಿಯನ್ನು ಶ್ರೀಮಂತರೂ ರಾಜ ಕುಮಾರರೂ ತಮ್ಮಲ್ಲಿರುವ ಧನ ಮುಂತಾದವುಗಳ ಮದದಿಂದ ಬಿಟ್ಟುಬಿಡುವರು. ಕೀಳು ಜಾತಿಯವರೂ ಬಡವರೂ ಒಳ್ಳೆಯ ಧರ್ಮವನ್ನು ಸ್ವೀಕರಿಸಿಕೊಂಡು ಅದನ್ನು ಆಚರಿಸುವರು. ಸಮುದ್ರವು ತನ್ನ ಎಲ್ಲೆಯನ್ನು ಮೀರಿರುವುದನ್ನು ಕಂಡ ಕಾರಣ ರಾಜ ಕುಮಾರರು ತಮ್ಮ ಮರ್ಯಾದೆಯನ್ನು ಮೀರಿ ಧನ ಮುಂತಾಗಿರುವ ವಿಷಯಗಳಲ್ಲಿ ದುರಾಶಾಭರಿತರಾಗಿ ವರ್ತಿಸುವರು. ಒಳ್ಳೆಯದಾಗಿರುವ ಸತ್ಯ, ಶುಚಿತ್ವ, ನಡತೆ– ಎಂಬವುಗಳಲ್ಲಿ ನ್ಯೂನತೆಯುಳ್ಳವರಾಗಿ ಅತ್ಯಂತ ದಯಾಹೀನರಾಗುವರು. ಬಿಳಿ ಕತ್ತಿ ಯನ್ನು ಕಟ್ಟಿದ ಚಿನ್ನದ ರಥವನ್ನು ಕಂಡುದರಿಂದ ಸಮ್ಯಗ್ದರ್ಶನ, ಸಮ್ಯಗ್‌ಜ್ಞಾನ, ಸಮ್ಯಕ್ಚಾರಿತ್ರಗಳಿಂದ ಪರಿಶುದ್ಧವೆನಿಸುವ ದಿಗಂಬರತ್ವದ ಲಾಂಛನವನ್ನೂ ಬಿಟ್ಟು ಒಳ್ಳೆಯ ತಪಸ್ಸನ್ನು ಸ್ವೀಕರಿಸಿಯೂ ಹಿರಿದಾದ ಪುರುಷ ಪ್ರಯತ್ನ, ಸತ್ಯ, ಮನಶ್ಶಕ್ತಿ, ವೀರ್ಯ ಎಂಬವುಗಳಿಂದ ಕೂಡಿದಂತಹ ಒಳ್ಳೆಯವರಾದ ತೀರ್ಥಂಕರರೆಂಬ ಶ್ರೇಷ್ಠ ದೇವತೆ ಗಳಿಂದಲೂ ಚಕ್ರವರ್ತಿಗಳಿಂದಲೂ ಚರಮ (ಕೊನೆಯ) ದೇಹಧಾರಿಗಳಿಂದಲೂ ಆಚರಿಸ ಲ್ಪಟ್ಟ ಒಳ್ಳೆಯದಾದ ಮೋಕ್ಷದ ದಾರಿಯನ್ನು ಹಿಡಿದಿದ್ದರೂ ಪಂಚೇಂದ್ರಿಯ ವಿಷಯಗಳ ಸುಖಗಳಲ್ಲಿ ಮೋಹಗೊಂಡವರಾಗಿ ಕೆಟ್ಟುಹೋಗುವರು. ಬಿಳಿ ಕತ್ತಿಯನ್ನು ರಾಜರು ಏರುವುದನ್ನು ಕಂಡುದರಿಂದ ಶ್ರೇಷ್ಠ ಕುಲದವರಿಗೆ ಕುಲಹೀನರೊಡನೆ ಮದುವೆಯ ನಂಟ

ಕುಲದವರ್ಗಳ್ಗೆ ಕುಲಜರಲ್ಲದವರೊಡನೆ ಮದುವೆಯೊಳ್ ತೊಟ್ಟ ನಣ್ಪುಗಳಕ್ಕುಮೆಂದಿಂತು ಪದಿನಾಱುಂ ಕಂಡ ಕನಸುಗಳ ಫಲಂಗಳಂ ಸಂಪ್ರತಿ ಚಂದ್ರಗುಪ್ತ ಮಹಾರಾಜಂಗೆ ಭದ್ರಬಾಹು ಭಟ್ಟಾರರ್ ಪೇೞ್ದು ಮತ್ತಮೀ ಕಲಿಯುಗ ಮಹಾರಾಜನ ಸ್ವರೂಪಮನಿಂತೆಂದು ಪೇೞಲ್ ತೊಡಗಿದರ್ :

ಹರಿಣಿ ॥ ಅನೃತವಚನೇ ನಿತ್ಯಾಭ್ಯಾಸಃ ಖಲೇಷು ವಿದಗ್ಧತಾ
ಗುಣವತಿ ಜನೇ ವೈರಬುದ್ಧಿಃ ಖಲೇಷ್ವತಿಗೌರವಂ
ಯತಿಷು ನಿಯತಂ ವಾಕ್ಪಾರುಷ್ಯಂ ವಿಪತ್ತಿಷು ಚ ಕ್ರಿಯಾ
ಕಲಿಯುಗ ಮಹಾರಾಜಸ್ಯೈತಾನಿ ರಾಜವಿಭೂತಯಃ ॥

ಕಾಲೇ ಸಂಪ್ರತಿವರ್ತತೇ ಕಲಿಯುಗೇ ಸತ್ಯಾ ನರಾ ದುರ್ಲಭಾ
ನಾನಾ ಚೋರಗಣಾ ಮುಷಂತಿ ಪೃಥಿವೀಮಾರ್ಯೋ ಜನಃ ಕ್ಷೀಯತೇ
ದೇವಾಶ್ಚ ಪ್ರಲಯಂಗತಾಃ ಕರಭವಲ್ಲೌಲ್ಯಂ ಗತಾಃ ಪಾರ್ಥಿವಾಃ
ಪುತ್ರಸ್ಯಾಪಿ ನ ವಿಶ್ವಸಂತಿ ಪಿತರಃ ಕಷ್ಟಂ ಯುಗಂ ವರ್ತತೇ ॥

ನಿರ್ವೀರ್ಯಾ ಪೃಥಿವೀ ಗತೌಷಧಿರಸಾ ನೀಚಾ ಮಹತ್ತ್ವಂ ಗತಾಃ
ರಾಜಾನೋಽರ್ಥಪರಾಃ ಕುಧರ್ಮನಿರತಾ ವಿಪ್ರಾ ವಿಕರ್ಮಸ್ಥಿತಾಃ
ಭಾರ್ಯಾ ಭರ್ತರಿ ನೈವಬದ್ಧಹೃದಯಾ ಪುತ್ರಾಃ ಪಿತೃದ್ವೇಷಿಣಃ
ಇತ್ಯೇವಂ ಸಮುಪಸ್ಥಿತೇ ಕಲಿಯುಗೇ ಧನ್ಯಾ ವನಂ ಪ್ರಸ್ಥಿತಾಃ ॥

ತನಗಳಾಗುವುವು. ಈ ರೀತಿಯಾಗಿ ಹದಿನಾರು ಕಂಡ ಕನಸುಗಳ ಫಲವನ್ನು ಸಂಪ್ರತಿ ಚಂದ್ರಗುಪ್ತ ಮಹಾರಾಜನಿಗೆ ಭದ್ರಬಾಹುಮುನಿಗಳು ಹೇಳಿದರು. ಆಮೇಲೆ ಈ ಕಲಿ ಯುಗವೆಂಬ ಮಹಾರಾಜನ ಸ್ವರೂಪವನ್ನು ಹೀಗೆ ಹೇಳತೊಡಗಿದರು–ಸುಳ್ಳಾಡುವುದರಲ್ಲಿ ಎಡೆಬಿಡದ ಅಭ್ಯಾಸ, ದುಷ್ಟರಲ್ಲಿ ಪಾಂಡಿತ್ಯ, ಗುಣವಂತರಾದ ಜನರಲ್ಲಿ ದ್ವೇಷಬುದ್ಧಿ, ದುಷ್ಟರಲ್ಲಿ ಬಹಳ ಮರ್ಯಾದೆ, ಯತಿಗಳಲ್ಲಿ ಮಾತಿನ ಬಿರುಸುತನ, ಆಪತ್ತು ಅಡಸಿ ದಾಗಲೂ ಕಾರ್ಯತತ್ಪರತೆ—ಇವೆಲ್ಲವೂ ಕಲಿಯುಗವೆಂಬ ಮಹಾರಾಜನ ರಾಜ ವೈಭವಗಳಾಗಿವೆ. ಈಗ ನಡೆಯುತ್ತಿರುವ ಕಲಿಯುಗದಲ್ಲಿ ಸತ್ಯವಂತರಾದ ಮನುಷ್ಯರು ದೊರಕಲಾರರು. ಹಲವು ಬಗೆಯ ಕಳ್ಳರ ಗುಂಪುಗಳು ಲೋಕವನ್ನೇ ಅಪಹರಿಸುವುವು. ಶ್ರೇಷ್ಠ ಜನರು ನಾಶಹೊಂದಿದ್ದಾರೆ. ದೇವತೆಗಳೂ ನಾಶವಾದಾರು. ರಾಜರು ಒಂಟೆ ಯಂತೆ ದುರಾಶೆಗೊಂಡಿದ್ದಾರೆ. ತಂದೆ ತಾಯಿಗಳು ಮಗನ ಮೇಲೂ ನಂಬಿಕೆಯಿಡರು. ಕಷ್ಟಕರವಾದ ಕಲಿಯುಗ ಹೀಗಿರುತ್ತದೆ. ಭೂಮಿ ಸತ್ವಹೀನವಾಗಿದೆ. ಔಷಧಿ (ಸಸ್ಯ ಗಳ) ರಸಗಳು ಇಲ್ಲವಾಗಿವೆ. ಕೀಳಾದ ಜನರು ಮಹತ್ವದ ಸ್ಥಾನವನ್ನು ಪಡೆದಿದ್ದಾರೆ. ರಾಜರು ಹಣದ ಆಸೆಯುಳ್ಳವರಾಗಿದ್ದಾರೆ. ಕೆಟ್ಟ ಧರ್ಮದಲ್ಲಿ ತತ್ಪರರಾದ ಬ್ರಾಹ್ಮಣರು ಅನ್ಯಾಯವಾದ ಕಾರ್ಯದಲ್ಲಿ ತೊಡಗಿದ್ದಾರೆ. ಹೆಂಡಿರು ಗಂಡನಲ್ಲಿ ಅನುರಾಗವುಳ್ಳ ಹೃದಯವುಳ್ಳವರಾಗಿಲ್ಲ. ಗಂಡುಮಕ್ಕಳು ತಂದೆಯಲ್ಲಿ ದ್ವೇಷವುಳ್ಳವರು. ಹೀಗಿರತಕ್ಕ ಕಲಿಯುಗದಲ್ಲಿ ಕಾಡಿಗೆ ಹೋಗಿ ನಿಂತವರು ಧನ್ಯಜೀವಿಗಳು. ಹೀಗೆ ಋಷಿಗಳು ಹೇಳಿ

ಎಂದಿಂತು ಭಟ್ಟಾರರ್ ಪೇೞೆ ಸಂಪ್ರತಿ ಚಂದ್ರಗುಪ್ತ ಮಹಾರಾಜಂ ಕೇಳ್ದು ಮತ್ತಂದಿನ ದಿವಸಂ ಕೞಿದೊಡೆ ಮಂಡಳಿಕರ್ ಜಿನದೀಕ್ಷೆಯಂ ಕೈಕೊಳ್ಳರೆಂಬುದಂ ಕೇಳ್ದಾದಮಾನುಂ ಭೀತನಾಗಿ ಸಿಂಹಸೇನನೆಂಬ ತನ್ನ ಪಿರಿಯ ಮಗಂಗೆ ರಾಜ್ಯಪಟ್ಟಂಗಟ್ಟಿ ಭದ್ರಬಾಹುಭಟ್ಟಾರರ ಪಕ್ಕದೆ ಪಲಂಬರರಸು ಮಕ್ಕಳ್ವೆರಸಾ ದಿವಸಮೆ ತಪಂಬಟ್ಟಂ ಮತ್ತಿತ್ತ ಮಧ್ಯದೇಶದೊಳಿರ್ದ ರಿಸಿಯರ್ಕಳ್ಗೆಲ್ಲಂ ಬೞಿಯಟ್ಟಿ ಬರಿಸಿ ಭಟ್ಟಾರರಿಂತೆಂದರ್ ಪನ್ನೆರಡು ವರ್ಷಂಬರೆಗಮೀ ನಾಡೊಳನಾವೃಷ್ಟಿಯಾಗಿ ಮಹಾರೌದ್ರ ಪಸವಕ್ಕುಂ ಮಧ್ಯಮದೇಶಮೆಲ್ಲಂ ಪಾೞಕ್ಕುಮೀ ನಾಡೊಳಿರ್ದ ರಿಸಿಯರ್ಕಳ್ಗೆ ಬ್ರತಭಂಗಮಪ್ಪುದದಱಿಂ ಪೋಪಂ ದಕ್ಷಿಣಾಪಥಕ್ಕೆಂದಾಚಾರ್ಯರ್ಕಳ್ ಸಹಿತಮಿಚ್ಛಾಸಿರ ರಿಸಿ ಸಮುದಾಯಮುಂ ಸಂಪ್ರತಿ ಚಂದ್ರಗುಪ್ತ ಮುನಿಯುಂ ಬೆರಸು ದಕ್ಷಿಣಾಪಥಕ್ಕೆ ಪೋದರಿತ್ತ ರಾಮಿಲಾಚಾರ್ಯರುಂ ಸ್ಥೂಲಾಚಾರ್ಯರುಂ ಸ್ಥೂಲಭದ್ರಾಚಾರ್ಯರುಮಿಂತೀ ಮೂವರಾಚಾರ್ಯರುಂ ಭಟಾರರೊಡನೆ ಪೋಗಲೊಲ್ಲದೆ ತಂತಮ್ಮ ಋಷಿಸಮುದಾಯಂ ಬೆರಸು ಸಿಂಧುವಿಷಯಕ್ಕೆ ಪೋದರಿತ್ತ ಭಟ್ಟಾರರುಂ ಪಿರಿದು ಋಷಿಸಮುದಾಯಂ ಬೆರಸು ಗ್ರಾಮನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ಕೞಿದು ಪೋಗಿ ಕಟ್ಬಪ್ಪುನಾಡ ನೆಯ್ದಿ ಪೋಗುತ್ತಂ ಭದ್ರಬಾಹು ಭಟ್ಟಾರರ್ ತಮ್ಮಾಯುಷ್ಯಪ್ರಮಾಣಮಱಿದಾಮಿಲ್ಲಿ

ದಾಗ ಸಂಪ್ರತಿ ಚಂದ್ರಗುಪ್ತ ಮಹಾರಾಜನು ಕೇಳಿ ಅಂದಿನ ದಿವಸ ದಾಟಿದರೆ ಅವನ ಸಾಮಂತರು ಜಿನದೀಕ್ಷೆಯನ್ನು ಸ್ವೀಕಾರ ಮಾಡಲಿಕ್ಕಿಲ್ಲವೆಂಬುದನ್ನು ತಿಳಿದು ಅತ್ಯಂತ ಭಯಪಟ್ಟನು. ಸಿಂಹಸೇನನೆಂಬ ತನ್ನ ಹಿರಿಯ ಮಗನಿಗೆ ರಾಜ್ಯಾಧಿಕಾರ ಕೊಟ್ಟು ಭದ್ರಬಾಹುಸ್ವಾಮಿಗಳ ಬಳಿ ಹಲವರು ರಾಜಕುಮಾರರೊಟ್ಟಿಗೆ ತಪಸ್ಸನ್ನು ಕೈಗೊಂಡನು. ಇತ್ತ ಮಧ್ಯದೇಶದಲ್ಲಿದ್ದ ಋಷಿಗಳೆಲ್ಲರ ಬಳಿಗೂ ಜನ ಕಳುಹಿಸಿ ಅವರನ್ನು ಬರಿಸಿ ಭದ್ರಬಾಹುಮುನಿಗಳು ಹೀಗೆಂದರು—"ಈ ನಾಡಿನಲ್ಲಿ ಹನ್ನೆರಡು ವರ್ಷಗಳವರೆಗೆ ಮಳೆಬಾರದ ಭಯಂಕರವಾದ ಕ್ಷಾಮವುಂಟಾಗುವುದು. ಮಧ್ಯದೇಶವೆಲ್ಲ ಹಾಳಾಗುವುದು. ಈ ನಾಡಿನಲ್ಲಿದ್ದ ಋಷಿಗಳ ವ್ರತ ಕೆಟ್ಟುಹೋಗುವುದು. ಆದುದರಿಂದ ದಕ್ಷಿಣ ಭಾರತದ ಕಡೆಗೆ ಹೋಗೋಣ", ಹೀಗೆ ಹೇಳಿ ಆಚಾರ್ಯರುಗಳೊಂದಿಗೆ ಎಂಡುಸಾವಿರ ಋಷಿಗಳ ಸಮೂಹವನ್ನೂ ಸಂಪ್ರತಿ ಚಂದ್ರಗುಪ್ತ ಮುನಿಯನ್ನೂ ಕೂಡಿಕೊಂಡು ದಕ್ಷಿಣದೇಶಕ್ಕೆ ತೆರಳಿದರು. ಇತ್ತ ರಾಮಿಲಾಚಾರ್ಯ, ಸ್ಥೂಲಾಚಾರ್ಯ, ಸ್ಥೂಲಭದ್ರಾಚಾರ್ಯ–ಈ ಮೂವರು ಆಚಾರ್ಯರು ಭದ್ರಬಾಹು ಮುನಿಗಳೊಂದಿಗೆ ಹೋಗಲು ಒಪ್ಪಲಿಲ್ಲ. ಅವರು ತಮ್ಮ ತಮ್ಮ ಋಷಿವೃಂದದೊಡನೆ ಸಿಂಧುದೇಶಕ್ಕೆ ಹೋದರು. ಭದ್ರಬಾಹು ಋಷಿಗಳು ಇತ್ತ ದೊಡ್ಡದಾದ ಋಷಿ ಸಂದೋಹದೊಡನೆ ಗ್ರಾಮ-ನಗರ-ಖೇಡ-ಖರ್ವಡ-ಮಡಂಬ-ಪಟ್ಟಣ-ದ್ರೋಣಾಮುಖಗಳೆಂಬ ಭೂಭಾಗಗಳನ್ನು ದಾಟಿ, ಕಳ್ಬಪ್ಪು ಎಂಬ ಹೆಸರುಳ್ಳ ಶ್ರವಣಬೆಳ್ಗೊಳಕ್ಕೆ ಬಂದರು. ತಮ್ಮ ಆಯುಷ್ಯವೆಷ್ಟಿದೆಯೆಂಬುದನ್ನು ತಿಳಿದ ಭದ್ರಬಾಹು ಋಷಿಗಳು—"ನಾವು ಇಲ್ಲಿ ಸಂನ್ಯಾಸ ಕೈಗೊಳ್ಳುತ್ತೇವೆ. ನೀವೆಲ್ಲರೂ ಹೋಗಿ" ಎಂದು

ಸಂನ್ಯಸನಂ ಗೆಯ್ವಪ್ಪೆವು ನೀಮೆಲ್ಲಂ ಪೋಗಿಮೆಂದು ತಮ್ಮ ಪಿರಿಯ ಶಿಷ್ಯರ್ ದಶಪೂರ್ವ ಧಾರಿಗಳ್ ವಿಶಾಖಾಚಾರ್ಯರೆಂಬೊರಲ್ಲಿಂ ಬಳಿಯುಮಾರ್ಯ ಸುಹಸ್ತಿಗಳುಮರಭದ್ರರುಂ ಸುಭದ್ರಮಿತ್ರರುಂ ಮಹಾಗಿರಿಯುಂ ಸುಮತಿಯುಂ ಮಹಾಮತಿಯುಂ ವಿಶಾಖಿನಂದಿಯು ಮೆಂದಿವರ್ಗಳೆಲ್ಲರುಮನಾಚಾರ್ಯರ್ ಮಾಡಿ ದ್ರವಿಳವಿಷಯಕ್ಕೆ ಪೋಗಿಮೆಂದು ವಿಶಾಖಾಚಾರ್ಯ ರೊಡನೆ ಎಣ್ಛಾಸಿರ್ವರ್ ರಿಸಿಯರನಟ್ಟಿದರ್ ಚಂದ್ರಗುಪ್ತಮುನಿಯುಮನವರೊಡನೆ ಪೋಗಿ ಮೆಂದು ಭಟ್ಟಾರರ್ ಕೀಜಿ ಪೋಗಲ್ವೇಳ್ದೊಡಾಮುಂ ಪೋಗಲೊಲ್ಲೆವು ನಿಮ್ಮಡಿಗಳ್ಗೆ ವಿನಯಂ ಗೆಯ್ಯುತ್ತಮಿರ್ದಪ್ಪೆಮೆಂದು ಪೋಗಲೊಲ್ಲದೆ ಪಕ್ಕದಿರ್ದರುಳಿದರೆಲ್ಲಂ ಪೋದರಿತ್ತ ಭದ್ರಬಾಹು ಭಟ್ಟಾರರ್ ಕಳ್ಬಪ್ಪುನಾಡಡವಿಯ ಬೆಟ್ಟದ ಮೇಗಣೇಕಸಿಳೆಯುಮೇಗಿರ್ದು ಚತುರ್ವಿಧ ಮಪ್ಪಾಹಾರಕ್ಕಂ ಶರೀರಕ್ಕಂ ಜಾವಜ್ಜೀವಂ ನಿವೃತ್ತಿಪೂರ್ವಕಂ ಸಂನ್ಯಸನಂ ಗೆಯ್ದರ್ ಇತ್ತ ಚಂದ್ರಗುಪ್ತಮುನಿಯುಮುಪ್ಪೋಪವಾಸಂಗೆಯ್ದಿರ್ದೊರಂ ಭಟ್ಟಾರರೆಂದರಾಮುಂ ನೋಂತಿ ರ್ದೆವು ನೀಮುಂ ಚರಿಗೆವೋಗುವುದಲ್ತೆಯೆಂದೊಡೆ ಭಟ್ಟಾರಾ ಊರಿಲ್ಲ ಕೇರಿಯುಮಿಲ್ಲೀಯಡವಿಯೊಳೆ ಲ್ಲಿಗೆ ಚರಿಗೆವುಗುವುದೆಂದೊಡೆ ಭಟ್ಟಾರರೆಂದರ್ ಕಾಂತಾರಭೈಕ್ಷಮೆಂಬುದಾಗಮದೊಳ್ ಪೇಳ್ದು

ಹೇಳಿ, ತಮ್ಮ ಹಿರಿಯ ಶಿಷ್ಯರೂ ದಶಪೂರ್ವಗಳನ್ನರಿತವರೂ ಆದ ವಿಶಾಖಾಚಾರ್ಯರೆಂಬವ ರನ್ನಲ್ಲದೆ, ಶ್ರೇಷ್ಠರಾದ ಸುಹಸ್ತಿಗಳು, ಅರಭದ್ರರು, ಸುಭದ್ರಮಿತ್ರರು, ಮಹಾಗಿರಿ, ಸುಮತಿ, ಮಹಾಮತಿ, ವಿಶಾಖನಂದಿ ಎಂಬ ಇವರೆಲ್ಲರನ್ನೂ ಆಚಾರ್ಯರನ್ನಾಗಿ ಮಾಡಿ, "ನೀವೆಲ್ಲ ದ್ರಾವಿಡದೇಶಕ್ಕೆ (ತಮಿಳುನಾಡಿಗೆ) ಹೋಗಿ" ಎಂದು ವಿಶಾಖಾಚಾರ್ಯರೊಂದಿಗೆ ಎಂಟು ಸಾವಿರ ಮಂದಿ ಋಷಿಗಳನ್ನು ಕಳುಹಿಸಿದರು. ಚಂದ್ರಗುಪ್ತಮುನಿಯೊಡನೆ "ನೀವೂ ಅವರೊಡನೆ ಹೋಗಿ" ಎಂದು ಋಷಿಗಳು ಒತ್ತಾಯಮಾಡಿ ಹೋಗಲು ಹೇಳಿ ದಾಗ ಅವರು "ನಾವು ಹೋಗಲೊಲ್ಲೆವು. ನಿಮ್ಮ ಸೇವೆಮಾಡುತ್ತ ಇರುತ್ತೇವೆ" ಎಂದು, ಹೋಗಲು ಒಪ್ಪದೆ, ಜೊತೆಯಲ್ಲೇ ಇದ್ದರು. ಉಳಿದವರೆಲ್ಲ ಹೋದರು. ಇತ್ತ ಭದ್ರ ಬಾಹುಋಷಿಗಳು ಕಳ್ಬಪ್ಪು (ಕಟವಪ್ರ=ಶ್ರವಣಬೆಳ್ಗೊಳ) ನಾಡಿನ ಕಾಡು ಬೆಟ್ಟದ ಮೇಲಿನ ಒಂದು ಬಂಡೆಗಲ್ಲಿನ ಮೇಲೆ ಇದ್ದುಕೊಂಡು ನಾಲ್ಕು ವಿಧದ ಆಹಾರಕ್ಕೂ ಶರೀರಕ್ಕೂ ಜೀವಿಸಿರುವ ತನಕವೂ ಪರಿಹಾರಮಾಡಿ ಸಂನ್ಯಾಸನವನ್ನು ಕೈಗೊಂಡರು. ಇತ್ತ ಚಂದ್ರಗುಪ್ತ ಋಷಿಗಳು ಎಂಟು ದಿನಗಳ ಉಪವಾಸ ಮಾಡಿದರು. ಅವರನ್ನು ಕುರಿತು ಭದ್ರಬಾಹು ಋಷಿಗಳು—"ನಾವೂ ವ್ರತವನ್ನು ಧರಿಸಿದ್ದೇವೆ. ನೀವು ಭಿಕ್ಷಕ್ಕೆ ಹೋಗುವುದು ಒಳ್ಳೆಯದಲ್ಲವೆ ?" ಎಂದರು. ಅದಕ್ಕೆ ಉತ್ತರವಾಗಿ—"ಪೂಜ್ಯರೇ, ಇಲ್ಲಿ ಊರೂ ಇಲ್ಲ, ಬೀದಿಯೂ ಇಲ್ಲ. ಈ ಕಾಡಿನಲ್ಲಿ ಎಲ್ಲಿ ಭಿಕ್ಷೆಗೆ ಹೋಗಲಿ ?" ಎಂದರು. ಆಗ ಋಷಿಗಳು—"ಶಾಸ್ತ್ರದಲ್ಲಿ ಕಾಂತಾರಭೈಕ್ಷ (ಕಾಡಿನಲ್ಲಿ ಭಿಕ್ಷೆ ಬೇಡು ವುದು) ಎಂಬುದನ್ನು ಹೇಳಿದೆ. ಯಾರಾದರೂ ದಾರಿ ಹೋಗುವವರು ಬೀಡುಬಿಟ್ಟರು

**ದಾರಾನುಂ ಬಟ್ಟೆವೋಪರ್ ಬೀಡಂ ಬಿಟ್ಟಿರ್ದರ್ ನಿಱಿಸುವರಪ್ಪುದಱಿಂದೆ ಚರಿಗೆವುಗುವುದೆಂದೊಡೆ ಅಂತೆಗೆಯ್ವೆನೆಂದು ದೇವರಂ ಬಂದಿಸಿ ಚರಿಗೆವೊಕ್ಕಡವಿಯುಂ ತೊೞಲ್ವಲ್ಲಿಯೊಂದು ಮರದ ಪೊೞಲೊಳಿರ್ದು ಮಾಣಿಕದ ಮುತ್ತಿನ ಪಿಂಡುಗಂಕಣಮುಂ ತೊಟ್ಟಕೈಯಿಂದಂ ಪೊನ್ನಸಟ್ಟುಗಮುಂ ತೀವಿ ಭೈಕ್ಷಮುಂ ಪಿಡಿಯೆಂದು ನೀಡಿದ ಕೈಯನಿತನೆ ಕಂಡು ತೊೞಲ್ದಲಾಭವಾಗಿ ತಮ್ಮಾವಾಸಕ್ಕೆ ಪೋದೊಡೆ ಭಟ್ಟಾರರ್ ನಿಲೆವಟ್ಟುದೆಯೆಂದು ಬೆಸಗೊಂಡೊಡವರುಂ ತಮ್ಮ ಕಂಡುದಂ ಪೇೞ್ದಡೆ ಬೇಸಱದೆ ದಿವಸಕ್ಕಂ ಚರಿಗೆವೊಗುವುದೆಂದು ಭಟ್ಟಾರರ್ ಕಲ್ಪಿಸಿದೊಡಂ ತೆಗೆಯ್ವೆಮೆಂದು ಮಱುದಿವಸಂ ಚರಿಗೆವೊಕ್ಕಡವಿಯುಂ ತೊೞಲ್ವಲ್ಲಿಯೊಂದು ಮರದ ಕೆೞಗೆ ಪೊನ್ನ ಮಡಕೆಯೊಳ್ ಬೋನಮನೊಡ್ಡಿ ನೆಱೆಯೆ ತೊಟ್ಟುಟ್ಟು ಮಂಗಳವಸದನಂಗೊಂಡು ದಿವ್ಯಸ್ತ್ರೀಬಂದು ನಿಱಿಸಿದೊಡೆ ಇಂತೆಂದರಬ್ಬಾ ನೀನೊರ್ವಳೆಯೆ ಪೆಱರಾರುಮಿಲ್ಲಿಂತು ರಿಸಿಯರ್ಕಳ್ಗೆ ನಿಲಲಾಗದೆಂದು ಪೇೞ್ದು ತಮ್ಮಿರ್ದೆಡೆಗೆವೋದೊಡೆ ಭಟ್ಟಾರರಿಂತೆಂದರ್ ನಿಲೆವಟ್ಟುದೆ ಎಂದು ಬೆಸಗೊಂಡೊಡವರಿಂತೆಂದರ್ ಒರ್ವಳ್ ದಿವ್ಯಸ್ತ್ರೀ ಸರ್ವಾಭರಣ ಭೂಷಿತೆಯೊಂದು ಮರದ ಕೆೞಗೆ ಬೋನಮನೊಡ್ಡಿರ್ದಿದಿರಂ ಬಂದು ನಿಱಿಸಿದೊಡೊರ್ವಳೆ ಪೆಱರಾರುಮಿಲ್ಲೆಂದೆನೆ**

ತ್ತಾರೆ. ಅವರು ಊಟಕ್ಕಾಗಿ ನಿಲ್ಲಿಸುತ್ತಾರೆ–ಆದುದರಿಂದ ಭಿಕ್ಷೆಗೆ ಹೋಗಬಹುದು" ಎಂದರು. ಚಂದ್ರಗುಪ್ತ ಮುನಿಗಳು 'ಹಾಗೆಯೇ ಮಾಡುವೆನು' ಎಂದುಕೊಂಡು ದೇವರನ್ನು ವಂದಿಸಿ ಭಿಕ್ಷೆಗೆಂದು ಕಾಡನ್ನು ಸುತ್ತಾಡುವಾಗ, ಒಂದು ಮರದ ಪೊಟ್ಟರೆಯೊಳಗಿದ್ದುಕೊಂಡು ಮಾಣಿಕ ಮುತ್ತುಗಳ ಹಿಂಡುಬಳೆಯನ್ನು ಧರಿಸಿದ ಕೈಯಿಂದ ಚಿನ್ನದ ಸೌಟಿನಲ್ಲಿ ತುಂಬಿದ ಭಿಕ್ಷೆಯನ್ನು 'ತೆಗೆದುಕೋ' ಎಂದು ನೀಡಿದ ಕೈಯನ್ನು ಮಾತ್ರವೇ ಕಂಡು, ಸುತ್ತಾಡಿ ಏನೂ ಭಿಕ್ಷೆ ಪಡೆಯದೆ, ತಮ್ಮ ವಾಸದ ಕಡೆಗೆ ಹೋದರು. ಆಗ ಭದ್ರಬಾಹು ಋಷಿಗಳು "ನಿಲ್ಲಿಸಲ್ಪಟ್ಟರೆ (ಭಿಕ್ಷಕ್ಕೆ ಯಾರಾದರೂ ನಿಲ್ಲಿಸಿದರೆ) ?" ಎಂದು ಕೇಳಿದರು. ಆಗ ಅವರು ತಾವು ಕಂಡುದನ್ನು ಹೇಳಲು, ಪ್ರತಿದಿವಸವೂ ಬೇಸರಪಡದೆ ಭಿಕ್ಷಕ್ಕೆ ಹೋಗುವಂತೆ ಋಷಿಗಳು ಹೇಳಿದರು. "ಹಾಗೆಯೇ ಮಾಡೋಣ" ಎಂದು ಚಂದ್ರಗುಪ್ತ ಮುನಿಗಳು ಮರುದಿವಸ ಭಿಕ್ಷೆಗೆ ಹೋಗಿ ಕಾಡನ್ನೆಲ್ಲ ಸುತ್ತಾಡಿದಾಗ ಓರ್ವ ದೇವತಾ ಸ್ತ್ರೀ ಕಾಣಿಸಿದಳು. ಆಕೆ ಒಂದು ಮರದ ಕೆಳಗೆ ಚಿನ್ನದ ಪಾತ್ರೆಯಲ್ಲಿ ಭೋಜನವನ್ನು ಸಿದ್ಧಪಡಿಸಿ, ಪರಿಪೂರ್ಣವಾಗಿ ಉಡಿಗೆ ತೊಡಿಗೆಗಳನ್ನು ಧರಿಸಿ ಮಂಗಳಾಲಂಕಾರದಿಂದಿದ್ದಳು. ಆಕೆ ಊಟಕ್ಕೆ ನಿಲ್ಲುವಂತೆ ಹೇಳಿದಾಗ, ಚಂದ್ರಗುಪ್ತ ಮುನಿಗಳು–"ಅಮ್ಮಾ, ನೀನು ಒಬ್ಬಳೇ ಇರುವೆಯಾ ? ಬೇರೆ ಯಾರೂ ಇಲ್ಲವೆ ? ಹೀಗಿದ್ದರೆ (ನಮ್ಮಂತಹ) ಋಷಿಗಳಿಗೆ ನಿಲ್ಲಲು ಸಾಧ್ಯವಿಲ್ಲ" ಎಂದು ಹೇಳಿ ತಾವು ಇದ್ದಲ್ಲಿಗೆ ತೆರಳಿದರು. ಭದ್ರಬಾಹು ಋಷಿಗಳು–"ಭಿಕ್ಷಕ್ಕೆ ಯಾರಾದರೂ ನಿಲ್ಲಿಸಿದರೆ ?" ಎಂದು ಕೇಳಿದರು. ಆಗ ಅವರು ಹೀಗೆಂದರು–"ಒಬ್ಬಳು ದೇವತಾಸ್ತ್ರೀ ಎಲ್ಲಾ ಆಭರಣಗಳಿಂದಲೂ ಅಲಂಕರಿಸಿಕೊಂಡು ಒಂದು ಮರದ ಕೆಳಗೆ ಊಟವನ್ನು

ನಿಲ್ಲದೆ ಬಂದೆಮೆಂದೊಡೊಳ್ಳಿಕೆಯ್ದಿರೆಂದೊರಿಂತುಪತ್ತುಪವಾಸಂಗೆಯ್ದು ಪನ್ನೊಂದನೆಯ ದಿವಸ ದಂದು ಚರಿಗೆಪೊಕ್ಕಡವಿಯುಂ ತೊೞಲ್ವನ್ನೆಗಂ ಪಿರಿದೊಂದು ಪೊೞಲುಂ ಧವಳಾರಂಗಳುಂ ನೆಲೆಯ ಮಾಡಂಗಳುಂ ಸೂಳೆಗೇರಿಗಳುಂ ದೇವಾಲಯಂಗಳುಮಾನೆ ಕುದುರೆಗಳುಂ ಮಾನಸರ ಬರವುಮಂ ಪೋಗುಮುಂ ಕಂಡಿನಿತು ದಿವಸಮೀ ಮರಗಳ ಗಿಡುಗಳ ಪೊದಱುಗಳ ಮಱೆಗಳೊಳೀ ಪೊೞಲಂ ಕಂಡೆಮಿಲ್ಲೆಂದು ಮನದೊಳ್ ಬಗೆದು ಪೊೞಲೊಳಗೆ ಚರಿಗೆಪೊಕ್ಕಾಗಳೊರ್ವಳ್ ದಿವ್ಯ ಸ್ತ್ರೀ ಪರಿವಾರಸಹಿತಮಿದಿರಂ ಬಂದು ನಿಱಿಸಿ ತನ್ನ ಮಾಡಕ್ಕೊಡಗೊಂಡು ಪೋಗಿ ಕಾಲಂ ಕರ್ಚಿ ಯರ್ಚಿಸಿ ಗುರುಭಕ್ತಿಗೆಯ್ದು ವಂದಿಸಿಯಾದಮಾನುಂ ಭಕ್ತಿಯಿಂದಂ ದಿವ್ಯಾಹಾರಮಂ ಮಗುೞೆ ಮಗುೞೆ ಬಡ್ಡಿಸೆ ಚರಿಗೆಮಾಡಿ ಪರಸಿ ತಮ್ಮಾವಾಸಕ್ಕೆ ಪೋದೊಡೆ ಭಟ್ಟಾರರ್ ನಿಱಿಪಟ್ಟುದೆ ಯೆಂದು ಬೆಸಗೊಂಡೊಡೆ ನಿಱಿಪಟ್ಟುದೆಂದೊಡೆಲ್ಲಿ ನಿಂದಿರೆಂದು ಬೆಸಗೊಂಡೊಡಿಂತೆಂದರ್ ಭಟ್ಟಾ ರಾ ಇನಿತು ದಿವಸಂ ಮರಂಗಳ ಪೊದಱುಗಳ ಮಱೆಗಳೊಳೀ ಪೊೞಲಂ ಕಂಡೆಮಿಲ್ಲಿ:ದಿನಿಸಾನುಂ

ಸಿದ್ಧಮಾಡಿದವಳಾಗಿ ನನ್ನ ಎದುರಿಗೆ ಬಂದು ಊಟಕ್ಕೆ ನಿಲ್ಲುವಂತೆ ಹೇಳಿದಳು. ಆಕೆ ಒಬ್ಬಳೇ ಇದ್ದುದು, ಬೇರೆ ಯಾರು ಇಲ್ಲವೆಂದು ಆಕೆ ಹೇಳಿದ್ದರಿಂದ ನಾನು ನಿಲ್ಲಲಿಲ್ಲ, ಬಂದುಬಿಟ್ಟೆನು" ಎಂದು ಹೇಳಿದರು. ನೀವು ಒಳ್ಳೆಯದು ಮಾಡಿದಿರಿ– ಎಂದು ಋಷಿಗಳು ಹೇಳಿದರು. ಹೀಗೆ ಹತ್ತು ದಿನಗಳ ಉಪವಾಸವನ್ನು ಮಾಡಿ ಹನ್ನೊಂದನೆಯ ದಿವಸ ದಂದು ಭಿಕ್ಷೆಗೆ ಹೋಗಿ ಕಾಡನ್ನೆಲ್ಲ ಸುತ್ತಾಡುತ್ತಿರಲು, ಒಂದು ದೊಡ್ಡ ಪಟ್ಟಣ ಕಾಣಿಸಿತು. ಅಲ್ಲಿ ಸುಣ್ಣ ಬಳಿದು ಬಿಳುಪೇರಿದ ಮನೆಗಳೂ ಉಪ್ಪರಿಗೆ ಮನೆಗಳೂ ವೇಶ್ಯಾವಾಟಿಗಳೂ ದೇವಾಲಯಗಳೂ ಆನೆಕುದುರೆಗಳೂ ಮನುಷ್ಯರ ಬರುವಿಕೆ ಹೋಗುವಿಕೆಗಳೂ ಕಾಣಿಸಿದವು. ಇವನ್ನೆಲ್ಲ ಕಂಡು, "ಇಷ್ಟು ದಿವಸವೂ ಈ ಮರಗಿಡ ಪೊದರುಗಳ ಮರೆಯಲ್ಲಿದ್ದ ಈ ಪಟ್ಟಣವನ್ನು ನಾವು ಕಂಡೇ ಇಲ್ಲ" ಎಂದು ಮನಸ್ಸಿನಲ್ಲಿ ಭಾವಿಸಿ, ಆ ಪಟ್ಟಣದಲ್ಲಿ ಭಿಕ್ಷೆ ಪಡೆಯಲು ಹೋದರು. ಆಗ ಒಬ್ಬಳು ದೇವತಾಸ್ತ್ರೀ ತನ್ನ ಪರಿವಾರದೊಡನೆ ಎದುರಿಗೆ ಬಂದು ಅವರನ್ನು ಊಟಕ್ಕೆ ನಿಲ್ಲಿಸಿ, ತನ್ನ ಮನೆಗೆ ಕರೆದುಕೊಂಡು ಹೋಗಿ ಕಾಲನ್ನು ತೊಳೆದು ಪೂಜಿಸಿ ಗುರುಭಕ್ತಿಯನ್ನು ಮಾಡಿದಳು. ನಮಸ್ಕರಿಸಿ ಅತಿಶಯವಾದ ಭಕ್ತಿಯಿಂದ ದಿವ್ಯವಾದ ಆಹಾರವನ್ನು ಮತ್ತೂ ಮತ್ತೂ ಬಡಿಸಿದಳು. ಚಂದ್ರಗುಪ್ತ ಮುನಿಗಳು ಊಟಮಾಡಿ ತಮ್ಮ ವಾಸಸ್ಥಳಕ್ಕೆ ತೆರಳಿದಾಗ ಭದ್ರಬಾಹು ಋಷಿಗಳು–"ಯಾರಾದರೂ ಊಟಕ್ಕೆ ನಿಲ್ಲಿಸಿದರೆ ?" ಎಂದು ಕೇಳಲು "ನಿಲ್ಲಿಸಿದರು" ಎಂದು ಉತ್ತರ ಕೊಟ್ಟಾಗ, "ಎಲ್ಲಿ ಊಟಕ್ಕೆ ನಿಂತಿರಿ ?" ಎಂದು ಕೇಳಿದರು. ಆಗ ಚಂದ್ರಗುಪ್ತ ಮುನಿಗಳು–"ಪೂಜ್ಯರೇ, ಇಷ್ಟು ದಿವಸವೂ ಮರಗಳ ಮತ್ತು ಪೊದರುಗಳ ಮರೆಯಲ್ಲಿದ್ದ ಈ ಪಟ್ಟಣವನ್ನು ನಾನು ಕಂಡಿಲ್ಲ. ಆದರೆ ಇಂದು ಸ್ವಲ್ಪ ಹೆಚ್ಚಾಗಿ ಸುತ್ತಾಡಿದಾಗ ದೊಡ್ಡದೊಂದು ಪಟ್ಟಣವನ್ನು ಕಂಡು ಭಿಕ್ಷೆಗಾಗಿ

ತಿಣ್ಣಂ ತೊಟಲ್ವಲ್ಲಿ ಪಿರಿದೊಂದು ಪೊಟಿಲಂ ಕಂಡು ಚರಿಗೆಪೊಕ್ಕೊಡೊರ್ವಳ್ ದಿವ್ಯಸ್ತ್ರೀ ಪರಿವಾರಸಹಿತಮಿದಿರಂ ಬಂದು ನಿಜಿಿಸಿ ತನ್ನ ಮನೆಗೊಂಡುಪೋಗಿ ಕಾಲಂ ಕರ್ಚಿಯರ್ಚಿಸಿ ಗುರುಭಕ್ತಿಗೆಯ್ದು ವಂದಿಸಿಯಾದಮಾನಂ ಭಕ್ತಿಯಿಂದಂ ದಿವ್ಯಾಹಾರಂಗಳಂ ಬಡ್ಡಿಸೆ ಶ್ರಮಂ ಪೋಗಿ ಚರಿಗೆಮಾಡಿ ಪರಸಿ ಬಂದೆನೆಂದು ಭಟ್ಟಾರರ್ಗೆ ಪೇೞ್ದೊಡೊಳ್ಳಿತ್ತಾಯಿತ್ತೆಂದು ಸಂತೋಸಂಬಟ್ಟಿರ್ದರಿಂತು ದಿವಸಕ್ಕಂ ಪೊಟಲ್ಗೆ ಪೋಗಿ ಚರಿಗೆ ಮಾಡುವರಿತ್ತ ಭದ್ರಬಾಹು ಬಟ್ಟಾರರ್ ಮುನ್ನೆ ತಮ್ಮ ತಪಂಗೆಯ್ಯಂದೆಲ್ಲಾ ಕಾಲಮುಮವಮೋದರ್ಯ ಚರಿಗೆಮಾಡಿ ಪಸಿವಂ ಸೈರಿಸಿ ತಮ್ಮ ಮೆಯ್ಯಂ ಕ್ಷಯಕ್ಕೆತಂದು ಸಂನ್ಯಸನಂಗೆಯ್ದು ಪಲವು ದಿವಸದಿಂದಂ ಪಸಿವುಂ ನೀರೞ್ಕೆಯುಮಂ ಸೈರಿಸಿ ಶುಭಪರಿಣಾಮದಿಂದಂ ಸಮ್ಯಗ್ದರ್ಶನ ಜ್ಞಾನ ಚಾರಿತ್ರಂಗಳಂ ಸಾಧಿಸಿ ಮುಡಿಪಿ ಬ್ರಹ್ಮಕಲ್ಪದೊಳ್ ಪತ್ತು ಸಾಗರೋಪಮಾಯುಷ್ಯಮನೊಡೆಯೊಂ ಅಮಿತಕಾಂತಿಯೆಂಬೊಂ ದೇವನಾಗಿ ಪುಟ್ಟಿದೊಂ ಚಂದ್ರಗುಪ್ತ ಮುನಿಯುಂ ಭಟ್ಟಾರರ ನಿಸಿದಿಗೆಯಂ ಬಂದಿಸುತ್ತಮಾ ದೇವತೆ ಬೆಸಕೆಯ್ಯೆ ಚರಿಗೆಮಾಡಿ ತಪಂಗೆಯ್ಯುತ್ತುಂ ಪನ್ನೆರಡು ವರಷಂಬರೆಗಮಿಂತಿರ್ಪನ್ನೆಗಮಿತ್ತ ತಿಮುಳನಾಡಿಗೆ ಪೋದ ಋಷಿಸಮುದಾಯಮೆಲ್ಲಂ ಪನ್ನೆರಡು ವರುಷಂಬರೆಗಂ

ಹೋದೆನು. ಆಗ ಓರ್ವ ದೇವತಾಸ್ತ್ರೀ ತನ್ನ ಎದುರಿಗೆ ಪರಿವಾರದೊಡನೆ ಬಂದು ಊಟಕ್ಕೆ ನಿಲ್ಲಲು ಹೇಳಿ ತನ್ನ ಮನೆಗೆ ಕರೆದುಕೊಂಡು ಹೋದಳು. ಅಲ್ಲಿ ನನ್ನ ಕಾಲು ತೊಳೆದು, ಸತ್ಕರಿಸಿ ಗುರುಭಕ್ತಿಯಿಂದ ನಮಸ್ಕರಿಸಿ ಅತಿಶಯವಾದ ಭಕ್ತಿಯಿಂದ ದಿವ್ಯವಾದ ಭೋಜನವನ್ನು ಬಡಿಸಿದಳು. ನಾನು ನನ್ನ ಶ್ರಮವೆಲ್ಲ ಹೋಗುವ ಹಾಗೆ ಊಟಮಾಡಿ ಆಶೀರ್ವದಿಸಿ ಬಂದೆನು" ಎಂದು ಹೇಳಿದರು. ಭದ್ರಬಾಹುಗಳು 'ಒಳ್ಳೆಯದಾಯಿತು' ಎಂದು ಹೇಳಿ ಸಂತೋಷಗೊಂಡು ಇದ್ದರು. ಹೀಗೆ ಪ್ರತಿದಿವಸವೂ ಪಟ್ಟಣಕ್ಕೆ ಹೋಗಿ ಊಟಮಾಡುತ್ತಿದ್ದರು. ಇತ್ತ ಭದ್ರಬಾಹು ಋಷಿಗಳು ಹಿಂದೆ ತಾವು ತಪಸ್ಸು ಮಾಡುತ್ತಿದ್ದ ಎಲ್ಲಾ ಕಾಲದಲ್ಲಿಯೂ ಅವಮೋದರ್ಯ (ಹೊಟ್ಟೆ ತುಂಬುವುದಕ್ಕೆ ಬೇಕಾಗುವ ಮೂವತ್ತೆರಡು ತುತ್ತುಗಳಲ್ಲಿ ದಿನಕ್ಕೆ ಒಂದೊಂದೇ ತುತ್ತು ಕಡಮೆ ಮಾಡಿ ಊಟ ಮಾಡುವುದು) ಎಂಬ ವಿಧಾನದ ಊಟವನ್ನು ಮಾಡಿ ಹಸಿವನ್ನು ಸಹಿಸಿ, ದೇಹವನ್ನು ಕ್ಷೀಣಗೊಳಿಸಿ ಸನ್ಯಾಸ ಕೈಗೊಂಡು, ಹಲವು ದಿವಸಗಳಿಂದ ಹಸಿವು ಬಾಯಾರಿಕೆಗಳನ್ನು ಸಹಿಸಿದರು. ಮಂಗಳಕರ ಪರಿಣಾಮದಿಂದ ರತ್ನತ್ರಯವನ್ನು ಸಾಧಿಸಿ ಸತ್ತು ಬ್ರಹ್ಮಕಲ್ಪದಲ್ಲಿ ಹತ್ತು ಸಾಗರಕ್ಕೆ ಸಮಾನವಾದ ಆಯುಷ್ಯವುಳ್ಳ ಅಮಿತಕಾಂತಿ ಎಂಬ ದೇವನಾಗಿ ಹುಟ್ಟಿದನು. ಚಂದ್ರಗುಪ್ತಮುನಿ ಭದ್ರಬಾಹು ಋಷಿಗಳ ಸಮಾಧಿಯನ್ನು ನಮಸ್ಕರಿಸಿ, ಅಲ್ಲಿಯ ದೇವತೆಯ ಅಪ್ಪಣೆಯಂತೆ ಭಿಕ್ಷೆ ಮಾಡಿಕೊಂಡು ತಪಸ್ಸನ್ನು ಎಸಗಿ ಹನ್ನೆರಡು ವರ್ಷಗಳವರೆಗೆ ಹೀಗೆಯೇ ಇದ್ದರು. ಇತ್ತ ತಮಿಳುನಾಡಿಗೆ ಹೋದ ಋಷಿಸಮೂಹದವರೆಲ್ಲ ಹನ್ನೆರಡು ವರ್ಷಗಳವರೆಗೆ ಸುಖವಾಗಿದ್ದು ಉಪಸರ್ಗಗಳಿಲ್ಲದೆ ಸಮ್ಯಗ್ದರ್ಶನ ಸಮ್ಯಗ್‌ಜ್ಞಾನ ಸಮ್ಯಕ್ ಚಾರಿತ್ರ–ಎಂಬ

ಸುಖದೊಳಿರ್ದರ್ ನಿರುಪಸರ್ಗದಿಂ ದರ್ಶನಜ್ಞಾನಚಾರಿತ್ರಂಗಳಂ ಪ್ರತಿಪಾಳಿಸಿ ಬಡಗನಾಡ ಪಸವು ತಿಳಿದುದೆಂಬುದನಾ ನಾಡಿಂದಂ ಬಂದರ್ ಪೇೞೆ ಕೇಳ್ದಱಿದು ಭಟ್ಟಾರರ ನಿಸಿದಿಗೆಯಂ ಬಂದಿಸಿ ಪೋಪಮೆಂದು ವಿಶಾಖಾಚಾರ್ಯರ್ ಮೊದಲಾಗೊಡೆಯ ಋಷಿಸಮುದಾಯಮೆಲ್ಲಂ ದಕ್ಷಿಣಾಪಥ ದಿಂದಂ ಬಂದು ಭಟ್ಟಾರರ ನಿಸಿದಿಗೆಯನೆಯ್ದಿದಾಗಳ್ ಚಂದ್ರಗುಪ್ತಮುನಿಯುಂ ರಿಸಿಯರ್ಕಳ ಬರವಂ ಕಂಡಿದಿರಂ ಬಂದು ಋಷಿಸಮುದಾಯಮೆಲ್ಲಮಂ ಬಂದಿಸಿದೊಡೆ ರಿಸಿಯರ್ಕಳಿಂತೆಂದು ಬಗೆದರೀಯಡವಿಯೊಳಿನ್ನೆಗಮಿವರ್ ಕಂದಮೂಲಫಲಂಗಳಂ ತಿಂದು ತೊೞೆಯ ಪಳ್ಳದ ನೀರ್ಗಳಂ ಕುಡಿದು ಪನ್ನೆರಡು ವರುಷಂಬರೆಗಮೆಂತು ಬರ್ದೋರೆಂದು ತಮ್ಮೊಳ್ ನುಡಿದು ಮತ್ತಂ ತಲೆನವಿರ್ ಬೆಳೆದುದುಮಂ ಕಂಡಾರಪ್ಪೊಡಂ ಪ್ರತಿವಂದನೆಯಂ ಕೊಟ್ಟುದಿಲ್ಲ ಮತ್ತಾ ರಿಸಿಯರ್ಕಳನಿಬರುಮಾ ದಿವಸಮುಪವಾಸಂ ಗೆಯ್ದರ್ಚಿಸಿ ಕ್ರಿಯೆಗೆಯ್ದು ಭಟ್ಟಾರರ ನಿಸಿದಿಗೆಯಂ ಬಂದಿಸಿಯಾ ದಿವಸಮಲ್ಲಿಯೆ ಕಿಂದು ಮಱುದಿವಸಂ ಪೋಪಾಗಳ್ ಚಂದ್ರಗುಪ್ತಮುನಿಗಳೆಂದರ್ ಭಟಾರಾ ನಿನ್ನೆ ಬಟ್ಟೆವಂದುಪವಾಸಂಗೆಯ್ದು ಸೇದೆವಟ್ಟಿರಿಂದಿನ ದಿವಸಮಿಲ್ಲಿರ್ದು ಚರಿಗೆಪೊಕ್ಕು ಸೇದೆಯನಾಱಿಸಿ ನಾಳೆ ಪೋಗಿಮೆಂದೊಡೆ ಭಟ್ಟಾರರೆಂದರೂರಿಲ್ಲ ಕೇರಿಯುಲ್ಲೆಲ್ಲಿ ಚರಿಗೆವ್ರಗುವ

ರತ್ನತ್ರಯವನ್ನು ನಡೆಸಿಕೊಂಡು ಬಂದರು. ಉತ್ತರಾಪಥದಲ್ಲಿ ಬಂದಿದ್ದ ಕ್ಷಾಮವು ತೀರಿತೆಂದು ಆ ನಾಡಿನಿಂದ ಬಂದವರು ಹೇಳಿದುದನ್ನು ಕೇಳಿ ತಿಳಿದುಕೊಂಡು ಅವರು ಭದ್ರಬಾಹು ಭಟ್ಟಾರರ ಸಮಾಧಿಗೆ ವಂದನೆಯನ್ನು ಸಲ್ಲಿಸಿ ಹೋಗೋಣವೆಂದುಕೊಂಡು ವಿಶಾಖಾಚಾರ್ಯರೇ ಮೊದಲಾಗಿ ಉಳ್ಳ ಋಷಿಸಮೂಹದವರೆಲ್ಲ ದಕ್ಷಿಣ ದೇಶದಿಂದ ಬಂದು ಭಟ್ಟಾರರ ಸಮಾಧಿಯಿದ್ದಲ್ಲಿಗೆ ಬಂದರು. ಆಗ ಚಂದ್ರಗುಪ್ತ ಮುನಿಗಳು ಆ ಋಷಿಗಳ ಬರವನ್ನು ಎದುರುಗೊಂಡು ಋಷಿವೃಂದಗಳಿಗೆಲ್ಲ ವಂದನೆ ಮಾಡಿದರು. ಆಗ ಆ ಋಷಿಗಳು ತಮ್ಮೊಳಗೆ ಹೀಗೆ ಭಾವಿಸಿದರು—"ಇವರು ಈ ಕಾಡಿನಲ್ಲಿ ಇದುವರೆಗೂ ಗಡ್ಡೆ ಬೇರು ಹಣ್ಣುಗಳನ್ನು ತಿಂದು ಹೊಳೆಯ ಮತ್ತು ಹಳ್ಳದ ನೀರುಗಳನ್ನು ಕುಡಿದು ಹನ್ನೆರಡು ವರ್ಷಗಳವರೆಗೂ ಹೇಗೆ ಬಾಳಿದರು ?" ಹೀಗೆ ತಮ್ಮಲ್ಲೇ ಹೇಳಿಕೊಂಡು, "ತಲೆಯ ಕೂದಲು ಬೆಳೆದುದನ್ನು ನೋಡಿ ಯಾರೊಬ್ಬರಾದರೂ ಇವರಿಗೆ ನಮಸ್ಕಾರಕ್ಕೆ ಪ್ರತಿಯಾಗಿ ನಮಸ್ಕಾರವನ್ನು ಮಾಡಿಲ್ಲ" ಎಂದುಕೊಂಡರು. ಆ ಮೇಲೆ ಆ ಋಷಿಗಳೆಲ್ಲರೂ ಆ ದಿವಸ ಉಪವಾಸ ಮಾಡಿದರು. ಪೂಜೆ ಕ್ರಿಯೆಗಳನ್ನೆಲ್ಲ ಮಾಡಿ ಭದ್ರಬಾಹುಭಟ್ಟಾರರ ಸಮಾಧಿಗೆ ವಂದನೆ ಸಲ್ಲಿಸಿದರು. ಆ ದಿನ ಅಲ್ಲಿಯೇ ಮಲಗಿ ಮರುದಿವಸ ಹೋಗುವ ಸಂದರ್ಭದಲ್ಲಿ ಚಂದ್ರಗುಪ್ತ ಮುನಿಗಳು ಅವರೊಡನೆ (ವಿಶಾಖಾಚಾರ್ಯರೊಡನೆ) ಹೀಗೆಂದರು–"ಪೂಜ್ಯರೇ, ನಿನ್ನೆ ನೀವೆಲ್ಲ ದಾರಿ ನಡೆದು ಬಂದು ಉಪವಾಸ ಮಾಡಿ ಆಯಾಸಪಟ್ಟಿದ್ದೀರಿ. ಈ ದಿವಸ ಇಲ್ಲೇ ಇದ್ದು ಊಟಮಾಡಿ ಬಳಲಿಕೆಯನ್ನು ನಿವಾರಿಸಿ ನಾಳೆ ಹೋಗಬಹುದು". ಹೀಗೆ ಹೇಳಿದಾಗ ಅವರು–"ಇಲ್ಲಿ ಊರೂ ಇಲ್ಲ ಕೇರಿಯೂ ಇಲ್ಲ. ಎಲ್ಲಿ ಭಿಕ್ಷೆಗೆ ಹೋಗೋಣ ? ಅಂತೂ ವ್ಯರ್ಥವಾಗಿ ನೀವು ನಮ್ಮನ್ನೇಕೆ

ಮಂತು ಕಿಮ್ಮನೇಕಿಮ್ಮಂ ತಾಂಗಿದಪಿರೆಂದೊಡೆ ಪಿರಿದೊಂದು ಪೊೞಲುಂಟು ನೀಮುಂ ಸಂಕ್ಲೇಶಂ ಬಡದಿರಿಂದಿನ ದಿವಸಮಿರ್ಕೆಂದೊಡನಿಬರುಮೆಂದರಿಂದಿನ ದಿವಸಮುಪವಾಸಂಗೆಯ್ದುಪ್ಪೊಡಮಿವರೆಂಬುದನಿಂಬುಕೆಯ್ವಮೆಂದಿರ್ದೊಡೆ ಮಧ್ಯಾಹ್ನಮಪ್ಪಾಗಳ್ ದೇವರಂ ಬಂದಿಸವೇೞ್ಕೊಡನಿಬರುಂ ಬಂದಿಸಿ ಚಂದ್ರಗುಪ್ತಮುನಿಯ ಬೞಿಯಂ ಋಷಿಸಮುದಾಯಮೆಲ್ಲಂ ತಗುಳ್ದು ಕಿಱಿದಂತರಮಂ ಪೋಪನ್ನೆಗಂ ಪಿರಿದೊಂದು ಪೊೞಲಂ ಕಂಡು ಚರಿಗೆಪೊಕ್ಕನಿಬರುಮಂ ನಿಱಿಸಿ ಕೆಲ ರಿಸಿಯರುಮಾಚಾರ್ಯರ್ಕಳುಂ ಬೆರಸುತಾಮೊಂದು ಮನೆಯೊಳ್ ನಿಂದರಿಂತನಿಬರುಂ ದಿವ್ಯಾಹಾರಂಗಳಂ ಶ್ರಮಂ ಪೋಗೆ ಚರಿಗೆ ಮಾಡಿ ತಮ್ಮಾವಾಸಕ್ಕೆ ಬಂದು ವಿಶಾಖಾಚಾರ್ಯರೆಂದರ್ ಬ್ರಹ್ಮಯ್ಯಾ ಕಾಲಂ ಕರ್ಚಲ್ ಗುಂಡಿಗೆಯುಂ ಕೊಂಡು ಬನ್ನಿಮೆಂದೊಡೆ ಬ್ರಹ್ಮಯ್ಯನೆಂದಂ ಗುಂಡಿಗೆಯನುಂಡ ಮನೆಯೊಳ್ ಮಱೆದು ಬಂದೆನೆನೆ ಬೇಗಂ ಪೋಗಿ ಕೊಂಡು ಬಾಯೆನೆ ಬ್ರಹ್ಮಯ್ಯಂ ಪೋಗಿ ಪೊೞಲೆಡೆಯುಂ ಕಾಣದಡವಿಯೆಲ್ಲಮಂ ತೊೞಲ್ದು ನೋಡಿ ಗುಂಡಿಗೆಯುಂ ಕಾಣದತ್ತಮಿತ್ತಂ ನೋೞ್ಪನ್ನೆಗಮೊಂದು ಮರದ ತುತ್ತತುದಿಯೊಳಿರ್ದೆೞಲ್ವ ಗುಂಡಿಗೆಯುಂ ಕಂಡು ಬಂದು ಗುರುಗಳ್ಗಿಂತೆಂದಂ ಭಟ್ಟಾರಾ ನಾಮುಂಡೆಡೆಯೊಳಾ ಪೊೞಲಿಲ್ಲ ನಮ್ಮುಂಡ

ತಡೆಯುತ್ತೀರಿ ?" ಎಂದು ಕೇಳಿದರು. ಅದಕ್ಕೆ ಚಂದ್ರಮುನಿಗಳು–"ದೊಡ್ಡದಾದ ಒಂದು ಪಟ್ಟಣವಿದೆ. ನೀವೇನೂ ಕಷ್ಟಪಡಬೇಕಾಗಿಲ್ಲ. ಈ ದಿವಸ ಇದ್ದುಬಿಡಿ" ಎಂದರು. ಆಗ ಅವರೆಲ್ಲರೂ ಹೀಗೆಂದರು–"ಈ ದಿವಸ ಉಪವಾಸವನ್ನು ಮಾಡಿಯಾದರೂ ಇವರು ಹೇಳಿದ್ದನ್ನು ನೆರವೇರಿಸೋಣ". ಹೀಗೆಂದು ಅವರೆಲ್ಲ ನಿಂತಿರಲು ಮಧ್ಯಾಹ್ನವಾದಾಗ, ದೇವರನ್ನು ನಮಸ್ಕರಿಸಲು ಹೇಳಿದಾಗ, ಅವರೆಲ್ಲರೂ ವಂದಿಸಿ, ಆ ಋಷಿಗಳ ತಂಡದವರೆಲ್ಲ ಚಂದ್ರಗುಪ್ತಮುನಿಯ ಜೊತೆಯಲ್ಲಿ ಸೇರಿಕೊಂಡು ಸ್ವಲ್ಪದೂರ ಹೋದರು. ಆಗ ದೊಡ್ಡದೊಂದು ಪಟ್ಟಣ ಕಾಣಿಸಿತು. ಭಿಕ್ಷೆಗೆ ಹೋದ ಅವರೆಲ್ಲರನ್ನೂ ನಿಲ್ಲಿಸಿ ಕೆಲವು ಮಂದಿ ಋಷಿಗಳು ಮತ್ತು ಆಚಾರ್ಯರೂ ಕೂಡಿ ತಾವು ಒಂದು ಮನೆಯಲ್ಲಿ ನಿಂತರು. ಹೀಗೆ ಅವರೆಲ್ಲರೂ ತಮ್ಮ ದಣಿವು ಆರಿ ತೃಪ್ತಿಯಾಗುವವರೆಗೂ ದಿವ್ಯಾಹಾರಗಳನ್ನು ಉಂಡರು. ತಮ್ಮ ವಾಸಸ್ಥಳಕ್ಕೆ ಬಂದನಂತರ, ವಿಶಾಖಾಚಾರ್ಯರು ತಮ್ಮ ಶಿಷ್ಯನನ್ನು ಕರೆದು–"ಮಾಣಿಯೇ, ಕಾಲು ತೊಳೆಯಲು ಕಮಂಡಲು (ಜಲಪಾತ್ರೆ) ತೆಗೆದುಕೊಂಡು ಬಾ" ಎಂದರು. ಆಗ ಆ ವಟುವು–"ಕಮಂಡಲುವನ್ನು ನಾನು ಊಟಮಾಡಿದ ಮನೆಯಲ್ಲಿ ಮರೆತು ಬಂದಿದ್ದೇನೆ" ಎಂದನು. "ಬೇಗನೆ ಹೋಗಿ ಅದನ್ನು ತೆಗೆದುಕೊಂಡು ಬಾ" ಎನ್ನಲು ಆ ಬ್ರಹ್ಮಚಾರಿ ಹೋಗಿ ಪಟ್ಟಣವಿರುವ ಸ್ಥಳವನ್ನೇ ಕಾಣದೆ, ಕಾಡನ್ನೆಲ್ಲ ಸುತ್ತಾಡಿ ನೋಡಿದನು. ಕಮಂಡಲುವನ್ನು ಕಾಣದೆ ಅತ್ತಿತ್ತ ನೋಡುತ್ತಿದ್ದನು. ಆಗ ಒಂದು ಮರದ ತುತ್ತತುದಿಯಲ್ಲಿದ್ದುಕೊಂಡು ನೇತಾಡುತ್ತಿರುವ ಕಮಂಡಲನನ್ನು ಕಂಡು ಬಂದು ತನ್ನ ಗುರುಗಳಿಗೆ ಹೀಗೆಂದನು–"ಪೂಜ್ಯರೇ, ನಾವು ಊಟಮಾಡಿದ ಸ್ಥಳದಲ್ಲಿ ಆ ಪಟ್ಟಣವಿಲ್ಲ. ನಾವು ಊಟ ಮಾಡಿದ ಮನೆಯೂ ಇಲ್ಲ ಕಮಂಡಲು ಮಾತ್ರ ಒಂದು

ಮನೆಯುಮಿಲ್ಲ ಗುಂಡಿಗೆಯುಮೊಂದು ನಿಡಿಯ ಮರದ ತುತ್ತತುದಿಯೊಳಿರ್ದುದಾರಾನು ಮೇಱಲ್ ಬಲ್ಲೋರನಟ್ಟುಗೆಂದೊಡನಿಬರುಂ ರಿಸಿಯರ್ಕಳೆಲ್ಲಂ ಚೋದ್ಯಂಬಟ್ಟು ನೋಡಲ್ವೋಗಿ ಪೊೞಲಂ ಕಾಣದಡವಿಯೊಳ್ ನಿಡಿಯ ಮರದ ತುತ್ತತುದಿಯೊಳಿರ್ದೆೞಲ್ವ ಗುಂಡಿಗೆಯುಂ ಕಂಡು ತೆಗೆಯಿಸಿಕೊಂಡು ಪೋಗಿ ಚಂದ್ರಗುಪ್ತಮುನಿಯನನಿಬರುಂ ರಿಸಿಯರ್ಕಳ್ ನೆರದಿಂತೆಂದರಾಮುಂ ನಿಮ್ಮನೀಯಡವಿಯೊಳ್ ಕಂದಮೂಲಫಲಂಗಳಂ ತಿಂದು ಪಳ್ಳದ ನೀರಂ ಕುಡಿದು ಇನಿತು ಕಾಲಂ ಬರ್ದಿರೆಂದು ನಿಮ್ಮಂ ಬಗೆದು ಬಂದಿಸಿದೆಮಿಲ್ಲಿದರ್ಕೆ ನೀಮುಂ ಮನದೊಳೀವಂಗೊಳ್ಳದೆ ಕ್ಷಮಿಯಿಸಿಮೆಂದು ನುಡಿದು ವಂದಿಸಿ ಮತ್ತಮಿಂತೆಂದರ್ ನೀಮುಂ ಸೇವಾಧಿಷ್ಠಿತರಿರ್ ನಿಮಗೆ ದೇವತೆಗಳ್ ಬೆಸಕೆಯ್ವುವು ದೇವತೆಗಳ್ ಮಾಡಿದಾಹಾರಮಂ ನೀಮಿನ್ನೆಗಮುಂಡು ತಪಂಗೆಯ್ದಿರಿನ್ನುಣಲ್ವೇಡ ದೇವತೆಗಳ ಮಾಡಿದಾಹಾರಮಂ ರಿಸಿಯರ್ಗೆ ಚರಿಗೆ ಮಾಡಲಾಗದೆಂದು ಬಾರಿಸಿಯವರ್ಗೆ ಲೋಚಂಗೆಯ್ದು ಬ್ರತಂಗಳನೇಱಿಸಿ ಪಡಿಕಮಣಂಬೇೞ್ದೊಡಗೊಂಡುತ್ತರಾಪಥಕ್ಕೆ ಪಯಣಂ ಬೋಗಿ ಕತಿಪಯದಿವಸಂಗಳಿಂದಂ ಮಧ್ಯದೇಶಮನೆಯ್ದಿಯಾ ನಾಡೊಳ್ ಋಷಿ ಸಮುದಾಯಮೆಲ್ಲಂ ನಿರುಪಸರ್ಗಮಿರ್ದ್ದತ್ತು ಮತ್ತಿತ್ತ ರಾಮಿಲಾಚಾರ್ಯರುಂ ಸ್ಥೂಲಾಚಾರ್ಯರುಂ

ಉದ್ದವಾದ ಮರದ ತುತ್ತತುದಿಯಲ್ಲಿದೆ. ಮರವನ್ನು ಹತ್ತಬಲ್ಲ ಯಾರನ್ನಾದರೂ ಕಳುಹಿಸಬೇಕು" ಆಗ ಆ ಋಷಿಗಳೆಲ್ಲರೂ ಆಶ್ಚರ್ಯಪಟ್ಟು ನೋಡುವುದಕ್ಕೆ ಹೋಗಿ ಪಟ್ಟಣವನ್ನು ಕಾಣದೆ ಕಾಡಿನಲ್ಲಿ ಎತ್ತರವಾದ ಮರದ ತುತ್ತತುದಿಯಲ್ಲಿ ಜೋತಾಡುತ್ತಿರುವ ಕಮಂಡಲನನ್ನು ಕಂಡರು. ಅದನ್ನು ತೆಗೆಯಿಸಿಕೊಂಡು ಹೋಗಿ ಆ ಋಷಿಗಳೆಲ್ಲರೂ ಒಟ್ಟಾಗಿ ಚಂದ್ರಗುಪ್ತಮುನಿಯ ಬಳಿಗೆ ಬಂದರು. "ನೀವು ಈ ಕಾಡಿನಲ್ಲಿ ಗಡ್ಡೆ ಬೇರು ಹಣ್ಣುಗಳನ್ನು ತಿಂದು ಹಳ್ಳದ ನೀರನ್ನು ಕುಡಿದು ಇಷ್ಟುಕಾಲ ಬಾಳಿದ್ದೀರೆಂದು ನಿಮ್ಮ ಕುರಿತು ಭಾವಿಸಿ ವಂದನೆಮಾಡಲಿಲ್ಲ. ಇದಕ್ಕೆ ನೀವು ಮನಸ್ಸಿನಲ್ಲಿ ಸಿಟ್ಟಾಗಬಾರದು, ಕ್ಷಮಿಸಬೇಕು" ಎಂದು ಹೇಳಿ ವಂದಿಸಿ ಆಮೇಲೆ ಹೀಗೆ ಹೇಳಿದರು– "ನೀವು ಸೇವೆಗೆ ಪಾತ್ರರಾಗಿದ್ದೀರಿ. ದೇವತೆಗಳು ನಿಮ್ಮ ಆಜ್ಞಾಪಾಲಕರಾಗಿ ನಡೆದುಕೊಳ್ಳುತ್ತಿರುವರು. ದೇವತೆಗಳು ಮಾಡಿದ ಆಹಾರವನ್ನು ಇದುವರೆಗೂ ನೀವು ಊಟಮಾಡಿ ತಪಸ್ಸನ್ನು ಆಚರಿಸಿದ್ದೀರಿ. ಇನ್ನು ನೀವು ಅದನ್ನು ಉಣಬಾರದು. ದೇವತೆಗಳು ಮಾಡಿದ ಆಹಾರವನ್ನು ಋಷಿಗಳು ಉಣಬಾರದು" ಹೀಗೆ ಹೇಳಿ ಅವರನ್ನು ಪಡೆದು ಅವರಿಗೆ ಲೋಚು(ಕೂದಲು ಕೀಳುವುದು) ಕ್ರಿಯೆಯನ್ನು ಮಾಡಿ ವ್ರತಸ್ವೀಕಾರ ಮಾಡಿಸಿ ಪಡಿಕಮಣವನ್ನು (ಹಿಂದಿನ ಪಾಪಗಳಿಗೆ ಪಶ್ಚಾತ್ತಾಪ ಹೇಳಿಸುವುದು) ಹೇಳಿಸಿ, ಅವರನ್ನು ಕೂಡಿಕೊಂಡು ಉತ್ತರ ದೇಶಕ್ಕೆ ಪ್ರಯಾಣ ಮಾಡಿದರು. ಕೆಲವು ದಿವಸಗಳಲ್ಲಿ ಮಧ್ಯದೇಶಕ್ಕೆ ತಲಪಿದರು. ಅಲ್ಲಿ ಋಷಿ ಸಮೂಹದವರೆಲ್ಲರೂ ಉಪಸರ್ಗಗಳಿಲ್ಲದೆ ಇದ್ದರು. ಆಮೇಲೆ ಇತ್ತ ರಾಮಿಲಾಚಾರ್ಯರು ಸ್ಥೂಲಾಚಾರ್ಯರು ಸ್ಥೂಲಭದ್ರಾಚಾರ್ಯರು ಅಂತ್ಯೆ

ಸ್ಥೂಲಭದ್ರಾಚಾರ್ಯರುಮಿಂತು ಮೂವರುಂ ಸಿಂಧುವಿಷಯಕ್ಕೆ ತಂತಮ್ಮ ಋಷಿಸಮುದಾಯಂ ಬೆರಸು ಪೋದೊಡಾ ನಾಡೊಳ್ ಮಾನಸರ್ ಮಾನಸರಂ ತಿಂಬಂತುಟಪ್ಪ ಮಹಾಘೋರಂ ಪಸವಾನೊಡಲ್ಲಿಯ ಶ್ರಾವಕರೆಲ್ಲಂ ನೆರೆದು ರಿಸಿಯರಲ್ಲಿಗೆ ವೋಗಿ ಇಂತೆಂದರ್ ಭಟಾರಾ ಲವಟುಗಳ ಕೈಯುಲ್ ಪಗಲುಣಲುಮಡಲುಂ ಪೆಱಲಾಗ ವೋಲ್ವಾಯ್ದಿಟ್ಟು ಕೊಂಡುಂಬರ್ ಲೋಗರೆಲ್ಲಮವರ ಭಯಕ್ಕೆ ಪಗಲಡುಗೆಯುಂ ಬಿಸುಟ್ಟಿರುಳಟ್ಟುಣಲ್ ತಗುಳ್ದರದಱಿಂ ನೀಮು ಮಿಂದಿತ್ತಿರುಳ್ ಭೈಕ್ಷಭಾಜನಂಗಳಂ ಕೊಂಡುಪೋಗಿ ಶ್ರಾವಕರ ಮನೆಗಳಂ ತೊಳಲ್ದು ಭೈಕ್ಷಂ ಬೇಡಿಕೊಂಡು ಕೂಟನಿರುಳ್ ತಂದಿಟ್ಟು ಪಗಲುಣ್ಬುದೆಂದೊಡಂತೆಗೆಯ್ವೆಮೆಂದು ಇರುಳ್ ತೊಳಲ್ದು ಭೈಕ್ಷಮಂ ತಂದು ಮಡಗಿಟ್ಟು ಪಗಲುಣ್ಬರಾದರಿಂತೀ ಪಾಂಗಿನೊಳ್ ಕಾಲಂ ಸಲೆ ಮತ್ತೊಂದು ದಿವಸಮೊರ್ವ ನಿರ್ಗ್ರಂಥಯತಿ ಭೈಕ್ಷಭಾಜನಮಂ ಕೊಂಡು ಶ್ರಾವಕರ ಮನೆಗಳನಿರುಳ್ ಭೈಕ್ಷಂ ಬೇಡಿ ತೊಳಲುತ್ತಂ ಪೋಪರೊಂದು ಮನೆಯಂ ಪೊಕ್ಕು ಭೈಕ್ಷಮಂ ಬೇಡಿದೊಡೊರ್ವಳ್ ಪೊಸಶ್ರಾವಕಿ ಬಸಿರ್ಪೆಂಡತಿ ವೇಳಾಸ್ವಾಮಿನಿಯೆಂಬೊಳ್ ಕರ್ದಿಂಗಳಿರುಳೊಳ್ ಕತ್ತಲೆಯೊಳ್ ನಿರ್ಗ್ರಂಥಮಪ್ಪ ರೂಪಂ ಕಂಡು ಬೆರ್ಚಿದೊಡಾಕೆಗೆ

ಈ ಮೂವರು ಸಿಂಧು ದೇಶಕ್ಕೆ ತಮ್ಮ ತಮ್ಮ ಋಷಿಸಮೂಹವನ್ನು ಕೂಡಿಕೊಂಡು ಹೋದರಷ್ಟೆ. ಆ ನಾಡಿನಲ್ಲಿ ಮನುಷ್ಯರು ಮನುಷ್ಯರನ್ನೇ ತಿಂದುಬಿಡತಕ್ಕಂತಹ ಅತಿ ಭಯಂಕರವಾದ ಕ್ಷಾಮ ತಲೆದೋರಿದ್ದಿತು. ಅಲ್ಲಿದ್ದ ಶ್ರಾವಕರೆಲ್ಲರೂ ಒಟ್ಟುಗೂಡಿ ಈ ಋಷಿಗಳ ಬಳಿಗೆ ಹೋಗಿ ಹೀಗೆಂದರು–"ಅನ್ಯದೇಶೀಯರಾದ ಕೆಟ್ಟವರಾದ ಇಲ್ಲಿಯ ಜನರೊಂದಿಗೆ ಹಗಲು ಹೊತ್ತಿನಲ್ಲಿ ಊಟಮಾಡಲೂ ಬಾರದು, ಅಡುಗೆ ಮಾಡಲೂ ಬಾರದು. ಮಾಡಿದರೆ, ಅವರು ಮೇಲೆ ಬಿದ್ದು ಎಳೆದು ತೆಗೆದುಕೊಂಡು ತಿಂದುಬಿಡುತ್ತಾರೆ. ಆದುದರಿಂದ ಜನರೆಲ್ಲರೂ ಅವರ ಭಯದಿಂದ ಹಗಲು ಅಡುಗೆ ಮಾಡುವುದನ್ನು ಬಿಟ್ಟು ರಾತ್ರಿ ಅಡುಗೆ ಮಾಡಿ ಉಣ್ಣಲು ತೊಡಗಿದ್ದಾರೆ. ಆದುದರಿಂದ ನೀವು ಇಂದಿನಿಂದ ರಾತ್ರಿವೇಳೆಯಲ್ಲಿ ಭಿಕ್ಷಾಪಾತ್ರೆಗಳನ್ನು ತೆಗೆದುಕೊಂಡು ಶ್ರಾವಕರ (ಜಿನಧರ್ಮದಲ್ಲಿ ನಿಷ್ಠೆಯುಳ್ಳ ಗೃಹಸ್ಥರ) ಮನೆಗಳಿಗೆ ಸುತ್ತಾಡಿ ಭಿಕ್ಷೆಬೇಡಿಕೊಂಡು, ಅನ್ನವನ್ನು ರಾತ್ರಿಯ ವೇಳೆಯಲ್ಲಿ ತಂದು ಇಟ್ಟುಕೊಳ್ಳಿರಿ. ಅದನ್ನು ಹಗಲು ಊಟಮಾಡಿ" ಹೀಗೆ ಹೇಳಲು ಅವರು "ಹಾಗೆಯೇ ಮಾಡುವೆವು" ಎಂದುಕೊಂಡು ರಾತ್ರಿಯಲ್ಲಿ ಸುತ್ತಾಡಿ ಭಿಕ್ಷೆಯನ್ನು ತಂದು ಇಟ್ಟು ಅದನ್ನು ಹಗಲು ಊಟಮಾಡುವವರಾದರು. ಈ ರೀತಿಯಲ್ಲಿ ಸ್ವಲ್ಪ ಕಾಲ ಕಳೆಯಿತು. ಆಮೇಲೆ ಒಂದು ದಿವಸ ಒಬ್ಬ ದಿಗಂಬರ ಸಂನ್ಯಾಸಿಗಳು ಭಿಕ್ಷಾಪಾತ್ರೆಯನ್ನು ಹಿಡಿದುಕೊಂಡು ಜೈನಗೃಹಸ್ಥರ ಮನೆಗಳಲ್ಲಿ ರಾತ್ರಿವೇಳೆ ಭಿಕ್ಷೆ ಬೇಡಿಕೊಂಡು ಸುತ್ತಾಡುತ್ತ ಇದ್ದರು. ಅವರು ಒಂದು ಮನೆಯನ್ನು ಪ್ರವೇಶಿಸಿ ಭಿಕ್ಷೆ ಬೇಡಿದರು. ಆಗ ಓರ್ವ ಗರ್ಭಿಣಿಯಾದ ಶ್ರಾವಕಿ ವೇಳಾಸ್ವಾಮಿನಿಯೆಂಬವಳು ಅಮಾವಾಸ್ಯೆಯ ಕತ್ತಲೆಯಲ್ಲಿ ಆ ಯತಿಯು ದಿಗಂಬರವಾಗಿರುವ (ಬಟ್ಟೆಬರೆಯಿಲ್ಲದ)

ಬಸಿಱಿೞಿದತ್ತದಂ ಕಂಡು ಶ್ರಾವಕರೆಲ್ಲಂ ನೆರೆದು ರಿಸಿಯರಲ್ಲಿಗೆ ವೋಗಿ ಇಂತೆಂದರ್ ಭಟ್ಟಾರಾ ಕಾಲಮಪ್ಪೊಡೆ ಕೆಟ್ಟತ್ತೊಳ್ಳಿತಪ್ಪ ಕಾಲಮಾದಂದು ಪ್ರಾಯಶ್ಚಿತ್ತಂಗೊಂಡು ನಿಮ್ಮ ತಪಂಗಳೊಳ್ ನಿಲ್ಲಿಮೀಗಳೀ ಪಸವು ಕಱಿವನ್ನೆಗಂ ನೀಮುಮೆಡದ ಕೈಯನೆೞಲಿಕ್ಕಿಯರ್ಧಗಪ್ಪಡಮನೆಡದ ಮುಯ್ವಿನ ಮೇಗಿಕ್ಕಿ ಒಳಗೆ ನಿರ್ಗ್ರಂಥಮಪ್ಪ ರೂಪಂ ತಾಳ್ದಿ ಬಲದ ಕೈಯೊಳ್ ಭೈಕ್ಷದ ಭಾಜನಮಂ ಪಿಡಿದು ತೊೞಲ್ದು ಭೈಕ್ಷಮಂ ಬೇಡಿ ಮಡಗಿಟ್ಟು ಪಗಲುಣ್ಣಿಮೆಂದೊಡವರ್ಗಳುಮಂತೆ ಗೆಯ್ವಮೆಂದವರ ಪೇೞ್ದ ಪಾಂಗಿನೊಳ್ ನೆಗೞ್ದು ಪಸವಂ ನೀಗಿ ಕಾಲಮೊಳ್ಳಿತ್ತಾದೊಡೆ ರಾಮಿಲಾಚಾರ್ಯರುಂ ಸ್ಥೂಲಾಚಾರ್ಯರುಂ ಸ್ಥೂಲಭದ್ರಾಚಾರ್ಯರುಮಂತು ಮೂವರುಂ ತಂತಮ್ಮ ಋಷಿಸಮುದಾಯಂ ಬೆರಸು ವಿಹಾರಿಸುತ್ತಂ ಮಧ್ಯದೇಶಕ್ಕೆ ರಿಸಿಯರ್ಕಳಿರ್ದಲ್ಲಿಗೆ ಬಂದೊಡೆ ವಿಶಾಖಾಚಾರ್ಯರ್ ಮೊದಲಾಗೊಡೆಯ ಆಚಾರ್ಯರ್ಕಳವರನಿಂತೆಂದರ್ ನೀಮೆಲ್ಲರುಮರ್ಧಗಪ್ಪಡಮಂ ಬಿಸುಟ್ಟು ನಿರ್ಗ್ರಂಥ ರೂಪುಮಂ ಕೈಕೊಂಡು ಬ್ರತಂಗಳನೇಱಿಸಿ ಪ್ರಾಯಶ್ಚಿತ್ತಂಗೊಂಡು ಪಡಿಕಮಣಂಗೇಳ್ದು ತಪದೊಳ್ ನಿಲ್ಲಿಮೆಂದೊಡಂತೆಗೆಯ್ವಮೆಂದು ರಾಮಿಲಾಚಾರ್ಯರುಂ ಸ್ಥೂಲಾಚಾರ್ಯರುಂ ತಂತಮ್ಮ ಋಷಿಸಮುದಾಯಂ ಬೆರಸು ವಿಶಾಖಾಚಾರ್ಯರ ಪಕ್ಕದೆ ಅರ್ಧಗಪ್ಪಡಮಂ ಬಿಸುಟ್ಟು ಪಡಿಕಮಣಂಗೇಳ್ದು ಪ್ರಾಯಶ್ಚಿತ್ತಂ

ರೂಪವನ್ನು ಕಂಡು ಬೆಚ್ಚಿ ಬೀಳಲು, ಆಕೆಗೆ ಗರ್ಭಸ್ರಾವವಾಯಿತು. ಅದನ್ನು ಕಂಡು ಶ್ರಾವಕರೆಲ್ಲ ಒಟ್ಟಾಗಿ ಋಷಿಗಳಲ್ಲಿಗೆ ಹೋಗಿ ಹೀಗೆಂದರು–"ಪೂಜ್ಯರೇ, ಕಾಲವಾದರೋ ಕೆಟ್ಟುಹೋಗಿದೆ. ಒಳ್ಳೆಯ ಕಾಲ ಬಂದಾಗ ಪ್ರಾಯಶ್ಚಿತ್ತ ಮಾಡಿಕೊಂಡು ನಿಮ್ಮ ತಪಸ್ಸನ್ನು ಆಚರಿಸಿರಿ. ಈ ಬರಗಾಲ ಮುಗಿಯುವವರೆಗೂ ನೀವು ಎಡಗೈಯನ್ನು ಜೋಲುವಂತೆ ಬಿಟ್ಟು ಅರೆಬಟ್ಟೆಯನ್ನು ಎಡದ ಹೆಗಲ ಮೇಲೆ ಹಾಕಿ ಒಳಗೆ ದಿಗಂಬರ ರೂಪವನ್ನು ತಾಳಿ, ಬಲದ ಕೈಯಲ್ಲಿ ಭಿಕ್ಷಾಪಾತ್ರೆಯನ್ನು ಹಿಡಿದುಕೊಂಡು ಸುತ್ತಾಡುತ್ತ ಭಿಕ್ಷೆಯನ್ನು ಬೇಡಿ, ಅದನ್ನು ಹಾಗೆಯೇ ಇಟ್ಟು ಹಗಲು ಹೊತ್ತಿನಲ್ಲಿ ಊಟಮಾಡಿ" ಹೀಗೆನ್ನಲು, ಋಷಿಗಳು "ಹಾಗೆಮಾಡೋಣ" ಎಂದು ಹೇಳಿ, ಅವರು ಹೇಳಿದ ರೀತಿಯಲ್ಲೇ ಮಾಡಿದರು. ಬರಗಾಲ ಕಳೆದು ಒಳ್ಳೆಯ ಕಾಲ ಬರಲು, ರಾಮಿಲಾಚಾರ್ಯರು ಸ್ಥೂಲಾಚಾರ್ಯರು ಸ್ಥೂಲಭದ್ರಾಚಾರ್ಯರು–ಅಂತು ಮೂರು ಮಂದಿಯೂ ತಮ್ಮ ತಮ್ಮ ಋಷಿಸಮೂಹವನ್ನು ಕೂಡಿಕೊಂಡು ಸಂಚಾರ ಮಾಡುತ್ತ ಮಧ್ಯದೇಶದಲ್ಲಿ ಋಷಿಗಳಿದ್ದಲ್ಲಿಗೆ ಬಂದರು. ಆಗ ವಿಶಾಖಾಚಾರ್ಯರು ಮೊದಲಾಗಿ ಉಳ್ಳ ಆಚಾರ್ಯರುಗಳು ಅವರೊಡನೆ ಹೀಗೆಂದರು–"ನೀವೆಲ್ಲರೂ ಅರೆಬಟ್ಟೆಯನ್ನು ಬಿಸಾಡಿ (ಅರೆಬತ್ತಲೆಯನ್ನು ಇಟ್ಟುಕೊಳ್ಳದೆ) ಪೂರ್ತಿಯಾಗಿ ದಿಗಂಬರತ್ವವನ್ನು ಸ್ವೀಕರಿಸಿಕೊಳ್ಳಿ. ವ್ರತಗಳನ್ನು ಧರಿಸಿ ಪ್ರಾಯಶ್ಚಿತ್ತ ಕೈಕೊಂಡು ಪಡಿಕಮಣವನ್ನು (ದೋಷಗಳಿಗೆ ಪಶ್ಚಾತ್ತಾಪವನ್ನು) ಮಾಡಿ ತಪೋನಿರತರಾಗಿರಿ". ಹೀಗೆನ್ನಲು ಅದಕ್ಕೆ ಒಪ್ಪಿ ರಾಮಿಲಾಚಾರ್ಯರೂ ಸ್ಥೂಲಾಚಾರ್ಯರೂ ತಮ್ಮ ತಮ್ಮ ಋಷಿಸಮೂಹವನ್ನು ಕೂಡಿಕೊಂಡು ವಿಶಾಖಾಚಾರ್ಯರ ಬಳಿಯಲ್ಲಿ ತಮ್ಮ

ಗೊಂಡು ಯಥೋಕ್ತಮಪ್ಪ ಚಾರಿತ್ರದೊಳ್ ನಿಂದರ್ ಸ್ಥೂಲಭದ್ರಾಚಾರ್ಯರ್ ಮೊದಲಾಗಿ ಕೆಲಂಬರ್ ಕೊಳಲೊಲ್ಲದವರ್ ಜಿನಕಲ್ಪಂ ಸ್ಥವಿರಕಲ್ಪಮೆಂದೆರಡು ಭೇದಂ ಮಾಡಿ ಅರ್ಧ ಗಪ್ಪಡದ ತೀರ್ಥಮಂ ನೆಗಟ್ಚಿದರ್ ಇಂತರ್ಧಗಪ್ಪಡದ ತೀರ್ಥ ಪಾರಂಪರ್ಯದಿಂದಂ ಸುರಥ ಮೆಂಬುದು ನಾಡಲ್ಲಿ ವಳಭಿಯೆಂಬುದು ಪೊಲಲದನಾಳ್ವೊಂ ವಪ್ರಪಾಳನೆಂಬೊನರಸನ ರಾಜ್ಯಂ ಬರೆಗಮರ್ಧಗಪ್ಪಡದ ತೀರ್ಥಂ ನೆಗಟ್ದಿತ್ತು ಮತ್ತಂ ವಪ್ರಪಾಳನೆಂಬರಸಂ ಮಿಥ್ಯಾದೃಷ್ಟಿಯಾ ತನ ಮಹಾದೇವಿ ಸ್ವಾಮಿನಿಯೆಂಬೊಳರ್ಧಗಪ್ಪಡದ ತೀರ್ಥದ ತಪಸ್ವಿಯರ ಶ್ರಾವಕಿಯಾಗಿ ಇಂತು ಕಾಲಂ ಸಲೆ ಮತ್ತೊಂದು ದಿವಸಂ ನಡುವಗಲರಸನುಂ ಮಹಾದೇವಿಯುಮಿಂತಿರ್ವರುಂ ಪ್ರಾಸಾದದ ಮೇಗಿರ್ದು ಗವಾಕ್ಷ ಜಾಳಾಂತರಂಗಳಿಂದಂ ದಿಶಾವಲೋಕನಂ ಗೆಯ್ಯುತ್ತಿರ್ಪನ್ನೆಗ ಮರ್ಧಗಪ್ಪಡದ ಸಂಘಂ ಭೈಕ್ಷಂ ಕಾರಣವಾಗಿಯರಮನೆಯಂ ಪುಗುವುದನರಸಂ ಕಂಡರಸಿಯ ನಿಂತೆಂದನೆಲೆ ಮಹಾದೇವಿ ಈ ನಿನ್ನರ್ಧಗಪ್ಪಡದ ಯತಿಯರ ಧರ್ಮಮೊಳ್ಳಿತಲ್ಲವರುಟ್ಟರು ಮಲ್ಲರ್ ಬತ್ತಲೆಗರುಮಲ್ಲರೆಂದು ನುಡಿದು ಮತ್ತೊಂದು ದಿವಸಮರ್ಧಗಪ್ಪಡದ ಸಂಘಮನರಸಂ ಬಟಿಯಟ್ಟಿವರಿಸಿ ಇಂತೆಂದಂ ನೀಮರ್ಧಗಪ್ಪಡಮಂ ಬಿಸುಟು ನಿರ್ಗ್ರಂಥಮಪ್ಪ ರಿಸಿ ರೂಪಂ

ಅರೆಬಟ್ಟೆ (ಅರ್ಧಮಾತ್ರ ವಸ್ತ್ರಧಾರಣೆ)ಯನ್ನು ಬಿಟ್ಟರು. ಪಡಿಕಮಣವನ್ನು ಕೇಳಿ ಪ್ರಾಯಶ್ಚಿತ್ತವನ್ನು ಮಾಡಿ ಯೋಗ್ಯವಾದಂತಹ ಸಮ್ಯಕ್‌ಚಾರಿತ್ರವನ್ನುಳ್ಳವರಾದರು. ಸ್ಥೂಲಭದ್ರಾಚಾರ್ಯರೇ ಮೊದಲಾದ ಕೆಲವರು–ದಿಗಂಬರತ್ವವನ್ನು ಸ್ವೀಕರಿಸಲು ಒಪ್ಪದವರು, ಜಿನಕಲ್ಪ, ಸ್ಥವಿರಕಲ್ಪ–ಎಂದು ಎರಡು ಪ್ರಭೇದಗಳನ್ನು ಮಾಡಿ ಅರೆಬಟ್ಟೆ ಯನ್ನು ಧರಿಸುವ ಸಂಪ್ರದಾಯವನ್ನು ಮಾಡಿದರು. ಈ ಅರೆಬಟ್ಟೆಯ ಸಂಪ್ರದಾಯ ವಿಸ್ತಾರವಾಗತೊಡಗಿತು. ಸುರಥಿ ಎಂಬ ನಾಡಿನಲ್ಲಿ ವಳಭಿ ಎಂಬ ಪಟ್ಟಣವನ್ನು ವಪ್ರ ಪಾಳನೆಂಬ ರಾಜನು ಆಳುತ್ತಿದ್ದನು. ಅವನ ರಾಜ್ಯದವರೆಗೂ ಅರೆಬಟ್ಟೆಯ ಸಂಪ್ರ ದಾಯ ವ್ಯಾಪಿಸಿಕೊಂಡಿತು. ವಪ್ರಪಾಳರಾಜನು ಮಿಥ್ಯಾದೃಷ್ಟಿ (ಧರ್ಮದಲ್ಲಿ ನಂಬಿಕೆ ಯಿಲ್ಲದವನು). ಅವನ ರಾಣಿಯಾದ ಸ್ವಾಮಿನಿಯೆಂಬವಳು ಅರ್ಧವಸ್ತ್ರದ ಸಂಪ್ರಾ ದಾಯದ ಯತಿಗಳ ಬೋಧನೆಯನ್ನು ಕೇಳುತ್ತಿದ್ದಳು. ಹೀಗೆ ಸ್ವಲ್ಪ ಕಾಲ ಕಳೆಯಿತು. ಆಮೇಲೆ ಒಂದು ದಿವಸ ನಡುಹಗಲಿನ ವೇಳೆ ರಾಜ ಮತ್ತು ರಾಣಿ ಇಬ್ಬರೂ ತಮ್ಮ ಅರಮನೆಯ ಉಪ್ಪರಿಗೆಯಲ್ಲಿದ್ದರು. ಅವರು ಕಿಟಕಿಯ ಬಲೆಯ ಒಳಗಿನಿಂದ ದಿಕ್ಕು ಗಳ ಕಡೆ ನೋಡುತ್ತಿದ್ದಾಗ ಅರೆಬಟ್ಟೆಯುಳ್ಳ ಸಂಘ ಭಿಕ್ಷೆಗಾಗಿ ಅರಮನೆಯೊಳಗೆ ಬರುವುದನ್ನು ಕಂಡರು. ಆಗ ರಾಜನು ರಾಣಿಯೊಡನೆ– "ಎಲೈ ಮಹಾದೇವಿ, ಈ ನಿನ್ನ ಅರೆಬಟ್ಟೆಯ ಮುನಿಗಳ ಧರ್ಮ ಒಳ್ಳೆಯದಲ್ಲ. ಇವರು ವಸ್ತ್ರಧರಿಸಿದವರೂ ಅಲ್ಲ ನಗ್ನರೂ ಅಲ್ಲ" ಎಂದು ನುಡಿದನು. ಆ ಮೇಲೆ ಒಂದು ದಿವಸ ರಾಜನು ಅರೆಬಟ್ಟೆಯ ಯತಿ ಸಂಘವನ್ನು ಕರೆಕಳುಹಿಸಿ ಬರಮಾಡಿ, ಹೀಗೆಂದನು–" ನೀವು ಅರೆಬಟ್ಟೆಯನ್ನು ಬಿಸಾಡಿ, ದಿಗಂಬರ ಯತಿ ಸ್ವರೂಪವನ್ನು ಕೈಕೊಂಡು, ಅನಂತರ ತಪಸ್ಸನ್ನು ಆಚರಿಸಿರಿ."

**ಕೈಕೊಂಡು ಬೞಿಯೆ ತಪಂಗೆಯ್ವುದೆಂದೊಡವರೊಲ್ಲದಿರ್ದೊಡರಸಂ ಮತ್ತಮಿಂತೆಂದಂ ನಿರ್ಗ್ರಂಥಮಪ್ಪರೂಪಂ ಕೈಕೊಳಲೊಲ್ಲಿರಪ್ಪೊಡರ್ಧಗಪ್ಪಡಮಂ ಬಿಸುಟ್ಟು ಪೞಿಯಂ ಸಯ್ಯುಟ್ಟುಕೊಂಡಿರಿಮೆಂದೊಡಂತೆ ಗೆಯ್ವೆಮೆಂದಾ ದಿವಸಂ ತಗುಳ್ದು ಬಡಗನಾಡವರ್ ವಪ್ರಪಾಳನ ರಾಜ್ಯದೊಳರ್ಧಗಪ್ಪಡಮಂ ಬಿಸುಟ್ಟು ಕಚ್ಚೆಗಟ್ಟದೆ ಸಯ್ಯುಡುವರುಂ ಕುಱುವಡಮಂ ಪೊದೆವರುಮಾದೊರಲ್ಲಿಂದಿತ್ತ ಕಂಬಳತೀರ್ಥಮೆಂಬುದಾದುದವರುಂ ಶ್ವೇತಪಟರೆಂಬೊರಾದರ್ ದಕ್ಷಿಣಾಪಥದೊಳ್ ಸಾಮಳಿಪುತ್ರನೆಂಬರಸನಪ್ಪನವರಯೆ ಸಂತತಿಯ ಶ್ವೇತಭಿಕ್ಷುಜಾಪುಲಿ ಸಂಘಕ್ಕೆ ಮೊದಲಿಗನಾದಂ ಮತ್ತಿತ್ತ ಸಂಪ್ರತಿಚಂದ್ರಗುಪ್ತಮುನಿಯುಮುಗ್ರೋಗ್ರ ತಪಶ್ಚರಣಂ ಗೆಯ್ದು ಸಂನ್ಯಸನವಿಧಾನದಿಂದಂ ಪರಮ ಶುದ್ಧ ಸಹಜ ರತ್ನತ್ರಯಮಂ ಸಾಧಿಸಿ ಮುಡಿಪಿ ಬ್ರಹ್ಮಕಲ್ಪದೊಳ್ ಪತ್ತುಸಾಗರೋಪಮಾಯುಷ್ಯಮನೊಡೆಯೊಂ ಶ್ರೀಧರನೆಂಬೊಂ ದೇವನಾಗಿ ಪುಟ್ಟಿದೊನಿಂತಿದು ಭದ್ರಬಾಹು ಭಟಾರರ ಕಥೆ ಪೇೞ್ದುದು. ಪೆಱರುಂ ಸಂನ್ಯಸನಂ ಗೆಯ್ದೊರೆಲ್ಲಂ ಭದ್ರಬಾಹು ಭಟಾರಕರ ಮನದೆ ಬಗೆದವರೆಂತು ಪಸಿವುಂ ನೀರೞ್ಕೆ ಶೀತಮುಷ್ಣದಂಶಮಸಕಾದಿ ಪರೀಷಹಂಗಳಂ ಸೈರಿಸಿ ಪರಮಶುದ್ಧ ರತ್ನತ್ರಯಮಂ ಸಾಧಿಸಿದರಂತೆ ಸಂನ್ಯಸನಂ**

ಹೀಗೆ ಹೇಳಿದಾಗ ಅವರು ಒಪ್ಪಲಿಲ್ಲ. ರಾಜನು ಆಮೇಲೆ ಅವರೊಡನೆ – "ನೀವು ಇಡೀ ಬತ್ತಲೆಯಾಗಿರುವ ರೂಪವನ್ನು ಸ್ವೀಕರಿಸಲು ಒಪ್ಪುವುದಿಲ್ಲವಾದರೆ ಅರ್ಧ ವಸ್ತ್ರ ಧಾರಣೆಯನ್ನು ಬಿಸಾಡಿ ವಸ್ತ್ರವನ್ನು ಸರಿಯಾಗಿ ಉಟ್ಟುಕೊಂಡಿರಿ" ಎಂದು ಹೇಳಿದನು. "ಹಾಗೆಯೇ ಮಾಡುವೆವು"– ಎಂದುಕೊಂಡು, ಆ ದಿನದಿಂದ ಹಿಡಿದು ಉತ್ತರ ದೇಶದವರು ವಪ್ರಪಾಳನ ರಾಜ್ಯದಲ್ಲಿ ಅರೆ ಬಟ್ಟೆ ಉಡುವುದನ್ನು ಬಿಟ್ಟು ಕಚ್ಚೆಹಾಕದೆ ಸರಿಯಾಗಿ ಧರಿಸುವವರೂ ಚಿಕ್ಕ ಮಡಿ ಬಟ್ಟೆಯನ್ನು ಹೊದೆಯುವವರೂ ಆದರು. ಅಲ್ಲಿಂದೀಚೆಗೆ ಕಂಬಳಿ ಹೊದೆಯುವ ಶಾಖೆಯೂ (ಸಂಪ್ರದಾಯವೂ) ಆಯಿತು. ಆ ಶಾಖೆಯವರು ಶ್ವೇತಾಂಬರರಾದರು. ದಕ್ಷಿಣ ದೇಶದಲ್ಲಿ ಸಾಮಳಿ ಪುತ್ರನೆಂಬ ರಾಜನು ಅವರದೇ ಪರಂಪರೆಗೆ ಸೇರಿದ ಶ್ವೇತಾಂಬರಯತಿಗಳ ಜಾಪುಲಿ ಎಂಬ ನಗರದ ಸಂಘಕ್ಕೆ ಮೂಲಪುರುಷನಾದನು. ಇತ್ತ ಸಂಪ್ರತಿ ಚಂದ್ರಗುಪ್ತಮುನಿ ಅತ್ಯಂತ ಘೋರವಾದ ತಪಸ್ಸನ್ನು ಆಚರಿಸಿ ಸಂನ್ಯಾಸ ಕ್ರಮದಿಂದ ಅತ್ಯಂತ ಪರಿಶುದ್ಧವೂ ಸಹಜವೂ ಆದ ಸಮ್ಯಗ್ದರ್ಶನ-ಜ್ಞಾನ–ಚಾರಿತ್ರಗಳೆಂಬ ರತ್ನತ್ರಯವನ್ನು ಪಡೆದು, ಸತ್ತು ಬ್ರಹ್ಮಕಲ್ಪದಲ್ಲಿ ಹತ್ತು ಸಾಗರದಷ್ಟು ಆಯುಷ್ಯವಿರತಕ್ಕ ಶ್ರೀಧರನೆಂಬ ದೇವನಾಗಿ ಹುಟ್ಟಿದನು. ಹೀಗೆ ಈ ಭದ್ರಬಾಹುಋಷಿಗಳ ಕಥೆ ಹೇಳಲ್ಪಟ್ಟಿತು. ಸಂನ್ಯಾಸವನ್ನು ಕೈಗೊಂಡ ಬೇರೆಯವರು ಕೂಡ, ಭದ್ರಬಾಹುಋಷಿಗಳನ್ನು ಮನಸ್ಸಿನಲ್ಲಿ ಧ್ಯಾನಿಸಿಕೊಂಡು, ಹಸಿವು, ಬಾಯಾರಿಕೆ, ಶೀತ, ಸೊಳ್ಳೆ, ನೊಣ ಮುಂತಾದವುಗಳಿಂದ ಆಗ ತಕ್ಕ ಬಾಧೆಯನ್ನು ಸಹಿಸಿ, ಅತ್ಯಂತ ಪರಿಶುದ್ಧವಾದ ರತ್ನತ್ರಯವನ್ನು ಪಡೆದರು. ಹಾಗೆಯೇ ಸಂನ್ಯಾಸವನ್ನು ಮಾಡಿದ

ಗೆಯ್ದು ಭವ್ಯರ್ಕಳುಂ ಪಸಿವುಂ ನೀರಟಿಕೆ ಮೊದಲಾಗೊಡೆಯ ಪರೀಷಹಂಗಳಂ ಸೈರಿಸಿ ಸಮಾಧಿ ಮರಣದಿಂ ಮುಡಿಪಿ ಪರಮ ಶುದ್ಧ ಸಹಜ ರತ್ನತ್ರಯಂಗಳಂ ಸಾಧಿಸಿ ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

ಪುಣ್ಯವಂತರು ಹಸಿವು ಬಾಯಾರಿಕೆ ಮೊದಲಾಗಿ ಉಳ್ಳ ತೊಂದರೆಗಳನ್ನು ಸಹಿಸಿ, ಸಮಾಧಿ ಸ್ಥಿತಿಯಲ್ಲಿ ಸತ್ತು ಅತ್ಯಂತ ಪರಿಶುದ್ಧವೂ ಸಹಜವೂ ಆದ ರತ್ನತ್ರಯಗಳನ್ನು ಸಾಧಿಸಿ ಸ್ವರ್ಗ-ಮೋಕ್ಷ ಸುಖಗಳನ್ನು ಪಡೆಯಲಿ !.

## ೭. ಲಲಿತಘಟೆಯ ಕಥೆ

ಲಲಿತಘಟೆಯ ಕಥೆಯಂ ಪೇೞ್ವೆಂ :

ಗಾಹೆ॥ ಕೋಸಂಬೀ ಲಲಿತಘಟಾ ಓಘಾ ಣದೀಏ ಪೂರೇಣ ತಿವ್ವೇಣ
ಆರಾಧಣಾಂ ಪವಣ್ಣಾ ಪಾಓವಗಯಾ ಅಮೂಢಮದೀ ॥

[ಕೋಸಂಬೀ-ಕೌಶಾಂಬಿಯೆಂಬ ಪೊೞಲೊಳ್, ಲಲಿತಘಟಾ-ಲಲಿತಘಟೆ, ಓಘಾ-ಎೞೆಯೆ ಪಟ್ಟತ್ತು, ಣದೀಏಪೂರೇಣ-ತೊಱೆಯ ಪೂರದಿಂದಂ, ತಿವ್ವೇಣ-ಆದಮಾನುಂ ಕಡಿದಪ್ಪುದಱಿಂದಂ, ಆರಾಧಣಂ-ನಿಜಾತ್ಮಾರಾಧನೆಯುಂ, ಪವಣ್ಣಾ-ಪೊರ್ದಿತ್ತು, ಪಾಓವಗಯಾ-ಪ್ರಾಯೋಪಗಮನಕ್ಕೆ ಸಂದುದಾಗಿ, ಅಮೂಢಮದೀ-ಮೋಹಿಸದ ಬುದ್ಧಿಯನೊಡೆಯುದು] ಅದೆಂತೆಂದೊಡೆ : ಈ ಜಂಬೂದ್ವೀಪದ ಭರತ ಕ್ಷೇತ್ರದೊಳ್ ವತ್ಸೆಯೆಂಬುದು ನಾಡಲ್ಲಿ ಕೌಶಂಬಿಯೆಂಬುದು ಪೊೞಲದನಾಳ್ವೆಂ ಹರಿಧ್ವಜನೆಂಬೊನರಸನಾತನ ಮಹಾದೇವಿ ವಾರುಣಿಯೆಂಬೊಳಾಯಿರ್ವರ್ಗ್ಗಂ ಮಕ್ಕಳ್ ಶ್ರೀವರ್ಧನಂ ವಿಜಯಂಧರಂ ವೀರಬಾಹು ಮೊದಲಾಗಿ ಮೂವತ್ತಿರ್ವರ್ ಕುಮಾರರುಂ ಸಾಮಂತ ಮಹಾ ಸಾಮಂತರ ಮಕ್ಕಳುಮಂತೆಲ್ಲಮಯ್ನೂರ್ವರುಂ ರೂಪಿನೊಳಂ ತೇಜದೊಳಂ ಯೌವನದೊಳಂ ಶ್ರೀಯೊಳಂ ತಮ್ಮೊಳೋರನ್ನರಪ್ಪರದಱಿಂ ಲಲಿತಘಟೆಯೆಂಬೊರನಿಬರುಂ ಮಿಥ್ಯಾದೃಷ್ಟಿಗಳ್ ಪಂಡಿತರುಮೊಂದು ದಿವಸಂ ಶ್ರೀಕಾಂತಮೆಂಬ ಪರ್ವತದಡವಿಗನಿಬರುಂ ಬೇಂಟೆಯಾಡಲ್ ಪೋದಲ್ಲಿ ಇರ್ದೊರಭಯಘೋಷ

ಲಲಿತಘಟೆಯ ಕಥೆಯನ್ನು ಹೇಳುವೆನು: [ಕೌಶಾಂಬಿ ಎಂಬ ಪಟ್ಟಣದಲ್ಲಿ ಲಲಿತಘಟೆ ಹೊಳೆಯ ಪ್ರವಾಹದಿಂದ ತೊಳೆಯಲ್ಪಟ್ಟಿತು. ಮೋಹಗೊಳ್ಳದ ಬುದ್ಧಿಯುಳ್ಳುದಾಗಿ ಅತ್ಯಂತ ಕಠಿಣವಾದ ತನ್ನ ಆತ್ಮಾರಾಧನೆಯನ್ನು ಆಚರಿಸಿತು.] ಅದು ಹೇಗೆಂದರೆ: ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ವತ್ಸೆ ಎಂಬ ನಾಡು ಇದೆ. ಆ ನಾಡಿನಲ್ಲಿ ಕೌಶಂಬಿ ಎಂಬ ಪಟ್ಟಣವಿದೆ. ಅದನ್ನು ಹರಿಧ್ವಜನೆಂಬ ರಾಜನು ಆಳುತ್ತಿದ್ದನು. ಅವನ ರಾಣಿ ವಾರುಣಿ ಎಂಬವಳು. ಆ ದಂಪತಿಗಳಿಗೆ ಶ್ರೀವರ್ಧನ, ವಿಜಯಂಧರ, ವೀರಬಾಹು ಮುಂತಾದ ಮೂವತ್ತೆರಡು ಮಂದಿ ಮಕ್ಕಳಿದ್ದರು. ಆ ಮಕ್ಕಳೂ ಸಾಮಂತರ ಮತ್ತು ಮಹಾಸಾಮಂತರ ಮಕ್ಕಳೂ ಅಂತೂ ಎಲ್ಲ ಒಟ್ಟಿಗೆ ಐನೂರು ಮಂದಿಯಿದ್ದರು. ಅವರು ರೂಪದಲ್ಲಿಯೂ ತೇಜಸ್ಸಿನಲ್ಲಿಯೂ ತಾರುಣ್ಯದಲ್ಲಿಯೂ ಐಶ್ವರ್ಯದಲ್ಲಿಯೂ ತಮ್ಮಲ್ಲಿ ಸಮಾನರಾಗಿದ್ದರು. ಆದುದರಿಂದ ಲಲಿತಘಟೆ ಎಂದು ಎಂದು ಅವರ ಗುಂಪಿಗೆ ಹೆಸರಾಗಿತ್ತು. ಅವರೆಲ್ಲರೂ ಜೈನಧರ್ಮದಲ್ಲಿ ವಿಶ್ವಾಸವಿಲ್ಲದ ಕುದೃಷ್ಟಿಗಳೂ ವಿದ್ವಾಂಸರೂ ಆಗಿದ್ದರು. ಅವರೆಲ್ಲರೂ ಒಂದು ದಿವಸ ಶ್ರೀಕಾಂತವೆಂಬ ಬೆಟ್ಟದ ಕಾಡಿಗೆ ಬೇಟೆಯಾಡಲು

ರೆಂಬ ಭಟಾರರವಗ್ಗ್ರಭಯಘೋಷರೆಂಬ ಪೆಸರೆಂತಾದುವೆಂದೊಡವರ್ ಗರ್ಭದೊಳಿರ್ದಂತೆ ಅವರ ತಾಯ್ಗೆ ಜೀವಂಗಳಂ ಕೊಲ್ಲದಂತಪ್ಪ ಬಯಕೆಯಾಗಿ ಅಭಯಘೋಷಣೆಯಂ ಪೊೞಲೊಳಂ ನಾಡೊಳಂ ಪೊಯ್ಸಿ ಜೀವಂಗಳ್ಗಭಯದಾನಂಗೊಟ್ಟು ಪುಟ್ಟಿದರಪ್ಪುದಱಿಂದವಗ್ಗ್ರಭಯ ಘೋಷರೆಂಬ ಪೆಸರಾದುದಂತಪ್ಪ ಭಟಾರರಡವಿಯೊಳಿರೆ ಅವರ ತಪೋಮಾಹಾತ್ಮ್ಯದಿಂ ಲಲಿತ ಘಟೆಗೊಂದು ಮಿಗಮಪ್ಪೊಡಂ ಬೇಂಟೆ ಸಮನಿಸದೆ ಪೊೞಲ್ಗೆ ಪೋದೊರಿಂತೇೞುಂ ದಿವಸಮುಂ ಬಿಡದಡವಿಗೆ ಬೇಂಟೆಯಾಡಲ್ ಪೋಗಿ ಒಂದು ಮೃಗಮಪ್ಪೊಡಂ ಸಮನಿಸದೆ ಬೇಸತ್ತುೞಲ್ದು ಪೊೞಲ್ಗೆಪೋಗಿ ಎಂಟನೆಯ ದಿವಸದಂದು ಶ್ರೀಕಾಂತಮೆಂಬ ಪರ್ವತದಡವಿಗೆ ಲಲಿತಘಟೆ ಬೇಂಟೆಯಾಡಲ್ ಪೋಗಿ ಅಡವಿಯೊಳ್ ಮೃಗಂಗಳನಱಸುತ್ತಂ ತೊೞಲ್ವರನ್ನೆಗಮಭಯ ಘೋಷ ಭಟಾರರಾಯತಿಯುಂ ತೊಟ್ಟನೆ ಸರ್ವಾಂಗಮಲಧಾರಿಗಳೊಂದು ಶಿಲಾತಳದ ಮೇಗಿ ರ್ದಾಗಮಮುಮಂ ಪರಿವಿಡಿಗೆಯ್ಯುತ್ತುಮರ್ಥಮುಮಂ ಭಾವಿಸುತ್ತಂ ಸ್ವಾಧ್ಯಾಯದೊಳ್ ತಗುಳ್ದಿ ರ್ದೊರಂ ಸಂಛನ್ನಮಪ್ಪಡವಿಯ ಮಱೆಯೊಳ್ ಗೆಂಟಱಿಂದಂ ಲಲಿತಘಟೆ ಕಂಡಪೂರ್ವಮಿ ದೊಂದು ಕರಿಯಮೃಗಮಿರ್ದುದೆಂದು ಬಗೆದು ಶ್ರೀವರ್ಧನ ಕುಮಾರಂ ಮೊದಲಾಗನಿಬರುಂ

ಹೋದರು. ಅಲ್ಲಿ ಅಭಯ ಘೋಷರೆಂಬ ಋಷಿಗಳಿದ್ದರು. ಅವರಿಗೆ ಅಭಯಘೋಷರೆಂಬ ಹೆಸರು ಹೇಗಾಯಿತೆಂದರೆ:- ಅವರು ತಾಯಿಯ ಗರ್ಭದಲ್ಲಿದ್ದಾಗ ಆಕೆಗೆ ಪ್ರಾಣಿಗಳನ್ನು ಕೊಲ್ಲದಂತಹ (ಅಹಿಂಸೆಯ) ಬಯಕೆಯಾಗಿ ಪಟ್ಟಣದಲ್ಲಿಯೂ ನಾಡನಲ್ಲಿಯೂ ಅಭ ಯದ ಡಂಗುರವನ್ನು ಹೊಡೆಸಿ, ಜೀವಿಗಳಿಗೆಲ್ಲ ಅಭಯದಾನವನ್ನು ಕೊಟ್ಟು ಹುಟ್ಟಿದುದ ರಿಂದ ಅವರಿಗೆ ಅಭಯಘೋಷರೆಂಬ ಹೆಸರಾಯಿತು. ಅಂತಹ ಋಷಿಗಳು ಕಾಡಿನಲ್ಲಿ ಇದ್ದುದರಿಂದ ಅವರ ತಪಸ್ಸಿನ ಮಹಿಮೆಯಿಂದ ಲಲಿತಘಟೆಗೆ ಒಂದೇ ಒಂದು ಮೃಗ ವಾದರೂ ಬೇಟೆ ದೊರಕಲಿಲ್ಲ. ಅವರು ಪಟ್ಟಣಕ್ಕೆ ತೆರಳಿದರು. ಹೀಗೆ ಏಳು ದಿವಸವೂ ಬಿಡದೆ ಕಾಡಿಗೆ ಬೇಟೆಯಾಡಲು ಹೋಗಿ ಒಂದು ಮೃಗವಾದರೂ ಸಿಕ್ಕದೆ ಬೇಸರಪಟ್ಟು ದುಃಖಪಟ್ಟು ಪಟ್ಟಣಕ್ಕೆ ಹೋದರು. ಎಂಟನೆಯ ದಿವಸದಂದು ಲಲಿತಘಟೆ ಬೇಟೆಯಾಡು ವುದಕ್ಕಾಗಿ ಶ್ರೀಕಾಂತವೆಂಬ ಪರ್ವತದ ಕಾಡಿಗೆ ಹೋಗಿ ಕಾಡಿನಲ್ಲಿ ಮೃಗಗಳನ್ನು ಹುಡು ಕುತ್ತ ಅವರು ಸುತ್ತಾಡುತ್ತಿದ್ದರು. ಆಗ ಅಭಯಘೋಷ ಮಹರ್ಷಿಗಳು ಇಡೀ ಶರೀರ ದಲ್ಲಿ ಮಲಧಾರಿಗಳಾಗಿ (ಸ್ನಾನ ಶೌಚ ಮುಂತಾದವನ್ನು ಮಾಡದಿರುವ ತಪಸ್ವಿಗಳಾಗಿ) ಮನಸ್ಸಿನ ಏಕಾಗ್ರತೆಯಿಂದ ಇದ್ದುಕೊಂಡು ಒಂದು ಕಲ್ಲಿನ ಮೇಲೆ ಕುಳಿತು ಶಾಸ್ತ್ರ ವನ್ನು ಅನುಕ್ರಮವಾಗಿ ಹೇಳುತ್ತ, ಅದರ ಅರ್ಥವನ್ನು ಭಾವಿಸುತ್ತ, ಓದಿನಲ್ಲಿ ತತ್ಪರರಾಗಿ ದ್ದರು. ಅವರನ್ನು ದಟ್ಟವಾದ ಕಾಡಿನಲ್ಲಿ ಥಕ್ಕನೆ ದೂರದಿಂದ ಕಂಡ ಲಲಿತಘಟೆಯವರು ಅದೊಂದು ಅಪೂರ್ವವಾದ ಕಪ್ಪು ಮೃಗವಿರಬೇಕೆಂದು ಭಾವಿಸಿದರು. ಶ್ರೀವರ್ಧನ ಕುಮಾರ ಮೊದಲಾದ ಅವರೆಲ್ಲರೂ ಬಿಲ್ಲುಗಳನ್ನು ಏರಿಸಿ ಬಿಲ್ಲಿನ ಹಗ್ಗಕ್ಕೆ ಬಾಣವನ್ನು

ಬಿಲ್ಗಳನೇಱಿಸಿ ತಿರುವಾಯೊಳಂಬನಿಟ್ಟೆಸಲೆಂದು ತೆಗೆದಿಸುವನ್ನೆಗಮನಿಬರ ಬಿಲ್ಗಳುಂ ಮುಱಿದು ದವರ್ಗ್ಗಳನಿಬರುಂ ಪೆಱಗಣ್ಗುರುಳ್ದು ಬಿೞ್ದೊಡಿದು ಮಹಾಚೋದ್ಯಂ ಸಾರೆ ಪೋಗಿ ನೋೞ್ಪೆಮೆಂದು ಪೋಪರನ್ನೆಗಂ ಋಷಿಯರ ರೂಪಂ ಕಂಡಿವರ್ ಋಷಿಯರ್ ಮೃಗಮಲ್ಲೆಂದು ಸಾರೆ ಪೋಗಿ ಅವರುಪಶಮಮುಮಂ ತಪಮುಮಂ ಕಂಡನಿಬರ್ಗ್ಗುಪಶಮಮಾಗಿ ಕುಳ್ಳಿರ್ದು ಧರ್ಮಮಂ ಪೇೞಿಂ ಭಟ್ಟಾರಾ ಎಂದು ಬೆಸಗೊಂಡೊಡೆ ಭಟ್ಟಾರರಿಂತೆಂದು ಪೇೞಲ್ ತೊಡಗಿದರ್ :

ಗಾಹೆ॥ ಸೋ ಧಮ್ಮೋ ಜತ್ಥ ದಯಾ ಸೋ ವಿ ತಓ ವಿಸಯಣಿಗ್ಗಹೋ ಜತ್ಥ
ದಸ ಅಟ್ಠ ದೋಸ ರಹಿಓ ಸೋ ದೇವೋ ಣತ್ಥಿ ಸಂದೇಹೋ

ಎಂದಿಂತು ಜೀವಂಗಳಂ ಕೊಲ್ಲದುದೆ ಧರ್ಮಂ ಬಾಹ್ಯಾಭ್ಯಂತರ ಪರಿಗ್ರಹಂಗಳಂ ತೊಱೆ[3]ದಯ್ದುಮಿಂದ್ರಿಯಂಗಳಂ ಗೆಲ್ದು ಇರ್ಪತ್ತೆರಡು ಪರೀಷಹಂಗಳಂ ಸೈರಿಸಿ ಯಮನಿಯಮ ಸ್ವಾಧ್ಯಾಯ ಧ್ಯಾನಾನುಷ್ಠಾನ ಪರಾಯಣರಾಗಿ ತಪಂಗೆಯ್ವ ರಿಷಿಯರ್ಕಳೆ ತಪಸ್ವಿಯರ್ ಪಸಿವು ನೀರೞ್[3]ಕೆ ಮೊದಲಾಗೊಡೆಯ ಪದಿನೆಂಟು ದೋಷಂಗಳನಿಲ್ಲದೊಂ ಪರಮಾತ್ಮನೆಂದಿಂತು ಪೇೞ್ದು ಮತ್ತಮಿಂತೆಂದರ್ :

ಇಟ್ಟು ಹೊಡೆಯಲೆಂದು ಪ್ರಯೋಗಿಸುವಾಗ ಅವರೆಲ್ಲ ಬಿಲ್ಲುಗಳೂ ಮುರಿದುಹೋದವು- ಅವರೆಲ್ಲರೂ ಹಿಂಗಡೆಗೆ ಉರುಳಿಬಿದ್ದರು- ಇದು ಬಹಳ ಆಶ್ಚರ್ಯಕರ ಸಂಗತಿ; ಹತ್ತಿರ ಹೋಗಿ ನೋಡೋಣ—ಎಂದು ಹತ್ತಿರಕ್ಕೆ ಹೋದರು. ಆಗ ಋಷಿಯ ರೂಪವನ್ನು ಕಂಡು "ಇವರು ಋಷಿಗಳು, ಮೃಗವಲ್ಲ"- ಎಂದು ಬಳಿಗೆ ಹೋಗಿ ಅವರ ಸಮಾಧಾನ ಚಿತ್ತತೆಯನ್ನೂ (ಶಾಂತಸ್ವಭಾವವನ್ನೂ) ತಪಸ್ಸನ್ನೂ ಕಂಡು ಅವರೆಲ್ಲರಿಗೂ ಮನಸ್ಸಿಗೆ ಶಾಂತಿ ಲಭಿಸಿತು. ಅವರೆಲ್ಲರೂ ಕುಳಿತು- "ಪೂಜ್ಯರೇ ನಮಗೆ ಧರ್ಮೋಪದೇಶ ಮಾಡಿ" ಎಂದು ಕೇಳಿದರು. ಆಗ ಋಷಿಗಳು ಈ ರೀತಿಯಾಗಿ ಹೇಳ ತೊಡಗಿದರು- [ಎಲ್ಲಿ ದಯೆ ಇದೆಯೋ ಅದುಧರ್ಮ. ಮತ್ತು ಎಲ್ಲಿ ಇಂದ್ರಿಯನಿಗ್ರಹವಿದೆ ಅದುಕೂಡ ಧರ್ಮ. ಹದಿನೆಂಟು ದೋಷಗಳಿಲ್ಲದವನು ದೇವತೆ–ಸಂಶಯವಿಲ್ಲ.] ಎಂದು ಈರೀತಿಯಾಗಿ ಜೀವಗಳನ್ನು ಕೊಲ್ಲದಿರುವುದೇ (ಅಹಿಂಸೆಯೇ) ಧರ್ಮ. ಹನ್ನೆರಡು ವಿಧದ ತಪಗಳನ್ನು ಸ್ವೀಕರಿಸಿ, ಪಂಚೇಂದ್ರಿಯಗಳನ್ನು ಗೆದ್ದು ಹಸಿವು–ಬಾಯಾರಿಕೆ–ಚಳಿ ಮುಂತಾದ ಇಪ್ಪತ್ತೆರಡು ವಿಧದ ಪರೀಷಹಗಳನ್ನು (ತೊಂದರೆಗಳನ್ನು) ಸಹಿಸಿಕೊಂಡು ಯಮ, ನಿಯಮ, ಸ್ವಾಧ್ಯಾಯ, ಧ್ಯಾನ, ಅನುಷ್ಠಾನಗಳಲ್ಲಿ ತತ್ಪರರಾಗಿ ತಪಸ್ಸನ್ನು ಆಚರಿಸುವ ಋಷಿಗಳೇ ತಪಸ್ವಿಗಳು. ಹಸಿವು, ಬಾಯಾರಿಕೆ, ಭಯ, ದ್ವೇಷ–ಮುಂತಾದ ಹದಿನೆಂಟು ದೋಷಗಳಿಲ್ಲದ ಅರ್ಹಂತನೇ ಪರಮಾತ್ಮನು. ಹೀಗೆ ಹೇಳಿದನಂತರ, ಇಂತೆಂದರು : ಜೀವನು

**ಗಾಹೆ॥** ಪಾವೇಣ ಣಿರಯತಿರಿಯಂ ಗುಮ್ಮ ಇ ಧಮ್ಮೇಣ ದೇವಲೋಗಂ ತು
ಮಿಸ್ಸೇಣ ಮಾಣುಸತ್ತಂ ದೋಣ್ಹಂ ಪಿ ಖಯೇಣ ಣಿವ್ವಾಣಂ

ಎಂಬುದಂ ಪಾಪಂಗೆಯ್ದವರುಂ ಬೇಂಟೆಯಾಡುವರುಂ ಮಧುಮದ್ಯಮಾಂಸಂಗಳಂ ಸೇವಿಸುವರುಂ ಬಾಲವಧೆ ಸ್ತ್ರೀವಧೆ ಗೋವಧೆ ಬ್ರಾಹ್ಮಣವಧೆ ಋಷಿವಧೆಯೆಂದೀ ಪಂಚಮಹಾಪಾತಕಂಗಳಂ ಗೆಯ್ದವರುಮಗಮ್ಯಾಗಮನಮಪೇಯಾಪೇಯಮಭಕ್ಷ್ಯಾಭಕ್ಷ್ಯಂ ಮೊದಲಾಗೊಡೆಯ ಪೊಲ್ಲಮೆಗಳೊಳ್ ನೆಗಟ್ದ ಘೋರಮಂ ಪಿರಿಯವುಮಪ್ಪ ಪಾಪಂಗಳಂ ಗೆಯ್ದೇಟನೆಯ ನರಕದೊಳ್ ಮೂವತ್ತುಮೂಱು ಸಾಗರೋಪಮಾಯುಷ್ಯಮನೊಡೆಯರ್ ನಾರಕರಾಗಿ ಪುಟ್ಟಿ ಛೇದನ ಭೇದನ ಪೂರಣ ಚೂರಣ ಪೀಡನ ಬಂಧಂಗಳುಮಂ ಮುಟ್ಟಿಗೆಯೊಳಿಟ್ಟು ತೆಗಪುವುದುಂ ಕೊಂತಂಗಳಿಂದಮಿಟ್ಟಿಗಳಿಂದಂ ಕರುಳ್ಗಳಂ ಸೋರೆ ಕುತ್ತುವುದುಂ ಚಕ್ರಗಳಿಂದಂ ತೆಗಲೆಯಂ ಪೊಕ್ಕನೆಪೋಗಿಡುವುದುಂ ಮರಂಗಳಂ ಪೋಟ್ವಂತೆ ಕರಗಸಂಗಳಿಂದಮುದ್ದಂ ಪಿಡಿದು ಪೋಟ್ವುದುಮೆಂದಿವು ಮೊದಲಾಗೊಡೆಯ ದುಃಖಂಗಳಂ ಕಣ್ಣೆವೆಯಿಕ್ಕುವನಿತು ಪೊೞ್ತಪ್ಪೊಡಮುಸಿರ್ ಪೊತ್ತಿಲ್ಲವೆ ದುಃಖಂಗಳನನುಭವಿಸುವರ್ ಮತ್ತೊಯ್ಯನೆ ಪಾಪಂಗಳಂ ಗೆಯ್ದವ

ಪಾಪದಿಂದ ನರಕವನ್ನೂ ಪ್ರಾಣಿಜನ್ಮಗಳನ್ನೂ ಪಡೆಯುತ್ತಾನೆ. ಧರ್ಮದಿಂದ ದೇವಲೋಕವನ್ನು ಪಡೆಯುತ್ತಾನೆ. ಪಾಪಪುಣ್ಯಮಿಶ್ರದಿಂದ ಮನುಷ್ಯತ್ವವನ್ನು ಪಡೆಯುತ್ತಾನೆ, ಮತ್ತು ಅವೆರಡರ ನಾಶದಿಂದ ಮೋಕ್ಷವನ್ನು ಹೊಂದುತ್ತಾನೆ. ಎಂಬುದನ್ನು ತಿಳಿಸಿದರು. ಅಲ್ಲದೆ, ಮದ್ಯಮಾಂಸಗಳನ್ನು ಸೇವಿಸುವವರು, ಬಾಲವಧೆ–ಸ್ತ್ರೀವಧೆ–ಗೋವಧೆ–ಬ್ರಾಹ್ಮಣವಧೆ- ಋಷಿವಧೆ ಎಂಬ ಈ ಐದು ಬಗೆಯ ಮಹಾಪಾಪಗಳನ್ನು ಮಾಡಿದವರು, ಪರಸ್ತ್ರೀಗಮನ- ಕುಡಿಯಬಾರದುದನ್ನು ಕುಡಿಯುವುದು– ತಿನ್ನಬಾರದುದನ್ನು ತಿನ್ನುವುದು ಮುಂತಾಗಿ ಇರುವ ಕೆಟ್ಟ ಕೆಲಸಗಳನ್ನು ಆಚರಿಸಿ ಉಗ್ರವೂ ದೊಡ್ಡವೂ ಆದ ಪಾಪಗಳನ್ನು ಮಾಡಿದವರು ಏಳನೆಯ ನರಕದಲ್ಲಿ ಮೂವತ್ತಮೂರು ಸಾಗರದಷ್ಟು ಆಯುಷ್ಯವುಳ್ಳವರಾಗಿ ನರಕಜೀವಿಗಳಾಗಿ ಹುಟ್ಟುವರು. ಅವರು ಅಲ್ಲಿ ಕತ್ತರಿಸುವುದು, ಸೀಳುವುದು, ಮುಳುಗಿಸುವುದು, ಚೂರುಮಾಡುವುದು, ಹಿಂಸಿಸುವುದು, ಬಿಗಿದುಕಟ್ಟುವುದು–ಎಂಬೀ ಹಿಂಸೆಗಳನ್ನು ಅನುಭವಿಸುವರು. ಅಲ್ಲದೆ, ಕೊಡತಿಯಿಂದ ಹೊಡೆದು ಚಿಮ್ಮಟಿಗಳಿಂದ ಎಳೆಯುವುದು, ಈಟಿಗಳಿಂದಲೂ ಬರ್ಚಿಗಳಿಂದಲೂ ಕರುಳು ಹೊರಕ್ಕೆ ಜಾರಿಬರುವಹಾಗೆ ಕುತ್ತುವುದು, ಎದೆ ಪೊಕ್ಕನೆ ಸೀಳಿಹೋಗುವಂತೆ ಚಕ್ರಾಯುಧಗಳಿಂದ ಹೊಡೆಯುವುದು, ಮರಗಳನ್ನು ಸೀಳುವ ಹಾಗೆ ಗರಗಸಗಳಿಂದ ಮೇಲಿನಿಂದ ಕೆಳಗಿನವರೆಗೆ ದೇಹವನ್ನು ಹಿಡಿದು ಸೀಳುವುದು– ಎಂದು ಇವೇ ಮೊದಲಾಗಿ ಉಳ್ಳ ದುಃಖಗಳನ್ನು ಕಣ್ಣಿನ ರೆಪ್ಪೆ ಬಡಿಯುವಷ್ಟು ಹೊತ್ತುಕೂಡ ಅವಕಾಶ ಕೊಡದೆ ಮಾತಾಡಲು ಕೂಡ ಸಮಯ ಕೊಡದೆ ಸಂಕಟಗಳನ್ನು ಅನುಭವಿಸುವರು. ಮೆಲ್ಲನೆಯ ಅಥವಾ ಹಗುರವಾದ ಪಾಪ

ಆನೆಯುಂ ಸಿಂಹಮುಂ ಪುಲಿಯುಂ ಕರಡಿಯುಂ ಪುಲ್ಲೆಯುಂ ಮೊಲನುಂ ಪಂದಿಯುಂ ತೋಳನುಂ ಸೀಳ್ನಾಯುಂ ಮತ್ತಮೆತ್ತುಂಕತ್ತೆಯುಂ ಪಶುವುಮೆಮ್ಮೆಯುಂ ಕುದುರೆನಾಯೊಟ್ಟೆಯುಮುಡುವುಂ ಪಾವುಮಿಲಿಯುಂ ಚೆರ್ಕುಮೊಂತಿಯುಂ ಕಪ್ಪೆಯುಂ ಮುಂಗುಸಿಯುಂ ಮೊದಲಾಗೊಡೆಯ ಸ್ಥಲಚರಂಗಳುಂ ಮೀನುಂ ಮೊಸಳೆಯುಂ ನೆಗಳುಮಾಮೆಯುಂ ಮಕರಮುಂ ತಿಮಿತಿಮಿಂಗಿಳಂ ಮೊದಲಾಗೊಡೆಯ ಜಲಚರಂಗಳುಂ ಕಾಗೆ ಗೂಗೆ ಪರ್ದು ಚಕೋರಂ ಪಂಸೆ ಕುರ್ಕು ಗಿಳಿ ಪುರುಳಿ ಪೆಂಗುರು ಕಾರಂಡವೆಂದೆ ಮೊದಲಾಗೊಡೆಯ ಗಗನಚರಂ ಪಂಚೇಂದ್ರಿಯಂಗಳುಮಾಗಿ ಮತ್ತಮೇಕೇಂದ್ರಿಯ ದ್ವೀಂದ್ರಿಯ ತ್ರೀಂದ್ರಿಯ ಚತುರಿಂದ್ರಿಯಂಗಳಾಗಿ ತಿರಿಕಗತಿಯೊಳ್ ಪುಟ್ಟಿ ಜೀವಂಗಳಿಂತು ಮಾಡಿದ ಪಾಪದ ಫಲಂಗಳಿಂದಂ ದುಃಖಂಗಳನೆಯ್ದುಗುಂ ವಾಕ್ಯ ॥ ಮಿಸ್ಸೇಣ ಮಾಣುಸತ್ತಮೆಂಬುದು ಪುಣ್ಯಪಾಪಂಗಳೆರಡುಮಂ ನೆಗೞ್ವರ್ ಮನುಷ್ಯಗತಿಯೊಳ್ ಪುಟ್ಟಿ ಮುಂಗೆಯ್ದ ಪಾಪಕರ್ಮದುದಯದಿಂದಂ ಶಾರೀರ ಮಾನಸಾಗಂತುಕ ಸಹಜಮಪ್ಪ ದುಃಖಂಗಳುಮನಿಷ್ಟಸಂಯೋಗಮಿಷ್ಟವಿಯೋಗಮುಂ ರಾಗಶೋಕಂಗಳುಂ ದಾರಿದ್ರ್ಯಮೆಂದಿವು ಮೊದಲಾಗೊಡೆಯವಱಿಂದಮಪ್ಪ ದುಃಖಂಗಳನೆಯ್ದು ಮತ್ತಮಾ ಜೀವಂಗಳ್ ಶುಭಕರ್ಮ

ಗಳನ್ನು ಮಾಡಿದವರು ಆನೆ, ಸಿಂಹ, ಹುಲಿ, ಕರಡಿ, ಜಿಂಕೆ, ಮೊಲ, ಹಂದಿ, ತೋಳ, ಕಾಡುನಾಯಿ ಅಥವಾ ನೀರುನಾಯಿಯಾಗಿಯೂ ಎತ್ತು, ಕತ್ತೆ, ಹಸು, ಎಮ್ಮೆ, ಕುದುರೆ, ನಾಯಿ, ಒಂಟೆ, ಉಡು, ಹಾವು, ಇಲಿ, ಚಿಕ್ಕು, ಓತಿ, ಕಪ್ಪೆ, ಮುಂಗುಸಿ ಮೊದಲಾದ ಸ್ಥಲಚರ (ನೆಲದ ಮೇಲೆ ಸಂಚರಿಸುವ) ಪ್ರಾಣಿಗಳಾಗಿಯೂ ಹುಟ್ಟುವರು. ಅದಲ್ಲವಾದರೆ, ಮೀನು, ಮೊಸಳೆ, ನೆಗಳು, ಆಮೆ, ಮಕರ, ತಿಮಿ ಎಂಬ ದೊಡ್ಡ ಮೀನು, ತಿಮಿಯನ್ನು ನುಂಗತಕ್ಕ ತಿಮಿಂಗಿಳವೆಂಬ ಮೀನು ಮೊದಲಾದ ಜಲಚರ (ನೀರಿನಲ್ಲಿ ಸಂಚರಿಸುವ) ಪ್ರಾಣಿಗಳಾಗಿ ಹುಟ್ಟುವರು. ಅದಲ್ಲವಾದರೆ– ಕಾಗೆ, ಗೂಗೆ, ಹದ್ದು, ಚಕೋರ (ಬೆಳದಿಂಗಳಹಕ್ಕಿ), ಹಂಸೆ, ನೀರುಹಕ್ಕಿ (ಭಾರದ್ವಾಜ ಹಕ್ಕಿ), ಗಿಳಿ, ಹೆಣ್ಣುಗಿಳಿ (ಸಾರಿಕೆ), ಕೊಕ್ಕರೆ, ನೀರುಕೋಳಿ, ಗೂಬೆ ಮುಂತಾಗಿರುವ ಹಕ್ಕಿಗಳಾಗಿ (ಆಕಾಶದಲ್ಲಿ ಸಂಚರಿಸುವವಾಗಿ) ಕಣ್ಣು ಕಿವಿ ಮೂಗು ನಾಲಗೆ ಚರ್ಮ–ಎಂಬ ಐದು ಇಂದ್ರಿಯಗಳುಳ್ಳವಾಗಿ ಹುಟ್ಟುವರು. ಅದಲ್ಲದೆ, ಒಂದು ಇಂದ್ರಿಯ ಮಾತ್ರವುಳ್ಳವಾಗಿ ಅಥವಾ ಎರಡು ಇಂದ್ರಿಯ, ಮೂರು ಇಂದ್ರಿಯ, ನಾಲ್ಕು ಇಂದ್ರಿಯಗಳುಳ್ಳ ಪ್ರಾಣಿಗಳ ಗತಿಯಲ್ಲಿ ಹುಟ್ಟುವರು. ಜೀವಿಗಳು ಈ ರೀತಿಯಾಗಿ ಮಾಡಿದ ಪಾಪದ ಪರಿಣಾಮವಾಗಿ ದುಃಖಗಳನ್ನು ಪಡೆಯುವುವು. 'ಮಿಶ್ರೇಣ ಮನುಷ್ಯತ್ವಂ' ಎಂಬ ವಾಕ್ಯದಂತೆ ಪುಣ್ಯ ಪಾಪ ಎಂಬ ಎರಡನ್ನೂ ಮಾಡುವವರು ಮನುಷ್ಯಜನ್ಮದಲ್ಲಿ ಬಂದು, ಹಿಂದೆಮಾಡಿದ ಪಾಪ ಕೃತ್ಯದ ಫಲದಿಂದ ಶಾರೀರಿಕ ಮಾನಸಿಕವಾಗಿ ಬರತಕ್ಕ ಸಹಜವಾದ ದುಃಖಗಳನ್ನೂ ಪ್ರಿಯವಾದುದು ಕೂಡಿಬರುವುದು ಅಥವಾ ಅಗಲುವುದು, ಹರ್ಷವಿಷಾದಗಳು, ಬಡತನ–ಎಂಬವು ಮೊದಲಾಗಿ ಉಳ್ಳವುಗಳಿಂದಾಗುವ ದುಃಖಗಳನ್ನೂ ಹೊಂದುವರು.

ದುದಯದಿಂದಂ ಶ್ರೀಯುಂ ಸಂಪತ್ತುಂ ವಿಭವಮುಂ ಐಶ್ವರ್ಯಮುಮಾರೋಗ್ಯಶರೀರಂಗಳುಮಾಗಿ ಪುತ್ರ ಮಿತ್ರ ಕಳತ್ರ ಸ್ವಜನ ಬಂಧುವರ್ಗದೊಳ್ ಕೂಡಿ ಸುಖಂ ಬಾಳ್ವುದುಮಕ್ಕುಮಿಂತು

ಶ್ಲೋಕ ॥ ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಂ
ಚಕ್ರವತ್ ಪರಿವರ್ತಂತೇ ದುಃಖಾನಿ ಚ ಸುಖಾನಿ ಚ ॥

ಇಂತು ಮನುಷ್ಯಗತಿಯೊಳ್ ಪುಟ್ಟಿ ಸೂಟ್ಸೂಟ್ಗೊಳೆ ಸುಖದುಃಖಂಗಳಂ ಜೀವಂಗಳ ನುಭವಿಸುವಂತೆ ಗಚ್ಛಂತಿ ಧರ್ಮೇಣ ದೇವಲೋಕಂ ಹಿ ಎಂಬುದುಂ ಕೇವಳಮೆ ಧರ್ಮಂ ಗೆಯ್ವವರ್ ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತಾರ ಣಾಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಮಲ್ಲಿಂ ಮೇಗಣ ಸುದರ್ಶನಾಮೋಘ ಸುಪ್ರ ಬುದ್ಧ ಯಶೋಧರ ಸುಭದ್ರ ಸುವಿಶಾಳ ಸುಮನಸ ಸೌಮನಸ ಪ್ರೀತಿಂಕರಮೆಂಬ ನವಗ್ರೈ ವೇಯಕಂಗಳೊಳಮಲ್ಲಿಂ ಮೇಗಣ ಲಚ್ಚಿ ಮಹಾಲಚ್ಚಿ ಮಾಳಿನಿ ವೈರೆ ವೈರೋಚನೆ ಸೋಮೆ ಸೋಮರೂಪೆ ಅಂಕೆ ಪಳಿಕೆ ಅಯಿಚ್ಚೆಯೆಂಬ ನವಾನುದ್ದಿಸೆಗಳೊಳಮಲ್ಲಿಂ ಮೇಗಣ ವಿಜಯ ವೈಜಯಂತ ಜಯಂತಾಪರಾಜಿತ ಸರ್ವಾರ್ಥಸಿದ್ಧಿಯೆಂದಿಂತು ಪಂಚಾಣುತ್ತರೆಗಳೊಳಮೆರಡು

ಆ ಜೀವಗಳು ಮಂಗಳಕರವಾದ ಕಾರ್ಯಗಳಿಂದ ಕಾಂತಿ, ಸಂಪತ್ತು, ವೈಭವ, ಐಶ್ವರ್ಯಗಳನ್ನು ಪಡೆದು, ರೋಗವಿಲ್ಲದ ದೇಹವುಳ್ಳವಾಗಿ ಮಕ್ಕಳು, ಗೆಳೆಯರು, ಹೆಂಡತಿ, ಸ್ವಜನರು, ಬಂಧುವರ್ಗಗಳಿಂದ ಕೂಡಿ ಸುಖವಾಗಿ ಬಾಳುನಂತಾಗುವುದು. [ಸುಖವುಂಟಾದ ನಂತರ ದುಃಖ, ದುಃಖವುಂಟಾದನಂತರ ಸುಖ–ಹೀಗೆ ದುಃಖಗಳೂ ಸುಖಗಳೂ ಚಕ್ರ ದಂತೆ ತಿರುಗಿ ಬರುತ್ತ ಇರುತ್ತವೆ.] ಜೀವಗಳು ಈ ರೀತಿಯಾಗಿ ಮನುಷ್ಯಜನ್ಮದಲ್ಲಿ ಬಂದು ಬಾರಿಬಾರಿಗೂ ಸುಖಗಳನ್ನೂ ದುಃಖಗಳನ್ನೂ ಅನುಭವಿಸುವುವು. "ಗಚ್ಛಂತಿ ಧರ್ಮೇಣ ದೇವಲೋಕಂ ಹಿ" ಎಂಬ ವಾಕ್ಯದಂತೆ ಕೇವಲ (ಜೈನ) ಧರ್ಮವನ್ನು ಆಚರಿಸಿ ದವರು ಸೌಧರ್ಮ, ಈಶಾನ, ಸನತ್ಕುಮಾರ, ಮಾಹೇಂದ್ರ, ಬ್ರಹ್ಮ, ಬ್ರಹ್ಮೋತ್ತರ, ಲಾಂತವ, ಕಾಪಿಷ್ಠ, ಶುಕ್ರ, ಮಹಾಶುಕ್ರ, ಶತಾರ, ಸಹಸ್ರಾರ, ಆನತ, ಪ್ರಾಣ, ತಾರಣ, ಅಚ್ಯುತ–ಎಂಬ ಹದಿನಾರು ಕಲ್ಪ (ಸ್ವರ್ಗ)ಗಳಲ್ಲಿಯೂ ಅಲ್ಲಿಂದ ಮೇಲೆ ಇರ ತಕ್ಕ ಸುದರ್ಶನ, ಅಮೋಘ, ಸುಪ್ರಬುದ್ಧ, ಯಶೋಧರ, ಸುಭದ್ರ, ಸುವಿಶಾಳ, ಸುಮನಸ, ಸೌಮನಸ, ಪ್ರೀತಿಂಕರವೆಂಬ ಗ್ರೈವೇಯಕಗಳಲ್ಲಿಯೂ ಅಲ್ಲಿಂದಲೂ ಮೇಲೆ ಇರತಕ್ಕ ಸ್ವರ್ಗಗಳಾದ ಲಚ್ಚಿ, ಮಹಾಲಚ್ಚಿ, ಮಾಳಿನಿ, ವೈರೆ, ವೈರೋಚನೆ, ಸೋಮೆ, ಸೋಮರೂಪೆ, ಅಂಕೆ ಪಳಿಕೆ, ಅಯಿಚ್ಚೆ–ಎಂಬ ಒಂಬತ್ತು ವಿಧದ ಅನುದ್ದಿಸೆಗಳಲ್ಲಿಯೂ ಅಲ್ಲಿಂದಲೂ ಮೇಗಣ ಸ್ವರ್ಗಗಳಾದ ವಿಜಯ, ವೈಜಯಂತ, ಜಯಂತ, ಅಪರಾಜಿತ, ಸರ್ವಾರ್ಥಸಿದ್ಧಿ–ಎಂಬೀ ಐದು ಅಣುತ್ತರೆಗಳಲ್ಲಿಯೂ ದೇಹತ್ಯಾಗ ಮಾಡಿದ ಎರಡು

ಘಳಿಗೆಯಿಂದೊಳಗೆ ಪಾಸಿನ ಪೊರೆಯೊಳ್ ಪುಟ್ಟಿ ಇಂದ್ರಪ್ರತೀಂದ್ರ ಸಾಮಾನಿಕ ತ್ರಯಸ್ತ್ರಿಂಶ ಪಾರಿಷದಾತ್ಮರಕ್ಷ ಲೋಕಪಾಲಾಹಮಿಂದ್ರತ್ವಮೆಂದೀ ಮಹರ್ಧಿಕದೇವರಾಗಿ ಅಣಿಮಾ ಮಹಿಮಾ ಲಘಿಮಾ ಪ್ರಾಪ್ತಿ ಪ್ರಾಗಲ್ಭ್ಯಮೀಶಿತ್ವ ವಶಿತ್ವ ಕಾಮರೂಪಿತ್ವಮೆಂದೀ ಅಷ್ಟ ಗುಣೈಶ್ವರ್ಯಂಗಳೊಳ್ ಕೂಡಿ ಅತ್ಯಂತ ರೂಪ ಲಾವಣ್ಯ ಸೌಭಾಗ್ಯ ಕಾಂತಿತ್ವಮುಂ ಸುಗಂಧ ಮಪ್ಪ ಶ್ವಾಸನಿಶ್ವಾಸಂಗಳುಮನೊಡೆಯರಾಗಿ ಆಯುಷ್ಯಾಂತಂ ಬರೆಗಂ ನವಯೌವನರಾಗಿ ಮುಪ್ಪುಮಪಮೃತ್ಯು ಮೂತ್ರ ಪುರೀಷಂಗಳುಂ ಗಂಡ ಕಕ್ಷಾ ಕುಕ್ಷಿ ಪ್ರದೇಶಂಗಳ ರೋಮಂ ಗಳುಂ ರೋಗ ಶೋಕ ದುಃಖಂಗಳುಂ ರಸರುಧಿರ ಮಾಂಸ ಮೇದೋಸ್ಥಿ ಮಜ್ಜ ಶುಕ್ಲಮೆಂದಿಂತು ಸಪ್ತಧಾತುಗಳುಮುಮಿವು ಮೊದಲಾಗೊಡೆಯುವಿಲ್ಲದೊರ್ ಸಹಜಮಪ್ಪ ಕಟಕ ಕಟಿಸೂತ್ರ ಕುಂಡಲಾಭರಣಂ ಮೊದಲಾಗೊಡೆಯ ಪದಿನಾಱುಮಾಭರಣಂಗಳಂ ತೊಟ್ಟು ದಿವ್ಯವಸ್ತ್ರಂ ಗಳನುಟ್ಟಾದಿತ್ಯನ ತೇಜದಿಂದಗ್ಗಳಮಪ್ಪ ತೇಜದೊರಾಗಿ ಕಣ್ಣೆಮೆಯುಕ್ಕುವನಿತು ಪೊೞ್ತುಪ್ಪೊಡಂ ದುಃಖಮಿಲ್ಲದೊರೆರಡು ಸಾಗರೋಪಮಂ ಮೊದಲಾಗಿ ಮೂವತ್ತುಮೂಱು ಸಾಗರೋಪಮಂ ಬರೆಗಮಾಯುಷ್ಯಮನೊಡೆಯರಾಗಿ ಆಟಪಾಟ ವಿನೋದಂಗಳಿಂದಂ ದೇವಿಯರಪ್ಸರಸಿಯರ್ಕ ಳೊಡನೆ ಪಲಕಾಲಂ ದಿವ್ಯಸುಖಮನನುಭವಿಸಿ ಆಯುಷ್ಯಾಂತದೊಳಿಂತಿಲ್ಲಿ ಮನುಷ್ಯಗತಿಯೊಳ್

ಗಳಿಗೆಗಳೊಳಗೆ ಹಾಸಿಗೆಯ ಸಮೀಪವೇ ಹುಟ್ಟಿ ಇಂದ್ರ, ಪ್ರತೀಂದ್ರ, ಸಾಮಾನಿಕ, ತ್ರಯಸ್ತ್ರಿಂಶ, ಪಾರಿಷದ, ಆತ್ಮರಕ್ಷ, ಲೋಕಪಾಲ, ಅಹಮಿಂದ್ರ–ಎಂಬ ಮಹರ್ಧಿಕ ದೇವರಾಗುವರು. ಅಣಿಮಾ, ಮಹಿಮಾ, ಲಘಿಮಾ, ಪ್ರಾಪ್ತಿ, ಪ್ರಾಗಲ್ಭ್ಯ, ಈಶಿತ್ವ, ವಶಿತ್ವ, ಕಾಮರೂಪಿತ್ವ–ಎಂಬ ಎಂಟುಗುಣಗಳುಳ್ಳ ಐಶ್ವರ್ಯಗಳಿಂದ ಕೂಡಿ ಅತಿಶಯವಾದ ರೂಪ ಸೌಂದರ್ಯ ಸೌಭಾಗ್ಯ ತೇಜಸ್ಸನ್ನೂ ಸುವಾಸನೆಯುಳ್ಳ ಉಚ್ಛ್ವಾಸ ನಿಶ್ವಾಸಗಳನ್ನೂ ಉಳ್ಳವರಾಗಿ ಆಯುಷ್ಯದ ಕೊನೆಯವರೆಗೂ ತಾರುಣ್ಯವುಳ್ಳವರಾಗಿ ವೃದ್ಧಾಪ್ಯ ಅಪಮೃತ್ಯುಗಳಿಲ್ಲದವರೂ ಮೂತ್ರ, ಮಲಗಳೂ ಕೆನ್ನೆ ಕಂಕುಳು ಹೊಟ್ಟೆಗಳಲ್ಲಿ ರೋಮಗಳೂ ರೋಗ ಶೋಕ ದುಃಖಗಳೂ ರಸ, ರಕ್ತ, ಮಾಂಸ, ಮೇಧಸ್ಸು, ಎಲುಬು, ಕೊಬ್ಬು, ವೀರ್ಯ ಎಂಬ ಏಳು ಬಗೆಯ ಧಾತುಗಳು ಮುಂತಾದವು ಇಲ್ಲದವರಾಗಿ ಜನಿಸುವರು. ಹುಟ್ಟುವಾಗಲೇ ಅವರು ಉಡಿನೂಲು, ಕುಂಡಲ, ಆಭರಣ ಮುಂತಾಗಿರುವ ಹದಿನಾರು ಬಗೆಯ ಆಭರಣಗಳನ್ನು ಧರಿಸಿ ದಿವ್ಯವಾದ ಉಡಿಗೆಗಳನ್ನು ಉಟ್ಟುಕೊಂಡಿರುವರು. ಸೂರ್ಯನ ತೇಜಕ್ಕಿಂತಲೂ ಹೆಚ್ಚಿನ ತೇಜಸ್ಸು, ಉಳ್ಳವರಾಗಿ ಕಣ್ಣಿನ ರೆಪ್ಪೆ ಬಡಿಯುವಷ್ಟು ಹೊತ್ತು ಕೂಡ ದುಃಖವೆಂಬುದೇ ಇಲ್ಲದವರಾಗುವರು. ಎರಡು ಸಾಗರದಷ್ಟು ಆಯುಷ್ಯದಿಂದ ತೊಡಗಿ ಮೂವತ್ತಮೂರು ಸಾಗರದಷ್ಟರವರೆಗೆ ಆಯುಷ್ಯವುಳ್ಳವರಾಗುವರು. ಆಟ, ಪಾಟ, ವಿನೋದಗಳಿಂದ ದೇವತಾಸ್ತ್ರೀಯರೊಡನೆ ಹಲವು ಕಾಲ ದಿವ್ಯಸುಖವನ್ನು ಅನುಭವಿಸಿ, ಆಯುಷ್ಯವು ಮುಗಿದ ಮೇಲೆ, ಈಲೋಕ

ಕುರುವಂಶ ಭೋಜವಂಶಮಿಕ್ಷ್ವಾಕುವಂಶ ನಾಥವಂಶ ಹರಿವಂಶಮುಗ್ರವಂಶ ಸೂರ್ಯವಂಶ ಸೋಮವಂಶ ಮಯೂರವಂಶ ನಂದವಂಶಮೆಂದಿವು ಮೊದಲಾಗೊಡೆಯುಉತ್ತಮ ಕುಲದೊಳ್ ಶ್ರಾವಕರ ಬಸಿಱೊಳ್ ಪುಟ್ಟಿ ಪೂರ್ವಕೋಟಿ ಪರಮಾಯುಷ್ಯಮನೊಡೆಯರಾಗಿ ಅತ್ಯಂತ ರೂಪ ಲಾವಣ್ಯ ಸೌಭಾಗ್ಯಕಾಂತಿತ್ವದೊಳ್ ಕೂಡಿ ಏಕಚ್ಛತ್ರಚ್ಛಾಯೆಯಿಂದಂ ಪೃಥ್ವಿಯೆಲ್ಲಮಂ ನಾಳ್ದು ಪಶ್ಚಾತ್ಕಾಲದೊಳೇನಾನುಮೊಂದು ವೈರಾಗ್ಯಕಾರಣಮಾಗಿ ಮಗಂಗೆ ರಾಜ್ಯ ಪಟ್ಟಂಗಟ್ಟಿ ಬಾಹ್ಯಾಭ್ಯಂತರ ಪರಿಗ್ರಹಂಗಳೆಲ್ಲಮಂ ತೊಱೆದೆಲ್ಲರೊಳ್ ನಿಶ್ಶಲ್ಯಂಗೆಯ್ದು ತಪಂಬಟ್ಟು ಘೋರ ವೀರತಪಶ್ಚರಣಂಗೆಯ್ದು ಉತ್ಕೃಷ್ಟದಿಂದಂ ಮೂಱು ಭವಂಗಳೊಳ್ ಮಧ್ಯಮದಿಂದ ಮಯ್ದು ಭವಂಗಳೊಳ್ ಕನಿಷ್ಠದಿಂದೇೞು ಭವಂಗಳೊಳಗೆ ಅಷ್ಟವಿಧ ಕರ್ಮಂಗಳಂ ಕಿಡಿಸಿ ಮೋಕ್ಷಮನೆಯ್ದುವರ್ ದೊಣ್ಣಂ ಪಿ ಖಯೇಣ ಣಿವ್ವಾಣಂ ಎಂದು ತಪದಿಂದಂ ಶುಭಾಶುಭ ಕರ್ಮಮೆಂದಿರ್ತೆಱದ ಕರ್ಮದ ಕೇಡಿನಿಂದಂ ಮೋಕ್ಷಮನೆಯ್ದುವರಂತಪ್ಪ ಮೋಕ್ಷಮೆಂತೆಂದೊಡೆ ಜಾತಿ ಜರಾ ಮರಣಂಗಳುಂ ಭಯಮುಮನಿಷ್ಟಸಂಯೋಗಮುಮಿಷ್ಟ ವಿಯೋಗಮುಂ ಶಾರೀರ ಮಾನಸಾಗಂತುಕ ಸಹಜಮಪ್ಪ ದುಃಖಂಗಳುಂ ಆಹಾರ ಭಯ ಮೈಥುನ

ದಲ್ಲಿ ಮನುಷ್ಯ ಜೀವನದಲ್ಲಿ ಬರುವರು. ಕುರುವಂಶ, ಭೋಜನಂಶ, ಇಕ್ಷ್ವಾಕುವಂಶ, ನಾಥನಂಶ, ಹರಿವಂಶ, ಉಗ್ರನಂಶ, ಸೋಮನಂಶ, ಮಯೂರವಂಶ, ನಂದನಂಶ-ಎಂದು ಇವೇ ಮೊದಲಾದ ಇರತಕ್ಕ ಒಳ್ಳೆಯ ಕುಲದಲ್ಲಿ ಜಿನಭಕ್ತರಾದ ಗೃಹಸ್ಥ ದಂಪತಿಗಳ ಗರ್ಭದಲ್ಲಿ ಜನಿಸುವರು. ಪೂರ್ವಕಾಲದ ಕೋಟಿ ಸಂಖ್ಯೆಯ ಪರಮಾಯುಷ್ಯವುಳ್ಳವರಾಗಿ ಅತಿಶಯವಾದ ರೂಪ ಸೌಂದರ್ಯ ಸೌಭಾಗ್ಯ ಕಾಂತಿಗಳಿಂದ ಕೂಡಿ ಏಕಚ್ಛತ್ರಾಧಿಪತಿಗಳಾಗಿ ಭೂಮಂಡಲವನ್ನು ಆಳುವರು. ಆ ಮೇಲಿನ ಕಾಲದಲ್ಲಿ ಏನಾದರೂ ಒಂದು ಕಾರಣದಿಂದ ವೈರಾಗ್ಯವನ್ನು ತಾಳಿ, ಮಗನಿಗೆ ರಾಜ್ಯದ ಪಟ್ಟಾಭಿಷೇಕವನ್ನು ಮಾಡಿ ಬಾಹ್ಯ ಮತ್ತು ಆಭ್ಯಂತರ ಎಂಬ ಎರಡೂ ಬಗೆಯ ಪರಿಗ್ರಹಗಳೆಲ್ಲವನ್ನೂ ಬಿಟ್ಟು ಎಲ್ಲರ ಮನೋವ್ಯಥೆಗಳನ್ನೂ ಇಲ್ಲದಂತೆ ಮಾಡಿಕೊಂಡು ತಪಸ್ಸನ್ನು ಸ್ವೀಕರಿಸಿ, ಉಗ್ರವೂ ಶ್ರೇಷ್ಠವೂ ಆದ ತಪಸ್ಸನ್ನು ಆಚರಿಸಿ ಅತಿ ಶ್ರೇಷ್ಠ ರೀತಿಯದಾಗಿ ಮೂರು ಜನ್ಮಗಳಲ್ಲಿ ಮಧ್ಯಮ ರೀತಿಯದಾಗಿ ಐದು ಜನ್ಮಗಳಲ್ಲಿ ಕನಿಷ್ಠವಾದ ರೀತಿಯಲ್ಲಿ ಏಳು ಜನ್ಮಗಳಲ್ಲಿ ಬಂದು, ಘಾತಿಕರ್ಮಗಳು ನಾಲ್ಕು ಅಘಾತಿಕರ್ಮಗಳು ನಾಲ್ಕು ಹೀಗೆ ಎಂಟು ಬಗೆಯವಾದ ಕರ್ಮಗಳನ್ನು ನಾಶಪಡಿಸಿ ಮೋಕ್ಷವನ್ನು ಹೊಂದುವರು. ತಪಸ್ಸಿನ ಮೂಲಕ ಶುಭ ಅಶುಭವೆಂಬ ಎರಡು ಬಗೆಯ ಕರ್ಮವನ್ನು ಕೆಡಿಸಿ ಮೋಕ್ಷವನ್ನು ಸೇರುವರು. ಅಂತಹ ಮೋಕ್ಷದ ಸ್ವರೂಪವೇನೆಂದರೆ :- ಹುಟ್ಟು ಮುಪ್ಪು ಸಾವುಗಳೂ ಹೆದರಿಕೆಯೂ ಪ್ರೀತಿಯುಳ್ಳವರ ಒಡನಾಟ ಅಗಲಿಕೆಗಳೂ ಶರೀರಕ್ಕೂ ಮನಸ್ಸಿಗೂ ಬರತಕ್ಕ ಸಹಜವಾಗಿರುವ ದುಃಖಗಳೂ ಆಹಾರ, ಭಯ,

ಪರಿಗ್ರಹಂಗಳುಂ ವಾತ ಪಿತ್ತ ಶ್ಲೇಷ್ಮ ಖಾಸ ಶ್ವಾಸ ಜ್ವರಾರುಚಿ ಛರ್ದ್ಯತಿಸಾರಾಕ್ಷಿ ಕುಕ್ಷಿವೇದನಾ ಸ್ಫೋಟಕ ಶೂಲ ಭಗಂದರ ಕುಷ್ಠ ಕ್ಷಯ ಗಂಡ ಶಿರೋವೇದನೆಯುಮೆಂದಿವು ಮೊದಲಾಗೊಡೆಯ ಅಯ್ದುಕೋಟಿಯುಮಱುವತ್ತೆಂಟು ಲಕ್ಕೆಯುಂ ತೊಂಬತ್ತೊಂಬಯ್ ಸಾಸಿರದ ಇನ್ನೂರೆಣ್ಬತ್ತುನಾಲ್ಕು ವ್ಯಾಧಿಗಳುಂ ಕ್ರೋಧ ಮಾನ ಮಾಯಾ ಲೋಭಂಗಳುಂ ರಾಗ ದ್ವೇಷ ಮೋಹಂಗಳ ಮಗುೞ್ದು ಮಗುೞ್ದು ಬರವುಂ ಶೋಕಮೆಂದಿವು ಮೊದಲಾಗೊಡೆಯ ದುಃಖಂಗಳವಿಲ್ಲದುದನುಪಮಾರಹಿತಮಪ್ಪುದನಳವಿಯಿಲ್ಲದುದನಾವಕಾಲಮುಂ ಕಿಡದುದಂ ಪಾಪದಿಂ ಪೊರೆಯದುದಂ ಸುಖಮನೊಡೆತಪ್ಪುದಂ ತನ್ನಿಂ ತಾನಾದುದನಂತಪ್ಪ ಮೋಕ್ಷಸುಖಮನೆಯ್ದಿ ಅನಂತ ಜ್ಞಾನ ಅನಂತ ದರ್ಶನ ಅನಂತ ವೀರ್ಯ ಅನಂತ ಸುಖಮೆಂಬ ಅನಂತ ಚತುಷ್ಟಯದೊಳ್ ಕೂಡಿ ಲೋಕಾಲೋಕಮನೆಲ್ಲಮನೊರ್ಮೊದಲೆ ಕಾಣುತ್ತಮಱಿಯುತ್ತಮನಂತಕಾಲಂ ಮೋಕ್ಷದೊಳಿರ್ಪರೆಂಬುದುಮಂ ಅಭಯಘೋಷ ಭಟಾರರ್ ಲಲಿತಘಟೆಗೆ ಧರ್ಮಶ್ರವಣಂಗೆಯ್ಯೆ ಕೇಳ್ದು ಶ್ರೀವರ್ಧನಂ ಮೊದಲಾಗಿ ಅನಿಬರುಂ ಪಶ್ಚಾತ್ತಾಪಮಾಗೆ ಪಂಚ ಮಹಾಪಾತಕರೆಮುಂ ಪೊಲ್ಲಕೆಯ್ದೆಮುಂ ಭಟಾರರಂ ಕೊಂದೆಮುಮವರ್ ತಪದ ಮಹಾತ್ಮ್ಯ

ಮೈಥುನ, ಪರಿಗ್ರಹಗಳೂ ವಾತ, ಪಿತ್ತ, ಕಫ, ಕೆಮ್ಮು, ಉಬ್ಬಸ, ಜ್ವರ, ಅಜೀರ್ಣ, ವಾಂತಿ, ಭೇದಿ, ಕಣ್ಣುನೋವು, ಹೊಟ್ಟೆನೋವು, ಒಡೆಯುವಿಕೆ, ಸೆಳತ, ಭಗಂದರ, ಕುಷ್ಠ, ಕ್ಷಯ, ಗಂಡ, ತಲೆನೋವು—ಎಂದು ಇವೇ ಮುಂತಾಗಿರುವ ಐದುಕೋಟಿ ಅರುವತ್ತೆಂಟು ಲಕ್ಷದ ತೊಂಬತ್ತೊಂಬತ್ತು ಸಾವಿರದ ಇನ್ನೂರೆಂಬತ್ತ ನಾಲ್ಕು (೫,೬೮,೯೯,೨೮೪) ಬಗೆಯ ರೋಗಗಳೂ ಕೋಪ, ಅಭಿಮಾನ, ಕಪಟ, ಲೋಭಗಳೂ ಪ್ರೀತಿ ವೈರ ಮೋಹಗಳು ಮರಳಿ ಮರಳಿ ಬರುವಿಕೆ ಮತ್ತು ದುಃಖ—ಎಂದು ಇವೇ ಮುಂತಾಗಿರುವ ದುಃಖಗಳು ಇಲ್ಲದುದೇ ಮೋಕ್ಷ. ಅದು ಉಪಮೆಯಿಲ್ಲದುದು, ಅಳತೆಯಿಲ್ಲದುದು, ಯಾವ ಕಾಲದಲ್ಲಿಯೂ ಕೆಟ್ಟುಹೋಗದೆ ಇರುವಂಥದು, ಪಾಪದಿಂದ ತುಂಬದಿರುವಂಥದು, ಸುಖವನ್ನು ಒಟ್ಟಿಗೆ ತರುವಂಥದು, ತನ್ನಿಂದ ತಾನಾಗಿಯೇ ಆದಂಥದು, ಪುಣ್ಯಜೀವರು ಅಂತಹ ಮೋಕ್ಷದ ಸುಖವನ್ನು ಸೇರಿ ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ, ಅನಂತಸುಖ—ಎಂಬ ನಾಲ್ಕು ಬಗೆಯ ಅನಂತ (ಕೊನೆಯಿಲ್ಲದವು)ಗಳಲ್ಲಿ ಸೇರಿ, ಲೋಕವನ್ನೂ ಲೋಕವಲ್ಲದವುಗಳನ್ನೂ ಒಟ್ಟಿಗೇ ಕಾಣುತ್ತಲೂ ತಿಳಿಯುತ್ತಲೂ ಅನಂತಕಾಲದ ತನಕ ಮೋಕ್ಷದಲ್ಲಿಯೇ ಇರುತ್ತಾರೆ—ಎಂಬ ಸಂಗತಿಯನ್ನು ಅಭಯಘೋಷ ಋಷಿಗಳು ಲಲಿತಘಟೆಯ ಧರ್ಮೋಪದೇಶಮಾಡುತ್ತ ತಿಳಿಸಿದರು. ಇದನ್ನೆಲ್ಲ ಲಲಿತಘಟೆಯ ರಾಜಕುಮಾರರು ಕೇಳಿದರು. ಶ್ರೀವರ್ಧನ ಮೊದಲಾದ ಅವರೆಲ್ಲರೂ ಪಶ್ಚಾತ್ತಾಪಗೊಂಡರು. "ನಾವು ಪಂಚಮಹಾಪಾಪ ಮಾಡಿದವರಾಗಿದ್ದೇವೆ. ಕೆಟ್ಟದನ್ನು ಮಾಡಿದವರೂ ಋಷಿಗಳನ್ನು ಕೊಂದವರೂ ಆಗಿದ್ದೇವೆ. ಅವರು ತಮ್ಮ ತಪಸ್ಸಿನ ಮಹತ್ತ್ವದಿಂದ ಬದುಕಿದರು"—ಎಂದು ಅವರೆಲ್ಲರೂ ಮನಸ್ಸಿನಲ್ಲಿ ಭಾವಿಸಿ

ದಿಂದಂ ಬರ್ದುಂಕಿದರೆಂದನಿಬರುಂ ಮನದೆ ಬಗೆದೀಗೆಯ್ದ ಪಾಪಮಿಂತಲ್ಲದೆ ಪಿಂಗದಿವರ ಕಾಲಡಿಗಳನೆಮ್ಮ ತಲೆಗಳೆಂಬ ತಾಮರೆಯ ಪೂಗಳಿಂದರ್ಚಿಸಿದೊಡಲ್ಲದೆ ಪಾಪಂ ಪಿಂಗದೆಂದು ಬಗೆದು ಕೈದುಗಳತ್ತ ಕೈಯುಂ ನೀಡಲ್ ಬಗೆವನ್ನೆಗಂ ಭಟ್ಟಾರರ್ ವಾರಿಸಿದರಂತು ಬಗೆಯಲ್ವೇಡೆಂದೊಡೆ ಶ್ರೀವರ್ಧನ ಕುಮಾರನಾಮೇನಂ ಬಗೆದೆವೆಂದೊಡೆ ನೀಮುಂ ನಿಮ್ಮ ತಲೆಗಳನರಿದೆಮ್ಮ ಕಾಲಡಿಗಳನರ್ಚಿಸುವಮೆಂದು ಬಗೆದಿರೆಂದೊಡಿಂತು ಮನದೆ ಬಗೆದುದನಾರಾನುಮಱಿವರೊಳರೆ ಎಂದನಿಬರುಂ ಚೋದ್ಯಂಬಟ್ಟು ಭಟ್ಟಾರರ್ಗೆಱಗಿ ಪೊಡೆವಟ್ಟು ಶ್ರೀವರ್ಧನ ಕುಮಾರನೆಂದಂ ಭಟ್ಟಾರಾ ನಿಮ್ಮಡಿಯನೆಮ್ಮ ತಲೆಗಳಿಂದರ್ಚಿಸದಾಗಳೆಮ್ಮಗೆಯ್ದ ಪಾಪಮೆಂತು ಕಿಡುಗುಮೆಂದೊಡಾ ಪಾಂಗಿನಿಂ ಕಿಡದೆನೆಯಂತಪ್ಪೊಡೆ ದೀಕ್ಷೆಯಂ ದಯೆಗೆಯ್ಯಿಮೆಂದೊಡೆ ಭಟಾರರೆಂದರೊಳ್ಳಿತ್ತಂ ಬಗೆದಿರ್ ನಿಮಗೆಲ್ಲರ್ಗಂ ಕಿಱಿದೆಯಾಯುಷ್ಯಮೆಂದೊಡೆ ಶ್ರೀವರ್ಧನ ಕುಮಾರನ ತಮ್ಮಂ ಮೂವರ್ತಿರ್ವರಿಂ ಕಿಱಿಯೋಂ ನಂದಿಮಿತ್ರನೆಂಬೊಂ ಭಟಾರರ ಮಾತಂ ಕೇಳ್ದು ನಕ್ಕಿಂತೆಂದನಾವೆಲ್ಲಂ ಕೂಸುಗಳೆಮುಂ ನವಯೌವನರೆಮುಂ ತೇಜದೊಳಂ ಸತ್ವದೊಳಂ ಬಲಪರಾಕ್ರಮದೊಳಂ ಕೂಡಿದೆಮೆಮಗೆಲ್ಲೊರ್ಗ್ಗಂ ಕಿಱಿದೆಯಾಯುಷ್ಯಮೆಂಬುದನೆಂತು ನಂಬಲಕ್ಕು

ಕೊಂಡರು. "ನಾವು ಮಾಡಿದ ಈ ಪಾಪ ಪರಿಹಾರವಾಗಬೇಕಾದರೆ, ಇವರ ಪಾದಗಳನ್ನು ನಮ್ಮ ತಲೆಗಳೆಂಬ ತಾವರೆ ಹೂಗಳಿಂದ ಅರ್ಚಿಸಬೇಕು. ಅದಲ್ಲದೆ, ಪಾಪ ಹಿಂಗಲಾರದು" ಎಂದು ಭಾವಿಸಿ ತಮ್ಮ ತಲೆಗಳನ್ನು ಕಡಿದುಕೊಳ್ಳಲಿಕ್ಕಾಗಿ ಆಯುಧಗಳ ಕಡೆಗೆ ಕೈಗಳನ್ನು ನೀಡಲು ಯೋಚಿಸಿದರು. ಆಗ ಋಷಿಗಳು "ಹಾಗೆ ಯೋಚಿಸುವುದು ಬೇಡ" ಎಂದು ತಡೆದರು. ಶ್ರೀವರ್ಧನ ಕುಮಾರನು "ನಾವು ಏನು ಯೋಚಿಸಿದ್ದೇವೆ ?" ಎಂದು ಕೇಳಲು, ಋಷಿಗಳು-"ನೀವು ನಿಮ್ಮ ತಲೆಗಳನ್ನು ಕತ್ತರಿಸಿ ನಮ್ಮ ಪಾದಗಳನ್ನು ಅರ್ಚಿಸೋಣವೆಂದು ಯೋಚಿಸಿದ್ದೀರಿ" ಎಂದು ಹೇಳಿದರು. ಆಗ ಅವರೆಲ್ಲರೂ-"ಹೀಗೆ ಮನಸ್ಸಿನೊಳಗೆ ಯೋಚಿಸಿದುದನ್ನು ತಿಳಿಯುವವರು ಯಾರಾದರೂ ಇರುವರೆ !" ಎಂದು ಆಶ್ಚರ್ಯಪಟ್ಟರು. ಋಷಿಗಳಿಗೆ ಸಾಷ್ಟಾಂಗ ವಂದನೆ ಮಾಡಿ, ಶ್ರೀವರ್ಧನ ಕುಮಾರನು-"ಪೂಜ್ಯರೇ, ನಿಮ್ಮ ಪಾದವನ್ನು ನಮ್ಮ ತಲೆಗಳಿಂದ ಪೂಜಿಸದಿದ್ದಲ್ಲಿ ನಾವು ಮಾಡಿದ ಪಾಪ ಹೇಗೆ ಪರಿಹಾರವಾದೀತು?" ಎಂದು ಕೇಳಿದನು. "ಆ ರೀತಿಯಿಂದ ಪರಿಹಾರವಾಗದು" ಎಂದು ಅವರು ಹೇಳಲು, "ಹಾಗಾದರೆ ದೀಕ್ಷೆಯನ್ನು ದಯೆಪಾಲಿಸಿರಿ" ಎಂದನು. ಋಷಿಗಳು-"ನೀವು ಒಳ್ಳೆಯದನ್ನೇ ಯೋಚಿಸಿದಿರಿ; ನಿಮಗೆಲ್ಲ ಆಯುಷ್ಯವಿರುವುದು ಸ್ವಲ್ಪವೇ" ಎಂದು ಹೇಳಿದರು. ಶ್ರೀವರ್ಧನ ಕುಮಾರನ ತಮ್ಮನೂ ಮೂವತ್ತೆರಡು ಮಂದಿ ಸೋದರರಲ್ಲಿ ಕಿರಿಯವನೂ ಆದ ನಂದಿಮಿತ್ರನೆಂಬವನು ಅಭಯಘೋಷ ಋಷಿಗಳ ಮಾತನ್ನು ಕೇಳಿ ನಕ್ಕು ಹೀಗೆ ಹೇಳಿದನು-"ನಾವೆಲ್ಲರೂ ಚಿಕ್ಕವರಾಗಿದ್ದೇವೆ. ಹೊಸ ತರುಣರೂ ಆಗಿದ್ದೇವೆ ತೇಜಸ್ಸು, ಸತ್ವ, ಶಕ್ತಿ, ಸಾಮರ್ಥ್ಯಗಳಿಂದ ಕೂಡಿದವರಾಗಿದ್ದೇವೆ. ನಮಗೆಲ್ಲರಿಗೂ ಆಯುಷ್ಯ ಸ್ವಲ್ಪವೇ ಇರುವುದೆಂಬುದನ್ನು

ಮೆಂದೊಡೆ ಭಟಾರರೆಂದರ್ ನೀನೇಕೆ ನಕ್ಕಪ್ಪೆಯಪ್ಪಾ ನಿಮಗೆಲ್ಲರ್ಗಮಿರ್ಪತ್ತೊಂದು ದಿವಸ ಮಾಯುಷ್ಯಂ ನೀರದೆಸೆಯಿಂದಂ ನಿಮಗೆ ಸಾವಕ್ಕುಮೆಂದೊಡೆ ಶ್ರೀವರ್ಧನ ಕುಮಾರನೆಂದಂ ಭಟಾರಾ ಎಮಗಿರ್ಪತ್ತೊಂದು ದಿವಸಮಾಯುಷ್ಯಮೆಂಬುದರ್ಕೆ ಸಾಭಿಜ್ಞಾನಮೇನೆಂದು ಬೆಸಗೊಂಡೊಡೆ ಭಟಾರರೆಂದರ್ ನೀಮೀಗಳ್ ಪೊೞಲ್ಗೆ ಪೋಪಾಗಳ್ ನಿಮಗೆರಡ್ಕಾಳಿಂಗ ನಾಗಂಗಳ್ ಪೆಡೆಗಳನೆತ್ತಿ ನಾಲಗೆಗಳಂ ಪೊಳೆಯಿಸುತ್ತಂ ಬಂದೊಡೆ ನೀವೊದಱಿಯುವಂ ಬಗ್ಗಿಸಿ ದೊಡದೃಶ್ಯಂಗಳಾಗಿ ಪೋಕುಮಿದೊಂದು ಸಾಭಿಜ್ಞಾನಂ ಮತ್ತಂತೆ ಪೋಪಾಗಳೊಂದು ಕಿಱು ಗೂಸು ಕೋಲಂ ಪಿಡಿದು ನಿಮ್ಮಂ ಬಡಿಯಲ್ಕೆಂದು ಬಂದೊಡದಱ ಕೆಯ್ತಮಂ ಕಂಡು ನೀಮುಂ ನಕ್ಕೊಡೆ ನಿಮ್ಮ ನೋಡೆ ನೋಡೆ ಭಯಂಕರಮಪ್ಪ ಪಿರಿದೊಂದು ಬೇತಾಳರೂಪಂ ಕೈಕೊಂಡಾ ಕಾಶಂ ಬರೆಗಂ ಬಳೆದದೃಶ್ಯಮಕ್ಕುಮಿದೊಂದು ಸಾಭಿಜ್ಞಾನಂ ಮತ್ತಂತೆ ಪೋಪನ್ನೆಗಂ ತೊಱೆ ತೀವುಗುಮಿದೊಂದು ಸಾಭಿಜ್ಞಾನಂ ಮತ್ತಮಿಂದಿನಿರುಳ್ ನಿಮ್ಮ ತಾಯ್ ನಿಮ್ಮ ಮೂವತ್ತಿ ರ್ವರುಮಂ ರಾಕ್ಷಸಂ ನುಂಗಿತಿಂಬುದಂ ಕನಸುಗಂಡು ಪೇೞ್ಗುಮಿದೊಂದು ಸಾಭಿಜ್ಞಾನಮೆಂದು ಪೇೞ್ದೊಡೆ ಅನಿಬರುಂ ಭಟಾರರಂ ವಂದಿಸಿ ತಮ್ಮ ಪೊೞಲ್ಗೆ ಪೋಪಾಗಳ್ ಭಟಾರರ್ ಪೇೞ್ದ

ಹೇಗೆ ನಂಬಬಹುದು ?" ಈ ರೀತಿ ಕೇಳಿದಾಗ ಋಷಿಗಳು-"ನೀನು ಯಾಕೆ ನಗುತ್ತಿದ್ದಿಯಪ್ಪಾ! ನಿಮಗೆಲ್ಲರಿಗೂ ಇನ್ನು ಇಪ್ಪತ್ತೊಂದು ದಿವಸ ಆಯುಷ್ಯವಿರುವುದು. ನೀರಿನಿಂದ ನಿಮಗೆ ಮರಣವುಂಟಾಗುವುದು" ಎಂದು ಹೇಳಿದರು. ಆಗ ಶ್ರೀವರ್ಧನ ಕುಮಾರನು– "ಪೂಜ್ಯರೇ, ನಮಗೆ ಇಪ್ಪತ್ತೊಂದು ದಿನಸ ಮಾತ್ರ ಆಯುಷ್ಯವೆಂಬುದಕ್ಕೆ ಕುರುಹೇನು ? ಎಂದು ಕೇಳಿದನು. ಋಷಿಗಳು ಹೇಳಿದರು-"ನೀವೀಗ ಪಟ್ಟಣಕ್ಕೆ ಹೋಗುವಾಗ ನಿಮ್ಮೆದುರಿಗೆ ಎರಡು ಕಾಳಿಂಗಸರ್ಪಗಳು ಹೆಡೆಗಳನ್ನೆತ್ತಿ ನಾಲಗೆಗಳನ್ನು ಹೊರಳಿಸುತ್ತ ಬರುವುವು. ಆಗ ನೀವು ಬೊಬ್ಬಿಟ್ಟು ಅವನ್ನು ಬೈದರೆ ಮಾಯವಾಗಿ ಹೋಗುವುವು- ಇದು ಒಂದು ಕುರುಹು. ಮತ್ತೆ ಹಾಗೆಯೇ ಹೋಗುತ್ತಿರುವಾಗ ಒಂದು ಚಿಕ್ಕ ಮಗು ಕೈಯಲ್ಲಿ ಕೋಲನ್ನು ಹಿಡಿದುಕೊಂಡು ನಿಮ್ಮನ್ನು ಹೊಡೆಯುವುದಕ್ಕೆ ಬರುವುದು. ಅದರ ಕೆಲಸವನ್ನು ಕಂಡು ನಕ್ಕರೆ, ನೀವು ನೋಡು ನೋಡುತ್ತಿದ್ದಂತೆಯೇ ಹೆದರಿಕೆಯನ್ನು ಉಂಟುಮಾಡುವ ದೊಡ್ಡದಾದ ಒಂದು ಬೇತಾಳದ ರೂಪವನ್ನು ತಾಳಿ ಆಕಾಶದ ವರೆಗೂ ಬೆಳೆದು ದೊಡ್ಡದಾಗಿ ಮಾಯವಾಗುವುದು–ಇದೂ ಒಂದು ಕುರುಹು. ಮತ್ತೆ ಹಾಗೆಯೇ ನೀವು ಹೋಗುತ್ತಿರುವಾಗ ನದಿಯು ನೆರೆಯಿಂದ ತುಂಬಿ ಹರಿಯುವುದು ಇದು ಇನ್ನೊಂದು ಕುರುಹು. ಆಮೇಲೆ ಇಂದಿನ ರಾತ್ರಿ ನಿಮ್ಮ ತಾಯಿ ನಿಮ್ಮನ್ನು ಮೂವತ್ತೆರಡು ಮಂದಿಯನ್ನೂ ರಾಕ್ಷಸನು ನುಂಗಿ ತಿನ್ನುವುದನ್ನು ಕನಸಿನಲ್ಲಿ ಕಂಡು, ತಿಳಿಸುವಳು–ಇದು ಒಂದು ಕುರುಹು" ಎಂದು ಹೇಳಿದನು. ಆಗ ಅವರೆಲ್ಲರೂ ಋಷಿಗಳನ್ನೂ ನಮಸ್ಕರಿಸಿ ತಮ್ಮ ಪಟ್ಟಣದ ಕಡೆಗೆ ಹೊರಟರು. ಹೋಗುವಾಗ, ಋಷಿಗಳು ಹೇಳಿದುದೆಲ್ಲವನ್ನೂ

ದೆಲ್ಲಮಂ ಪೇೞ್ದ ಪಾಂಗಿನೊಳೆ ಬಟ್ಟೆಯೊಳ್ ಪೋಗುತ್ತುಂ ಕಂಡು ಪ್ರತ್ಯಕ್ಷವಾಗಿ ಮತ್ತಿರುಳ್ ತಮ್ಮ ಮೂವತ್ತಿರ್ವರುಮಂ ರಾಕ್ಷಸಂ ನುಂಗಿದುದಂ ತಾಯ್ ಕನಸುಗಂಡುದಂ ತಮಗೆ ನೇಸರ್ಮೂಡೆ ಪೇೞ್ದೊಡೆ ನಂಬುಗೆಯಾಗಿ ಉಬ್ಬೆಗಂ ಬಟ್ಟಂತಿರ್ಪನ್ನೆಗಂ ವರ್ಧಮಾನ ಭಟ್ಟಾರರ ತೀರ್ಥಂ ವಿಹಾರಿಸುತ್ತಂ ಕೌಶಂಬಿಗೆ ವಂದೊಡೆ ಲಲಿತಘಟೆ ಪಿರಿದರ್ಚನೆಯಂ ಕೊಂಡು ಪೋಗಿ ಭಟಾರರನರ್ಚಿಸಿ ಬಂದಿಸಿ ಧರ್ಮಶ್ರವಣಾನಂತರಮೀತೆಂದು ವರ್ಧಮಾನ ಭಟ್ಟಾರರಂ ಬೆಸಗೊಂಡರ್ ಭಟಾರಾ ಎಮಗಾಯುಷ್ಯಮೆನಿತುಂಟೆಂದು ಬೆಸಗೊಂಡೊಡೆ ಭಟಾರರೆಂದರ್ ನಿಮಗನಿಬರ್ಗಂ ಕಿಱಿದೆ ಆಯುಷ್ಯಮೆಂದು ಪೇೞ್ದೊಡಾಮೇನೊ ಭವ್ಯರೆಮೊ ಅಭವ್ಯರೆಮೊ ಎಂದು ಬೆಸಗೊಂಡೊಡೆ ನೀಮೆಲ್ಲಂ ಭವ್ಯರಿರ್ ಭವ್ಯರಿರಾದೊಡಂ ಪರಮ ಶುದ್ಧ ಸಹಜ ದರ್ಶನ ಜ್ಞಾನ ಚಾರಿತ್ರಂಗಳಂ ಕೈಕೊಂಡು ನೆಗೞ್ದೊಡಲ್ಲದೆ ಮೋಕ್ಷಮಾಗದೆಂತು ಸ್ವರ್ಣಪಾಷಾಣ ದೊಳ್ ಸುವರ್ಣಮುಂಟಾಗಿಯುಂ ದಹನ ತಾಪನ ಪಿಂಡಿಬದ್ಧನಾದಿ ಕ್ರಿಯೆಮೆಱದನ್ನೆಗಂ ಪೊನ್ನಾಗದಂತೆ ತಪದಿಂವಲ್ಲದೆ ಮೋಕ್ಷಮಾಗದೆಂದು ಪೇೞ್ದೊಡನಿಬರುಂ ವರ್ಧಮಾನ ಭಟ್ಟಾರರ್ಗ್ಗೆ ಶಿಷ್ಯರಾಗಿ ತಪಂಬಟ್ಟು ಪಂಚಮಹಾವ್ರತಂಗಳನೇಱಿಸಿಕೊಂಡು ಪ್ರಾಯೋಪ

ಹೇಳಿದ ರೀತಿಯಲ್ಲಿಯೇ ತಮ್ಮ ದಾರಿಯಲ್ಲಿ ಹೋಗುತ್ತ ಕಣ್ಣೆದುರಿನಲ್ಲಿಯೇ ಕಂಡರು. ಆಮೇಲೆ ರಾತ್ರಿಯಲ್ಲಿ ತಾವು ಮೂವತ್ತೆರಡು ಮಂದಿಯನ್ನೂ ರಾಕ್ಷಸನು ನುಂಗಿದುದನ್ನು ತಾಯಿ ಕನಸಿನಲ್ಲಿ ಕಂಡುದನ್ನು ತಮಗೆ ಸೂರ್ಯೋದಯದ ವೇಳೆಯಲ್ಲಿ ಹೇಳಿದುದರಿಂದ ಅವರಿಗೆ ನಂಬುಗೆಯುಂಟಾಯಿತು. ಅವರು ಉದ್ವೇಗಗೊಂಡವರಾಗಿ ಹೀಗೆಯೇ ಇರುತ್ತಿರಲು, ವರ್ಧಮಾನ ತೀರ್ಥಂಕರರ ಧರ್ಮಸಭೆ ಸಂಚಾರ ಮಾಡುತ್ತ ಕೌಶಂಬಿಗೆ ಬಂದಿತು. ಲಲಿತಘಟೆ ಹೆಚ್ಚಾದ ಪೂಜಾವಸ್ತುಗಳನ್ನು ತೆಗೆದುಕೊಂಡು ಹೋಗಿ ಋಷಿಗಳನ್ನು ಪೂಜಿಸಿ ಧರ್ಮೋಪದೇಶವನ್ನು ಕೇಳಿದನಂತರ ಅವರನ್ನು ಹೀಗೆ ಕೇಳಿದರು– "ಪೂಜ್ಯರೇ, ನಮಗೆ ಆಯುಷ್ಯವೆಷ್ಟಿದೆ ?" ಆಗ ವರ್ಧಮಾನ ಭಟಾರರು–"ನಿಮಗೆ ಅಷ್ಟು ಮಂದಿಗೂ ಆಯುಷ್ಯವಿರುವುದು ಸ್ವಲ್ಪವೆ" ಎಂದು ಹೇಳಿದರು. ಅದಕ್ಕೆ ಅವರು– "ನಾವು ಭವ್ಯರೊ (ಮೋಕ್ಷಕ್ಕೆ ಅರ್ಹರೊ) ಅಭವ್ಯರೋ ?" ಎಂದು ಕೇಳಿದರು. ಭಟಾರರು–"ನೀವೆಲ್ಲರೂ ಭವ್ಯರಾಗಿದ್ದೀರಿ. ಭವ್ಯರೇ ಆಗಿದ್ದರೂ ಶ್ರೇಷ್ಠವೂ ಪರಿಶುದ್ಧವೂ ಸಹಜವೂ ಆಗಿರುವ ದರ್ಶನ-ಜ್ಞಾನ-ಚಾರಿತ್ರಗಳನ್ನು ಸ್ವೀಕರಿಸಿಕೊಂಡು ಆಚರಿಸಿದಲ್ಲದೆ ಮೋಕ್ಷ ಲಭಿಸಲಾರದು. ಚಿನ್ನದ ಕಲ್ಲಿನಲ್ಲಿ (ಅದುರಿನಲ್ಲಿ) ಚಿನ್ನವಿದ್ದರೂ ಸುಡುವುದು, ಕಾಯಿಸುವುದು, ಮುದ್ದೆಗಟ್ಟುವುದು–ಮುಂತಾದ ಕ್ರಿಯೆಗಳನ್ನು ಅದು ಪಡೆಯುವವರೆಗೂ ಚಿನ್ನವಾಗುವುದಿಲ್ಲ. ಹಾಗೆಯೇ, ತಪಸ್ಸನ್ನು ಆಚರಿಸದೆ ಮೋಕ್ಷ ಪ್ರಾಪ್ತಿಯಾಗದು" ಎಂದು ಹೇಳಿದರು. ಆಗ ಅವರೆಲ್ಲರೂ ವರ್ಧಮಾನ ತೀರ್ಥಂಕರರಿಗೆ ಶಿಷ್ಯರಾಗಿ ತಪಸ್ಸನ್ನು ಸ್ವೀಕರಿಸಿದರು. ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿ

ಗಮನದ ಮರಣದ ವಿಧಾನಮಂ ಬೆಸಗೊಂಡೊಡೆ ಭಟಾರರಿಂತೆಂದು ಪೇೞ್ದರ್ :

> ಶ್ಲೋಕ ॥ ಸ್ಥಿತಸ್ಯ ವಾ ನಿಷಣ್ಣಸ್ಯ ಯಾವತ್ ಸುಪ್ತಸ್ಯ ವಾ ಪುನಃ
> ಸರ್ವಾಭೀಷ್ಟ ಪರಿತ್ಯಾಗಃ ಪ್ರಾಯೋಪಗಮನಂ ಸ್ಮೃತಂ ॥

ಇಂತುಟು ಪ್ರಾಯೋಪಗಮನದ ಲಕ್ಷಣಮೆಂದು ಭಟಾರರ್ ವಕ್ಕಾಣಿಸಿ ಪೇೞೆ ಕೇಳ್ದಱಿದು ಲಲಿತಘಟೆಯುನಿಬರುಂ ಭಟಾರರ ಪಕ್ಕದೆ ಚತುರ್ವಿಧಮಪ್ಪಾಹಾರಮುಮಂ ಶರೀರಮುಮಂ ಯಾವಜ್ಜೀವಂ ತೊಱೆದು ಭಟಾರರಂ ಬಂದಿಸಿ ಪೋಗಿ ವಿಶಾಳೆಯೆಂಬ ತೊಱೆಯ ತಡಿಯೊಳನಿಬರುಮೇಕಪಾರ್ಶ್ವದೊಳ್ ಪಟ್ಟಿರ್ದು ಕೈಯುಂ ಕಾಲುಮನಾಡಿಸದೊಂದು ಕೆಲದಿಂದೊಂದು ಕೆಲಕ್ಕೆ ಮಗುೞ್ಚದೆ ಕುಳ್ಳಿರದೆ ನಿಂದಿರದೆ ನುಡಿಯದೆ ಕೆಲಂಗಳಂ ನೋಡದಿಂತು ಪ್ರಾಯೋಪಗಮನಂಗೆಯ್ದು ಪದಿನಯ್ದು ದಿವಸಂ ಮೆಯ್ಯಂ ತೊಱೆದಿರ್ದೋರನ್ನೆಗಂ ಮೇಗೆ ಪಿರಿದೊಂದು ಮೞೆ ಕೊಂಡು ಪೂರಂ ಬಂದವರನೆೞೆದುಕೊಂಡು ಪೋಗಿ ಪಿರಿದೊಂದು ಮಡುವಿನೊಳಿಕ್ಕಿದೊಡೆ ನೀರೊಳಗಿರ್ದು ಮೋಹಿಸದ ಬುದ್ಧಿಯನೊಡೆಯರಾಗಿ ದೇವರಂ ಜಾನಿಸುತ್ತುಂ ಪಂಚನಮಸ್ಕಾರಮುಂ ಮನದೊಳುಚ್ಚಾರಿಸುತ್ತುಂ ಶುಭಧ್ಯಾನದೊಳ್ ಪರಿಣತರಾಗಿ ದರ್ಶನ ಜ್ಞಾನ

ಗ್ರಹ ಎಂಬ ಐದು ಮಹಾವ್ರತಗಳನ್ನು ಕೈಕೊಂಡು ಪ್ರಾಯೋಪಗಮನದ ಪದ್ಧತಿಯಲ್ಲಿ ಮರಣದ ವಿಧಾನ ಹೇಗೆಂದು ಕೇಳಲು ಭಟಾರರು ಹೀಗೆಂದರು–[ನಿಂತಿರುವವನದಾಗಲಿ ಕುಳಿತಿರುವವನದಾಗಲಿ ಮತ್ತು ಮಲಗಿರುವವನದಾಗಲಿ ಯಾವಾಗ ಎಲ್ಲ ಆಕಾಂಕ್ಷೆಗಳನ್ನು ಬಿಟ್ಟುಬಿಡುವುದು ಆಗುತ್ತದೋ ಅದು ಪ್ರಾಯೋಪಗಮನವೆಂದು ತಿಳಿಯಬಹುದು.] ಆ ಪ್ರಾಯೋಪಗಮನದ ಲಕ್ಷಣ ಈ ರೀತಿಯೆಂದು ಭಟಾರರು ವ್ಯಾಖ್ಯಾನಿಸಿ ಹೇಳಲು, ಅವರೆಲ್ಲರೂ ಕೇಳಿ ತಿಳಿದುಕೊಂಡರು. ಲಲಿತಘಟೆಯವರೆಲ್ಲರೂ ಋಷಿಗಳ ಬಳಿಯಲ್ಲಿ ನಾಲ್ಕು ವಿಧದ ಆಹಾರವನ್ನೂ ಶರೀರವನ್ನೂ ಜೀವವಿರುವವರೆಗೂ ಬಿಟ್ಟು ಋಷಿಗಳಿಗೆ ವಂದಿಸಿ ಹೋಗಿ ವಿಶಾಳೆ ಎಂಬ ಹೊಳೆಯದಡದಲ್ಲಿ ಅವರೆಲ್ಲರೂ ಒಂದು ಮಗ್ಗುಲಲ್ಲಿ ಮಲಗಿದರು. ಕೈಕಾಲುಗಳನ್ನು ಆಡಿಸದೆ, ಒಂದು ಮಗ್ಗುಲಿಂದ ಮತ್ತೊಂದು ಮಗ್ಗುಲಿಗೆ ಹೊರಳದೆ, ಕುಳಿತಿರದೆ, ನಿಂತಿರದೆ, ಮಾತಾಡದೆ ಅತ್ತಿತ್ತ ನೋಡದೆ—ಹೀಗೆ ಪ್ರಾಯೋಪಗಮನವನ್ನು ಮಾಡಿ ಹದಿನೈದು ದಿನ ಶರೀರದ ಗೊಡವೆಯನ್ನೇ ಬಿಟ್ಟಿದ್ದರು. ಹೀಗಿರಲು ಮೇಲೆ ದೊಡ್ಡದೊಂದು ಮಳೆ ಸುರಿದು, ಮಹಾಪ್ರವಾಹ ಬಂದು, ಅವರನ್ನು ಎಳೆದುಕೊಂಡು ಹೋಗಿ ದೊಡ್ಡದೊಂದು ಮಡುವಿಗೆ ಹಾಕಿತು. ಅವರು ಅಲ್ಲಿ ನೀರಿನೊಳಗೆ ಇದ್ದುಕೊಂಡು ಆಸೆಪಡದ ಬುದ್ಧಿಯುಳ್ಳವರಾಗಿ ದೇವರನ್ನು ಧ್ಯಾನ ಮಾಡುತ್ತ ಪಂಚನಮಸ್ಕಾರ ಮಂತ್ರಗಳನ್ನು ಮನಸ್ಸಿನಲ್ಲಿಯೇ ಉಚ್ಚಾರಣೆ ಮಾಡುತ್ತ ಶುಭವಾದ ಧ್ಯಾನದಲ್ಲಿ ಕುಶಲರಾಗಿ ದರ್ಶನ–ಜ್ಞಾನ–

ಚಾರಿತ್ರಂಗಳನಾರಾಧಿಸಿ ಮುಡಿಪಿ ಆಯುರ್ನ್ವರ್ವರುಂ ವೈಜಯಂತಮೆಂಬ ಪಂಚಾಣುತ್ತರೆಯೊಳು ತೃಪ್ತಮಪ್ಪ ಮೂವತ್ತುಮೂಱು ಸಾಗರೋಪಮಾಯುಷ್ಯಮನೊಡೆಯೊರೇಕ ಹಸ್ತ ಪ್ರಮಾಣ ಶ್ವೇತವರ್ಣದೊಳಹಮಿಂದ್ರ ದೇವರಾಗಿ ಪುಟ್ಟಿದರ್ ಮತ್ತೆ ಪೆಱರುಂ ರತ್ನತ್ರಯಂಗಳನಾರಾಧಿ ಸುವಾರಾಧಕರ್ಕಳುಂ ಲಲಿತಘಟೆಯುಂ ಮನದೊಳ್ ಬಗೆದು ಚತುರ್ವಿಧಮಪ್ಪುಪಸರ್ಗಮುಂ ಪಸಿವುಂ ನೀರಟ್ಕೆ ಮೊದಲಾಗೊಡೆಯವಿರ್ಪತ್ತೆರಡು ಪರೀಷಹಂಗಳಂ ಸೈರಿಸಿ ಶುಭ ಪರಿಣಾಮದಿಂ ಸಮ್ಯಗ್‌ದರ್ಶನ ಜ್ಞಾನ ಚಾರಿತ್ರಂಗಳನಾರಾಧಿಸಿ ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ.

ಚಾರಿತ್ರಗಳೆಂಬ ರತ್ನತ್ರಯವನ್ನು ನೆರವೇರಿಸಿ ಸತ್ತರು. ಆಯುರ್ನ್ವರುನುಂದಿಯೂ ಸತ್ತು ವೈಜಯಂತ ಎಂಬ ಐದು ಅಣುತ್ತರೆಗಳಲ್ಲಿ ಶ್ರೇಷ್ಠವಾದ ಸ್ವರ್ಗದಲ್ಲಿ ಮೂವತ್ತಮೂರು ಸಾಗರದಷ್ಟು ಆಯುಷ್ಯವುಳ್ಳವರಾಗಿ ಒಂದು ಮೊಳ ಅಳತೆಯುಳ್ಳ ಬಿಳಿ ಬಣ್ಣವುಳ್ಳ ಅಹಮಿಂದ್ರ ಎಂಬ ದೇವರಾಗಿ ಹುಟ್ಟಿದರು ರತ್ನತ್ರಯವನ್ನು ಆರಾಧಿಸತಕ್ಕ ಇನ್ನಿತರರೂ ಲಲಿತ ಘಟೆಯುನ್ನು ಮನಸ್ಸಿನಲ್ಲಿ ಭಾವಿಸಿ ನಾಲ್ಕು ಬಗೆಯ (ದೇವ, ನಾರಕ, ತಿರ್ಯಕ್ ಮಾನುಷ ಎಂಬ) ಉಪಸರ್ಗಗಳನ್ನೂ (ತೊಂದರೆಗಳನ್ನೂ) ಹಸಿವು ಬಾಯಾರಿಕೆ ಮುಂತಾಗಿ ಇರುವ ಇಪ್ಪತ್ತೆರಡು ಬಗೆಯ ಪರೀಷಹಗಳನ್ನೂ ಸಹಿಸಿಕೊಂಡು ಶುಭ ಫಲದಿಂದ ಸಮ್ಯಗ್ದರ್ಶನ, ಸಮ್ಯಗ್‌ಜ್ಞಾನ, ಸಮ್ಯಕ್‌ಚಾರಿತ್ರಗಳನ್ನು ಆರಾಧಿಸಿ ಸ್ವರ್ಗ ಮೋಕ್ಷ ಸುಖಗಳನ್ನು ಪಡೆಯಲಿ !

# ೮. ಧರ್ಮಘೋಷ ಭಟಾರರ ಕಥೆ

ಧರ್ಮಘೋಷ ಭಟಾರರ ಕಥೆಯಂ ಪೇೞ್ವಂ :

ಗಾಹೆ ॥ ಚಂಪಾ ಏ ಮಾಸಖವಣಂ ಕರಿತ್ತು ಗಂಗಾತಟಮ್ಮಿ ತಣ್ಹಾ ಏ
ಘೋರಾ ಏ ಧಮ್ಮಘೋಸೋ ಪಡಿವಣ್ಣೋ ಉತ್ತಮಂ ಅಟ್ಠಂ ॥

[ಚಂಪಾ ಏ-ಚಂಪೆಯೆಂಬ ಪೊೞಲೊಳ್, ಮಾಸಖವಣಂ ಕರಿತ್ತು-ಮಾಸೋಪವಾಸಂಗೆಯ್ದು, ಗಂಗಾ ತಟಮ್ಮಿ-ಗಂಗಾ ಮಹಾನದಿಯ ತಡಿಯೊಳ್, ತಣ್ಹಾ ಏ-ನೀರೞ್ಕೆಯಿಂದಂ, ಘೋರಾಏ-ಆದಮಾನುಂ ಕಡಿದಪ್ಪುದಱಿಂದಂ, ಧಮ್ಮಘೋಸೋ-ಧರ್ಮಘೋಷನೆಂಬ ಭಟ್ಟಾರಕಂ, ಪಡಿವಣ್ಣೋ-ಪೊರ್ದಿದೊಂ, ಉತ್ತಮಂ ಅಟ್ಠಂ-ಮಿಕ್ಕ ದರ್ಶನ ಜ್ಞಾನ ಚಾರಿತ್ರಂಗಳಾರಾಧನೆಯಂ]

ಅದೆಂತೆಂದೊಡೆ : ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ಕೌಶಂಬಿಯೆಂಬುದು ನಾಡಲ್ಲಿ ವಾರಣಾಸಿಯೆಂಬುದು ಪೊೞಲದನಾಳ್ವಂ ಕೀರ್ತಿಧರನೆಂಬೊನರಸನಾತನ ಮಹಾದೇವಿಯರ್ಕಳ್ ಅರತಿ ರತಿಯೆಂಬೊರಾ ಇರ್ವರ್ಗಂ ಮಕ್ಕಳ್ ಧರ್ಮಘೋಷನುಂ ಧರ್ಮಕೀರ್ತಿಯು ಮೆಂಬೊರಂತವರ್ಗಳಿಷ್ಟ ವಿಷಯ ಕಾಮ ಭೋಗಂಗಳನನುಭವಿಸುತ್ತಿರ್ಪನ್ನೆಗಂ ಮತ್ತೊಂದು ದಿವಸಂ ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ ವಿಹಾರಿಸುತ್ತಂ ಬರ್ಪೊರಾ ವಾರಣಾಸಿಗೆ ವಂದು ಬಹಿರುದ್ಯಾನವನದೊಳ್ ಸ್ಫಟಿಕ

ಧರ್ಮಘೋಷ ಋಷಿಗಳ ಕಥೆಯನ್ನು ಹೇಳುವೆನು-[ಧರ್ಮಘೋಷನೆಂಬ ಋಷಿ ಚಂಪಾಪುರದಲ್ಲಿ ಮಾಸೋಪವಾಸವನ್ನು ಮಾಡಿ, ಗಂಗಾ ಮಹಾನದಿಯ ತೀರದಲ್ಲಿ ಅತ್ಯಂತ ತೀವ್ರವಾಗಿರುವ ಬಾಯಾರಿಕೆಯಿಂದ ಕೂಡಿ ಶ್ರೇಷ್ಠವಾದ ದರ್ಶನ ಜ್ಞಾನಚಾರಿತ್ರಗಳ ಆರಾಧನೆಯನ್ನು ಮಾಡಿದನು.] ಅದು ಹೇಗೆಂದರೆ-ಈ ಜಂಬೂದ್ವೀಪದ ಭರತ ಕ್ಷೇತ್ರದಲ್ಲಿ ಕೌಶಂಬಿಯೆಂಬ ನಾಡಿದೆ. ಅಲ್ಲಿ ವಾರಣಾಸಿಯೆಂಬ ಪಟ್ಟಣವಿದೆ. ಅದನ್ನು ಕೀರ್ತಿಧರನೆಂಬ ರಾಜನು ಆಳುತ್ತಿದ್ದನು. ಅವನಿಗೆ ಅರತಿ, ರತಿ ಎಂಬವರು ರಾಣಿಯರು. ಆ ಇಬ್ಬರು ರಾಣಿಯರಲ್ಲಿ ಧರ್ಮಘೋಷ, ಧರ್ಮಕೀರ್ತಿ, ಎಂಬಿಬ್ಬರು ಮಕ್ಕಳು. ಅಂತು ಅವರು ತಮಗೆ ಇಷ್ಟವಾದ ವಿಷಯದಲ್ಲಿ ಬಯಸಿದ ಸುಖಗಳನ್ನು ಅನುಭವಿಸುತ್ತ ಇದ್ದರು. ಹೀಗಿರಲು ಗುಣೋತ್ತಮರೆಂಬ ಋಷಿಗಳು ಗ್ರಾಮ, ನಗರ, ಖೇಡ, ಖರ್ವಡ, ಮಡಂಬ, ಪತ್ತನ, ದ್ರೋಣಾಮುಖಗಳೆಂಬ ಭೂಭಾಗಗಳಲ್ಲಿ ಸಂಚಾರ ಮಾಡುತ್ತ ಬರತಕ್ಕವರು, ವಾರಾಣಸಿಗೆ ಬಂದರು. ಅಲ್ಲಿ, ಪಟ್ಟಣದ ಹೊರಗಿನ ಉದ್ಯಾನದಲ್ಲಿ ಚಂದ್ರಕಾಂತ ಶಿಲಾತಳದ ಮೇಲೆ

ಶಿಲಾತಲದ ಮೇಗೆ ಪಂಥಾತಿಚಾರ ನಿಯಮಂ ಗೆಯ್ದಿರ್ದ ಗುಣೋತ್ತಮರೆಂಬ ಭಟಾರರಂ ವನಕ್ರೀಡೆಗೆ ಪೋದ ಧರ್ಮಘೋಷನುಂ ಧರ್ಮಕೀರ್ತಿಕುಮಾರನುಂ ಕಂಡು ಬಂದಿಸಿ ಭಟಾರಾ ಎಮಗೆ ಧರ್ಮಮಂ ಪೇಟಿಮೆಂದೊಡೆ ಭಟಾರರಿಂತೆಂದು ಧರ್ಮಮಂ ಪೇಟ್ದರ್ :

ವೃತ್ತ ‖ ಕೋ ಧರ್ಮಪ್ರವರೋ ದಯಾತ್ಮಸುಭಗಃ ಕಃ ಸ್ಯಾನ್ನರಃ ಪಂಡಿತಃ
ಕಾ ಯೋಷಿದ್ವಶಗಾ ಕಲಿಷ್ಕಯತಿ (?) ಚೇತ್ ಕ್ರೋಧೋ ऽ ಶುಭಸ್ಯೋದಯಃ
ಕಾ ऽ ಲಕ್ಷ್ಮೀರವಿಚಾರ ಕಾರ್ಯಘಟನಾ ಕಿಂ ಮಿತ್ರಮಾತ್ಮಾऽऽತ್ಮನಃ
ಕಿಂ ಸೌಖ್ಯಂ ಭುವಿ ಶಾಸ್ತ್ರವಾಚನಮತಿಃ ಕಾ ವಾ ಗತಿರ್ನಿರ್ವೃತಿಃ ‖

ಸಮ್ಯಕ್ತ್ವೋತ್ತಮಃ ಹಸ್ತಿ ಮಸ್ತಕ ಗತಃ ಸುಜ್ಞಾನಕೇತು ಪ್ರಜೋ
ನಾನಾಶೀಲಗುಣವ್ರತೋರುಪೃತನಃ ಸ್ವಾಧ್ಯಾಯ ಶಂಖಧ್ವನಿಃ
ಭಾಸ್ವತ್ಸಂವರ ಭೂರಿ ಚಾರುಕವಚೋ ನಾತೀವ ತೀಕ್ಷ್ಣಾಯುಧಃ
ಸೇವ್ಯೋ ಧರ್ಮಮಹಾನೃಪೋ ಬುಧಭಟೈಃ ಸ್ವರ್ಮೋಕ್ಷವೃತ್ತಿಪ್ರದಃ ‖

ಶ್ಲೋಕ ‖ ಧರ್ಮಾರ್ಥಕಾಮಮೋಕ್ಷಾಣಾಂ ಯಸ್ಯೈಕೋಽಪಿ ನ ವಿದ್ಯತೇ
ಅಜಾಗಲ ಸ್ತನಸ್ಯೇವ ತಸ್ಯ ಜನ್ಮ ನಿರರ್ಥಕಂ ‖

ಕುಳಿತು ತಮ್ಮ ದಾರಿಯಲ್ಲಿ ಆಗಿರಬಹುದಾದ ಅತಿಚಾರ (ಧರ್ಮವಿರುದ್ಧವಾದ ಕೃತ್ಯ)ಗಳ ಪ್ರಾಯಶ್ಚಿತ್ತಗಳೆನಿಸಿದ ಪಂಥಾತಿಚಾರ ನಿಯಮಗಳನ್ನು ಆಚರಿಸುತ್ತಿದ್ದರು. ಆ ವೇಳೆಯಲ್ಲಿ ಉದ್ಯಾನ ಕೇಳಿಗೆಂದು ಹೋಗಿದ್ದ ಧರ್ಮಘೋಷನೂ ಧರ್ಮಕೀರ್ತಿಯೂ ಋಷಿಗಳನ್ನು ಕಂಡು ವಂದನೆಗೈದರು. "ಪೂಜ್ಯರೇ, ನಮಗೆ ಧರ್ಮೋಪದೇಶವನ್ನು ಮಾಡಿ" ಎಂದು ಕೇಳಿಕೊಂಡರು. ಆಗ ಭಟಾರರು ಈ ರೀತಿಯಾಗಿ ಧರ್ಮವನ್ನು ವಿವರಿಸಿ ಹೇಳಿದರು—ಧರ್ಮದಲ್ಲಿ ಅತ್ಯಂತ ಶ್ರೇಷ್ಠನು ಯಾರು ?–ದಯೆಯಿಂದ ಕೂಡಿದ ಆತ್ಮ ಸೌಭಾಗ್ಯವುಳ್ಳವನು. ಮನುಷ್ಯನು ಯಾವನು ?–ಪಾಂಡಿತ್ಯವುಳ್ಳವನು. ಹೆಂಗುಸು ಯಾವಳು ?–ವಶವರ್ತಿಯಾಗಿರುವವಳು. ಕೋಪದಿಂದ ಏನಾಗುತ್ತದೆ ?–ಅಶುಭವುಂಟಾಗುತ್ತದೆ. ಅಲಕ್ಷ್ಮಿ (ದಾರಿದ್ರ್ಯ) ಯಾವುದು ?–ವಿಚಾರವಿಲ್ಲದೆ ಕೆಲಸ ಮಾಡುವುದು. ತನ್ನ ಮಿತ್ರನು ಯಾವನು ?–ತಾನೇ. ಲೋಕದಲ್ಲಿ ಸುಖ ಯಾವುದು ?–ಶಾಸ್ತ್ರವನ್ನು ಓದುವ ಬುದ್ಧಿ. ಗತಿ (ಗುರಿ) ಯಾವುದು?–ಮೋಕ್ಷವು. ಸಮ್ಯಕ್ತ್ವವೆಂಬ ಆನೆಯ ತಲೆಯ ಮೇಲೆ ಕುಳಿತಿರುವ, ಸುಜ್ಞಾನವೆಂಬ ಧ್ವಜಸಮೂಹವುಳ್ಳ, ಹಲವು ಬಗೆಯ ಶೀಲ ಗುಣವ್ರತಗಳೆಂಬ ಸೈನ್ಯವುಳ್ಳ, ಶಾಸ್ತ್ರಾಭ್ಯಾಸವೆಂಬ ಶಂಖಧ್ವನಿಯುಳ್ಳ, ಹೊಳೆಯುವ ಸಂವರವೆಂಬ ಅತಿ ಸುಂದರವಾದ ಕವಚವುಳ್ಳ, ಅತಿ ತೀಕ್ಷ್ಣವಾದ ಆಯುಧಗಳಿಲ್ಲದ, ಸ್ವರ್ಗ ಮೋಕ್ಷಗಳ ಸ್ಥಿತಿಯನ್ನು ಕೊಡುವ, ಧರ್ಮವೆಂಬ ಮಹಾರಾಜನು ವಿದ್ವಾಂಸರೆಂಬ ಸೈನಿಕರಿಂದ

ವೃತ್ತ ॥ ಯೇಷಾಂ ನ ವಿದ್ಯಾ ನ ತಪೋ ನ ದಾನಂ
ನಾಪ್ಯೇವ ಶೀಲಂ ನ ಗುಣೋ ನ ಧರ್ಮಃ
ತೇ ಮರ್ತ್ಯಲೋಕೇ ಭುವಿ ಭಾರಭೂತಾ
ಮನುಷ್ಯರೂಪೇಣ ಮೃಗಾಶ್ಚರಂತಿ ॥

ಶ್ಲೋಕ ॥ ಕ್ರಿಮಯಃ ಕಿಂ ನ ಜೀವಂತಿ ಭಕ್ಷಯಿತ್ವಾ ಪರಸ್ಪರಂ
ಪರಲೋಕಾವಿರುದ್ಧೇನ ಯೋ ಜೀವತಿ ಸ ಜೀವತಿ ॥
ಅಪವಾದೋ ಭವೇದ್ಯೇನ ಯೇನ ಚಾಪ್ರತ್ಯಯೋ ಭವೇತ್
ನರಕೇ ಗಮ್ಯತೇ ಯೇನ ತತ್ಕರ್ಮ ನ ಸಮಾಚರೇತ್ ॥

ಇಂತು ಸಂಕ್ಷೇಪದಿಂ ಭಟಾರರ್ ಧರ್ಮಮಂ ಪೇೞೆ ಕೇಳ್ದಿರ್ವರ್ಗ್ಗಂ ವೈರಾಗ್ಯಮಾಗಿ ತಾಯುಂ ತಂದೆಯುಂ ಸ್ವಜನ ಬಂಧುವರ್ಗಮುಮಂ ಬಿಡಿಸಿ ನಿಶ್ಶಲ್ಯಂಗೆಯ್ದು ಬಾಹ್ಯಾಭ್ಯಂತರ ಪರಿಗ್ರಹಂಗಳಂ ತೊಱೆದು ಗುಣೋತ್ತಮು ಭಟಾರರ ಪಕ್ಕದೆ ತಪಂಬಟ್ಟು ಪನ್ನೆರಡು ವರ್ಷಂಬರೆಗಂ ಗುರುಗಳೊಡನಿರ್ದು ಪ್ರಥಮಾನುಯೋಗ ಚರಣಾನುಯೋಗ ಕರಣಾನುಯೋಗ ದ್ರವ್ಯಾನು

ಸೇವೆಗೊಳ್ಳುವವನಾಗಿದ್ದಾನೆ. ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ವಿಧದ ಪುರುಷಾರ್ಥಗಳಲ್ಲಿ ಒಂದು ಕೂಡಾ ಯಾರಿಗೆ ಇಲ್ಲವೋ ಅವನ ಜನ್ಮ ಮೇಕೆಯ ಕೊರಳ ಮೊಲೆಯಂತೆ ಪ್ರಯೋಜನವಿಲ್ಲದುದು. ಯಾರಿಗೆ ವಿದ್ಯೆಯಿಲ್ಲವೋ ತಪಸ್ಸಿಲ್ಲವೋ ದಾನಗುಣವಿಲ್ಲವೋ ಶೀಲ ಕೂಡ ಇಲ್ಲವೋ ಧರ್ಮವಿಲ್ಲವೋ ಅವರು ಮೃತಿಹೊಂದುವ ಸ್ವಭಾವವುಳ್ಳ ಈ ಲೋಕದಲ್ಲಿ ಭಾರವಾಗಿ ಪರಿಣಮಿಸಿರುವವರು. ಅವರು ಮನುಷ್ಯರ ರೂಪದಲ್ಲಿರುವ ಮೃಗಗಳಾಗಿ ವರ್ತಿಸುತ್ತಾರೆ. ಒಂದನ್ನು ಮತ್ತೊಂದು ತಿನ್ನುತ್ತ ಕ್ರಿಮಿಗಳು ಬದುಕುತ್ತ ಇರುವುದಿಲ್ಲವೇನು ? ಪರಲೋಕದ ಪ್ರಾಪ್ತಿಗೆ ವಿರೋಧವಾಗದ ರೀತಿಯಿಂದ ಯಾವನು ಜೀವಿಸುತ್ತಾನೋ ಅವನು ಸಾರ್ಥಕವಾಗಿ ಜೀವಿಸುತ್ತಾನೆ. ಯಾವ ಕಾರ್ಯದಿಂದ ಜನನಿಂದೆಯುಂಟಾಗುವುದೋ ಮತ್ತೇ ಯಾವ ಕಾರ್ಯದಿಂದ ನರಕಕ್ಕೆ ಹೋಗಬೇಕಾಗುವುದೋ ಆ ಕಾರ್ಯವನ್ನು ಮಾಡಬಾರದು. ಹೀಗೆ ಸಂಕ್ಷೇಪವಾಗಿ ಋಷಿಗಳು ಧರ್ಮವನ್ನು ತಿಳಿಸಿದರು. ಅದನ್ನು ಕೇಳಿದ ಇಬ್ಬರಿಗೂ ವೈರಾಗ್ಯವುಂಟಾಯಿತು. ಅವರು ತಮ್ಮ ತಾಯಿ, ತಂದೆ, ಸ್ವಜನರು, ಬಂಧುಗಳ ಸಮೂಹವನ್ನು ಬಿಟ್ಟು, ಅವರಿಗೆ ಮನೋವ್ಯಥೆಯಿಲ್ಲದಂತೆಮಾಡಿ ಬಾಹ್ಯ ಮತ್ತು ಅಭ್ಯಂತರ ಎಂಬ ಎರಡೂ ಬಗೆಯ ಪರಿಗ್ರಹಗಳನ್ನು ತೊರೆದರು. ಗುಣೋತ್ತಮು ಋಷಿಗಳ ಬಳಿಯಲ್ಲಿ ದ್ವಾದಶ ವಿಧದ ತಪಸ್ಸನ್ನು ಸ್ವೀಕರಿಸಿದರು. ಹನ್ನೆರಡು ವರ್ಷಗಳವರೆಗೂ ಗುರುಗಳ ಒಟ್ಟಿಗಿದ್ದು ಪ್ರಥಮಾನುಯೋಗ, ಚರಣಾನುಯೋಗ. ಕರಣಾನುಯೋಗ, ದ್ರವ್ಯಾನುಯೋಗಗಳನ್ನು ಕಲಿತು ಶಾಸ್ತ್ರಗಳಲ್ಲಿ ಪಾರಂಗತ

ಗಂಗಳಂ ಕಲ್ತುಶಾಸ್ತ್ರಪಾರಗರಾಗಿ ಭಟಾರರಂ ಬೆಸಗೊಂಡವರನುಮತದಿಂದಿರ್ವರುಂ ಬೇಱೆ
ಬೇಱೆ ವಿಹಾರಿಸಲ್ ತಗುಳ್ದು ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾ
ಮುಖಂಗಳಂ ವಿಹಾರಿಸುತ್ತಂ ಚಂಪಾನಗರಕ್ಕೆ ಪೋಗಿ ತಾವರೆಗೊಳದ ತಡಿಯ ಮಱೆಯೊಳಿ
ರ್ದರುಂ ಮಾಸೋಪವಾಸಂಗೆಯ್ದು ಪಾರಣೆಯ ದಿವಸದಂದು ಚಂಪಾನಗರದ ಶ್ರಾವಕರ್ಕಳೆಲ್ಲಂ
ನಮ್ಮ ನೋಂತುದನಱಿವರದು ಕಾರಣದಿಂ ನಮಗೆ ಪಾರಣೆಯುಂ ಮಾಟ್ಪಾಗಳಯಥಾಕರ್ಮದ
ದೋಷಂ ಸಾರ್ತರ್ಕುಮದಱಿಂ ನಾಮಿಲ್ಲಿ ಚರಿಗೆವುಗದೆ ಗಂಗೆಯ ತಡಿಯೊಳಿರ್ದ ತುಱುಪಟ್ಟಿಗೆ
ಪೋಪಮೆಂದಿರ್ವರುಂ ಪೋಪರ್ ಅನ್ನೆಗಮಾ ತುರುಪಟ್ಟಿಯುಮಲ್ಲಿಂದೆರ್ದು ನಾಡೆ ಗೆಂಟು
ಪೋದತ್ತು ಪೋದೊಡೆ ಧರ್ಮಕೀರ್ತಿ ಭಟಾರರ್ ಪೆಱತೊಂದು ತುಱುಪಟ್ಟಿಗೆ ಪೋದರ್
ಧರ್ಮಘೋಷಭಟಾರರ್ ಪೋಗಲಾಱದೆ ಗಂಗೆಯ ತಡಿಯ ಮರದ ಕೆೞಗೆ ಪಸಿವು ನೀರ
ೞ್ಕೆಯಿಂ ಸೇದೆಗೆಟ್ಟು ಬಸಮೞಿದಿರ್ದೋರಂ ಗಂಗಾದೇವತೆ ಕಂಡನುಕಂಪೆಯುಂ ಭಕ್ತಿ
ಯುಂ ಕಾರಣಮಾಗಿ ಸರ್ವಾಭರಣ ಭೂಷಿತೆಯಾಗಿ ದಿವ್ಯಮಪ್ಪ ಶ್ವೇತವಸ್ತ್ರಮನುಟ್ಟು
ಸುವರ್ಣಮಯಮಪ್ಪ ಪಿರಿಯ ಕರಗಮಂ ತೆಕ್ಕನೆ ತೀವಿ ತಣ್ಣಿದವುಂ ಸುಗಂಧಮಪ್ಪ ನೀರ್ಗಳಂ

ರಾದರು. ಆಮೇಲೆ, ಋಷಿಗಳನ್ನು ಕೇಳಿಕೊಂಡು ಅವರ ಅನುಮತಿಯನ್ನು ಪಡೆದು ಇಬ್ಬರೂ ಬೇರೆ ಬೇರೆಯಾಗಿ ಸಂಚಾರಮಾಡಲು ಹೊರಟರು. ಗ್ರಾಮ, ನಗರ, ಖೇಡ, ಖರ್ವಡ, ಮಡಂಬ, ಪತ್ತನ, ದ್ರೋಣಾಮುಖಗಳಲ್ಲಿ ಸಂಚರಿಸುತ್ತ ಚಂಪಾನಗರಕ್ಕೆ ಹೋದರು. ಅಲ್ಲಿ ತಾವರೆಕೊಳದ ತೀರದಲ್ಲಿ ಮರೆಯಾಗಿ ಇಬ್ಬರೂ ಒಂದು ತಿಂಗಳ ಉಪವಾಸವನ್ನು ಮಾಡಿದರು. "ಪಾರಣೆಯ ದಿನಸ ಚಂಪಾನಗರದ ಶ್ರಾವಕರೆಲ್ಲರೂ ನಾವು ವ್ರತಮಾಡಿರುವುದನ್ನು ತಿಳಿದಾರು. ಆದರಿಂದಾಗಿ ನಮಗೆ ಪಾರಣೆಮಾಡುವಾಗ ಸರಿಯಾದ ರೀತಿಯಲ್ಲಿ ಕರ್ಮವನ್ನು ಮಾಡದ ದೋಷ ಬಂದು ಸೇರುವುದು. ಆದುದ ರಿಂದ ನಾವು ಇಲ್ಲಿ ಭಿಕ್ಷೆಗಾಗಿ ಮನೆಗಳನ್ನು ಪ್ರವೇಶಿಸುವುದು ಬೇಡ. ನಾವು ಗಂಗಾತೀರ ದಲ್ಲಿದ್ದ ಹಸುಗಳ ಹಟ್ಟಿಗೆ ಹೋಗೋಣ"—ಎಂದುಕೊಂಡು ಅವರಿಬ್ಬರೂ ಗಂಗಾ ತೀರಕ್ಕೆ ಹೋದರು. ಅಷ್ಟರಲ್ಲಿ ಗಂಗಾತೀರದ ಹಸುಗಳ ಹಟ್ಟಿ ಆ ಸ್ಥಳದಿಂದ ಬೇರೊಂದು ಕಡೆಗೆ ಬಹಳ ದೂರಕ್ಕೆ ಹೋಗಿದ್ದಿತು. ಹಾಗೆ ಹೋದುದರಿಂದ ಧರ್ಮಕೀರ್ತಿ ಮುನಿಗಳು ಬೇರೆ ಒಂದು ಹಸು ಹಟ್ಟಿಗೆ ಹೋದರು. ಧರ್ಮಘೋಷಭಟಾರರು ಬೇರೆ ಕಡೆ ಹೋಗಲಾರದೆ ಗಂಗಾನದೀ ತೀರದ ಮರದ ಬುಡದಲ್ಲಿ ಹಸಿವು ಬಾಯಾರಿಕೆಗಳಿಂದ ಆದ ಆಯಾಸದಿಂದ ಕೆಟ್ಟು ಶಕ್ತಿಗುಂದಿದ್ದರು. ಅವರನ್ನು ಗಂಗಾದೇವಿ ನೋಡಿ ದಯೆಯ ಕಾರಣವಾಗಿ ಎಲ್ಲ ಆಭರಣಗಳಿಂದ ಅಲಂಕಾರಮಾಡಿಕೊಂಡು ದಿವ್ಯವಾದ ಬಿಳಿಯುಡು ಪನ್ನು ಧರಿಸಿಕೊಂಡು ಚಿನ್ನದ ದೊಡ್ಡ ಕಲಶವನ್ನು—ಅದರಲ್ಲಿ ತಣ್ಣಗಾದುದೂ ಸುವಾಸನಾಯುಕ್ತವೂ ಆದ ನೀರುಗಳನ್ನು ಪೂರ್ಣವಾಗಿ ತುಂಬಿಸಿಕೊಂಡು, ತೆಗೆದು

ತಂದು ಧರ್ಮಘೋಷ ಭಟಾರರನಿಂತೆಂದಳ್ ಭಟಾರಾ ಪ್ರಾಸುಕಮಪ್ಪ ನೀರಂ ಪೊಟ್ತಿದೊಳ್ ಬಂದುದಂ ಕುಡಿದು ನಿಮ್ಮ ಸೇದೆಯುಮನಾಱಿಸಿಂ ನಿಮಗರಮನೆಗೆ ಪೋಗಿ ಕೂೞಂ ತಂದಪೆನನ್ನೆವರಂ ನೀರಂ ಕುಡಿದು ತೃಷೆಯಂ ಪಿಂಗಿಸುವುದೆಂದೊಡೆ ಭಟಾರರಾವೊಲ್ಲೆವಬ್ಬಾ ಕುಡಿಯಲ್ಕಾಗ ದೆಂದೊಡೆ ಗಂಗಾದೇವತೆ ಪೂರ್ವವಿದೇಹಕ್ಕೆ ಪೋಗಿ ಸೀಮಂಧರ ತೀರ್ಥಂಕರ ಪರಮದೇವರಂ ಕಂಡು ಬಂದಿಸಿ ಇಂತೆಂದು ಬೆಸಗೊಂಡಳ್ ಭಟಾರಾ ಒರ್ವರ್ ಋಷಿಯರ್ ನೀರೞ್ಕೆಯಿಂದಂ ಕರಂ ಸೇದೆಗೆಟ್ಟು ಬಸಮೞಿದಿರ್ದೋರಂ ಕಂಡು ಪಿರಿದೊಂದು ಪೊನ್ನ ಕರಗಮಂ ತೆಕ್ಕನೆ ತೀವಿ ಯಾದವಮಾನುಂ ತಣ್ಣಿದುವುಂ ಕಮ್ಮಿದುವುಮಪ್ಪ ನೀರ್ಗಳಂ ಪೊಟ್ತಿದೊಳ್ ಕೊಂಡು ಪೋಗಿ ಕುಡಿಯಲೆಱೆಯೆ ಕೊಳ್ದರಿಲ್ಲೆಂದೊಡೆ ಭಟಾರರೆಂದರ್ ಪ್ರಾಸುಕಮಾದೊಡಂ ಪೊಟ್ತಿದೊಳ್ ತಂದೊಡಂ ದೇವರ್ಕಳ ದೇವಿಯರ್ಕಳ ಕೈಯೊಳ್ ಋಷಿಯರ್ಕಳ್ಗುಣಲುಂ ಕುಡಿಯಲುಂ ತಗದು ನಿಮಗೆ ಸಮ್ಯಕ್ತ್ವಮುಂ ಪೂಜೆಯುಂ ಋಷಿಯರ್ಕಳ್ಗೆ ಪ್ರಾತಿಹಾರ್ಯಮುಂ ಗೆಯ್ವುದುಂ ನಿಮ್ಮಭಿಪ್ರಾಯಮಿನಿತೆಯೆಂದು ಪೇೞ್ದೊಡೆ ತೀರ್ಥಂಕರ ಪರಮದೇವರ ಮಾತಂ ಕೇಳ್ದು ಬೇಗಂ ಗಂಗಾದೇವತೆ ಧರ್ಮಘೋಷಭಟಾರರ್ಗೆ ತಣ್ಣಿತಪ್ಪ ಗಾಳಿಯುಂ ಸುಗಂಧಜಲವರ್ಷ

ಕೊಂಡು ಬಂದು ಧರ್ಮಘೋಷ ಭಟಾರರೊಡನೆ ಹೀಗೆಂದಳು—"ಋಷಿಗಳೇ, ಜೀವ ರಹಿತವಾಗಿರುವ ನೀರನ್ನು, ಚಿನ್ನದ ಪಾತ್ರೆಯಲ್ಲಿ ಬಂದುದನ್ನು ಕುಡಿದು ನಿಮ್ಮ ಆಯಾಸ ವನ್ನು ಶಮನಮಾಡಿಕೊಳ್ಳಿರಿ. ನಿಮಗಾಗಿ ನಾನು ಅರಮನೆಗೆ ಹೋಗಿ ಅನ್ನವನ್ನು ತರುವೆನು. ಅಲ್ಲಿಯವರೆಗೆ ನೀರನ್ನು ಕುಡಿದು ಬಾಯಾರಿಕೆಯನ್ನು ಪರಿಹಾರಮಾಡಿ ಕೊಳ್ಳಿರಿ" ಹೀಗೆ ಗಂಗಾದೇವತೆ ಹೇಳಿದಾಗ ಧರ್ಮಘೋಷ ಮುನಿಗಳು "ನಾವು ಅದನ್ನು ಸ್ವೀಕರಿಸಲೊಲ್ಲೆವಮ್ಮಾ ! ಕುಡಿಯಲಿಕ್ಕಾಗದು." ಎಂದರು. ಆಗ ಗಂಗಾದೇವತೆ ಪೂರ್ವವಿದೇಹ ರಾಜ್ಯಕ್ಕೆ ಹೋಗಿ ಸೀಮಂಧರ ತೀರ್ಥಂಕರರನ್ನು, ಶ್ರೇಷ್ಠ ದೇವರಾದ ಅವರನ್ನು ಕಂಡು ನಮಸ್ಕರಿಸಿ ಹೀಗೆ ಕೇಳಿದಳು—"ಪೂಜ್ಯರೇ ಒಬ್ಬರು ಋಷಿಗಳು ಬಾಯಾರಿಕೆಯಿಂದ ಬಹಳ ಆಯಾಸಗೊಂಡು ಶಕ್ತಿಗುಂದಿದ್ದರು. ಅವರನ್ನು ನಾನು ಕಂಡು, ತಣ್ಣಗಿನ ಮತ್ತು ಸುವಾಸನೆಯುಳ್ಳ ನೀರನ್ನು ದೊಡ್ಡದಾದ ಒಂದು ಚಿನ್ನದ ಕಲಶದಲ್ಲಿ ಪೂರ್ಣವಾಗಿ ತುಂಬಿಸಿಕೊಂಡು ತೆಗೆದುಕೊಂಡು ಹೋದೆನು. ಕುಡಿಯುವುದ ಕ್ಕಾಗಿ ನೀರನ್ನು ಹೊಯ್ದಾಗ ಅವರು ನೀರನ್ನು ಸ್ವೀಕರಿಸಲಿಲ್ಲ" ಎಂದಳು. ಆಗ ಸೀಮಂಧರ ಸ್ವಾಮಿಗಳು– "ನೀನು ಕೊಂಡುಹೋದ ನೀರು ಪ್ರಾಸುಕ (ಜೀವರಹಿತ) ವಾಗಿದ್ದರೂ ಚಿನ್ನದ ಪಾತ್ರೆಯಲ್ಲಿ ಕೊಂಡುಹೋಗಿದ್ದರೂ ಋಷಿಗಳು ದೇವರುಗಳ ಮತ್ತು ದೇವಿಯರು ಗಳ ಕೈಯಿಂದ ಬಂದುದನ್ನು ಉಣ್ಣಬಾರದು, ಕುಡಿಯಲೂಬಾರದು. ನಿಮ್ಮಂಥವರು ಜೈನಧರ್ಮವನ್ನು ತಿಳಿಯಬಹುದು ಪೂಜೆಮಾಡಬಹುದು ಋಷಿಗಳಿಗೆ ದೇವತೆಗಳು ಮಾಡ ತಕ್ಕ ಪೂಜೆಮಾಡಬಹುದು. ಇಷ್ಟು ಮಾತ್ರವೇ ನಿಮಗೆ ಅರ್ಹತೆ" ಯೆಂದರು. ಗಂಗೆಯು ಅವರ ಮಾತನ್ನು ಕೇಳಿ ಬೇಗಹೋದಳು. ಧರ್ಮಘೋಷಮುನಿಗಳಿಗೆ ತಂಗಾಳಿಯನ್ನೂ

ಮುಮಂ ಮಾಡಿದೊಡಾಪ್ಯಾಯನಮಾಗಿ ಶುಕ್ಲಧ್ಯಾನಮಂ ಧ್ಯಾನಿಸಿ ಘಾತಿಕರ್ಮಂಗಳಂ ಕಿಡಿಸಿ ಕೇವಲಜ್ಞಾನಿಯಾದೊಡೆ ಚತುರ್ವಿಧಮಪ್ಪ ದೇವನಿಕಾಯಂ ಬಂದರ್ಚಿಸಿ ಪೂಜಿಸಿ ಪೋದೊಡವರುಂ ಬೞಿಕ್ಕಘಾತಿಕರ್ಮಂಗಳಂ ಕಿಡಿಸಿ ಮೋಕ್ಷಕ್ಕೆ ಪೋದರ್ ಮತ್ತಮವರಿಂ ಕಿಱಿಯರ್ ಧರ್ಮಕೀರ್ತಿ ಭಟಾರರ್ ಪೆಱತೊಂದು ತುಱುಪಟ್ಟಿಗೆ ಪೋದೊಡಾ ತುಱುಪಟ್ಟಿಯುಮಲ್ಲಿಂದೆರ್ದು ಪೆಱತೊಂದುದೆಸೆಗೆ ನಾಡೆ ಗೆಂಟು ಪೋದೊಡೆ ನಿರಾಶೆಯಾಗಿ ಪಸಿವುಂ ನೀರೞ್ಕೆಯಿಂದಂ ಬಾಧಿಸೆಪಟ್ಟೊರಾಗಿ ಸೇದೆಗೆಟ್ಟು ಬಸಮೞಿದು ಶುಭಪರಿಣಾಮಕ್ಕೆ ಸಂದೊರಂ ಮುನ್ನಿನ ದೇವತೆ ಕಂಡಱಿದು ಪ್ರತಿಬೋಧಿಸಲ್ ತಗುಳ್ದವರುಂ ತಿಳಿಪಲಾಱದೆ ಮತ್ತೆ ಪೂರ್ವವಿದೇಹಕ್ಕೆ ಪೋಗಿ ಸೀಮಂಧರ ತೀರ್ಥಕರ ಪರಮಸ್ವಾಮಿಯುಮಂ ಕಂಡು ಪೊಡೆವಟ್ಟು ಅವರ ಸಮಾವಸ್ಥೆಯೆಲ್ಲಮಂ ಭಟಾರರ್ಗ್ಗೆ ಪೇೞ್ದು ಸಮಾಧಿಸಂಧಾನೋಪಾಯಮಂ ಬೆಸಗೊಂಡೊಡೆ ಸರ್ವಜ್ಞರಿಂತೆಂದು ಪೇೞ್ದರಾಸನ್ನಭವ್ಯರ್ ಮೂಱನೆಯ ಭವದೊಳ್ ಮೋಕ್ಷಕ್ಕೆ ಪೋಪರೆಂದು ಸೀಮಂಧರ ತೀರ್ಥಂಕರ ಪರಮದೇವರ್ ಪೇೞ್ದರೆಂಬುದಂ ಕೇಳ್ದಾಗಡೆ ಅಶುಭ ಪರಿಣಾಮಮಂ ತೊಱೆದು ನೀಗಿ ಶುಭ ಪರಿಣಾಮದೊಳ್ ಕೂಡಿ ಸಮಾಧಿಯನೊಡೆಯರಪ್ಪರ್ ನೀಂ ಬೇಗಂ

ಸುವಾಸನೆಯ ನೀರಿನ ಮಳೆಯನ್ನೂ ಉಂಟುಮಾಡಿದಳು. ಆಗ ಅದು ಧರ್ಮಘೋಷರಿಗೆ ಹಿತವಾಯಿತು. ಅವರು ಶುಕ್ಲಧ್ಯಾನವನ್ನು ಮಾಡಿ, ಘಾತಿಕರ್ಮಗಳನ್ನು ನಾಶಪಡಿಸಿ ಕೇವಲ ಜ್ಞಾನವನ್ನು ಪಡೆದರು. ನಾಲ್ಕು ವಿಧವಾದ ದೇವತೆಗಳ ಸಮೂಹವು ಅಲ್ಲಿಗೆ ಬಂದು ಭಟಾರರನ್ನು ಅರ್ಚಿಸಿ ಪೂಜಿಸಿ ಹಿಂದೆರಳಿದರು. ಧರ್ಮಘೋಷ ಋಷಿಗಳು ಆ ಮೇಲೆ ಅಘಾತಿಕರ್ಮಗಳನ್ನೂ ನಾಶಪಡಿಸಿ ಮೋಕ್ಷವನ್ನೈದಿದರು. ಅನಂತರ, ಅವರ ತಮ್ಮಂದಿರಾದ ಧರ್ಮಕೀರ್ತಿ ಭಟಾರರು ಬೇರೊಂದು ತುರು (ಹಸು) ಹಟ್ಟಿಗೆ ಹೋದಾಗ, ಆ ತುರು ಹಟ್ಟಿ ಅಲ್ಲಿಂದ ಎದ್ದು ಬೇರೊಂದು ಕಡೆಗೆ ಬಹಳವಾಗಿ ದೂರಕ್ಕೆ ಹೋಗಿದ್ದಿತು. ಇದರಿಂದ ಅವರಿಗೆ ನಿರಾಶೆಯುಂಟಾಯಿತು. ಹಸಿವು ಬಾಯಾರಿಕೆಗಳು ಅವರನ್ನು ಬಾಧಿಸಿದವು. ಆಯಾಸದಿಂದ ಕೆಟ್ಟು, ಶಕ್ತಿಗುಂದಿ ಅವರು ಶುಭಫಲವನ್ನು ಪಡೆದುಕೊಂಡಿರಲು, ಹಿಂದಿನ ಗಂಗಾದೇವತೆ ಕಂಡು, ತಿಳಿದು, ಅವರಿಗೆ ಅರಿವನ್ನು ಉಂಟುಮಾಡಲು ತೊಡಗಿದರೂ ತಿಳಿಸಲಾರದವಳಾದಳು. ಆಕೆ ಹಿಂದಿನಂತೆ ಪೂರ್ವವಿದೇಹಕ್ಕೆ ಹೋಗಿ ಪರಮಸ್ವಾಮಿಯಾದ ಸೀಮಂಧರ ತೀರ್ಥಂಕರರನ್ನು ಕಂಡು ಸಾಷ್ಟಾಂಗವಂದನೆ ಮಾಡಿ, ಅವರ ಸಮುತೆಯ ಸ್ಥಿತಿಯೆಲ್ಲವನ್ನೂ ಹೇಳಿದಳು. ಅವರನ್ನು ಏಕಾಗ್ರತೆಗೆ ಸೇರಿಸುವ ಉಪಾಯವೇನೆಂದು ಕೇಳಿದಳು. ಆಗ ತೀರ್ಥಂಕರರು ಹೀಗೆಂದರು–"ಧರ್ಮಕೀರ್ತಿ ಮುನಿಗಳು ಆಸನ್ನಭವ್ಯರು (ಮೋಕ್ಷಕ್ಕೆಹೋಗಲು ಅರ್ಹರು). ಮೂರನೆಯ ಜನ್ಮದಲ್ಲಿ ಮೋಕ್ಷಕ್ಕೆ ಹೋಗುವರೆಂದು ಸೀಮಂಧರ ತೀರ್ಥಂಕರ ಪರಮದೇವರು ಹೇಳಿದರು- ಎಂಬುದನ್ನು ಕೇಳಿದ ಕೂಡಲೇ ಅಶುಭವನ್ನೆಲ್ಲ ತೊರೆದುಬಿಟ್ಟು ಶುಭ ಫಲದಲ್ಲಿ ಸೇರಿ ಚಿತ್ತೈಕಾಗ್ರತೆಯನ್ನು ಉಳ್ಳವರಾಗುವರು, ನೀನು ಬೇಗನೆ ಹೋಗಿ ಅವರಿಗೆ ಎಚ್ಚರಿಸು (ಈ ಅರಿ

ಪೋಗಿ ಪ್ರತಿಬೋಧಿಸೆಂದು ಪೇೞ್ದಪ್ಪುದೆ ಗಂಗಾದೇವತೆಯಂತೆಗೆಯ್ವೆನೆಂದು ಪೊಡೆವಟ್ಟು ಪೋಗಿ ಆ ರಿಸಿಯರನೆಯ್ದಿ ಇಂತೆಂದಳ್ ಭಟಾರಾ ನೀಮೀಭವದಿಂ ತೊಟ್ಟು ಮೂಱನೆಯ ಭವದೊಳ್ ಕರ್ಮಕ್ಷಯಂ ಗೆಯ್ದು ಕೇವಳ ಜ್ಞಾನಿಯಾಗಿ ಮೋಕ್ಷಕ್ಕೆ ಪೋದಪಿರೆಂದು ಸೀಮಂಧರ ತೀರ್ಥಕರ ಪರಮದೇವರ್ ಪೇೞ್ದರೆಂದೊಡಾ ಮಾತಂ ಧರ್ಮಕೀರ್ತಿ ಭಟಾರರ್ ಕೇಳ್ದು ಉನ್ಮಾರ್ಗದಿಂದಂ ಮನಮನುಡುಗಿ ಸನ್ಮಾರ್ಗದೊಳ್ ನಿಱಿಸಿ :

ಗಾಹೆ॥ ಹಾ ದುಟ್ಠು ಕಯಂ ಹಾ ದುಟ್ಠು ಕಾರಿಯಂ ಹಾ ದುಟ್ಠು ಅಣುಮೋದಿಯಂ
ಜೀವೋ ಅಂತೋ ಅಂತೋ ದಜ್ಝಇ ಪಚ್ಛತ್ತಾವೇಣ ವೇವಂತೋ

ಎಂದು ಪೊಲ್ಲದಂ ಬಗೆದೆನೆಂದು ತನ್ನಂ ತಾಂ ಪೞಿಯುತ್ತಂ ಸೀಮಂಧರ ಸ್ವಾಮಿಗಳ ನಾಮ ಗ್ರಹಣಂಗೊಂಡಾಗಳಾಶುಭ ಪರಿಣಾಮದಿಂ ಪಿಂಗಿ ಶುಭ ಶುದ್ಧ ಪರಿಣಾಮಂದೊಳ್ ಕೂಡಿ ಮಿಕ್ಕ ರತ್ನತ್ರಯಂಗಳನಾರಾಧಿಸಿ ಪದಿನಾಱನೆಯ ಕಲ್ಪದೊಳ್ ಉತ್ಕೃಷ್ಟಮಪ್ಪ ಇರ್ಪತ್ತೆರಡು ಸಾಗರೋಪಮಾಯುಷ್ಯಮನೊಡೆಯೊನಚ್ಯುತೇಂದ್ರನಾಗಿ ಪುಟ್ಟಿದಂ ಮತ್ತಂ ಪೆಱರುಮಾರಾಧಕರಪ್ಪವರ್ಗಳ್ ಧರ್ಮಘೋಷಭಟಾರರಂ ಮನದೊಳ್ ಬಗೆದು ಪಸಿವುಂ ನೀರೞ್ಕೆ ಮೊದಲಾಗೊಡೆಯ ಪರೀಷಹಂಗಳಂ ಸೈರಿಸಿ ಸಮ್ಯಗ್‌ದರ್ಶನ ಜ್ಞಾನ ಚಾರಿತ್ರಂಗಳಂ ಸಾಧಿಸಿ ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

ವನ್ನುಂಟುಮಾಡು)". ಹಾಗೆ ತೀರ್ಥಂಕರರು ಹೇಳಲು ಗಂಗಾದೇವಿ "ಹಾಗೆಯೇ ಮಾಡುವೆನು" ಎಂದು, ನಮಸ್ಕರಿಸಿ ಹೋಗಿ ಆ ಋಷಿಗಳ ಬಳಿಗೆ ಹೋಗಿ ಹೀಗೆಂದಳು- "ಪೂಜ್ಯರೇ, ನೀವು ಈ ಜನ್ಮದಿಂದ ತೊಡಗಿ ಮೂರನೆಯ ಜನ್ಮದಲ್ಲಿ ಕರ್ಮವನ್ನು ನಾಶಗೊಳಿಸಿ ಕೇವಲ ಜ್ಞಾನವನ್ನು ಪಡೆದು ಮೋಕ್ಷಕ್ಕೆ ಹೋಗುವಿರಿ- ಎಂದು ಸೀಮಂಧರ ತೀರ್ಥಂಕರ ಪರಮದೇವರು ಹೇಳಿದ್ದಾರೆ"- ಹೀಗೆ ಗಂಗಾದೇವತೆ ಹೇಳಲು ಆ ಮಾತನ್ನು ಧರ್ಮಕೀರ್ತಿ ಋಷಿಗಳು ಕೇಳಿ, ದುಷ್ಟಮಾರ್ಗದಿಂದ ಮನಸ್ಸನ್ನು ಹಿಂದೆಗೆದು ಸನ್ಮಾರ್ಗದಲ್ಲಿ ನೆಲೆಗೊಳಿಸಿದರು. [ಅಯ್ಯೋ ದುಷ್ಟಕಾರ್ಯ ಮಾಡಲ್ಪಟ್ಟಿತು, ಅಯ್ಯೋ ದುಷ್ಟಕಾರ್ಯ ಮಾಡಿಸಲ್ಪಟ್ಟಿತು, ಅಯ್ಯೋ ದುಷ್ಟಕಾರ್ಯವು ಅನುಮೋದಿಸಲ್ಪಟ್ಟಿತು. ಜೀವನು ಒಳಗೊಳಗೆ ನಡುಗುತ್ತ ಪಶ್ಚಾತ್ತಾಪದಿಂದ ಸುಡುತ್ತ ಇರುತ್ತಾನೆ.] ಹೀಗೆನ್ನುತ್ತ, ಕೆಟ್ಟುದನ್ನು ಯೋಚಿಸಿದೆನೆಂದು ತನ್ನನ್ನು ತಾನೇ ನಿಂದಿಸುತ್ತ ಸೀಮಂಧರ ಸ್ವಾಮಿಗಳ ಹೆಸರನ್ನು ಕೇಳಿದಾಗ ಅಮಂಗಳಕರವಾದ ಫಲವು ಪರಿಹಾರವಾಗಿ ಮಂಗಲವೂ ಶುದ್ಧವೂ ಆದ ಫಲದಲ್ಲಿ ಸೇರಿ ಶ್ರೇಷ್ಠವಾದ ದರ್ಶನ-ಜ್ಞಾನ-ಚಾರಿತ್ರಗಳೆಂಬ ರತ್ನತ್ರಯವನ್ನು ಆಚರಿಸಿ ಹದಿನಾರನೆಯ ಸ್ವರ್ಗದಲ್ಲಿ ಅತ್ಯಂತ ಶ್ರೇಷ್ಠವೆನಿಸುವ ಇಪ್ಪತ್ತೆರಡು ಸಾಗರಕ್ಕೆ ಸಮಾನವಾದ ಆಯುಷ್ಯವನ್ನುಳ್ಳ ಅಚ್ಯುತೇಂದ್ರನಾಗಿ ಹುಟ್ಟಿದರು. ಆರಾಧಕರಾಗಿರತಕ್ಕ ಬೇರೆಯವರುಕೂಡ, ಧರ್ಮಘೋಷಭಟಾರರನ್ನು ಮನಸ್ಸಿನಲ್ಲಿ ಭಾವಿಸಿ, ಹಸಿವು ಬಾಯಾರಿಕೆ ಮುಂತಾಗಿ ಇರುವ ಪರೀಷಹಗಳನ್ನು ಸಹಿಸಿ, ಸಮ್ಯಗ್‌ದರ್ಶನ, ಸಮ್ಯಗ್ ಜ್ಞಾನ, ಸಮ್ಯಕ್ ಚಾರಿತ್ರಗಳನ್ನು ಸಾಧಿಸಿ ಸ್ವರ್ಗಮೋಕ್ಷ ಸುಖಗಳನ್ನು ಪಡೆಯಲಿ!

# ೯. ಸಿರಿದಿಣ್ಣನೆಂಬ ಭಟ್ಟಾರರ ಕಥೆ

ಸಿರಿದಿಣ್ಣ ಭಟಾರರ ಕಥೆಯಂ ಪೇೞ್ವೆಂ :

ಗಾಹೆ ॥ ಸೀದೇಣ ಪುವ್ವವೇರಿಯ ದೇವೇಣ ವಿಗುವ್ವಿದೇಣ ಘೋರೇಣ
ಸಂಸಿತ್ತೋ ಸಿರಿದಿಣ್ಣೋ ಪಡಿವಣ್ಣೋ ಉತ್ತಮಂ ಅಟ್ಠಂ ॥

[ ಸೀದೇಣ – ಅಯ್ಕಲಿಂದಂ, ಪುವ್ವವೇರಿಯ ದೇವೇಣ – ಮುನ್ನಿನ ಭವದ ಪಗೆವನಪ್ಪ ದೇವನಿಂದಂ, ವಿಗುವ್ವಿದೇಣ – ವಿಗುರ್ವಿಸೆಪಟ್ಟುದಱಿಂದಂ, ಘೋರೇಣ – ಆದಮಾನುಂ ಕಡಿದಪ್ಪುದಱಿಂದಂ, ಸಂಸಿತ್ತೋ– ತಳಿಯಪಟ್ಟೊನಾಗಿ, ಸಿರಿದಿಣ್ಣೋ – ಸಿರಿದಿಣ್ಣನೆಂಬ ಭಟಾರಕಂ, ಪಡಿವಣ್ಣೋ – ಪೊರ್ದಿದೊಂ, ಉತ್ತಮಂ ಅಟ್ಠಂ–ಮಿಕ್ಕ ದರ್ಶನ ಜ್ಞಾನಚಾರಿತ್ರಾರಾಧನೆಯಂ]

ಅದೆಂತೆಂದೊಡೆ : ಈ ಜಂಬೂದ್ವೀಪದ ಭರತಕ್ಷೇತ್ರದೊಳಂಗಮೆಂಬುದು ನಾಡಲ್ಲಿ ಚಂಪಾನಗರಮೆಂಬುದು ಪೊಬಲದನಾಳ್ವೊನಧಿಗಮ ಸಮ್ಯಗ್‌ದೃಷ್ಟಿಶ್ರಾವಕಂ ಸಿಂಹರಥನೆಂಬೊನರಸಂ ಮತ್ತಿತ್ತ ಮಗಧೆಯೆಂಬುದು ನಾಡಲ್ಲಿ ಸಾಕೇತಮೆಂಬುದದನಾಳ್ವೊಂ ಶ್ರಾವಕಂ ಸುಮಂತನೆಂಬೊನರಸಂ ಮತ್ತಿತ್ತ ಮಂಗಳಾವತಿಯೆಂಬುದು ನಾಡಲ್ಲಿ ಇಳಾಪಟ್ಟಣಮೆಂಬುದು ಪೊಬಲದನಾಳ್ವೊನಧಿಗಮ ಸಮ್ಯಗ್ ದೃಷ್ಟಿ ಶ್ರಾವಕಂ ಜಿತಶತ್ರುವೆಂಬೊನರಸನಾತನರಸಿ ಇಳಾಮಹಾದೇವಿಯೆಂಬೊಳಾ ಅರಸನ ದಾದಿ ವಿನಯಮತಿಯೆಂಬೊಳಂತವರ್ಗಳಿಪ್ಪವಿಷಯ ಕಾಮ

ಸಿರಿದಿಣ್ಣ ಭಟಾರರ ಕಥೆಯನ್ನು ಹೇಳುವೆನು–[ಸಿರಿದಿಣ್ಣನೆಂಬ ಋಷಿಯು ಹಿಂದಿನ ಜನ್ಮದ ಶತ್ರುವಾದ ವ್ಯಂತರ ದೇವನಿಂದ ಮಾಯೆಯ ಸೃಷ್ಟಿಯಾದ ಕಠಿನವಾದ ಶೀತದಿಂದ ಕೂಡಿದ ಗಾಳಿ ಮಳೆಗಳಿಂದ ಸೇಚಿಸಲ್ಪಟ್ಟವನಾದರೂ ಶ್ರೇಷ್ಠವಾದ ದರ್ಶನ-ಜ್ಞಾನ-ಚಾರಿತ್ರಗಳ ಆರಾಧನೆಯನ್ನು ಮಾಡಿ ಮೋಕ್ಷ ಹೊಂದಿದನು]. ಅದು ಹೇಗೆಂದರೆ :–ಈ ಜಂಬೂ ದ್ವೀಪದ ಭರತ ಕ್ಷೇತ್ರದಲ್ಲಿ ಅಂಗ ಎಂಬ ನಾಡಿದೆ. ಅಲ್ಲಿ ಚಂಪಾನಗರವೆಂಬ ಪಟ್ಟಣವನ್ನು ಸಮ್ಯಕ್ ದೃಷ್ಟಿಯನ್ನು ಪಡೆದ ಜೈನಗೃಹಸ್ಥನಾದ ಸಿಂಹರಥನೆಂಬ ರಾಜನು ಆಳುತ್ತಿದ್ದನು. ಇನ್ನೊಂಡೆಡೆ ಮಗಧೆಯೆಂಬ ನಾಡಿನಲ್ಲಿ ಸಾಕೇತವೆಂಬ ಪಟ್ಟಣವಿದೆ. ಅದನ್ನು ಶ್ರಾವಕನಾದ ಸುಮಂತನೆಂಬ ರಾಜನು ಆಳುತ್ತಿದ್ದನು. ಇತ್ತ ಇನ್ನೊಂಡೆಡೆ ಮಂಗಳಾವತಿ ಎಂಬ ನಾಡಿನಲ್ಲಿ ಇಳಾ ಎಂಬ ಪಟ್ಟಣವಿದೆ. ಅದನ್ನು ಸಮ್ಯಗ್ ದೃಷ್ಟಿಯನ್ನು ಸಂಪಾದಿಸಿರತಕ್ಕ ಶ್ರಾವಕನಾದ ಜಿತಶತ್ರು ಎಂಬ ರಾಜನು ಆಳುತ್ತಿದ್ದನು. ಜಿತಶತ್ರುವಿನ ಹೆಂಡತಿ ಇಳಾ ಮಹಾದೇವಿ ಎಂಬವಳು. ಆ ಅರಸನಿಗೆ ವಿನಯಮತಿ ಎಂಬ ಒಬ್ಬಳು ದಾದಿ ಇದ್ದಳು. ಅಂತು ಅವರೆಲ್ಲರೂ ತಮ್ಮ ಇಷ್ಟ ವಿಷಯಸುಖ ಸುಖಗಳನ್ನು ಅನುಭವಿಸುತ್ತ

ಭೋಗಂಗಳನನುಭವಿಸುತ್ತಂ ಕಾಲಂ ಸಲೆ ಫಾಲ್ಗುನ ನಂದೀಶ್ವರಂ ಬಂದೊಡೆ ಮೂವರುಂ ಮಂಡಲಿಕರುಂ ತಂತಮ್ಮ ಪೊಳಲ್ಗಳೊಳೆಂಟು ದಿವಸಮರ್ಹದ್ಭಟ್ಟಾರಕರ್ಗೆ ಮಹಾಮಹಿಮೆಗಳಂ ಮಾಡಲ್ ತೊಡಗಿದರಿತ್ತ ಜಿತಶತ್ರುವುಂ ತನ್ನ ಪೊಳಲೊಳೆಂಟು ದಿವಸಂ ಜಿನಮಹಾ ಮಹಿಮೆಯುಂ ಮಾಡಲ್ ತೊಡಗಿದನಾತನ ದಾದಿ ವಿನಯಮತಿಯೆಂಬೊಳ್ ಗುಜ್ಜೆ ವಿರಳದಂತೆ ಆದ ಮಾನುಂ ವಿರೂಪೆ ಪೇಸೆಪಡುವಳ್ ನೋಡಿದ ಜನಕ್ಕೆ ಭಯಮಂ ಪಡೆವೊಳ್ ನಾಣೆಸೆಪಡು ವೊಳಂತಪ್ಪಾಕೆ ಅರಸನೊಡನೆ ಜಿನಮಹಾಮಹಿಮೆಯುಂ ನೋಡಲ್ ಪೋಪಾಗಳರಸನೆಂದೊ ನಬ್ಬಾ ನೀವುಂ ಮಹಿಮೆಗೆ ಬರಲ್ವೇಡ ನಿಮ್ಮಂ ಕಂಡು ಮಹಿಮೆಗೆ ವಂದ ನೆರವಿಯುಮಂಜುಗುಂ ಪೇಸುಗುಮಮಂಗಳಮೆಂಗುಮದಱಿಂ ನೀವುಂ ಮನೆಯೊಳಿರಿಮೆಂದಿರಿಸಿ ತಾನುಂ ಸಹಸ್ರ ಕೂಟಮೆಂಬ ಚೈತ್ಯಾಲಯಕ್ಕೆ ಮಹಾಮಹಿಮೆಯುಂ ಮಾಡಲ್ ಪೋದನ್ ಇತ್ತ ದಾದಿಯುಂ ಮಗನ ಮಾಡುವ ಮಹಾಮಹಿಮೆಯುಂ ನೋಡಲ್ ಪೆತ್ತೆನಿಲ್ಲೆಂದುಬ್ಬೆಗಂ ಬಟ್ಟು ತನ್ನಂ ತಾಂ ಪಳಿದು ನಂದೀಶ್ವರದೆಂಟು ದಿವಸಮಭಿಷೇಕಮುಮರ್ಚನೆಯುಮುಪೋಷವಾಸಮುಮಂ ಮಾಡಿ ದೇವರಂ ಬಂದಿಸುತ್ತಂ ಪೂಜಿಸುತ್ತಿರ್ದಳಿತ್ತರಸನುಮೆಂಟು ದಿವಸಂ ಮಹಾಮಹಿಮೆಯ

ಇದ್ದರು. ಹೀಗೆಯೇ ಕಾಲ ಕಳೆಯಿತು. ಒಮ್ಮೆ ಫಾಲ್ಗುಣ ಮಾಸದ ನಂದೀಶ್ವರ ಹಬ್ಬ ಬಂತು. ಆಗ ಮೂವರು ಮಾಂಡಲಿಕ ರಾಜರೂ ತಮ್ಮ ತಮ್ಮ ಪಟ್ಟಣಗಳಲ್ಲಿ ಎಂಟು ದಿವಸವೂ ಜೈನ ತೀರ್ಥಂಕರರಿಗೆ ಮಹತ್ತಾದ ಉತ್ಸವಗಳನ್ನು ಮಾಡತೊಡಗಿದರು. ಇತ್ತ ಜಿತಶತ್ರುವೂ ತನ್ನ ಪಟ್ಟಣದಲ್ಲಿ ಎಂಟು ದಿವಸವೂ ಜಿನ ಮಹೋತ್ಸವಗಳನ್ನು ಮಾಡಲು ಉಪಕ್ರಮಿಸಿದನು. ಅವನ ದಾದಿಯಾದ ವಿನಯಮತಿಯೆಂಬವಳು, ಕುಬ್ಜೆಯೂ ವಿರಳವಾದ ಹಲ್ಲುಗಳುಳ್ಳವಳೂ ಅತಿಶಯವಾಗಿ ಕೆಟ್ಟ ರೂಪಿನವಳೂ ಆಗಿ ಇತರರಿಂದ ಹೇಸಲ್ಪಡುವವಳಾಗಿದ್ದಳು. ನೋಡಿದ ಜನರಿಗೆ ಹೆದರಿಕೆಯುಂಟುಮಾಡುವ ವಳಾಗಿದ್ದಳು, ನಾಚಿಕೆಯುಂಟು ಮಾಡುವವಳಾಗಿದ್ದಳು. ಅಂತಹ ಆಕೆ ಅರಸನೊಡನೆ ಜಿನೇಂದ್ರನ ಮಹೋತ್ಸವವನ್ನು ನೋಡಲು ಹೋಗುತ್ತಿರುವಾಗ ಅರಸನು ಅವಳೊಡನೆ ಹೀಗೆಂದನು-"ಅಮ್ಮಾ, ನೀವು ಉತ್ಸವಕ್ಕೆ ಬರುವುದು ಬೇಡ. ಉತ್ಸವಕ್ಕೆ ಬಂದ ಜನ ಸಂದಣಿ ನಿಮ್ಮನ್ನು ಕಂಡು ಹೆದರೀತು, ಹೇಸಿಗೆ ಪಟ್ಟೀತು, ಅಶುಭವೆಂದು ಹೇಳೀತು. ಆದುದರಿಂದ ನೀವು ಮನೆಯೊಳಗೆ ಇದ್ದು ಬಿಡಿ". ಹೀಗೆ ಹೇಳಿ ಅವಳನ್ನು ಮನೆಯಲ್ಲೇ ನಿಲ್ಲಿಸಿ ರಾಜನು ಮಹಾ ಉತ್ಸವವನ್ನು ನೆರವೇರಿಸುವುದಕ್ಕಾಗಿ ಸಹಸ್ರ ಕೂಟವೆಂಬ ಚೈತ್ಯಾಲಯಕ್ಕೆ (ಜಿನಾಲಯಕ್ಕೆ) ತೆರಳಿದನು. ಇತ್ತ ದಾದಿಯು ತನ್ನ ಮಗನು ಮಾಡುವ ಮಹೋತ್ಸವವನ್ನು ನೋಡಲಾರದೆ ಹೋದೆನೆಂದು ತನ್ನನ್ನು ತಾನೇ ನಿಂದಿಸಿ ದಳು. ನಂದೀಶ್ವರ ಹಬ್ಬದ ಎಂಟು ದಿವಸವೂ ಅಭಿಷೇಕ, ಅರ್ಚನೆ, ಎಂಟು ದಿನಗಳ ಉಪವಾಸ–ಇವನ್ನೆಲ್ಲ ಮಾಡಿ, ದೇವರಿಗೆ ವಂದನೆ ಸಲ್ಲಿಸುತ್ತ, ಪೂಜಿಸುತ್ತ ಇದ್ದಳು. ಇತ್ತ ರಾಜನು ಎಂಟು ದಿನವೂ ಮಹಾ ಉತ್ಸವದ ಅಭಿಷೇಕವನ್ನು ಮಾಡಿ ಮುಗಿಸಿದ

ಭಿಷೇಕಮುಮಂ ಮಾಡಿ ಸಮೆಯಿಸಿದ ಬೞಿಕ್ಕೆ ದಾದಿಗೆ ಬೞಿಯಟ್ಟಿವರಿಸಿ ಇಂತೆಂದನಬ್ಬಾ ನೀಮಿಂತೇಕೆ ಕರಂ ಬಡಪಟ್ಟಿರ್ದಿರೆಂದೊಡೆ ದಾದಿಯಿಂತೆಂದಳ್ ಮಗನೆ ಎಂಟುದಿವಸಮುಪವಾಸಂ ಗೆಯ್ದು ಮನೆಯೊಳ್ ದೇವರ್ಗ್ಗಭಿಷೇಕಮುಂ ಪೂಜೆಯುಮಂ ಮಾಡಿಸುತ್ತಿರ್ದೆನೆಂದೊಡೆ ಅದಂ ಕೇಳ್ದಾದಮಾನುಮರಸನೊಸೆದು ಬಡವಾದುದುಮಂ ಕಂಡು ಕರುಣಿಸಿ ಅಬ್ಬಾ ನಿಮಗೊಸೆದೆಂ ವರಮಂ ಬೇಡಿಕೊಳ್ಳಿಮೆಂದೊಡಾಕೆಯಿಂತೆಂದಳ್ ಮಗನೆ ನೀನೆನಗೊಸೆದೆಯಪ್ಪೊಡೆನಗೆಂದು ಮತ್ತ ಮೆಂಟುದಿವಸಂ ದೇವರ್ಗ್ಗೆ ಮಹಾಮಹಿಮೆಯುಂ ಮಾಡೆಂದು ಪೇೞ್ದೊಡಂತೆಗೆಯ್ವೆನೆಂದರಸಂ ದಾದಿಕಾರಣಮಾಗಿ ಮತ್ತಮೆಂಟು ದಿವಸಂ ಮಹಾಮಹಿಮೆಯುಂ ಮಾಡಲ್ ತೊಡಂಗಿದೊಡೆನ್ನ ಮಹಾಮಹಿಮೆಯೊಳೆಂತುಣ್ಬೆನೆಂದು ಪಾರಿಸದೆ ಮತ್ತಮುಪ್ಪೋಪವಾಸಂಗೆಯ್ದು ಪಾರಣೆಯ ದಿವಸದಿಂದಾಕೆಯ ಶ್ರಮಮುಮಂ ಸೇದೆಯುಮಂ ಹಿಮವಂತ ಪರ್ವತದ ಪದ್ಮೆಯೆಂಬ ಕೊಳ ದೊಳ್ ವಸಿಯಿಸಿರ್ಪ ಶ್ರೀಯಾದೇವತೆ ಕಂಡಱಿದು ತನ್ನ ಪರಿವಾರ ಸಹಿತಂ ವಿಮಾನಂಗಳ ನೇಱಿ ಮಹಾವಿಭೂತಿಯಿಂ ಬಂದು ಸ್ವರ್ಣಪೀಠದೊಳ್ ದಾದಿಯನಿರಿಸಿ ಸುಗಂಧೋ ದಕಗಳಿಂ ತೀವಿದ ಸುವರ್ಣಕಲಶಗಳಿಂದಮಭಿಷೇಕಂಗೆಯ್ದು ನಮೇರು ಮಂದಾರ

ಮೇಲೆ ದಾದಿಗೆ ಹೇಳಿ ಕಳುಹಿಸಿ, ಆಕೆಯನ್ನು ಬರಮಾಡಿ ಹೀಗೆಂದನು–"ನೀವು ಹೀಗೆ ಏಕೆ ಬಹಳ ಬಡವಾಗಿದ್ದೀರಿ ?" ಆಗ ಅದಕ್ಕೆ ದಾದಿಯು ರಾಜನೊಡನೆ–"ಮಗನೇ, ನಾನು ಎಂಟು ದಿವಸ ಉಪವಾಸ ಮಾಡಿ, ಮನೆಯಲ್ಲಿಯೆ ದೇವರಿಗೆ ಅಭಿಷೇಕವನ್ನೂ ಪೂಜೆಯನ್ನೂ ಮಾಡಿಸುತ್ತ ಇದ್ದೆನು" ಎಂದಳು. ರಾಜನು ಅದನ್ನು ಕೇಳಿ ಅತಿಶಯ ವಾಗಿ ಪ್ರೀತಿ ತಾಳಿದನು. ಆಕೆ ಬಡಕಲಾದುದನ್ನು ಕಂಡು ಕರುಣೆಗೊಂಡು–"ಅಮ್ಮಾ, ನಾನು ನಿನಗೆ ಪ್ರೀತಿಗೊಂಡೆನು (ಮೆಚ್ಚಿದೆನು). ಇಷ್ಟಾರ್ಥವನ್ನು ಬೇಡಿಕೊಳ್ಳಿ" ಎಂದನು. ಆಗ ಆಕೆ ರಾಜನೊಡನೆ–"ಮಗನೆ, ನೀನು ನನಗೆ ಮೆಚ್ಚಿದೆಯಾದರೆ, ನನಗಾಗಿಯೇ ಇನ್ನು ಎಂಟು ದಿನಸ ದೇವರಿಗೆ ಮಹೋತ್ಸವವನ್ನು ಮಾಡು" ಎಂದು ಹೇಳಿದಳು. "ಹಾಗೆಯೇ ಮಾಡುವೆನು" ಎಂದು ರಾಜನು ಹೇಳಿ ಆ ದಾದಿಯ ಕಾರಣ ದಿಂದಲೇ ಮತ್ತೆ ಎಂಟು ದಿನಸ ಮಹೋತ್ಸವವನ್ನು ಆಚರಿಸಲು ತೊಡಗಿದನು. ವಿನಯ ಮತಿ ದಾದಿಯು ನನ್ನ ಪರವಾಗಿರುವ ಮಹೋತ್ಸವದಲ್ಲಿ ನಾನು ಹೇಗೆ ಊಟ ಮಾಡು ವೆನು ? ಎಂದು ಉಪವಾಸಾಂತ್ಯದ ಪಾರಣೆಯನ್ನು ಆಚರಿಸಲಿಲ್ಲ ; ಮತ್ತೂ ಎಂಟು ದಿನಸ ಉಪವಾಸ ಮಾಡಿದಳು. ಪಾರಣೆಯ ದಿನಸ ಅವಳ ಶ್ರಮವನ್ನೂ ಆಯಾಸವನ್ನೂ ಹಿಮಾಲಯ ಪರ್ವತದ ಪದ್ಮ ಎಂಬ ಕೊಳದಲ್ಲಿ ವಾಸಿಸತಕ್ಕ ಶ್ರೀಯಾ ದೇವತೆ ಕಂಡು, ತಿಳಿದುಕೊಂಡಳು. ಆಕೆ ತನ್ನ ಪರಿವಾರದವರನ್ನು ಕೂಡಿಕೊಂಡು ವಿಮಾನಗಳನ್ನು ಹತ್ತಿ ಬಹಳ ವೈಭವದಿಂದ ಬಂದು ದಾದಿಯನ್ನು ಚಿನ್ನದ ಆಸನದಲ್ಲಿ ಕುಳ್ಳಿರಿಸಿ ಸುವಾಸನೆಯುಳ್ಳ ನೀರಿನಿಂದ ತುಂಬಿದ ಚಿನ್ನದ ಕಲಶಗಳಿಂದ ಅಭಿಷೇಕ ಮಾಡಿ ಸುರಪುನ್ನಾಗ, ಮಂದಾರ, ಸಂತಾನಕ, ಪಾರಿಯಾತ್ರಕ ಎಂಬ ದಿವ್ಯ ಪುಷ್ಪಗಳನ್ನು ಮಳೆ

ಸಂತಾನಕ ಪಾರಿಯಾತ್ರಕಮೆಂಬ ಪೂಗಳಂ ಸುರಿದು ಕಮ್ಮಿತಪ್ಪ ತಂಬೆಲರ್
ವೀಸಿ ದೇವದುಂದುಭಿಗಳಂ ಬಾಜಿಸಿ ಶ್ರೀಯಾ ದೇವತೆ ತನ್ನಾವಾಸಕ್ಕೆ ಪೋದಳ್
ಇತ್ತ ದಾದಿಯುಂ ಶ್ರೀಯಾದೇವತೆಯ ವಿಭೂತಿಯಂ ಕಂಡು ನಿದಾನಂಗೆಯ್ದು ಕೆಲವು ದಿವಸದಿಂ
ಕಾಲಂಗೆಯ್ದೀ ಜಂಬೂದ್ವೀಪದ ಹಿಮವಂತ ಪರ್ವತದ ಪದ್ಮೆಯೆಂಬ ಕೊಳದೊಳ್ ಶ್ರೀಯಾ
ದೇವತೆಯಾಗಿ ಪುಟ್ಟಿ ಇಳಾಪಟ್ಟಣಕ್ಕೆ ಬಂದಾ ಪೊೞಲ ಜನಂಗಳ್ಗೆಲ್ಲಮಿರುಳ್ ಕನಸಿನೊಳಾಂ
ಶ್ರೀಯಾದೇವತೆಯೆಂ ನಿಮ್ಮ ಪೊೞಲ್ಗೆವಂದೆನೆನಗೆ ಶ್ರೀವಿಹಾರಮಂ ಮಾಡಿ ಎನ್ನ ಪ್ರತಿಮೆಯ
ನಿಟ್ಟು ಪೂಜಿಸುತ್ತುಮೋಲಗಿಸುತ್ತುಮಿರಿಮಾನುಂ ನಿಮಗೆ ಬೇಡಿದ ವರಮನೀವೆನೆಂದು ಕನಸಿ
ನೊಳ್ ತೋಱಿದೊಡೆ ಪೊೞಲ ಜನಮೆಲ್ಲಂ ನೆರೆದು ಶ್ರೀವಿಹಾರಮಂ ಮಾಡಿ ಶ್ರೀಯಾ
ದೇವತೆಯ ಪ್ರತಿಮೆಯುಂ ಸ್ಥಾಪಿಸಿ ಮಹಿಮೆಯುಂ ಮಾಡುತ್ತಂ ಪೂಜಿಸುತ್ತಮೋಲಗಿಸುತ್ತ
ಮಿರ್ಪುದಂ ಕಂಡಿಳಾಮಹಾದೇವಿ ಅಪುತ್ರಿಕೆ ಮಕ್ಕಳಂ ಬೇಡಿ ಪನ್ನೆರಡು ವರುಷಂ ಬರೆಗಂ
ನಿಚ್ಚಲುಂ ಶ್ರೀವಿಹಾರಕ್ಕೆ ಪೋಗಿ ಶ್ರೀಯಾದೇವತೆಯನರ್ಚಿಸುತ್ತಂ ಪೂಜಿಸುತ್ತಂ ಮಹಾ
ಮಹಿಮೆಯುಂ ಮಾಡುತ್ತಂ ಆಡುತ್ತಂ ಪಾಡುತ್ತಮೋಲಗಿಸುತ್ತಮಿರೆಯುದಂ ಕಂಡಱಿದು

ಗರೆದಳು. ಪರಿಮಳಯುಕ್ತವಾದ ತಂಗಾಳಿಯನ್ನು ಬೀಸಿದಳು. ದೇವಲೋಕದ ಭೇರಿ
ಗಳನ್ನು ಬಾಜಿಸಿ (ಬಜಾವಣೆ ಮಾಡಿ) ಶ್ರೀಯಾದೇವತೆ ತನ್ನ ವಾಸಸ್ಥಾನಕ್ಕೆ ತೆರಳಿದಳು.
ಇತ್ತ ದಾದಿ (ವಿನಯಮತಿ) ಶ್ರೀಯಾದೇವತೆಯ ವೈಭವವನ್ನು ಕಂಡು ನಿಶ್ಚಯವನ್ನು
ಮಾಡಿ ಕೆಲವು ದಿವಸಗಳಲ್ಲಿ ಕಾಲವಾದಳು. ಆಕೆ ಈ ಜಂಬೂದ್ವೀಪದ ಹಿಮಾಲಯ
ಪರ್ವತದ ಪದ್ಮೆ ಎಂಬ ಕೊಳದಲ್ಲಿ ಶ್ರೀಯಾದೇವತೆಯಾಗಿ ಹುಟ್ಟಿ, ಇಳಾ ಪಟ್ಟಣಕ್ಕೆ
ಬಂದು ಆ ಪಟ್ಟಣದ ಜನರಿಗೆಲ್ಲ ರಾತ್ರಿಯಲ್ಲಿ ಕನಸಿನಲ್ಲಿ ಕಾಣಿಸಿಕೊಂಡು ಹೀಗೆಂದಳು–
"ನಾನು ಶ್ರೀಯಾದೇವತೆಯಾಗಿರುವೆನು ನಿಮ್ಮ ಪಟ್ಟಣಕ್ಕೆ ಬಂದಿರುವೆನು. ನನಗೆ
ಶ್ರೀವಿಹಾರ ಎಂಬ ದೇವಾಲಯವನ್ನು ಮಾಡಿ. ನನ್ನ ಪ್ರತಿಮೆಯನ್ನು ಇಟ್ಟುಕೊಂಡು
ಪೂಜಿಸುತ್ತ ಸೇವೆ ಮಾಡುತ್ತ ನೀವಿರಬೇಕು. ನಾನು ನಿಮಗೆ ಬೇಡಿದ ಇಷ್ಟಾರ್ಥವನ್ನು
ಕೊಡುವೆನು" ಈ ರೀತಿಯಾಗಿ ಅವಳು ಕನಸಿನಲ್ಲಿ ಕಾಣಿಸಿದಳು. ಇದರಿಂದ
ಪಟ್ಟಣದ ಜನರೆಲ್ಲರೂ ಒಟ್ಟಾಗಿ ಶ್ರೀವಿಹಾರವೆಂಬ ದೇವಾಲಯವನ್ನು ನಿರ್ಮಿಸಿ
ದರು. ಅಲ್ಲಿ ಶ್ರೀಯಾದೇವತೆಯ ಪ್ರತಿಮೆಯನ್ನು ಪ್ರತಿಷ್ಠೆಮಾಡಿ, ಉತ್ಸವವನ್ನು
ಮಾಡುತ್ತ ಪೂಜಿಸುತ್ತ ಸೇವೆಗಳನ್ನು ಜರುಗಿಸುತ್ತ ಇದ್ದರು. ಮಕ್ಕಳಿಲ್ಲದವಳಾದ ಇಳಾ
ಮಹಾದೇವಿ ಇದನ್ನು ಕಂಡು ತನಗೆ ಮಕ್ಕಳಾಗಲಿ ಎಂದು ಪ್ರಾರ್ಥಿಸುತ್ತ, ಹನ್ನೆರಡು
ವರ್ಷಗಳವರೆಗೆ ನಿತ್ಯವೂ ಶ್ರೀವಿಹಾರಕ್ಕೆ ಹೋಗಿ ಶ್ರೀಯಾ ದೇವತೆಯನ್ನು
ಅರ್ಚನೆ ಮಾಡುತ್ತ ಪೂಜಿಸುತ್ತ ದೊಡ್ಡ ಉತ್ಸವವನ್ನು ಮಾಡುತ್ತ ಆಡುತ್ತ
ಹಾಡುತ್ತ ಸೇವೆಸಲ್ಲಿಸುತ್ತಿದ್ದಳು. ಶ್ರೀಯಾದೇವತೆ ಅದನ್ನು ನೋಡಿ ತಿಳಿದು ಪೂರ್ವ-

ಶ್ರೀಯಾದೇವತೆ ಪೂರ್ವವಿದೇಹಕ್ಕೆ ಪೋಗಿ ಸ್ವಯಂಪ್ರಭರೆಂಬ ತೀರ್ಥಕರ ಪರಮದೇವರಂ ಕಂಡೆಱಗಿ ಪೊಡೆಮಟ್ಟಿಂತೆಂದು ಬೆಸಗೊಂಡಳ್ ಭಟಾರಾ ಎನ್ನ ಪೊಟಲೊಳಿರ್ಪ ಇಳಾಮಹಾ ದೇವಿಗೆ ಮಕ್ಕಳೇನಕ್ಕುವೊ ಎಂದು ಬೆಸಗೊಂಡೊಡೆ ಭಟಾರರಿಂತೆಂದರ್ ಸ್ವರ್ಗದಿಂದೆ ಬಟ್ಚ್ಚಿ ಬಂದಿಲ್ಲಿ ಒರ್ವ ದೇವಂ ಇಳಾಮಹಾದೇವಿಗೆ ಮಗನಾಗಿ ಪುಟ್ಟುಗುಮೆಂದೊಡದಂ ಕೇಳ್ದು ಭಟ್ಟಾರರ್ಗ್ಗೆಱಗಿ ಪೊಡೆವಟ್ಟು ಇಳಾಪಟ್ಟಣಕ್ಕೆ ಪೋಗಿ ಇಳಾಮಹಾದೇವಿಗೆ ಕನಸಿನೊಳಿಂತೆಂದು ಪೇಟ್ದಳಿಳಾಮಹಾದೇವಿ ನಿನಗೆನ್ನ ಪ್ರಸಾದದೆ ಸೌಧರ್ಮಕಲ್ಪದೊಳ್ ಮೇಘಮಾಲಮೆಂಬ ವಿಮಾನದಿಂ ಬಟ್ಚ್ಚಿ ವರ್ಧಮಾನನೆಂಬ ದೇವಂ ಬಂದು ನಿನಗೆ ಮಗನಾಗಿ ಪುಟ್ಟುಗುಮೆಂದು ಶ್ರೀಯಾದೇವತೆ ಪೇಟ್ದೊಡಿಳಾ ಮಹಾದೇವಿಯಾದಮಾನುಂ ಸಂತಸಂಬಟ್ಟಿರ್ದು ಕೆಲವು ದಿವಸದಿಂ ಗರ್ಭಮಾಗಿ ನವಮಾಸಂ ನೆಱೆದು ಮಗನಂ ಪೆತ್ತೊಡೆ ಶ್ರೀಯಾದೇವತೆ ಮಗನಂ ಕೊಟ್ಟಳೆಂದು ಕೂಸಿಂಗೆ ತಾಯುಂ ತಂದೆಯುಂ ನಂಟರುಮೆಲ್ಲಂ ನೆರೆದು ಸಿರಿದಿಣ್ಣನೆಂದು ಪೆಸರ ನಿಟ್ಟರ್ ಆತನುಂ ಶುಕ್ಲಪಕ್ಷದ ಚಂದ್ರನಂತೆ ಕ್ರಮಕ್ರಮದಿಂ ಬಳೆದು ನವಯೌವನನುಂ ಸರ್ವ ಕಳಾ ಕುಶಳನುಮಾಗಿರ್ಪನ್ನೆಗಮಿತ್ತ ಸಾಕೇತ ಪುರಾಧಿಪತಿಯಪ್ಪ ಸುಮಂತನೆಂಬರಸನ ಮಗಳ್ ಸುಮತಿಯೆಂಬೊಳಾಕೆಯ ಸ್ವಯಂವರಕ್ಕರಸುಮಕ್ಕಳೆಲ್ಲಂ ನೆರೆದಿರ್ದಲ್ಲಿಗೆ ಸಿರಿದಿಣ್ಣಂಗಂ ಬಟಿ

ವಿದೇಹ ರಾಜ್ಯಕ್ಕೆ ಹೋಗಿ ಸ್ವಯಂಪ್ರಭನೆಂಬ ತೀರ್ಥಂಕರ ದೇವನನ್ನು ಕಂಡು ವಂದಿಸಿ ಸಾಷ್ಟಾಂಗ ಪ್ರಣಾಮ ಮಾಡಿ ಹೀಗೆ ಕೇಳಿದಳು–"ಪೂಜ್ಯರೇ, ನನ್ನ ಪಟ್ಟಣದಲ್ಲಿರುವ ಇಳಾ ಮಹಾದೇವಿಗೆ ಮಕ್ಕಳಾಗುವರೇ ಏನು ?" ಹೀಗೆ ಕೇಳಿದಾಗ ಋಷಿಗಳು—"ಒಬ್ಬ ದೇವನು ಸ್ವರ್ಗದಿಂದ ಜಾರಿ ಬಂದು ಇಲ್ಲಿ ಇಳಾಮಹಾದೇವಿಗೆ ಮಗನಾಗಿ ಜನಿಸುವನು"– ಎಂದು ಹೇಳಿದರು. ಅದನ್ನು ಕೇಳಿ ಋಷಿಗಳಿಗೆ ನಮಿಸಿ ಅಡ್ಡಬಿದ್ದು ಶ್ರೀಯಾದೇವತೆ ಇಳಾ ಪಟ್ಟಣಕ್ಕೆ ಹೋದಳು. ಇಳಾಮಹಾದೇವಿಗೆ ಕನಸಿನಲ್ಲಿ ಕಾಣಿಸಿ ಹೀಗೆಂದಳು– "ಎಲೈ ಇಳಾಮಹಾದೇವಿ, ನನ್ನ ಅನುಗ್ರಹದಿಂದ ವರ್ಧಮಾನನೆಂಬ ದೇವನು ಸೌಧರ್ಮ ಎಂಬ ಸ್ವರ್ಗದಲ್ಲಿ ಮೇಘಮಾಲ ಎಂಬ ವಿಮಾನದಿಂದಿಳಿದು ಬಂದು ನಿನಗೆ ಮಗನಾಗಿ ಜನಿಸುವನು"–ಹೀಗೆಂದು ಶ್ರೀಯಾದೇವತೆ ಹೇಳಿದಾಗ ಇಳಾಮಹಾದೇವಿ ಅತಿಶಯವಾದ ಸಂತೋಷವನ್ನು ತಾಳಿದಳು. ಹೀಗೆಯೇ ಇದ್ದು ಕೆಲವು ದಿನಗಳನಂತರ ಅವಳಿಗೆ ಗರ್ಭ ವುಂಟಾಯಿತು. ಒಂಬತ್ತು ತಿಂಗಳು ತುಂಬಿ ಗಂಡುಮಗುವನ್ನು ಹೆತ್ತಳು ಶ್ರೀಯಾದೇವತೆ ಮಗನನ್ನು ಕೊಟ್ಟಳೆಂದು ಆ ಮಗುವಿಗೆ ತಾಯಿ, ತಂದೆ, ನಂಟರು ಎಲ್ಲರೂ ಸೇರಿಕೊಂಡು ಸಿರಿದಿಣ್ಣ ಎಂದು ಹೆಸರಿಟ್ಟರು. ಸಿರಿದಿಣ್ಣನು ಶುಕ್ಲಪಕ್ಷದ ಚಂದ್ರನ ಹಾಗೆ ಅನುಕ್ರಮವಾಗಿ ಬಳೆದು ಹೊಸ ಜವ್ವನಿಗನೂ ಎಲ್ಲಾ ಕಲೆಗಳಲ್ಲಿ ಪರಿಣತನೂ ಆಗಿದ್ದನು. ಹೀಗಿರಲು ಇತ್ತ ಸಾಕೇತವೆಂಬ ಪಟ್ಟಣದ ಒಡೆಯನಾದ ಸುಮಂತನೆಂಬ ರಾಜನಿಗೆ ಸುಮತಿ ಎಂಬ ಮಗಳಿದ್ದಳು. ಆಕೆಯ ಸ್ವಯಂವರಕ್ಕೆ ರಾಜಕುಮಾರರೆಲ್ಲ ಬಂದು ಸೇರಿದ್ದರು. ಅಲ್ಲಿಗೆ ಸಿರಿದಿಣ್ಣನನ್ನೂ ಕರೆಕಳುಹಿಸಿ ಬರಮಾಡಿದ್ದರು. ಸ್ವಯಂ

ಪುಟ್ಟಿ ಬರಿಸಿದೊಡೆ ಸ್ವಯಂಬರದೊಳ್ ಸುಮತಿಯೆಲ್ಲರುಂ ನೋಡಿಯಾರುಮಂ ಮೆಚ್ಚದೆ ಸಿರಿದಿಣ್ಣಂಗೆ ಮಾಲೆಸೂಡಿದೊಡೆ ಮದುವೆಯಾಗಿ ಕೆಲವು ದಿವಸಮಲ್ಲಿರ್ದು ಮಾವನವರಂ ಬೆಸಗೊಂಡಿಳಾ ಪಟ್ಟಣಕ್ಕೆ ಪೋಪೆಮೆಂದೊಡಾತಂ ತನ್ನ ಮಗಳಪ್ಪ ಸುಮತಿಗೆ ಬಳಿವಳಿ ಗೊಟ್ಟು ಮಗಳೊಡನೆ ವಾಚಾಳನಪ್ಪ ಗಿಳಿಯುಮನಟ್ಟಿದೊಡವರ್ಗಳುಂ ಕತಿಪಯ ದಿವಸಂಗ ಳಿಂದಿಳಾಪಟ್ಟಣಕ್ಕೆ ಪೋಗಿ ಸುಖದಿಂದಿರೆ ಮತ್ತೊಂದು ದಿವಸಂ ಗಿಳಿಯುಂ ಸಾಕ್ಷಿಮಾಡಿ ಇರ್ವರುಂ ಚದುರಂಗ ಮಾಡುತ್ತಿರೆ ಅರಸಿಯರಸನಂ ಗೆಲ್ದೊಡೆ ಗಿಳಿ ನೆಲದೊಳೆರಡು ಬರೆಯುಂ ಬರೆಗುಮರಸನರಸಿಯುಂ ಗೆಲ್ದೊಡೆ ಒಂದೆ ಬರೆಯುಂ ಬರೆಗುಮಿಂತು ಪಿರಿದುಂ ಬೇಗಮಾಡಿ ಅರಸ ನರಸಿಯಂ ಗೆಲ್ದೊಡೆರಡು ಬರೆಯುಂ ತೆಗೆದುದನರಸಂ ಕಂಡು ಕಡುಮುಳಿದದಱ ಗೋಣಂ ಮುಱಿದೊಡಾ ಗಿಳಿಯುಂ ಸತ್ತು ಪೊೞಲ ಬಹಿರುದ್ಯಾನವನದೊಳ್ ವ್ಯಂತರದೇವನಾಗಿ ಪುಟ್ಟಿ ತಿಂತಿರ್ವರುಂ ಪಲಕಾಲಮಿಷ್ಟವಿಷಯ ಕಾಮಭೋಗಂಗಳನನುಭವಿಸುತ್ತಿರ್ಪನ್ನೆಗಂ ಮತ್ತೊಂದು ದಿವಸಂ ಸಪ್ತತಳಪ್ರಾಸಾದದ ಮೇಗಿರ್ವರುಂ ದಿಶಾವಳೋಕನಂ ಗೆಯ್ಯುತ್ತಿರ್ಪ ನ್ನೆಗಂ ಸಹಸ್ರಕೂಟಾಕಾರಮಪ್ಪುದೊಂದು ಮುಗಿಲಂ ಕಂಡಿಂತುಟೊಂದು ಚೈತ್ಯಾಲಯಮಂ

ವರದಲ್ಲಿ ಸುಮತಿ ಎಲ್ಲರನ್ನೂ ನೋಡಿ ಯಾರೊಬ್ಬರನ್ನೂ ಮೆಚ್ಚದೆ ಸಿರಿದಿಣ್ಣನಿಗೆ ವರಣ ಮಾಲಿಕೆಯನ್ನು ತೊಡಿಸಿದಳು. ಸಿರಿದಿಣ್ಣನು ಅವನ್ನು ವರಿಸಿ ಕೆಲವು ದಿನ ಅಲ್ಲೆ ಇದ್ದು, ಮಾವನವರನ್ನು ಕೇಳಿ, ತಾನು ಇಳಾಪಟ್ಟಣಕ್ಕೆ ಹೋಗುವೆನು–ಎಂದನು. ಸುಮಂತನು ತನ್ನ ಮಗಳಾದ ಸುಮತಿಗೆ ಬಳುವಳಿಕೊಟ್ಟು, ಮಗಳೊಡನೆ ಒಳ್ಳೆ ಮಾತುಗಾರಿಕೆ ಬಲ ಒಂದು ಗಿಳಿಯನ್ನೂ ಕಳುಹಿಸಿದನು. ಅವರು ಕೆಲವು ದಿವಸಗಳಲ್ಲಿ ಇಳಾಪಟ್ಟಣಕ್ಕೆ ಹೋಗಿ ಅಲ್ಲಿ ಸುಖವಾಗಿದ್ದರು. ಹೀಗಿರುತ್ತ ಆ ಮೇಲೆ ಒಂದು ದಿನ ಇಬ್ಬರೂ ಗಿಳಿ ಯನ್ನು ಸಾಕ್ಷಿಯಾಗಿ ಮಾಡಿಕೊಂಡು ಚದುರಂಗವನ್ನು ಆಡುತ್ತಿದ್ದರು. ಆಗ ರಾಣಿಯು ರಾಜನನ್ನು ಗೆದ್ದರೆ, ಗಿಳಿ ನೆಲದಲ್ಲಿ ಎರಡು ಗೆರೆಯನ್ನು ಎಳೆಯುತ್ತಿತ್ತು. ರಾಜನು ರಾಣಿಯನ್ನು ಗೆದ್ದರೆ, ಒಂದೇ ಗೆರೆಯನ್ನು ಬರೆಯುತ್ತಿತ್ತು. ಹೀಗೆ ಬಹಳ ಹೊತ್ತಿನ ವರೆಗೆ ಆಡಿ ರಾಜನು ರಾಣಿಯನ್ನು ಗೆದ್ದಾಗ ಗಿಳಿ ಎರಡು ಗೆರೆಯನ್ನು ಬರೆದುಬಿಟ್ಟದ್ದಿತು. ಇದನ್ನು ಸಿರಿದಿಣ್ಣರಾಜನು ಕಂಡು ಅತ್ಯಂತ ಕೋಪಾವಿಷ್ಟನಾಗಿ ಅದರ ಕತ್ತನ್ನು ಮುರಿದನು. ಆ ಗಿಳಿ ಸತ್ತು ಆ ಪಟ್ಟಣದ ಹೊರಗಿನ ಉದ್ಯಾನದಲ್ಲಿ ವ್ಯಂತರ ದೇವನಾಗಿ ಹುಟ್ಟಿತು. ಹೀಗೆ ಇಬ್ಬರೂ ಹಲವು ಕಾಲ ತಮ್ಮ ಇಷ್ಟ ವಿಷಯದ ಕಾಮಸುಖ ಗಳನ್ನು ಅನುಭವಿಸುತ್ತ ಇದ್ದರು. ಆ ಮೇಲೆ ಒಂದು ದಿವಸ ಅವರಿಬ್ಬರೂ ಏಳು ಉಪ್ಪರಿಗೆಗಳುಳ್ಳ ಕಟ್ಟಡದ ಮೇಲೆ ಇದ್ದು ದಿಕ್ಕುಗಳನ್ನು ನೋಡುತ್ತಿರುವಾಗ ಸಾವಿರ ಶಿಖರದ ಆಕಾರವುಳ್ಳ ಒಂದು ಮೋಡವನ್ನು ಕಂಡು, ಸಿರಿದಿಣ್ಣನು "ಈ ರೀತಿಯಿರುವ ಒಂದು ಜಿನಾಲಯವನ್ನು ಮಾಡಿಸುವೆನು" ಎಂದು ಹೇಳಿಕೊಂಡು, ಚಿತ್ರದ ಹಲಗೆಯ ಮೇಲೆ ರೇಖಾಚಿತ್ರವನ್ನು ಬರೆದು, ಮತ್ತೆ ನೋಡುವ ಹೊತ್ತಿಗೆ ಅದು ಕರಗಿಹೋದು

ಮಾಡಿಸುವೆನೆಂದು ಪಲಗೆಯೊಳ್ ರೇಖೆಗೊಂಡು ಮತ್ತೆ ನೋಟ್ಪನ್ನೆಗಂ ಕರಗಿದುದಂ ಕಂಡದುವೆ ನಿರ್ವೇಗಕ್ಕೆ ಕಾರಣವಾಗಿ ತಾಯುಂ ತಂದೆಯುಂ ನಂಟರುಮಂ ಬಿಡಿಸಿ ನಿಶ್ಶಲ್ಯಂಗೆಯ್ದು ಬಾಹ್ಯಾಭ್ಯಂತರ ಪರಿಗ್ರಹಂಗಳಂ ತೊಱೆದು ವರಧರ್ಮ ಭಟ್ಟಾರರ ಪಕ್ಕದೆ ತಪಂಬಟ್ಟು ಪನ್ನೆರಡು ವರುಷಂ ಬರೆಗಂ ಗುರುಗಳನಗಲದಿರ್ದು ದ್ವಾದಶಾಂಗ ಚತುರ್ದಶ ಪೂರ್ವಮಪ್ಪಾಗಮಮೆಲ್ಲಮಂ ಕಲ್ತು ಬೞಿಕ್ಕೆ ಗುರುಗಳಂ ಬೆಸಗೊಂಡವರನುಮತದಿಂದೇಕವಿಹಾರಿಯಾಗಿ ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ ವಿಹಾರಿಸುತ್ತಂ ಮಾಘಮಾಸದಂದಿಳಾ ಪಟ್ಟಣಕ್ಕೆ ವಂದಾ ಪೊೞಲ ಬಹಿರುದ್ಯಾನವನದೊಳಿರ್ದು ರಾತ್ರಿ ಪ್ರತಿಮಾಯೋಗದೊಳ್ ನಿಂದರ್ ಅನ್ನೆಗಂ ಮುನ್ನವರ ಕೈಯೊಳ್ ಸತ್ತ ಗಿಳಿ ವ್ಯಂತರದೇವನಾಗಿ ಅಲ್ಲಿ ಪುಟ್ಟಿರ್ದುದು ಕಂಡೇನುಂ ಕಾರಣಮಿಲ್ಲೆನ್ನಂ ಕೊಂದನೆಂದು ಮುಳಿದಾದಮಾನುಂ ಘೋರಮಪ್ಪ ವಾತಮುಂ ಶೀತಮುಮಂ ವಿಗುರ್ವಿಸಿ ನೀರ್ಗಳಂ ಮೇಗೆ ಸುರಿದು ಬೀಸುತ್ತಮಿಂತು ನಾಲ್ಕು ಜಾವಮುಂ ಘೋರಾಕಾರವಾಗಿಯುಪಸರ್ಗಮಂ ಮಾಡೆ ಭಟಾರರುಂ ದೇವೋಪಸರ್ಗಮೆಂಬುದನಱಿದು

ದನ್ನು ಕಂಡನು. ಅದುವೇ ಅವನಿಗೆ ವೈರಾಗ್ಯಕ್ಕೆ ಕಾರಣವಾಯಿತು. ತಾಯಿ, ತಂದೆ, ನಂಟರನ್ನು ಅಗಲಿ, ಮಾಯಾಶಲ್ಯ, ಮಿಥ್ಯಾಶಲ್ಯ, ನಿದಾನಶಲ್ಯ ಎಂಬ ಮೂರುಬಗೆಯ ಶಲ್ಯಗಳನ್ನು ಬಿಟ್ಟು, ಬಾಹ್ಯ ಪರಿಗ್ರಹಗಳನ್ನೂ (ಭೂಮಿ, ಮನೆ, ಧನ, ಧಾನ್ಯ, ದ್ವಿಪದ, ಚತುಷ್ಪದಗಳು, ವಾಹನ, ಶಯ್ಯೆ, ಆಸನ, ಕ್ಷುದ್ರಲೋಹ ಪಾತ್ರೆ, ಮಡಕೆ–ಎಂಬ ಹತ್ತು) ಮಿಥ್ಯಾತ್ವ, ಕಾಮಾಭಿಲಾಷೆ, ದ್ವೇಷ, ಅಪಹಾಸ್ಯ ಮುಂತಾದ ಅಂತರಂಗ ಪರಿಗ್ರಹಗಳನ್ನೂ ತೊರೆದ ವರಧರ್ಮ ಋಷಿಗಳ ಬಳಿ ತಪಸ್ಸನ್ನು ಸ್ವೀಕರಿಸಿದನು. ಹನ್ನೆರಡು ವರ್ಷಗಳ ವರೆಗೂ ಗುರುಗಳೊಡನಿದ್ದು ಹನ್ನೆರಡು ಅಂಗಗಳಿಂದಲೂ ಹದಿನಾಲ್ಕು ಪೂರ್ವಗಳಿಂದಲೂ ಕೂಡಿದ ಶಾಸ್ತ್ರಗಳನ್ನೆಲ್ಲ ಕಲಿತು, ಆ ಮೇಲೆ ಗುರುಗಳನ್ನು ಕೇಳಿ ಒಪ್ಪಿಗೆ ಪಡೆದು ಸಿರಿದಿಣ್ಣ ಋಷಿಗಳು ಒಬ್ಬರೇ ಸಂಚರಿಸುತ್ತ ಗ್ರಾಮ, ನಗರ, ಖೇಡ, ಖರ್ವಡ, ಮಡಂಬ, ಪಟ್ಟಣ, ದ್ರೋಣಾಮುಖಗಳಲ್ಲಿ ಸಂಚರಿಸುತ್ತ ಮಾಘಮಾಸದಲ್ಲಿ ಇಳಾಪಟ್ಟಣಕ್ಕೆ ಬಂದರು. ಬಂದು, ಆ ಪಟ್ಟಣದ ಬಾಹ್ಯೋದ್ಯಾನದಲ್ಲಿದ್ದು ರಾತ್ರಿಯಲ್ಲಿ ಪ್ರತಿಮಾಯೋಗದಲ್ಲಿ ನಿಂತರು. ಅಷ್ಟರಲ್ಲಿ ಪೂರ್ವಜನ್ಮದಲ್ಲಿ ಅವರು ಕೊಂದ ಗಿಳಿ ವ್ಯಂತರ ದೇವತೆಯಾಗಿ ಅಲ್ಲಿ ಹುಟ್ಟಿದ್ದುದು ಅವನನ್ನು ಕಂಡಿತು. "ಏನೂ ಕಾರಣವಿಲ್ಲದೆ ನನ್ನನ್ನು ಕೊಂದಿದ್ದಾನೆ" ಎಂದು ಕೋಪಗೊಂಡು ಬಹಳ ಭಯಂಕರವಾದ ಗಾಳಿಯನ್ನೂ ಶೈತ್ಯವನ್ನೂ ಮಾಯೆಯಿಂದ ಸೃಷ್ಟಿಸಿತು. ಧಾರಾಕಾರವಾಗಿ ಮೇಲಿನಿಂದ ಮಳೆಯನ್ನು ಸುರಿಸುತ್ತ, ಗಾಳಿಬೀಸುತ್ತ ಹೀಗೆ ನಾಲ್ಕು ಜಾವ (ಅರ್ಧದಿನ) ಭಯಂಕರವಾದ ರೀತಿಯಲ್ಲಿ ಉಪಸರ್ಗ (ತಪಸ್ಸಿಗೆ ವಿಘ್ನ)ವನ್ನು ಮಾಡಿತು. ಆಗ ಸಿರಿದಿಣ್ಣ ಋಷಿಗಳು—ಇದು ದೇವೋಪ

ಗಾಹೆ॥ ಖಮ್ಮಾಮಿ ಸವ್ವಜೀವಾಣಂ ಸವ್ವೇಜೀವಾ ಖಮಂತು ಮೇ
ಮೆತ್ತೀ ಮೇ ಸವ್ವಭೂದೇಸು ವೇರಂ ಮಜ್ಝಣ ಕೇಣ ಚಿ

ಶ್ಲೋಕ॥ ಅಚ್ಛೇದ್ಯೋಽನಂತ ಸೌಖ್ಯೋಽಹಂ ವೇತ್ತ್ಯಾಽಪೂರ್ವೋ ನಿರಂಜನಃ
ಸರ್ವದುಃಖಾಕರಂ ದೇಹಂ ತ್ಯಜಾಮೇತತ್ ಪರಿಸ್ಫುಟಂ ॥

ಎಂದಿಂತು ಸಮತ್ವೀಭಾವನೆಯುಂ ಭಾವಿಸಿ ಶುಕ್ಲಧ್ಯಾನಮಂ ಜಾನಿಸಿ ಎಂಟು ಕರ್ಮಂಗಳಂ ಕಿಡಿಸಿ ಮೋಕ್ಷಕ್ಕೆವೋದರ್ ಮತ್ತಂ ಪೆಱರುಂ ರತ್ನತ್ರಯಂಗಳನಾರಾಧಿಸುವ ಭವ್ಯರ್ಕಳ್ ಸಿರಿದಿಣ್ಣ ಭಟ್ಟಾರರಂ ಮನದೊಳ್ ಬಗೆದು ದೇವೋಪಸರ್ಗ ಮನುಷ್ಯೋಪಸರ್ಗ ತಿರಿಕೋಪಸರ್ಗಮ ಚೇತನೋಪಸರ್ಗಮೆಂದಿಂತು ಚತುರ್ವಿಧಮಪ್ಪುಪಸರ್ಗಮುಮಂ ಪಸಿವುನೀರಟ್ಕೆ ಮೊದಲಾಗೊಡೆಯುವಿರ್ಪತ್ತೆರಡು ಪರೀಷಹಂಗಳಂ ಸೈರಿಸಿ ವ್ಯಾಧಿಗಳಿಂದಪ್ಪ ವೇದನೆಯುಂ ಸೈರಿಸಿ ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

ಸರ್ಗ ಎಂದು ತಿಳಿದರು. [ನಾನು ಎಲ್ಲ ಜೀವಗಳನ್ನೂ ಕ್ಷಮಿಸುತ್ತೇನೆ. ಎಲ್ಲ ಜೀವಗಳೂ ನನ್ನನ್ನು ಕ್ಷಮಿಸಲಿ. ಎಲ್ಲ ಪ್ರಾಣಿಗಳಲ್ಲಿಯೂ ನನಗೆ ಮೈತ್ರಿಯಿದೆ. ನನಗೆ ಎಲ್ಲಿಯೂ ದ್ವೇಷವಿಲ್ಲ.] [ನನ್ನನ್ನು ಕತ್ತರಿಸಲು ಸಾಧ್ಯವಿಲ್ಲ. ನಾನು ಕೊನೆಯಿಲ್ಲದ ಸುಖವುಳ್ಳವನು. ತಿಳಿದವನು, ಅನಾದಿ, ಕರ್ಮಲೇಪವಿಲ್ಲದವನು. ಎಲ್ಲ ದುಃಖಗಳಿಗೂ ಆಶ್ರಯವಾಗಿರುವ ಶರೀರವನ್ನು ತೊರೆಯುತ್ತೇನೆ–ಇದು ನಿಶ್ಚಯ.] ಈ ರೀತಿ ಸುಖ ದುಃಖ ಸಮಭಾವವನ್ನು ಭಾವಿಸಿ, ಶುಕ್ಲಧ್ಯಾನವನ್ನು ಮಾಡಿ ಎಂಟು ಕರ್ಮಗಳನ್ನು ನಾಶಮಾಡಿ, ಮೋಕ್ಷವನ್ನೆಯ್ದಿದರು. ರತ್ನತ್ರಯವನ್ನು ಆರಾಧನೆ ಮಾಡುವ ಬೇರೆ ಭವ್ಯರು ಕೂಡ, ಸಿರಿದಿಣ್ಣ ಋಷಿಗಳನ್ನು ಮನಸ್ಸಿನಲ್ಲಿ ಭಾವಿಸಿ ದೇವ–ಮಾನವ–ತಿರ್ಯಕ್ಕು–ಅಚೇತನ ಎಂಬ ನಾಲ್ಕು ಬಗೆಯವರಿಂದ ಒದಗುವ ಉಪಸರ್ಗಗಳನ್ನೂ ಹಸಿವು–ಬಾಯಾರಿಕೆ ಮೊದಲಾಗಿ ಉಳ್ಳ ಇಪ್ಪತ್ತೆರಡು ಪರೀಷಹಗಳನ್ನೂ ಸಹಿಸಿಕೊಂಡು, ರೋಗಗಳಿಂದ ಉಂಟಾಗುವ ನೋವನ್ನೂ ಸಹಿಸಿ, ಸ್ವರ್ಗ ಮೋಕ್ಷ ಸುಖಗಳನ್ನು ಪಡೆಯಲಿ !

# ೧೦. ವೃಷಭಸೇನ ಭಟ್ಟಾರರ ಕಥೆ

ವೃಷಭಸೇನ ಭಟ್ಟಾರರ ಕಥೆಯಂ ಪೇೞ್ವೆಂ :

ಗಾಹೆ॥ ಉಣ್ಹಂ ವಾದಂ ಉಣ್ಹಂ ಸಿಳಾತಳಂ ಆದವಂ ಚ ಅತಿ ಉಣ್ಹಂ
ಸಹಿ ಊಣ ಉಸಹಸೇಣೋ ಪಡಿವಣ್ಣೋ ಉತ್ತಮಂ ಅಟ್ಠಂ

[ಉಣ್ಹಂ ವಾದಂ—ಬಿಸಿದಪ್ಪಗಾಳಿಯುಮಂ, ಉಣ್ಹಂ—ಬಿಸಿದಪ್ಪುದಂ, ಸಿಳಾತಳಂ—ಯೋಗ ಪೀಠದ ಸಿಲೆಯ ಮೇಗುಮಂ, ಅದವಂ ಚ—ಬಿಸಿಲುಮಂ, ಅತಿ ಉಣ್ಹಂ–ಆದಂ ಬಿಸಿದಪ್ಪುದಂ, ಸಹಿಊಣ – ಲೇಸಾಗಿ ಸೈರಿಸಿ, ಊಸಹಸೇಣೋ—ವೃಷಭಸೇನರೆಂಬ ಮುನಿ, ಪಡಿವಣ್ಣೋ— ಪೊರ್ದಿದೊಂ, ಉತ್ತಮಂ ಅಟ್ಠಂ—ಮಿಕ್ಕದರ್ಶನ ಜ್ಞಾನ ಚಾರಿತ್ರಂಗಳಾರಾಧನೆಯುಂ ]

ಅದೆಂತೆಂದೊಡೆ: ಈ ಜಂಬೂದ್ವೀಪದ ಭರತಕ್ಷೇತ್ರದೊಳವಂತಿಯೆಂಬುದು ನಾಡಲ್ಲಿ ಉಜ್ಜೇನಿ ಯೆಂಬುದು ಪೊಲದನಾಳ್ವೊಂ ಪ್ರದ್ಯೋತನೆಂಬರಸನಾತನ ಮಹಾದೇವಿ ಜ್ಯೋತಿರ್ಮಾಲೆ ಯೆಂಬೊಳಂತವರ್ಗಳಿಷ್ಟವಿಷಯ ಕಾಮ ಭೋಗಂಗಳನನುಭವಿಸುತ್ತಂ ಕಾಲಂ ಸಲೆ ಮತ್ತೊಂದು ದಿವಸಮರಸಂ ಕಾಡಾನೆಯಂ ಪಿಡಿಯಲ್ವೇಡಿಯಾನೆಯನೇಱಿ ಅಡವಿಗೆವೋದೊಡದು ಮದ ವಿಹ್ವಳಿತನಾಗಿ ಮೆಯ್ಯಱಿಯದೆ ದಿಶಾಪಟ್ಟಂಗೊಂಡೊಂದೆಸೆಗೆ ಕೊಂಡೋಡಿ ದಂಡಕಾರಣ್ಯಮ ಪ್ಪಡವಿಯ ನಡುವೆ ತನ್ನ ಬೇಗದಿಂ ಪರಿಯೆ ನಾಡೆಯಂತರಂಬೋದೊಡೊಂದು ಮರದಡ್ಡ

ವೃಷಭಸೇನ ಋಷಿಗಳ ಕಥೆಯನ್ನು ಹೇಳುವೆನು : [ವೃಷಭಸೇನರೆಂಬ ಋಷಿ ಬಿಸಿ ಯಾದ ಗಾಳಿಯನ್ನೂ ಬಿಸಿಯಾದ ಯೋಗಪೀಠ ಶಿಲೆಯ ಮೇಲಿನ ಭಾಗವನ್ನೂ ಅತ್ಯಂತ ಉಷ್ಣವಾಗಿರುವ ಬಿಸಿಲನ್ನೂ ಚೆನ್ನಾಗಿ ಸಹಿಸಿ ಶ್ರೇಷ್ಠವಾದ ದರ್ಶನ-ಜ್ಞಾನ-ಚಾರಿತ್ರ ಗಳ ಆರಾಧನೆಯನ್ನು ಮಾಡಿದರು.] ಅದು ಹೇಗೆಂದರೆ : ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಅವಂತಿ ಎಂಬ ನಾಡಿನಲ್ಲಿ ಉಜ್ಜೇನಿ ಎಂಬ ಪಟ್ಟಣವಿದೆ. ಅದನ್ನು ಪ್ರದ್ಯೋತನೆಂಬ ರಾಜನು ಆಳುತ್ತಿದ್ದನು. ಅವನ ರಾಣಿ ಜ್ಯೋತಿರ್ಮಾಲೆ ಎಂಬವಳು. ಅಂತು ಅವರು ತಮ್ಮ ಪ್ರೀತಿಯ ವಿಷಯದ ಕಾಮಸುಖಗಳನ್ನು ಅನುಭವಿಸುತ್ತ ಕಾಲ ಕಳೆಯುತ್ತಿದ್ದರು. ಹೀಗಿರಲು ಆಮೇಲೆ ಒಂದು ದಿವಸ ರಾಜನು ಕಾಡಾನೆಯನ್ನು ಹಿಡಿಯುವುದಕ್ಕಾಗಿ ಆನೆಯ ಮೇಲೇರಿಕೊಂಡು ಕಾಡಿಗೆ ಹೊರಟನು. ಅದು ಸೊಕ್ಕೇರಿದುದಾಗಿ ಮೈಮೇಲೆ ಎಚ್ಚರವಿಲ್ಲದೆ ಯಾವುದೋ ದಿಕ್ಕಿಗೆ ಓಡುತ್ತ ಹೋಯಿತು. ಒಂದು ದಿಕ್ಕಿನ ಕಡೆಗೆ ಓಡುತ್ತ ತನ್ನ ವೇಗದಿಂದ ದಂಡಕಾರಣ್ಯ ಎಂಬ ಕಾಡಿನ ನಡುವೆ ತೆರಳಿತು. ಮತ್ತೆಯೂ ದೂರಕ್ಕೆ ಅದು ಹೋಗುತ್ತಿರಲು ಒಂದು ಮರದ ಅಡ್ಡಕ್ಕೆ ಚಾಚಿದ್ದ ಅದರ ಕೊಂಬೆಯನ್ನು ರಾಜನು ಕಂಡು ಅದನ್ನು ಹಿಡಿದು ನೇತಾಡಿದನು.

ಬಿರ್ದ ಕೊಂಬಂ ಕಂಡರಸಂ ಪಿಡಿದು ನೇಲ್ದಿರ್ದೊರ್ಪಾನೆಯುಂ ಪೆಱತೊಂದು ದೆಸೆಗೆವೋಯ್ತುಂ
ತರಸನುಂ ಮರದಿಂದಿೞಿದು ನಾಡ ಬಟ್ಟೆಯೊಳ್ ತಗುಳ್ದು ಅಡವಿಯಂ ಪೊಱಮಟ್ಟು
ಬಂದೊಂದು ಖೇಡಮೆಂಬೂರನೆಯ್ದೆಯುಮದಱ ಸಾರೆಯೊಂದು ಕೆಯ್ಯುಂಟದಱ ಸಾರೆಯೊಳ್
ಬಾವಿಯುಂಟದಱ ತಡಿಯೊಳ್ ಬಂದು ಕುಳ್ಳಿರ್ದು ಪಸಿವಿನಿಂದಂ ತೃಷೆಯಿಂದಂ ಪಥಶ್ರಮದಿಂ
ದಾದಮಾನುಂ ಸೇದೆಗೆಟ್ಟು ಬಂಬಳಂಬಾಡಿರ್ಪನ್ನೆಗಂ ಆವೂರ ಗಾವುಂಡಂ ಜಿನವಾದಿಕನೆಂಬೊ
ನಾತನ ಗಾವುಂಡಿ ಜಿನಮತಿಯೆಂಬೊಳಾಯಿರ್ವರ್ಗ್ಗಂ ಮಗಳ್ ಜಿನದತ್ತೆಯೆಂಬೊಳತ್ಯಂತ ರೂಪ
ಲಾವಣ್ಯ ಸೌಭಾಗ್ಯ ಕಾಂತಿಯುಮೊಂದಿವನೊಡೆಯೊಳ್ ನೀರಂ ತರಲ್ಕೆಂದು ಬಾವಿಗೆ
ಪೋದಾಕೆಯುಂ ಕಂಡರಸನೆಲೆ ಕೂಸೆ ನೀರಂ ಕುಡಿಯಲೆಱೆಯಾ ಎಂದೊಡಂತೆಗೆಯ್ವೆನೆಂದಾತನ
ರೂಪುಂ ಗಾಡಿಯುಂ ತೇಜಮುಂ ಲಾವಣ್ಯಮುಮಂ ಕಂಡಾಟಿಸಿ ನೀರಂ ಸೇದಿಕೊಂಡು ಬಂದು
ಕುಡಿಯಲೆಱೆಯೆ ಕುಡಿಯೆಕುಡಿಯೆ ಕರಗದ ದಾರೆಯುಮನುಗಿದುಕೊಂಡೊಡರಸನಾಕೆಯ ಮೊಗಮಂ
ನೋಡಿ ನಕ್ಕೇಕೆ ಕಾಡುವೌ ಕೂಸೆ ಕಾಡದೆ ಕುಡಿಯಲೆಱೆಯಾ ಎಂದೊಡಾಕೆಯುಂ ಕುಡಿಯ
ಲ್ಕೆಱೆದು ತನ್ನ ಮನೆಗೆ ಪೋಗಿ ತನ್ನತಂದೆಗಿಂತೆಂದಳಪ್ಪಾ ಊರ ಪೊಱಗಣ ಬಾವಿಯೊ

ಆನೆ ಬೇರೆಯೊಂದು ದಿಕ್ಕಿಗೆ ಹೋಯಿತು. ಅಂತೂ ರಾಜನು ಮರದಿಂದ ಇಳಿದು
ನಾಡಿನ ದಾರಿಯನ್ನು ಹಿಡಿದು ಆ ಕಾಡಿನಿಂದ ಹೊರಟು ಖೇಡ ಎಂಬ ಒಂದು ಊರಿಗೆ
ಹೋದನು. ಆ ಊರಿನ ಸಮೀಪ ಒಂದು ಗದ್ದೆಯಿತ್ತು. ಅದರ ಹತ್ತಿರ ಒಂದು ಬಾವಿ
ಯಿತ್ತು. ಅದರ ಕಟ್ಟೆಯಲ್ಲಿ ಬಂದು ಕುಳಿತು, ಹಸಿವಿನಿಂದಲೂ ಬಾಯಾರಿಕೆಯಿಂದಲೂ
ದಾರಿ ನಡೆದ ಶ್ರಮದಿಂದಲೂ ಬಹಳವಾದ ಆಯಾಸದಿಂದ ಅತಿಯಾಗಿ ಬಾಡಿ
ಹೋಗಿದ್ದನು. ಆ ಸಂದರ್ಭದಲ್ಲಿ....ಆ ಊರಿನಲ್ಲಿ ಜಿನವಾದಿಕನೆಂಬ ಗೌಡನಿದ್ದನು.
ಅವನ ಗೌಡಿತಿ ಜಿನಮತಿಯೆಂಬವಳು. ಆ ಇಬ್ಬರಿಗೂ ಜಿನದತ್ತೆ ಎಂಬ ಮಗಳಿದ್ದಳು.
ಅವಳು ಅತ್ಯಂತ ರೂಪ–ಲಾವಣ್ಯ–ಸೌಭಾಗ್ಯ–ಕಾಂತಿಗಳಿಂದ ಕೂಡಿದವಳಾಗಿ
ದ್ದಳು. ನೀರನ್ನು ತರುವುದಕ್ಕಾಗಿ ಬಾವಿಗೆ ಹೋದಂತಹ ಆಕೆಯನ್ನು ರಾಜನು
ಕಂಡು–"ಎಲೈ ಕನ್ಯೆಯೇ ಕುಡಿಯುವುದಕ್ಕೆ ನೀರನ್ನು ಹೊಯ್ಯು" ಎಂದನು.
'ಹಾಗೆಯೇ ಮಾಡುವೆನು"–ಎಂದು ಆಕೆ ರಾಜನ ರೂಪವನ್ನೂ ಸೌಂದರ್ಯವನ್ನೂ ಕಾಂತಿ
ಲಾವಣ್ಯಗಳನ್ನೂ ಕಂಡು ಪ್ರೀತಿಸಿ ಬಾವಿಯಿಂದ ನೀರನ್ನು ಸೇದಿಕೊಂಡು ಬಂದು
ಕುಡಿಯುವುದಕ್ಕಾಗಿ ಹೊಯ್ದಳು. ಕುಡಿಯುತ್ತ ಇದ್ದ ಹಾಗೆ ಕೊಡದ ನೀರ ಧಾರೆ
ಯನ್ನು ನಿಲ್ಲಿಸಲು, ರಾಜನು ಅವಳ ಮುಖವನ್ನು ನೋಡಿ ನಕ್ಕು–"ಯಾಕೆ ಮಗು
ತೊಂದರೆಪಡಿಸುತ್ತೀ ? ತೊಂದರೆಪಡಿಸದೆ ಕುಡಿಯಲು ಎರೆ" ಎಂದು ಹೇಳಲು,
ಆಕೆ ಕುಡಿಯಲಿಕ್ಕೆ ನೀರನು ಹೊಯ್ದು, ತನ್ನ ಮನೆಗೆ ಹೋಗಿ ತನ್ನ ತಂದೆಗೆ
ಹೀಗೆಂದಳು—"ಅಪ್ಪಾ, ಊರ ಹೊರಗಿನ ಬಾವಿಯ ಬಳಿ ಒಬ್ಬ ಮಹಾಪುರುಷನು

ಳೊರ್ವಂ ಮಹಾಪುರುಷಂ ಬಂದಿರ್ದೊನಾತನಂ ನೀವೊಡಗೊಂಡು ಮನೆಗೆ ಬನ್ನಿಮೆಂದೊಡಂತೆಗೆಯ್ವೆನೆಂದಾತನುಂ ಪೋಗಿಯೊಡಗೊಂಡು ಬಂದಾತನ ಶ್ರಮಂ ಪೋಗೆ ದಿವ್ಯಮಪ್ಪಾಹಾರಮನೂಡಿರ್ದನ್ ಅನ್ನೆಗಮರಸನಡಿವಜ್ಜೆಯುಂ ನೋಡುತ್ತುಂ ಪೆಱಗಣಿಂದಂ ತಂತ್ರಮೆಲ್ಲಂ ಬಂದರಸನಿಲ್ಲಿಗೆವಂದನೆಯೆಂದೂರೊಳಗೆಲ್ಲಮಱಸಿ ಬೆಸಗೊಂಡವರರಸನಂ ಕಂಡೆಱಗಿ ಪೊಡೆವಡುವುದುಮಂ ಜೀಯ ಮಹಾಪ್ರಸಾದಮೆಂಬುದುಮಂ ಗಾವುಂಡಂ ಕಂಡೆಲೆ ಈತನರಸನೆಂದಱಿದಗ್ಗಳಂ ಪ್ರತಿಪತ್ತಿಯುಮಂ ಗೌರವಮುಮಂ ಮಾಡಿದೊಡರಸಂ ತನ್ನ ಪೆರ್ಗಡೆಗಳಿಂದಂ ಕೂಸಂ ಬೇಡಿ ಪೆತ್ತು ಮದುವೆನಿಂದಾಕೆಗೆ ಮಹಾದೇವಿವಟ್ಟಂಗಟ್ಟಿ ತನ್ನ ಪೊೞಲ್ಗೆ ವೋಗಿ ಕರುವಾಡಮಂ ಬಳಸಿಯುಮಿರ್ದಂತಃಪುರದೊಳಗೊಂದೊಳ್ಳಿತಪ್ಪ ಮಾಡಮಂ ಕೊಟ್ಟಿರಿಸಿ ಎಲ್ಲಾ ಅರಸಿಯರ್ಕಳುಮನುೞಿದು ಜಿನದತ್ತೆಗಾಸಕ್ತನಾಗಿ ಪಲಕಾಲಮಾಕೆಯೊಳಿಷ್ಟವಿಷಯ ಕಾಮಭೋಗಂಗಳನನುಭವಿಸುತ್ತಿರ್ಪನ್ನೆಗಮೊಂದು ದಿವಸಮಡವಿಯ ಸೊರ್ಕಿದಾನೆ ಗಣಿಯಾನೆಗಳ್ವೆರಸು ಒಂದು ಬಾರಿಯುಂ ಪೊಕ್ಕೊಡೆ ಪಿರಿದುಂ ಕಳಕಳಮಾಗಿ ಅರಸಂಗಱಿಪಿದೊಡರಸನುಂ ಕೇಳ್ದು ತುರಿಪದಿಂ ಪೊಱಮಟ್ಟು ಕಾಡಾನೆಯುಂ ಕಟ್ಟಿಸಲೆಂದು ಬಾಪಿಗೆವೋದೊನಾ ಪ್ರಸ್ತಾವದೊಳ್ ಜಿನದತ್ತೆ

ಬಂದಿದ್ದಾನೆ. ಆತನನ್ನು ನೀವು ಮನೆಗೆ ಕರೆದುಕೊಂಡು ಬನ್ನಿ". ಹೀಗೆನ್ನಲು, ಜಿನಪಾದಿಕನು "ಹಾಗೆಯೇ ಮಾಡುವೆನು" ಎಂದುಕೊಂಡು ಅಲ್ಲಿಗೆ ಹೋಗಿ ಅರಸನನ್ನು ಒಟ್ಟಿಗೆ ಕರೆತಂದು ಅವನ ಶ್ರಮ ಪರಿಹಾರವಾಗುವಂತೆ ದಿವ್ಯವಾದ ಆಹಾರವನ್ನು ಉಣಲು ಕೊಟ್ಟಿದ್ದನು. ಅಷ್ಟರಲ್ಲಿ ರಾಜನ ಪಾದಚಿಹ್ನೆಗಳನ್ನು ನೋಡುತ್ತ ಹಿಂದಿನಿಂದ ಸೈನ್ಯವೆಲ್ಲ ಬರುತ್ತ "ರಾಜನು ಇಲ್ಲಿಗೆ ಬಂದನೆ ?" ಎಂದು ಊರಿನಲ್ಲೆಲ್ಲ ಹುಡುಕುತ್ತ ಕೇಳುತ್ತ ಬಂದು, ಅವರು ರಾಜನನ್ನು ಕಂಡರು. ರಾಜನಿಗೆ ನಮಿಸಿ ಸಾಷ್ಟಾಂಗ ವಂದಿಸುವುದನ್ನೂ ಜೀಯಾ, ಅನುಗ್ರಹಿಸಬೇಕು ಎಂದು ಹೇಳುತ್ತಿರುವುದನ್ನೂ ಗೌಡನು ಕಂಡು "ಎಲಾ ! ಈತನು ರಾಜನು ;" ಎಂದು ತಿಳಿದು ಅವನಿಗೆ ಹೆಚ್ಚಿನ ಸತ್ಕಾರವನ್ನೂ ಮರ್ಯಾದೆಯನ್ನೂ ಮಾಡಿದನು. ರಾಜನು ತನ್ನ ಹೆಗ್ಗಡೆಗಳ ಮೂಲಕ ಕನ್ನೆಯನ್ನು ಕೇಳಿ, ಪಡೆದು ಮದುವೆಯಾದನು. ಅವಳಿಗೆ ಪಟ್ಟದ ರಾಣಿಯ ಪದವಿಯನ್ನು ಕೊಟ್ಟು, ತನ್ನ ಪಟ್ಟಣಕ್ಕೆ ತೆರಳಿದನು. ಅಲ್ಲಿ ರಾಣೀವಾಸ ಗೃಹಗಳಿಂದ ಆವರಿಸಿದ ಒಂದು ಉಪ್ಪರಿಗೆ ಮನೆಯನ್ನು ಅವಳಿಗೆ ಕೊಟ್ಟು ಅವಳನ್ನು ಅಲ್ಲಿ ಇರುವಂತೆ ಮಾಡಿದನು. ರಾಜನು ತನ್ನ ಎಲ್ಲಾ ರಾಣಿಯರನ್ನೂ ಬಿಟ್ಟು ಜಿನದತ್ತೆಯ ಮೇಲೆ ಆಸಕ್ತನಾಗಿ ಹಲವು ಕಾಲದವರೆಗೆ ಆಕೆಯಲ್ಲಿ ಇಷ್ಟವಾದ ವಿಷಯದ ಕಾಮಸುಖಗಳನ್ನು ಅನುಭವಿಸುತ್ತ ಇದ್ದನು. ಹೀಗಿರಲು ಒಂದು ದಿವಸ ಕಾಡಿನ ಒಂದು ಸೊಕ್ಕಾನೆ ತನ್ನ ಗುಂಪಿನ ಆನೆಗಳೊಂದಿಗೆ ಬಂದು ಆನೆಗಳನ್ನು ಹಿಡಿಯುವ ಲಕ್ಕಡಿ ಕೋಟೆಯನ್ನು ಹೊಕ್ಕಿತು. ಆಗ ಬಹಳ ಕೋಲಾಹಲವಾಯಿತು. ರಾಜನಿಗೆ ತಿಳಿಸಲು, ರಾಜನು ಕೇಳಿ ತ್ವರೆಯಾಗಿ ಹೊರಟು ಕಾಡಾನೆಯನ್ನು ಬಂಧಿಸುವುದಕ್ಕಾಗಿ ಬಾರಿಗೆ ಹೋದನು. ಆ ಸಂದರ್ಭದಲ್ಲಿ

ಪಸದನಂಗೊಂಡಿರ್ದಾಕೆ ಎನ್ನಂ ಬಿಸುಟ್ಟರಸಂ ಪೋದೊನೆಂದು ಮುಳಿದು ನುಡಿವುದುಮರಸನಾಕೆಯುಮನೊಡಗೊಂಡು ಪೋಗದುದಂ ಕಂಡರಸಿಯರ್ಕಳೆಲ್ಲಂ ಸಂತೋಸವಾಗಿ ಇನ್ನೆಮಗಮರಸಂ ಸೂಱುಂ ಪಾಱಿಯುಮನೀಗುಮೆಂದು ರಾಗಿಸಿ ನುಡಿವ ಮಾತುಗಳಂ ಜಿನದತ್ತೆ ಕೇಳ್ದು ಕಿನಿಸಿ ಇನ್ನಾತನೆನಗೆ ಬಾೞ್ತೆಯಲ್ಲನೆಂದು ತನ್ನ ಮಾಡದಿಂ ಪೊಱಮಟ್ಟು ಪೆಱತೊಂದು ಪ್ರಾಸಾದದೊಳ್ ಪೋಗಿರ್ದೊಳ್ ಅನ್ನೆಗಮಿತ್ತರಸನಾನೆಯುಂ ಕಟ್ಟಿಸಿ ಜಿನದತ್ತೆಯ ಮಾಡಕ್ಕೆ ವೋಗಿ ಅರಸಿಯುಂ ಕಾಣದೆಲ್ಲಿರ್ದಳೆಂದು ಬೆಸಗೊಂಡೊಡೊರ್ವನಿಂತೆಂದಂ ನೀಮೊಡಗೊಂಡು ಪೋದಿರಿಲ್ಲೆಂದರಸಿ ಮುಳಿದು ಪುರುಷವ್ರತಮಂ ಕೊಂಡು ತಪಸ್ವಿನಿಯಾಗಿ ಪೆಱತೊಂದು ಮಾಡದೊಳಿರ್ದೊಳೆಂದು ಪೇೞ್ದೊಡಾ ಮಾತನರಸಂ ಕೇಳ್ದಾದಮಾನುಂ ಮುಳಿದಿಂತಪ್ಪ ವ್ರತಮುಂ ತಪಮುಮೆನ್ನಲ್ಲಿ ಕೂಡದೆಂದು ನುಡಿದಾಕೆಯುಂ ಬೆಳ್ಕಾಡೊಳ್ ಮಸಣದೊಳ್ ಕೊಂಡು ಪೋಗಿಕ್ಕಿಮೆಂದಾಳ್ಗಳ್ಗೆ ಬೆಸನಂ ಪೇೞ್ದೊಡವರುಮಂತೆಗೆಯ್ವೆಮೆಂದರಸಿಯುಮನೊಡಗೊಂಡು ಪೋಗಿ ಮಸಣದೊಳೊಂಬತ್ತುತಿಂಗಳ ಗರ್ಭಿಣಿಯುಂ ಪೊತ್ತುಪೋಗಿಯಾಕೆಯುಮನಲ್ಲಿಕ್ಕಿ ಇಂತೆಂದರಬ್ಬಾ ಎಮಗೇನುಂ ದೋಷಮುಂ ಪಾಪಮುಮಿಲ್ಲ ಕ್ಷಮಿಯಿಸಿ

ಜಿನದತ್ತೆ–ಅಲಂಕೃತಳಾಗಿದ್ದವಳು, "ನನ್ನನ್ನು ಬಿಟ್ಟು ರಾಜನು ಹೋದನು" ಎಂದು ಕೋಪಿಸಿ ನುಡಿದಳು. ರಾಜನು ಅವಳನ್ನು ಕೂಡಿಕೊಂಡು ಹೋಗದುದನ್ನು ಕಂಡು ರಾಣಿಯರಿಗೆಲ್ಲ ಸಂತೋಷವಾಯಿತು. "ಇನ್ನು ರಾಜನು ನಮಗೂ ಸದಿ ಪ್ರಕಾರದ ಭೋಗಾವಕಾಶವನ್ನು ಕೊಡುವನು" ಎಂದು ಆನಂದಗೊಂಡು ನುಡಿಯುವ ಮಾತನ್ನು ಜಿನದತ್ತೆ ಕೇಳಿ ಸಿಟ್ಟಾದಳು. "ಆತನು (ರಾಜನು) ಇನ್ನು ನನಗೆ ಪ್ರಯೋಜನನಲ್ಲ" ಎಂದು ಹೇಳಿಕೊಂಡು ತನ್ನ ಮನೆಯಿಂದ ಹೊರಟಳು. ಬೇರೊಂದು ಅರಮನೆಗೆ ಹೋಗಿ ಅಲ್ಲಿ ವಾಸಮಾಡಿದಳು. ಅಷ್ಟರಲ್ಲಿ ಇತ್ತ ರಾಜನು ಆನೆಯನ್ನು ಬಂಧಿಸಿ ಜಿನದತ್ತೆಯ ಭವನಕ್ಕೆ ಬಂದನು. ಅಲ್ಲಿ ರಾಣಿ ಕಾಣಿಸಲಿಲ್ಲ. ಆಕೆ ಎಲ್ಲಿದ್ದಾಳೆಂದು ಕೇಳಿದನು. ಆಗ ಒಬ್ಬನು ಹೀಗೆ ಹೇಳಿದನು–"ನೀವು ಒಟ್ಟಿಗೆ ಕರೆದುಕೊಂಡು ಹೋಗಲಿಲ್ಲವೆಂದು ರಾಣಿ ಜಿನದತ್ತೆ ಕೋಪಗೊಂಡು ಬ್ರಹ್ಮಚಾರಿಣೀ ವ್ರತ ಕೈಕೊಂಡು ತಪಸ್ವಿನಿಯಾಗಿ ಬೇರೆ ಒಂದು ಅರಮನೆಯಲ್ಲಿದ್ದಾಳೆ"–ಹೀಗೆ ಹೇಳಿದಾಗ, ಆ ಮಾತನ್ನು ರಾಜನು ಕೇಳಿ ಅತ್ಯಂತ ಕೋಪಾವಿಷ್ಟನಾದನು. "ಇಂತಹ ವ್ರತವೂ ತಪಸ್ಸೂ ನನ್ನಲ್ಲಿ ನಡೆಯದು" ಎಂದು ಹೇಳಿ "ಆಕೆಯನ್ನು ನಿರ್ಜನವಾದ ಕಾಡಿನಲ್ಲಿ–ಸುಡುಗಾಡಿನಲ್ಲಿ ಕೊಂಡುಹೋಗಿ ಇರಿಸಿ" ಎಂದು ಆಳುಗಳಿಗೆ ಆಜ್ಞೆ ಮಾಡಿದನು. ಅವರು "ಹಾಗೆಯೇ ಮಾಡುವೆವು" ಎಂದು ಜಿನದತ್ತೆಯನ್ನು ಒಟ್ಟಿಗೆ ಕರೆದುಕೊಂಡೊಯ್ದರು. ಒಂಬತ್ತು ತಿಂಗಳ ಬಸುರಿಯಾದ ಆಕೆಯನ್ನು ಹೊತ್ತುಕೊಂಡು ಅಲ್ಲಿಗೆ ಹೋಗಿ ಅಲ್ಲಿ ಇಳಿಸಿ ಹೀಗೆ ಹೇಳಿದರು–"ಅಮ್ಮಾ, ನಮಗೇನೂ ದೋಷವಾಗಲೀ ಪಾಪವಾಗಲೀ ಇದರಲ್ಲಿಲ್ಲ, ಕ್ಷಮೆ ಕೊಡಿ. ಅರಸನ

ಮರಸನ ಬೆಸದೊಳ್ ತಂದಿಕ್ಕಿದೆಮೆಂದು ನುಡಿದು ಪೋದರನ್ನೆಗಮಾ ಇರುಳೊಳರಸಿ ಬೆಸಲೆಯಾಗಿ ಮಗನಂ ಪೆತ್ತೊಳ್ ಇತ್ತರಸನುಮಾ ಇರುಳೊಳ್ ಶ್ವೇತವೃಷಭನಂ ಕನಸಿನೊಳ್ ಕಂಡು ಪೊೞ್ತುಱಿನೋಲಗದೊಳ್ ಆಸ್ಥಾನದ ನಡುವೆ ಸಿಂಹಾಸನಮಸ್ತಕಸ್ಥಿತನಾಗಿ ತನ್ನ ಕಂಡ ಕನಸಂ ಮಂತ್ರಿಗೆ ಪೇೞ್ದೊಡೆ ಮಂತ್ರಿಯುಮಿಂತೆಂದು ಕನಸಿನ ಫಲಮನರ ಸಂಗೆ ಪೇೞ್ದಂ ದೇವಾ ನಿಮಗಿಂದು ಪುತ್ರಲಾಭಮಾದುದೆಂದು ಪೇೞ್ದೊಡದಂ ಕೇಳ್ದ ರಸಿಯರ್ಕಳೊಳಗಾರ್ವೆಸಲೆಯಾಗಿ ಮಗನಂ ಪೆತ್ತಳೆಂದಾರಯ್ದು ಬನ್ನಿಮೆಂದು ಪಡಿ ಯಱಿರ್ಗೆ ಬೆಸವೇೞ್ದೊಡವರ್ ರಾಣಿವಾಸಕ್ಕೆಪೋಗಿ ಅರಸಿಯರ್ಕಳೆಲ್ಲರುಮಂ ಬೇಱಿವೇಱಿ ನಿಮಗಂ ಪುಟ್ಟಿದನೆ ಎಂದು ಬೆಸಗೊಂಡೊಡವರ್ಗಳನಿಬರುಮಿಂತೆಂದರೆಮಗೆ ಸೌಭಾಗ್ಯಮಿಲ್ಲದ ವರ್ಗೆ ಭರ್ತಾರನ ದೆಸೆಯಿಂದಪ್ಪ ಸೂೞುಂ ಪಾೞಿಯುಮಿಲ್ಲದೊರ್ಗೆ ಬಸಿಱುಂ ಮಗನುಮೆಂ ತಕ್ಕುಂ ನೀಮಾರಾನುಂ ಸೌಭಾಗ್ಯಮುಳ್ಳೊರಲ್ಲಿ ಬಸಿಱುಂ ಮಗನುಮನಾರಯ್ಯಿಮೆಮ್ಮಲ್ಲಿ ಏನ ನಾರಯ್ವಿರೆಂದು ನುಡಿದೊಡವರ್ಗ್ಗಳುಂ ಶ್ಮಶಾನಕ್ಕೆ ಪೋಗಿ ಜಿನದತ್ತೆ ಬೆಸಲೆಯಾಗಿ ಮಗನಂ ಪೆತ್ತಿರ್ದೊಳಂ ಕಂಡರಸಂಗೆ ಪೋಗಿ ಇಂತೆಂದರ್ ದೇವಾ ಶ್ಮಶಾನದೊಳ್ ಜಿನದತ್ತೆಯರಸಿ ಬೆಸಲೆ ಯಾಗಿ ಮಗನಂ ಪೆತ್ತಿರ್ದಳೆಂದು ಪೇೞ್ದೊಡದಂ ಕೇಳ್ದರಸಂ ಕೂಸುಮನರಸಿಯುಮನೊಡ

ಅಪ್ಪಣೆಯ ಪ್ರಕಾರ ನಿಮ್ಮನ್ನು ಇಲ್ಲಿಗೆ ತಂದುಬಿಟ್ಟಿದ್ದೇವೆ". ಹೀಗೆ ನುಡಿದು ಅವರು ಹೋದರು. ಅದೇ ರಾತ್ರಿಯಲ್ಲಿ ಅರಸಿಗೆ ಪ್ರಸವವಾಯಿತು, ಆಕೆ ಮಗನನ್ನು ಹೆತ್ತಳು. ಇತ್ತ ರಾಜನು ಅದೇ ರಾತ್ರಿಯಲ್ಲಿ ಕನಸಿನಲ್ಲಿ ಬಿಳಿಯ ಎತ್ತನ್ನು ಕಂಡನು. ಪ್ರಾತಃ ಕಾಲದ ರಾಜಸಭೆಯಲ್ಲಿ ಆಸ್ಥಾನದ ನಡುವೆ ಇದ್ದ ಸಿಂಹಾಸನದ ಮೇಲೆ ಕುಳಿತವನಾಗಿ ತಾನು ಕಂಡ ಕನಸನ್ನು ಮಂತ್ರಿಗೆ ತಿಳಿಸಿದನು. ಆಗ ಮಂತ್ರಿ ರಾಜನಿಗೆ ಕನಸಿನ ಫಲ ವನ್ನು ಈ ರೀತಿಯಾಗಿ ಹೇಳಿದನು–"ದೇವಾ, ನಿಮಗೆ ಇಂದು ಗಂಡುಮಗು ಲಾಭವಾ ಗಿದೆ"–ಎಂದು ಹೇಳಿದಾಗ ರಾಜನು ಕೇಳಿ, ತನ್ನ ರಾಣಿಯರಲ್ಲಿ ಯಾರು ಪ್ರಸವಗೊಂಡು ಮಗನನ್ನು ಹೆತ್ತಿದ್ದಾಳೆಯೆಂದು ವಿಚಾರಿಸಿ ಬನ್ನಿ–ಎಂದು ಬಾಗಿಲು ಕಾಯುವ ಸೇವಕ ರಿಗೆ ಆಜ್ಞೆಮಾಡಿದನು. ಅವರು ರಾಜನ ಅಂತಃಪುರಕ್ಕೆ ಹೋಗಿ ರಾಣಿಯರೆಲ್ಲರನ್ನೂ ಬೇರೆಬೇರೆಯಾಗಿ "ನಿಮಗೆ ಮಗನು ಹುಟ್ಟಿದನೆ ?" ಎಂದು ಕೇಳಿದರು. ಆಗ ಅವರಲ್ಲಿ ಎಲ್ಲರೂ ಹೀಗೆ ಹೇಳಿದರು–"ನಾವು ಪುಣ್ಯವಿಲ್ಲದವರು. ಗಂಡನ ಕಡೆಯಿಂದ ಒದಗತಕ್ಕ ಸರದಿ ಪ್ರಕಾರದ ಸುಖಭೋಗಗಳಿಲ್ಲದವರು. ಅಂತಹ ನಮಗೆ ಗರ್ಭವೂ ಪುತ್ರೋತ್ಪ ತ್ತಿಯೂ ಆಗುವುದು ಹೇಗೆ ? ಯಾರಾದರೂ ಪುಣ್ಯವುಳ್ಳವರಿದ್ದರೆ ಅವರಲ್ಲಿ ಬಸಿರಾದವ ರನ್ನೂ ಮಗನನ್ನು ಪಡೆದವರನ್ನೂ ನೀವು ವಿಚಾರಿಸಿರಿ. ನಮ್ಮಲ್ಲಿ ನೀವು ಏನು ಕೇಳುತ್ತಿ ದ್ದೀರಿ ?" ಈ ರೀತಿಯಾಗಿ ಹೇಳಲು, ಅವರು ಶ್ಮಶಾನಕ್ಕೆ ಹೋದಾಗ ಜಿನದತ್ತೆ ಪ್ರಸವಿಸಿ ಗಂಡುಮಗುವನ್ನು ಪಡೆದುದನ್ನು ಕಂಡರು. ಕೂಡಲೇ ರಾಜನ ಬಳಿಗೆ ಹೋಗಿ ಹೀಗೆಂದರು–"ದೇವಾ ನಿಮ್ಮ ರಾಣಿಯಾದ ಜಿನದತ್ತೆಗೆ ಹೆರಿಗೆಯಾಗಿ ಮಗನನ್ನು ಪಡೆದಿ

ಗೊಂಡು ಬನ್ನಿಮೆಂದು ತರಿಸಿ ಮುನ್ನಿನಂದದೊಳಿರಿಸಿ ಕನಸಿನೊಳ್ ವೃಷಭನಂ ಕಂಡುದಱಿಂದಾ ಕೂಸಿಂಗೆ ವೃಷಭಸೇನನೆಂದು ಪೆಸರನಿಟ್ಟರಸಿಯುಂ ದಾನಸನ್ಮಾನಾದಿಗಳಿಂ ಪೂಜಿಸಿಯಾಕೆಯೊಳಿಷ್ಟ ವಿಷಯ ಕಾಮಭೋಗಂಗಳನನುಭವಿಸುತ್ತಮಿರೆ ವೃಷಭಸೇನ ಕುಮಾರನುಮೆಂಟು ವರುಷದ ಪ್ರಾಯದಾತನಾಗಿರ್ಪನ್ನೆಗಮೊಂದು ದಿವಸಮರಸಂ ತಪಂಬಡುವ ಬಗೆಯಿಂದಂ ವೃಷಭಸೇನ ಕುಮಾರಂಗಿಂತೆಂದಂ ಮಗನೆ ನಿನಗೆ ಪಟ್ಟಂಗಟ್ಟಲ್ ಬಗೆದಪ್ಪೆನೆಂದೊಡಾತನಿಂತೆಂದನಯ್ಯಾ ಎನಗೆ ನೀಮುಂ ರಾಜ್ಯಪಟ್ಟಂಗಟ್ಟಿದಪಿರೊ ಮೋಕ್ಷಪಟ್ಟಂಗಟ್ಟಿದಪಿರೊ ಎಂದು ತಂದೆಯಂ ಬೆಸಗೊಂಡೊಡೆ ಮಗನೆ ನಿನಗೆ ಮನುಷ್ಯರಾಜ್ಯಪಟ್ಟಂಗಟ್ಟಿದಪ್ಪೆನೆಂಬುದುಂ ದೇವಾ ರಾಜ್ಯಪಟ್ಟಬಂಧನಮುಂ ಮೋಕ್ಷ ಸುಖ ರಾಜ್ಯಪಟ್ಟಬಂಧನಮುಮೆಂತೆನೆ ಮೋಕ್ಷಸುಖರಾಜ್ಯಪಟ್ಟಮಂ ತಪಂಗೆಯ್ವಂಗೆ ಕಟ್ಟುವುದೆಂದೊಡಂತಪ್ಪೊಡೆ ಮನುಷ್ಯರಾಜ್ಯಪಟ್ಟಮನೊಲ್ಲೆನೆನಗೆ ಮೋಕ್ಷರಾಜ್ಯಪಟ್ಟಂಗಟ್ಟಿಮೆಂದು ನುಡಿದೊಡರಸನೆಂದಂ ಮಗನೆ ನೀನಿನ್ನುಂ ಕೂಸನೈ ಬಾಲವದ್ದೆಯನ್ನೆಗಂ ಬಳೆದರಸುಗೆಯ್ದಿಷ್ಟ ವಿಷಯ ಕಾಮಭೋಗಂಗಳನನುಭವಿಸುತ್ತಂ ಬಱಿಕ್ಕೆ ಪಶ್ಚಾತ್ಕಾಲದೊಳ್

ದ್ದಾಳೆ." ಎಂದು ಹೇಳಿದಾಗ ರಾಜನು ಅದನ್ನು ಕೇಳಿ "ಮಗುವನ್ನೂ ರಾಣಿಯನ್ನೂ ಒಟ್ಟಿಗೆ ಕರೆದುಕೊಂಡು ಬನ್ನಿ" ಎಂದು ಹೇಳಿ, ಅವರಿಬ್ಬರನ್ನೂ ಕರೆತರಿಸಿದನು. ಹಿಂದಿನ ರೀತಿಯಲ್ಲೇ ಜಿನದತ್ತೆಯನ್ನು ಇರಿಸಿದನು. ಕನಸಿನಲ್ಲಿ ಎತ್ತನ್ನು ಕಂಡುದರಿಂದ ಆ ಮಗುವಿಗೆ ವೃಷಭಸೇನನೆಂದು ಹೆಸರಿಟ್ಟು ರಾಣಿಯಾದ ಜಿನದತ್ತೆಯನ್ನು ದಾನ ಸನ್ಮಾನ ಮುಂತಾದವುಗಳಿಂದ ಸತ್ಕರಿಸಿ ಆಕೆಯೊಡನೆ ಇಷ್ಟವಾದ ವಿಷಯದ ಕಾಮಸುಖಗಳನ್ನು ಅನುಭವಿಸುತ್ತ ಇದ್ದನು. ಹೀಗಿರಲು, ವೃಷಭಸೇನನು ಎಂಟು ವರ್ಷ ಪ್ರಾಯದವನಾಗಿ ಇರುತ್ತಿದ್ದಾಗ ಒಂದು ದಿವಸ ರಾಜನು ತಪಸ್ಸನ್ನು ಆಚರಿಸುವ ಮನೋಭಾವದಿಂದ ವೃಷಭಸೇನ ಕುಮಾರನಿಗೆ ಹೀಗೆಂದನು– "ಮಗನೇ, ನಿನಗೆ ಪಟ್ಟಗಟ್ಟಬೇಕೆಂದು ಭಾವಿಸಿರುತ್ತೇನೆ." ಆಗ ಅವನು–"ಅಪ್ಪಾ, ನನಗೆ ನೀವು ರಾಜ್ಯದ ಪಟ್ಟವನ್ನು ಕಟ್ಟುತ್ತಿದ್ದೀರೋ ಮೋಕ್ಷದ ಪಟ್ಟವನ್ನು ಕಟ್ಟುತ್ತಿದ್ದೀರೋ? ಎಂದು ತಂದೆಯನ್ನು ಕೇಳಿದನು. ಅದಕ್ಕೆ ಅವನು "ಮಗನೆ ನಿನಗೆ ಮನುಷ್ಯರ ರಾಜ್ಯಪಟ್ಟವನ್ನು ಕಟ್ಟುತ್ತಿದ್ದೇನೆ" ಎಂದನು. ಆಗ ವೃಷಭಸೇನನು– "ದೇವಾ ರಾಜ್ಯದ ಪಟ್ಟಗಟ್ಟುವಿಕೆಯೂ ಮೋಕ್ಷಸುಖದ ರಾಜ್ಯಪಟ್ಟ ಕಟ್ಟುವಿಕೆಯೂ ಹೇಗಿರುತ್ತದೆ?" ಎಂದು ಕೇಳಿದನು. ಅದಕ್ಕೆ ಆತನು–"ಮೋಕ್ಷಸುಖರಾಜ್ಯದ ಪಟ್ಟವನ್ನು ತಪಸ್ಸುಮಾಡುವವನಿಗೆ ಕಟ್ಟುವುದು ಪದ್ಧತಿ" ಎನ್ನಲು, ಕುಮಾರನು– "ಹಾಗಾದರೆನಾನು ಮನುಷ್ಯರ ರಾಜಪಟ್ಟವನ್ನು ಒಲ್ಲೆನು. ನನಗೆ ಮೋಕ್ಷರಾಜ್ಯದ ಪಟ್ಟವನ್ನು ಕಟ್ಟಿರಿ" ಎಂದು ಹೇಳಿದನು. ಆಗ ರಾಜನು– ಮಗನೆ, ನೀನಿನ್ನೂ ಮಗುವಾಗಿರುವೆ. ನವಯೌವನನಾಗುವವರೆಗೆ ಬಳೆದು ರಾಜ್ಯಭಾರ ಮಾಡಿ ಇಷ್ಟವಿಷಯದ ಕಾಮಸುಖಗಳನ್ನು ಅನುಭವಿಸಿದನಂತರ ಮತ್ತಿನ ಕಾಲವಲ್ಲಿ ತಪಸ್ಸು

ತಪಂಬಡುವುದೆಂದೊಡೆ ಕುಮಾರನಿಂತೆಂದನನ್ನೆಗಂ ಸಾವರೊ ಬಾಬ್ವರೊ ಎಂತಱಿಯಲಕ್ಕುಂ ಮನುಷ್ಯರ ಬಾೞುಂ

ಕಂದ॥ ಪನಿಪುಲ್ಲ ಮುಗಿಲ ಸಂಜೆಯ
ಕನಸಿನ ಸುರಧನುವ ನೆಗೆದ ನೊರೆಗಳ ತೆಱನಂ
ತನಿತುಂ ನಿಲ್ಲವು ಬಗೆವೊಡೆ
ಮನುಜರ ಯೌವನಮುಮರ್ಥಮುಂ ಬಾೞ್ಕೆಗಳುಂ

ಶ್ಲೋಕ॥ ಭೋಗಸ್ತೃಷ್ಣಾಗ್ನಿ ಸಂವೃದ್ಧ್ಯೈ ದೀಪನೀಯೋ ವನೋಪಮಃ
ಏಭಿಃ ಸ್ತ್ರೀವೃದ್ಧತೃಷ್ಣಾಗ್ನಿ ಶಾಂತ್ಯೈ ಚಿಂತ್ಯಮಿಹಾಪರಂ

ಗಾಹೆ॥ ಸಣ್ಣಂ ವಾ ಬದರಂ ತಂ ಮಜ್ಝಂ ವಿಮುತ್ತಾಣ ಮುತ್ತಿಪಹಂ
ಅವಿಸಾಮಂ (?) ಭೋಗ ಸುಹಲೋಹವಿರದೋ ಮೊಕ್ಖೇಮದಿಂ ಕುಜ್ಜಾ

ಆರ್ಯೆ॥ ಯದ್ಯಪಿ ನಿಷೇವ್ಯಮಾಣಾ ಮನಸ್ಸಂತುಷ್ಟಕಾರಕಾ ವಿಷಯಾಃ
ಕಿಂಪಾಕ ಫಲಾಶನವದ್ಭವಂತಿ ಪಶ್ಚಾದತಿದುರಂತಾಃ

ಎಂಬುದಱಿಂ ಭೋಗಂಗಳುಂ ಕಿಂಪಾಕಫಳದೊಳೋರನ್ನವದು ಕಾರಣದಿಂ ರಾಜ್ಯದೊಳಪ್ಪ ಭೋಗಸುಖಂಗಳನೊಲ್ಲೆಂ ಜಾತಿಜರಾಮರಣಗಳಿಂದಪ್ಪ ಬಾಧೆಯಿನಗಲ್ದ ಶಾಶ್ವತಮಪ್ಪ ಮೋಕ್ಷ

ಮಾಡಬಹುದು" ಎಂದನು. ಆಗ ಕುಮಾರನು ಹೀಗೆಂದನು— "ಆಗ ಸಾಯುತ್ತಾರೊ ಬದುಕಿರುತ್ತಾರೊ ಹೇಗೆ ತಿಳಿಯಲಿಕ್ಕಾಗುತ್ತದೆ ? [ಮನುಷ್ಯಜೀವನ, ಯೌವನ, ಧನ–ಇವು ಹುಲ್ಲಿನ ಮೇಲೆನಿಂತ ಹನಿಯಂತೆ, ಮುಗಿಲಂತೆ, ಸಂಜೆಹೊತ್ತಿನಂತೆ, ಕನಸಿನಂತೆ, ಮಳೆಬಿಲ್ಲಿನಂತೆ, ಮೇಲೆದ್ದ ನೀರುಗುಳ್ಳೆಗಳಂತೆ, ಕ್ಷಣಿಕವಾಗಿವೆ. ಯೋಚಿಸಿದರೆ ಅಂತು ಅಷ್ಟು ಹೊತ್ತೂ ನಿಂತಿರಲಾರವು.] [ಭೋಗವೆಂಬುದು ಆಶೆಯೆಂಬ ಅಗ್ನಿಯನ್ನು ಹೆಚ್ಚಿಸುವುದಕ್ಕಿರುವ ಸುಡುತ್ತಿರುವ ಕಾಡಿನಂತಿರುವುದು. ಹೆಣ್ಣಿನಿಂದ ಹೆಚ್ಚುತ್ತಿರುವ ಭೋಗಲಾಲಸೆಯೆಂಬ ಬೆಂಕಿಯ ಶಮನಕ್ಕಾಗಿ ಇಹಪರ ಗತಿಗಳು ಆಲೋಚಿಸತಕ್ಕವಾಗಿವೆ.] ಮುಕ್ತಿಪಥದಲ್ಲಿ ಚಿಕ್ಕದಾಗಲಿ ದೊಡ್ಡದಾಗಲಿ—ಎಲ್ಲ ಸಂಬಂಧಗಳನ್ನು ತೊರೆದು ಸಂತತವಾಗಿ ಭೋಗಸುಖ ಲೋಭಗಳಲ್ಲಿ ಆಸಕ್ತಿಯಿಲ್ಲದವನಾಗಿ ಮೋಕ್ಷದಲ್ಲಿ ಮನಸ್ಸನ್ನು ಮಾಡಬೇಕು. ಮನಸ್ಸಿಗೆ ಸಂತೃಪ್ತಿಯುಂಟುಮಾಡುವ ವಸ್ತುಗಳು ಸೇವಿಸಲ್ಪಡುವವಾದರೂ, ಅವು ಆ ಮೇಲೆ ವಿಷಮಯವಾದ ಕಿಂಪಾಕ ಮರದ ಹಣ್ಣುಗಳನ್ನು ತಿಂದಂತೆ ಬಹಳ ದುಷ್ಪರಿಣಾಮವನ್ನು (ಪ್ರಾಣಹಾನಿಯನ್ನು) ಉಂಟುಮಾಡುತ್ತವೆ. ಹೀಗೆನ್ನುವುದರಿಂದ, ಸುಖಗಳು ಕಿಂಪಾಕದ ಹಣ್ಣಿಗೆ ಸಮಾನವಾಗಿವೆ. ಆ ಕಾರಣದಿಂದ ರಾಜ್ಯಾಧಿಕಾರದಲ್ಲಿ ಉಂಟಾಗುವ ಸುಖಾನುಭವಗಳನ್ನು ನಾನೊಲ್ಲೆನು. ಹುಟ್ಟು–ಮುಪ್ಪು–ಸಾವುಗಳಿಂದಾಗುವ ತೊಂದರೆಯಿಂದ

ಸುಖಮನೆ ಬೇೞ್ಪೆನೆಂದು ತಱಿಸಂದು ನುಡಿದೊಡರಸಂ ಜ್ಯೋತಿರ್ಮಾಲೆಯೆಂಬರಸಿಯ ಮಗಂ ವಸುಪಾಳನೆಂಬೊಂಗೆ ರಾಜ್ಯಪಟ್ಟಂಗಟ್ಟಿ ತಂದೆಮಕ್ಕಳಿರ್ವರುಮೆಲ್ಲರೊಳಂ ನಿಶ್ಶಲ್ಯಂಗೆಯ್ದು ಬಾಹ್ಯಾಭ್ಯಂತರ ಪರಿಗ್ರಹ ಪರಿತ್ಯಾಗಂಗೆಯ್ದು ಗುಣಧರರೆಂಬಾಚಾರ್ಯರ ಪಕ್ಕದೆ ದೀಕ್ಷೆಯಂ ಕೈಕೊಂಡು ಪನ್ನೆರಡು ವರುಷಂ ಬರೆಗಂ ಗುರುಗಳನಗಲದಿರ್ದಾಗಮಂಗಳೆಲ್ಲಮಂ ಕಲ್ತು ಭಟಾರರಂ ಬೆಸಗೊಂಡವರನುಮತದಿಂ ವೃಷಭಸೇನ ಮುನಿಯುಂ ಗ್ರಾಮನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ ವಿಹಾರಿಸುತ್ತಂ ಬರ್ಪೊರ್ ವತ್ಸೆಯೆಂಬುದು ನಾಡೊಳ್ ಕೌಶಂಬಿಯೆಂಬ ಪೊೞಲ್ಗೆವಂದದಱಸಾರೆ ಉದಯಾವತ ಪರ್ವತಮೆಂಬ ಪರ್ವತ ಮುಂಟದಱ ಮೇಗೆ ವೃಷಭಸೇನ ಭಟಾರರ್ ನಾಲ್ಕು ತಿಂಗಳುಮಾತಪಸ್ಥಿತ ಯೋಗಮಂ ಕೈಕೊಂಡು ದಿವಸಕ್ಕಂ ಕಲ್ನಿಲೆನಿಲೆ ಪೊೞಲವರ್ಗಳ್ ಕಂಡನಿಬರುಂ ಶ್ರಾವಕಭಕ್ತರುಂ ಬೆಸಕೆಯ್ವರುಮಾದರ್ ಮತ್ತಾ ಪೊೞಲೊಳ್ ಬುದ್ಧ ಜನೆಂಬೊನುಪಾಸಕನಾತಂ ಋಷಿಯರೊಳಪ್ಪ ಮಾತ್ಸರ್ಯಂ ಕಾರಣಮಾಗಿ ಭಟಾರರ್ ಚರಿಗೆವೋದರನ್ನೆಗಂ ಪೀದೆ ಪಾಪಕರ್ಮಂ ಯೋಗಶಿಲೆಯ ಮೇಗುಮಂ ಕಿೞಗುಮಂ ಬಳಸಿಯುಂ ಪಲವುಂ ಪಿರಿಯವುಮಪ್ಪ ತಱಿಯ ಪುಳ್ಳಿಗಳಂ ಕಡಿ

ಅಗಲಿವ (ದೂರವಾದ) ಚಿರಸ್ಥಾಯಿಯಾದಂತಹ ಮುಕ್ತಿಸುಖವನ್ನೇ ಬೇಡುವೆನು"– ಎಂದು ನಿರ್ಧಾರಮಾಡಿ ನುಡಿದನು. ಪ್ರದ್ಯೋತ ರಾಜನು ಜ್ಯೋತಿರ್ಮಾಲೆ ಎಂಬ ರಾಣಿಯ ಮಗನಾದ ವಸುಪಾಳನೆಂಬವನಿಗೆ ರಾಜ್ಯಪಟ್ಟವನ್ನು ಕಟ್ಟಿದನು. ತಂದೆ ಮಕ್ಕಳಿಬ್ಬರೂ ಮಾಯಾಶಲ್ಯ, ಮಿಥ್ಯಾಶಲ್ಯ, ನಿದಾನಶಲ್ಯ ಎಂಬ ಶಲ್ಯಗಳನ್ನು ತೊರೆದು, ಬಾಹ್ಯ ಮತ್ತು ಆಂತರಿಕ ಪರಿಗ್ರಹಗಳನ್ನು ತ್ಯಾಗಮಾಡಿ ಗುಣಧರರೆಂಬ ಆಚಾರ್ಯರ ಬಳಿಯಲ್ಲಿ ದೀಕ್ಷೆಯನ್ನು ಸ್ವೀಕರಿಸಿದರು. ಹನ್ನೆರಡು ವರ್ಷಗಳವರೆಗೆ ಗುರುಗಳ ಜೊತೆಯಲ್ಲಿಯೇ ಇದ್ದು ಶಾಸ್ತ್ರಗಳನ್ನೆಲ್ಲ ಅಭ್ಯಾಸಮಾಡಿದರು. ವೃಷಭಸೇನ ಮುನಿಗಳು ಗುಣಧರ ಭಟಾರರನ್ನು ಕೇಳಿ, ಅವರ ಅನುಮತಿ ಪಡೆದು, ಗ್ರಾಮ–ನಗರ–ಖೇಡ–ಖರ್ವಡ–ಮಡಂಬ–ಪಟ್ಟಣ–ದ್ರೋಣಾಮುಖ ಎಂಬ ಭೂಭಾಗಗಳಲ್ಲಿ ಸಂಚಾರಮಾಡುತ್ತ ಬರತಕ್ಕವರು ವತ್ಸೆಯೆಂಬ ನಾಡಿನಲ್ಲಿರುವ ಕೌಶಂಬಿ ಎಂಬ ಪಟ್ಟಣಕ್ಕೆ ಬಂದರು. ಆ ಪಟ್ಟಣದ ಹತ್ತಿರ ಉದಯಾವತವೆಂಬ ಪರ್ವತವಿದೆ. ಅದರ ಮೇಲೆ ವೃಷಭಸೇನ ಮುನಿಗಳು ನಾಲ್ಕುತಿಂಗಳ ಕಾಲ ಆತಪಸ್ಥಿತಯೋಗವನ್ನು (ಬಿಸಿಲಿನಲ್ಲಿನಿಂತು ಮಾಡುವ ತಪಸ್ಸನ್ನು) ಕೈಕೊಂಡರು. ಪ್ರತಿದಿನವೂ ಕಲ್ಲುನಿಂತಂತೆ ನಿಲ್ಲುತ್ತಿದ್ದರು. ಪಟ್ಟಣಿಗರೂ ಅಲ್ಲಿದ್ದ ಎಲ್ಲಾ ಶ್ರಾವಕಭಕ್ತರೂ ಅವರ ಸೇವೆ ಮಾಡುತ್ತ ಇರುವವರಾದರು. ಆ ಪಟ್ಟಣದಲ್ಲಿ ಬುದ್ಧಜನೆಂಬ ಒಬ್ಬ ಗೃಹಸ್ಥನು ಇದ್ದನು. ಋಷಿಗಳ ಮೇಲಿನ ದ್ವೇಷವೇ ಕಾರಣವಾಗಿ, ಋಷಿಗಳು ಭಿಕ್ಷೆಗೆ ಹೋದ ವೇಳೆಗೆ, ಹಿಂದೆ ಪಾಪಕೃತ್ಯಮಾಡಿದವನಾದ ಅವನು ಋಷಿಗಳ ಯೋಗ ಶಿಲೆಯ ಮೇಲೆಯೂ ಕೆಳಗೆಯೂ ಸುತ್ತಲೂ ಹಲವು ದೊಡ್ಡ ತರಿಯ ಮರದ ಸೌದೆಗಳನ್ನು ಕಡಿದು ತಂದು ರಾಶಿಹಾಕಿ, ಬೆಂಕಿಕೊಟ್ಟು ಸುಟ್ಟು, ಶಿಲೆಯನ್ನು ಬೆಂಕಿಯ

ದೊಟ್ಟಿ ಕಿಚ್ಚನಿಕ್ಕಿ ಸುಟ್ಟು ಕಿಚ್ಚಿನ ಬಣ್ಣದಂತಾಗಿ ಸಿಲೆಯಂ ಮಾಡಿ ಕೆಂಡಂಗಳನೊಂದು ಕೆಲಂ ಸಾರ್ಚಿ ಪೋದನನ್ನೆಗಂ ಭಟಾರರ್ ಚರಿಗೆ ಪೋಗಿ ಬರ್ಪೋರ್ ದಗದ್ಧಗಿಸುತ್ತಿರ್ದ ಕಿಚ್ಚಿನ ಬಣ್ಣದಂತಪ್ಪ ಕಿಚ್ಚನಾಗಿರ್ದ ಸಿಲೆಯಂ ಕಂಡೆಮಗಿನಿತೆಯಾಯುಷ್ಯಮೆಂದಱಿದು ಕ್ರಿಯೆಗೆಯ್ದು ಚತುರ್ವಿಧಮಪ್ಪಾಹಾರಮುಂ ಶರೀರಮುಮಂ ಜಾವಜ್ಜೀವಂ ತೊಱೆದು ಕಾಯ್ದಿರ್ದ ಯೋಗಪೀಠಮನೇಱಿ ಕಾಯೋತ್ಸರ್ಗಂಗೆಯ್ದು ಜ್ಯೇಷ್ಠಮಾಸದ ಬಿಸಿಲುಂ ಝಳಮುಂ ಬೆಂಕೆಯುಂ ಕಿಚ್ಚುಮಂ ಸೈರಿಸಿ ನೀರೊಳಗಿರ್ಪಂತಿರ್ದು ಶುಕ್ಲಧ್ಯಾನಮಂ ಧ್ಯಾನಿಸಿ ಎಂಟು ಕರ್ಮಂಗಳಂ ಕಿಡಿಸಿ ಮೋಕ್ಷಕ್ಕೆ ಪೋದರ್ ಮತ್ತೆ ಪ್ರದ್ಯೋತನೆಂಬ ಋಷಿ ಸಮ್ಯಗ್ದರ್ಶನ ಜ್ಞಾನ ಚಾರಿತ್ರಂಗಳಂ ಸಾಧಿಸಿ ಸ್ವರ್ಗದೊಳ್ ಪುಟ್ಟಿದಂ ಮತ್ತಂ ಪೆಱರುಮಾರಾನುಂ ಸಹಜರತ್ನತ್ರಯಮನಾರಾಧಿಸುತ್ತಿರ್ದ ಭವ್ಯರ್ಕಳ್ ವೃಷಭಸೇನ ಭಟಾರರಂ ಮನದೊಳ್ ಬಗೆದು ಝಳಮಂ ಬೆಂಕೆಯುಮಂ ದಾಹಮುಷ್ಣಮುಂ ಶೀತಮುಂ ವಾತಮುಂ ಬೇನೆಯುಂ ಪಸಿವುಂ ನೀರಱ್ಕೆ ಮೊದಲಾಗೊಡೆಯುವಿರ್ಪತ್ತೆರಡು ಪರೀಷಹಂಗಳಂ ಸೈರಿಸಿ ಶುಭಪರಿಣಾಮದಿಂ ಸಮ್ಯಗ್ದರ್ಶನ ಜ್ಞಾನಚಾರಿತ್ರಂಗಳಂ ಸಾಧಿಸಿ ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

ಬಣ್ಣದ ಹಾಗೆ ಆಗುವಂತೆ ಮಾಡಿ, ಕೆಂಡಗಳನ್ನೆಲ್ಲ ಮಗ್ಗುಲಿಗೆ ಸೇರಿಸಿ ಹೋದನು. ಅಷ್ಟರಲ್ಲಿ ವೃಷಭಸೇನ ಮುನಿಗಳು ಭಿಕ್ಷೆಗೆ ಹೋಗಿ ಬರತಕ್ಕವರು ಧಗಧಗಿಸುತ್ತಿದ್ದ ಬೆಂಕಿಯ ಬಣ್ಣದ ಹಾಗೆ ಕೆಂಪಾಗಿದ್ದ ಶಿಲೆಯನ್ನು ಕಂಡರು. ತಮಗೆ ಅಷ್ಟೇ ಆಯುಷ್ಯವಿರುವುದೆಂಬುದನ್ನು ತಿಳಿದು ಪಂಚನಮಸ್ಕಾರಾದಿ ಕ್ರಿಯೆಗಳನ್ನು ಮಾಡಿ, ನಾಲ್ಕು ವಿಧದ ಆಹಾರವನ್ನೂ ಶರೀರವನ್ನೂ ಜೀವವಿರುವವರೆಗೂ ಬಿಡಲು ನಿಶ್ಚಯಿಸಿ ಕಾದು ಕೆಂಪಾಗಿದ್ದ ಯೋಗದ ಶಿಲಾಪೀಠವನ್ನೇರಿ ದೇಹತ್ಯಾಗ ಮಾಡಿದರು. ಜ್ಯೇಷ್ಠಮಾಸದ ಬಿಸಿಲನ್ನೂ ಜಳವನ್ನೂ ಸೆಖೆಯನ್ನೂ ಬೆಂಕಿಯನ್ನೂ ಸಹಿಸಿ ನೀರಿನೊಳಗೆ ಇರುವಂತಿದ್ದು, ಶುಕ್ಲಧ್ಯಾನ ಮಾಡಿ, ಎಂಟು ಕರ್ಮಗಳನ್ನೂ ನಾಶಮಾಡಿ ಮೋಕ್ಷಕ್ಕೆ ಹೋದರು. ಆ ಮೇಲೆ ಪ್ರದ್ಯೋತ ಋಷಿ ಸಮ್ಯಗ್ದರ್ಶನ-ಸಮ್ಯಗ್‌ಜ್ಞಾನ-ಸಮ್ಯಕ್ ಚಾರಿತ್ರಗಳನ್ನು ಆಚರಿಸಿ ಸ್ವರ್ಗದಲ್ಲಿ ಹುಟ್ಟಿದನು. ಬೇರೆ ಯಾರೇ ಆಗಲಿ, ಸಹಜವಾಗಿ ರತ್ನತ್ರಯವನ್ನು ಆಚರಿಸತಕ್ಕ ಭವ್ಯಜನರು ವೃಷಭಸೇನ ಮುನಿಗಳನ್ನು ತಮ್ಮ ಮನಸ್ಸಿನಲ್ಲಿ ಭಾವಿಸಿಕೊಂಡು-ಝಳ, ಬೆಂಕಿ, ಸುಡುವಿಕೆ, ಉಷ್ಣ, ಶೀತ, ಗಾಳಿ, ನೋವು, ಹಸಿವು, ಬಾಯಾರಿಕೆ-ಮುಂತಾಗಿರುವ ಇಪ್ಪತ್ತೆರಡು ವಿಧದ ಪರೀಷಹಗಳನ್ನು ಸಹಿಸಿ, ಶುಭಪರಿಣಾಮದಿಂದ ಸಮ್ಯಗ್ ದರ್ಶನ-ಜ್ಞಾನ-ಚಾರಿತ್ರಗಳನ್ನು ಸಾಧನೆಮಾಡಿ, ಸ್ವರ್ಗ-ಮೋಕ್ಷ ಸುಖಗಳನ್ನು ಪಡೆಯುವಂತಾಗಲಿ!

# ೧೧. ಕಾರ್ತಿಕ ಋಷಿಯ ಕಥೆ

ಅಗ್ನಿರಾಜನ ಮಗನಪ್ಪ ಕಾರ್ತಿಕ ಋಷಿಯ ಕಥೆಯಂ ಪೇೞ್ವೆಂ :

ಗಾಹೆ॥ ರೋಹೇದಯಮ್ಮಿ ಸತ್ತೀಏ ಹದೋ ಕೊಂಚೇಣ ಅಗ್ಗಿದಯಿದೋ ವಿ
ತವ್ವೇದಣಮಧಿಯಾಸಿಯ ಪಡಿವಣ್ಣೋ ಉತ್ತಮಂ ಅಟ್ಠಂ ॥

[ರೋಹೇದಯಮ್ಮಿ–ರೋಹೇದಕವೆಂಬ ಪೊೞಲೊಳ್, ಸತ್ತೀಏಹದೋ–ಶಕ್ತಿಯೆಂಬಾ ಯುಧದಿಂದಿಱಿಯೆ ಪಟ್ಟೊನಾಗಿ, ಕೊಂಚೇಣ–ಕ್ರೌಂಚನೆಂಬರಸಿನಿಂದಂ, ಅಗ್ಗಿದಯಿದೋ ವಿ–ಅಗ್ನಿರಾಜನ ಕಾದಲಿಸೆ ಪಡುವ ಮಗಃ, ತವ್ವೇದಣಂ–ಆ ವೇದನೆಯಂ, ಅಧಿಯಾಸಿಯ–ಲೇಸಾಗಿ ಸೈರಿಸಿ, ಪಡಿವಣ್ಣೋ–ಪೊರ್ದಿದೊರ್ಗಂ, ಉತ್ತಮಂ ಅಟ್ಠಂ–ಮಿಕ್ಕ ದರ್ಶನ ಜ್ಞಾನ ಚಾರಿತ್ರಂಗ ಳಾರಾಧನೆಯಂ ] ಅದೆಂತೆಂದೊಡೆ : ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ಲಾಳವಿಷಯ ದೊಳ್ ಕೃತ್ತಿಕಾಪುರಮೆಂಬುದು ಪೊೞಲದನಾಳ್ವೊನಗ್ನಿರಾಜನೆಂಬರಸನಾತನ ಮಹಾದೇವಿ ವೀರಮತಿಯೆಂಬೊಳಾಯಿರ್ವರ್ಗ್ಗಂ ಮಕ್ಕಳ್ ಬಂಧುಮತಿ ಶಿವಸೇನೆ ಶ್ರೀಮತಿ •ಸ್ವಯಂಪ್ರಭೆ ಲಕ್ಷ್ಮೀಮತಿ ಕೃತ್ತಿಕೆಯೆಂದಿಂತಱುವರ್ ಪೆಣ್ಗೂಸುಗಳಂತವರ್ಗ್ಗಳಿಷ್ಟವಿಷಯ ಕಾಮಭೋಗಂ ಗಳನನುಭವಿಸುತ್ತಂ ಕಾಲಂ ಸಲೆ ಮತ್ತೊಂದು ದಿವಸಂ ಫಾಲ್ಗುಣಮಾಸದ ನಂದೀಶ್ವರದಂದಱು ವರುಂ ಕೊಡಗೂಸುಗಳುಪವಾಸಂಗೆಯ್ದು ಬಸದಿಗರ್ಚನೆಯಂ ಕೊಂಡು ಪೋಗಿ ದೇವರನರ್ಚಿಸಿ

ಅಗ್ನಿರಾಜನ ಮಗನಾದ ಕಾರ್ತಿಕ ಋಷಿಯ ಕಥೆಯನ್ನು ಹೇಳುವೆನು : [ರೋಹೇದಕ ವೆಂಬ (ಕೋಗಳಿ ಎಂಬ) ಪಟ್ಟಣದಲ್ಲಿ ಅಗ್ನಿ ರಾಜನ ಪ್ರೀತಿಯ ಮಗನು ಕ್ರೌಂಚನೆಂಬ ರಾಜನಿಂದ ಶಕ್ತಿಯೆಂಬ ಆಯುಧದಿಂದ ತಿವಿಯಲ್ಪಟ್ಟವನಾಗಿ ಆ ವೇದನೆಯನ್ನು ಲೇಸಾಗಿ ಸಹಿಸಿಕೊಂಡು ಶ್ರೇಷ್ಠವಾದ ದರ್ಶನ- ಜ್ಞಾನ–ಚಾರಿತ್ರಗಳ ಆರಾಧನೆಯನ್ನು ನಡೆಸಿದನು] ಅದು ಹೇಗೆಂದರೆ : ಈ ಜಂಬೂದ್ವೀಪದ ಭರತ ಕ್ಷೇತ್ರದಲ್ಲಿರುವ ಲಾಳ ದೇಶದಲ್ಲಿ ಕೃತ್ತಿಕಾ ಪುರ ಎಂಬ ಪಟ್ಟಣವಿದೆ. ಅದನ್ನು ಅಗ್ನಿರಾಜನೆಂಬ ಅರಸನು ಆಳುತ್ತಿದ್ದನು. ಅವನ ರಾಣಿ ವೀರಮತಿಯೆಂಬವಳು. ಆ ದಂಪತಿಗಳಿಗೆ ಬಂಧುಮತಿ, ಶಿವಸೇನೆ, ಶ್ರೀಮತಿ, ಸ್ವಯಂಪ್ರಭೆ, ಲಕ್ಷ್ಮೀಮತಿ, ಕೃತ್ತಿಕೆ–ಎಂದು ಈ ರೀತಿಯಾಗಿ ಆರು ಮಂದಿ ಹೆಣ್ಣು ಮಕ್ಕಳಿದ್ದರು. ಅಂತು ಅವರು ತಮ್ಮ ಪ್ರೀತಿಯ ವಿಷಯದ ಮೆಚ್ಚುಗೆಯ ಸುಖಗಳನ್ನು ಅನುಭವಿಸುತ್ತಿದ್ದರು. ಹೀಗೆಯೇ ಕಾಲ ಕಳೆಯಿತು. ಅನಂತರ ಒಂದು ದಿವಸ ಫಾಲ್ಗುಣ ಮಾಸದ ನಂದೀಶ್ವರವೆಂಬ ಹಬ್ಬದ ದಿವಸ ಆ ಆರು ಮಂದಿ ಕನ್ಯೆಯರೂ ಉಪವಾಸವನ್ನು ಆಚರಿಸಿದರು. ಜಿನಾಲಯಕ್ಕೆ ಪೂಜಾವಸ್ತುಗಳನ್ನು ತೆಗೆದುಕೊಂಡು ಹೋಗಿ ದೇವರನ್ನು ಪೂಜಿಸಿ ನಂದೀಶ್ವರದ ಹಬ್ಬವನ್ನು ಮಾಡಿ ವಂದಿಸಿದರು. ಋಷಿಗಳನ್ನು ಗುರುಗಳ ತ್ತಾ

ನಂದೀಶ್ವರಂಗೆಯ್ದು ಬಂದಿಸಿ ರಿಸಿಯರ್ಕಳುಮಂ ಗುರುಪರಿವಿಡಿಯಿಂ ವಂದಿಸಿ ವ್ರತಂಗಳನೇಱಿಸಿ ಕೊಂಡು ಸಿದ್ಧ ಶೇಷೆಯುಂ ಕೊಂಡು ಬಂದು ತಾಯ್ಗಂ ತಂದೆಗಂ ಕೊಟ್ಟು ಪೋಪಾಗಳರಸಂ ಕಿಱಿಯ ಮಗಳಪ್ಪ ಕೃತ್ತಿಕೆಯ ರೂಪುಂ ತೇಜಮುಂ ಗಾಡಿಯುಮಂ ಕಂಡಾಕೆಗಾಟಿಸಿ ಸಾಮಂತ ಮಹಾಸಾಮಂತರ್ಕಳ್ಗಂ ಪರಿವಾರಕ್ಕಂ ಮಂತ್ರಿವರ್ಗಕ್ಕಂ ವೀರಮತಿ ಮಹಾದೇವಿಗ ಮೆಲ್ಲ ಸಮಯಿಗಳ್ಗಂ ಬೞಿಯಟ್ಟಿ ಬರಿಸಿಯರಸನಿಂತೆಂದನೆನ್ನಾಳ್ವ ಮಂಡಳಂಗಳೊಳ್ ಪುಟ್ಟಿದ ಲೇಸಪ್ಪ ವಸ್ತುವಾರ್ಗಕ್ಕುಮೆಂದು ಬೇಱೆವೇಱೆಯರಸನನಿಬರುಮಂ ಬೆಸಗೊಂಡೊಡವರ್ಗ್ಗ ಳೆಲ್ಲಮಿಂತೆಂದರೊಳ್ಳಿತಪ್ಪಾನೆಯುಂ ಕುದುರೆಯುಂ ಮುತ್ತುಂ ಮಾಣಿಕಮುಂ ಸ್ತ್ರೀರತ್ನಮುಂ ಮೊದಲಾಗೊಳ್ಳಿತಪ್ಪುಗ್ಗಳ ವಸ್ತುವೆಲ್ಲಂ ಪೃಥ್ವಿಯನಾಳ್ವೋಂಗಕ್ಕುಮೆಂದು ಪೇೞ್ದೊಡರಸಂ ಋಷಿಯರುಮಂ ಬೆಸಗೊಂಡೊಡೆ ಋಷಿಯರೆಂದರಾವ ವಸ್ತು ಪೇೞಿಂ ಪೇೞ್ದೊಡೆ ತಕ್ಕುದು ತಗದುದುಮನಱಿಯಲಕ್ಕುಮೆಂದೊಡರಸನಿಂತೆಂದನಿವರೆಲ್ಲರ ಪೇೞ್ವಂತು ಪೇೞ್ವರಲ್ಲರೊಡಂ ಬಡುವರಲ್ಲರ್ ಬಹುಪ್ರಳಾಪಿಗಳಿವರಂ ಪೊೞಲಿಂದಟ್ಟಿ ಕಳೆಯಿಮೆಂದಟ್ಟಿ ಕಳೆದುೞಿದರೆಲ್ಲರುಮಂ ಬೆಸಗೊಂಡೊಡನಿಬರುಮೊಡಂಬಟ್ಟೊಳ್ಳಿತ್ತಪ್ಪ ವಸ್ತು ನಿನಗಕ್ಕುಮೆಂದೊಡೆ ಅರಸನೆನಗಕ್ಕುಂ

ತಮ್ಮಕ್ಕೆ ಅನುಗುಣವಾದ ಅನುಕ್ರಮದಿಂದ ವಂದಿಸಿ, ವ್ರತಗಳನ್ನು ಸ್ವೀಕರಿಸಿ ಪೂಜೆ ಮಾಡಿದ ಹೂ ಮುಂತಾದ ಪ್ರಸಾದವನ್ನು ತೆಗೆದುಕೊಂಡು ಬಂದು ತಾಯಿತಂದೆಯರಿಗೆ ಕೊಟ್ಟು ಹೋಗುವಾಗ ರಾಜನು ಕಿರಿಮಗಳಾದ ಕೃತ್ತಿಕೆಯ ರೂಪ, ಕಾಂತಿ, ಚೆಲುವು ಗಳನ್ನು ಕಂಡು ಆಕೆಯ ಮೇಲೆ ಪ್ರೀತಿ ಪಟ್ಟನು. ಸಾಮಂತರಿಗೂ ಮಹಾಸಾಮಂತರಿಗೂ ಪರಿವಾರದವರಿಗೂ ಮಂತ್ರಿಗಳ ಸಮೂಹಕ್ಕೂ ವೀರಮತಿ ಮಹಾರಾಣಿಗೂ ಎಲ್ಲ ಮತ ಧರ್ಮದವರಿಗೂ ದೂತರನ್ನು ಕಳುಹಿಸಿ ಅವರನ್ನೆಲ್ಲ ಬರಮಾಡಿ, ರಾಜನು ಹೀಗೆ ಹೇಳಿದನು– "ನಾನು ರಾಜ್ಯಭಾರ ಮಾಡತಕ್ಕ ಪ್ರದೇಶಗಳಲ್ಲಿ ಹುಟ್ಟಿ ಬಂದ ಶ್ರೇಷ್ಠವಾದ ವಸ್ತು ಯಾರಿಗೆ ಸೇರಬೇಕಾದುದು ?" ಎಂದು ಬೇರೆ ಬೇರೆಯಾಗಿ ರಾಜನು ಅವರೆಲ್ಲರನ್ನೂ ಕೇಳಿದನು". ಆಗ ಅವರೆಲ್ಲ ಹೀಗೆ ಉತ್ತರ ಕೊಟ್ಟರು–"ಒಳ್ಳೆಯದಾದ ಆನೆಯೂ ಕುದುರೆಯೂ ಮುತ್ತೂ ಮಾಣಿಕ್ಯವೂ ಸ್ತ್ರೀರತ್ನ ಮುಂತಾದ ಒಳ್ಳೆಯದಾದ ಶ್ರೇಷ್ಠ ವಸ್ತುಗಳೆಲ್ಲವೂ ಭೂಮಿಯನ್ನು ಆಳತಕ್ಕವನಿಗೆ ಸೇರಬೇಕಾದುವು" ಎಂದು ಹೇಳಿದಾಗ ರಾಜನು ಋಷಿಗಳನ್ನು ಕೇಳಿದನು. ಆಗ ಅವರು–"ಯಾವ ವಸ್ತುವೆಂಬುದನ್ನು ಹೇಳಿದರೆ ಯೋಗ್ಯವಾದುದು ಯಾವುದು, ಯೋಗ್ಯವಲ್ಲದುದು ಯಾವುದು ಎಂಬುದನ್ನು ತಿಳಿದು ಕೊಳ್ಳಬಹುದು" ಎಂದು ಹೇಳಿದರು. ಆಗ ರಾಜನು–"ಈ ಋಷಿಗಳು ಇವರೆಲ್ಲ ಹೇಳುವಂತೆ ಹೇಳುವವರಲ್ಲ, ಒಪ್ಪುವವರೂ ಅಲ್ಲ. ಬಹಳ ಮಾತಾಡುವವರು! ಇವರನ್ನು ಪಟ್ಟಣದಿಂದ ಓಡಿಸಿ ಬಿಡಿ" ಎಂದು ಆಜ್ಞಾಪಿಸಿ ಓಡಿಸಿದನು. ಆ ಮೇಲೆ ಉಳಿದವರನ್ನೆಲ್ಲ ಕೇಳಲು ಅವರೆಲ್ಲರೂ ಒಪ್ಪಿದವರಾಗಿ "ಒಳ್ಳೆಯದಾದ ವಸ್ತು ನಿನಗೇ ಆಗಬೇಕಾದುದು ನಿಶ್ಚಯ" ಎಂದು ನೂರಾರು ಬಾರಿ ಘೋಷಿಸಿ ಹೇಳಿ ಒಪ್ಪಿಗೆ ಒಪ್ಪಿಗೆ ಪಡೆದನು, ವೀರಮತಿ

ವಲವೊಂದು ಮೂಱು ಸೂೞ್ವರಂ ಸಾರಿ ನುಡಿದೊಡಂಬಡಿಸಿ ವೀರಮತಿ ಮಹಾದೇವಿಯುಂ ಬೇಡಿ ಕೃತ್ತಿಕೆಯುಪ್ಪ ಕಿಱಿಯ ಮಗಳಂ ಮದುವೆನಿಂದೊನಾ ದಿವಸಮೆ ವೀರಮತಿ ಮಹಾದೇವಿಯುಂ ಬ್ರಹ್ಮಚರ್ಯವ್ರತಮಂ ಕೈಕೊಂಡು ನೆಗೞ್ದಳ್ ಮತ್ತೆ ಕೃತ್ತಿಕೆಗೆ ನವಮಾಸಂ ಗರ್ಭಮಾದಂದು ಸರವಣಮೆಂಬುದ್ಯಾನವನದೊಳಗಣ ಸರವಣಮೆಂಬ ಬಾವಿಯೊಳ್ ಜಲಕ್ರೀಡೆಯಾಡಲ್ ಬಯಕೆಯಾದುದೆಂದರಸಂಗಱಿಪಿದೊಡರಸನನುಮತದಿಂ ಜಲಕ್ರೀಡೆಯಾಡಿ ಮಗನಂ ಪೆತ್ತೊಡಾತಂಗೆ ಸ್ವಾಮಿ ಕಾರ್ತಿಕನೆಂದು ಪೆಸರನಿಟ್ಟರ್ ಮತ್ತಾತನಿಂ ಬೞಿಯುಂ ಪೆಣ್ಗೂಸುಮಂ ಪೆತ್ತೊಡೆ ಆಕೆಗೆ ವೀರಶ್ರೀಯೆಂದು ಪೆಸರನಿಟ್ಟು ಬಳೆದೊಡಾಕೆಯುಂ ಕೋಗಳಿಯನಾಳ್ವ ಕ್ರೌಂಚನೆಂಬರಸಂಗೆ ಕೊಟ್ಟರಿಂತು ಕಾಲಂ ಸಲೆ ಮತ್ತಿತ್ತ ನವಿ ಮೊದಲಾಗೊಡೆಯ ತಮ್ಮಂದಿರಪ್ಪ ಕುಮಾರರೊಡನೆ ಸ್ವಾಮಿ ಕಾರ್ತಿಕಂ ಬಳೆದು ಪದಿನಾಱು ವರುಷದ ಪ್ರಾಯಮಾದಂದು ಮತ್ತೊಂದು ದಿವಸಮನಿಬರುಂ ಕುಮಾರರ್ಕಳುದ್ಯಾನವನಕ್ಕೆ ವನಕ್ರೀಡೆಯಾಡಲ್ ಪೋಗಿಯಾಡುತಿರ್ಪನ್ನೆಗಮೆಲ್ಲಾ ಕುಮಾರರ್ಕಳ್ಗಂ ತಾಯ್ತಂದೆಯಜ್ಜರ್ಕಳ ಮನೆಯಿಂದಂ ಪೂಸಲುಮುಡಲುಂ ತುಡಲುಂ ಪೂವುಂ ತಂಬುಲಮುಂ ತಿಂಬಡಂಗಳುಂ ಬಂದವು ಸ್ವಾಮಿ ಕಾರ್ತಿಕಂಗಾರುಮಟ್ಟದಿರ್ದೊಡೆ ಮನದೊಳ್ ಬೞ್ದಿದೊನಾಗಿ ವನಕ್ರೀಡೆಯನಾಡಿ ಮನೆಗೆ

ಮಹಾರಾಣಿಯನ್ನೂ ಕೇಳಿಕೊಂಡು ಕೃತ್ತಿಕೆ ಎಂಬ ಹೆಸರುಳ್ಳವಳಾದ ಕಿರಿಯ ಮಗಳನ್ನು ಮದುವೆ ಮಾಡಿಕೊಂಡನು. ಅದೇ ದಿವಸ ವೀರಮತಿ ಮಹಾರಾಣಿ ಬ್ರಹ್ಮಚರ್ಯವ್ರತವನ್ನು ಸ್ವೀಕರಿಸಿ ಆಚರಿಸಿದಳು. ಆ ಮೇಲೆ ಕೃತ್ತಿಕೆಗೆ ಒಂಬತ್ತು ತಿಂಗಳ ಗರ್ಭವಾಗಲು "ಸರವಣ ಎಂಬ ಹೂದೋಟದ ಒಳಗಿರುವ ಸರವಣವೆಂಬ ಬಾವಿಯಲ್ಲಿ ತನಗೆ ಜಲಕೇಳಿಯಾಡಲು ಬಯಕೆಯಾಗಿದೆ" ಎಂದು ಅವಳು ರಾಜನಿಗೆ ತಿಳಿಸಿದಳು. ರಾಜನ ಒಪ್ಪಿಗೆಯಂತೆ ಕೃತ್ತಿಕೆ ನೀರಿನಲ್ಲಿ ಆಡಿ ಮಗನನ್ನು ಹೆತ್ತಳು. ಅವನಿಗೆ ಕಾರ್ತಿಕನೆಂದು ಹೆಸರನ್ನಿಟ್ಟರು. ಅವನ ನಂತರ ಕೃತ್ತಿಕೆ ಹೆಣ್ಣುಮಗುವನ್ನು ಹೆತ್ತಳು. ಆ ಮಗುವಿಗೆ ವೀರಶ್ರೀ ಎಂದು ಹೆಸರಿಟ್ಟರು. ಆಕೆ ದೊಡ್ಡವಳಾಗಲು ಅವಳನ್ನು ಕೋಗಳಿ ಎಂಬ ಐನೂರು ಗ್ರಾಮಗಳುಳ್ಳ ಪಟ್ಟಣವನ್ನು ಆಳತಕ್ಕ ಕ್ರೌಂಚನೆಂಬ ರಾಜನಿಗೆ ಕೊಟ್ಟರು. ಹೀಗೆಯೇ ಕಾಲ ಕಳೆಯಿತು. ಇತ್ತ ಕಾರ್ತಿಕನು ನವಿ ಮುಂತಾಗಿರುವ ತನಗೆ ತಮ್ಮಂದಿರಾದ ಕುಮಾರರೊಂದಿಗೆ ಬಳೆಯುತ್ತ ಹದಿನಾರು ವರ್ಷ ಪ್ರಾಯದವನಾದನು. ಆ ಮೇಲೆ ಒಂದು ದಿವಸ ಆ ಎಲ್ಲಾ ಕುಮಾರರೂ ಉದ್ಯಾನದ ವನಕ್ಕೆ ವನಕೇಳಿಯನ್ನು ಆಡುವುದಕ್ಕಾಗಿ ಹೋಗಿ ಆಡುತ್ತಿದ್ದರು. ಆಗ ಎಲ್ಲಾ ಕುಮಾರರಿಗೂ ಅವರ ತಾಯಿ ತಂದೆಗಳ ಮತ್ತು ಅಜ್ಜಂದಿರ ಮನೆಯಿಂದ ಮೈಗೆ ಹಚ್ಚಲು, ಉಡಲು, ತೊಡಲೂ ಪುಷ್ಪ ತಾಂಬೂಲ ಖಾದ್ಯವಸ್ತುಗಳು ಬಂದವು. ಕಾರ್ತಿಕನಿಗೆ ಮಾತ್ರ ಯಾರು ಕಳುಹಿಸಿರಲಿಲ್ಲ ಇದರಿಂದ ಅವನು ಮನಸ್ಸಿನಲ್ಲಿ ಸತ್ತವನಾದನು (ಸಾಯುವಷ್ಟು ದುಃಖಿತನಾದನು). ವನಕೇಳಿಯನ್ನಾಡಿ ಮನೆಗೆ ಬಂದನು. ತನ್ನ ತಾಯಿಯೊಡನೆ–"ಅಮ್ಮಾ, ನಿಮ್ಮ, ತಂದೆ

ವಂದು ತಾಯುನಿಂತೆಂದನಬ್ಬಾ ನಿಮ್ಮತಂದೆಯಪ್ಪೆಮ್ಮಜ್ಜನೊಳನೊ ಇಲ್ಲೆಯೊ ಎಂದು ಬೆಸ
ಗೊಂಡೊಡೆ ತಾಯ್ ಮನದೊಳ್ ಬೞ್ದಿದೊಳಾಗಿ ಏನಂ ಪೇೞ್ವೆಂ ಮಗನೆ ನಿನಗೆ ತಂದೆ
ಯಪ್ಪಾತನೆನಗಂ ತಂದೆಯೆಂದು ಪೇೞ್ದೊಡದಂ ಕೇಳ್ದು ಅದುವೆ ವೈರಾಗ್ಯಕಾರಣವಾಗಿ ಶ್ರೀವರ
ರೆಂಬಾಚಾರ್ಯರ ಪಕ್ಕದೆ ತಪಂಬಟ್ಟಾಗಮಂಗಳೆಲ್ಲಮಂ ಕಲ್ತು ಗುರುಗಳಂ ಬೆಸಗೊಂಡವರನು
ಮತದಿಂದೇಕವಿಹಾರಿಯಾಗಿ ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾ
ಮುಖಂಗಳಂ ವಿಹಾರಿಸುತ್ತಂ ತೆಂಕನಾಡ ಕಿಷ್ಕಿಂಧಮೆಂಬ ಪರ್ವತಮನೆಯ್ದಿಯದಱ ಮೇಗೆ ರಾತ್ರಿ
ಪ್ರತಿಮಾಯೋಗಂ ಗೆಯ್ದೊರಾ ಇರುಳ್ ಪಿರಿದೊಂದು ಮೞೆ ಕೊಂಡು ಮೆಯ್ಯ ಮಳಮೆಲ್ಲಮಂ
ಕರ್ಚಿಕಳೆದು ಪಾಷಾಣಮೆಂಬ ಮಡುವಂ ನೀರ್ ಪೊಕ್ಕಾಗಳಾ ಮಡುವಿನ ನೀರ್ ಸರ್ವೌಷಧಿ
ಯಾದೊಡಂತಲ್ಲಿಯ ನೀರಂ ಮಿಂದವರ್ಗೆಲ್ಲಾ ವ್ಯಾಧಿಯುಂ ಕಿಡುವುವಾದುವಲ್ಲಿಂ ತೊಡಗಿ
ದಕ್ಷಿಣಾಪಥದೊಳದು ತೀರ್ಥಮಾಯ್ತು ಮತ್ತೆ ಸ್ವಾಮಿ ಕಾರ್ತಿಕಋಷಿಯುಂ ವಿಹಾರಿಸುತ್ತಂ
ಬಂದು ಕೋಗಳಿಯನೆಯ್ದಿಯಲ್ಲಿಯ ಬಸದಿಯೊಳ್ ಪಂಥಾತಿಚಾರನಿಯಮಮಂ ಗೆಯ್ದು ದೇವರಂ

ಯಾಗಿರುವ ನನ್ನ ಅಜ್ಜನು ಇರುವನೋ? ಇಲ್ಲವೊ?" ಎಂದು ಕೇಳಿದನು. ಆಗ ತಾಯಿ
ತನ್ನ ಮನಸ್ಸಿನಲ್ಲಿ ಸತ್ತವಳಾದಂತೆ ದುಃಖಿತಳಾಗಿ–" ಮಗನೇ, ಏನು ಹೇಳಲಿ! ನಿನಗೆ
ತಂದೆಯಾಗಿರುವವನು ನನಗೂ ತಂದೆಯಾಗಬೇಕು" ಎಂದು ಹೇಳಿದಳು. ಅದನ್ನು
ಕೇಳಿದ ಕಾರ್ತಿಕನಿಗೆ ಅದೇ ಸಂಗತಿ ವೈರಾಗ್ಯಕ್ಕೆ ಕಾರಣವಾಯಿತು. ಅವನು ಶ್ರೀವರರೆಂಬ
ಆಚಾರ್ಯರ ಬಳಿಗೆ ಹೋಗಿ, ಅವರಿಂದ ತಪಸ್ಸನ್ನು ಕೈಗೊಂಡು ಶಾಸ್ತ್ರಗಳೆಲ್ಲವನ್ನೂ ಕಲಿತು
ಕೊಂಡನು. ಗುರುಗಳಿಂದ ಅನುಮತಿಯನ್ನು ಪಡೆದುಕೊಂಡು ಏಕವಿಹಾರಿ (ಒಬ್ಬನೇ
ಸಂಚಾರ ಮಾಡುವ ಋಷಿ) ಯಾಗಿ, ಈ ಕಾರ್ತಿಕ ಋಷಿಗಳು ಗ್ರಾಮ ನಗರ ಖೇಡ
ಖರ್ವಡ ಮಡಂಬ ಪತ್ತನ ದ್ರೋಣಾಮುಖಗಳಲ್ಲಿ ಸಂಚರಿಸುತ್ತ ತೆಂಕನಾಡಿನ ಕಿಷ್ಕಿಂಧ
ಪರ್ವತಕ್ಕೆ ಬಂದರು. ಆ ಪರ್ವತದ ತುದಿಯಲ್ಲಿ ರಾತ್ರಿಯಲ್ಲಿ ಪ್ರತಿಮಾಯೋಗವನ್ನು
ಆಚರಿಸಿದರು. ಆ ರಾತ್ರಿಯಲ್ಲಿ ದೊಡ್ಡದೊಂದು ಮಳೆ ಬಂದು ಕಾರ್ತಿಕಋಷಿಯ ಮೈ
ಮೇಲಿನ ಕೆಸರನ್ನೆಲ್ಲ ತೊಳೆದುಕೊಂಡು ಹರಿದು, ಆ ನೀರು ಪಾಷಾಣವೆಂಬ ಮಡುವನ್ನು
ಹೊಕ್ಕಿತು. ಆಗ ಆ ಮಡುವಿನ ನೀರು ಸಕಲ ರೋಗಗಳಿಗೂ ಔಷಧಿಯಾಗಿ ಪರಿಣಮಿ
ಸಿತು. ಅಂತೂ ಅಲ್ಲಿಯ ನೀರಿನಲ್ಲಿ ಸ್ನಾನಮಾಡಿದವರಿಗೆ ಎಲ್ಲ ತರದ ರೋಗಗಳೂ
ನಾಶವಾಗುವಂತಾದುವು. ಅಂದಿನಿಂದ ಆ ಮಡು ದಕ್ಷಿಣ ದೇಶದಲ್ಲಿ ತೀರ್ಥವಾಯಿತು.
ಆ ಮೇಲೆ ಸ್ವಾಮಿ ಕಾರ್ತಿಕಋಷಿಗಳು ಸಂಚಾರಮಾಡುತ್ತ ಬಂದು ಕೋಗಳಿಗೆ
ಹೋದರು. ಅಲ್ಲಿಯ ಜಿನಾಲಯದಲ್ಲಿ ಪಂಥಾತಿಚಾರ ನಿಯಮವನ್ನು (ಚರಿಗೆಯಿಂದ
ಹಿಂದಿರುಗಿ ದಾರಿಯಲ್ಲಾಗಿದ್ದ ಅತಿಚಾರಗಳ ಶುದ್ಧಿಗಾಗಿ ಆಚರಿಸುವ ನಿಯಮವನ್ನು)
ಮಾಡಿ ದೇವರನ್ನು ವಂದಿಸಿ ಮಧ್ಯಾಹ್ನ ವೇಳೆ ಭಿಕ್ಷೆಗೆ ಹೋಗಿ. ನಾಲ್ಕೂ ವರ್ಣದ

ಬಂದಿಸಿ ಮಧ್ಯಾಹ್ನದಾಗಳ್ ಚರಿಗೆವೊಕ್ಕು ಚಾತುರ್ವರ್ಣ್ಯದ ಮನೆಗಳುಮಂ ತೊಳಲುತ್ತಂ ಬಂದರಮನೆಯುಮಂ ಪೊಕ್ಕಾಗಳಾ ಪ್ರಸ್ತಾವದೊಳ್ ಕರುಮಾಡದ ಮೇಗಣ ನೆಲೆಯೊಳಿರ್ದು ವೀರಶ್ರೀ ಮಹಾದೇವಿಯುಮರಸನ ತಲೆಯಂ ತನ್ನ ತೊಡೆಯ ಮೇಲಿಟ್ಟುಗುರಿಸುತಿರ್ದ್ದಾಕೆ ಭಟಾರರ ಬರವಂ ಕಂಡಱಿದೆಮ್ಮಣ್ಣಂಗಳಪ್ಪ ಭಟಾರರ್ ಚರಿಗೆವಂದಪ್ಪೊರೆಂದು ಮಱಲುಂದಿದರಸನ ತಲೆಯುಂ ಕೆಳಗೊಂದಾಧಾರಮನಿಟ್ಟು ನಿಱಿಸಲೆಂದು ಕರುಮಾಡದಿಂದಿೞಿದು ಪರಿತರ್ಪನ್ನೆಗಂ ಭಟಾರರ್ ವಂದರಮನೆಯಂಗಣಮಂ ಪೊಕ್ಕು ಮಗುಟ್ದು ಪೋಗಿ ಬಾಗಿಲ್ವಾಡಮನೆಯ್ದಿದಾಗಳರಸಿ ಪೆಱಗಣಿಂ ಪರಿತಂದು ಬಂದು ಮುಂದೆ ನಿಂದು ಕೈಗಳಂ ಮುಗಿದೆಱಗಿ ನಿಲ್ಕೆ ಭಟಾರಾ ಎಂದು ನಿಱಿಸಿದೊಡೆ ಭಟಾರರೆಂದರಬ್ಬಾ ಮನೆಯುಂ ಪೊಕ್ಕು ಬಂದೆಮಿನ್ನೆಮಗೆ ನಿಲಲಾಗದೆಂದೊಡರಸಿಯುಮಿಂತೆಂದಳ್ ಭಟಾರಾ ನೀಮೆನಗೆ ದಯೆಗೆಯ್ದು ವೋಘಂ ನಿಲ್ವೇಟ್ಕುಮೆಂದು ಪೋಗಲೀಯದೆ ಕಾಲಂ ಪಿಡಿದು ತಾಂಗುತ್ತಿರ್ಪನ್ನೆಗಮ್ ಇತ್ತಲರಸನೆೞ್ಚತ್ತು ದೆಸೆಗಳಂ ನೋಡಿಯರಸಿಯುಂ ಕಾಣದರಸಿಯೆಲ್ಲಿರ್ದಳೆಂದು ಕೆಲದವರಂ ಬೆಸಗೊಂಡೊಡವರೆಂದರರಸಿಯೊರ್ವ ಸವಣಂ ಬಂದೊಡಾತನಂ ಕಂಡು ಕರುಮಾಡದಿಂದಿೞಿದು ಪರಿದು

(ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರ) ಮನೆಗಳಿಗೆ ಸುತ್ತುತ್ತ ಬಂದು, ಅರಮನೆಯನ್ನು ಹೊಕ್ಕರು. ಆ ಸಂದರ್ಭದಲ್ಲಿ ಅರಮನೆಯ ಮೇಲುಪ್ಪರಿಗೆಯಲ್ಲಿದ್ದುಕೊಂಡು ವೀರಶ್ರೀ ಮಹಾರಾಣಿ ರಾಜನ ತಲೆಯನ್ನು ತನ್ನ ತೊಡೆಯ ಮೇಲೆ ಇಟ್ಟುಕೊಂಡು ಉಗುರಿನಿಂದ ಕೆರೆಯುತ್ತಿದ್ದಳು. ಅವರು ಕಾರ್ತಿಕ ಋಷಿಗಳು ಬಂದುದನ್ನು ಕಂಡು, ತಿಳಿದುಕೊಂಡು, "ನನ್ನ ಅಣ್ಣನವರಾದ ಋಷಿಗಳು ಭಿಕ್ಷೆಗೆ ಬರುತ್ತಿದ್ದಾರೆ" ಎಂದುಕೊಂಡು, ವೈಮರೆತು ನಿದ್ದೆಮಾಡುತ್ತಿರುವ ರಾಜನ ತಲೆಯ ಕೆಳಗೆ ಒಂದು ಆಧಾರವನ್ನಿಟ್ಟು, ಋಷಿಗಳನ್ನು ಭಿಕ್ಷಕ್ಕೆ ನಿಲ್ಲಿಸಬೇಕೆಂದು ಉಪ್ಪರಿಗೆಯಿಂದ ಇಳಿದು ಬರುತ್ತಿದ್ದಳು. ಅಷ್ಟರಲ್ಲಿ ಋಷಿಗಳು ಬಂದು ಅರಮನೆಯ ಅಂಗಳವನ್ನು ಹೊಕ್ಕು, ಹಿಂದಿರುಗಿಹೋಗಿ ಹೊರಬಾಗಿಲ ಕಡೆಗೆ ಹೋಗಿದ್ದರು. ರಾಣಿಯು ಹಿಂದಿನಿಂದ ನಡೆದುಕೊಂಡು ಬಂದು ಅವರ ಮುಂದೆ ನಿಂದು ಕೈಗಳನ್ನು ಮುಗಿದು ಅಡ್ಡಬಿದ್ದು "ಋಷಿಗಳೇ, ಭಿಕ್ಷೆಗೆ ನಿಲ್ಲಿ" ಎಂದು ಹೇಳಿದಾಗ ಅವರು—"ಅವ್ವಾ, ಮನೆಯನ್ನು ಹೊಕ್ಕು ಹಿಂದೆ ಬಂದಾಗಿಹೋಯಿತು. ಇನ್ನು ನಿಲ್ಲಲು ನಮಗೆ ಅಸಾಧ್ಯ" ಎಂದರು. ಆಗ ರಾಣಿ-"ಪೂಜ್ಯರೇ, ನನ್ನಮೇಲೆ ದಯೆಮಾಡಿ ನೀವು ನಿಶ್ಚಯವಾಗಿಯೂ ನಿಲ್ಲಬೇಕು" ಎಂದು ನುಡಿದು ಹೋಗಲಿಕ್ಕೆ ಬಿಡದೆ ಅವರ ಕಾಲನ್ನು ಹಿಡಿದು ತಡೆದಳು. ಅಷ್ಟರಲ್ಲಿ ಇತ್ತ ರಾಜನು ಎಚ್ಚರಗೊಂಡನು. ದಿಕ್ಕುಗಳ ಕಡೆಗೆ ನೋಡಿದಾಗ ರಾಣಿಯನ್ನು ಕಾಣದೆ, 'ರಾಣಿ ಎಲ್ಲಿದ್ದಾಳೆ ?' ಎಂದು ತನ್ನ ಪಕ್ಕದಲ್ಲಿದ್ದವರನ್ನು ಕೇಳಿದನು. ಆಗ ಅವರು—"ರಾಣಿ ಓರ್ವ ಜೈನಸನ್ಯಾಸಿ ಬಂದಾಗ ಅವನನ್ನು ಕಂಡು ಅರಮನೆಯ ಉಪ್ಪರಿಗೆಯಿಂದ ಇಳಿದು ಬಂದು, ಆತನ ಹಿಂದೆ ಹಿಂದೆಯೇ ಹೋಗಿ

ಬೞಿಯುಂ ತಗುೞ್ದು ಬಾಗಿಲ್ ಮಾಡದಲ್ಲಿ ಸವಣನೊಡನಾ ಪೋರುತ್ತಿರ್ಪೊಳ್ ನೋಡಿ ಮೆಂದರಸಂಗೆ ತೋಱಿದೊಡರಸಂ ಕಂಡೆನ್ನನಗಲ್ದು ನಿಚ್ಚಲೀ ಸವಣನಲ್ಲಿಗೆ ಪರಿವಳೆಂದು ಕಿನಿಸಿ ಕರುವಮಾಡದಿಂದಿೞಿದು ರಿಸಿಯರಿರ್ದಲ್ಲಿಗೆವೋಗಿ ಶಕ್ತಿಯೆಂಬಾಯುಧದಿಂದುರಮನುರ್ಚೆಪೋಗಿ ಟ್ಟರಸಿಯುಮಂ ತಲೆನವಿರಂ ಪಿಡಿದು ದಱಿದಱಿನೆೞೆದುಕೊಂಡು ಬಂದಂ ಸ್ವಾಮಿ ಕಾರ್ತಿಕ ಋಷಿಯುಂ ಕ್ಷಮೆಯುಂ ಭಾವಿಸಿ ನೆತ್ತರೊಕ್ಕು ಬಸಮೞಿದು ಬೇಸಗೆಯ ಕಡುವಿಸಿಲಿಂದಂ ಝಳದಿಂದಂ ಬೆಂಕೆಯಿಂದಂ ನೀರೞ್ಕೆಯಧಿಕಮಾಗಿ ತಣ್ಪನೊಳೊಳ್ಳಿತ್ತು ಸಮಾಧಿಯುಕ್ಕು ಮೆಂದು ಮನದೊಳ್ ಬಗೆದಿರ್ದೋರನ್ನೆಗಂ ತಮ್ಮಜ್ಜಿಯಪ್ಪ ವೀರಮತಿ ಮಹಾದೇವಿಬ್ರಹ್ಮ ಚರ್ಯವ್ರತಮಂ ಕೊಂಡು ಕಾಲಂಗೆಯ್ದು ವ್ಯಂತರದೇವತೆಯಾಗಿ ಪುಟ್ಟಿದಾಕೆಗಾಸನಕಂಪ ಮಾಗಿಯಱಿದು ಬಂದು ಭಟಾರಾ ಬೆಸನೇನಿವರೆಲ್ಲರುಮಂ ಕೊಂದಪ್ಪೆನೆಂದೊಡೆ ಭಟಾರರೆಂದ ರಂತೇನುಂ ಬೇಡ ನೀನೆಮ್ಮಂ ತಣ್ಪನೆಡೆಗೆ ಕೊಂಡುಪೋಗೆಂದೊಡೆ ದೇವತೆ ನವಿಲ ರೂಪಿ ನಿಂದೆತ್ತಿಕೊಂಡು ಬೆನ್ನೊಳಿಟ್ಟು ಕೋಗಳಿಯ ಮೂಡಣ ದೆಸೆಯ ಪರ್ವತದ ಕೊಳದ ತಡಿಯೊಳ್ ಲತಾಮಂಟಪದೊಳಿರಿಸಿ ಪೋದೊಡೆ ಬೆಟ್ಟದ ಮೇಗಣಿಂ ಪಾಯ್ತರ್ಪ ನಿರ್ಝರ

ಹೊರಬಾಗಿಲ ಗೋಪುರದಲ್ಲಿ ಆ ಸನ್ಯಾಸಿಯೊಡನೆ ಅದೋ ಹೋರಾಡುತ್ತಿರುವಳು, ನೋಡಿರಿ'' ಎಂದು ರಾಜನಿಗೆ ತೋರಿಸಿದರು. ರಾಜನು ಕಂಡು, "ಈಕೆ ನಿತ್ಯವೂ ನನ್ನನ್ನು ಅಗಲಿ, ಈ ಸವಣನಲ್ಲಿಗೆ ಹೋಗುತ್ತಾಳೆ" ಎಂದು ಕೋಪಗೊಂಡು ಅರಮನೆಯ ಉಪ್ಪರಿಗೆಯಿಂದ ಇಳಿದು ಋಷಿಗಳಿದ್ದಲ್ಲಿಗೆ ಹೋದನು. ಶಕ್ತಿ (ಈಟಿ) ಎಂಬ ಆಯುಧ ದಿಂದ ಅವನ ಎದೆ ಸೀಳಿಹೋಗುವಂತೆ ಹೊಡೆದನು. ಅರಸಿಯ ತಲೆಗೂದಲನ್ನು ಹಿಡಿದು, ಅವಳನ್ನು ದರದರನೆ ಎಳೆದುಕೊಂಡು ಬಂದನು. ಸ್ವಾಮಿ ಕಾರ್ತಿಕಋಷಿ ಕ್ಷಮೆಯನ್ನು ಬಗೆದು, ರಕ್ತ ಹರಿದು ಶಕ್ತಿಕುಂದಿ ಬೇಸಗೆಯ ತೀವ್ರವಾದ ಬಿಸಿಲಿನಿಂದಲೂ ಅದರ ತಾಪದಿಂದಲೂ ಸೆಕೆಯಿಂದಲೂ ಬಾಯಾರಿಕೆ ಹೆಚ್ಚಾಗಲು ತಂಪಾದ ಸ್ಥಳದಲ್ಲಿ ಒಳ್ಳೆಯ ಸಮಾಧಿ ಸ್ಥಿತಿ ಒದಗಿಬರುವುದೆಂದು ಮನಸ್ಸಿನಲ್ಲಿ ಭಾವಿಸಿಕೊಂಡಿದ್ದರು. ಅಷ್ಟರಲ್ಲಿ ತಮ್ಮ ಅಜ್ಜಿಯಾದ ವೀರಮತಿ ಮಹಾದೇವಿ ಬ್ರಹ್ಮಚರ್ಯದ ವ್ರತವನ್ನು ಕೈಗೊಂಡು ಸತ್ತು ವ್ಯಂತರ ದೇವತೆಯಾಗಿ ಹುಟ್ಟಿದ್ದಳು. ಆಕೆ ಕುಳಿತ ಆಸನ ಅಲುಗಾಡಿದುದರಿಂದ ನಡೆದ ಸಂಗತಿಯನ್ನು ತಿಳಿದುಕೊಂಡು ಅವಳು ಬಂದು "ಋಷಿಗಳೇ, ನನಗೆ ಅಪ್ಪಣೆಯೇನು ? ಅಪ್ಪಣೆಕೊಟ್ಟರೆ ಇವರೆಲ್ಲರನ್ನೂ ಕೊಲ್ಲುತ್ತೇನೆ" ಎಂದಳು. ಆಗ ಋಷಿಗಳು—''ಹಾಗೇನೂ ಮಾಡುವುದು ಬೇಡ. ನಮ್ಮನ್ನು ತಂಪಾದ ಸ್ಥಳಕ್ಕೆ ಕೊಂಡೊಯ್ಯು'' ಎಂದರು. ಆ ದೇವತೆ ನವಿಲಿನ ರೂಪದಿಂದ ಋಷಿಗಳನ್ನು ಎತ್ತಿ ಬೆನ್ನಲ್ಲಿಟ್ಟುಕೊಂಡು ಕೋಗಳಿಯ ಪೂರ್ವದಿಕ್ಕಿನ ಪರ್ವತದ ಸರೋವರದ ದಡದಲ್ಲಿ ಬಳ್ಳಿ ಮಂಟಪದಲ್ಲಿಟ್ಟು ತೆರಳಿತು. ಬೆಟ್ಟದ ತುದಿಯಿಂದ ಹರಿದು ಬರುವ ನೀರ ಝರಿಯ

ಶೀಕರಂಗಳಿಂ ಮೆಯ್ಗಾಪ್ಯಾಯನಮಾಗಿ ಸಂನ್ಯಸನಂಗೆಯ್ದು ಶುಭಪರಿಣಾಮದಿಂ ಮುಡಿಪಿ ಸರ್ವಾರ್ಥ ಸಿದ್ಧಿಯೊಳ್ ಮೂವತ್ತುಮೂರು ಸಾಗರೋಪಮಾಯುಷ್ಯಮನೊಡೆಯೊನಹ ಮಿಂದ್ರನಾಗಿ ಪುಟ್ಟಿದೊಂ ಮತ್ತಿತ್ತ ಭಟಾರರ ತಂಗೆಯಪ್ಪ ವೀರಶ್ರೀಯುಂ ಹಾ ಭಟಾರ ಎಂದಿರುಳುಂ ಪಗಲುಂ ಪಲವುದಿವಸಮೊಂದೆ ಪಾಂಗಿನೊಳ್ ಪ್ರಳಾಪಿಸಿ ದುಃಖಿಂಗೆಯ್ಯೆ ಅರಸನು ಮಾತೆಗೆ ಕಂಡನಲ್ಲನಪ್ಪುದಱಿಂದಾದಮಾನುಮುಬ್ಬೆಗಂಬಟ್ಟದ್ರ್ದಿಂತೆಂದನಾರೊರ್ವರರಸಿಯ ಱಿಕ್ಕೆಯುಂ ಮಱಿಸಿ ದುಃಖಮುಂ ಮಱಿಯಿಸುವೊರವರ್ಗೊಸಗೆಯುಂ ಮಾಡುವೆನೆಂದು ಪೊಱ ಲೊಳಗೆ ಗೋಸಣೆಯುಂ ತೊೞಲ್ಚಿದೊಡದಂ ಕೇಳ್ದು ಲೋಗರ್ ಪಗರಣಿಗರಾಗಿ ಎನಿತಾನುಂ ತೆಱದ ರೂಪುಗಳಂ ಕೈಕೊಂಡು ಮರಮೊಗಂಗಳನಿಟ್ಟು ಬಂದು ಮುಂದೆ ಆಡಿಯುಂ ಪಾಡಿಯುಂ ನಗಿಸಿಯುಮೆಂತುಮಱಿಕ್ಕೆಮಱ್ಗದಿರ್ದೊಡೊರ್ವಂ ಕರಿಯ ಕಚ್ಚುಟಮನುಟ್ಟು ಮೆಯ್ಯೆಲ್ಲಂ ಮಸಿಯುಂ ಪೂಸಿ ಬೋೞದಲೆವೆರಸು ಬಾಯೊಳ್ ಕವಡಿಕೆಗಳಂ ಪಲ್ಗಳಂತೆ ಮಾಡಿ ಕುಂಚಮುಂ ಗುಂಡಿಗೆಯುಮಂ ಪಿಡಿದು ಬರ್ಪೊನನರಸಂ ಕಂಡಿಂತೆಂದನೆಲೆಯರಸಿ ನಿನ್ನ ಸಹೋದರಂಗಳಪ್ಪ ಭಟಾರರಾ ಬರ್ಪೊರೆಯೆಂದು ಪೇೞ್ವಾಗಳೆಲ್ಲಿರ್ದರೆಂದೆೞ್ದು ನೋಡಿ ಕಾಣದಾ ರೂಪಂ ಕಂಡು

ತುಂತುರುಗಳಿಂದ ಅವರ ಶರೀರಕ್ಕೆ ಹಿತವಾಯಿತು. ಅವರು ಸಂನ್ಯಾಸವನ್ನು ಮಾಡಿ ಶುಭವಾದ ಪರಿಣಾಮದಿಂದ ಸತ್ತು ಸರ್ವಾರ್ಥ ಸಿದ್ಧಿ ಎಂಬ ಮೇಲುಮಟ್ಟದ ಸ್ವರ್ಗದಲ್ಲಿ ಮೂವತ್ತುಮೂರು ಸಾಗರದಂತಹ ಆಯುಷ್ಯವುಳ್ಳ ಅಹಮಿಂದ್ರನಾಗಿ ಹುಟ್ಟಿದರು. ಆ ಮೇಲೆ ಇತ್ತ ಋಷಿಗಳ ತಂಗಿಯಾದ ವೀರಶ್ರೀಯು 'ಹಾ, ಋಷಿಯೇ !' ಎಂದು ಇರುಳೂ ಹಗಲೂ ಹಲವು ದಿನಸ ಒಂದೇ ರೀತಿಯಲ್ಲಿ ಅಳುತ್ತ, ದುಃಖಿಸುತ್ತಿದ್ದಳು. ಅರಸನು ಆಕೆಗೆ ಪ್ರಿಯತಮನಾದುದರಿಂದ ಅತ್ಯಂತ ದುಃಖಪಟ್ಟು ಹೀಗೆಂದನು—"ಯಾರಾದರೊಬ್ಬರು ರಾಣಿಯ ಅಳುವನ್ನು ಹೋಗಲಾಡಿಸಿ ದುಃಖವನ್ನು ಮರೆಯುವಂತೆ ಮಾಡಿದರಾದರೆ, ಅವರಿಗೆ ಪಾರಿತೋಷಕವನ್ನು ಕೊಡುವೆನು"—ಹೀಗೆ ಸಾರಿಸಿ ಡಂಗುರ ಹೊಡೆಯಿಸಿದನು. ಅದನ್ನು ಕೇಳಿ ಜನರು ಪಗರಣ (ಯಕ್ಷಗಾನ ಬಯಲಾಟ) ಎಂಬ ಆಟವಾಡುವವರಾಗಿ ಎಷ್ಟೋ ರೀತಿಯ ರೂಪಗಳನ್ನು (ವೇಷಗಳನ್ನು) ಧರಿಸಿ ಕೊಂಡು ಮರದ ಮೊಗವಾಡಗಳನ್ನು ಇಟ್ಟುಕೊಂಡು ಬಂದು ಅವಳ ಮುಂದೆ ಆಡಿಯೂ ಹಾಡಿಯೂ ನಗುನಂತೆ ಮಾಡಿಯೂ ಪ್ರಯೋಜನವಾಗಲಿಲ್ಲ. ಹೇಗೂ ಅವಳ ಅಳುವು ಪರಿಹಾರವಾಗಲಿಲ್ಲ, ಆಗ ಒಬ್ಬನು ಕಪ್ಪಾದ ಕೋವಣ (ಕೌಪೀನ)ವನ್ನು ಧರಿಸಿ ಮೈಗೆಲ್ಲ ಮಸಿ ಹಚ್ಚಿ ಬೋಳಾದ ತಲೆಯೊಂದಿಗೆ ಬಾಯಲ್ಲಿ ಕವಡೆಗಳನ್ನು ಹಲ್ಲಿನಂತೆ ಮಾಡಿ ನವಿಲುಗರಿಯ ಕುಂಚವನ್ನೂ ಕಮಂಡಲುವನ್ನೂ ಹಿಡಿದುಕೊಂಡು ಬರುತ್ತಿದ್ದನು. ಅವನನ್ನು ರಾಜನು ಕಂಡು ರಾಣಿಯೊಡನೆ—"ಎಲೆ ಅರಸಿ' ನಿನ್ನ ಸೋದರರಾದ ಋಷಿಗಳು ಅದೋ ಬರುತ್ತಿರುವರು" ಎಂದು ಹೇಳಿದನು. ಆಗ ಆಕೆ "ಎಲ್ಲಿದ್ದಾರೆ ?" ಎಂದು ಎದ್ದು ನೋಡಿದಳು. ಸಹೋದರನನ್ನು ಕಾಣದೆ, ಆ ರೂಪವನ್ನು

ನಕ್ಕು ದುಃಖಮಂ ಮಱೆದೊಳಾಗಳಾ ನಗಿಸಿದ ಪಗರಣೆಗಂಗೆ ಪಿರಿದು ಕಸವರಮನಿತ್ತೊ ನೇದಿಂದಿತ್ತ ಬಾದುಬ್ಬೆಯ ಪರ್ವಮುಂ ಪಗರಣದಾಟಪಾಟಮುಮಾದುವು ಮತ್ತೆ ಸ್ವಾಮಿ ಕಾರ್ತಿಕಋಷಿಯರ್ ಮುಡಿಪಿದಲ್ಲಿಯವರ ತಂಗೆಯಪ್ಪ ವೀರಶ್ರೀ ಬಸದಿಯಂ ಮಾಡಿದೊಡಂ ದಿಂದಿತ್ತ ಸ್ವಾಮಿಯೆಂಬ ತೀರ್ಥಮಾಯ್ತು ಮತ್ತಿತ್ತ ಕೃತ್ತಿಕೆಯೆಂಬ ಪೊಟಲನಾಳ್ವಗ್ನಿರಾಜ ನೆಂಬರಸಂ ತನ್ನ ಮಗಳಂ ತಾನೆ ಕೊಂಡು ಮೊಱೆಯುೞಿದನಪ್ಪುದಱಿಂದಲ್ಲಿಯ ಜನಮುಂ

ಶ್ಲೋಕ ॥ ರಾಜ್ಞಿಧರ್ಮಿಣಿ ಧರ್ಮಿಷ್ಠಾಃ ಪಾಪೇ ಪಾಪಸಮಾಶ್ರಿತಾಃ
ರಾಜಾನಮನುವರ್ತಂತೇ ಯಥಾರಾಜಾ ತಥಾಪ್ರಜಾಃ ॥

ಎಂದರಸನಂ ಕಂಡು ಮೊಱೆಯುೞಿದು ನೆಗೞಿಲ್ ತಗುಳ್ದೊಡಾ ಪೊೞಲ್ಗೆ ಭೋಗಂಕಾರೋಹಣ ಮೆಂದು ಪೆಸರನಿಟ್ಟರಿದು ಸ್ವಾಮಿ ಕಾರ್ತಿಕಋಷಿಯ ಕಥೆ ಮತ್ತೆ ಪೆಱರುಂ ಪರಮ ಸಹಜ ರತ್ನತ್ರಯಂಗಳನಾರಾಧಿಸುವವರ್ಗಳ್ ಸ್ವಾಮಿ ಕಾರ್ತಿಕ ಋಷಿಯರಂ ಮನದೊಳ್ ಬಗೆದೇಱುಂ ಪುಣ್ಣುಂ ವ್ಯಾಧಿಯುಂ ಪಸಿವು ನೀರೞ್ಕೆ ಶೀತವಾತೋಷ್ಣಂಗಳುಮಂ ಸೈರಿಸಿ ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

ಕಂಡು ನಕ್ಕು ದಃಖನನ್ನು ಮರೆತುಬಿಟ್ಟಳು. ಆ ನಗಿಸಿದ ಪಗರಣಿಗನಿಗೆ ಹೆಚ್ಚು ಚಿನ್ನ ವನ್ನು ಕೊಟ್ಟನು. ಅಂದಿನಿಂದ ಈಜಿಗೆ ಬಾದುಬ್ಬೆ ಎಂಬ ದೇವತೆಯ ಹಬ್ಬವೂ ಪಗರಣದ ಆಟ ಮತ್ತು ಮಾತುಗಾರಿಕೆಯೂ ಪ್ರಚಲಿತವಾದವು. ಸ್ವಾಮಿ ಕಾರ್ತಿಕ ಋಷಿಗಳು ಸತ್ತ ಸ್ಥಳದಲ್ಲಿ ಅವರ ತಂಗಿಯಾದ ವೀರಶ್ರೀಯು ಜಿನಾಲಯವನ್ನು ಕಟ್ಟಿಸಿದಳು. ಅಂದಿ ನಿಂದ ಈಜಿಗೆ ಅದು ಸ್ವಾಮಿ ಎಂಬ ತೀರ್ಥವಾಯಿತು. ಆಮೇಲೆ ಇತ್ತ ಕೃತ್ತಿಕಾಪುರವನ್ನು ಆಳು ಅಗ್ನಿರಾಜನು ತನ್ನ ಮಗಳನ್ನು ತಾನೆ ಸ್ವೀಕರಿಸಿ ನಂಟತನ (ಬಾಂಧವ್ಯ)ವನ್ನು ಹಾಳು ಮಾಡಿದನಾದುದರಿಂದ ಅಲ್ಲಿಯ ಜನರು [ರಾಜನು ಧರ್ಮವಂತನಾದರೆ ಪ್ರಜೆಗಳೂ ಧರ್ಮದಲ್ಲಿ ಇರುವವರಾಗುತ್ತಾರೆ. ರಾಜನು ಪಾಪಿಯಾಗಿದ್ದರೆ ಪ್ರಜೆಗಳೂ ಪಾಪವನ್ನು ಆಶ್ರಯಿಸುವವರಾಗುತ್ತಾರೆ. ಪ್ರಜೆಗಳು ರಾಜನನ್ನು ಅನುಸರಿಸುತ್ತಾರೆ. ರಾಜನು ಹೇಗೋ ಪ್ರಜೆಗಳೂ ಹಾಗೆಯೇ.] ಎಂಬ ನೀತಿಯಂತೆ ರಾಜನನ್ನು ಕಂಡು ಅವರೂ ಬಾಂಧವ್ಯವನ್ನು ಕೆಡಿಸಿ ಆಚರಿಸಲು ಪ್ರಾರಂಭಿಸಿದರು. ಇದರಿಂದ ಆ ಪಟ್ಟಣಕ್ಕೆ ಭೋಗಂಕಾರೋಹಣ (ಭೋಗ ಪಟ್ಟಣ) ಎಂದು ಹೆಸರಿಟ್ಟರು. ಇದು ಸ್ವಾಮಿ ಕಾರ್ತಿಕ ಋಷಿಯ ಕಥೆ. ಅತ್ಯಂತ ಶ್ರೇಷ್ಠವೂ ಸಹಜವೂ ಆಗಿರತಕ್ಕ ಸಮ್ಯಗ್ದರ್ಶನ, ಸಮ್ಯಗ್ ಜ್ಞಾನ ಸಮ್ಯಕ್ ಚಾರಿತ್ರ ಎಂಬ ರತ್ನತ್ರಯವನ್ನು ಆರಾಧಿಸತಕ್ಕ ಇನ್ನು ಬೇರೆಯವರು ಕೂಡ, ಸ್ವಾಮಿ ಕಾರ್ತಿಕ ಋಷಿಗಳನ್ನು ಮನಸ್ಸಿನಲ್ಲಿ ಭಾವಿಸಿಕೊಂಡು ಗಾಯ, ಹುಣ್ಣು, ರೋಗ, ಹಸಿವು, ಬಾಯಾರಿಕೆ, ತಂಪು, ಗಾಳಿ, ಕಾವುಗಳನ್ನು ಸಹಿಸಿ, ಸ್ವರ್ಗ-ಮೋಕ್ಷ ಸುಖಗಳನ್ನು ಪ್ರಾಪ್ತಿಮಾಡಿಕೊಳ್ಳಲಿ.

# ೧೨. ಅಭಯಘೋಷರೆಂಬ ಮುನಿಯ ಕಥೆ

ಅಭಯಘೋಷರೆಂಬ ಮುನಿಯ ಕಥೆಯಂ ಪೇೞ್ವೆಂ :

ಗಾಹೆ॥ ಕಾಕಂದಿ ಅಭಯಘೋಸೋ ವಿ ಚಂಡವೇಗೇಣ ಛಿಣ್ಣ ಸವ್ವಂಗೋ
ತವ್ವೇದಣ ಮಧಿಯಾಸಿಯ ಪಡಿವಣ್ಣೋ ಉತ್ತಮಂ ಅಟ್ಠಂ ॥

[ ಕಾಕಂದಿ-ಕಾಕಂದಿಯೆಂಬ ಪೊೞಲೊಳ್, ಅಭಯಘೋಸೋ ವಿ-ಅಭಯಘೋಷ ರೆಂಬ ರಿಸಿಯುಂ, ಚಂಡವೇಗೇಣ-ಚಂಡವೇಗನೆಂಬೊನರಸನಿಂದಂ, ಛಿಣ್ಣ ಸವ್ವಂಗೋ-ಕೊಱೆಯೆ ಪಟ್ಟೆಲ್ಲಾ ಮೆಯ್ಯನೊಡೆಯನಾಗಿ, ತವ್ವೇದಣಂ ಆ ವೇದನೆಯುಂ, ಅಧಿಯಾಸಿಯ-ಲೇಸಾಗಿ ಸೈರಿಸಿ, ಪಡಿವಣ್ಣೋ-ಪೊರ್ದಿದೊಂ, ಉತ್ತಮಂ ಅಟ್ಠಂ-ಮಿಕ್ಕ ದರ್ಶನ ಜ್ಞಾನ ಚಾರಿತ್ರಂಗಳಾರಾಧನೆಯುಂ ]

ಅದೆಂತೆಂದೊಡೆ : ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ಮಗಧೆಯೆಂಬುದು ನಾಡಲ್ಲಿ ಕಾಕಂದಿಯೆಂಬುದು ಪೊೞಲದನಾಳ್ವೊನಭಯಘೋಷನೆಂಬೊನರಸನಾತನ ಮಹಾದೇವಿ ಅಭಯಮತಿಯೆಂಬೊಳಂತವರ್ಗ್ಗಳಿಷ್ಟವಿಷಯ ಕಾಮಭೋಗಂಗಳನನುಭವಿಸುತ್ತಂ ಕಾಲಂ ಸಲೆ ಮತ್ತೊಂದು ದಿವಸಮರಸಂ ಪೊಱಮಟ್ಟು ಪೊಱವೊೞಲ ಶೋಭೆಯಂ ತೊೞಲ್ದು ನೋಡು ತ್ತಿರ್ಪನ್ನೆಗವೊರ್ವ ಮೀಂಗುಲಿಗನೊಂದಾಮೆಯುಂ ಜಾಱಿವಾಱಿ ನಾಲ್ಕು ಕಾಲಂ ಕಟ್ಟಿ ಬಳ್ಳಿಯಂ ಕೊರಲೊಳ್ ತಗುೞ್ಚಿಯೆೞಲೆ ಪಿಡಿದುಕೊಂಡು ಪೊೞಲ್ಗಿದಿರಂ ಬರ್ಪೊನನರಸಂ

ಅಭಯಘೋಷರೆಂಬ ಮುನಿಯ ಕಥೆಯನ್ನು ಹೇಳುವೆನು : [ಕಾಕಂದಿಯೆಂಬ ಪಟ್ಟಣದಲ್ಲಿ ಅಭಯಘೋಷರೆಂಬ ಋಷಿ ಚಂಡವೇಗನೆಂಬ ರಾಜನಿಂದ ಕೊರೆಯಲ್ಪಟ್ಟ ಸರ್ವಾಂಗವುಳ್ಳವನಾಗಿ ಆ ವೇದನೆಯನ್ನು ವಿಶೇಷವಾಗಿ ಸಹಿಸಿ ಶ್ರೇಷ್ಠವಾದ ದರ್ಶನ ಜ್ಞಾನ ಚಾರಿತ್ರಗಳ ಆರಾಧನೆಯನ್ನು ಆಚರಿಸಿದನು.] ಅದು ಹೇಗೆಂದರೆ : ಈ ಜಂಬೂ ದ್ವೀಪದ ಭರತಕ್ಷೇತ್ರದಲ್ಲಿ ಮಗಧೆ ಎಂಬ ನಾಡಿದೆ. ಅಲ್ಲಿ ಕಾಕಂದಿ ಎಂಬ ಪಟ್ಟಣವನ್ನು ಅಭಯಘೋಷನೆಂಬ ರಾಜನು ಆಳುತ್ತಿದ್ದನು. ಅವನ ಮಹಾರಾಣಿ ಅಭಯಮತಿ ಯೆಂಬವಳು. ಅಂತು ಅವರು ತಮ್ಮ ಇಷ್ಟವಾದ ವಿಷಯದ ಬಯಕೆಯ ಸುಖಗಳನ್ನು ಅನುಭವಿಸುತ್ತ ಅವರ ಕಾಲ ಕಳೆಯುತ್ತಿತ್ತು. ಆಮೇಲೆ ಒಂದು ದಿವಸ ರಾಜನು ಅರಮನೆಯಿಂದ ಹೊರಟು ಪಟ್ಟಣದ ಹೊರಗಿನ ಚೆಲುವನ್ನು ನೋಡುತ್ತ ಸುತ್ತಾಡುತ್ತಿ ದ್ದನು. ಆ ವೇಳೆಗೆ ಒಬ್ಬ ಬೆಸ್ತನು ಒಂದು ಆಮೆಯನ್ನು ಅದು ಜೀವಿಸಿಕೊಂಡಿ ದ್ದಂತೆಯೇ (ಸಜೀವವಾಗಿ) ನಾಲ್ಕು ಕಾಲುಗಳನ್ನೂ ಕಟ್ಟಿ, ಕೊರಳಿಗೆ ಹಗ್ಗ ಸಿಕ್ಕಿಸಿ, ಅದು ನೇತಾಡುವ ಹಾಗೆ ಹಿಡಿದುಕೊಂಡು ಪಟ್ಟಣಕ್ಕೆ ಇದಿರಾಗಿ ಬರುತ್ತಿದ್ದನು.

ಕಂಡು ತನ್ನ ಬಿನ್ನಣಮಂ ನೆರೆದ ನೆರವಿಗೆ ಮೆಱೆಯಲ್ವೇಡಿ ಗೆಂಟಱಿಂ ಚಕ್ರದಿಂ ನಾಲ್ಕು ಕಾಲುಮನೊರ್ಮೊದಲೆ ಪಱಿಯಿಟ್ಟೊಡೆ ಮೀಂಗುಲಿಗಂ ಪ್ರಾಣಮುಳ್ಳಂತಿರಾಮೆಯುಂ ತನ್ನ ಮನೆಗೆ ಕೊಂಡು ಪೋದೊಡಾ ಇರುಳೊಳಾಮೆ ಪಿರಿದು ವೇದನೆಯಿಂದಂ ನಮೆದು ಸತ್ತಾ ಪೊಲಲೊಳಭಯಘೋಷ ನೃಪತಿಗಭಯಮತಿ ಮಹಾದೇವಿಗಂ ಚಂಡವೇಗನೆಂಬ ಮಗನಾಗಿ ಪುಟ್ಟಿದನಂತವರ್ಗಳಿಪ್ಪ ವಿಷಯ ಕಾಮ ಭೋಗಸುಖಂಗಳನನುಭವಿಸುತ್ತಿರ್ಪನ್ನೆಗಂ ಮತ್ತೊಂದು ದಿವಸಮರಸನುಮರಸಿಯುಂ ಕರುಮಾಡದ ಮೇಗಣ ನೆಲೆಯೊಳ್ ಭೋಗೋಪಭೋಗ ಸುಖಂಗಳನನುಭವಿಸುತ್ತಂ ವಿನೋದದಿಂದಿರ್ಪನ್ನೆಗಂ ಚಂದ್ರಗ್ರಹಣಮಾದುದನರಸಂ ಕಂಡ ನಿತ್ಯಮಂ ಭಾವಿಸಿಯದುವೆ ವೈರಾಗ್ಯಕ್ಕೆ ಕಾರಣಮಾಗಿ ಚಂಡವೇಗನೆಂಬ ಮಗಂಗೆ ರಾಜ್ಯಪಟ್ಟಂ ಗಟ್ಟಿ ಬಾಹ್ಯಾಭ್ಯಂತರ ಪರಿಗ್ರಹ ಪರಿತ್ಯಾಗಂಗೆಯ್ದು ನಂದನರೆಂಬಾಚಾರ್ಯರ ಪಕ್ಕದೆ ತಪಂಬಟ್ಟು ಪನ್ನೆರಡು ವರುಷಮವರೊಡನಿರ್ದೆಲ್ಲಾ ಪೋದುಗಳುಮಂ ಕಲ್ತು ಗುರುಗಳಂ ಬೆಸಗೊಂಡವ ರನುಮತದಿಂದೇಕವಿಹಾರಿಯಾಗಿ ಗ್ರಾಮನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾ ಮುಖಂಗಳಂ ವಿಹಾರಿಸುತ್ತಂ ಬರ್ಪೊರ್ ತಮ್ಮ ಮುನ್ನಿನ ಕಾಕಂದಿಯೆಂಬ ಪೊಲಲ್ಗೆವಂದು

ಅವನನ್ನು ರಾಜನು ಕಂಡು, ತನ್ನ ವಿಶೇಷವಾದ ಜ್ಞಾನವನ್ನು ಅಲ್ಲಿ ಸೇರಿದ್ದ ಜನ ಸಂದೋಹಕ್ಕೆ ಮೆರೆಯಿಸಬೇಕೆಂಬ ಉದ್ದೇಶದಿಂದ, ದೂರದಿಂದ ತನ್ನ ಚಕ್ರಾಯುಧದಿಂದ ಅದರ ನಾಲ್ಕು ಕಾಲುಗಳೂ ಒಂದೇ ಸಲಕ್ಕೆ ತುಂಡಾಗುವಂತೆ ಹೊಡೆದನು. ಬೆಸ್ತನು ಆ ಆಮೆಯನ್ನು ಪ್ರಾಣವಿರುವ ಹಾಗೆಯೇ ತನ್ನ ಮನೆಗೆ ತೆಗೆದುಕೊಂಡು ಹೋದನು. ಆ ರಾತ್ರಿ ಆಮೆ ಹೆಚ್ಚಾದ ನೋವಿನಿಂದ ಯಾತನೆಪಟ್ಟು ಸತ್ತು ಆ ಪಟ್ಟಣದಲ್ಲಿ ಅಭಯ ಘೋಷ ರಾಜನಿಗೂ ಅಭಯಮತಿ ರಾಣಿಗೂ ಮಗನಾಗಿ ಜನಿಸಿತು. ಅಂತು ಅವರು ತಮ್ಮ ಪ್ರೀತಿಯ ವಿಷಯ ಬಯಕೆಯ ಸುಖಗಳನ್ನು ಅನುಭವಿಸುತ್ತ ಇದ್ದರು. ಹೀಗಿ ರಲು ಮತ್ತೊಂದು ದಿವಸ ರಾಜರಾಣಿಯರು ಅರಮನೆಯ ಮೇಲುಪ್ಪರಿಗೆಯ ನೆಲೆಯಲ್ಲಿ ಬಹುವಿಧವಾದ ಸುಖಗಳನ್ನು ಅನುಭವಿಸುತ್ತ ವಿನೋದದಿಂದ ಇದ್ದರು. ಆಗ ರಾಜನು ಚಂದ್ರಗ್ರಹಣವಾದುದನ್ನು ಕಂಡು ಈ ಸಂಸಾರ ಶಾಶ್ವತವಲ್ಲವೆಂದು ಭಾವಿಸಿದನು. ಅದುವೇ ಅವನಿಗೆ ವೈರಾಗ್ಯಕ್ಕೆ ಕಾರಣವಾಯಿತು. ಅವನು ಮಗನಾದ ಚಂಡವೇಗನಿಗೆ ಪಟ್ಟ ಕಟ್ಟಿ ಬಾಹ್ಯ ಮತ್ತು ಅಭ್ಯಂತರ ಎಂಬ ಎರಡು ಬಗೆಯ ಪರಿಗ್ರಹಗಳನ್ನು ತೊರೆದು ನಂದನರೆಂಬ ಗುರುಗಳ ಬಳಿಯಲ್ಲಿ ತಪಸ್ಸನ್ನು ಕೈಗೊಂಡನು. ಹನ್ನೆರಡು ವರ್ಷ ಅವರೊಡನೆ ಇದ್ದು ಎಲ್ಲ ವಿದ್ಯೆಗಳನ್ನೂ ಕಲಿತು, ಗುರುಗಳೊಡನೆ ಕೇಳಿ, ಅವರ ಅಪ್ಪಣೆ ಪಡೆದು, ಅಭಯಘೋಷ ಋಷಿಗಳಾಗಿ, ಅವರು ಒಬ್ಬರೇ ಸಂಚಾರ ಮಾಡುತ್ತ ಗ್ರಾಮ, ನಗರ, ಖೇಡ, ಖರ್ವಡ, ಮಡಂಬ, ಪಟ್ಟಣ, ದ್ರೋಣಾಮುಖ ಎಂಬ ಭೂಭಾಗಗಳಲ್ಲಿ ಸಂಚರಿಸಿಕೊಂಡು ಬರುತ್ತಿದ್ದವರು ತಮ್ಮ ಹಿಂದಿನ ಕಾಕಂದಿ ಎಂಬ ಪಟ್ಟಣಕ್ಕೆ ಬಂದರು.

ದ್ಯಾನವನದೊಳ್ ವೀರಾಸನದಿರ್ದೋರನ್ನೆಗಂ ಮುನ್ನಾದೆಯಪ್ಪ ಜೀವನವರ ಮಗನಪ್ಪ ಚಂಡವೇಗಂ ಕರುಮಾಡದ ಮೇಗಣ ನೆಲೆಯೊಳಿರ್ದು ನೋಂಟಕ್ಕೆ ಗೆಂಟು ಪೋಗೆ ಚಕ್ರಮ ನಿಟ್ಟೊಡಾ ಚಕ್ರಂ ವಂದು ಋಷಿಯರವರ ಕೆಯ್ಯುಂ ಕಾಲ್ಗಳುಮಂ ವೊಕ್ಕನೆ ಪೋಗೆ ಕೊಂಡೊಡೆ ಚತುರ್ವಿಧಮಪ್ಪಾಹಾರಕ್ಕಂ ಶರೀರಕ್ಕಂ ಜಾವಜ್ಜೀವಂ ನಿವೃತ್ತಿಗೆಯ್ದು ವೇದನೆಯಂ ಸೈರಿಸಿ ಶುಭಪರಿಣಾಮದಿಂ ರತ್ನತ್ರಯಮಂ ಸಾಧಿಸಿ ಪದಿನಾಲ್ಕನೆಯ ಪ್ರಾಣತ ಮೆಂಬ ಕಲ್ಪದೊಳಿರ್ಪತ್ತು ಸಾಗರೋಪಮಾಯುಷ್ಯಮನೊಡೆಯೊನಿಂದ್ರನಾಗಿ ಪುಟ್ಟಿದೊಂ ಮತ್ತೆ ಪೆಱರುಮಾರಾಧಕರುಂ ರತ್ನತ್ರಯಮನಾರಾಧಿಸುತ್ತಿರ್ದ್ದ ಭವ್ಯರ್ಕಳಭಯಘೋಷ ಭಟಾರರಂ ಮನದೆ ಬಗೆದು ಪಸಿವುಂ ತೃಷೆಯುಮೇಱುಂ ವ್ಯಾಧಿಯುಂ ಶೀತವಾತೋಷ್ಣಂಗಳು ಮೆಂದಿವು ಮೊದಲಾಗೊಡೆಯ ದುಃಖಂಗಳಂ ಸೈರಿಸಿ ಪರಮ ಶುದ್ಧ ಸಹಜ ದರ್ಶನ ಜ್ಞಾನ ಚಾರಿತ್ರಂಗಳಂ ಸಾಧಿಸಿ ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

ಅಲ್ಲಿನ ಉದ್ಯಾನವನದಲ್ಲಿ ವೀರಾಸನದಲ್ಲಿ ಕುಳಿತಿದ್ದರು. ಆ ವೇಳೆಗೆ, ಹಿಂದೆ ಆನೆಯು ಜೀವವಾಗಿದ್ದ, ಅವರ ಮಗನಾದ ಚಂಡವೇಗನು ಅರಮನೆಯ ಮೇಲುಪ್ಪರಿಗೆಯ ನೆಲೆ ಯಲ್ಲಿ ಇದ್ದುಕೊಂಡು, ಗುರಿಯಿಟ್ಟು ದೂರಕ್ಕೆ ಹೊಡೆಯುವುದಕ್ಕಾಗಿ ಚಕ್ರವನ್ನು ಪ್ರಯೋಗಿಸಿದನು. ಆ ಚಕ್ರ ಬಂದು ಅಭಯಘೋಷ ಋಷಿಗಳ ಎರಡು ಕೈಗಳೂ ಕಾಲುಗಳೂ ಒಕ್ಕೊಂದು ಕತ್ತರಿಸಿ ಹೋಗುವಂತೆ ತಗುಲಿತು. ಆ ಋಷಿಗಳು ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯ ಎಂಬ ನಾಲ್ಕು ವಿಧದ ಆಹಾರಕ್ಕೂ ಶರೀರಕ್ಕೂ ಜೀವ ವಿರುವವರೆಗೂ ನಿವೃತ್ತಿ ಮಾಡಿ, ನೋವನ್ನು ಸಹಿಸಿ, ಶುಭ ಪರಿಣಾಮದಿಂದ ರತ್ನತ್ರಯ ವನ್ನು ಸಾಧಿಸಿ ಹದಿನಾಲ್ಕನೆಯದಾದ ಪ್ರಾಣತವೆಂಬ ಸ್ವರ್ಗದಲ್ಲಿ ಇಪ್ಪತ್ತು ಸಾಗರ ಪರಿಮಾಣದ ಆಯುಷ್ಯವುಳ್ಳ ಇಂದ್ರನಾಗಿ ಹುಟ್ಟಿದನು. ರತ್ನತ್ರಯವನ್ನು ಆರಾಧಿಸು ತ್ತಿರುವ ಭವ್ಯಜೀವಿಗಳಾದ ಇನ್ನಿತರ ಆರಾಧಕರೂ ಅಭಯಘೋಷ ಭಟಾರರನ್ನು ಮನಸ್ಸಿನಲ್ಲಿ ಭಾವಿಸಿಕೊಂಡು ಹಸಿವು, ಬಾಯಾರಿಕೆ, ಗಾಯ, ರೋಗ, ಶೀತ, ವಾಯು ಉಷ್ಣ–ಎಂದಿನೇ ಮುಂತಾಗಿರುವ ದುಃಖಗಳನ್ನು ಸಹಿಸಿ, ಶ್ರೇಷ್ಠವೂ ಪವಿತ್ರವೂ ಸಹಜವೂ ಆದ ದರ್ಶನ–ಜ್ಞಾನ–ಚಾರಿತ್ರಗಳನ್ನು ಸಾಧನೆಮಾಡಿ ಸ್ವರ್ಗ–ಮೋಕ್ಷ ಸುಖ ಗಳನ್ನು ಪಡೆಯಲಿ.

# ೧೩. ವಿದ್ಯುಚ್ಚೋರನೆಂಬ ರಿಸಿಯ ಕಥೆ

ವಿದ್ಯುಚ್ಚೋರನೆಂಬ ರಿಸಿಯ ಕಥೆಯಂ ಪೇೞ್ವೆಂ :

ಗಾಹೆ ॥ ದಂಸೇಹಿಯ ಮಸಕೇಹಿಯ ಖಜ್ಜಂತೋ ವೇದಣಂ ಪರಮಘೋರಂ
ವಿಜ್ಜುಚ್ಚೋರೋ ಅಧಿಯಾಸಿಯ ಪಡಿವಣ್ಣೋ ಉತ್ತಮಂ ಅಟ್ಠಂ ॥

[ ದಂಸೇಹಿಯ-ಚಿಕ್ಕುಟುಗಳಿಂದಂ, ಮಸಕೇಹಿಯ-ಗುಂಗುಱುಗಳಿಂದಂ, ಖಜ್ಜಂತೋ-ತಿನೆಪಡುತಿರ್ದೊನಾಗಿ, ವೇದಣಂ-ವೇದನೆಯಂ, ಪರಮಘೋರಂ-ಆದಮಾನುಂ ಕಡಿದಪ್ಪುದಂ, ವಿಜ್ಜುಚ್ಚೋರೋ-ವಿದ್ಯುಚ್ಚೋರನೆಂಬ ರಿಸಿ, ಅಧಿಯಾಸಿಯ-ಲೇಸಾಗಿ ಸೈರಿಸಿ, ಪಡಿವಣ್ಣೋ-ಪೊರ್ದಿದೊಂ, ಉತ್ತಮಂ ಅಟ್ಠಂ-ಮಿಕ್ಕ ದರ್ಶನ ಜ್ಞಾನ ಚಾರಿತ್ರಂಗಳಾರಾಧನೆಯಂ ]
ಅದೆಂತೆಂದೊಡೆ : ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ವಿದೇಹಮೆಂಬುದು ನಾಡಲ್ಲಿ ಮಿಥಿಳೆಯೆಂಬುದು ಪೊೞಲದನಾಳ್ವೊಂ ಪದ್ಮರಥನೆಂಬೊನರಸನ ಸಂತತಿಯಿಂ ಬಂದ ವಾಮರಥನೆಂಬೊನರಸನಾತನ ಮಹಾದೇವಿ ಬಂಧುಮತಿಯೆಂಬೊಳಂತವರ್ಗ್ಗಳಿಷ್ಟವಿಷಯ ಕಾಮಭೋಗಂಗಳನನುಭವಿಸುತ್ತಂ ಪಲಕಾಲಂ ಸಲೆ ಮತ್ತಾ ಪೊೞಲೊಳ್ ಯಮದಂಡನೆಂಬೊಂ ತಳಾಱಂ ಮತ್ತಲ್ಲಿ ಇರ್ಪೊಂ ವಿದ್ಯುಚ್ಚೋರನೆಂಬೊಂ ಕಳ್ಳನಾತಂ ಜೃಂಭಿನಿ ಸ್ತಂಭಿನಿ ಮೋಹಿನಿ ಸರ್ಷಪಿ

ವಿದ್ಯುಚ್ಚೋರನೆಂಬ ಋಷಿಯ ಕಥೆಯನ್ನು ಹೇಳುವೆನು : [ವಿದ್ಯುಚ್ಚೋರನೆಂಬ ಋಷಿ ಚಿಗಟ (ಗೊರಜು) ಗಳಿಂದಲೂ ಗುಂಗಾಡಿ ಹುಳು (ದೊಡ್ಡನೊಣ) ಗಳಿಂದಲೂ ಕಚ್ಚಿ ತಿನ್ನಲ್ಪಡುತ್ತಿದ್ದವನಾಗಿ ಅತ್ಯಂತ ಕಠಿನವಾದ ನೋವನ್ನು ಸಹಿಸಿ, ಶ್ರೇಷ್ಠವಾದ ದರ್ಶನ-ಜ್ಞಾನ-ಚಾರಿತ್ರ ಎಂಬ ರತ್ನತ್ರಯದ ಆರಾಧನೆಯನ್ನು ಆಚರಿಸಿದನು] ಅದು ಹೇಗೆಂದರೆ : ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ವಿದೇಹ ಎಂಬ ಹೆಸರುಳ್ಳ ನಾಡು ಇದೆ. ಆ ನಾಡಿನಲ್ಲಿ ಮಿಥಿಳೆ ಎಂಬ ಪಟ್ಟಣವಿದೆ. ಅದನ್ನು ಪದ್ಮರಥನೆಂಬ ಅರಸನ ಸಂತತಿಯಿಂದ ಬಂದ ವಾಮರಥನೆಂಬ ಅರಸನು ಆಳುತ್ತಿದ್ದನು. ಅವನ ರಾಣಿ ಬಂಧುಮತಿ ಎಂಬವಳು. ಅವರು ತಮ್ಮ ತಮ್ಮ ಮೆಚ್ಚಿನ ವಿಷಯದ ಬಯಕೆಯ ಸುಖಗಳನ್ನು ಅನುಭವಿಸುತ್ತಾ ಹೀಗೆಯೇ ಹಲವು ಕಾಲ ಕಳೆಯಿತು. ಆ ಪಟ್ಟಣದಲ್ಲಿ ಯಮದಂಡನೆಂಬ ತಳಾರ (ನಗರದ ಕಾವಲುಗಾರ) ನಿದ್ದನು; ಮತ್ತು ವಿದ್ಯುಚ್ಚೋರನೆಂಬ ಕಳ್ಳನೂ ಇದ್ದನು. ಆತನು ಕಳವಿನ ಶಾಸ್ತ್ರಗಳಲ್ಲಿ ಬಹಳ ಪ್ರವೀಣನಾಗಿದ್ದನು. ಜೃಂಭಿನಿ (ಪ್ರತ್ಯಕ್ಷವಾಗುವುದು ಮತ್ತು ಮಾಯವಾಗುವುದು), ಸ್ತಂಭಿನಿ (ಗತಿನಿರೋಧ) ಮೋಹಿನಿ (ಮೂರ್ಛೆಯುಂಟುಮಾಡುವುದು), ಸರ್ಷಪಿ (ವಿಷಪ್ರಯೋಗ), ತಾಳೋದ್ಘಾಟಿನಿ ವಿದ್ಯೆ [illegible] (ಬೀಗ ತೆಗೆಯುವ ವಿದ್ಯೆ), ಮಂತ್ರಪ್ರಯೋಗ, ಚೂರ್ಣ (ಪುಡಿ

ತಾಳೋದ್ಘಾಟನ ವಿದ್ಯಾಮಂತ್ರಂ ಚೋರ ಯೋಗ ಘುಟಿಕಾಂಜನಮೆಂಬಿವು ಮೊದಲಾಗೊಡೆಯ ತಸ್ಕರಶಾಸ್ತ್ರಂಗಳೊಳಾದಮಾನುಂ ಕುಶಲನಪ್ಪ ಇರುಳ್ ಪೊಱಲ ಕಳವುಗಳನಿರುಳ್ ಕಳ್ದು ಪೊಱಲ್ಗೆ ನಾಡೆಯಂತರದೊಳೊಂದು ಪರ್ವತಮುಂಟಲ್ಲಿ ಪಿರಿದೊಂದು ಗುಹೆಯುಂಟದಱೊಳಗೆ ಕಳ್ದ ಕಳವರಂಗಳೆಲ್ಲಮಂ ಪೊಟ್ಟುಟ್ಟು ಗುಹೆಯ ಬಾಗಿಲಂ ಪಿರಿದೊಂದು ಶಿಲೆಯುಂ ತಂದಿಟ್ಟು ಮುಚ್ಚಿ ಬಂದು ಪಗಲೆಲ್ಲಂ ಪಾೞ್ದೇಗುಲದೊಳಂಜನಮನೆಚ್ಚಿ ತಾಂ ತೊನ್ನನಾಗಿ ಮುಂದುಗಿದ ಕೈಯುಂ ಕಾಲುಂ ಪೆರಸು ಮೂಗೊಳಗದುಱ ರಸಿಗೆ ಸುರಿಯೆ ನೊಣಂಗಳ್ ಮುಸುಱಿಕೊಂಡು ತಿನೆ ಪೇಸುವನಾಗಿ ಲೋಗರ ಮನೆಗಳೊಳ್ ಭಿಕ್ಷಮಂ ಬೇಡಿ ಮನೆಮನೆಯುಂ ತೊೞಲ್ದು ತನ್ನ ತೊನ್ನಿಗೊಂಡಿರ್ಪುದನಱಿಪುತ್ತುಮಿಂತು ಪಗಲೆಲ್ಲಮಿರ್ದಿರುಳಪ್ಪಾಗಳ್ ದಿವ್ಯಮಪ್ಪ ತನ್ನ ಸ್ವಾಭಾವಿಕಮಪ್ಪ ಮುನ್ನಿನ ರೂಪಂ ಕೈಕೊಂಡು ಪುಟ್ಟಿಗೆಯನುಟ್ಟು ಮೆಯ್ಯಂ ಪೂಸಿ ಪೂವಂ ಮುಡಿದು ಕರ್ಪೂರ ಸಮ್ಮಿಶ್ರಿತಮಪ್ಪ ತಂಬುಲಮನಾತ್ರಂ ಸೂಳೆಗೇರಿಗಳಂ ತೊೞಲ್ದು ತನ್ನಂ ಮೆಱೆಯುತ್ತಂ ಮನಕ್ಕೆವಂದಗ್ಗಳದೊಳ್ಪೆಂಡಿರೊಳ್ ಕ್ರಯಮನಿಟ್ಟು ಭೋಗೋಪಭೋಗಂಗಳ್ಗೆ ಕಳವರಮಂ ಕೊಟ್ಟು ಸುಖಮನನುಭವಿಸುತ್ತಮಾರುಮಱಿಯದಂತಿರ್ದು ಬಟ್ಟರ ಮೂಗರ ನಿಯೋಗಿಗಳ

ಎರಚುವುದು) ಯೋಗ (ವಂಚನೆ, ಇಂದ್ರಜಾಲ, ಗುಪ್ತಚಾರತ್ವ—ಮುಂತಾದವು), ಗುಳಿಗೆ, ಅಂಜನ (ಕಣ್ಣಿಗೆ ಹಚ್ಚುವ ಲೇಪನ—ಎಂಬಿವೇ ಮೊದಲಾಗಿ ಉಳ್ಳ ತಸ್ಕರ ವಿದ್ಯೆಗಳನ್ನು ಬಲ್ಲ ಅವನು ರಾತ್ರಿಯಲ್ಲಿ ಕಳವು ಮಾಡುತ್ತಿದ್ದನು. ಆ ಪಟ್ಟಣಕ್ಕೆ ಬಹಳ ದೂರದಲ್ಲಿ ಒಂದು ಪರ್ವತವಿದೆ. ಅಲ್ಲಿ ದೊಡ್ಡದಾದ ಒಂದು ಗುಹೆಯಿದೆ. ವಿದ್ಯುಚ್ಚೋರನು ಕಳವು ಮಾಡಿದ ಹೊನ್ನುಗಳನ್ನೆಲ್ಲ ಆ ಗುಹೆಯೊಳಗೆ ಹೂಳಿಟ್ಟು, ಗುಹೆಯ ಬಾಗಿಲನ್ನು ದೊಡ್ಡದಾದ ಒಂದು ಬಂಡೆ ಕಲ್ಲು ತಂದು ಇಟ್ಟು ಮುಚ್ಚಿ ಬಂದು ಹಗಲೆಲ್ಲಾ ಹಾಳು ದೇವಾಲಯದಲ್ಲಿ ಅಂಜನ ಹಚ್ಚಿ ತಾನು ತೊನ್ನು ರೋಗದವನಾಗಿ ಕಾಣಿಸಿಕೊಳ್ಳುತ್ತಿದ್ದನು. ಮೈಮುದುಡಿದ ಕೈಕಾಲುಳ್ಳವನಾಗಿ, ಮೂಗು ಒಳಕ್ಕೆ ಕುಸಿದು ಕೀವು ಸುರಿಯುತ್ತಿರಲು ನೊಣಗಳು ಕವಿದುಕೊಂಡು ತಿನ್ನುತ್ತಿರಲು ಅಸಹ್ಯಪಟ್ಟುಕೊಂಡು ಜನರ ಮನೆಗಳಿಗೆ ಹೋಗಿ ಭಿಕ್ಷೆಯನ್ನು ಬೇಡುತ್ತಿದ್ದನು. ಮನೆಮನೆಗಳಿಗೆ ಸುತ್ತಾಡುತ್ತ ತನಗೆ ತೊನ್ನುರೋಗ ಬಂದಿರುವುದನ್ನು ತಿಳಿಸುತ್ತ ಹೀಗೆ ಹಗಲೆಲ್ಲಾ ಇರುತ್ತಿದ್ದನು. ರಾತ್ರಿಯಾಗುವ ವೇಳೆಗೆ ದಿವ್ಯವಾದ ತನ್ನ ಸ್ವಾಭಾವಿಕವಾದ ಹಿಂದಿನ ರೂಪವನ್ನು ಧರಿಸುತ್ತಿದ್ದನು. ವಸ್ತ್ರವನ್ನುಟ್ಟು, ಮೈಗೆ ಸುಗಂಧಲೇಪನವನ್ನು ಮಾಡಿ, ಹೂವನ್ನು ಮುಡಿದು ಕರ್ಪೂರದಿಂದ ಬೆರಕೆಯಾದ ತಾಂಬೂಲವನ್ನು ತಿನ್ನುತ್ತ ಸೂಳೆಯರ ಬೀದಿಗಳಲ್ಲಿ ಸುತ್ತಾಡಿ, ತನ್ನನ್ನು ಮೆರೆಯಿಸುತ್ತ ತನ್ನ ಮನಸ್ಸಿಗೆ ಬಂದ ಶ್ರೇಷ್ಠರಾದ ಒಳ್ಳೆಯ ಹೆಂಗುಸರಲ್ಲಿ ಮುಂಗಡವಾಗಿ ದ್ರವ್ಯವನ್ನು ಕೊಟ್ಟು, ವಿಧವಿಧವಾದ ಸುಖಭೋಗಗಳಿಗಾಗಿ ಹೊನ್ನನ್ನು ಕೊಟ್ಟು ಸುಖವನ್ನು ಅನುಭವಿಸುತ್ತ ಯಾರೂ

ಮೆಲ್ಲಮಂ ಕೞ್ದೊಡಮಾರುಮಱಿಯದೆ ಕಿಮ್ಮಗಿರ್ಪೆಯಲ್ಲದೆಯುಮೆಮ್ಮ ಸಜ್ಜೆಯೋವರಿಯಂ ಕಳ್ಳಂ ಪೊಕ್ಕು ಪುಡಿಕೆಯಂ ತೆಱೆದಚ್ಯುತೇಂದ್ರನಿತ್ತ ಕುಲಧನಮಪ್ಪ ಹಾರಮಂ ಕೊಂಡು ಪೋದಂ ಕಳ್ಳನನಾರಯ್ದು ಹಾರಮಂ ಕೊಂಡು ಬಾ ಅಲ್ಲದಾಗಳ್ ಕಳ್ಳಂಗೆ ತಕ್ಕ ನಿಗ್ರಹಮಂ ನಿನಗೆ ಮಾಡಿದಪ್ಪೆನೆಂದೊಡೆ ತಳಾಱನೆಂದಂ ದೇವಾ ಏೞುದಿವಸಮೆನಗೆಡೆಯನೀವುದೇೞುದಿವಸದಿಂ ದೊಳಗೆ ಕಳ್ಳನನಾರಯ್ಯಲಾಱದಾಗಳ್ ದೇವರೆನ್ನಂ ಮೆಚ್ಚುಕೆಯ್ವುದೆಂದೊಡರಸನಂತೆಗೆಯ್ಯೆಂ ದೊಡರಮನೆಯಿಂದಂ ಪೊಱಮಟ್ಟು ಪೊೞಲೊಳಗೆ ಸೂಳೆಗೇರಿಗಳೊಳಮಂಗಡಿಗಳೊಳಂ ಬಸದಿ ಗಳೊಳಂ ವಿಹಾರಂಗಳೊಳಂ ಕೇರಿಗಳೊಳಮಾರಮೆಗಳೊಳಂ ದೇವಾಲಯಂಗಳೊಳಂ ಪೊಱ ವೊೞಲೊಳಂ ಕೆಲದ ಪೊೞಲ್ಗಳೊಳಮಾಱುಂ ದಿವಸಂ ನಿರಂತರಮಾರಯ್ದಲ್ಲಿಯುಂ ಕಾಣದೇೞ ನೆಯ ದಿವಸದಂದು ಪಾೞ್ದೇಗುಲದೊಳಿರ್ದು ತೊನ್ನಂ ಪೋಪಾಗಳೞಱುವಳ್ಳಮಂ ಕಂಡದಂ ವಿದ್ಯಾಧರ ಕರಣದಿಂ ಲಂಘಿಸಿ ಪೋಪುದಂ ಯಮದಂಡಂ ಗೆಂಟಱೊಳಿರ್ದು ಕಂಡಿವನೆ ಕಳ್ಳ ನೆಂದು ನಿಶ್ಚಯಿಸಿ ಪಿಡಿದರಮನೆಗೆ ಪುಯ್ಯಲಿಡೆಯಿಡೆ ಕೊಂಡುಪೋಗಿಯರಸಂಗೆ ಕಳ್ಳನಂ ತಂದೆನೆಂದು ತೋಱಿ ಈತಂ ಕಳ್ಳನೆಂದರಸಂಗೆ ಪೇೞ್ದೊಡೆ ತೊನ್ನನಿಂತೆಂದಂ ದೇವಾ

ಸದೆ ಸುಮ್ಮನಿರುವೆಯಲ್ಲ ! ನನ್ನ ಮಲಗುವಮನೆಯ ಕೊಠಡಿಯನ್ನು ಕಳ್ಳನು ನುಗ್ಗಿ ಪೆಟ್ಟಿಗೆ ತೆರೆದು, ಅಚ್ಯುತೇಂದ್ರನು ಕೊಟ್ಟ ಕುಲಧನವಾಗಿರುವ ಮಾಲೆಯನ್ನು ಕೊಂಡುಹೋಗಿದ್ದಾನೆ. ಕಳ್ಳನನ್ನು ಕಂಡುಹಿಡಿದು ಮಾಲೆಯನ್ನು ತೆಗೆದುಕೊಂಡುಬಾ, ಅದಲ್ಲವಾದರೆ, ಕಳ್ಳನಿಗೆ ತಕ್ಕುದಾದ ದಂಡನೆಯನ್ನು ನಿನಗೆ ಮಾಡುತ್ತೇನೆ". ಹೀಗೆ ರಾಜನು ಹೇಳಿದಾಗ, ಯಮದಂಡನು–"ಪ್ರಭುವೇ, ನನಗೆ ಏಳುದಿವಸದ ಸಮಯವನ್ನು ಕೊಡಬೇಕು. ಏಳುದಿವಸದೊಳಗಾಗಿ ಕಳ್ಳನನ್ನು ಕಂಡು ಹಿಡಿಯಲು ಸಾಧ್ಯವಾಗದೆ ಹೋದರೆ, ಪ್ರಭುಗಳು ನನ್ನ ಏನು ಬೇಕೋ ಹಾಗೆ ಮಾಡಬಹುದು" ಎಂದನು. ಅದಕ್ಕೆ ರಾಜನು 'ಹಾಗೆಯೇ ಮಾಡು' ಎಂದನು. ಯಮದಂಡನು ಅರಮನೆಯಿಂದ ಹೊರಟು ಪಟ್ಟಣದಲ್ಲಿ ಸೂಳೆಯರ ಬೀದಿಗಳಲ್ಲಿಯೂ ಅಂಗಡಿಗಳಲ್ಲಿಯೂ ಜಿನಾಲಯ ಗಳಲ್ಲಿಯೂ ವಿನೋದವಾಟಿಕೆಗಳಲ್ಲಿಯೂ ಬೀದಿಗಳಲ್ಲಿಯೂ ಉದ್ಯಾನಗಳಲ್ಲಿಯೂ ದೇವಾಲಯಗಳಲ್ಲಿಯೂ ಪಟ್ಟಣದ ಹೊರಗಡೆಯಲ್ಲಿಯೂ ಅಕ್ಕಪಕ್ಕದ ಪಟ್ಟಣ ಗಳಲ್ಲಿಯೂ ಆರುದಿವಸ ಎಡೆಬಿಡದೆ ವಿಚಾರಿಸಿದರೂ ಎಲ್ಲಿಯೂ ಕಾಣಲಿಲ್ಲ. ಏಳನೆಯ ದಿವಸದಂದು ಹಾಳು ದೇವಾಲಯದಲ್ಲಿದ್ದು ತೊನ್ನನು ಹೋಗುವಾಗ ಕೆಸರಿನ ಹಳ್ಳವನ್ನು ಕಂಡು ವಿದ್ಯಾಧರರ ವಿದ್ಯಾಬಲದಿಂದ ಹಾರಿ, ದಾಟಿ ಹೋಗುವುದನ್ನು ಯಮದಂಡನು ದೂರದಲ್ಲಿದ್ದು ಕಂಡನು. 'ಇವನೇ ಕಳ್ಳನು' ಎಂದು ನಿರ್ಣಯಿಸಿ ಅವನನ್ನು ಹಿಡಿದನು. ಕಳ್ಳನು ಕೂಗಿಕೊಳ್ಳುತ್ತಿದ್ದಂತೆಯೇ ಅವನನ್ನು ಅರಮನೆಗೆ ಕೊಂಡುಹೋಗಿ 'ಕಳ್ಳ ನನ್ನು ತಂದೆನು' ಎಂದು ಅರಸನಿಗೆ ತೋರಿಸಿ, 'ಈತನು ಕಳ್ಳನು' ಎಂದು ಅರಸನಿಗೆ ಹೇಳಿದನು. ಆಗ ತೊನ್ನನು ಹೀಗೆಂದನು– "ದೇವಾ, ನಾನು ಕಳ್ಳನಲ್ಲ ಎಂಬುವನ್ನು

ನಾಂ ಕಳ್ಳನಲ್ಲದುದರ್ಕೆ ಪೊೞಲೆಲ್ಲಮಱಿಗುಂ ಕಳ್ಳನನಾರಯ್ಯಲಾಱದೆನ್ನಂ ತನ್ನ ಸಾವಿಂಗಂಜಿ ಬಡವನಂ ದೇಸಿಗನಂ ಪೊೞಲೊಳ್ ಬೈಕಂದಿರಿದುಂಡು ಬಾೞ್ವನಂ ಪಿಡಿದು ಕೊಂಡು ಬಂದು ಕೊಲಿಸಿದಪ್ಪನೆಂದೊಡೆ ತಳಾಱಂ ಕಳ್ಳರನಾರಯ್ವ ಶಾಸ್ತ್ರಂಗಳೊಳಾದ ಮಾನುಂ ಕುಶಲನಪ್ಪುದಱಿಂದರಸಂಗಿಂತೆಂದನೀತಂ ತನ್ನ ರೂಪುಗರೆದಿರುಳ್ ಪೊೞಲೆಲ್ಲಮಂ ಕಳು ದಿವಸಕ್ಕೀ ಪಾಂಗಿನೊಳ್ ತೊನ್ನನಾಗಿರ್ಪ್ಪಂ ನೀಮುಂ ನಂಬದಾಗಳ್ ಪ್ರತ್ಯಯಮಂ ಮಾಡಿ ತೋರ್ಪೆನೆಂದಾಗಳ್ ಪ್ರತಿಘುಟಿಕಾಂಜನಂಗಳಂ ತೊನ್ನನ ಕಣ್ಣನೊಳೆಚ್ಚಿದೊಡೆ ದಿವ್ಯಮಪ್ಪ ತನ್ನ ಮುನ್ನಿನ ರೂಪಾಗಿರ್ದಿಂತೆಂದನೀತಂ ಘುಟಿಕಾಂಜನ ಕುಹಕಃ ಇಂದ್ರಜಾಲಂಗಳಂ ಬಲ್ಲೊನಪ್ಪುದಱಿಂದೆಲ್ಲಾ ರೂಪುಗಳಂ ಮಾಡಲ್ ಬಲ್ಲೊನೆಂದೊಡೆ ತಳಾಱನೆಂದಂ ಪೆಱಗ್ಗೆ ಮಾಡೀ ಪ್ರತ್ಯಯಮಂ ತೋರ್ಪೆನೆಂದರಸನನುಮತದಿಂದರಸಿಯರ ಸೂಳೆಯರ ಕಣ್ಗಳೊಳ್ ಘುಟಿಕಾಂಜನಂಗಳನೆಚ್ಚಿದೊಡನಿಬರುಂ ತೊನ್ನೆಯರಾಗಿರ್ಪ್ಪನ್ನೆಗಂ ಮತ್ತಂ ಬೞಿಕ್ಕೆ ಪ್ರತಿ ಘುಟಿಕಾಂಜನಂಗಳನೆಚ್ಚಿದೊಡೆ ಸ್ವಾಭಾವಿಕಮಪ್ಪ ತಮ್ಮ ಮುನ್ನಿನ ರೂಪುಗಳಂ ಕೈಕೊಂಡಿರ್ದ್ದರಾಗಳರಸಂಗೆ ನಂಬುಗೆಯಾಗಿ ನೆಟ್ಟನಿವಂ ಕಳ್ಳನಪ್ಪೊನೀತನಂ ದಂಡಿಸೆಂದು ಯಮದಂಡಂಗೆ

ಈ ಪಟ್ಟಣವೆಲ್ಲವೂ ತಿಳಿದಿದೆ. ಈ ತಳಾರನು ಕಳ್ಳನನ್ನು ಕಂಡುಹಿಡಿಯಲು ಅಸಮರ್ಥನಾಗಿ, ತನ್ನ ಸಾವಿಗೆ ಹೆದರಿ, ಬಡವನೂ ದಿಕ್ಕಿಲ್ಲದವನೂ ಪಟ್ಟಣದಲ್ಲಿ ಭಿಕ್ಷೆ ಬೇಡಿ ಹೊಟ್ಟೆ ತುಂಬಿಸಿಕೊಂಡು ಜೀವಿಸುತ್ತಿರುವವನೂ ಆದ ನನ್ನನ್ನು ಹಿಡಿದುಕೊಂಡು ಬಂದು ಕೊಲ್ಲಿಸುತ್ತಿದ್ದಾನೆ". ಹೀಗೆನ್ನಲು, ತಳಾರನು ಕಳ್ಳರನ್ನು ಕಂಡುಹಿಡಿವ ಶಾಸ್ತ್ರಗಳಲ್ಲಿ ಬಹು ಪ್ರವೀಣನಾಗಿರುವುದರಿಂದ ರಾಜನಿಗೆ ಹೀಗೆಂದರು–"ಈತನು ತನ್ನ ರೂಪವನ್ನು ಮರೆಮಾಡಿ ರಾತ್ರಿಯವೇಳೆ ಪಟ್ಟಣದಲ್ಲೆಲ್ಲ ಕಳವು ಮಾಡಿ ಹಗಲಿನ ವೇಳೆ ಈ ರೀತಿಯಲ್ಲಿ ತೊನ್ನನಂತೆ ಕಾಣಿಸುತ್ತಿರುವನು. ನೀವು ನಂಬುವುದಿಲ್ಲವಾದರೆ ನಂಬಿಕೆ ಬರುವಂತೆ ಮಾಡಿ ತೋರಿಸುವೆನು." ಹೀಗೆ ಹೇಳಿ ಯಮದಂಡನು ಆಗಲೇ ವಿರುದ್ಧವಾದ ಗುಳಿಗೆ ಕಾಡಿಗೆಗಳನ್ನು ತೊನ್ನನ ಕಣ್ಣಿಗೆ ಹಚ್ಚಿದನು. ಆಗ ದಿವ್ಯವಾದ ತನ್ನ ಹಿಂದಿನ ರೂಪಗೊಂಡು–"ಈತನು ಗುಳಿಗೆ ಅಂಜನಗಳ ಕಪಟವನ್ನೂ ಇಂದ್ರಜಾಲವನ್ನೂ ಬಲ್ಲವನಾಗಿರುವುದರಿಂದ ಯಾವರೂಪವನ್ನು ಬೇಕಾದರೂ ಮಾಡಬಲ್ಲನು" ಎಂದನು. ಆಗ ತಳಾರನು–"ಇದನ್ನು ನಾನು ಬೇರೆಯವರಿಗೆ ಮಾಡಿ ನಂಬಿಕೆಯುಂಟುಮಾಡುವೆನು" ಎಂದು ಹೇಳಿ ರಾಜನ ಒಪ್ಪಿಗೆಯಿಂದ ರಾಣಿಯರ ಮತ್ತು ಸೇವಕಿಯರ ಕಣ್ಣುಗಳಿಗೆ ಗುಳಿಗೆ ಅಂಜನಗಳನ್ನು ಹಚ್ಚಿದನು. ಆಗ ಅವರೆಲ್ಲರೂ ತೊನ್ನು ರೋಗದವರಾಗಿ ಕಾಣಿಸಿದರು. ಹೀಗಿರಲು, ಮತ್ತೆ ವಿರುದ್ಧದ ಗುಳಿಗೆ ಅಂಜನಗಳನ್ನು ಹಚ್ಚಿದಾಗ ಸಹಜವಾದ ತಮ್ಮ ಹಿಂದಿನ ರೂಪಗಳನ್ನು ತಾಳಿದವರಾಗಿದ್ದರು. ಆಗ ರಾಜನಿಗೆ ನಂಬುಗೆಯಾಯಿತು. "ಇವನು ಸ್ಪಷ್ಟವಾಗಿ ಕಳ್ಳನಾಗಿರುತ್ತಾನೆ. ಇವನನ್ನು ದಂಡಿಸು" ಎಂದು ರಾಜನು ಯಮದಂಡನಿಗೆ ಆಜ್ಞೆಮಾಡಿದನು. ತಳಾರನು 'ಹಾಗೆಯೇ ಮಾಡು

ಬೆಸವೇೞ್ದುದಾತನಂತೆಗೆಯ್ವೆನೆಂದಾತನಂ ತನ್ನ ಮನೆಗೊಡಗೊಂಡು ಪೋಗಿ ಮಾಘಮಾಸದಿರುಳ್ ಕಡುಸೀತದೊಳ್ ಘೋರಮಪ್ಪ ಮೂವತ್ತೆರಡು ದಂಡಣೆಗಳಿಂ ನೀಡುಂ ದಂಡಿಸೆಯನಿತುಮಂ ಬಾೞ್ವಾೞ್ ಅವಯವದೆ ಸೈರಿಸಿಯುಂ ಕಳ್ಳನಲ್ಲೆನಯ್ಯೊ ಬಲ್ಲಾಳ್ತನದಿಂದೆನ್ನಂ ತಳಾಱಂ ಕೊಂದಪ್ಪನೆಂದೊಳಱಿ ಪುಯ್ಯಲಿಡೆ ತಳಾಱಂಗೆ ಕಳ್ಳನೀತನಲ್ಲೆಂಬುದೊಂದು ನಂಬುಗೆಯಾಗಿ ನೇಸಱ್ ಮೂಡೆಯುರಮನೆಗೆ ಪೋಗಿ ಅರಸಂಗಿಂತೆಂದು ಬಿನ್ನಪಂಗೆಯ್ದಂ ದೇವಾ ಮೂವತ್ತೆರಡು ಘೋರಮಪ್ಪ ದಂಡಣೆಗಳಿಂದಂ ಕಳ್ಳನಂ ದಂಡಿಸಿ ನೋಡಿದೆನಾತನಮೋಘಂ ಕಳ್ಳನಲ್ಲನ್ನಂ ದೇವರ್ ಮೆಚ್ಚುಕೆಯ್ವುದೆಂದೊಡರಸಂ ಶ್ಮಶಾನದ ಸೂಲದೊಳ್ ಯಮದಂಡನನಿಕ್ಕುವೆಂದಾಳ್ಗಳ್ಗೆ ಬೆಸವೇೞ್ದುದವರುಮಾತನಂ ಶ್ಮಶಾನಕ್ಕೆೞ್ದುಕೊಂಡು ಪೋಗಿ ದರ್ಕ್ಕಂ ಬಸಿದು ಸೂಲದೊಳಿಕ್ಕುವಾಗಳವರೊಡವೋಗಿ ತೊನ್ನಂ ರೂಪಪರಾವರ್ತನಂ ಗೆಯ್ದು ತನ್ನ ಸ್ವಾಭಾವಿಕಮಪ್ಪ ವಿದ್ಯುಚ್ಚೋರನಪ್ಪ ದಿವ್ಯರೂಪಂ ಕೈಕೊಂಡು ಸೂಲದೊಳಿಕ್ಕಲೀಯದೆ ಅಡ್ಡಮಾಗಿರ್ದರಸನ ಕಾಪಿನವರನೆಂದನೆಲೆಯಣ್ಣಗಳಿರಾ ನೀಮೀತನಂ ಕೊಂದಿರೀತನುಂ ಸೂಲದೊಳಿಕ್ಕೆಪಟ್ಟನಾಗಿ ಸತ್ತವನೆಂದವರೊಳ್ ನುಡಿದು ತಳಾಱನನಿಂತೆಂದನೆಲೆಗಳಾ ಯಮದಂಡಾ

ನೆನು' ಎಂದು ವಿದ್ಯುಚ್ಚೋರನನ್ನು ತನ್ನ ಮನೆಗೆ ಕರೆದುಕೊಂಡು ಹೋದನು. ಮಾಘ ಮಾಸದ ಚಳಿಯುಳ್ಳ ರಾತ್ರಿಯಲ್ಲಿ ಕಡುತಂಪಿನಲ್ಲಿ ಭಯಂಕರವಾದ ಮೂವತ್ತೆರಡು ವಿಧದ ಶಿಕ್ಷೆಗಳಿಂದ ಅತಿಶಯವಾಗಿ ದಂಡಿಸಿದನು. ಕಳ್ಳನು ಅವೆಲ್ಲವನ್ನೂ ಜೀವಿಸುತ್ತಿದ್ದಂತೆಯೇ ಸುಲಭವಾಗಿ ಸಹಿಸಿಕೊಂಡು-"ಅಯ್ಯೋ, ನಾನು ಕಳ್ಳನಲ್ಲದವನಾಗಿರುವೆನು. ತಳಾರನು ನನ್ನನ್ನು ತನ್ನ ಬಲದರ್ಪದಿಂದ ಕೊಲ್ಲುತ್ತಿದ್ದಾನೆ !" ಎಂದು ಕೂಗಿ ಬೊಬ್ಬಿಡುತ್ತಿದ್ದನು. ಇದರಿಂದ ಈತನು ಕಳ್ಳನಲ್ಲವೆಂದು ತಳಾರನಿಗೆ ನಂಬಿಕೆಯುಂಟಾಗಿ ಸೂರ್ಯೋದಯವಾದೊಡನೆ ಅರಮನೆಗೆ ಹೋಗಿ ಅರಸನಿಗೆ ಹೀಗೆ ಬಿನ್ನವಿಸಿದನು-'ದೇವಾ, ನಾನು ಕಳ್ಳನನ್ನು ಮೂವತ್ತೆರಡು ಬಗೆಯ ಉಗ್ರ ಶಿಕ್ಷೆಗಳಿಂದ ದಂಡಿಸಿ ನೋಡಿದೆನು. ಆತನು ನಿಶ್ಚಯವಾಗಿಯೂ ಕಳ್ಳನಲ್ಲ. ಪ್ರಭುವು ನನ್ನನ್ನು ಬೇಕಾದಂತೆ ಮಾಡಬಹುದು' ಎಂದನು. ಆಗ ರಾಜನು "ಯಮದಂಡನನ್ನು ಶ್ಮಶಾನದ ಶೂಲಕ್ಕೆ ಹಾಕಿ" ಎಂದು ಸೇವಕರಿಗೆ ಆಜ್ಞೆಮಾಡಿದನು. ಅವರು ಯಮದಂಡನನ್ನು ಶ್ಮಶಾನಕ್ಕೆ ಎಳೆದುಕೊಂಡು ಹೋದರು. ಶೂಲದ ಮೊಳೆಯನ್ನು ಹರಿತಮಾಡಿ, ಶೂಲದಲ್ಲಿ ಅವನನ್ನು ಹಾಕುವಾಗ ತೊನ್ನನೂ ಅವರೊಡನೆ ಹೋಗಿ ರೂಪಾಂತರ ವಿದ್ಯೆಯಿಂದ ತನ್ನ ರೂಪವನ್ನು ಪರಿವರ್ತನಗೊಳಿಸಿ ತನ್ನ ಸ್ವಾಭಾವಿಕವಾದ ವಿದ್ಯುಚ್ಚೋರನಾಗಿರುವ ದಿವ್ಯರೂಪವನ್ನು ತಾಳಿಕೊಂಡು ಬಂದು ಯಮದಂಡನನ್ನು ಶೂಲಕ್ಕೆ ಹಾಕಲು ಬಿಡದಂತೆ ಅಡ್ಡವಾಗಿ ನಿಂತು ರಾಜನ ಕಾವಲುಗಾರರೊಡನೆ ಹೀಗೆ ಹೇಳಿದನು.-"ಎಲೈ ಅಣ್ಣಂದಿರಾ ನೀವು ಇವನನ್ನು ಕೊಂದಿರಿ. ಈತನು ಶೂಲಕ್ಕೆ ಹಾಕಲ್ಪಟ್ಟವನಾಗಿ ಸತ್ತವನಾಗಿದ್ದಾನೆ" -ಎಂದು ಅವರಲ್ಲಿ ಹೇಳಿ, ತಳಾರನೊಡನೆ ಹೀಗೆಂದನು-"ಎಲೈ ತಿಳಿಯಿತೇ ಯಮದಂಡಾ,

ನೀನುಮಾನುಂ ಕಿಱಿಯಂದೊರ್ವರುಪಾಧ್ಯಾಯರ ಪಕ್ಕದೊಳೋದುವಂದು ನಂದನವನದೊಳಗೆ
ನೀನೆನ್ನ ಪೂಣ್ದ ಪ್ರತಿಜ್ಞೆಯಂ ನೆನೆವಾ ಒಂದುಂ ದೋಷವಿಲ್ಲದೆ ನಿನ್ನಂ ಕೊಲಿಸಿದೆನೊ
ಕೊಲಿಸೆನೊ ಪೂಣ್ದ ಪ್ರತಿಜ್ಞೆಯಂ ನೆನೆವೆಯೊ ನೆನೆಯೆಯೊ ಎನೆ ಯಮದಂಡನೊಳ್ಳಿತ್ತಾಗಿ
ನೆನೆದೆನೆಂದೊಡೆ ವಿದ್ಯುಚ್ಚೋರನಿಂತೆಂದಂ ಮತ್ತೀಗಳ್ ನೀನೇನ್ ಸತ್ತೆಯೊ ಸಾಯೆಯೊ
ಮತ್ತೇನೊ ಎಂದಾಗಳ್ ಯಮದಂಡನೆಂದಂ ದೇವಾ ನೀಂ ಗೆಲ್ದೆಯಾಂ ಸೋಲ್ತೆನುಂ
ಸತ್ತೆನುಮೆಂದಿರ್ವರ್ ಪದಿರಿನಿಂ ನುಡಿವ ಸೂೞ್ಮಾತುಗಳಂ ಕಾಪಿನವರುಂ ಪೊೞಲ
ಜನಮುಂ ಕೇಳ್ದು ಚೋದ್ಯಂಬಟ್ಟು ಬೆಱಗಾಗಿರ್ದೊಡೆ ವಿದ್ಯುಚ್ಚೋರಂ ಕಾಪಿನವ
ರನಿಂತೆಂದನೆನ್ನುಮನೀತನುಮನರಸನಲ್ಲಿಗೆ ಕೊಂಡು ಪೋಗಿಮರಸನ ಮುಂದೀತಂಗಮೆನಗಂ
ಮಾತುಂಟಲ್ಲಿ ನುಡಿದ ಬೞಿಕ್ಕರಸನೀತನಂ ಮೆಚ್ಚುಕೆಯ್ಗೆ ಎಂತುಂ ಕೊಲವೇೞ್ದೊಡಂ
ಮೂಱು ಸೂೞ್ ಬೆಸಗೊಂಡಲ್ಲದೆ ಕೊಲಲಾಗದೆಂದು ನೀತಿಶಾಸ್ತ್ರದೊಳ್ ಪೇೞ್ದುದಱಿಂದೆಮ್ಮಿ
ರ್ವರುಮನರಮನೆಗೆ ಕೊಂಡು ಪೋಗಿ ಅರಸಂಗೆ ತೋಱಿಮೆಂದೊಡಾ ಕಾಪಿನವರಿರ್ವರುಮ
ನರಸನಲ್ಲಿಗೆ ಕೊಂಡು ಪೋಗಿ ಇಂತೆಂದು ಬಿನ್ನಪಂಗೆಯ್ದರ್ ದೇವಾ ಈತಂ ಯಮದಂಡನಂ

ನೀನೂ ನಾನೂ ಚಿಕ್ಕಂದಿನಲ್ಲಿ ಒಬ್ಬರೇ ಉಪಾಧ್ಯಾಯರ ಬಳಿ ವಿದ್ಯಾಭ್ಯಾಸ ಮಾಡು
ವಂದು ನಂದನವೆಂಬ ಉದ್ಯಾನದಲ್ಲಿ ನಾನು ಶಪಥ ಮಾಡಿದುದನ್ನು ನೀನು ನೆನಪಿಟ್ಟಿರು
ವೆಯಾ ? ಅದರಂತೆ ಒಂದೂ ದೋಷವಿಲ್ಲದೆ ನಿನ್ನನ್ನು ನಾನು ಕೊಲಿಸಿದೆನೋ ಕೊಲಿಸ
ಲಿಲ್ಲವೊ ? ಮಾಡಿದ ಪ್ರತಿಜ್ಞೆಯನ್ನು ಸ್ಮರಿಸುವೆಯೋ ? ಸ್ಮರಿಸೆಯೋ ?'' ಎಂದು
ಕೇಳಿದನು ಯಮದಂಡನು "ಚೆನ್ನಾಗಿ ನೆನಪಿಟ್ಟಿರುವೆನು'' ಎಂದನು. ಆಗ ವಿದ್ಯು
ಚ್ಚೋರನು–"ಮತ್ತೆ ಈಗ ನೀನೇನು ಸತ್ತೆಯೋ? ಸಾಯೆಯೋ ? ಮತ್ತೇನು ?'' ಎಂದಾಗ
ಯಮದಂಡನು ಹೀಗೆಂದನು–"ದೇವಾ, ನೀನು ಗೆದ್ದವನಾಗಿರುವೆ. ನಾನು ಸೋತವನೂ
ಸತ್ತವನೂ ಆಗಿರುವೆನು''–ಎಂದು ಇಬ್ಬರೂ ಒಗಟಿನಂತಹ ರೀತಿಯಿಂದ ಹೇಳುವ ಉತ್ತರ
ಪ್ರತ್ಯುತ್ತರಗಳನ್ನು ಕಾವಲಿನವರೂ ಪಟ್ಟಣದ ಜನರೂ ಕೇಳಿ, ಆಶ್ಚರ್ಯಪಟ್ಟು ಬೆರಗಾಗಿ
ದ್ದರು. ವಿದ್ಯುಚ್ಚೋರನು ಕಾವಲುಗಾರರೊಡನೆ–"ನೀವು ನನ್ನನ್ನೂ ಇವನನ್ನೂ
ಅರಸನಲ್ಲಿಗೆ ಕೊಂಡುಹೋಗಿರಿ. ಅರಸನ ಮುಂದೆ ಈತನಿಗೂ ನನಗೂ ಹೇಳತಕ್ಕ
ಮಾತಿದೆ. ಅಲ್ಲಿ ನಾವು ಮಾತಾಡಿದನಂತರ ರಾಜನು ಇವನನ್ನು ತನಗೆ ಮೆಚ್ಚಿದಂತೆ
ಮಾಡುವನು. ಹೇಗಿದ್ದರೂ, ಕೊಲಲು ಆಜ್ಞಾಪಿಸಿದರೂ ಮೂರು ಬಾರಿ ಕೇಳದೆ
ಕೊಲ್ಲಬಾರದೆಂದು ನೀತಿಶಾಸ್ತ್ರದಲ್ಲಿ ಹೇಳಿರುವುದರಿಂದ, ನಮ್ಮಿಬ್ಬರನ್ನೂ ಅರಮನೆಗೆ
ಕೊಂಡು ಹೋಗಿ ಅರಸನಿಗೆ ತೋರಿಸಿ" ಎಂದನು. ಅದರಂತೆ ಕಾವಲುಗಾರರು
ಇಬ್ಬರನ್ನೂ ಅರಸನಲ್ಲಿಗೆ ಕೊಂಡುಹೋಗಿ ಈ ರೀತಿಯಾಗಿ ವಿಜ್ಞಾಪನೆ ಮಾಡಿ
ದರು– "ದೇವಾ ಈತನು ಯಮದಂಡನನ್ನು ಕೊಲ್ಲಲು ಬಿಡದೆ, ನಮ್ಮನ್ನು ತಡೆ

ಕೊಲಲೀಯದೆ ಬಾರಿಸಿದನೆಂದು ವಿದ್ಯುಚ್ಚೋರನಂ ತೋಱಿ ನುಡಿದೊಡರಸನೇಕೆ ನೀಂ ಬಾರಿಸಿದೆ ಯೆಂದು ಬೆಸಗೊಂಡೊಡೆ ವಿದ್ಯುಚ್ಚೋರನೆಂದಂ ಯಮದಂಡಂಗೇನುಂ ಪೊಲ್ಲಮೆಯುಂ ದೋಷಮುಮಿಲ್ಲ ನಿಮ್ಮ ದೇವತಾರಕ್ಷಿತಮಪ್ಪ ಸರ್ವರುಜಾಪಹಾರಮೆಂಬುದು ಮೊದಲಾಗಿ ಪೊೞಲ ಕಸವರಮನಿರುಳ್ ರೂಪಿನೊಳ್ ಕಳ್ದು ಪಗಲೆಲ್ಲಂ ತೊನ್ನನಾಗಿ ಪಾೞ್ದೇಗುಲದೊಳಿರ್ಪೆ ನದಱಿಂದೆನ್ನಂ ಕೊಲ್ಲಿಮೀತಂಗೇನುಂ ದೋಷಮಿಲ್ಲೆಂದೊಡರಸನೆಂದನಾ ಕಳ್ದ ಕಸವರಮನೆಲ್ಲಮ ನೇಗೆಯ್ದೆಯೆಂದು ಬೆಸಗೊಂಡೊಡನಿತುಮಿರ್ದುವಯ್ಸಾಸಿರಮುಮಾಱುಸಾಸಿರ ದೀನಾರಮೆನ್ನ ಸೂಳೆಗೆ ಬಿಯಮಾದುವುೞಿದುವೆಲ್ಲಂ ವಣ್ಣಂ ಚಳಿಯದಿರ್ದುದೆಂದೊಡರಸಂ ವಿದ್ಯುಚ್ಚೋರನಂ ಹಾರಮಂ ಕೊಂಡು ಬಾ ಪೊೞಲವರ್ಗ್ಗಂ ಕಸವರಮಂ ಮಡಗಿದೆಡೆಯುಂ ತೋಱೆಂದಾತನೊಡನೆ ಪೊೞಲ ಜನಮುಮನಟ್ಟೆ ಕಾಪುವೆರಸು ಪೋಗಿ ಪೊೞಲ್ಗೆ ನಾಡೆಯುಂತರದೊಳ್ ಪಿರಿದೊಂದು ಪರ್ವತ ಮುಂಟಲ್ಲಿಯೊಂದು ವಿಸ್ತೀರ್ಣ ಗುಹೆಯುಂಟದಱ ಬಾಗಿಲಂ ಮುಚ್ಚಿರ್ದ ಪಿರಿಯ ಸಿಲೆಯಂ ಕಳೆದದಱೊಳಗೆ ಪೊಕ್ಕು ಹಾರಮಂ ಕೊಂಡು ಪೊೞಲ ಜನಮೆಲ್ಲಮನೆಂದಂ ನಿಮ್ಮ ನಿಮ್ಮ ಕಸವರಮಪ್ಪುದನಾರಯ್ದು ಪಲ್ಲಟಿಸಲೀಯದೆ ನೋಡಿಕೊಳ್ಳಿಮೆಂದು ತೋಱಿದೊಡವರುಂ

ದನು" ಎಂದು ವಿದ್ಯುಚ್ಚೋರನನ್ನು ತೋರಿಸಿ ಹೇಳಿದರು. ಆಗ 'ರಾಜನು ನೀನು ಯಾಕೆ ತಡೆದೆ?' ಎಂದು ಕೇಳಲು ವಿದ್ಯುಚ್ಚೋರನು ಹೀಗೆ ಹೇಳಿದನು– "ಯಮದಂಡ ನಲ್ಲಿ ಯಾವುದೊಂದು ತಪ್ಪಾಗಲೀ ದೋಷವಾಗಲೀ ಇಲ್ಲ. ನಿಮ್ಮದಾಗಿರುವ ದೇವತೆಗಳಿಂದ ರಕ್ಷಿಸಲ್ಪಡುವ ಸರ್ವರುಜಾಪಹಾರವೆಂಬ ಮಾಲೆಯೇ ಮುಂತಾಗಿ ಪಟ್ಟಣದ ಹೊನ್ನನ್ನು ರಾತ್ರಿಯಲ್ಲಿ ಈ ರೂಪದಲ್ಲಿ ನಾನೇ ಕಳವು ಮಾಡಿ ಹಗಲೆಲ್ಲ ತೊನ್ನು ರೋಗದವನಂತೆ ಕಾಣಿಸಿಕೊಂಡು ಪಾಳುಬಿದ್ದ ದೇವಾಲಯದಲ್ಲಿ ಇರುತ್ತೇನೆ. ಆದುದರಿಂದ ನನ್ನನ್ನು ಕೊಲ್ಲಿರಿ, ಈತನಲ್ಲಿ ಏನೂ ದೋಷವಿಲ್ಲ"– ವಿದ್ಯುಚ್ಚೋರನು ಹೀಗೆನ್ನಲು ರಾಜನು– ಅವನೊಡನೆ– "ಆ ಕದ್ದ ಹೊನ್ನನ್ನೆಲ್ಲ ಏನು ಮಾಡಿದೆ" ಎಂದು ಕೇಳಿದನು. ವಿದ್ಯುಚ್ಚೋರನು—"ಅಷ್ಟೂ ಇದ್ದುವು. ಅವುಗಳಲ್ಲಿ ಐದುಸಾವಿರ ಆರುಸಾವಿರ ದೀನಾರನಾಣ್ಯ ನನ್ನ ಸೂಳೆಗೆ ಕೊಟ್ಟು ವೆಚ್ಚವಾಗಿದೆ. ಉಳಿದುದೆಲ್ಲ ಬಣ್ಣವಳಿಯದೆಯೇ ಇದೆ" ಎಂದು ಹೇಳಿದನು. ರಾಜನು ವಿದ್ಯುಚ್ಚೋರನೊಂದಿಗೆ—'ಹಾರವನ್ನು ತೆಗೆದುಕೊಂಡು ಬಾ, ಪಟ್ಟಣಿಗರಿಗೆ ಹೊನ್ನನ್ನು ಇಟ್ಟ ಸ್ಥಳವನ್ನು ತೋರಿಸು, ಎಂದು ಹೇಳಿ, ಆತನೊಂದಿಗೆ ಪಟ್ಟಣದ ಜನರನ್ನು ಕಳುಹಿಸಿದನು. ವಿದ್ಯುಚ್ಚೋರನು ಕಾವಲಿನವರೊಂದಿಗೆ ಹೋದನು ಆ ಪಟ್ಟಣಕ್ಕೆ ಬಹಳ ದೂರದಲ್ಲಿ ದೊಡ್ಡದೊಂದು ಬೆಟ್ಟವಿದೆ. ಆ ಬೆಟ್ಟದಲ್ಲಿ ಒಂದು ವಿಶಾಲವಾದ ಗವಿಯಿದೆ. ಅದರ ಬಾಗಿಲನ್ನು ದೊಡ್ಡ ಕಲ್ಲಿನಿಂದ ಮುಚ್ಚಿತ್ತು. ವಿದ್ಯುಚ್ಚೋರನು ಆ ಕಲ್ಲನ್ನು ತೆಗೆದು ಅದರ ಒಳಗೆ ಹೊಕ್ಕು ಮಾಲೆಯನ್ನು ತಂದು, ಪಟ್ಟಣದ ಜನರನ್ನೆಲ್ಲ ಸಂಬೋಧಿಸಿ ಹೇಳಿದನು– "ನಿಮ್ಮ ನಿಮ್ಮದಾಗಿರುವ ದ್ರವ್ಯ ಯಾವುದೆಂದು ಪರಿಶೀಲಿಸಿ, ಒಬ್ಬರದು ಮತ್ತೊಬ್ಬರಿಗಾಗದಂತೆ ನೋಡಿಕೊಳ್ಳಿ" ಎಂದು

ತಂತಮ್ಮ ಕಸವರಮನೆಲ್ಲಮನಾರಯ್ದು ಕೊಂಡರ್ ಮತ್ತೆ ವಿದ್ಯುಚ್ಚೋರನುಂ ಹಾರಮಂ ಕೊಂಡು ಪೋಗಿಯರಸಂಗೊಪ್ಪಿಸಿದೊಡರಸನಿಂತೆಂದು ವಿದ್ಯುಚ್ಚೋರನಂ ಬೆಸಗೊಂಡಂ ಮಾಘಮಾಸದಿರುಳಿನ ಸೀತದೊಳ್ ನಾಲ್ಕು ಜಾವಮುಂ ಮೂವತ್ತೆರಡು ಘೋರಮಪ್ಪ ದಂಡಣೆಯನೆಂತು ಸೈರಿಸಿದೆಯೆಂದೊಡಾತನಿಂತೆಂದರಸಂಗೆ ಪೇೞ್ಗುಂ ದೇವಾ ಒಂದು ದಿವಸಂ ಸಹಸ್ರಕೂಟ ಚೈತ್ಯಾಲಯಕ್ಕೆ ಕಿಱಿಯಂದೆನ್ನನೋದಿಸುವೋಜರುಮಾನುಂ ಪೋಗಿ ಓಜಂ ದೇವರಂ ಬಂದಿಸುವನ್ನೆಗಂ ಚರಿತಪುರಾಣಂಗಳಂ ವಖ್ಖಾಣಿಸುತ್ತಿರ್ದ ಶಿವಗುಪ್ತರೆಂಬಾಚಾರ್ಯರ ಪಕ್ಕದೆ ಕುಳ್ಳಿರ್ದು ವಖ್ಖಾಣೆಯಂ ಕೇಳುತ್ತಿರ್ಪನ್ನೆಗಂ ನರಕವ್ಯಾವರ್ಣನೆಯನಾ ಭಟಾರರಿಂತೆಂದು ಪೇೞ್ವುದಂ ಕೇಳ್ದೆಂ ವ್ರತ ಶೀಲ ಚಾರಿತ್ರ ಗುಣಂಗಳನಿಲ್ಲದವರುಂ ಜೀವಂಗಳಂ ಕೊಲ್ವರುಂ ಬೇಂಟೆಯಾಡುವರುಂ ರಾಗದ್ವೇಷಲೋಭಂ ಕಾರಣಮಾಗಿ ಪುಸಿ ನುಡಿದು ಜೀವಂಗಳ್ಗೆ ಸಂತಾಪಮಂ ವಧೆಯುಮಂ ಮಾಡಿಸುವರುಮಾಱಡಿಗೊಳ್ವರುಂ ಕಳ್ವರುಂ ಪೆಱರ ಪೆಂಡಿರೊಳ್ ಮಱೆ³ವಾೞ್ವರುಮಪರಿಮಿತ ಪರಿಗ್ರಹಮಂ ನೆರಪುವರುಂ ಮತ್ತಂ ಮಧುಮದ್ಯಮಾಂಸಂಗಳುಮಯ್ದು ಪಾಲ್ಮರದ ಪಣ್ಗಳುಮಾಳಂಬೆಯುಂ ಸಣಂಬಿನ ಪೂವುಮೆಂದಿವಂ

ತೋರಿಸಿದನು. ಅವರು ತಮ್ಮತಮ್ಮ ದ್ರವ್ಯವೆಲ್ಲವನ್ನೂ ಪರೀಕ್ಷಿಸಿ ನೋಡಿ ತೆಗೆದುಕೊಂಡರು. ಆಮೇಲೆ ವಿದ್ಯುಚ್ಚೋರನು ಮಾಲೆಯನ್ನು ತೆಗೆದುಕೊಂಡು ಹೋಗಿ ರಾಜನಿಗೆ ಒಪ್ಪಿಸಿದನು. ಆಗ ರಾಜನು ವಿದ್ಯುಚ್ಚೋರನೊಡನೆ–"ನೀನು ಮಾಘಮಾಸದ ರಾತ್ರಿಯ ಶೀತದಲ್ಲಿ ನಾಲ್ಕು ಜಾವದಷ್ಟು ಹೊತ್ತು ಮೂವತ್ತೆರಡು ವಿಧವಾದ ಕಠಿನವಾದ ಶಿಕ್ಷೆಯನ್ನು ಹೇಗೆ ಸಹಿಸಿಕೊಂಡೆ?" ಎಂದು ಕೇಳಲು, ಅವನು ಅರಸನಿಗೆ ಹೀಗೆಂದನು– "ದೇವಾ, ನಾನು ಚಿಕ್ಕವನಾಗಿದ್ದಾಗ ನನಗೆ ಕಲಿಸುವ ಉಪಾಧ್ಯಾಯರೂ ನಾನೂ ಸಹಸ್ರಕೂಟ ಜಿನಾಲಯಕ್ಕೆ ಹೋಗಿದ್ದೆವು, ನನ್ನ ಉಪಾಧ್ಯಾಯರು ದೇವರನ್ನು ನಮಸ್ಕರಿಸುತ್ತಿದ್ದಾಗ, ಚರಿತಗಳನ್ನೂ ಪುರಾಣಗಳನ್ನೂ ವ್ಯಾಖ್ಯಾನಮಾಡುತ್ತಿದ್ದ ಶಿವಗುಪ್ತರೆಂಬ ಆಚಾರ್ಯರ ಬಳಿಯಲ್ಲಿ ನಾನು ಕುಳಿತು ವ್ಯಾಖ್ಯಾನವನ್ನು ಕೇಳುತ್ತಿದ್ದೆನು. ಆ ಸಂದರ್ಭದಲ್ಲಿ ಆ ಋಷಿಗಳು ನರಕದ ವಿಶೇಷವರ್ಣನೆಯನ್ನು ಈ ರೀತಿಯಾಗಿ ಹೇಳುವುದನ್ನು ಕೇಳಿದೆನು– "ವ್ರತ–ಶೀಲ–ಚಾರಿತ್ರ–ಗುಣಗಳಿಲ್ಲದವರೂ ಪ್ರಾಣಿವಧೆಯನ್ನು ಮಾಡುವವರೂ ಬೇಟೆಯಾಡುವವರೂ ಒಲವು–ಹಗೆತನ–ಜಿಪುಣತನಗಳೇ ಕಾರಣವಾಗಿ ಸುಳ್ಳು ಹೇಳಿ ಜೀವಿಗಳಿಗೆ ದುಃಖವನ್ನುಂಟುಮಾಡುವವರೂ ಹತ್ಯೆಮಾಡುವವರೂ ಹಿಂಸೆಮಾಡುವವರೂ ಕಳವು ಮಾಡುವವರೂ ಪರಸ್ತ್ರೀಯರಲ್ಲಿ ಜಾರತ್ವದಿಂದ ರಹಸ್ಯವಾಗಿ ಬಾಳುವವರೂ ಮಿತಿಯಿಲ್ಲದೆ ವಸ್ತುಸಂಗ್ರಹವನ್ನು ಕೂಡಿಡುವವರೂ ಅದಲ್ಲದೆ, ಸಾರಾಯಿ–ಹೆಂಡ–ಮಾಂಸಗಳನ್ನು, ಆಲ–ಅಶ್ವತ್ಥ–ಅತ್ತಿ–ಇಪ್ಪೆ–ಗೋಳಿ ಎಂಬ ಐದು ಬಗೆಯ ಹಾಲುಮರಗಳ ಹಣ್ಣುಗಳನ್ನು, ಅಣಬೆಯನ್ನು, ಸಣಬಿನ ಹೂವನ್ನು ಸೇವನೆ ಮಾಡುವವರೂ

ಸೇವಿಸುವರುಂ ಮತ್ತಮಪೇಯಮಪೇಯ:ಪೇಯಮಭಕ್ಷ್ಯಭಕ್ಷಮೆಂಬಿವಱೊಳ್ ನೆಗಳ್ವರುಂ ಪಂಚಮಹಾಪಾತಕಂಗಳಂ ಗೆಯ್ದೊರುಮಿವರೆಲ್ಲಂ ನಿವೃತ್ತಿಪರಿಣಾಮಮಿಲ್ಲದೆ ಕಾಲಂಗೆಯ್ದೇೞುಂ ನರಕಂಗಳೊಳ್ ಪುಟ್ಟಿ ದುಃಖಂಗಳನೆಯ್ದುವರ್

ಗಾಹೆ ॥ ಅಚ್ಛಿಣಿಮೀಳಣ ಮೆತ್ತಂ ಣತ್ಥಿಸುಹಂ ದುಖ್ಖಮೇವ ಅಣುಬದ್ಧಂ
ಣಿರಯೇ ಣಿರಯಿಯಾಣಂ ಅಹಣ್ಣಿಸಂ ಪಚ್ಚಮಾಣಾಣಂ ॥

ವೃ ॥ ಕರಜನಿವೇಶಿತ ತೀಕ್ಷ್ಣಶಲಾಕಾಃ
ಕ್ರಕಚ ವಿಪಾಟಿತ ಭಿನ್ನ ಶರೀರಾಃ
ನರಕ ಭವೇ ವಿರಸಾ ವಿಷಹಂತೇ
ಚಿರಮಪಿ ತತ್‌ಕ್ಷಣ ದುಃಖವಿಷಾದಂ ॥

ಮತ್ತಂ

ಕಂದ॥ ಇಱಿಕಿಱಿದನೊದಱಿ ಕೈರಂ
ದಱಿ ಮುಱಿ ನಿಟ್ಟಿಲ್ವಸರಿದು ನೆಱನೆದೆಗಳ್ ಬಾ
ಯ್ದೆಱೆಯೆ ಪೊಸವುಣ್ಗಳೊಳ್ ಪೊಯ್
ಮಱುಂಗುವಿನಂ ಲೋಹವಾರಿಯುಂ ಮಱುಂಗುವಿನಂ ॥

18500

ಇವೂ ಅಲ್ಲದೆ–ವ್ಯರ್ಥವಾಗದಂತೆ ಕುಡಿಯಬಾರದುದನ್ನು ಕುಡಿಯುವುದು, ತಿನ್ನಬಾರದುದನ್ನು ತಿನ್ನುವುದು ಎಂಬಿವನ್ನು ಮಾಡುವವರೂ ಬ್ರಹ್ಮಹತ್ಯೆ, ಸುರಾಪಾನ, ಸ್ತೇಯ, ಗುರು ಪತ್ನೀ ಗಮನ, ಮತ್ತು ಈ ಪಾಪಗಳನ್ನು ಮಾಡಿದವರ ಒಡನಾಟ-ಎಂಬ ಪಂಚ ಮಹಾಪಾಪಗಳನ್ನು ಮಾಡಿದವರೂ–ಇವರೆಲ್ಲರೂ ಹಿಂದಿರುಗುವ ಅವಕಾಶವೇ ಇಲ್ಲದೆ ಸತ್ತು, ಏಳು ನರಕಗಳಲ್ಲಿ ಹುಟ್ಟಿ ದುಃಖಗಳನ್ನು ಹೊಂದುವರು. [ನರಕದಲ್ಲಿ ಹಗಲೂ ರಾತ್ರಿಯೂ ಬೇಯಿಸಲ್ಪಡುತ್ತಿರುವ ನರಕಜೀವಿಗಳಿಗೆ ಕಣ್ಣರೆಪ್ಪೆ ಹೊಡೆಯುವಷ್ಟು ಕಾಲ ಕೂಡ ಸುಖವಿಲ್ಲ. ಅವರಿಗೆ ಕಟ್ಟಿಟ್ಟದ್ದು ದುಃಖವೊಂದೇ.] ನರಕದಲ್ಲಿ ಹುಟ್ಟಿಬಂದವರ ಉಗುರುಗಳಲ್ಲಿ ಹರಿತವಾದ ಸಲಾಕೆಗಳನ್ನು ಹೊಗಿಸುತ್ತಾರೆ. ಶರೀರವನ್ನು ಕತ್ತರಿಸಿ ಗರಗಸದಿಂದ ಸೀಳುತ್ತಾರೆ. ನಾರಕಿಗಳು ಸಂತೋಷವಿಲ್ಲದವರು. ಒಡನೆಯೇ ಉಂಟಾದ ದುಃಖೋದ್ವೇಗಗಳನ್ನು ಬಹುಕಾಲ ಅನುಭವಿಸುತ್ತಾರೆ. ಅದಲ್ಲದೆ, ತಿವಿದು ಕೆರೆದು ಒದರಿ ಕಾಜಿನಂತೆ ಚೂರುಚೂರು ಮಾಡು, ಮುರಿ. ನೀಳವಾದ ಮೂಳೆಗಳನ್ನು ತುಂಡು ಮಾಡಿ ಮರ್ಮಸ್ಥಳಗಳು ಬಾಯಿ ತೆರೆಯುವಂತೆ ಹೊಸಹುಣ್ಣುಗಳ ಮೇಲೆ ಹೊಯಿ–ಎನ್ನುತ್ತ ನರಕದಲ್ಲಿ ಶಿಕ್ಷಿಸುತ್ತಾರೆ. 'ಸೊಂಟವನ್ನು ಕತ್ತರಿಸು. ತೊಡೆಯನ್ನು ಮುರಿ.

ಕಡಿ ಕಟಿವಮನುಡಿ ಕೊಡೆಯುಂ
ನಡನಡನಡುಗುವಿನಮಡಸಿ ತಡೆಯದೆ ಖಳನಂ
ಪಿಡಿದುಡಿಯೆ ಕಟ್ಟು ಮಿಡ ಮಿಡ
ಮಿಡುಕುವಿನಂ ಬಡಿಯೊಳೊಡೆಯೆ ಪೊಡೆ ಪೆಡತಲೆಯುಂ ॥

ಬಡಿ ಕೊಲ್ ಕಟ್ಟಱಿ ಮುಱಿ ಕಡಿ
ನಡುವಂ ಕೊಱೆ ಕುತ್ತಿಕರುಳ್ಗಳಂ ತೆಗೆ ಮೊಗಮಂ
ಸುಡು ಪಿಡಿ ಬಡಿ ನಿಮಿರ್ದಿಱಿ ಬಯ್
ಕಡಂಗಿ ನುಂಗೆಂದು ಮುಸುಱಿ ನಾರಕರಾಗಳ್ ॥

ಮತ್ತಂ ಕೊಂತಂಗಳಿಂದಮಿಟ್ಟಿಗಳಿಂದಂ ಕುತ್ತಿಸಿಱಿಂದಂ ಕರುಳ್ಮಾಲೆಗಳ್ ನೆಲದೊಳ್ ಸುರಿಯೆ ಕುತ್ತುವುದುಂ ಮುಟ್ಟಿಗೆಗಳೊಳಿಟ್ಟು ತೆಗಪುವುದುಂ ಕರಗಸಂಗಳಿಂದಂ ಮರನಂ ಪೋೞ್ವಂತೆ ಕೆಯ್ಯುಂ ಕಾಲನಗಲ್ಚಿ ಪಿಡಿದಡಸಿ ಕಟ್ಟಿಯುದ್ದಂ ಬಿಡಿದು ಪೋೞ್ವುದು ಮಿಂತಿವು ಮೊದಲಾಗೊಡೆಯ ದುಃಖಂಗಳಂ ಕಣ್ಣೆಮೆಯಿಕ್ಕುವನಿತು ಪೊೞ್ತಪ್ಪೊಡಮುಸಿರ್ ಪತ್ತಿಲ್ಲದು ತ್ಕೃಷ್ಟದಿಂದಮೇೞನೆಯ ನರಕದೊಳ್ ಮೂವತ್ತುಮೂಱು ಸಾಗರೋಪಮ ಕಾಲಂ ಬರೆಗಂ ದುಃಖಂಗಳನೆಯ್ದುವರ್ ಮತ್ತಂ ದಾನ ಪೂಜೆ ಶೀಲೋಪವಾಸಮೆಂದಿಂತು ಚತುರ್ವಿಧಮಪ್ಪ ಶ್ರಾವಕಧರ್ಮದೊಳ್ ನೆಗೞ್ವವರುಂ ತಪಂಗೆಯ್ವರುಂ ಸ್ವರ್ಗಾಪವರ್ಗ ಸುಖಂಗಳನೆಯ್ದುವರೆಂ

ಗಡಗಡ ನಡುಗುಮಂತೆ ಮೇಲೆ ಬಿದ್ದು ತಡಮಾಡದೆ ಪಾಪಿಯನ್ನು ಹಿಡಿದು ಮುರಿಯುವ ಹಾಗೆ ತಟ್ಟು. ವಿಲಿವಿಲಿ ಒದ್ದಾಡಲು ಹೆಡತಲೆ ಒಡೆಯುವಂತೆ ದೊಣ್ಣೆಯಲ್ಲಿ ಬಡಿ' ಎನ್ನುತ್ತಾರೆ. 'ಬಡಿ, ಕೊಲ್ಲು, ಕಟ್ಟು, ಕಿವಿ, ಮುರಿ, ಕಡಿ, ಸೊಂಟ ಕತ್ತರಿಸು, ಕುತ್ತಿ ಕರುಳುಗಳನ್ನು ಹೊರ ತೆಗೆ, ಮುಖಕ್ಕೆ ಬೆಂಕಿ ಹಾಕು, ಹಿಡಿ, ಹೊಡೆ, ನೇರವಾಗಿ ತಿವಿ, ಬಯ್ಯು, ಉತ್ಸಾಹದಿಂದ ನುಂಗಿಬಿಡು' – ಎಂದು ನರಕದವರು ಮುತ್ತಿಕೊಳ್ಳುತ್ತಾರೆ. ಅದಲ್ಲದೆ, ಒನಕೆಗಳಿಂದ ಈಟಿಗಳಿಂದ ಚುಚ್ಚುವ ಕೋಡುಗಳಿಂದ ಕರುಳಿನ ಮಾಲೆಗಳು ನೆಲದಲ್ಲಿ ಸುರಿಯುವಂತೆ ಕುತ್ತುವುದು, ಸೌದೆಗಳಿಂದ ಹೊಡೆದು ಎಳೆಯುವುದು ಕರಗಸಗಳಿಂದ ಮರವನ್ನು ಸೀಳುವಂತೆ ಕೈಯನ್ನೂ ಕಾಲನ್ನೂ ಅಗಲಿಸಿ ಹಿಡಿದು ಬಿಗಿಯಾಗಿ ಕಟ್ಟಿ ಉದ್ದಕ್ಕೆ ಹಿಡಿದು ಸೀಳುವುದು—ಇಂತು ಇವೇ ಮೊದಲಾಗಿ ಉಳ್ಳ ದುಃಖಗಳನ್ನು ಕಣ್ಣರೆಪ್ಪೆ ಮುಚ್ಚಿ ತೆರೆಯುವಷ್ಟು ಹೊತ್ತು ಕೂಡ ದುಃಖವಿಲ್ಲದ ಉಸಿರು ಬಿಡಲು ಅವಕಾಶವಿಲ್ಲದಿರುವ ಅತ್ಯಂತ ಕಠಿಣಕರವಾದ ಏಳನೆಯ ನರಕದಲ್ಲಿ ಮೂವತ್ತಮೂರು ಸಾಗರ ಸಮಾನವಾದ ಕಾಲದವರೆಗೆ ನಾರಕಿಗಳು ದುಃಖವನ್ನು ಅನುಭವಿಸುವರು. ಮತ್ತೇನೆಂದರೆ, ದಾನ–ಪೂಜೆ–ಶೀಲ–ಉಪವಾಸ ಎಂದು ಈ ರೀತಿ ನಾಲ್ಕು ವಿಧವಾಗಿರುವ ಶ್ರಾವಕಧರ್ಮದಲ್ಲಿ ವರ್ತಿಸುವವರೂ ತಪವನ್ನು

ದಿಂತು ಪೇೞೆ[3] ಕೇಳ್ದು ಭಟಾರರ ಪಕ್ಕದೆ ಅಣುವ್ರತ ಗುಣವ್ರತ ಶಿಕ್ಷಾವ್ರತಮೆಂದಿಂತು ದ್ವಾದಶ ವಿಧಮಪ್ಪ ಶ್ರಾವಕಧರ್ಮಮುಮನರ್ಹಂತ ಪರಮ ದೇವರೆ ದೇವರ್ ಕೊಲ್ಲದುದೆ ಧರ್ಮಂ ಬಾಹ್ಯಾಭ್ಯಂತರ ಪರಿಗ್ರಹಮಿಲ್ಲದುದೆ ತಪಮರ್ಹಂತ ಪರಮ ದೇವರಾಗಮದೊಳ್ ಪೇೞೆ[3]ಪಟ್ಟ ಜೀವಾಜೀವ ಪುಣ್ಯಪಾಪಾಸ್ರವ ಸಂವರ ನಿರ್ಜರ ಬಂಧ ಮೋಕ್ಷಮೆಂದಿಂತು ನವಪದಾರ್ಥಂಗಳುಮಂ ಪಂಚಾಸ್ತಿ ಕಾಯಂಗಳುಮಂ ಷಡ್ದ್ರವ್ಯಂಗಳುಮಂ ನಂಬುವುದು ಸಮ್ಯಕ್ತ್ವಮೆಂಬುದಕ್ಕುಮಾ ಸಮ್ಯಕ್ತ್ವದತಿಚಾರಂಗಳ್ ಶಂಕಾದ್ಯಷ್ಟಮಳಂಗಳುಮೆಂಟು ಮದಂಗಳುಂ ಮೂಱು ಮೂಢಮುಮಾಱನಾಯತನ ಸೇವೆಗಳುಮೆಂದಿಂತಿರ್ಪತ್ತಯ್ದುಕ್ಕುಮವಂ ಪಿಂಗಿಸಿ ನಿಶ್ಶಂಕಾದ್ಯಷ್ಟಗುಣಂಗಳಿಂ ಕೂಡಿದ ಶುದ್ಧಮಪ್ಪ ಸಮ್ಯಕ್ತ್ವಪೂರ್ವಕಂ ವ್ರತಂಗಳನೇಱಿಸಿಕೊಂಡು ಮತ್ತೆ ನರಕಂಗಳ ದುಃಖಂಗಳಂ ಕೇಳ್ದವಱ ಶತಸಹಸ್ರ ಭಾಗಕ್ಕಪ್ಪೊಡಮೀ ದುಃಖಮಿಲ್ಲೆಂದು ಮನದೊಳ್ ಬಗೆದು ಮೂವತ್ತೆರಡುಂ ದಂಡಣೆಗಳಂ ಸೈರಿಸಿದೆನೆಂದೊಡರಸಂ ಕೇಳ್ದು ನಿನಗೊಸೆದೆಂ ಬೇಡಿಕೊಳ್ ನಿನ್ನ ಬೇಡಿದುದೆಲ್ಲಮಂ ಕುಡುವೆನೆಂದೊಡೆ ಪೆಱತೇನುಮನೊಲ್ಲೆನೆನ್ನ ಕೆಳೆಯನಪ್ಪ

ಆಚರಿಸುವವರೂ ಸ್ವರ್ಗ–ಮೋಕ್ಷಗಳ ಸುಖಕ್ಕೆ ಭಾಗಿಗಳಾಗುವರು ಎಂದು ಈ ರೀತಿಯಾಗಿ ಶಿವಗುಪ್ತಾಚಾರ್ಯರು ಹೇಳುತ್ತಿದ್ದರು. ಅದನ್ನು ನಾನು ಕೇಳಿ ಋಷಿಗಳ ಬಳಿಯಲ್ಲಿ ಅಣುವ್ರತ (ಅಹಿಂಸೆ, ಸತ್ಯ, ಅಚೌರ್ಯ, ಬ್ರಹ್ಮಚರ್ಯ, ಅಪರಿಗ್ರಹ) ಗುಣವ್ರತ (ದಿಗ್ವ್ರತ, ದೇಶವ್ರತ, ಅನರ್ಥದಂಡವ್ರತ), ಶಿಕ್ಷಾವ್ರತ (ಸಾಮಾಯಿಕವ್ರತ ಪ್ರೋಷಧೋಪವಾಸವ್ರತ, ಭೋಗ ಪರಿಭೋಗ ಪರಮಾಣುವ್ರತ, ಅತಿಥಿಸಂವಿಭಾಗವ್ರತ)— ಎಂಬೀ ಹನ್ನೆರಡು ಬಗೆಯ ಶ್ರಾವಕಧರ್ಮವನ್ನೂ ಜಿನೇಶ್ವರನೇ ದೇವರು, ಕೊಲ್ಲದಿರುವುದೇ (ಅಹಿಂಸೆಯೇ) ಧರ್ಮ, ಹತ್ತು ಬಗೆಯ ಬಾಹ್ಯ ಪರಿಗ್ರಹವೂ ಹತ್ತು ಬಗೆಯ ಅಂತರಂಗ ಪರಿಗ್ರಹವೂ ಇಲ್ಲದಿರುವುದೇ ತಪಸ್ಸು, ಜೈನಧರ್ಮ ಶಾಸ್ತ್ರದಲ್ಲಿ ಹೇಳಿರುವ ಜೀವ–ಅಜೀವ-ಪುಣ್ಯ-ಪಾಪ-ಆಸ್ರವ-ಸಂವರ–ನಿರ್ಜರ–ಬಂಧ–ಮೋಕ್ಷ ಎಂಬೀ ಒಂಬತ್ತು ಪದಾರ್ಥಗಳನ್ನೂ ಪಂಚಾಸ್ತಿಕಾಯಗಳನ್ನೂ ಆರು ಬಗೆಯ ದ್ರವ್ಯಗಳನ್ನೂ ನಂಬುವುದು ಸಮ್ಯಕ್ತ್ವವೆನಿಸುವುದು. ಆ ಸಮ್ಯಕ್ತ್ವದ ಉಲ್ಲಂಘನೆಯ ವರ್ತನೆಗಳು--ಶಂಕೆ ಮೊದಲಾದ ಎಂಟು ಮಲಗಳು, ಎಂಟು ಮದಗಳು, ಮೂರು ಮೂಢಗಳು, ಆರು ಅನಾಯತನ ಸೇವೆಗಳು-ಎಂಬೀ ಇಪ್ಪತ್ತೈದಾಗಿವೆ. ಅವನ್ನೆಲ್ಲ ಹಿಂಗಿಸಿ ನಿಶ್ಶಂಕೆ ಮೊದಲಾದ ಎಂಟು ಗುಣಗಳಿಂದ ಕೂಡಿದ ಶುದ್ಧವಾದ ಸಮ್ಯಕ್ತ್ವದೊಡನೆ ವ್ರತಗಳನ್ನು ಸ್ವೀಕರಿಸಿ, ನರಕಗಳ ದುಃಖಗಳನ್ನು ಕೇಳಿ ಅವುಗಳ ಲಕ್ಷದಲ್ಲಿ ಒಂದು ಭಾಗದಷ್ಟು ಕೂಡ ದುಃಖವು ಇಲ್ಲವೆಂದು ಮನಸ್ಸಿನಲ್ಲಿ ಭಾವಿಸಿ ಮೂವತ್ತೆರಡು ಶಿಕ್ಷೆಗಳನ್ನು ನಾನು ಸಹಿಸಿದೆನು" ಎಂದು ವಿದ್ಯುಚ್ಚೋರನು ಹೇಳಿದನು. ಅದನ್ನು ರಾಜನು ಕೇಳಿ "ನಿನಗೆ ನಾನು ಒಲಿದಿದ್ದೇನೆ. ಬೇಡಿಕೋ ; ನೀನು ಬೇಡಿದುದೆಲ್ಲವನ್ನೂ ಕೊಡುವೆನು" ಎಂದು ಹೇಳಿದನು. "ನನಗೆ ಬೇರೆ ಯಾವುದೂ ಬೇಕಾಗಿಲ್ಲ, ನನ್ನ ಗೆಳೆಯನಾದ ಯಮದಂಡನಿಗೆ ಕ್ಷಮೆಕೊಡಬೇಕು

ಯಮದಂಡಂಗೆ ಕ್ಷಮಿಯಿಸುವುದನೆ ಬೇಡಿದೆನೆಂದೊಡರಸನಿಂತೆಂದು ಬೆಸಗೊಂಡಂ ಯಮದಂಡಂ ನಿನಗೇತು ಕೆಳೆಯನಾದಂ ಮತ್ತೆ ನೀಂ ಶ್ರಾವಕವ್ರತಂಗಳಂ ಕೈಕೊಂಡೆಯಪ್ಪೊಡೇಕೆ ಕಳ್ವೆಯೆಂದು ಬೆಸಗೊಂಡೊಡಾತನಿಂತೆಂದಂ ಯಮದಂಡನೆನಗೆ ಕೆಳೆಯನಪ್ಪುದುಮಂ ನಿಮ್ಮ ಪೊಳಲ ಕಸವರಮಂ ಕಳ್ದುದರ್ಕೆ ಕಾರಣಮುಮಂ ಪೇೞ್ವೆಂ ಕೇಳರಸಾ ಎಂದು ವಿದ್ಯುಚ್ಚೋರನಿಂತೆಂದು ಪೇೞಲ್ತೊಡಂಗಿದಂ ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ತಿಲಕಮನೆ ಪೋಲ್ವುದು ದಕ್ಷಿಣಾಪಥದೊಳಾಭೀರಮೆಂಬುದು ನಾಡಲ್ಲಿ ವರ್ಣೆಯೆಂಬ ತೊಱೆಯಾ ತಡಿಯೊಳ್ ವೇಣಾತಟಮೆಂಬುದು ಪೊೞಲದು ಪೊೞಲಗುಣಂಗಳಿನಾದಮಾನುಂ ರಮ್ಯಮಪ್ಪುದು ಸ್ವರ್ಗಮನೆ ಪೋಲ್ವುದದನಾಳ್ವೊಂ ಜಿತಶತ್ರುವೆಂಬೊನರಸನಾತನ ಮಹಾದೇವಿ ವಿಜಯಮತಿಯೆಂಬೊಳಾ ಇರ್ವರ್ಗ್ಗಂ ಮಗನೆನಾಂ ವಿದ್ಯುಚ್ಚೋರನೆಂಬೆಂ ಮತ್ತಾ ಪೊೞಲೊಳ್ ಯಮಪಾಶನೆಂಬೊಂ ತಳಾಱನಾತನ ಪೆಂಡತಿ ನಿಜಗುಣದೇವತೆಯೆಂಬೊಳಾ ಇರ್ವರ್ಗ್ಗಂ ಮಗನೀತಂ ಯಮದಂಡನೆಂಬೊಂ ಮತ್ತಾಮಿರ್ವೆಮುಂ ಸಮಾನವಯಸರೆಮಯ್ದಾಱು ವರ್ಷದ ಪ್ರಾಯದಂದು ಶ್ರಾವಕನಪ್ಪ ಸಿದ್ಧಾರ್ಥನೆಂಬುಪಾಧ್ಯಾಯನ ಪಕ್ಕದೆ ಇರ್ವರುಮನೋದಲಿಟ್ಟೊಡೇೞೆಂಟು ವರುಷದೊಳಗೆ ವ್ಯಾಕರಣಂ ಪ್ರಮಾಣಂ ಛಂದಮಲಂಕಾರಂ ನಿಘಂಟು ಕಾವ್ಯಂ ನಾಟಕಂ ಸಾಮುದ್ರಿಕಂ ವಾತ್ಸ್ಯಾಯನಂ

ಎಂಬುದಾಗಿ ಬೇಡಿದ್ದೇನೆ" ಎಂದು ವಿದ್ಯುಚ್ಚೋರನು ಹೇಳಲು, ರಾಜನು ಹೀಗೆ ಕೇಳಿದನು—"ಯಮದಂಡನು ನಿನಗೆ ಹೇಗೆ ಗೆಳೆಯನಾದ ? ಅಲ್ಲದೆ, ನೀನು ಶ್ರಾವಕವ್ರತಗಳನ್ನು ಸ್ವೀಕರಿಸಿರುವೆಯಾದರೆ ಏಕೆ ಕಳವು ಮಾಡುತ್ತೀ?" ಹೀಗೆ ಕೇಳಿದಾಗ ಅವನು—"ಯಮದಂಡನು ನನಗೆ ಗೆಳೆಯನಾದುದನ್ನೂ ನಿಮ್ಮ ಪಟ್ಟಣದ ಹೊನ್ನನ್ನು ಕಳವು ಮಾಡಿದುದಕ್ಕೆ ಕಾರಣವನ್ನೂ ಹೇಳುವೆನು. ಅರಸನೇ ಕೇಳು" ಎಂದು ವಿದ್ಯುಚ್ಚೋರನು ಹೀಗೆ ಹೇಳತೊಡಗಿದನು—ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ದಕ್ಷಿಣದೇಶದಲ್ಲಿ ಬೊಟ್ಟನ್ನು ಹೋಲುವಂತಿರುವ (ಶ್ರೇಷ್ಠವಾದ) ಆಭೀರವೆಂಬ ನಾಡು ಇದೆ. ಅಲ್ಲಿ ವರ್ಣೆ ಎಂಬ ನದಿಯ ತೀರದಲ್ಲಿ ವೇಣಾತಟ ಎಂಬ ಪಟ್ಟಣವಿದೆ ಅದು ಪಟ್ಟಣದ ಗುಣಗಳಿಂದ ಅತ್ಯಂತ ರಮಣೀಯವಾದುದು, ಇಂದ್ರಲೋಕವನ್ನೇ ಹೋಲುವುದು. ಅದನ್ನು ಜಿತಶತ್ರು ಎಂಬ ಅರಸನು ಆಳುತ್ತಿದ್ದನು. ಅವನಿಗೆ ವಿಜಯಮತಿ ಎಂಬ ರಾಣಿಯಿದ್ದಳು. ಆ ಇಬ್ಬರಿಗೆ ನಾನು ಮಗನಾಗಿರುವೆನು, ವಿದ್ಯುಚ್ಚೋರನೆಂಬವನಾಗಿರುವೆನು. ಆ ಪಟ್ಟಣದಲ್ಲಿ ಯಮಪಾಶನೆಂಬ ನಗರರಕ್ಷಕ (ತಳಾರ)ನಿದ್ದನು. ಅವನ ಹೆಂಡತಿ ನಿಜಗುಣದೇವತೆ ಎಂಬವಳು ಆ ಇಬ್ಬರಿಗೂ ಯಮದಂಡನೆಂಬ ಈತನು ಮಗನು. ನಾವಿಬ್ಬರೂ ಸಮಾನ ವಯಸ್ಸಿನವರಾಗಿದ್ದೇವೆ. ನಮಗಿಬ್ಬರಿಗೂ ಐದು ಆರು ವರ್ಷ ಪ್ರಾಯವಾದಾಗ ಜೈನಸದ್ಗೃಹಸ್ಥನಾದ ಸಿದ್ಧಾರ್ಥನೆಂಬ ಉಪಾಧ್ಯಾಯನ ಬಳಿಯಲ್ಲಿ ಇಬ್ಬರನ್ನೂ ವಿದ್ಯಾಭ್ಯಾಸಕ್ಕೆ ಇಟ್ಟರು. ಏಳೆಂಟು ವರ್ಷದೊಳಗಾಗಿ ನಾವಿಬ್ಬರೂ ವ್ಯಾಕರಣ, ಪ್ರಮಾಣ, ಛಂದಸ್ಸು, ಅಲಂಕಾರ, ನಿಘಂಟು, ಕಾವ್ಯ,

ಶಾಲಿಹೋತ್ರಂ ಪಾಲಕಾಪ್ಯಂ ಚಾಣಕ್ಯಂ ವೈದ್ಯಂ ಮೊದಲಾಗೊಡೆಯ ಶಾಸ್ತ್ರಂಗಳನೆಲ್ಲಮಂ ನಿರ್ವರುಂ ಕಲ್ತು ಬೞಿಕ್ಕೀತಂ ತಳಾಱನ ಮಗನಪ್ಪುದಱಿಂ ತನಗೆ ತಕ್ಕ ಕಳ್ಳರನಾರಯ್ವ ತೆಱನಂ ಪೇೞ್ವ ಸುರಖಮೆಂಬೋದಂ ಕಲ್ತೊ ನಾನುಂ ಕಳ್ವುಪಾಯಮಂ ಪೇೞ್ವ ಕರಪಟಶಾಸ್ತ್ರಮಂ ಕಲ್ತೆ ನಿಂತೆಮಗನ್ಯೋನ್ಯ ಪ್ರೀತಿಯಿಂದಂ ಕಾಲಂ ಸಲೆ ಮತ್ತೊಂದು ದಿವಸಮಿರ್ವರುಂ ವನಕ್ರೀಡೆ ಯಾಡಲೆಂದಿಂದ್ರೋಪಮಮೆಂಬ ವನಕ್ಕೆ ಪೋಗಿಯಲ್ಲಿಯಶೋಕ ಪುನ್ನಾಗ ವಕುಳ ತಿಳಕ ತಮಾಳ ಚಂಪಕ ಕ್ರಮುಕ ನಾಳಿಕೇರ ಖರ್ಜೂರ ಜಂಬು ಜಂಬೀರ ಪನಸದಾಡಿಮ ಕದಳೀ ದ್ರಾಕ್ಷಾ ಸಹ ಕಾರಂ ಮೊದಲಾಗೊಡೆಯ ಪಲವುಂ ತೆಱದ ವೃಕ್ಷಜಾತಿಗಳಿಂದಂ ಕಿಕ್ಕಿಱಿಗಿಱಿದಿರ್ದ ನಂದನವನ ದೊಳಿರ್ವರುಮುಳಿಸೆಂಡನಾಡುತ್ತಿರಲೋಕನ ವಿದ್ಯೆಯನೀತಂ ಕಲ್ತನಪ್ಪುದಱಿಂದೆಲ್ಲಿಯುಮಿದೊಡಂ ಕಾಣಲಾಗದೀತನಂ ನೀಡುಮಱಸಿ ಕಾಣದೆ ದೆಸೆಗೆಟ್ಟು ಬೇಸತ್ತಾನಿಂತೆಂದೆನಕ್ಕುಂ ಮಗನೆ ನೀಂ ತಳಾಱನಪ್ಪಂದು ನಿನ್ನ ಕಾಪಿನೊಳ್ ಕಳ್ದು ನಿನ್ನಂ ಕೊಲಿಸದಾಗಳೇನಾಯ್ತೆಂದು ನುಡಿದೊಡೀ ತನುಮಿಂತೆಂದನಕ್ಕುಂ ಮಗನೆ ನೀನೆನ್ನ ತಳಾಱಂಗೆಯ್ವಂದು ಕಳ್ದೊಡೆ ನಿನ್ನಂ ಪಿಡಿದುಡಿಯೆ ಕಟ್ಟಿ ಕಳ್ಳರ ದಂಡನೆಯಿಂ ದಂಡಿಸದಾಗಳೇನಾಯ್ತೆಂದು ನುಡಿದೊಡೀ ನುಡಿಯುಂ ಮಱೆಯಲ್ವೇ

ನಾಟಕ, ಸಾಮುದ್ರಿಕ, ವಾತ್ಸ್ಯಾಯನ, ಶಾಲಿಹೋತ್ರ, ಪಾಲಕಾಪ್ಯ, ಚಾಣಕ್ಯ, ವೈದ್ಯ–ಮೊದಲಾಗಿ ಉಳ್ಳ ಶಾಸ್ತ್ರಗಳೆಲ್ಲವನ್ನೂ ಕಲಿತೆವು. ಆ ಮೇಲೆ, ಇವನು, ತಳಾರನ ಮಗನಾದುದರಿಂದ ತನಗೆ ಯೋಗ್ಯವಾದ ಕಳ್ಳರನ್ನು ಕಂಡುಹಿಡಿವ ಕ್ರಮವನ್ನು ಹೇಳ ತಕ್ಕ 'ಸುರಖ' ಎಂಬ ವಿದ್ಯೆಯನ್ನು ಕಲಿತನು. ನಾನು ಕಳವು ಮಾಡುವ ಉಪಾಯ ವನ್ನು ತಿಳಿಸುವ ಕರಪಟಶಾಸ್ತ್ರವನ್ನು ಕಲಿತೆನು. ಹೀಗೆ ನಮ್ಮೊಳಗೆ ಪರಸ್ಪರ ಪ್ರೀತಿ ಯಿಂದ ಕಾಲ ಕಳೆಯುತ್ತಿತ್ತು. ಒಂದು ದಿವಸ ನಾವಿಬ್ಬರೂ ಕಾಡಿನಲ್ಲಿ ಆಟವಾಡ ಲೆಂದು 'ಇಂದ್ರೋಪಮ' ಎಂಬ ಕಾಡಿಗೆ ಹೋದೆವು. ಅಲ್ಲಿ ಅಶೋಕ, ಪುನ್ನಾಗ, ರೆಂಜೆ, ತಿಲಕ, ಹೊಂಗೆ, ಸಂಪಗೆ, ಅಡಕೆಮರ, ತೆಂಗಿನಮರ, ಖರ್ಜೂರ, ಜಂಬು, ನಿಂಬೆ, ಹಲಸು, ದಾಳಿಂಬ, ಬಾಳೆ, ದ್ರಾಕ್ಷೆ, ಮಾವು–ಮುಂತಾಗಿರತಕ್ಕ ಹಲವು ಬಗೆಯ ಮರಗಳ ಜಾತಿಗಳಿಂದ ಒತ್ತೊತ್ತಾಗಿರುವ ನಂದನದ ಉದ್ಯಾನದಲ್ಲಿ ಇಬ್ಬರೂ ಉಳಿಚೆಂಡಾಟವನ್ನು ಆಡುತ್ತಿದ್ದೆವು. ಈತನು ಅದೃಶ್ಯವಾಗತಕ್ಕ ವಿದ್ಯೆಯನ್ನು ಕಲಿತವನಾದುದರಿಂದ ಎಲ್ಲಿ ದ್ದರೂ ಕಾಣದ ರೀತಿಯಲ್ಲಿರಲು ಈತನನ್ನು ಬಹಳವಾಗಿ ಹುಡುಕಿದೆನು. ಆದರೂ ಕಾಣದೆ ದಿಕ್ಕುಕಾಣದೆ ಬೇಸರಗೊಂಡು ಹೀಗೆ ಹೇಳಿದೆನು—"ಮಗನೇ, ನೀನು ಪಟ್ಟಣದ ಕಾವಲುಗಾರನಾದಾಗ ನಿನ್ನ ನಗರರಕ್ಷಣೆಯಲ್ಲಿದ್ದಾಗಲೇ ನಾನು ಕದ್ದು ನಿನ್ನನ್ನು ಕೊಲ್ಲಿಸ ದಿದ್ದರೆ ಪಂಥವೇನು?" ಎಂದು ನಾನು ಹೇಳಿದಾಗ ಈತನು "ಮಗನೇ, ನಾನು ತಳಾರ ಕೆಲಸ ಮಾಡುವಾಗ ನೀನು ಕದ್ದರೆ ನಿನ್ನನ್ನು ಹಿಡಿದು ಮುರಿಯುವ ಹಾಗೆ ಕಟ್ಟಿ ಕಳ್ಳರಿಗೆ ವಿಧಿಸತಕ್ಕ ಶಿಕ್ಷೆಯಿಂದ ದಂಡಿಸದಿದ್ದರೆ ಏನಾಯ್ತು ?" ಎಂದು ಹೇಳಿದನು. 'ಈ ಶಪಥದ

ಡೆಂದಿರ್ವರುಮೋರೊರ್ವರಂ ಮೂದಲಿಸಿ ಪ್ರತಿಜ್ಞೆಗೆಯ್ದು ಕೆಲಕಾಲದಿಂದೆನ್ನ ತಂದೆಯೆನಗೆ ರಾಜ್ಯ ಪಟ್ಟಂಗಟ್ಟಿ ಶ್ರುತಸಾಗರರೆಂಬ ಭಟಾರರ ಪಕ್ಕದೆ ತಪಂಬಟ್ಟನೀತನ ತಂದೆಯುಂ ತನ್ನ ಸಂತಾನ ಮನೀತಂಗೆ ಕೊಟ್ಟರಸನೊಡನೆ ತಪಂಬಟ್ಟಂ ಮತ್ತಾನುಂ ರಾಜ್ಯಂಗೆಯ್ಯುತ್ತಿರೆ ಈತನುಮಾ ಪೊೞಲೊಳ್ ತಳಾಱುಗೆಯ್ಯುತ್ತಿರ್ಕುಮಿಂತು ಸುಖದೊಳಿರ್ಪೆರ್ಗ್ಗಂ ಕಾಲಂ ಸಲೆ ಮತ್ತೊಂದು ದಿವಸಮೀತಂ ತನ್ನ ಮನದೊಳಿಂತೆಂದು ಬಗೆದನೆನ್ನರಸಂ ಕಳ್ಳನಾನುಮೀ ಪೊೞಲೊಳ್ ತಳಾಱು ಗೆಯ್ವೆನಿದು ಕಜ್ಜಮೊಳ್ಳಿತ್ತಲ್ತೆಂದೆನಗಂಜಿ ನಾಡಂ ಬಿಟ್ಟು ಬಂದು ನಿಮಗಾಳಾದನಾನುಮೀತನ ನೆನ್ನಾಳ್ವ ನಾಡೆಂಟುದೆಸೆಯ ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂ ಗಳೊಳಾರಯ್ಸಿಯುಂ ಕಾಣದೆ ಪರಮಂಡಲಂಗಳೊಳಮಾರಯ್ಸಿಯುಂ ಕಾಣದಿಲ್ಲಿಗಾರಯ್ಯಲಟ್ಟಿ ದೊಡೆ ಚರಪುರುಷರಾರಯ್ದು ಕಂಡು ಬಂದೆನಗಿಂತೆಂದು ಪೇೞ್ದರ್ ದೇವಾ ಮಿಥಿಳೆಯೆಂಬುದು ಪೊೞಲದನಾಳ್ವಂ ಪಾಮರಥನೆಂಬರಸಂಗೆ ಯಮದಂಡಂ ಪೋಗಿಯಾಳಾಗಿ ಪೊೞಲ ಕಾಪಂ ಬೆತ್ತು ತಳಾಱನಾಗಿ ಸುಖದೊಳಿರ್ದೋನೆಂದು ಪೇೞ್ದೊಡಾ ಮಾತನಂ ಕೇಳ್ದು ಪುರುಷೋತ್ತಮ

ಮಾತನ್ನು ಮರೆಯಬೇಡ' ಎಂದು ನಾವು ಒಬ್ಬರೊಬ್ಬರನ್ನು ಮೂದಲಿಸಿ ಪ್ರತಿಜ್ಞೆ ಮಾಡಿದೆವು. ಕೆಲವು ಕಾಲದ ನಂತರ ನನ್ನ ತಂದೆ ನನಗೆ ರಾಜ್ಯಾಧಿಕಾರವನ್ನು ಕೊಟ್ಟು ಶ್ರುತಸಾಗರರೆಂಬ ಋಷಿಗಳ ಬಳಿಯಲ್ಲಿ ತಪಸ್ಸನ್ನು ಕೈಗೊಂಡನು. ಈ ಯಮದಂಡನ ತಂದೆಯೂ ತನ್ನ ವಂಶಕ್ರಮದಿಂದ ಬಂದ ತಳವಾರಿಕೆಯನ್ನು ಇವನಿಗೆ ಕೊಟ್ಟು ರಾಜ ನೊಡನೆ ತಪಸ್ಸನ್ನು ಸ್ವೀಕರಿಸಿದನು. ಆ ಮೇಲೆ ನಾನು ಅರಸನಾಗಿ ರಾಜ್ಯವಾಳು ತ್ತಿದ್ದಾಗ ಈತನು ಆ ಪಟ್ಟಣದಲ್ಲಿ ತಳವಾರ ಕೆಲಸವನ್ನು ಮಾಡುತ್ತಿದ್ದನು. ಹೀಗೆಯೇ ಇಬ್ಬರಿಗೂ ಸುಖದಲ್ಲಿ ಕಾಲ ಕಳೆಯುತ್ತಿತ್ತು. ಅನಂತರ ಒಂದು ದಿವಸ ಈತನು ತನ್ನ ಮನಸ್ಸಿನಲ್ಲಿ ಈ ರೀತಿಯಾಗಿ ಯೋಚಿಸಿದನು–"ನನ್ನ ರಾಜನು ಕಳ್ಳನಾಗಿರುವನು. ನಾನು ಈ ಪಟ್ಟಣದಲ್ಲಿ ಕಾವಲುಗಾರಿಕೆ ಮಾಡುತ್ತಿದ್ದೇನೆ. ಈ ಕೆಲಸ ಒಳ್ಳೆಯದಲ್ಲ" ಎಂದು ನನಗೆ ಹೆದರಿ ನಾಡನ್ನು ತ್ಯಜಿಸಿ ಬಂದು ನಿಮ್ಮ ಸೇವಕನಾದನು. ನಾನು ಇವನನ್ನು ನಾನಾಳುವ ನಾಡಿನ ಎಂಟೂ ದಿಕ್ಕುಗಳಲ್ಲಿರುವ ಗ್ರಾಮ–ನಗರ–ಖೇಡ–ಖರ್ವಡ– ಮಡಂಬ–ಪಟ್ಟಣ–ದ್ರೋಣಾಮುಖ–ಎಂಬ ಭೂಭಾಗಗಳಲ್ಲಿ ವಿಚಾರಿಸಿಯೂ ಕಾಣಲು ಸಿಗಲಿಲ್ಲ. ಅನ್ಯರ ರಾಜ್ಯಗಳಲ್ಲಿ ವಿಚಾರಿಸಿಯೂ ಕಾಣಸಿಗಲಿಲ್ಲ. ಆದುದರಿಂದ ಇಲ್ಲಿ ಹುಡುಕಿಸುವುದಕ್ಕಾಗಿ ಇಲ್ಲಿಗೆ ಚಾರಕರನ್ನು ಕಳುಹಿಸಿದೆನು. ಅವರು ಹುಡುಕಿ ಕಂಡು ಬಂದು ನನಗೆ ಹೀಗೆ ಹೇಳಿದರು–"ದೇವಾ, ಮಿಥಿಳೆ ಎಂಬ ಪಟ್ಟಣವಿದೆ. ಅದನ್ನು ಪಾಮರಥನೆಂಬ ರಾಜನು ಆಳುತ್ತಿದ್ದಾನೆ. ಯಮದಂಡನು ಅಲ್ಲಿಗೆ ಹೋಗಿ ಅವನ ಸೇವಕನಾಗಿ ಪಟ್ಟಣದ ರಕ್ಷಣೆಯ ಕೆಲಸವನ್ನು ಪಡೆದು ತಳವಾರನಾಗಿ ಸುಖದಿಂದ ಇದ್ದಾನೆ"–ಎಂದು ಚಾರಕರು ಹೇಳಲು, ಆ ಮಾತನ್ನು ನಾನು ಕೇಳಿ 'ಮಿಥಿಳೆಯೆಂಬ

ನೆಂಬ ಮಂತ್ರಿಗೆ ಮಿಥಿಳೆಯೆಂಬ ಪೊೞಲ್ಗಾರುಮಱಿಯದಂತಿರೆ ಪೋಗಿ ಯಮದಂಡನೊಡ ಗೊಂಡು ಬಂದಪೆನೆಂದು ಪೇೞ್ದು ವಜ್ರಸೇನನೆಂಬ ಪೆರ್ಗಡೆಯುಂ ಕರೆಯಿಸಿ ಆನೊಂದು ಮನೆ ವಾೞ್ತೆಗೆ ಪೋಗಿ ಬಂದಪೆನೆನ್ನ ಬರ್ಪನ್ನೆಗಂ ರಾಜ್ಯಮುಂ ಪ್ರತಿಪಾಲಿಸುತ್ತಿರೆಂದು ಕಲ್ಪಿಸಿ ಸಮಸ್ತರಾಜ್ಯಭಾರಮುಂ ಸಮರ್ಪಿಸಿ ಅರ್ಧರಾತ್ರದಾಗಳ್ ಕಪ್ಪಡಮುಂ ಪಱಿದುಟ್ಟು ಬಱಿಕಾರು ಮಱಿಯಲೀಯದೊರ್ವನೆ ಪೊಱಮಟ್ಟು ಬಂದೀ ಪೊೞಲಂ ಪೊಕ್ಕು ಪ್ರತಿಜ್ಞೆ ಕಾರಣಮಾಗಿ ಕಸವರಮುಂ ಕಳ್ದೀತನಂ ಕೊಲಿಸುವಂತು ಮಾಡಿದೆನಿದು ಕಳ್ದುದರ್ಕೆ ಕಾರಣಮೀತನುಮೆನಗೀ ಪಾಂಗಿನೊಳ್ ಮಿತ್ರನೆಂದು ಪೇೞ್ದು ಮತ್ತಮಿಂತೆಂದಂ ನಿಮ್ಮ ದೇವತಾಧಿಷ್ಠಿತಮಪ್ಪ ಸರ್ವ ರುಜಾಪಹಾರಮೆಂಬ ಹಾರಮಧಿಗಮಸಮ್ಯಗ್ದೃಷ್ಟಿಯೆನಪ್ಪುದಱಿಂದೆನ್ನ ಕಿಯ್ಗೆ ವಂದು ದುೞಿದ ಮಿಥ್ಯಾದೃಷ್ಟಿಗಳ ಕಿಯ್ಗೆ ವಾರದೆಂದೊಡರಸಂ ತನ್ನ ಸಭೆಯೊಳಿರ್ದ ನೆರವಿಗೆಲ್ಲಂ ಹಾರಂ ಬಂದ ತೆಱನನಿಂತೆಂದು ಪೇೞಲ್ ತೊಡಗಿದೊಂ ಧನ್ವಂತರಿ ವಿಶ್ವಾನುಲೋಮರ್ಕಳ ಕಥೆಯುಂ ಮೊದಲಿಂ ತಗುಳ್ದು ಪೇೞುತ್ತುಮಿಂತೆಂದನೆಮ್ಮ ಸಂತತಿಯ ಪದ್ಮರಥನೆಂಬರಸನೊಂದು ದಿವಸಂ ವಾಸುಪೂಜ್ಯತೀರ್ಥಕರ ಪರಮದೇವರಂ ಬಂದಿಸಲ್ ಪೋಗುತ್ತಿರ್ದೊನನೆಡೆಯೊಳ್

ಪಟ್ಟಣಕ್ಕೆ ನಾನು ಯಾರೊಬ್ಬರೂ ತಿಳಿಯದ ಹಾಗೆ ಹೋಗಿ ಯಮದಂಡನನ್ನು ಕೂಡಿ ಕೊಂಡು ಬರುತ್ತೇನೆ' ಎಂದು ಪುರುಷೋತ್ತಮನೆಂಬ ಮಂತ್ರಿಗೆ ಹೇಳಿದೆನು. ಆ ಮೇಲೆ ವಜ್ರಸೇನನೆಂಬ ಹೆಗ್ಗಡೆಯನ್ನು ಕರೆಯಿಸಿ, 'ನಾನು ಒಂದು ಗೃಹಕೃತ್ಯದ ಸಂಬಂಧದಲ್ಲಿ ಹೋಗಿ ಬರುತ್ತೇನೆ. ನಾನು ಬರುವವರೆಗೆ ರಾಜ್ಯ ಪರಿಪಾಲನೆ ಮಾಡುತ್ತಿರು' ಎಂದು ಹೇಳಿ ಕೊಟ್ಟು ಎಲ್ಲಿ ರಾಜ್ಯಭಾರವನ್ನೂ ಅವನಿಗೆ ಒಪ್ಪಿಸಿಕೊಟ್ಟು, ನಡುವಿರುಳಿನಲ್ಲಿ ಬಟ್ಟೆಯನ್ನು ಹರಿದು ಉಟ್ಟುಕೊಂಡು, ಆ ಮೇಲೆ ಯಾರೊಬ್ಬರೂ ತಿಳಿಯದ ರೀತಿಯಲ್ಲಿ ಒಬ್ಬನೆ ಹೊರಟು ಬಂದು, ಈ ಪಟ್ಟಣವನ್ನು ಪ್ರವೇಶಿಸಿದೆನು. ಇಲ್ಲಿ ನನ್ನ ಪ್ರತಿಜ್ಞೆಯೇ ಕಾರಣವಾಗಿ ದ್ರವ್ಯವನ್ನು ಕಳವು ಮಾಡಿ, ಈ ಯಮದಂಡನನ್ನು ಕೊಲ್ಲಿಸುವ ಹಾಗೆ ಮಾಡಿದ್ದೇನೆ. ಇದೇ ನಾನು ಕಳ್ಳತನ ಮಾಡಲು ಕಾರಣ. ಈತನು ನನಗೆ ಈ ರೀತಿಯಲ್ಲಿ ಮಿತ್ರನಾಗಿ ದ್ದಾನೆ". ವಿದ್ಯುಚ್ಚೋರನು ಹೀಗೆ ಹೇಳಿ, ಮತ್ತೆ ಹೀಗೆಂದನು—"ದೇವಶಕ್ತಿಯುಳ್ಳ ನಿಮ್ಮ ಸರ್ವರುಜಾಪಹಾರ ಎಂಬ ಮಾಲೆ ಸಮ್ಯಗ್ ದೃಷ್ಟಿಯುಳ್ಳವನಾದ ಕಾರಣ ದಿಂದ ನನ್ನ ಕೈಗೆ ಬಂದಿದೆ. ಇನ್ನುಳಿದ ಮಿಥ್ಯಾದೃಷ್ಟಿಯುಳ್ಳವರ ಕೈಗೆ ಇದು ಬರಲಿ ಕ್ಕಿಲ್ಲ"–ಎಂದಾಗ ರಾಜನು ತನ್ನ ಕೈಗೆ ಹಾರ ಬಂದ ಸಂಗತಿಯನ್ನು ತನ್ನ ಸಭೆಯ ಜನ ಸಮೂಹಕ್ಕೆಲ್ಲ ಹೀಗೆ ಹೇಳ ತೊಡಗಿದನು–ವಾಸುರಥ ರಾಜನು ತನ್ನ ಕಥೆಯನ್ನು ಧನ್ವಂತರಿ ವಿಶ್ವಾನುಲೋಮ ಎಂಬ ಪೂರ್ವಿಕರಿಂದಲೇ ಪ್ರಾರಂಭಿಸಿ ಹೇಳುತ್ತ ಮತ್ತೆ ಹೀಗೆಂದನು–ನಮ್ಮ ವಂಶದ ಪದ್ಮರಥನೆಂಬ ರಾಜನು ಒಂದು ದಿನಸ ವಾಸುಪೂಜ್ಯ ತೀರ್ಥಂಕರ ದೇವರನ್ನು ವಂದಿಸುವುದಕ್ಕಾಗಿ ಹೋಗುತ್ತಿದ್ದನು. ನಡುವಿನಲ್ಲಿ ಅವನನ್ನು

ಅಚ್ಯುತೇಂದ್ರನುಂ ವಿಶ್ವಾಸುಲೋಮಚರನಪ್ಪ ವಾಹನದೇವನುಮಿಂತಿರ್ವರುಂ ಕಂಡು ಅಚ್ಯುತೇಂದ್ರ ವಾಹನದೇವನನಿಂತೆಂದನೀತಂ ಅಧರ್ಮ್ಮಿಯಿಂದೆ ಧರ್ಮಮಂ ಕೆಯ್ಕೊಂಡು ವಾಸುಪೂಜ್ಯ ತೀರ್ಥಕರ ಪರಮದೇವರಂ ಬಂದಿಸಿದಲ್ಲದುಣ್ಣೆನೆಂದಾಗ್ರಹಂಗೊಂಡು ಚಂಪಾನಗರಕ್ಕೆವೋದಪೊನೀತನಂ ಪೋಗಲೀಯದೆ ಮಗುಳ್ಚಲಾರ್ಪೊಡೆ ಮಗುಳ್ಚೆಂದು ನುಡಿದೊಡೆ ವಾಹನದೇವನುಂ ತನ್ನಾರ್ಪ ತೆಱದಿಂದೆಲ್ಲಮೆನಿತಾನುಂ ತೆಱದುಪಸರ್ಗಂಗೆಯ್ದು ಮಗುಳ್ಚಲಾಱದೆ ಬೇಸತ್ತುಬಿಟ್ಟೊಡೆ ಅಚ್ಯುತೇಂದ್ರಂ ಪದ್ಮರಥಂಗೊಸೆದು ತನ್ನ ತೊಟ್ಟ ಸರ್ವರುಜಾಪಹಾರಮೆಂಬ ಹಾರಮನಾತನ ಕೊರಲೊಳ್ ತಾನೆ ಕಟ್ಟಿ ಪೊಗೞ್ದು ಪೂಜಿಸಿ ಪೋದನಿಂತೀ ಪಾಂಗಿನೊಳೆಮಗೀ ಹಾರಂ ಸಂತತಿಯಿಂ ಬಂದುದೆಂದು ಪೇೞ್ದಿರ್ದ ತದನಂತರಂ ಇರ್ವರ್ ಪರಿವೊಟ್ಟೆಯವರೋಲೆಯುಂ ಕೊಂಡು ಬಂದರಸನ ಮನೆಯ ಬಾಗಿಲೊಳ್ ನಿಂದು ಪಡಿಯಱಂಗೆ ಪೇೞ್ದೊಡೆ ಪಡಿಯಱಂ ತಮ್ಮರಸಂಗೆ ಪೇೞ್ದೊಡರಸನನುಮತದಿಂದರಮನೆಯಂ ಪೊಕ್ಕಾಸ್ಥಾನಮಂಟಪದೊಳಿರ್ದ ವಿದ್ಯುಚ್ಚೋರನಂ ಕಂಡು ಪೊಡೆವಟ್ಟಾತನ ಮುಂದೋಲೆಯನಿಕ್ಕಿದಾಗಳ್ ಸಂಧಿವಿಗ್ರಹಿ ಓಲೆಯಂ ಕೊಂಡರಸನ ಮುಂದಿಂತೆಂದು ಬಾಚಿಸಿದಂ ವಿದ್ಯುಚ್ಚೋರ

ಅಚ್ಯುತೇಂದ್ರನೂ ವಿಶ್ವವನ್ನು ಸಹಜ ರೀತಿಯಲ್ಲಿ ಸಂಚರಿಸತಕ್ಕ ವಾಹನದೇವನೂ ಹೀಗೆ ಇಬ್ಬರೂ ಕಂಡರು. ಅಚ್ಯುತೇಂದ್ರನು ವಾಹನದೇವನೊಡನೆ–"ಈತನು ಅಧರ್ಮಿಯಿಂದ ಧರ್ಮವನ್ನು ಸ್ವೀಕರಿಸಿ ವಾಸುಪೂಜ್ಯ ತೀರ್ಥಂಕರ ಪರಮದೇವರನ್ನು ವಂದಿಸಿದಲ್ಲದೆ ಊಟ ಮಾಡುವುದಿಲ್ಲವೆಂದು ಹಟತೊಟ್ಟುಕೊಂಡು ಚಂಪಾನಗರಕ್ಕೆ ಹೋಗುತ್ತಿದ್ದಾನೆ. ಇವನನ್ನು ಹೋಗಲಿಕ್ಕೆ ಬಿಡದೆ ಹಿಂದಿರುಗಿಸಲು ನೀನು ಸಮರ್ಥನಾದರೆ ಹಿಂದಿರುಗಿಸು" ಎಂದು ಹೇಳಿದನು. ವಾಹನದೇವನು ತನ್ನಿಂದ ಸಾಧ್ಯವಾಗುವಷ್ಟು ರೀತಿಯಲ್ಲಿ ಎಲ್ಲ ಬಗೆಯ ಎಷ್ಟೆಷ್ಟೋ ವಿಧದಲ್ಲಿ ಉಪಸರ್ಗವನ್ನು ಉಂಟುಮಾಡಿ ಹಿಂದಿರುಗಿಸಲಾರದೆ ಬೇಸರಗೊಂಡವನಾಗಿ ಬಿಟ್ಟು ಬಿಟ್ಟನು. ಅಚ್ಯುತೇಂದ್ರನು ಪದ್ಮರಥನಿಗೆ ಮೆಚ್ಚಿ ತಾನು ಧರಿಸಿದ್ದ ಸರ್ವರುಜಾಪಹಾರವೆಂಬ ಹಾರವನ್ನು ಅವನ ಕೊರಳಿಗೆ ತಾನೇ ಕಟ್ಟಿ, ಹೊಗಳಿ, ಪೂಜಿಸಿ ತೆರಳಿದನು. ಈ ರೀತಿಯಲ್ಲಿ ಈ ಮಾಲೆ ನನಗೆ ನನ್ನ ವಂಶಾನುಗತವಾಗಿ ಬಂದಿದೆ ಎಂದು ವಾಸುರಥನು ಹೇಳಿದನು. ಆಮೇಲೆ, ಒಂಟೆಯನ್ನೇರಿಕೊಂಡು ಬರುವ ದೂತರಿಬ್ಬರು ಪತ್ರವನ್ನು ತೆಗೆದುಕೊಂಡು ಬಂದು ಅರಸನ ಮನೆಯ ಬಾಗಿಲಲ್ಲಿ ನಿಂದು ತಮಗೆ ರಾಜನನ್ನು ಕಾಣಬೇಕಾಗಿದೆಯೆಂದು ದ್ವಾರಪಾಲಕನಿಗೆ ತಿಳಿಸಿದರು. ದ್ವಾರಪಾಲನು ಇದನ್ನು ರಾಜನಿಗೆ ಹೇಳಲು, ರಾಜನು ಅನುಮತಿಯಿತ್ತನು. ಅದರಂತೆ ದೂತರು ಅರಮನೆಯನ್ನು ಹೊಕ್ಕು ಆಸ್ಥಾನಮಂಟಪದಲ್ಲಿದ್ದ ವಿದ್ಯುಚ್ಚೋರನನ್ನು ಕಂಡು ಸಾಷ್ಟಾಂಗವಂದನೆ ಮಾಡಿ, ಆತನ ಮುಂದೆ ಪತ್ರವನ್ನು ಇಟ್ಟನು. ಆಗ ರಾಜನ ಅಧಿಕಾರಿ (ಮಂತ್ರಿ) ಯೊಬ್ಬನು ಪತ್ರವನ್ನು ತೆಗೆದುಕೊಂಡು ರಾಜನ ಮುಂದೆ ಈ ರೀತಿಯಾಗಿ ಓದಿದನು—"ವಿದ್ಯುಚ್ಚೋರ ಮಹಾರಾಜರಿಗೆ ಮಂತ್ರಿಯಾದ ಪುರುಷೋತ್ತಮನೂ

ಪರಮಸ್ವಾಮಿಗೆ ಮಂತ್ರಿ ಪುರುಷೋತ್ತಮನುಂ ಪೆರ್ಗಡೆ ವಜ್ರಸೇನನುಂ ಸಾಷ್ಟಾಂಗವೆಱಗಿ ಪೊಡೆವಟ್ಟು ಕಾರ್ಯಮಂ ಬಿನ್ನವಿಪ್ಪರ್ ತಾಮುಂ ಪಲವು ದಿವಸಂ ಪೋಗಿರ್ದರ್ ಪೆಱತಣ ಮನೆವಾೞ್ತೆಯುಂ ಮಱೆದಿರ್ದರ್ ತಾಮಿಲ್ಲದೆ ರಾಜ್ಯಮುಂ ಪ್ರತಿಪಾಲಿಸುವೊರಾರುಮಿಲ್ಲೀ ಯೋಲೆಯುಂ ಕಾಣಲೊಡಂ ತಡೆಯದೆ ಪೊಱಮಟ್ಟು ಬೇಗಂ ಬರ್ಕೆಂದು ಬಾಚಿಸಿದುದಂ ವಾಮರಥಂ ಕೇಳ್ದು ಮುನ್ನೀತನ ಪೇೞ್ದುದುಮೋಲೆಯ ಮಾತುಮೊಂದಾದುದೆಂದು ಸಂದೇಹ ಮಿಲ್ಲದಾಗಳ್ ನಂಬಿ ಈತಂ ಮಾಂಡಳಿಕನೆಂದಱಿದು ತನ್ನ ಸಿಂಹಾಸನದೊಳೋರಂತಪ್ಪಾಸನ ಮನಿಕ್ಕಲ್ವೇೞ್ದಿರಿಸಿ ಇಂತೆಂದನೆನ್ನ ತಂಗೆಯ ಮಗನಯ್ ಸೋದರದಳಿಯನಯ್ ನಿನಗೆನ್ನ ಮಕ್ಕಳಂ ಶ್ರೀಮತಿ ವಸುಮತಿ ಗುಣಮತಿ ಸುಲೋಚನೆ ಸುಪ್ರಭೆ ಸುಕಾಂತೆ ಸುಶೀಲೆ ಮನೋ ಹರೆಯೆಂಬೆಣ್ಬರುಂ ಕನ್ನೆಯರತ್ಯಂತ ರೂಪ ಲಾವಣ್ಯ ಸೌಭಾಗ್ಯ ಕಾಂತಿ ಹಾವ ಭಾವ ವಿಲಾಸ ವಿಭ್ರಮಂಗಳನೊಡೆಯರ್ ನವಯೌವನೆಯರಕ್ಷರಾಲೇಖ್ಯ ಗಣಿತ ಗಾಂಧರ್ವ ನೃತ್ಯ ಚಿತ್ರಕರ್ಮ ಪತ್ರಚ್ಛೇದ್ಯಮೆಂದಿವು ಮೊದಲಾಗೊಡೆಯ ಚತುಷ್ಷಷ್ಟಿ ಕಲೆಗಳೊಳಾದಮಾನುಂ ಕುಶಲೆಯರ್ ಪರಮಂಡಲಿಕರ್ ಪಲರ್ ಪಾಗುಡಂಗಳುಮೋಲೆಗಳುಂ ಪೆರ್ಗಡೆಗಳುಮನನವರತಂ ಕೂಸು

ಹೆಗ್ಗಡೆಯಾದ ವಜ್ರಸೇನನೂ ಸಾಷ್ಟಾಂಗ ವಂದನೆ ಮಾಡಿ ಕಾರ್ಯವನ್ನು ವಿಜ್ಞಾಪಿಸು ವರು–ತಾವು ಹೋಗಿ ಹಲವು ದಿವಸವಾಯಿತು. ಹಿಂದಿನ ಗೃಹಕೃತ್ಯವನ್ನು ಮರೆ ತಿದ್ದೀರಿ. ತಾವು ಇಲ್ಲದೆ, ರಾಜ್ಯ ಪರಿಪಾಲನೆ ಮಾಡುವವರು ಯಾರೂ ಇಲ್ಲ. ಈ ಪತ್ರವನ್ನು ಕಂಡಕೂಡಲೇ ತಡವಿಲ್ಲದೆ ಹೊರಟು ಬೇಗನೆ ಬರಬೇಕು". ಹೀಗೆ ಓದಿದುದನ್ನು ವಾಮರಥನು ಕೇಳಿ 'ಮೊದಲು ಈತನೂ ಹೇಳಿದುದೂ ಪತ್ರದ ಮಾತೂ ಒಂದೇ ಆಯಿತು' ಎಂದು ಸಂಶಯವಿಲ್ಲದೆ ಆಗ ವಿಶ್ವಾಸಪಟ್ಟನು. ಈತನು ತನ್ನ ಸಾಮಂತ ರಾಜನು ಎಂದು ತಿಳಿದು ತನ್ನ ಸಿಂಹಾಸನದಂತೆಯೇ ಇರತಕ್ಕ ಪೀಠವನ್ನು ಇಡಲು ಹೇಳಿ ಇರಿಸಿ ಹೀಗೆಂದನು—"ನೀನು ನನ್ನ ತಂಗಿಯ ಮಗನಯ್ಯಾ, ಸೋದರಳಿಯನಯ್ಯಾ. ನಿನಗೆ ನನ್ನ ಹೆಣ್ಣುಮಕ್ಕಳನ್ನು ಕೊಡುತ್ತೇನೆ. ಈ ಕನ್ಯೆಯರು ಅತ್ಯಂತ ರೂಪ–ಲಾವಣ್ಯ–ಸೌಭಾಗ್ಯ–ಕಾಂತಿ–ಹಾವ–ಭಾವ–ವಿಲಾಸ–ವಿಭ್ರಮಗಳಿಂದ ಕೂಡಿದವರು. ಶ್ರೀಮತಿ, ವಸುಮತಿ, ಗುಣಮತಿ, ಸುಲೋಚನೆ, ಸುಪ್ರಭೆ, ಸುಕಾಂತೆ, ಸುಶೀಲೆ, ಮನೋಹರಿ–ಎಂದು ಹೆಸರುಳ್ಳ ಎಂಟು ಮಂದಿ ಕನ್ಯೆಯರಿವರು. ಹೊಸ ಜವ್ವನೆಯರು. ಬರಹ, ಚಿತ್ರವಿದ್ಯೆ, ಗಣಿತ, ಗಾನ, ನೃತ್ಯ, ಚಿತ್ರಕಲೆ, ಭೂರ್ಜಾದಿ ಪತ್ರಗಳನ್ನು ಒಂದೇ ರೀತಿ ಕತ್ತರಿಸುವುದು, ಎಂದಿವೇ ಮೊದಲಾಗಿ ಉಳ್ಳ ಅರುವತ್ತನಾಲ್ಕು ಕಲೆಗಳಲ್ಲಿ ಅತ್ಯಂತ ಪ್ರವೀಣೆಯರಾಗಿದ್ದಾರೆ. ಬೇರೆ ರಾಜರುಗಳಲ್ಲಿ ಹಲವರು ಉಡುಗೊರೆ–ಕಾಣಿಕೆ ಗಳನ್ನೂ ಪತ್ರಗಳನ್ನೂ ಅಧಿಕಾರಿಗಳನ್ನೂ ಕಳುಹಿಸಿ ಈ ಕನ್ಯೆಯರನ್ನು ಕೇಳುತ್ತಿದ್ದಾರೆ. ನಾನು ಅವರಲ್ಲಿ ಯಾರನ್ನೂ ಮೆಚ್ಚದೆ, ಕನ್ಯೆಯರನ್ನು ಕೊಡದೆ ಇದುವರೆಗೂ ಇವರನ್ನು ಸಲಹಿಕೊಂಡಿದ್ದೆನು. ಈ ಕನ್ಯಾರತ್ನಗಳಿಗೆ ನೀನೇ ಯೋಗ್ಯನಯ್ಯಾ ಈ ಎಂಟು

ಗಳಂ ಬೇಡಿಯುಟ್ಟುತ್ತಿರ್ಪರವರಾರುಮಂ ನಾಂ ಮೆಚ್ಚದೆ ಕುಡದಿನ್ನೆಗಮಿಂತಿರ್ವರ್ಗಳಂ ತಾಂಗಿರ್ದನೀ ಕನ್ಯಾರತ್ನಂಗಳ್ಗೆ ನೀನೆ ಯೋಗ್ಯನಯ್ ನಿನಗೆಣ್ಬರುಮಂ ಕೊಟ್ಟೆನ್ ಮದುವೆನಿಲ್ಲೆಂದೊಡಾತನಿಂತೆಂದನಾನೊರ್ವಳ್ಗೆ ಬೇಂಟಂಗೊಂಡಿರ್ದೆನಿವರಂ ಕೊಂಡೇವೆನೆಂದೊಡರಸನಾರ್ಗೆ ಬೇಂಟಂಗೊಂಡಿರ್ದೆಯೆಂದು ಬೆಸಗೊಂಡೊಡೆ ಮುಕ್ತಿಶ್ರೀಯೆಂಬೊಳ್ ಪೆಂಡತಿಗೆ ಬೇಂಟಂಗೊಂಡಿರ್ದೆನಾಕೆಯುಂ ಮದುವೆನಿಲಲ್ವೇೞ್ಕುಮೆಂದು ಪರಿಚ್ಛೇದಿಸಿ ನುಡಿದು ಮತ್ತಮಿಂತೆಂದನೆನ್ನ ಕೆಳೆಯುನನೆನಗೊಪ್ಪಿಸಲ್ವೇೞ್ಕುಮೆಂದೊಡರಸನುಮೊಪ್ಪಿಸಿದೆನೆಂದೊಡೆ ಅರಸನಂ ಬೀೞ್ಕೊಂಡು ಯಮದಂಡ ಪುರಸ್ಸರಮಿರ್ವರುಮೊಟ್ಟೆಯನೇಱಿ ತುರಿಪದಿಂ ಕತಿಪಯ ದಿವಸಂಗಳಿಂ ವೇಣಾತಟಮನೆಯ್ದಿ ಪೊಱವೊೞಲೊಳಿರ್ದು ಪೇೞ್ದಟ್ಟಿಯುಪ್ಪ ಶೋಭೆಯುಂ ಮಾಡಿಸಿ ಮಂತ್ರಿ ಮಹತ್ತರ ಪರಿವಾರ ಸಾಮಂತ ಮಹಾಸಾಮಂತರುಂ ಪೆಂಡವಾಸದ ಸೂಳೆಯರುಂ ಪೊೞಲ ಜನಮೆಲ್ಲಮಿದಿರಂ ಬಂದು ಕಂಡು ಪೊಡೆವಟ್ಟು ಸೇಸೆಗಳನಿಕ್ಕಿದ ಬೞಿಕ್ಕೆ ಪಟ್ಟವರ್ಧನಮನಿರ್ವರುಮೇಱಿ ಬೆಳ್ಗೊಡೆ ಮೊದಲಾಗೊಡೆಯ ರಾಜಚಿಹ್ನಂಗಳ್ ಮುಂದೆ ಪರಿಯೆ ಪಂಚಮಹಾ ಶಬ್ದಂಗಳುಂ ಬದ್ಧವಣದ ಪಱೆಗಳುಂ ಬಾಜಿಸೆ ಅರಮನೆಯುಂ ಪೊಕ್ಕು ಮಱುದಿವಸಮಾಸ್ಥಾನಮಂಡಪದೊಳ್ ಸಿಂಹಾಸನಮಸ್ತಕಸ್ಥಿತನಾಗಿ ಸಾಮಂತ ಮಹಾಸಾಮಂತ

ಮಂದಿಯನ್ನೂ ನಿನಗೆ ಕೊಡುತ್ತೇನೆ, ಮದುವೆಯಾಗು" ಎಂದು ಹೇಳಿದನು. ಆಗ ಅವನು ಹೀಗೆಂದನು—"ನಾನು ಒಬ್ಬಳ ಮೇಲೆ ಪ್ರೀತಿಪಟ್ಟಿದ್ದೇನೆ. ಇವರನ್ನು ಸ್ವೀಕರಿಸಿ ಏನು ಮಾಡುವೆನು ?" ಹೀಗೆಂದಾಗ ರಾಜನು 'ಯಾರಿಗಾಗಿ ಪ್ರೀತಿಪಟ್ಟಿದ್ದೀ ?' ಎಂದು ಕೇಳಲು, "ಮೋಕ್ಷ ಶ್ರೀ ಎಂಬ ಹೆಂಡತಿಯ ಮೇಲೆ ಪ್ರೀತಿಪಟ್ಟಿದ್ದೇನೆ. ಅವಳನ್ನು ಮದುವೆಯಾಗಬೇಕು' ಎಂದು ನಿಶ್ಚಯವಾಗಿ ನುಡಿದನು. ಅನಂತರ–"ನನ್ನ ಗೆಳೆಯನನ್ನು ನನಗೆ ಒಪ್ಪಿಸಬೇಕು" ಎಂದು ಹೇಳಲು, ರಾಜನು 'ಒಪ್ಪಿಸಿದ್ದೇನೆ' ಎಂದನು. ಅದರಂತೆ, ರಾಜನನ್ನು ಬಿಟ್ಟು ಹೊರಟು, ಯಮದಂಡನ ಸಮೇತವಾಗಿ ಇಬ್ಬರೂ ಒಂಟೆಯ ಮೇಲೆ ಕುಳಿತರು. ತ್ವರೆಯಾಗಿ ಹೋಗುತ್ತ ಕೆಲವು ದಿವಸಗಳಲ್ಲಿ ವೇಣಾತಟಕ್ಕೆ ಬಂದು, ಆ ಪಟ್ಟಣದ ಹೊರಗಿದ್ದು ಹೇಳಿ ಕಳುಹಿಸಿ, ಕಲಶ, ಕನ್ನಡಿ, ಬಾವುಟ, ತೋರಣ, ಧೂಪ, ದೀಪ, ಭೇರಿ, ಬೀಸಣಿಗೆ–ಎಂಬೀ ಎಂಟು ಬಗೆಯ ಅಲಂಕಾರಗಳನ್ನು ಮಾಡಿಸಿದನು. ಮಂತ್ರಿ, ಮೇಲಧಿಕಾರಿ, ಪರಿವಾರ, ಸಾಮಂತ, ಮಹಾಸಾಮಂತರೂ ರಾಣೀವಾಸದ ಸ್ತ್ರೀಯರೂ ಪಟ್ಟಣಿಗರೆಲ್ಲರೂ ಎದುರಿಗೆ ಬಂದು ವಂದಿಸಿ ಮಂತ್ರಾಕ್ಷತೆ ಹಾಕಿದನಂತರ ವಿದ್ಯುಚ್ಚೋರ ಯಮದಂಡ-ಇಬ್ಬರೂ ಪಟ್ಟದಾನೆಯನ್ನೇರಿದರು. ಮುಂದುಗಡೆಯಲ್ಲಿ ಶ್ವೇತಚ್ಛತ್ರ ಮುಂತಾದ ಅರಸುತನದ ಚಿಹ್ನೆಗಳು ಹೋಗುತ್ತಿದ್ದವು. ಪಂಚಮಹಾಶಬ್ದಗಳೂ ಮಂಗಳವಾದ್ಯಗಳೂ ಶಬ್ದಮಾಡುತ್ತಿರಲು ಅವರು ಅರಮನೆಯನ್ನು ಪ್ರವೇಶಿಸಿದರು. ಮಾರನೆಯ ದಿನ ವಿದ್ಯುಚ್ಚೋರನು ಆಸ್ಥಾನಮಂಟಪದಲ್ಲಿ ಸಿಂಹಾಸನದ ಮೇಲೆ ಕುಳಿತು ಸಾಮಂತರನ್ನೂ ಮಹಾಸಾಮಂತರನ್ನೂ ಮಂತ್ರಿ, ಅಧಿಕಾರಿ, ಪುರೋಹಿತ, ಪರಿವಾರ

ರ್ಕಳುಂ ಮಂತ್ರಿಮಹತ್ತರ ಪುರೋಹಿತ ಪರಿವಾರದವರ್ಗಳುಮರಸಿಯರ್ಕಳುಂ ಬೞಿಯಟ್ಟಿ ಬರಿಸಿ ಇಂತೆಂದು ನುಡಿದನಾನೀ ಸಂಸಾರದೊಳಪ್ಪ ಭೋಗೋಪಭೋಗಂಗಳ್ಗೆ ಪೇಸಿ ವಿರಕ್ತನಾಗಿ ತಪಂಬಡಲ್ ಬಗೆದಪ್ಪೆನೆಂದೊಡನಿಬರುಂ ನೆರೆದಿಂತೆಂದರಿನ್ನುಮಾವುದು ಕಾಲಂ ತಪಂಬಡಲಿನ್ನುಂ ನೀಂ ಕೂಸನಯ್ ನವಯೌವನನಯ್ ಕೆಲಕಾಲಮರಸುಗೆಯ್ದು ಪಶ್ಚಾತ್ಕಾಲದೊಳ್ ತಪಂಬಡಲಕ್ಕುಮೆಂದೊಡರಸನಿಂತೆಂದನೆಂತಱಿಯಲಕ್ಕುಮನ್ನೆಗಂ ಸಾವರೊ ಬಾೞ್ವರೊ ಎಂದೀ ವೃತ್ತಂಗಳನವರ್ಗ್ಗಡಿ ಪೇೞಲ್ ತೊಡಂಗಿದಂ

ಶ್ಲೋಕ॥ ಡಿಂಡೀರಪಿಂಡಸಂಕಾಶಮಾಯುಃ ಸಂಸಾರವರ್ತಿನಾಂ
ಆಖಂಡಲ ಧನುಷ್ಕಾಂಡ ಸನ್ನಿಭಂ ರೂಪಯೌವನಂ॥

ವೃತ್ತ॥ ರೂಪಂ ಯೌವನಮಾಯುರಕ್ಷ ವಿಷಯಾ ಭೋಗೋಪಭೋಗಾ ವಪುಃ
ವೀರ್ಯಂ ಸ್ವೇಷ್ಟಸಮಾಗಮೋ ವಸುಮತಿಃ ಸೌಭಾಗ್ಯಭಾಗ್ಯೋದಯೋ
ಯೇಽನಿತ್ಯಾಃ ಸ್ಫುಟಮಾತ್ಮನಃ ಸಮುದಿತಾ ಜ್ಞಾನೇಕ್ಷಣಾಂ ಭೂಭೃತಾಂ
ಶೇಷಾ ಇತ್ಯನುಚಿಂತಯಂತು ಸುಧಿಯಃ ಸರ್ವೇಸದಾಽನಿತ್ಯತಾಂ ॥

ದವರನ್ನೂ ಅರಸಿಯರನ್ನೂ ಕರೆ ಕಳುಹಿಸಿ ಬರಮಾಡಿ ಹೀಗೆ ಹೇಳಿದನು–"ನಾನು ಈ ಸಂಸಾರದಲ್ಲಿ ಉಂಟಾಗುವ ಸುಖಗಳಿಗೆಲ್ಲ ಅಸಹ್ಯಪಟ್ಟು ವೈರಾಗ್ಯವನ್ನು ತಾಳಿ ತಪಸ್ಸನ್ನು ಸ್ವೀಕರಿಸಬೇಕೆಂದು ಭಾವಿಸುತ್ತಿದ್ದೇನೆ". ಹೀಗೆನ್ನಲು ಅವರೆಲ್ಲರೂ ಒಟ್ಟು ಸೇರಿ ಹೀಗೆಂದರು—"ತಪಸ್ಸು ಮಾಡುವುದಕ್ಕೆ ಇನ್ನೂ ಕಾಲ ಯಾವುದು ? ನೀನಿನ್ನೂ ಚಿಕ್ಕವನಯ್ಯಾ ! ಈಗ ತಾನೇ ಯುವಕನಾಗಿದ್ದೀಯಷ್ಟೆ. ಕೆಲವು ಕಾಲದವರೆಗೆ ಅರಸುತನವನ್ನು ಮಾಡಿ, ಆಮೇಲೆ ತಪಸ್ಸನ್ನು ಸ್ವೀಕರಿಸಬಹುದು." ಆಗ ರಾಜನು ಹೀಗೆ ಹೇಳಿದನು—"ಆ ವೇಳೆಗೆ ಸಾಯುವರೊ ಬದುಕಿರುವರೋ ತಿಳಿಯಲು ಹೇಗೆ ಸಾಧ್ಯ ?" ಎಂದು ಈ ರೀತಿ ತಾತ್ಕಾಲಿಕವಾಗಿ ಅವರಿಗೆ ತಿಳಿಸಿ ಆಮೇಲೆ ಹೇಳಲು ತೊಡಗಿದನು— [ಸಂಸಾರದಲ್ಲಿ ಇರತಕ್ಕವರ ಆಯುಷ್ಯವು ನೊರೆಯ ಉಂಡೆಗೆ ಸಮಾನವಾಗಿರುತ್ತದೆ. ರೂಪವೂ ಯೌವನವೂ ಇಂದ್ರಧನುಸ್ಸಿನ ಕೋಲಿಗೆ ಸಮಾನವಾಗಿರುತ್ತದೆ.] ರೂಪ ಯೌವನ, ಆಯುಸ್ಸು, ಇಂದ್ರಿಯ ಗೋಚರವಾದ ವಸ್ತುಗಳು, ಬಗೆ ಬಗೆಯ ಸುಖಗಳು, ಶರೀರ, ಶಕ್ತಿ, ಇಷ್ಟಜನರ ಸಹವಾಸ, ಭೂಮಿ (ರಾಜ್ಯದ ಒಡೆತನ), ಸೊಬಗು ಸಂಪತ್ತುಗಳು ನಮಗೆ ಶಾಶ್ವತವಲ್ಲ ಹೀಗೆಂದು ಉಳಿದ ಎಲ್ಲಾ ಬುದ್ಧಿಶಾಲಿಗಳು ತಮ್ಮಲ್ಲಿ ಉದಿಸಿದ ಜ್ಞಾನದ ಕಣ್ಣುಗಳಿಂದ ಇವು ಅಶಾಶ್ವತವೆಂಬುದನ್ನು ಸರಿಯಾಗಿ ಯೋಚಿಸಲಿ] ಹುಟ್ಟು,

ಯದಿ ಜಾತಿಜರಾ ಮರಣಂ ನ ಭವೇತ್
ಯದಿ ಚೇಷ್ಟ ವಿಯೋಗಭಯಂ ನ ಭವೇತ್
ಯದಿ ಸರ್ವಮ ನಿತ್ಯಮಿದಂ ನ ಭವೇತ್
ಇಹ ಜನ್ಮನಿ ಕಸ್ಯ ರತಿರ್ನಭವೇತ್ ॥

ಅದಱಿಂ ಮಾನಸರ ರೂಪುಂ ಯೌವನಮುಂ ತೇಜಮುಂ ಲಾವಣ್ಯಮುಂ ಸೌಭಾಗ್ಯಮುಂ ಆಯುಷ್ಯಮುಂ ಶ್ರೀಯುಂ ಸಂಪತ್ತುಂ ವಿಭವಮುಂ ನಲ್ಮೆಯುಂ ಎಂದಿವು ಮೊದಲಾಗೊಡೆಯ ವನಿತ್ಯಂಗಳ್ ಮತ್ತಂ ಮೆಯ್ಯೊಳ್ಳಿತ್ತೆಯೆಂದೊಡದುವುಂ ತಾನಿಂತುಟೆ

ಗಾಹೆ॥ ಏದಂ ಸರೀರಮಸುಚಿಂ ಣಿಚ್ಚಂ ಕಲಿ ಕಲುಸಭಾಜಣಮಚೊಕ್ಖಂ
ಅಂತೋ ಬಾಹಿರದಿಟ್ಠಂ ಸಕ್ಕಿಬ್ಬಿಸ ಭರಿದಂ ತು ಅಮೇಜ್ಝಪುರಂ

ವಸಮಜ್ಜ ಮಾಂಸ ಸೇಣದ ಪುಪ್ಫಸ ಕಾಲಿಜ್ಜ ಸೇಮ್ಹ ಸೀಹಾಣಂ
ಬಿಡಜಾಲ ಅಟ್ಠಿಸಕಲ (?) ಚಮ್ಮಾಣದ್ಧಂ (?) ಸರೀರಪುರಂ

ಅಟ್ಠಿಹಿ ಭಣ್ಣಂ ಣಾಳಿಹಿ ಬದ್ಧಂ ಕಲಿಮಲಭರಿದಂ ಕಿಮಿಕುಲಪುಣ್ಣಂ
ಮಾಂಸವಿಲಿತ್ತಂ ತಯಪಡಿಭಣ್ಣಂ ಸರೀರಪುರಂತಂ ಸಂತತಮಚೊಕ್ಖಂ

ಏದಾರಿಸೇ ಸರೀರೇ ದುಗ್ಗಂಧೇ ಕುಣಿಮಪೂತಿಏ ಯಚೊಕ್ಖೇ
ಪಡಣ ಪಡಣಯ ಸಾರೇ ರಾಗಂ ಣ ಕರೇಂತಿ ಸಪ್ಪುರಿಸಾ

ಛಾಯೇವ ಸಕದಕ್ಕಮ್ಮಂ ಅಣುಯಾದಿ ಕಾರಗಂ ಣ ಸೇಸಂ (?)
ಪಲಾಯಿದುಂ ದುಸ್ಸಕ್ಕಂ ಅಣ್ಣತ್ಥ ಜಿಣಸಾಸಣೇ (?)

ಮುಪ್ಪು. ಸಾವುಗಳು ಉಂಟಾಗುವುದಿಲ್ಲವಾದರೆ, ಪ್ರೀತಿಯ ಜನರ ಅಗಲಿಕೆಯ ದುಃಖ ಉಂಟಾಗುವುದಿಲ್ಲವಾದರೆ, ಈ ಎಲ್ಲ ವಸ್ತುಗಳು ಅಶಾಶ್ವತವಾಗುವುದಿಲ್ಲವಾದರೆ, ಈ ಲೋಕದಲ್ಲಿ ಜನ್ಮವೆತ್ತಲು ಯಾರಿಗೆ ತಾನೇ ಒಲವಾಗದು !] ಆದುದರಿಂದ ಮನುಷ್ಯರ ರೂಪ, ಯೌವನ, ತೇಜಸ್ಸು, ಲಾವಣ್ಯ, ಸೌಭಾಗ್ಯ, ಆಯುಷ್ಯ, ಸಿರಿಸಂಪತ್ತು, ವೈಭವ, ಪ್ರೀತಿ-ಎಂದಿವೇ ಮೊದಲಾಗಿ ಉಳ್ಳವು ಶಾಶ್ವತಗಳಲ್ಲ ಅದಲ್ಲದೆ, ಶರೀರ ಒಳ್ಳೆಯದೆ ? ಎಂದು ಕೇಳಬಹುದು. ಅದು ಕೂಡ ಈ ರೀತಿಯದೇ ಆಗಿದೆ- ಈ ಶರೀರವು ಅಶುಚಿಯಾದುದು. ಯಾವಾಗಲೂ ರಾಗದ್ವೇಷಗಳಿಗೆ ಪಾತ್ರವಾದುದು, ಅಶುಭವಾದುದು–ಒಳಗೂ ಹೊರಗೂ ಚರ್ಮದಿಂದ ಮುಚ್ಚಲ್ಪಟ್ಟುದು ಅಥವಾ ಕರುಳು ಮಾಂಸನರಗಳಿಂದ ಆವರಿಸಿದುದು. ಅಶುಚಿಯಾಗಿರುವ ಶುಕ್ಲಶೋಣಿತಗಳಿಂದ ತುಂಬಿದೆ. ಮೂತ್ರಮಲಾದಿಗಳ ಮನೆಯಾಗಿದೆ. ಶರೀರವೆಂಬ ಮನೆಯು ಕೊಬ್ಬು, ಮಜ್ಜೆ, ಮಾಂಸ, ರಕ್ತ, ಪುಪ್ಪುಸ, ಯಕೃತ್ತು, ಕಫ ಸಿಂಬಳ, ರಕ್ತನಾಳ, ಮೂಳೆ-ಇವುಗಳಿಂದ ತುಂಬಿದೆ. ಚರ್ಮದಿಂದ ಕೊಡಿಸಲ್ಪಟ್ಟಿದೆ, ಯಾವಾಗಲೂ ಅಶುಚಿಯಾಗಿದೆ. ಆ ದೇಹ ವೆಂಬ ಮನೆ ಎಲುಬುಗಳಿಂದ ಆವರಿಸಿದೆ. ರಕ್ತನಾಳಗಳಿಂದ ಕಟ್ಟಲ್ಪಟ್ಟಿದೆ ಕಟ್ಟ

ಶ್ಲೋಕ॥ ದುರ್ಗಂಧೇ ದುರ್ಧರೇ ದುಃಖೇ ದುಃಸ್ವಭಾವೇ ಚ ನಶ್ವರೇ
ದುರ್ನಿರೀಕ್ಷೇ ವೃಥಾ ಕಾಯೇ ಕಿಂತು ಜ್ಞಾನಿ ತವಾಗ್ರಹಃ
ಅಚ್ಛೇದ್ಯೋಽನಂತ ಸೌಖ್ಯೋಽಹಂ ವೇತ್ತಾ ಪೂರ್ಣೋನಿರಂಜನಃ
ಸರ್ವದುಃಖಾಕರಂ ದೇಹಂ ತ್ಯಜಾಮ್ಯೇತತ್ ಪರಿಸ್ಫುಟಂ

ವೃತ್ತ॥ ಜಾತಿಕ್ಷ್ಮಾಜತತೇ ಕೃತಾಂತಕುಪಿತ ಕ್ರೂರೋರು ದುಃಶ್ವಾಪದೇ
ವ್ಯಾಧಿ ವ್ಯಾಧಭಯೇ ದುರಂತ ದುರಿತ ಸ್ಫೂರ್ಜದ್ದವಾಗ್ನಿಚ್ಛದೇ
ನಿಸ್ತ್ರಾಣಸ್ಯ ವಿಚೇತಸೋ ದೃಢತೃಷಾ ದುಃಖಾಕುಳಸ್ಯಾಂಗಿನೋ
ಜೈನಂ ಶಾಸನಮೇಕಮೇವ ಶರಣಂ ಜನ್ಮಾಟವೀಸಂಕಟೇ

ಅವಱಂ

ವೃತ್ತ॥ ಯಾವತ್ ಸ್ವಸ್ಥಮಿದಂ ಶರೀರಮರುಜಂ ಯಾವಜ್ಜರಾ ದೂರತಃ
ಯಾವಚ್ಚೇಂದ್ರಿಯ ಶಕ್ತಿರಪ್ರತಿಹತಾ ಯಾವತ್ ಕ್ಷಯೋ ನಾಯುಷಃ
ಆತ್ಮಶ್ರೇಯಸಿ ತಾವದೇವ ವಿದುಷಾ ಕಾರ್ಯಃ ಪ್ರಯತ್ನೋ ಮಹಾನ್
ಪ್ರೋದ್ದೀಪ್ತೇ ಭವನೇ ತು ಕೂಪಜನನಂ ಪ್ರತ್ಯುದ್ಯಮಃ ಕೀದೃಶಃ

ಕೊಳಕುಗಳಿಂದ ತುಂಬಿದೆ. ಕ್ರಿಮಿಗಳಿಂದ ಪೂರ್ಣವಾಗಿದೆ. ಮಾಂಸದಿಂದ ಮೆತ್ತಲ್ಪಟ್ಟದೆ. ಚರ್ಮದ ಹೊದಿಕೆಯುಳ್ಳುದು. ಯಾವಾಗಲೂ ಅಶುಚಿಯಾದುದು ದುರ್ಗಂಧವುಳ್ಳ, ಕಶ್ಮಲ ತುಂಬಿದ, ಅಶುಚಿಯಾದ, ಸಡಿಲವಾಗಿ ಬಿದ್ದುಹೋಗತಕ್ಕ, ಸಾರವಿಲ್ಲದ ಇಂತಹ ಶರೀರದಲ್ಲಿ ಸತ್ಪುರುಷರು ಪ್ರೀತಿಯನ್ನು ಮಾಡುವುದಿಲ್ಲ. ತಾನು ಮಾಡಿದ ಕರ್ಮವು ತನ್ನ ನೆರಳಿನಂತೆ ಕರ್ತೃವನ್ನು ಅನುಸರಿಸಿಕೊಂಡು ಹೋಗುತ್ತದೆ, ಬೇರೆಯವನನ್ನಲ್ಲ. ಆದುದರಿಂದ ಜಿನಶಾಸನ ಮಾತ್ರ ಆಶ್ರಯವಲ್ಲದೆ, ಅದನ್ನು ಬಿಟ್ಟು ಬೇರೆ ಕಡೆಗೆ ಓಡಿಹೋಗುವುದು ಅತ್ಯಂತ ಅಸಾಧ್ಯ. ಎಲೈ ಜ್ಞಾನಿಯೇ, ಕೆಟ್ಟನಾತ, ತಾಳಲಾಗದ ದುಃಖ, ಕೆಟ್ಟಸ್ವಭಾವಗಳುಳ್ಳ, ನಾಶವುಳ್ಳ, ನೋಡಲು ಅಸಹ್ಯವಾಗುವಂಥ ಶರೀರದಲ್ಲಿ ನಿನ್ನ ಆಸಕ್ತಿ ವ್ಯರ್ಥ, ಅಲ್ಲದೆ ಬೇರೇನು ? ನಾನು ಕತ್ತರಿಸಲಾಗದವನು. ಕೊನೆಯೇ ಇಲ್ಲದ ಸುಖವನ್ನುಳ್ಳವನು ; ಜ್ಞಾನಿ ; ಅನಾದಿ, ಕರ್ಮಲೇಪವಿಲ್ಲದವನು. ಎಲ್ಲಾ ದುಃಖಗಳಿಗೂ ಆಸರೆಯಾಗಿರುವ ಶರೀರವನ್ನು ತೊರೆಯುತ್ತೇನೆ-ಇದು ನಿಶ್ಚಯ. ಈ ಜನ್ಮವೆಂಬ ಕಾಡು-ಜಾತಿ ವೃಕ್ಷಗಳಿಂದ ಆವರಿಸಿದೆ. ಯಮನಂತೆ ಕೋಪಗೊಂಡ ಕ್ರೂರವಾದ ಹೆಚ್ಚು ದುಷ್ಟಜಂತುಗಳಿಂದ ಕೂಡಿದೆ. ರೋಗಗಳೆಂಬ ಬೇಡರ ಭಯವುಳ್ಳುದು. ಅತಿಕಠಿನ ಪಾಪಗಳೆಂಬ ಉಜ್ವಲವಾದ ಕಾಳ್ಕಿಚ್ಚಿನ ಹೊದಿಕೆಯುಳ್ಳುದು. ಅಂತಹ ಕಾಡಿನ ಇಕ್ಕಟ್ಟಿನಲ್ಲಿ ಪ್ರಾಣ ಚೈತನ್ಯಗಳಿಲ್ಲದೆ ಬಲವಾದ ಆಶೆಯೆಂಬ ದುಃಖದಿಂದ ಪೀಡಿತರಾದ ದೇಹಿಗಳಿಗೆ ಜಿನಶಾಸನವೊಂದೇ ಆಶ್ರಯಸ್ಥಾನವಾಗಿದೆ. ಆದುದರಿಂದ- ಯಾವಲ್ಲಿಯವರೆಗೆ ಈ ಶರೀರವು ಕ್ಷೇಮವಾಗಿ ರೋಗವಿಲ್ಲದೆ ಇರುವುದೋ

ಎಂದಿವು ಮೊದಲಾಗೊಡೆಯವನೋದಿಯವಱರ್ಥಮಂ ನೆರವಿಗೆಲ್ಲಂ ವಖ್ಖಾಣಿಸಿ ಪೇೞ್ದು ಮತ್ತಮಿಂತೆಂದಂ

ಕಂದ॥ ಆನಾಳ್ದನಾಳ್ಗಳಿವರೆನ
ಗೇನಾಯ್ತೆಂದಱಿದುಮಱಿಯದುಱದಂ ನುಡಿದೊಂ
ದೇನಾನುಮೇವಮಾಳ್ಕೊಡ
ಮಾ ನುಡಿಯಂ ಮಱಿಯಿಮೆಲ್ಲಮಿಂ ನಿಶ್ಶಲ್ಯಂ

ಗಾಹೆ॥ ಖಮ್ಮಾಮಿ ಸವ್ವಜೀವಾಣಂ ಸವ್ವೇ ಜೀವಾ ಖಮಂತು ಮೇ
ಮೇತ್ತೀ ಮೇ ಸವ್ವಭೂದೇಸು ವೇರಂ ಮಜ್ಝಣ ಕೇಣ ಚಿ

ಎಂದೆಲ್ಲರುಮಂ ಕ್ಷಮೆಗೊಳಿಸಿ ನಿಶ್ಶಲ್ಯಂಗೆಯ್ದು ವಿದ್ಯುದಂಗನೆಂಬ ಪಿರಿಯ ಮಗಂಗೆ ರಾಜ್ಯ ಪಟ್ಟಂಗಟ್ಟಿ ರಾಜ್ಯಾಭಿಷೇಕಂಗೆಯ್ದೀತನಂ ಪಿಡಿದು ನೀಮೆಲ್ಲಂ ಸುಖಂ ಬಾೞಿಮೆಂದು ಕಲ್ಪಿಸಿ ಯಮದಂಡಂಗಂ ಪೊೞಲ ತಳಾಱಿಕೆಯುಂ ಕೊಟ್ಟು ಮಂಗಳವಸದನಂಗೊಂಡು ಪಟ್ಟವರ್ಧನ ಮನೇಱಿ ಸತಿಯರ್ ಸಂಗಡಂ ಬರೆ ಪೆಂಡವಾಸದ ಸೂಳೆಯರಿರ್ಬರ್ ಪೆಱಗೇಱಿರ್ಕೆಲದೊಳಂ

ಮುಪ್ಪು ಎಲ್ಲಿವರೆಗೆ ಹತ್ತಿರ ಬರುವುದಿಲ್ಲವೋ ಇಂದ್ರಿಯಗಳ ಶಕ್ತಿ ಎಲ್ಲಿತನಕ ಕುಗ್ಗದೆ ಇರುವುದೋ ಎಲ್ಲಿವರೆಗೆ ಆಯುಸ್ಸು ನಾಶವಾಗದೆ ಇರುವುದೋ ಅಷ್ಟರೊಳಗಾಗಿಯೇ ಬುದ್ಧಿವಂತನು ಆತ್ಮದ ಶ್ರೇಯಸ್ಸಿಗಾಗಿ ವಿಶೇಷ ಪ್ರಯತ್ನವನ್ನು ಮಾಡಬೇಕು. ಮನೆ ಬೆಂಕಿ ಹತ್ತಿ ಉರಿಯುತ್ತಿರುವಾಗ ಬಾವಿ ತೋಡುವ ಪ್ರಯತ್ನವು ಎಂತಹದು ? ಎಂದು ಇವೇ ಮುಂತಾಗಿ ಉಳ್ಳ ನೀತಿಗಳನ್ನು ಉಚ್ಚರಿಸಿ, ಅವುಗಳ ಅರ್ಥವನ್ನು ಜನಸಮೂಹಕ್ಕೆಲ್ಲ ವ್ಯಾಖ್ಯಾನಮಾಡಿ ಹೇಳಿ ಮತ್ತೆ ಹೀಗೆಂದನು–"ನಾನು ಆಳತಕ್ಕವನು, ರಾಜನು. ಇವರೆಲ್ಲ ನನಗೆ ಸೇವಕರು. ಹೀಗಿರುವಾಗ ಏನಾಗುತ್ತದೆ–ಎಂದು ತಿಳಿದೂ ತಿಳಿಯದೆ, ಲೆಕ್ಕಿಸದೆ, ನಾನು ಹೇಳಿದ ಯಾವುದಾದರೂ ಒಂದು ಮಾತಿನ ವಿಷಯದಲ್ಲಿ ನಿಮಗೆ ಮನಸ್ಸಿನಲ್ಲಿ ಕೋಪವಿದ್ದರೂ ಆ ಮಾತನ್ನು ಮರೆತುಬಿಡಿ. ಇನ್ನು ಮುಂದೆ ಎಲ್ಲವೂ ಪಾಪಾನುಷ್ಠಾನವಿಲ್ಲದುದಾಗಿ ಇರುವುದು. ಎಲ್ಲ ಜೀವಿಗಳನ್ನೂ ಕ್ಷಮಿಸುತ್ತೇನೆ. ಎಲ್ಲ ಜೀವಿಗಳೂ ನನ್ನನ್ನು ಕ್ಷಮಿಸಲಿ. ಸರ್ವಪ್ರಾಣಿಗಳಲ್ಲಿಯೂ ನನಗೆ ಮೈತ್ರಿಯಿದೆ. ಯಾರಲ್ಲಿಯೂ ನನಗೆ ವೈರವಿಲ್ಲ. ಹೀಗೆ ನುಡಿದು ಎಲ್ಲರನ್ನೂ ಕ್ಷಮೆಗೊಳಿಸಿ, ಮಾಯಾಶಲ್ಯ–ಮಿಥ್ಯಾಶಲ್ಯ–ನಿದಾನ ಶಲ್ಯಗಳನ್ನು ಪರಿಹಾರಗೊಳಿಸಿದನು. ತನ್ನ ಹಿರಿಯ ಮಗನಾದ ವಿದ್ಯುದಂಗನಿಗೆ ರಾಜ್ಯದ ಅಧಿಕಾರ ಪಟ್ಟವನ್ನು ಕಟ್ಟಿ ರಾಜ್ಯಾಭಿಷೇಕವನ್ನು ಮಾಡಿದನು. "ನೀವೆಲ್ಲರೂ ಈತನನ್ನು ಆಶ್ರಯಿಸಿಕೊಂಡು ಸುಖವಾಗಿ ಬಾಳಿ" ಎಂದು ಹೇಳಿ, ಯಮದಂಡನಿಗೆ ಆ ಪಟ್ಟಣದ ತಳವಾರ ವೃತ್ತಿಯನ್ನು (ಕಾವಲುಗಾರಿಕೆಯ ಕೆಲಸವನ್ನು) ಕೊಟ್ಟನು. ಮಂಗಳಕರವಾದ ಅಲಂಕಾರವನ್ನು ಮಾಡಿಕೊಂಡು ಪಟ್ಟದ ಗಜವನ್ನು ಹತ್ತಿದನು. ಆಗ ಅವನ ಹೆಂಡಿರು ಸಂಗಡದಲ್ಲಿ ಬಂದರು. ರಾಣಿವಾಸದ

ಚಾಮರಂಗಳನಿಕ್ಕುತ್ತುಂ ಬರೆ ಬೆಳ್ಗೊಡೆಗಳುಂ ಪಾಳಿಧ್ವಜಂಗಳುಂ ತಱಿನೆವಟ್ಟಿಗೆಗಳುಂ ಚಂದ್ರಾದಿತ್ಯರ್ಕಳುಂ ಸಿಂಹ ವ್ಯಾಘ್ರ ಮಕರ ಮತ್ಸ್ಯಂಗಳೆಂದಿವು ಮೊದಲಾಗೊಡೆಯ ರಾಜ್ಯ ಚಿಹ್ನಂಗಳ್ ಮುಂದೆ ಪಱಿಯೆ ಪಂಚಮಹಾಶಬ್ದಂಗಳುಂ ಬದ್ದವಣದ ಪಱೆಗಳುಂ ಬಾಜಿಸೆ ಮಂದಿಮಾಗಧ ಯಾಚಕ ಪ್ರಭೃತಿಗಳ್ಗಂ ದೀನನಾಥಾಂಧರ್ಕಳ್ಗಂ ತುಷ್ಟಿದಾನಮಂ ಕೊಡುತ್ತಂ ಪೋಗಿ ಸಹಸ್ರಕೂಟ ಚೈತ್ಯಾಲಯಮನೆಯ್ದಿ ಪಟ್ಟವರ್ಧನದಿಂದಿೞಿದು ಬಸದಿಯಂ ತ್ರಿಃ ಪ್ರದಕ್ಷಿಣಂಗೆಯ್ದು ದೇವರಂ ವಂದಿಸಿ ಗುಣಧರರೆಂಬಾಚಾರ್ಯರಂ ಗುರುಭಕ್ತಿಗೆಯ್ದು ವಂದಿಸಿ ಇಂತೆಂದಂ ಭಟಾರಾ ಸಂಸಾರಮೆಂಬ ಸಮುದ್ರದೊಳ್ ಮುೞುಗುತ್ತಿರ್ದೆನ್ನಂ ಮುೞುಗಲೀಯದೆತ್ತಿಮೆನಗೆ ದೀಕ್ಷೆಯಂ ಪ್ರಸಾದಂಗೆಯ್ಯಿಮೆಂದು ನುಡಿದೊಡಂಬಡಿಸಿ ಸಾಸಿರ್ವರರಸು ಮಕ್ಕಳ್ವೆರಸು ಕಟಕ ಕಟಿಸೂತ್ರ ಕುಂಡಲಾಭರಣಾದಿಗಳಂ ಕಳೆದು ಬಾಹ್ಯಾಭ್ಯಂತರ ಪರಿಗ್ರಹಮೆಲ್ಲಮಂ ತೊಱೆದು ಗುಣಧರ ಭಟ್ಟಾರರ ಪಕ್ಕದೆ ತಪಂಬಟ್ಟಂ ಮತ್ತಂ ದೇವಗಣಿಕೆಯರನೆ ಪೋಲ್ವ ಸೌಂದರಿಮಹಾದೇವಿ ಮೊದಲಾಗೇೞ್ನೂರ್ವರರಸಿಯರ್ಕಳ್ ಗುಣಧರ ಭಟಾರರೆ ಗುರುಗಳಾಗೆ ತಮ್ಮತ್ತೆವಿರಪ್ಪ ವಿಜಯಮತಿ ಕಂತಿಯರ್ ಕಂತಿಯರಾಗೆ ತಪಂಬಟ್ಟು ಗಿಡಿಗಿಡಿ

ಇಬ್ಬರು ದಾಸಿಯರು ಹಿಂದುಗಡೆ ಹತ್ತಿಕೊಂಡು ಎರಡು ಬದಿಗಳಲ್ಲಿಯೂ ಚಾಮರವನ್ನು ಬೀಸುತ್ತ ಬಂದರು. ಶ್ವೇತಚ್ಛತ್ರಗಳು, ಪಾಳಿಧ್ವಜಗಳು, ಚಾಪುಟಿಗಳು, ಚಂದ್ರಸೂರ್ಯರು, ಸಿಂಹ ಹುಲಿ ಮೀನು– ಎಂದು ಇವೇ ಮೊದಲಾಗಿ ಉಳ್ಳ ರಾಜ್ಯಾಧಿಕಾರದ ಚಿಹ್ನೆಗಳು ಅವನ ಮುಂದೆ ಹೋದವು. ಶಂಖ, ಪಟಹ–ಮುಂತಾದ ಐದು ಬಗೆಯ ಮಹಾವಾದ್ಯ ಶಬ್ದಗಳೂ ಮಂಗಳವಾದ್ಯಗಳೂ ಶಬ್ದಮಾಡಿದವು. ವಂದಿಮಾಗಧರು (ಸ್ತುತಿಪಾಠಕರು), ಬೇಡುವವರು, ದೀನರು, ಅನಾಥರು, ಕುರುಡರು–ಇಂಥವರಿಗೆಲ್ಲ ಸಂತೋಷವಾಗುವಷ್ಟು ದಾನವನ್ನು ಕೊಡುತ್ತ ವಿದ್ಯುಚ್ಚೋರನು ಸಹಸ್ರಕೂಟವೆಂಬ ಜಿನಾಲಯಕ್ಕೆ ಹೋಗಿ ಪಟ್ಟದಾನೆಯಿಂದ ಇಳಿದನು. ಬಸದಿಗೆ ಮೂರು ಸುತ್ತು ಬಲವಂದು ದೇವರಿಗೆ ವಂದನೆ ಸಲ್ಲಿಸಿದನು. ಗುಣಧರರೆಂಬ ಆಚಾರ್ಯರನ್ನು ಗುರುಭಕ್ತಿಯಿಂದ ಸಂದರ್ಶಿಸಿ ನಮಸ್ಕರಿಸಿ ಹೀಗೆಂದನು "ಪೂಜ್ಯರೇ, ಸಂಸಾರವೆಂಬ ಸಮುದ್ರದಲ್ಲಿ ಮುಳುಗುತ್ತಿರುವ ನನ್ನನ್ನು ಮುಳುಗುವುದಕ್ಕೆ ಅವಕಾಶವೀಯದೆ ಎತ್ತಿರಿ. ನನಗೆ ಜಿನದೀಕ್ಷೆಯನ್ನು ಅನುಗ್ರಹಿಸಿರಿ!" –ಎಂದು ನುಡಿದು ಅವರು ದೀಕ್ಷೆಕೊಡಲು ಒಪ್ಪುವಂತೆ ಮಾಡಿದನು. ಸಾವಿರ ಮಂದಿ ರಾಜಕುಮಾರರು ಸಹಿತ ಬಳೆ, ಉಡಿದಾರ, ಕುಂಡಲ, ಆಭರಣ–ಮುಂತಾದುವನ್ನು ತೆಗೆದುಹಾಕಿ ಹೊರಗಿನ ಮತ್ತು ಒಳಗಿನ ಪರಿಗ್ರಹಗಳನ್ನೆಲ್ಲ ಬಿಟ್ಟು ಗುಣಧರ ಋಷಿಗಳ ಬಳಿ ತಪಸ್ಸನ್ನು ಸ್ವೀಕರಿಸಿದನು. ಆಮೇಲೆ, ಸುರಸ್ತ್ರೀಯರನ್ನು ಹೋಲತಕ್ಕ ಸೌಂದರಿ ಮಹಾದೇವಿ ಮುಂತಾದ ಏಳುನೂರು ಮಂದಿ ರಾಣಿಯರು ಗುಣಧರ ಋಷಿಗಳನ್ನೇ ಗುರುಗಳಾಗಿ ಕಲ್ಪಿಸಿ, ತಮ್ಮ ಅತ್ತೆಯವರಾದ ವಿಜಯಮತಿ ಕಂತಿಯವರೇ ತಮಗೆ ಮಾರ್ಗದರ್ಶನ ಮಾಡುವ ಸಂನ್ಯಾಸಿನಿಯರಾಗಿರಲು, ತಪಸ್ಸನ್ನು ಸ್ವೀಕರಿಸಿದರು.

ಜಂತ್ರಂ ಮಿಳಿಮಿಳಿ ನೇತ್ರರಾಗಿ ಘೋರವೀರ ತಪಶ್ಚರಣದೊಳ್ ನೆಗೞುತ್ತಿರ್ದರ್ ಇತ್ತ ವಿದ್ಯುಚ್ಚೋರ ಮುನಿಯುಂ ಪನ್ನೆರಡು ವರ್ಷಂ ಬರೆಗಂ ಗುರುಗಳನಗಲದೆ ದ್ವಾದಶಾಂಗ ಚತುರ್ದಶ ಪೂರ್ವಮಪ್ಪಾಗಮಮೆಲ್ಲಮುಂ ಕಲ್ತುಗ್ರೋಗ್ರ ತಪಶ್ಚರಣದೊಳ್ ನೆಗೞುತ್ತುಮಾಚಾರ್ಯರಾಗಿ ಅಯ್ನೂರ್ವರ್ ಶಿಷ್ಯರ್ಕಳ್ವೆರಸು ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ ವಿಹಾರಿಸುತ್ತಂ ಪೋಗಿ ಪೂರ್ವದೇಶದೊಳ್ ಖಾಳಿಮಂಡಳಮೆಂಬ ನಾಡೊಳ್ ತಾಮ್ರಲಿಪ್ತಿಯೆಂಬ ಪೊೞಲ ಪೊಱವೊೞಲನೆಯ್ದಿದಾಗಳಲ್ಲಿ ವರಾಂಗಾಯಿಯೆಂಬೊಳುಗ್ರದೇವತೆಗಾಱುದಿಂಗಳಱುದಿಂಗಳಿಂಗೆಲ್ಲಾ ಕಾಲಮುಂ ಜಾತ್ರೆಯಪ್ಪುದಾ ಜಾತ್ರೆಗೆ ನಾಡೆಯಷ್ಟಮಿಯುಂದು ಬಂದು ನೆರೆದು ಜಾತ್ರೆಯುಂ ಮಾಡೆ ದುರ್ಗಾದೇವತೆ ರಿಸಿಯರ ಬರವಂ ಗಂಟಱಿೞಳಿರ್ದು ಕಂಡಿದಿರಂ ಪೋಗಿ ಇಂತೆಂದಳೆನ್ನ ಜಾತ್ರೆ ಸಮೆವನ್ನೆಗಂ ನೀಮೀ ಪೊೞಲಂ ಪುಗದಿರಿಮೆಂದು ಬಾರಿಸಿದೊಡೆ ಶಿಷ್ಯರ್ಕಳೆಂದರ್ ನಮ್ಮಂ ದೇವತೆಯೇಗೆಯ್ದಪ್ಪೊಳ್ ಪೋಪಂ ಭಟಾರಾ ಎಂದು ಭಟಾರರನೊಡಗೊಂಡು ದೇವತೆ ಬಾರಿಸೆವಾರಿಸೆ ಪೊೞಲಂ ಪೊಕ್ಕು ಮತ್ತಿರುಳ್ ಪೊೞಲ ಪಡುವಣ ದೆಸೆಯ ಕೋಂಟೆಯಿಂ ಪೊಱಗಣ ದೆಸೆಯೊಳ್ ವಿದ್ಯುಚ್ಚೋರ

ಅವರೆಲ್ಲರೂ ಸವೆದು ಸಣಕಲಾದ ದೇಹವನ್ನೂ ಗುಳಿಬಿದ್ದ ಕಣ್ಣುಗಳನ್ನೂ ಉಳ್ಳವರಾಗಿ ಉಗ್ರವೂ ಶ್ರೇಷ್ಠವೂ ಆದ ತಪವನ್ನು ಆಚರಿಸುತ್ತ ಇದ್ದರು. ಇತ್ತ ವಿದ್ಯುಚ್ಚೋರ ಋಷಿ ಹನ್ನೆರಡು ವರುಷಗಳವರೆಗೆ ಗುರುಗಳನ್ನಗಲದೆ ಹನ್ನೆರಡು ಅಂಗಗಳುಳ್ಳ ಮತ್ತು ಹದಿನಾಲ್ಕು ಪೂರ್ವಗಳುಳ್ಳ ಶಾಸ್ತ್ರಗಳನ್ನೆಲ್ಲ ಕಲಿತು ಅತ್ಯಂತ ಘೋರವಾದ ತಪಸ್ಸನ್ನು ಆಚರಣೆ ಮಾಡುತ್ತ ಆಚಾರ್ಯರಾದರು. ಐನೂರು ಮಂದಿ ಶಿಷ್ಯರನ್ನು ಕೂಡಿಕೊಂಡು ಗ್ರಾಮ-ನಗರ-ಖೇಡ-ಖರ್ವಡ-ಮಡಂಬ-ಪಟ್ಟಣ ದ್ರೋಣಾಮುಖಗಳಲ್ಲಿ ಸಂಚಾರ ಮಾಡುತ್ತ ಹೋದರು. ಅವರು ಪೂರ್ವದೇಶದಲ್ಲಿರತಕ್ಕ ಖಾಳಿಮಂಡಳವೆಂಬ ನಾಡಿನಲ್ಲಿ ತಾಮ್ರಲಿಪ್ತಿಯೆಂಬ ಪಟ್ಟಣದ ಹೊರಗಣ ಭಾಗಕ್ಕೆ ಹೋದರು. ಅಲ್ಲಿ ವರಾಂಗಾಯಿ ಎಂಬ ಉಗ್ರದೇವತೆಯಿದ್ದಳು. ಅವಳಿಗೆ ಆರುತಿಂಗಳಿಗೊಮ್ಮೆ ಪ್ರತಿವರ್ಷವೂ ಬಿಡದೆ ಜಾತ್ರೆಯಾಗುತ್ತಿತ್ತು. ಆ ಜಾತ್ರೆಗೆ ವಿಶೇಷವಾಗಿ ದುರ್ಗಾಷ್ಟಮಿಯುಂದು ಜನರೆಲ್ಲ ಬಂದು ಸೇರಿ, ಜಾತ್ರೆಯನ್ನು ಆಗ ಮಾಡುತ್ತಿದ್ದರು. ಆ ದುರ್ಗಾದೇವತೆ ಋಷಿಗಳು ಬಂದಿರುವುದನ್ನು ದೂರದಿಂದಲೇ ಕಂಡು ಇದಿರಿಗೆ ಹೋಗಿ ಹೀಗೆಂದಳು- "ನನ್ನ ಜಾತ್ರೆ ಕೊನೆಗೊಳ್ಳುವವರೆಗೂ ನೀವು ಈ ಪಟ್ಟಣವನ್ನು ಪ್ರವೇಶಿಸದಿರಿ"-ಎಂದು ಆತಂಕಪಡಿಸಿದಳು ಆಗ ಋಷಿ ಶಿಷ್ಯರು-"ಪೂಜ್ಯರೇ, ನಮ್ಮನ್ನು ಈ ದೇವತೆ ಏನು ಮಾಡುವಳು! ನಾವು ಹೋಗೋಣ"-ಎಂದು ವಿದ್ಯುಚ್ಚೋರ ಮುನಿಯನ್ನು ಕೂಡಿಕೊಂಡು, ದೇವತೆ ಅಡ್ಡಿ ಪಡಿಸಿದರೂ ಲೆಕ್ಕಿಸದೆ ಪಟ್ಟಣವನ್ನು ಹೊಕ್ಕರು. ಮತ್ತೆ ರಾತ್ರಿವೇಳೆ ವಿದ್ಯುಚ್ಚೋರ ಋಷಿಗಳು ಪಟ್ಟಣದ ಪಶ್ಚಿಮದಿಕ್ಕಿನ ಕೋಟೆಯ ಹೊರಗಿನ ಭಾಗದಲ್ಲಿ ಪ್ರತಿಮಾಯೋಗದಲ್ಲಿ ನಿಂತರು. ವರಾಂಗಾಯಿ ದೇವತೆ ಆಗ ಕೋಪಗೊಂಡು, ಪಾರಿವಾಳದಷ್ಟು

ಭಟಾರರ್ ಪ್ರತಿಮಾಯೋಗಂ ನಿಂದೊಡೆ ದೇವತೆ ಮುಳಿದು ಪೊಱಸುಗಳನಿವಿರಿಯುವು ದಂಸ ಮಸಕಂಗಳಂ ವಿಗುರ್ವಿಸೆ ಮೆಯ್ಯೆಲ್ಲಮನಿರುಳ್ ನಾಲ್ಕು ಜಾವಮುಂ ತಿನೆ ನರಕವೇದನೆಯಿಂದ ಮಗ್ಗಳಮೆ ವೇದನೆಯುಪ್ಪಂತುಪಸರ್ಗಂಗೆಯ್ಯೆ ಅಂತಪ್ಪ ದುಃಖಮುಮಂ ವೇದನೆಯುಮಂ ಮನದೊಳಿಲ್ಲದಂತಿರೆ ಸೈರಿಸಿ ಆಜ್ಞಾವಿಚಯಮಪಾಯ ವಿಚಯ ವಿಪಾಕವಿಚಯ ಸಂಸ್ಥಾನ ವಿಚಯಮೆಂಬೀ ನಾಲ್ಕುಂ ಧರ್ಮ್ಯಧ್ಯಾನಂಗಳಂ ಧ್ಯಾನಿಸಿ ಬೞಕ್ಕೆ ಪೃಥಕ್ತ್ವ ವಿತರ್ಕ ವೀಚಾರಮೆಂಬ ಪ್ರಥಮ ಶುಕ್ಲಧ್ಯಾನಮಂ ಧ್ಯಾನಿಸುತ್ತಂ ಕ್ಷಪಕ ಶ್ರೇಣಿಯನೇಱಿ ಏಕತ್ವ ವಿತರ್ಕ ವೀಚಾರಂ ಸೂಕ್ಷ್ಮಕ್ರಿಯಾ ಪ್ರತಿಪಾತಿ ಸಮುಚ್ಛಿನ್ನ ಕ್ರಿಯಾನಿವೃತ್ತಿಯೆಂಬ ಶುಕ್ಲಧ್ಯಾನಂಗಳಂ ಧ್ಯಾನಿಸಿ ಘಾತಿಕರ್ಮಂಗಳಂ ಕಿಡಿಸಿ ಅಂತರ್ಗತ ಕೇವಳಿಯಾಗಿ ಅಘಾತಿ ಕರ್ಮಂಗಳಂ ಕಿಡಿಸಿ ಮೋಕ್ಷಕ್ಕೆ ಪೋದರ್ ಮತ್ತೆ ಸಂನ್ಯಸನಂಗೆಯ್ಯುತ್ತಿರ್ದ ಭವ್ಯರ್ಕಳ್ ಪರಮ ಶುದ್ಧ ಸಹಜ ರತ್ನತ್ರಯಮನಾರಾಧಿಸುತ್ತಿರ್ದೋರ್ ವಿದ್ಯುಚ್ಚೋರ ಋಷಿಯರಂ ಮನದೊಳ್ ಬಗೆದು ದಂಡಣೆಗಳುಮಂ ವೇದನೆಗಳುಮಂ ವ್ಯಾಧಿಗಳುಮಂ ಚತುರ್ವಿಧಮಪ್ಪುಪಸರ್ಗಮುಮಂ ಪಸಿವುಂ ನೀರೞ್ಕೆಯುಂ ಶೀತೋಷ್ಣ ವಾತ ದಂಸಮಸಕಂ ಮೊದಲಾಗೊಡೆಯುವಱಿಂದಪ್ಪ ವೇದನೆಗಳುಂ·ದುಃಖಂಗಳುಮಂ ಸೈರಿಸಿ ಪರಮ ಶುದ್ಧ ಸಹಜ ರತ್ನತ್ರಯಂಗಳಂ ಸಾಧಿಸಿ ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

ದೊಡ್ಡವುಗಳಾದ ಚಿಗಟೆಗಳನ್ನೂ ಗುಂಗುರುಗಳನ್ನೂ (ಸೊಳ್ಳೆ ನೊಣಗಳನ್ನು) ಮಾಯೆಯಿಂದ ನಿರ್ಮಾಣಮಾಡಿದಳು. ಅವು ವಿದ್ಯುಚ್ಚೋರ ಋಷಿಗಳ ಶರೀರವನ್ನು ರಾತ್ರಿಯ ನಾಲ್ಕು ಜಾವ (ಹನ್ನೆರಡು ಗಂಟೆ) ಸಮಯವೂ ಕಚ್ಚಿ ತಿನ್ನುತ್ತ ನರಕದ ಯಾತನೆಗಿಂತ ಅಧಿಕವಾದ ನೋವನ್ನುಂಟುಮಾಡುವ ಉಪಸರ್ಗವನ್ನು ಮಾಡಿದವು. ಅಂತಹ ದುಃಖವೂ ನೋವೂ ಮನಸ್ಸಿನಲ್ಲಿ ಇಲ್ಲದ ರೀತಿಯಲ್ಲಿ ಅವನ್ನು ಸಹಿಸಿಕೊಂಡು ಆಜ್ಞಾ ವಿಚಯ, ಅಪಾಯವಿಚಯ, ವಿಪಾಕ ವಿಚಯ, ಸಂಸ್ಥಾನವಿಚಯ ಎಂಬ ಈ ನಾಲ್ಕು ವಿಧವಾದ ಧರ್ಮಧ್ಯಾನವನ್ನು ಧ್ಯಾನಿಸಿದರು. ಆಮೇಲೆ, ಪೃಥಕ್ತ್ವ, ವಿತರ್ಕ, ವೀಚಾರ -ಎಂಬ ಮೊದಲಿನ ಶುಕ್ಲಧ್ಯಾನವನ್ನು ಧ್ಯಾನಿಸುತ್ತ, ಕ್ಷಪಕಶ್ರೇಣಿಯನ್ನು ಏರಿ, ಏಕತ್ವ--ವಿತರ್ಕವೀಚಾರ-ಸೂಕ್ಷ್ಮ ಕ್ರಿಯಾ ಸಮುಚ್ಛಿನ್ನ ಕ್ರಿಯಾನಿವೃತ್ತಿ ಎಂಬ ಶುಕ್ಲಧ್ಯಾನಗಳನ್ನು ಧ್ಯಾನಿಸಿ, ಘಾತಿಕರ್ಮಗಳನ್ನು ನಾಶಗೊಳಿಸಿ, ಅಂತರ್ಗತ ಕೇವಲಿಯಾಗಿ ಅಘಾತಿಕರ್ಮಗಳನ್ನು ಕೆಡಿಸಿ ಮುಕ್ತಿಗೆ ಹೋದರು. ಸಂನ್ಯಾಸವನ್ನು ಆಚರಿಸುತ್ತಿರುವ ಭವ್ಯರು ಹಾಗೂ ಶ್ರೇಷ್ಠವೂ ಶುದ್ಧವೂ ಸಹಜವೂ ಆದ ರತ್ನತ್ರಯವನ್ನು ಆರಾಧಿಸುವವರು ವಿದ್ಯುಚ್ಚೋರ ಋಷಿಗಳನ್ನು ಮನಸ್ಸಿನಲ್ಲಿ ಭಾವಿಸಿಕೊಂಡು ದಂಡನೆಗಳನ್ನೂ ಯಾತನೆಗಳನ್ನೂ ರೋಗಗಳನ್ನೂ ನಾಲ್ಕು ವಿಧವಾದ ಉಪಸರ್ಗಗಳನ್ನೂ ಹಸಿವು, ಬಾಯಾರಿಕೆ, ಶೀತ-ಉಷ್ಣ-ವಾಯು-ಸೊಳ್ಳೆ-ನೊಣ-ಮುಂತಾಗಿರುವವುಗಳಿಂದ ಆಗತಕ್ಕ ಯಾತನೆಗಳನ್ನೂ ದುಃಖಗಳನ್ನೂ ಸಹಿಸಿಕೊಂಡು, ಶ್ರೇಷ್ಠವೂ ಶುದ್ಧವೂ ಸಹಜವೂ ಆದ ರತ್ನತ್ರಯವನ್ನು (ಸಮ್ಯಗ್ದರ್ಶನ, ಸಮ್ಯಗ್‌ಜ್ಞಾನ, ಸಮ್ಯಕ್ ಚಾರಿತ್ರ ಎಂಬಿವನ್ನು) ಸಾಧಿಸಿ ಸ್ವರ್ಗ-ಮೋಕ್ಷ ಸುಖಗಳನ್ನು ಪಡೆಯಲಿ.



# ೧೪. ಗುರುದತ್ತ ಭಟಾರರ ಕಥೆ

ಗುರುದತ್ತ ಭಟಾರರ ಕಥೆಯಂ ಪೇೞ್ವೆಂ :

ಗಾಹೆ॥ ಹತ್ಥಿಣಪುರ ಗುರುದತ್ತೋ ಸಮ್ಮಲಿಥಾಲೀವ ದೋಣ್ಣಿಮಂತಮ್ಮಿ
ದಜ್ಝಂತೋ ಅಧಿಯಾಸಿಯ ಪಡಿವಣ್ಣೋ ಉತ್ತಮಂ ಅಟ್ಠಂ ॥೧॥

[ಹತ್ಥಿಣಪುರ-ಹಸ್ತಿನಾಪುರಮುಮಂ ಮುನ್ನಾಳ್ವ, ಗುರುದತ್ತೋ-ಗುರುದತ್ತರಿಸಿ, ಸಮ್ಮಲಿಥಾಲೀವ-ಸೂಡಿವೊತ್ತಿಸೆಪಟ್ಟನಂತೆ, ದೋಣ್ಣಿಮಂತಮ್ಮಿ-ದೋಣಿಮಂತಮೆಂಬ ಪರ್ವತದ ಸಾರೆ, ದಜ್ಝಂತೋ-ಬೇಯುತ್ತಿರ್ದೊನಾಗಿ, ಅಧಿಯಾಸಿಯ-ಉಪಸರ್ಗಮಂ ಸೈರಿಸಿ, ಪಡಿವಣ್ಣೋ-ಪೊರ್ದಿದೊಂ, ಉತ್ತಮಂ ಅಟ್ಠಂ-ಮಿಕ್ಕ ದರ್ಶನಜ್ಞಾನಚಾರಿತ್ರಂಗಳಾರಾಧನೆಯಂ]

ಅದೆಂತೆಂದೊಡೆ :

ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ಕುಣಾಳಮೆಂಬುದು ನಾಡಲ್ಲಿ ಸಾವಸ್ತಿಯೆಂಬುದು ಪೊೞಲದನಾಳ್ವೊನುಪರಿಚರನೆಂಬೊನರಸನಾತನ ಮಹಾದೇವಿಯರ್ ಪದ್ಮಾವತಿ ಅಮಿತಪ್ರಭೆ ಸುಪ್ರಭೆ ಪ್ರಭಾವತಿ ಅಂತು ನಾಲ್ವರುಂ ಮಹಾದೇವಿಯರ್ ಮೊದಲಾಗಿ ಅರಸಿಯರ್ಕಳಯ್ನೂರ್ವರ್ ಪದ್ಮಾವತಿ ಮಹಾದೇವಿಯ ಮಗನನಂತವೀರ್ಯನಮಿತ ಪ್ರಭೆಯ ಮಗಂ ವಜ್ರಪಾಣಿ ಸುಪ್ರಭೆಯ ಮಗಂ ವಜ್ರಬಾಹು ಪ್ರಭಾವತಿಯ ಮಗಂ ವಜ್ರಧರನಿಂತೀ ನಾಲ್ವರುಂ ಮಹಾದೇವಿಯರ ಮಕ್ಕಳ್ ಉೞಿದರಸಿಯರ ಮಕ್ಕಳಯ್ನೂರ್ವರಂತವರ್ಗಳಿಷ್ಟವಿಷಯ ಕಾಮ

ಗುರುದತ್ತಭಟಾರರ ಕಥೆಯನ್ನು ಹೇಳುವೆನು—[ಹಿಂದೆ, ಹಸ್ತಿನಾಪುರವನ್ನು ಆಳುತ್ತಿದ್ದ ಗುರುದತ್ತನೆಂಬ ಋಷಿ ದೋಣಿಮಂತವೆಂಬ ಬೆಟ್ಟದ ಸಮೀಪದಲ್ಲಿ ಸುಟ್ಟು ಹೋಗಿ, ಉಪಸರ್ಗವನ್ನು ಸಹಿಸಿಕೊಂಡು, ಶ್ರೇಷ್ಠವಾದ ದರ್ಶನ-ಜ್ಞಾನ-ಚಾರಿತ್ರಗಳೆಂಬ ರತ್ನತ್ರಯದ ಆರಾಧನೆಯನ್ನು ಮಾಡಿ ಅದರ ಫಲವನ್ನು ಪಡೆದನು.] ಅದು ಹೇಗೆಂದರೆ— ಈ ಜಂಬೂದ್ವೀಪದಲ್ಲಿರುವ ಭರತಕ್ಷೇತ್ರದಲ್ಲಿ ಕುಣಾಳ ಎಂಬ ನಾಡಿನಲ್ಲಿ ಶ್ರಾವಸ್ತಿ ಎಂಬ ಪಟ್ಟಣವಿದೆ. ಅದನ್ನು ಉಪರಿಚರನೆಂಬ ರಾಜನು ಆಳುತ್ತಿದ್ದನು. ಅವನಿಗೆ ಪದ್ಮಾವತಿ, ಅಮಿತಪ್ರಭೆ, ಸುಪ್ರಭೆ, ಪ್ರಭಾವತಿ-ಎಂಬ ನಾಲ್ವರು ಮಹಾರಾಣಿಯರು ಮುಂತಾಗಿ ಐನೂರು ಮಂದಿ ಅರಸಿಯರಿದ್ದರು. ಪದ್ಮಾವತೀ ಮಹಾದೇವಿಯ ಮಗ ಅನಂತವೀರ್ಯ ; ಅಮಿತಪ್ರಭೆಯ ಮಗ ವಜ್ರಪಾಣಿ ; ಸುಪ್ರಭೆಯ ಮಗ ವಜ್ರಬಾಹು ; ಪ್ರಭಾವತಿಯ ಮಗ ವಜ್ರಧರ. ಹೀಗೆ ಈ ನಾಲ್ಕು ಮಂದಿ ಮಹಾರಾಣಿಯರ ಮಕ್ಕಳೂ ಉಳಿದ ಅರಸಿಯರ ಮಕ್ಕಳೂ ಐನೂರು ಮಂದಿ ಇದ್ದರು. ಅಂತು ಅವರು ತಮಗೆ ಇಷ್ಟವಾದ ಕಾಮ ಸುಖಗಳನ್ನು ಅನುಭವಿಸುತ್ತ ಹಲವು ಕಾಲ ಕಳೆಯಿತು.

ಭೋಗಂಗಳನನುಭವಿಸುತ್ತಂ ಪಲಕಾಲಂ ಸಲೆ ಮತ್ತೊಂದು ದಿವಸಂ ವಸಂತಕಾಲದೊಳ್ ಅಂಕುರಿತ ಪಲ್ಲವಿತ ಕೋರಕಿತ ಕುಸುಮಿತ ಫಲಿತಮಪ್ಪ ಮನೋಹರೋದ್ಯಾನಕ್ಕಯ್ನೂರ್ವರ ರಸಿಯರ್ಕಳುಮಣುಗರ್ಕಳುಂ ಬೆರಸು ಪೋಗಿ ಮಹಾವಿಭೂತಿಯಿಂ ವನಕ್ರೀಡೆಯಂ ಪಿರಿದುಂ ಬೇಗಮಾಡಿ ಬಳಿಕ್ಕಾ ನಂದನವನದೊಳಗಣ ಸುದರ್ಶನಮೆಂಬ ಮಣಿಕುಟ್ಟಿಮಮಪ್ಪ ಬೊಡ್ಡಣ ಬಾವಿಯೊಳ್ ಕರ್ಪೂರ ಕಾಳಾಗರು ತುರುಷ್ಕ ಕುಂಕುಮ ಚಂದನಾದಿ ಸುಗಂಧದ್ರವ್ಯಂಗಳಿಂ ಬೆರಸೆ ಪಟ್ಟುದಱೊಳ್ ಮತ್ತಂ ನೀಲೋತ್ಪಲ ಕುವಳಯಂ ಮೊದಲಾಗೊಡೆಯ ನಾನಾಪ್ರಕಾರದ ಪುಷ್ಪಜಾತಿಗಳಿಂದಂ ಸಂಛನ್ನಮಪ್ಪುದಱೊಳ್ ಚಕ್ರವಾಕ ಬಕ ಬಳಾಕ ಹಂಸ ಮಂಡೂಕ ಜೀವಂ ಜೀವಕ ಚಕೋರಾದಿ ಜಲಚರ ಹಂಗವಿ ಸಮೂಹಂಗಳನೊಡೆಯುದಱೊಳ್ ನಾಲ್ವರುಂ ಮಹಾ ದೇವಿಯರ್ವೆರಸೊಂದೊರ್ವರಂ ನಾನಾಪ್ರಕಾರದ ಯಂತ್ರಂಗಳಿಂದಂ ಜೀರ್ಕೊಳವಿಗಳಿಂದಂ ತಳಿಯುತ್ತಂ ನೀರ್ಗಳಿಂ ಸೂಸುತ್ತಂ ಜಲಕ್ರೀಡೆಯಂ ಮನಕ್ಕೆ ವಂದರಸಿಯರ್ಕಳೊಡನೆ ನೀಡುಂ ಬೇಗಮಾಡುತ್ತಿರ್ಪನ್ನೆಗಂ ಮತ್ತಿತ್ತ ವಿಜಯಾರ್ಧಪರ್ವತದ ಉತ್ತರಶ್ರೇಣಿಯೊಳಳಕಾಪುರ ಮೆಂಬುದು ಪೊಲದನಾಳ್ವೊಂ ವಜ್ರದಾಡನೆಂಬ ವಿದ್ಯಾಧರನನೇಕ ವಿದ್ಯಾಬಲಗರ್ವಿತನಾತನ

ಅನಂತರ ಒಂದು ದಿನ ವಸಂತ ಋತುವಿನ ಕಾಲದಲ್ಲಿ, ಮನೋಹರ ಎಂಬ ಉದ್ಯಾನವು ಮೊಳಕೆ ಮೂಡಿ, ಚಿಗುರಿ, ಟಿಸಲುಗಳೊಡೆದು, ಹೂಬಿಟ್ಟು, ಹಣ್ಣುಗಳಿಂದ ತುಂಬಿರಲು– ಆ ಮನೋಹರೋದ್ಯಾನಕ್ಕೆ ಉಪರಿಚರ ರಾಜನು ಐನೂರು ಮಂದಿ ಅರಸಿಯರನ್ನೂ ಮಕ್ಕಳನ್ನೂ ಕೂಡಿಕೊಂಡು ಹೋದನು. ಅಲ್ಲಿ ಮಹಾವೈಭವದಿಂದ ಬಹಳ ಹೊತ್ತಿನ ವರೆಗೆ ವನಕ್ರೀಡೆಯನ್ನು ಆಡಿದನು. ಆಮೇಲೆ, ತನ್ನ ನಾಲ್ವರು ರಾಣಿಯರನ್ನು ಕೂಡಿಕೊಂಡು ಆ ನಂದನವನದಲ್ಲಿರುವ ಸುದರ್ಶನವೆಂಬ ಕೊಳಕ್ಕೆ ಜಲಕ್ರೀಡೆಗೆ ಹೋದನು. ಆ ಕೊಳವು ರತ್ನಖಚಿತವಾದ ನೆಲಗಟ್ಟಿನಿಂದ ಕೂಡಿದ್ದಿತು. ಕರ್ಪೂರ, ಕಾಳಾಗರು, ಲೋಬಾನ, ಕುಂಕುಮ, ಶ್ರೀಗಂಧ ಮುಂತಾದ ಸುವಾಸನೆಯ ವಸ್ತು ಗಳಿಂದ ಮಿಶ್ರಿತವಾಗಿದ್ದಿತು. ನೀಲೋತ್ಪಲ, ಕನ್ನೈದಿಲೆ ಮುಂತಾಗಿ ಉಳ್ಳ ಹಲವಾರು ವಿಧದ ಹೂವುಗಳಿಂದ ಮುಚ್ಚಿಕೊಂಡಿದ್ದಿತು. ಎಣೆಹಕ್ಕಿ, ಕೊಕ್ಕರೆ, ಬಳಾಕವೆಂಬ ನೀರು ಹಕ್ಕಿ, ಹಂಸ, ಕಪ್ಪೆ, ಜೀವಂಜೀವಕ ಬೆಳದಿಂಗಳ ಹಕ್ಕಿ ಮುಂತಾದ ಜಲಚರ ಗಳಾದ ಪಕ್ಷಿಗಳ ಸಮೂಹದಿಂದ ಕೂಡಿದ್ದಿತು. ಅಂತಹ ನೀರ್ಗೊಳದಲ್ಲಿ ಉಪರಿಚರ ರಾಜನು ತನ್ನ ಮನಸ್ಸಿಗೆ ಬಂದ ಅರಸಿಯರೊಂದಿಗೆ ಹಲವಾರು ವಿಧದ ಯಂತ್ರ ಗಳಿಂದಲೂ ಪಿಚಕಾರಿಗಳಿಂದಲೂ ಪರಸ್ಪರವಾಗಿ ನೀರನ್ನು ಚಿಮುಕಿಸುತ್ತಲೂ ನೀರನ್ನು ಚೆಲ್ಲುತ್ತಲೂ ಬಹಳ ಹೊತ್ತಿನವರೆಗೆ ಜಲಕ್ರೀಡೆಯನ್ನು ಆಡುತ್ತಿದ್ದನು. ಈ ರೀತಿಯಾಗಿ ಆಡುತ್ತಿದ್ದಾಗ ಮುಂದಿನ ಘಟನೆ ನಡೆಯಿತು. ಇತ್ತ ವಿಜಯಾರ್ಧಪರ್ವತದ ಬಡಗಣ ಸಾಲಿನಲ್ಲಿ ಅಳಕಾಪುರವೆಂಬ ಪಟ್ಟಣವನ್ನು ವಜ್ರದಾಡನೆಂಬ ವಿದ್ಯಾಧರನು ಆಳುತ್ತಿ ದ್ದನು. ಅವನು ತನಗೆ ಅನೇಕ ವಿದ್ಯೆಗಳ ಸಾಮರ್ಥ್ಯವಿದೆಯೆಂದು ಗರ್ವಗೊಂಡಿದ್ದನು.

ಮಹಾದೇವಿ ಮದನವೇಗೆಯೆಂಬೊಳಂತವರಿರ್ವರುಮೊಂದು ದಿವಸಂ ರಮ್ಯ ಪ್ರದೇಶಂಗಳೊಳ್ ಕ್ರೀಡಿಸಲ್ವೇಡಿ ಭೌಮ ವಿಹಾರಕ್ಕೆಂದು ವಿಚಿತ್ರಮಾಗುತ್ತಿರ್ದ ವಿಮಾನಮನೇಱಿಯಾಕಾಶಪಥದೊಳ್ ಪೋಗುತ್ತಿರ್ದವರ್ಗಳ್ ದೇವಸಮಾನರಪ್ಪ ಸಾಮಂತ ಮಹಾಸಾಮಂತರ್ಕಳಿಂದಂ ದೇವಗಣಿಕೆಯರಪ್ಸರೆಯರ್ಕಳಂ ಪೋಲ್ವಯ್ನೂರ್ವರರಸಿಯರ್ಕಳಿಂದಂ ಪೆಂಡವಾಸದೆಳವೆಂಡಿರಿಂದಂ ಪರಿವಾರ ಜನಂಗಳಿಂದಮಿಂತು ದಿವ್ಯಮಪ್ಪ ಸಭೆಯಿಂದಂ ಪರಿವೇಷ್ಟಿತನಾಗಿ ಪಟು ಪಟಹ ಪಣವ ತುಣವ ಭಂಭಾ ಮರ್ದಳ ಝಲ್ಲರಿ ಮುಕುಂದ ಶಂಖ ವಂಶ ತಾಳ ಭೇರೀ ಮೃದಂಗ ವೀಣಾ ಕಹಳಾದಿ ನಾನಾಪ್ರಕಾರದ ತೂರ್ಯಧ್ವನಿಗಳ್ ದೇವದುಂದುಭಿ ಮೊೞಗುವಂತೆ ಭೋರ್ಗರೆದು ಮೊೞಗೆ ಮಹಾವಿಭೂತಿಯಿಂದಂ ಜಲಕ್ರೀಡೆಯನಾಡುತ್ತಿರ್ಪುಪರಿಚರ ಮಹಾನೃಪತಿಯನಿರ್ವರುಂ ಕಂಡು ವಿಮಾನಮಂ ನಿಱಿಸಿ ನೀಡುಂ ಬೇಗಂ ನೋಡಿ ಮದನವೇಗೆಯಿಂತೆಂದಳ್ ನಾಮಾಕಾಶದೊಳ್ ಕಾಗೆಗಳಂತಿರೆ ಪಾಱುವನಿತಲ್ಲದೆ ನಮಗಿನಿತು ವಿಭವಮುಮೈಶ್ವರ್ಯಮುಂಟೆ ಶ್ರೀಯೊಳಂ ರೂಪಿನೊಳಂ ವಿಭವದೊಳಂ ನಾನಾಪ್ರಕಾರದ ವಿನೋದಂಗಳಿಂದಮುಪರಿಚರ ಮಹಾರಾಜನಿಂದಗ್ಗಳಂ ಪೆಱರಾರುಮಿಲ್ಲಮೀ ಸಂಸಾರದೊಳ್ ಬರ್ದ ಬಾೞನೀತನೆ ಬರ್ದನೆಂದು ಪೊಗೞ್ದೊಡೆ ವಜ್ರದಾಡಂ ಕೇಳ್ದು ಮನದೊಳ್ ಮುಳಿದು

ಅವನ ರಾಣಿ ಮದನವೇಗೆಯೆಂಬವಳು. ಅವರಿಬ್ಬರೂ ಒಂದು ದಿನಸ ಮನೋಹರವಾದ ಪ್ರದೇಶಗಳಲ್ಲಿ ಆಡಬೇಕೆಂದು ಭೂಮಿಯ ಸಂಚಾರಕ್ಕಾಗಿ ಆಶ್ಚರ್ಯಕರವಾಗಿರುವಂತಹ ಒಂದು ವಿಮಾನದಲ್ಲಿ ಕುಳಿತು ಆಕಾಶಮಾರ್ಗದಲ್ಲಿ ಹೋಗುತ್ತಿದ್ದರು. ಅವರಿಬ್ಬರೂ ಉಪರಿಚರನು ಜಲಕ್ರೀಡೆಯಾಡುವುದನ್ನು ಕಂಡರು. ಉಪರಿಚರನು ದೇವತೆಗಳಂತಿರುವ ಸಾಮಂತ–ಮಹಾಸಾಮಂತರಿಂದಲೂ ದೇವನರ್ತಕಿಯರನ್ನು ಹೋಲುವ ಐನೂರು ರಾಣಿಯರಿಂದಲೂ ಅಂತಃಪುರದ ಕೋಮಲೆಯರಿಂದಲೂ ಪರಿವಾರದವರಿಂದಲೂ ಇಂತಹ ದಿವ್ಯವಾದ ಸಭೆಯಿಂದ ಆವೃತನಾಗಿದ್ದನು. ಸಮರ್ಥವಾದ ಪಟಹ, ಪಣವ, ತುಣವ, ಭಂಭಾ, ಮದ್ದಳೆ, ಝಲ್ಲರಿ, ಮುಕುಂದ, ಶಂಖ, ಕೊಳಲು, ತಾಳ, ಭೇರಿ, ಮೃದಂಗ, ವೀಣೆ, ತುತ್ತೂರಿ—ಮುಂತಾದ ಹಲವಾರು ವಿಧದ ವಾದ್ಯಧ್ವನಿಗಳು ದೇವಲೋಕದ ದುಂದುಭಿ ವಾದ್ಯ ಶಬ್ದ ಮಾಡುವಂತೆ ಭೋರೆಂದು ಶಬ್ದಮಾಡುತ್ತಿರಲು ಮಹಾವೈಭವದಿಂದ ಜಲಕ್ರೀಡೆಯಾಡುತ್ತಿದ್ದನು. ಅವನನ್ನು ಕಂಡು ವಜ್ರದಾಡನೂ ಮದನವೇಗೆಯೂ ವಿಮಾನವನ್ನು ನಿಲ್ಲಿಸಿ ಬಹಳ ಹೊತ್ತು ನೋಡಿದರು. ಮದನವೇಗೆ ಹೀಗೆಂದಳು–"ನಾವು ಆಕಾಶದಲ್ಲಿ ಕಾಗೆಗಳ ಹಾಗೆ ಹಾರಾಡುವಷ್ಟಲ್ಲದೆ, ನಮಗೆ ಇವರಷ್ಟು ವೈಭವವೂ ಐಶ್ವರ್ಯವೂ ಇದೆಯೆ ? ಸಂಪತ್ತಿನಲ್ಲಿ ಸೌಂದರ್ಯದಲ್ಲಿ ವೈಭವದಲ್ಲಿ ಹಲವಾರು ರೀತಿಯ ವಿನೋದಗಳಲ್ಲಿ ಉಪರಿಚರ ಮಹಾರಾಜನಿಂದ ಶ್ರೇಷ್ಠನು ಬೇರೆ ಯಾರೂ ಇಲ್ಲ. ಈ ಸಂಸಾರದಲ್ಲಿದ್ದು ಬದುಕಲು ತಕ್ಕುದಾದ ಬಾಳನ್ನು ಬದುಕಿದವನು ಈತನೇ" ಹೀಗೆ ಅವಳು ಹೊಗಳಿದಳು. ಇದನ್ನು ವಜ್ರದಾಡನು ಕೇಳಿ, ಮನಸ್ಸಿನಲ್ಲಿ

ಪುರುಡಿಸಿ ತನ್ನ ಪೊಲಲ್ಗೆವೋಗಿ ಮದನವೇಗೆಯುನಲ್ಲಿಟ್ಟು ತಾನೊರ್ವನೆ ವಿಮಾನಮನೇಱಿ ತುರಿಪದಿಂ ಬಂದು ಜಳಕ್ರೀಡೆಯುನಾಡುತ್ತಿರ್ಪುಪರಿಚರ ಮಹಾನೃಪತಿಯ ಮೇಗೆ ವಿದ್ಯೆಯಿಂದಂ ವಿಗುರ್ವಿಸಿ ಪಿರಿದೊಂದು ಶಿಲೆಯುನೆತ್ತಿಕೊಂಡು ಬಂದು ಮಣಿಕುಟ್ಟಿಮಮಪ್ಪ ಸುದರ್ಶನಮೆಂಬ ಬಾವಿಯ ಬಾಗಿಲೆಲ್ಲಮಂ ನಿಶ್ಛಿದ್ರಮಾಗಿ ಮುಚ್ಚಿ ಕವಿದಿಕ್ಕಿ ಪೋದಂ ಪೋದೊಡೆ ಪದ್ಮಾವತಿ ಮೊದಲಾಗೊಡೆಯ ನಾಲ್ವರ್ ಮಹಾದೇವಿಯರುಂ ಮೋಹಿಸದ ಬುದ್ಧಿಯನೊಡೆಯರಧಿಗಮ ಸಮ್ಯಗ್‌ದೃಷ್ಟಿಗಳ್ ಚತುರ್ವಿಧಮಪ್ಪಾಹಾರಕ್ಕಂ ಶರೀರಕ್ಕಂ ಜಾವಜ್ಜೀವಂ ನಿವೃತ್ತಿಗೆಯ್ದು ಪಂಚನಮಸ್ಕಾರಮನುಚ್ಚಾರಿಸುತ್ತಂ ದೇವರಂ ಜಾನಿಸುತ್ತಂ ದರ್ಶನ ಜ್ಞಾನಚಾರಿತ್ರಂಗಳನಾರಾಧಿಸಿ ಮುಡಿಪಿ ಸೌಧರ್ಮಕಲ್ಪದೊಳ್ ಸ್ವಸ್ತಿಕಾವರ್ತಮೆಂಬ ವಿಮಾನದೊಳೊಂದು ಸಾಗರೋಪಮಾಯುಷ್ಯಮನೊಡೆಯರ್ ಸಾಮಾನಿಕದೇವರಾಗಿ ನಾಲ್ವರುಂ ಪುಟ್ಟಿದರ್ ಮತ್ತುಪರಿಚರನಪ್ಪರಸಂ ಮಿಥ್ಯಾದೃಷ್ಟಿಯಪ್ಪುದಱಿಂ ತನ್ನುದ್ಯಾನವನದೊಳ್ ರಾಜ್ಯವಿಭೂತಿಯೊಳಾದಮಾನುಂ ಮೋಹಿಸಿದ ಬುದ್ಧಿಯನೊಡೆಯ‌ನಾರ್ತಧ್ಯಾನದಿಂ ಸತ್ತು ತನ್ನ ಮನೋಹರೋದ್ಯಾನವನದೊಳ್ ಪೆರ್ವಾವಾಗಿ ಪುಟ್ಟಿದಂ ಮತ್ತೆರಡನೆಯ ದಿವಸದಂದು ಸಾಮಂತ ಮಹಾಸಾಮಂತ

ಕೋಪ ಮತ್ಸರಗಳನ್ನು ತಾಳಿ ತನ್ನ ಪಟ್ಟಣಕ್ಕೆ ತೆರಳಿ, ಮದನವೇಗೆಯನ್ನು ಅಲ್ಲಿ ನಿಲ್ಲಿಸಿದನು. ತಾನೊಬ್ಬನೇ ವಿಮಾನದಲ್ಲಿ ಕುಳಿತನು. ತ್ವರೆಯಾಗಿ ಬಂದು, ಜಲಕ್ರೀಡೆಯನ್ನಾಡುತ್ತಿದ್ದ ಉಪರಿಚರ ಮಹಾರಾಜನ ಮೇಲೆ, ತನ್ನ ಮಾಯಾವಿದ್ಯೆಯನ್ನು ಪ್ರಯೋಗಿಸಿದನು. ದೊಡ್ಡದೊಂದು ಬಂಡೆಕಲ್ಲನ್ನು ಎತ್ತಿಕೊಂಡು ಬಂದು ರತ್ನದ ನೆಲಗಟ್ಟುಳ್ಳ ಸುದರ್ಶನವೆಂಬ ಕೊಳದ ಬಾಗಿಲುಗಳೆಲ್ಲವನ್ನೂ ಎಲ್ಲಿಯೂ ರಂಧ್ರವುಳಿಯದ ಹಾಗೆ ಮುಚ್ಚಿ ಕವಿಯುವಂತೆ ಇಟ್ಟುಹೋದನು. ಅವನು ಹೋಗಲು, ಪದ್ಮಾವತಿ ಮೊದಲಾಗಿರುವ ನಾಲ್ಕು ಮಂದಿ ಮಹಾರಾಣಿಯರು ಯಾವ ಆಸೆಯನ್ನೂ ಮನಸ್ಸಿನಲ್ಲಿಡದೆ ಸಮ್ಯಕ್‌ದೃಷ್ಟಿಯನ್ನು ಹೊಂದಿದವರಾಗಿ ಜೀವವಿರುವಷ್ಟು ಕಾಲವೂ ಭಕ್ಷ್ಯ, ಭೋಜ್ಯ, ಚೋಷ್ಯ, ಲೇಹ್ಯ–ಎಂಬ ನಾಲ್ಕು ವಿಧದ ಆಹಾರಕ್ಕೂ ಶರೀರಕ್ಕೂ ನಿವೃತ್ತಿಯನ್ನು ಮಾಡಿ, ಐದು ವಿಧದ ನಮಸ್ಕಾರದ ಮಂತ್ರಗಳನ್ನು ಉಚ್ಚಾರಣೆ ಮಾಡುತ್ತ, ದೇವರನ್ನು ಧ್ಯಾನ ಮಾಡುತ್ತ, ಸಮ್ಯಗ್ದರ್ಶನ, ಸಮ್ಯಗ್‌ಜ್ಞಾನ, ಸಮ್ಯಕ್ ಚಾರಿತ್ರಗಳನ್ನು ಸರಿಯಾಗಿ ನಡೆಸಿ, ದೇಹತ್ಯಾಗ ಮಾಡಿದರು. ಅವರು ಸೌಧರ್ಮ ಎಂಬ ಸ್ವರ್ಗದಲ್ಲಿ ಏಳು ಉಪ್ಪರಿಗೆಗಳುಳ್ಳ ಅರಮನೆಯಲ್ಲಿ ಒಂದು ಸಾಗರಕ್ಕೆ ಸಮಾನವಾಗುವ ಆಯುಷ್ಯವುಳ್ಳವರಾದ ಸಾಮಾನಿಕ ದೇವತೆಗಳಾಗಿ ಆ ನಾಲ್ವರೂ ಹುಟ್ಟಿದರು. ಅನಂತರ ಆ ಉಪರಿಚರ ರಾಜನು ಮಿಥ್ಯಾದೃಷ್ಟಿಯುಳ್ಳವನಾದುದರಿಂದ ತನ್ನ ಉದ್ಯಾನವನದಲ್ಲಿ ಹುಟ್ಟಬೇಕಾಯಿತು. ಅವನು ರಾಜ್ಯೈಶ್ವರ್ಯದಲ್ಲಿ ಅತ್ಯಂತ ಮೋಹಗೊಂಡ ಬುದ್ಧಿಯವನಾಗಿ ಆರ್ತಧ್ಯಾನದಿಂದ ಸತ್ತು ತನ್ನ ಮನೋಹರವಾದ ಉದ್ಯಾನವನದಲ್ಲಿ ಒಂದು ಹೆಬ್ಬಾವಾಗಿ ಜನಿಸಿದನು. ಆಮೇಲೆ ಎರಡನೆಯ ದಿವಸದಂದು ಸಾಮಂತರಾಜರೂ

ರ್ಕಳುಂ ಪರಿವಾರಮುಂ ನೆರೆದು ಅನಂತವೀರ್ಯನೆಂಬ ಪಿರಿಯ ಮಗಂಗೆ ರಾಜ್ಯಪಟ್ಟಂಗಟ್ಟಿದರ್ ಮೂಱನೆಯ ದಿವಸದಂದು ಸಾರಸ್ವತರೆಂಬಾಚಾರ್ಯರವಧಿ ಜ್ಞಾನಿಗಳಯ್ನೂರ್ವರ್ ಋಷಿಯ ರ್ವೆರಸು ಗ್ರಾಮನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಆ ಪೊೞಲ್ಗೆವಂದು ಮನೋಹರವೆಂಬ ನಂದನವನದೊಳಗಣ ಸ್ಫಟಿಕಶಿಳಾತಳದ ಮೇಗಿರ್ದೋರಂ ಋಷಿನಿವೇದಕಂ ಕಂಡು ಬಂದನಂತವೀರ್ಯ ನೃಪತಿಗೆ ಪೇೞ್ದಾತನುಂ ಸಪರಿವಾರಂ ಭಟಾರ ರಲ್ಲಿಗೆ ವಂದನಾಭಕ್ತಿಗೆ ಪೋಗಿ ಬಲಗೊಂಡು ಗುರುಭಕ್ತಿಗೆಯ್ದು ವಂದಿಸಿಯುೞಿದ ರಿಸಿಯರೆಲ್ಲ ರುಮಂ ಗುರುಪರಿಪಿಡಿಯಿಂದಂ ವಂದಿಸಿ ಒರಿದು ಬೇಗಂ ಧರ್ಮಮಂ ಕೇಳ್ದು ಬೞಿಕಿಂತೆಂದು ಬೆಸಗೊಂಡಂ ಭಟಾರಾ ಎಮ್ಮ ತಂದೆಗಂ ತಾಯ್ವಿರ್ಕಳ್ಗವಾಕಸ್ಮಿಕವೊರ್ವೊದಲನಿಬರ್ಗಮೇ ಕಾರಣಂ ಸಾವಾದುದಾರ್ ಕೊಂದರೆಂದು ಬೆಸಗೊಂಡೊಡೆ ಭಟಾರರಿಂತೆಂದು ಪೇೞ್ದರ್ ಸುದರ್ಶ ನಮೆಂಬ ಬೊಡ್ಡಣ ಬಾವಿಯೊಳ್ ನಿಮ್ಮ ತಂದೆಯುಂ ನಾಲ್ವರ್ ತಾಯ್ವಿರ್ಕಳುಂ ಜಳಕ್ರೀಡೆಯ ನಾಡುತ್ತಿರ್ಪನ್ನೆಗಂ ಭೌಮವಿಹಾರಾರ್ಥಂ ವಿಮಾನಮನೇಱಿ ಪೋಗುತ್ತಿರ್ದ ವಜ್ರದಾಡನೆಂಬ ವಿದ್ಯಾಧರನುಮಾತನ ಮಹಾದೇವಿ ಮದನವೇಗೆಯೆಂಬೊಳಾಯಿರ್ವರುಂ ಕಂಡು ನಿಮ್ಮ ತಂದೆಯ

ಮಹಾಸಾಮಂತರೂ ಪರಿವಾರದವರೂ ಒಟ್ಟಾಗಿ ಉಪರಿಚರನ ಹಿರಿಯ ಮಗನಾದ ಅನಂತವೀರ್ಯನಿಗೆ ರಾಜ್ಯಪಟ್ಟವನ್ನು ಕಟ್ಟಿದರು. ಮೂರನೆಯ ದಿವಸದಂದು ಅವಧಿ ಜ್ಞಾನಿಗಳಾದ ಸಾರಸ್ವತರೆಂಬ ಆಚಾರ್ಯರು ಐನೂರು ಮಂದಿ ಋಷಿಗಳನ್ನು ಕೂಡಿ ಕೊಂಡು ಗ್ರಾಮ, ನಗರ, ಖೇಡ, ಖರ್ವಡ, ಮಡಂಬ, ಪಟ್ಟಣ, ದ್ರೋಣಾಮುಖ ಗಳೆಂಬ ಭೂಭಾಗಗಳಲ್ಲಿ ಸಂಚಾರ ಮಾಡುತ್ತ ಆ ಪಟ್ಟಣಕ್ಕೆ ಬಂದರು. ಅಲ್ಲಿ ಮನೋಹರ ಎಂಬ ಉದ್ಯಾನದೊಳಗಿರತಕ್ಕ ಚಂದ್ರಕಾಂತಶಿಲೆಯ ಮೇಲೆ ಕುಳಿತಿದ್ದರು. ಆ ವೇಳೆಗೆ, ಋಷಿಗಳ ಆಗಮನವನ್ನು ವಿಜ್ಞಾಪಿಸತಕ್ಕ ಸೇವಕನು ಕಂಡು, ಅನಂತ ವೀರ್ಯನ ಬಳಿಗೆ ಬಂದು ತಿಳಿಸಿದನು. ಅನಂತವೀರ್ಯನು ಪರಿವಾರ ಸಹಿತನಾಗಿ ಋಷಿಗಳ ಬಳಿಗೆ ವಂದನಾಭಕ್ತಿಯನ್ನು ಸಲ್ಲಿಸುವುದಕ್ಕಾಗಿ ಹೋದನು. ಅವರಿಗೆ ಪ್ರದಕ್ಷಿಣೆ ಮಾಡಿ ಗುರುಭಕ್ತಿಯಿಂದ ನಮಸ್ಕರಿಸಿ, ಇತರ ಋಷಿಗಳೆಲ್ಲರಿಗೂ ಗುರುಪರಂಪರೆಗೆ ಅನುಸಾರವಾಗಿ ನಮಸ್ಕರಿಸಿ, ಬಹಳ ಸಮಯದವರೆಗೆ ಧರ್ಮಶ್ರವಣವನ್ನು ಮಾಡಿದನಂತರ ಹೀಗೆ ಪ್ರಶ್ನಿಸಿದನು–"ಪೂಜ್ಯರೇ, ನನ್ನ ತಂದೆಗೂ ತಾಯಂದಿರಿಗೂ ಆಕಸ್ಮಾತ್ತಾಗಿ ಅವರೆಲ್ಲರಿಗೂ ಒಟ್ಟಿಗೇ ಮರಣವಾಗಲು ಕಾರಣವೇನು ? ಯಾರು ಮಾತ್ರವಲ್ಲದ, [illegible]
ಆಗ ಸಾರಸ್ವತಾಚಾರ್ಯರು ಈ ರೀತಿಯಾಗಿ ಹೇಳಿದನಾಗಿದ್ದಿ, ಈಗ ಕಪ್ಪೆಗಳು, ಏಡಿ (ನಳಿ,) ಮಂದಿ ತಾಯಿಯರೂ 'ಸುದರ್ಶನ' ಎಂಬ ಕೊಳದಲ್ಲೀವಿಗಳ ಸಮೂಹವನ್ನು ಕೊಂದು ಆಗ ಭೂಮಿಯ ಸಂಚಾರಕ್ಕಾಗಿ ವಿಮಾನವನ್ನೇರಿ ಹಕ್ಕಿ ನುಗ್ಗಲು ಇಷ್ಟಪಡುತ್ತೀಯಾ?"
ವಿದ್ಯಾಧರನೂ ಅವನ ಮಹಾರಾಣಿ ಮದನವೇಗೆಯೂ ಇ

ವಿಭವಮಂ ಮದನವೇಗೆ ಪೊಗೞ್ದೊಡೆ ವಜ್ರದಾಡಂ ಪುರುಡುಪುಟ್ಟಿ ಬಾವಿಯ ಬಾಗಿಲಂ ನಿಶ್ಛಿದ್ರ ಮಾಗಿ ಮುಚ್ಚಿ ಮೇಗೆ ಪಿರಿದೊಂದು ಶಿಲೆಯನಿಕ್ಕಿ ಪೋದೊಡೀ ಪಾಂಗಿನೊಳವರ್ಗಳನಿಬರ್ಗಂ ಮೃತ್ಯುವಾದುದೆಂದು ಪೇೞ್ದೊಡೆ ಮತ್ತಮವರೆಲ್ಲಿ ಪುಟ್ಟಿದರೆಂದು ಬೆಸಗೊಂಡೊಡೆ ಭಟಾರ ರಿಂತೆಂದರ್ ನಿಮ್ಮ ತಾಯ್ವಿರ್ಕಳ್ ವ್ರತಮಂ ಪರಿಪಾಲಿಸಿ ಸಾವ ಕಾಲದೊಳಾಹಾರಕ್ಕಂ ಶರೀರಕ್ಕಂ ಜಾವಜ್ಜೀವಂ ನಿವೃತ್ತಿಗೆಯ್ದು ಸಮಾಧಿಮರಣದಿಂದಂ ಮುಡಿಪಿ ಸೌಧರ್ಮಕಲ್ಪದೊಳ್ ಸ್ವಸ್ತಿಕಾ ವರ್ತಮೆಂಬ ವಿಮಾನದೊಳೊಂದು ಸಾಗರೋಪಮಾಯುಷ್ಯಮನೊಡೆಯರ್ ಕಾಂತನುಂ ಸುಕಾಂ ತನುಂ ನಂದನುಂ ಸುನಂದನುಮೆಂಬ ದೇವರ್ಕಳಾಗಿ ಪುಟ್ಟಿದವರ್ಗಳ್ ನಿಮ್ಮುಮಂ ನಿಮ್ಮ ತಂದೆ ಯುಮಂ ಪ್ರತಿಬೋಧಿಸಲ್ಕೀಗಳೆ ಬಂದಪ್ಪರೆಂದು ಪೇೞ್ದು ಮತ್ತೆ ನಿಮ್ಮ ತಂದೆಯುಂ ತನ್ನ ಪೆಂಡಿರ್ಮಕ್ಕಳ್ ಪರವಾರಂ ಕಸವರಮೆಂದಿವಱೊಳ್ ಮೋಹಿಸಿದ ಬುದ್ಧಿಯನೊಡೆಯನಾಗಿ ಅಲ್ಲಿಯ ನಂದನವನದೊಳಗಣ ಸರ್ಪಾಶ್ರಯಮೆಂಬ ಗುಹೆಯೊಳ್ ಮಹಾಕಾಯಂ ಪೆರ್ಬಾವಾಗಿ ಪುಟ್ಟಿದನೆಂದೊಡೆ ಧರ್ಮಮಂ ಕೈಕೊಳ್ಗುಮೊ ಕೈಕೊಳ್ಳನೊ ಎಂದು ಬೆಸಗೊಂಡೊಡೆ ಭಟಾರ ರಿಂತೆಂದರ್ ನೀನ್ ಪೇೞೆ ಧರ್ಮಮಂ ಕೈಕೊಳ್ಗುಮೆಂದೊಡೆ ತಮ್ಮೆದಿರುಂ ಪರಿವಾರಮುಂ

ತಂದೆಯ ವೈಭವವನ್ನು ಮದನವೇಗೆ ಹೊಗಳಿದಳು. ಆಗ ವಜ್ರದಾಡನಿಗೆ ಅವರ ಮೇಲೆ ಅಸೂಯೆಯುಂಟಾಯಿತು. ಅವನು ಕೋಣದ ಬಾಗಿಲನ್ನು ರಂಧ್ರವುಳಿಯದಂತೆ ಮುಚ್ಚಿ, ಅದರ ಮೇಲೆ ದೊಡ್ಡದೊಂದು ಬಂಡೆಗಲ್ಲನ್ನು ಇಟ್ಟು ಹೋದನು. ಈ ರೀತಿಯಾಗಿ ಅವರೆಲ್ಲರಿಗೂ ಮರಣವುಂಟಾಯಿತು." ಹೀಗೆ ಋಷಿಗಳು ಹೇಳಿದಾಗ ರಾಜನು "ಆ ಮೇಲೆ ಅವರೆಲ್ಲ ಎಲ್ಲಿ ಜನಿಸಿದರು ?" ಎಂದು ಕೇಳಿದನು. ಆಗ ಋಷಿಗಳು ಹೀಗೆ ಹೇಳಿದರು–"ನಿಮ್ಮ ತಾಯಂದಿರು ಸಾಯುವ ಕಾಲದಲ್ಲಿ ವ್ರತವನ್ನು ಆಚರಿಸಿದ್ದಾರೆ. ಪ್ರಾಣವಿರುವವರೆಗೂ ಆಹಾರಕ್ಕೂ ಲಕ್ಷ್ಯಕೊಡದೆ ಇದ್ದರು. ಸಮಾಧಿ ಮರಣದಿಂದ ದೇಹತ್ಯಾಗ ಮಾಡಿದ್ದಾರೆ. ಆದುದರಿಂದ ಸೌಧರ್ಮವೆಂಬ ಸ್ವರ್ಗದಲ್ಲಿ ಒಂದು ಸಾಗರದಷ್ಟು ಪರಿಮಾಣವುಳ್ಳವರಾಗಿ 'ಸ್ವಸ್ತಿಕಾವರ್ತ' ಎಂಬ ಏಳುಪ್ಪರಿಗೆಯ ಅರಮನೆಯಲ್ಲಿ ಕಾಂತ, ಸುಕಾಂತ, ನಂದ, ಸುನಂದ–ಎಂಬ ದೇವತೆಗಳಾಗಿ ಹುಟ್ಟಿದ್ದಾರೆ. ಅವರು ಈಗ ತಾನೆ ನಿಮಗೂ ನಿಮ್ಮ ತಂದೆಗೂ ಎಚ್ಚರಿಕೆ ಹೇಳುವುದಕ್ಕಾಗಿ ಬರುತ್ತಾರೆ. ಅದಲ್ಲದೆ ನಿಮ್ಮ ತಂದೆ ತನ್ನ ಹೆಂಡಿರು, ಮಕ್ಕಳು, ಪರಿವಾರ, ಚಿನ್ನ (ಸಂಪತ್ತು) ಎಂಬೀ ವಿಷಯಗಳಲ್ಲಿ ಮೋಹಗೊಂಡ ಬುದ್ಧಿಯುಳ್ಳವನಾಗಿ ಅದೇ ಸ್ಥಳದ ನಂದನೋದ್ಯಾನದಲ್ಲಿರುವ ಸರ್ಪಾಶ್ರಯವೆಂಬದ ಸೊಮ್ಮ ದೊಡ್ಡದಾದ ದೇಹವುಳ್ಳ ಹೆಬ್ಬಾವಾಗಿ ಹುಟ್ಟಿದ್ದಾನೆ"– ಆ ಉಪರಿಚರ ರಾಜನು ಮಿಥಾದರು. ಆಗ ಅನಂತವೀರ್ಯನು–"ಅವನು ಧರ್ಮವನ್ನು ಹುಟ್ಟಬೇಕಾಯಿತು. ಅವನ್ನೂ ?" ಎಂದು ಕೇಳಿದನು. "ನೀನು ಹೇಳಿದರೆ ಧರ್ಮ ಯವನಾಗಿ ಆರ್ತಧ್ಯಾನದಿಂದ ಎಂದು ಋಷಿಗಳು ಹೇಳಲು, ಅನಂತವೀರ್ಯನು ತನ್ನ ಹೆಬ್ಬಾವಾಗಿ ಜನಿಸಿದನು ನನ್ನೂ ಕೂಡಿಕೊಂಡು ಹೋಗಿ ಗುಹೆಯ ಬಾಗಿಲಲ್ಲಿ ಇದ್ದ

ಬೆರಗು ಪೋಗಿ ಗುಹೆಯ ಬಾಗಿಲೊಳಿರ್ದಿಂತೆಂದನೆಲೆಯುಪರಿಚರ ಮಹಾರಾಜಾ ಪೆರ್ವಾವಾಗಿ ಪುಟ್ಟಿಯುಮಿಂತಪ್ಪವಸ್ಥೆಯೊಳಂ ಬಾಟ್ಕೆಯೊಳಂ ಇನ್ನುಂ ನಿನಗಟ್ತಿಯೆ ನಿನಗೆ ದೋಷ ಮಿಲ್ಲೇಕೆಂದೊಡೆ ಜೀವಂಗಳ ಸ್ವಭಾವಮಿಂತುಟು

ಶ್ಲೋಕ॥ ಯತ್ರ ಯತ್ರೋಪಪದ್ಯಂತೇ ಜೀವಾಃ ಕರ್ಮವಶಾನುಗಾಃ
ತತ್ರತತ್ರ ರತಿಂ ಯಾಂತಿ ಸ್ವೇನ ಸ್ವೇನೈವ ಕರ್ಮಣಾ

ಎಂಬುದು ತಮ್ಮ ಕರ್ಮವಶದಿಂ ಸಂಸಾರಿ ಜೀವಂಗಳೆಲ್ಲಿ ಪುಟ್ಟುಗುಮಲ್ಲಿಯಲ್ಲಿಯಟ್ತಿಯುಂ ಮೆಚ್ಚುಗೆಯುಮಕ್ಕುಂ ಮುನ್ನೆ ನೀನ್ ಕರುಮಾಡದೊಳ್ ಸಿಂಹಾಸನಮಸ್ತಕಸ್ಥಿತನಾಗಿ ಸಾಮಂತ ಮಹಾಸಾಮಂತರ್ಕಳಿಂದಮಯ್ನೂರ್ವರರಸಿಯರ್ಕಳಿಂದಂ ಪೆಂಡವಾಸದಗ್ಗಳದ ಸೂಳೆ ಯರ್ಕಳಿಂದಂ ಪರಿವಾರದಿಂದಮಿಂತಪ್ಪ ದಿಬ್ಯಸಭೆಯಿಂದಂ ಪರಿವೇಷ್ಟಿತನಾಗಿ ಆಟಪಾಟ ವಿನೋ ದಂಗಳಿಂದಿರ್ಪಾತನಯ್ ಈಗಳ್ ಪೆರ್ವಾವುಗಳೊಡನೆ ನೆರೆದಿರವಾಯ್ತು ಮತ್ತೆ ದಿವ್ಯಮಪ್ಪ ಶಯ್ಯಾತಳದೊಳ್ ನಿದ್ರೆಗೆಯ್ವಾತನಯ್ ಈಗಳ್ ಪೆಟ್ಟೆಗಳುಂ ಕಿಱುಗಲ್ಗಳುಮೊತ್ತೆ ನಿದ್ರೆಗೆಯ್ವ ಯಾದಯ್ ಮತ್ತಮೃತೋಪಮಮಪ್ಪ ದಿಬ್ಯಾಹಾರಮನುಣ್ಬಾತನಯ್ ಈಗಳ್ ಕಪ್ಪೆಗಳು ಮೇಸಡುಗಳುಮಿಲಿಗಳುಮೊಂತಿಗಳುಂ ಮೊದಲಾಗೊಡೆಯ ಜೀವರಾಶಿಗಳಂ ಕೊಂದು ತಿನ್ಬೆಯಾ

ಕೊಂಡು ಹೀಗೆಂದನು—"ಎಲೈ ಉಪರಿಚರ ಮಹಾರಾಜನೇ, ಹೆಬ್ಬಾವಾಗಿ ಹುಟ್ಟಿ ಈ ರೀತಿಯ ಅವಸ್ಥೆಯಲ್ಲಿಯೂ ಜೀವನದಲ್ಲಿಯೂ ಇನ್ನೂ ನಿನಗೆ ಇಷ್ಟವೆ ? ನಿನಗೆ ಏನು ದೋಷವಿಲ್ಲ. ಏಕೆಂದರೆ ಜೀವಗಳ ಸ್ವಭಾವವೇ ಈ ರೀತಿಯದು—[ಕರ್ಮಕ್ಕೆ ವಶರಾಗಿ ಹೋಗತಕ್ಕ ಜೀವರು ಎಲ್ಲೆಲ್ಲಿ ಹುಟ್ಟುವರೋ ಅಲ್ಲಲ್ಲೇ ತಮ್ಮ ತಮ್ಮ ಕರ್ಮ ಗಳಿಂದ ಆಸಕ್ತಿಯನ್ನು ಹೊಂದುತ್ತಾರೆ. ] ತಮ್ಮ ಕರ್ಮವಶದಿಂದ ಸಂಸಾರಿಜೀವಿಗಳು ಎಲ್ಲಿ ಜನಿಸುತ್ತಾರೋ ಅಲ್ಲಲ್ಲಿ ಅವರಿಗೆ ಪ್ರೀತಿಯೂ ಮೆಚ್ಚುಗೆಯೂ ಆಗುವುದು ಹಿಂದೆ ನೀನು ಅರಮನೆಯಲ್ಲಿ ಸಿಂಹಾಸನದ ಮೇಲೆ ಕುಳಿತುಕೊಂಡು ಸಾಮಂತ ಮಹಾ ಸಾಮಂತರಿಂದಲೂ ಐನೂರು ಮಂದಿ ರಾಣಿಯರಿಂದಲೂ ಅಂತಃಪುರದ ಶ್ರೇಷ್ಠರಾದ ಸ್ತ್ರೀಯರಿಂದಲೂ ಪರಿವಾರದವರಿಂದಲೂ ಇಂತಹ ದಿವ್ಯವಾದ ಸಭೆಯಿಂದಲೂ ಆವೃತ ನಾಗಿ ಆಟ-ಪಾಟ-ವಿನೋದಗಳಿಂದ ಇರತಕ್ಕವನಾಗಿದ್ದೆ. ಈಗ ಹೆಬ್ಬಾವುಗಳೊಡನೆ ಸೇರಿಕೊಂಡಿರುವ ಸ್ಥಿತಿ ಆಗಿಹೋಯಿತು ! ಅದಲ್ಲದೆ, ದಿವ್ಯವಾಗಿರುವ ಹಾಸಿಗೆಯ ಮೇಲೆ ನಿದ್ದೆಮಾಡುವವನಾಗಿದ್ದಿ ! ಈಗ ನೀನು ಮಣ್ಣುಗಟ್ಟಿಗಳೂ ಸಣ್ಣಕಲ್ಲುಗಳೂ ದೇಹಕ್ಕೆ ಒತ್ತುತ್ತಿರುವಾಗ ನಿದ್ದೆಮಾಡುವವನಾಗಿರುತ್ತಿ ! ಮಾತ್ರವಲ್ಲದೆ, ಅಮೃತಕ್ಕೆ ಸಮಾನ ವಾದ ದಿವ್ಯವಾಗಿರುವ ಆಹಾರವನ್ನು ಉಣ್ಣುವವನಾಗಿದ್ದಿ, ಈಗ ಕಪ್ಪೆಗಳು, ಏಡಿ (ನಳಿ,) ಗಳು, ಇಲಿಗಳು, ಓತಿಗಳು-ಮುಂತಾಗಿರತಕ್ಕ ಜೀವಿಗಳ ಸಮೂಹವನ್ನು ಕೊಂದು ತಿನ್ನುವವನಾಗಿದ್ದೀಯೆ! ಇಂತಹವನ್ನೆಲ್ಲ ತಿಂದು ನರಕಕ್ಕೆ ನುಗ್ಗಲು ಇಷ್ಟಪಡುತ್ತೀಯಾ?"

ದಯ್ ಇನ್ನವಂ ತಿಂದು ನರಕಂಬುಗಲಾಟಿಸಿದಪ್ಪುಯ್ ಎಂದು ಪೇೞೆ ಜಾತಿಸ್ಮರನಾಗಿ ಗುಹೆಯ ಬಾಗಿಲೊಳ್ ಬಂದಿರ್ದು ಧರ್ಮಮಂ ಕೇಳುತ್ತಿರ್ಪನ್ನೆಗಮಾ ಸೌಧರ್ಮಕಲ್ಪದೊಳ್ ಪುಟ್ಟಿರ್ದ ನಾಲ್ವರುಂ ದೇವರ್ಕಳ್ ತಮ್ಮ ಮುನ್ನಿನ ಪೆಣ್ಣ ರೂಪಂಗಳಂ ಕೈಕೊಂಡು ಬಂದು ಮುಂದೆ ನಿಂದಾಗಳ್ ಮಕ್ಕಳ್ ತಮ್ಮ ತಾಯ್ವಿರ್ಗಳ್ಗೆ ಕ್ಷೇಮಂಗುಡಲೆಂದು ಪೋದೊಡನ್ನೆಗಂ ಅವರ್ ಮುಟ್ಟದೆ ಮೇಗಣ್ಗೆ ನೆಗೆದಿರ್ದೊಡಿದೇನೆಂದು ಬೆಸಗೊಂಡೊಡವರ್ ವಜ್ರದಾಡಂ ಕೊಲೆ ಸತ್ತು ತಮ್ಮ ದೇವಗತಿಯೊಳ್ ಪುಟ್ಟಿದ ತೆಱನೆಲ್ಲಮಂ ಪೇೞ್ದು ಉಪರಿಚರ ಮಹಾನೃಪತಿಯುಂ

ವೃತ್ತ॥ ಏತತ್ಕ್ಷೇತ್ರಂ ಮದೀಯಂ ಗೃಹಮಿದಮಪರಂ ಮಾತೃಭಾರ್ಯಾಮಮೈತಾಃ
ಪುತ್ರೋಮೇಯಂ ಸುಕಾಂತ ಸ್ವಸೃ ದುಹಿತೃಜನೋ ಮಾನುಷೋ ಬಂಧುವರ್ಗಃ
ಅಶ್ವಾದಾಸಾ ಮನುಷ್ಯಾ ಮಮ ಪರಮಹಿತಾ ದ್ರವ್ಯಗಾವೋ ಮಹಿಷ್ಯಃ
ಇತ್ಯೇವಂ ಮೇ ಬ್ರುವಾಣೋ ನರಪಶುರನಿಶಂ ನಾಶಯತ್ಯಾತ್ಮಕಾರ್ಯಂ

ಆರ್ಯೆ॥ ಅರ್ಥೋ ಮೇ ಭಾರ್ಯಾ ಮೇ ಪುತ್ರೋ ಮೇ ಸ್ವಜನಬಂಧುವರ್ಗೋ ಮೇ
ಇತಿ ಮೇ ಮೇ ಕುರ್ವಾಣಂ ಪುರುಷಂ ಪಶುಂ ಹಂತಿ ಕಾಲವೃಕಃ

ಎಂದು ಹೇಳಲು ಆ ಹೆಬ್ಬಾವಿಗೆ ಜನ್ಮದ ನೆನಪು ಬಂತು. ಅದು ಗುಹೆಯ ಬಾಗಿಲಿಗೆ ಬಂದು, ಅಲ್ಲಿದ್ದುಕೊಂಡು ಧರ್ಮವನ್ನು ಕೇಳುತ್ತಿದ್ದಿತು. ಅಷ್ಟರಲ್ಲಿ ಸೌಧರ್ಮವೆಂಬ ಸ್ವರ್ಗದಲ್ಲಿ ಹುಟ್ಟಿದ್ದ ನಾಲ್ಕು ಮಂದಿ ದೇವತೆಗಳು ತಮ್ಮ ಹಿಂದಿನ ಸ್ತ್ರೀರೂಪಗಳನ್ನು ಧರಿಸಿಕೊಂಡು ಬಂದು ಎದುರಿಗೆ ನಿಂತರು. ಆಗ ಮಕ್ಕಳು ತಮ್ಮ ತಾಯಂದಿರಿಗೆ ಕ್ಷೇಮವನ್ನು ಸಲ್ಲಿಸುವುದಕ್ಕೆಂದು ಅವರ ಸಮೀಪಕ್ಕೆ ಹೋದರು. ಆದರೆ, ಮುಟ್ಟದೆಯೆ ಆಕಾಶದ ಕಡೆಗೆ ಏರಿದರು. ಇದೇಕೆ ಹೀಗೆ ?–ಎಂದು ಕೇಳಿದಾಗ ಅವರು ವಜ್ರದಾಡನು ತಮ್ಮನ್ನು ಕೊಂದುದರಿಂದ ಸತ್ತು ತಾವೆಲ್ಲರೂ ದೇವತೆಗಳಾಗಿ ಹುಟ್ಟಿದ ವೃತ್ತಾಂತವನ್ನೆಲ್ಲ ಹೇಳಿದರು. ಆಮೇಲೆ ಉಪರಿಚರ ಮಹಾರಾಜನೊಡನೆ ಹೀಗೆಂದರು– ಈ [ನೆಲ ನನ್ನದು. ಈ ಮನೆ ಬೇರೆಯವರದಲ್ಲ (ನನ್ನದೇ). ಈ ತಾಯಿ ಹೆಂಡಿರು ನನ್ನವರು. ಈ ಮಗನು, ಈ ಸುಂದರಿಯರಾದ ಸೊಸೆಯರು, ಹೆಣ್ಣುಮಕ್ಕಳು, ಮನುಷ್ಯರು, ನಂಟರ ಸಮುದಾಯ ನನ್ನವು. ಕುದುರೆಗಳು, ಸೇವಕರು, ನನ್ನ ಅತಿಹಿತವರು. ಹಣ–ಹಸು–ಎಮ್ಮೆಗಳು ನನ್ನವು—ಹೀಗೆ ನನ್ನವೆಂದು ಹೇಳಿಕೊಳ್ಳುವ ಮನುಷ್ಯರೂಪದ ಪ್ರಾಣಿ ಯಾವಾಗಲೂ ಆತ್ಮೋನ್ನತಿಯ ಕಾರ್ಯವನ್ನು ಕೆಡಿಸಿಕೊಳ್ಳುತ್ತಾನೆ.] ಐಶ್ವರ್ಯವು ನನಗೆ, ಹೆಂಡತಿ ನನಗೆ, ಮಗನೂ ನನಗೆ. ಸ್ವಜನರು ಬಂಧುವರ್ಗದವರು ನನಗೆ. ಈ ರೀತಿಯಾಗಿ ನನಗೆ ನನಗೆ (ಮೇ ಮೇ) ಎಂದು ಮಾಡಿಕೊಳ್ಳತಕ್ಕ ನರಜಂತುವನ್ನು (ಮನುಷ್ಯನೆಂಬ ಆಡನ್ನು) ಯಮನೆಂಬ ತೋಳನು ಕೊಲ್ಲುತ್ತದೆ.] ಹೀಗೆಂದು

ಎಂದಿವರರ್ಥಮನಿಂತೆಂದು ಪೇೞ್ದಪ್ಪುದೆ ಎನ್ನ ಮಾಡಮೆನ್ನ ಪೊೞಲೆನ್ನ ನಾಡೆನ್ನ ತಾಯೆನ್ನ ಪೆಂಡಿರೆನ್ನ ಮಕ್ಕಳೆನ್ನ ತಂಗೆವಿರೆನ್ನ ಮಾಮಂದಿರೆನ್ನ ಬಂಧುವರ್ಗಮೆನ್ನಾನೆಗಳೆನ್ನ ಕುದುರೆಗಳೆನ್ನೆಮ್ಮೆಗಳೆನ್ನ ಪಶುಗಳೆನ್ನ ಪರಿವಾರಮೆನ್ನ ತೊೞ್ತಿರೆನ್ನ ಮಾಣಿಕ ಭಂಡಾರಂ ಸುವರ್ಣ ಭಂಡಾರಂ ಪಟ್ಟಿಸಭಂಡಾರಮೆಂದಿವಱೊಳ್ ಮೋಹಿಸಿದ ಬುದ್ಧಿಯನೊಡೆಯನಾಗಿಯಾರ್ತ ಧ್ಯಾನದಿಂ ಸತ್ತು ಪೆರ್ವಾವಾಗಿ ಪುಟ್ಟಿರ್ದೊಡೀಗಳಾಮುಂ ಪೆಂಡಿರಾಗಿಯುಮಿನಿವಿರಿದು ಶ್ರೀಯುಂ ವಿಭವಮುಮನೆಯ್ದುದೆವೆಂದು ಪೇೞ್ದುಂ ತಮ್ಮ ದೇವತ್ವಮಂ ತೋಱಲ್ವೇಡಿ ಆಕಾಶಮೆಲ್ಲಂ ಚಿತ್ರಪಟಂಗದಱಿದಂತೆ ವಿಮಾನಂಗಳಿಂ ಸಂಛನ್ನಮಾಗಿ ವ್ಯಾಪಿಸೆ ಪರಿವಾರ ದೇವಿಯರ್ಕಳಿಂದಂ ದೇವರ್ಕಳಿಂದಂ ಗಣಿಕೆಯರ್ಕಳಿಂದಮಪ್ಸರೆಯರ್ಕಳಿಂದಂ ಪರಿವೇಷ್ಟಿತರಾಗಿ ನಾಲ್ವರುಂ ದೇವರ್ಕಳ್ ಘಂಟಾಜಾಳ ಮುಕ್ತಾಜಾಳ ಸಮನ್ವಿತಮಪ್ಪ ರತ್ನಮಯಮಾಗುತ್ತಿರ್ದ ವಿಚಿತ್ರಮಪ್ಪ ವಿಮಾನಂಗಳನೇಱಿ ದೇವಿಯರ್ಕಳ್ ಚಾಮರಮಿಕ್ಕೆಯಾಟಪಾಟ ವಿನೋದಂಗಳಿಂದಿಂತು ತಮ್ಮೈಶ್ವರ್ಯಮೆಲ್ಲಮಂ ತೋಱಿ ಇಂತೆಂದರ್ ಇದೆಲ್ಲಮೆಮಗೆ ಜಿನಧರ್ಮದ ಪರಮ ಸತ್ವದ ಪ್ರಸಾದದಿನಾದುದು ಮತ್ತುಪರಿಚರ ಮಹಾರಾಜಂ ಪುರುಷನಾಗಿಯುಂ ಮಹಾಸತ್ವಮನೊಡೆಯನಾಗಿಯುಂ ಮಿಥ್ಯಾತ್ವಂ ಕಾರಣಮಾಗಿಯಾರ್ತಧ್ಯಾನದಿಂ ಸತ್ತು ಪೆರ್ವಾವಾಗಿ

ಈ ಪದ್ಯಗಳ ಅರ್ಥವನ್ನು ಹೇಳಿದನು–"ನನ್ನ ಮನೆ, ನನ್ನ ಪಟ್ಟಣ, ನನ್ನ ನಾಡು, ನನ್ನ ತಾಯಿ, ನನ್ನ ಹೆಂಡತಿ, ನನ್ನ ಮಕ್ಕಳು, ನನ್ನ ತಂಗಿಯರು, ನನ್ನ ಮಾವಂದಿರು, ಬಂಧುವರ್ಗ, ಆನೆಗಳು, ಕುದುರೆಗಳು, ನನ್ನ ಎಮ್ಮೆಗಳು ಹಸುಗಳು, ನನ್ನ ಪರಿವಾರ, ನನ್ನ ಸೇವಕರು, ನನ್ನ ಮಾಣಿಕ್ಯಭಂಡಾರ, ಹೊನ್ನ ಭಂಡಾರ, ರೇಷ್ಮೆವಸ್ತ್ರಭಂಡಾರ–ಎಂದು ಇವುಗಳಲ್ಲಿ ಮೋಹಗೊಂಡ ಬುದ್ಧಿಯುಳ್ಳವನಾಗಿ ಆರ್ತ ಧ್ಯಾನದಿಂದ ಸತ್ತು ಹೆಬ್ಬಾವಾಗಿ ನೀನು ಹುಟ್ಟಿರುವಿ. ನಾವು ಹೆಂಡಿರಾಗಿಯೂ ಇಷ್ಟೊಂದು ಹೆಚ್ಚಿನ ಐಶ್ವರ್ಯ ವೈಭವವನ್ನು ಹೊಂದಿದೆವು" ಎಂದು ಹೇಳಿ, ತಮ್ಮ ದೇವತ್ವವನ್ನು ಪ್ರದರ್ಶಿಸಬೇಕೆಂಬ ಉದ್ದೇಶದಿಂದ ಆಕಾಶವನ್ನೆಲ್ಲ ಚಿತ್ರಪಟಗಳನ್ನು ಕೆದರಿದಂತೆ ವಿಮಾನಗಳಿಂದ ಮುಚ್ಚಿ ಆವರಿಸಿದರು. ಪರಿವಾರ ದೇವಿಯರಿಂದಲೂ ದೇವತೆಗಳಿಂದಲೂ ವೇಶ್ಯೆಯರಿಂದಲೂ ದೇವತಾಸ್ತ್ರೀಯರಿಂದಲೂ ಆವೃತರಾಗಿ ಆ ನಾಲ್ಕು ಮಂದಿ ದೇವತೆಗಳು ಗಂಟೆಗಳ ಮತ್ತು ಮುತ್ತುಗಳ ಸಮೂಹದಿಂದ ಕೂಡಿ ರತ್ನಮಯವಾಗಿದ್ದ ಆಶ್ಚರ್ಯಕರವಾದ ವಿಮಾನಗಳನ್ನೇರಿದರು. ದೇವಿಯರು ಚಾಮರವನ್ನು ಬೀಸುತ್ತಿರಲು ಆಟ ಪಾಟ ವಿನೋದಗಳಿಂದ ತಮ್ಮ ಐಶ್ವರ್ಯವನ್ನೆಲ್ಲ ತೋರಿಸಿ ಹೀಗೆಂದರು–"ನಮಗೆ ಇವೆಲ್ಲವೂ ಜೈನಧರ್ಮದ ಪರಮಸತ್ವದ ಅನುಗ್ರಹದಿಂದ ಆಗಿವೆ. ಉಪರಿಚರ ಮಹಾರಾಜನು ಗಂಡುಸಾಗಿಯೂ ಮಹಾ ಸತ್ವವುಳ್ಳವನಾಗಿಯೂ ಮಿಥ್ಯಾತ್ವದಿಂದ ಆರ್ತಧ್ಯಾನದಿಂದ ಸತ್ತು ಹೆಬ್ಬಾವಾಗಿ ಹುಟ್ಟಿದನು". ಹೀಗೆ ಹೇಳಿ, ಮಕ್ಕಳನ್ನೂ ಹೆಬ್ಬಾವನ್ನೂ ಬೋಧನೆ

ಪುಟ್ಟಿದನೆಂದು ಪೇೞ್ದು ಮಕ್ಕಳಂ ಪೆರ್ವಾವುಮಂ ಪ್ರತಿಬೋಧಿಸಿ ತಮ್ಮ ಸ್ವರ್ಗಲೋಕಕ್ಕೆ ಪೋದರ್ ಮತ್ತೆ ಪೆರ್ವಾವೆನ್ನರಸಿಯರ್ಕಳ್ ದೇವರಾಗಿ ಪುಟ್ಟಿದರೆಂದಾದಮಾನುಂ ಸಂತೋಷಂಬಟ್ಟು ಪರಿಣಾಮದೊಳ್ ಕೂಡಿರ್ದುದಂ ಸಾರಸ್ವತ ಭಟಾರರಱಿದು ಋಷಿಸಮುದಾಯಂ ಬೆರಸು ಪೆರ್ವಾವಿರ್ದೆಡೆಗೆ ಪೋಗಿ ಇಂತೆಂದು ಧರ್ಮಮಂ ಪೇೞ್ದಪರ್

ಗಾಹೆ॥ ಸೋ ಧಮ್ಮೋ ಜತ್ಥ ದಯಾ ಸೋವಿ ತಓ ವಿಸಯಣಿಗ್ಗಹೋ ಜತ್ಥ
ದಸ ಅಟ್ಠದೋಸರಹಿಓ ಸೋ ದೇವೋ ಣತ್ಥಿ ಸಂದೇಹೋ

ಮತ್ತಂ

ವೃತ್ತ॥ ಯತ್ನೇನ ಪಾಪಾನಿ ಸಮಾಚರಂತಿ
ಧರ್ಮಂ ಪ್ರಸಂಗಾದಪಿ ನಾಚರಂತಿ
ಆಶ್ಚರ್ಯಮೇತದ್ಧಿ ಮನುಷ್ಯಲೋಕೇ
ಕ್ಷೀರಂ ಪರಿತ್ಯಜ್ಯ ವಿಷಂ ಪಿಬಂತಿ

ಸಮಾಗಮಾಃ ಸ್ವಾಪಸಮಾಹಿ ಸರ್ವೇ
ವಿಭೂತಯೋಽಪಿ ಪ್ರತಿಭಂಗುರಾಃ ಸ್ಯುಃ
ಧರ್ಮೋಽರ್ಹತಾಮೇವ ಸುಶಾಶ್ವತೋಽಯ
ಮಿತಿ ಪ್ರದಂತ್ಯಾತ್ಮರತಿರ್ಬಭೂವ

ಮಾಡಿ ತಮ್ಮ ಸ್ವರ್ಗಲೋಕಕ್ಕೆ ಹೋದನು. ಅನಂತರ, ಆ ಹೆಬ್ಬಾವು ತನ್ನ ಹೆಂಡಿರು ದೇವತೆಗಳಾಗಿ ಹುಟ್ಟಿದರೆಂದು ಅತ್ಯಂತ ಸಂತೋಷಪಟ್ಟು ಧರ್ಮದ ಪರಿಣಾಮವನ್ನು ಹೊಂದಿದೆಯೆಂಬುದನ್ನು ಸಾರಸ್ವತ ಋಷಿಗಳು ತಿಳಿದು ಋಷಿಗಳ ಸಮೂಹವನ್ನು ಕೂಡಿಕೊಂಡು ಆ ಹೆಬ್ಬಾವಿದ್ದಲ್ಲಿಗೆ ಹೋಗಿ, ಈ ರೀತಿಯಾಗಿ ಧರ್ಮೋಪದೇಶವನ್ನು ಮಾಡಿದರು– ಎಲ್ಲಿ ದಯೆ ಇದೆಯೋ ಅದು ಧರ್ಮವು ಮತ್ತು ಎಲ್ಲಿ ಇಂದ್ರಿಯ ನಿಗ್ರಹವಿದೆಯೋ ಅದು ಕೂಡ ಧರ್ಮವು. ಹದಿನೆಂಟು ದೋಷಗಳಿಲ್ಲದವನೇ ದೇವನು. ಇದರಲ್ಲಿ ಸಂದೇಹವಿಲ್ಲ. ಅದಲ್ಲದೆ, ಪ್ರಯತ್ನದಿಂದ ಪಾಪಗಳನ್ನು ಮಾಡುತ್ತಾರೆ. ಸಂದರ್ಭವಶದಿಂದಾದರೂ ಧರ್ಮವನ್ನು ಮಾಡುವುದಿಲ್ಲ. ಇದು ಮಾನವಲೋಕದಲ್ಲಿ ಆಶ್ಚರ್ಯವಲ್ಲವೆ? ಹಾಲನ್ನು ಬಿಟ್ಟು, ವಿಷವನ್ನು ಕುಡಿಯುತ್ತಾರೆ. ಎಲ್ಲಾ ಒಡನಾಟಗಳು ತನ್ನ ವಶದಲ್ಲಿ ಇಲ್ಲವಷ್ಟೆ? ಐಶ್ವರ್ಯಗಳು ಕೂಡ ಅಲ್ಪಕಾಲದಲ್ಲಿಯೇ ನಾಶವಾಗುವವಲ್ಲವೆ? ಅರ್ಹಂತರು ಉಪದೇಶಿಸಿರುವ ಈ ಜಿನಧರ್ಮವೇ ಅತ್ಯಂತ ಶಾಶ್ವತವಾದುದು–ಹೀಗೆಂದು ವಿಶೇಷವಾಗಿ ಚಿಂತಿಸಿಕೊಂಡರೆ ಆತ್ಮನಲ್ಲಿ ಆಸಕ್ತಿ ಹುಟ್ಟೀತು.

ನಿಶ್ಚಯಮುದಿತಸ್ಯ ರವೇಃ
ಪತನಂ ಜಾತಸ್ಯ ಮರಣಮಪಿ ಸರ್ವಸ್ಯ
ತಸ್ಮಾದ್ವಿದುಷಾ ಭಾವ್ಯಂ
ಸದೈವ ಜಾತೇನ ಧರ್ಮಕರ್ಮರತೇನ

ಪುಷ್ಪ ಫಲಭಾರ ತರುವದ್ಯೌವನ ಬಲವಿಭವರೂಪ ಸೌಭಾಗ್ಯಾನಿ
ಗಿರಿಸರಿದಂಭಃ ಪ್ರತಿಮಂ ಸರ್ವೇಷಾಂ ಜೀವಿತಂ ಚ ಧಾವತಿ ಶೀಘ್ರಮ್

ಗಾಹೆ॥ ಏಗೋ ಯ ಮರದಿ ಜೀವೋ ಏಗೋ ಯ ದಿವಂ ಉವವಜ್ಜ ಇ
ಏಗೋ ಸ ಜಾ ಇ ಮರಣಂ ಏಗೋ ಸಜ್ಝಾ ಇ ಣಿರಯಂ ವಾ

ಶ್ಲೋಕ॥ ಕಸ್ಯ ಮಾತಾ ಪಿತಾ ಕಸ್ಯ ಕಸ್ಯ ಭಾರ್ಯಾ ಸುತೋಽಪಿ ವಾ
ಜಾತೌ ಜಾತೌ ಹಿ ಜೀವಾನಾಂ ಭವಿಷ್ಯಂತಿ ಪರೇ ಪರೇ

ಅರ್ಥಾ ಗೃಹೇಷು ತಿಷ್ಠಂತಿ ಶ್ಮಶಾನೇಷು ಚ ಬಾಂಧವಾಃ
ಶರೀರ ಜ್ವಾಲಾಮಾಲಾಯಾಂ ಸುಕೃತಂ ದುಷ್ಕೃತಂ ವ್ರಜೇತ್

ಎಂದಿಂತು ಪಿರಿದು ಬೇಗಂ ಧರ್ಮಮಂ ಪೇೞ್ದು ಶ್ರಾವಕಬ್ರತಂಗಳನೇಱಿಸಿ ಮತ್ತಮಿಂತೆಂದರ್ ನಿನಗಾಯುಷ್ಯಂ ಪದಿನಯ್ದು ದಿವಸಮೆಂದು ಪೇೞ್ದೊಡಾ ಮಾತಂ ಕೇಳ್ದು ಆಹಾರ

ಉದಯಿಸಿದ ಸೂರ್ಯನು ಮುಳುಗುವುದು ನಿಶ್ಚಯ. ಹುಟ್ಟಿಬಂದಿರುವ ಎಲ್ಲಕ್ಕೂ ಸಾವು ಕೂಡ ನಿಶ್ಚಯ. ಆದುದರಿಂದ ಹುಟ್ಟಿಬಂದವನೂ ಧರ್ಮಕರ್ಮದಲ್ಲಿ ಆಸಕ್ತಿಯುಳ್ಳವನೂ ಆದ ವಿದ್ವಾಂಸನು ಇದನ್ನು ಭಾವಿಸಬೇಕಾದುದು ಅವಶ್ಯವಾಗಿದೆ. ಯೌವನ, ಶಕ್ತಿ, ವೈಭವ, ರೂಪ, ಸೌಭಾಗ್ಯಗಳು ಹೂ ಹಣ್ಣುಗಳ ಭಾರವುಳ್ಳ ಮರದಂತೆ. ಎಲ್ಲರ ಬದುಕೂ ಬೆಟ್ಟದ ಝರಿಯ ನೀರಿನಂತೆ ಬೇಗ ಓಡುತ್ತದೆ. ಜೀವನು ಒಬ್ಬನಾಗಿಯೇ ಸಾಯುತ್ತಾನೆ. ಒಬ್ಬನೇ ಹುಟ್ಟುತ್ತಾನೆ. ಒಬ್ಬನದೇ ಮರಣ ಸಮೀಪಿಸಿ ಬರುತ್ತದೆ. ನರಕಕ್ಕೆ ಕೂಡ ಒಬ್ಬನೇ ಹೋಗುತ್ತಾನೆ. ಜೀವಿಗಳ ಜನ್ಮ ಜನ್ಮಗಳಲ್ಲಿ ಬೇರೆ ಬೇರೆಯಾದವರು ಯಾರ ತಾಯಿಯೋ ಯಾರ ತಂದೆಯೋ ಯಾರ ಹೆಂಡತಿಯೋ ಮತ್ತೆ ಯಾರ ಮಗನೋ ಆಗುವರಲ್ಲವೆ? ದ್ರವ್ಯಗಳು ಮನೆಗಳಲ್ಲಿ ನಿಲ್ಲುತ್ತವೆ. ಬಂಧುಗಳು ಮಸಣದವರೆಗೆ ಬಂದು ನಿಲ್ಲುತ್ತಾರೆ. ದೇಹವು ಬೆಂಕಿಯ ಮಾಲೆಯಲ್ಲಿ ನಿಲ್ಲುತ್ತದೆ. ಪುಣ್ಯವೂ ಪಾಪವೂ ಮಾತ್ರ ಜೊತೆಯಲ್ಲಿ ಬರುತ್ತವೆ. ಈ ರೀತಿಯಾಗಿ ಬಹಳ ಬೇಗನೆ ಸಾರಸ್ವತ ಋಷಿಗಳು ಧರ್ಮೋಪದೇಶ ಮಾಡಿ, ಶ್ರಾವಕಗಳನ್ನು ಸ್ವೀಕಾರಮಾಡಿಸಿ–"ನಿನಗೆ ಹದಿನೈದು ದಿನಗಳ ಆಯುಷ್ಯವಿದೆ" ಎಂದರು. ಆ ಮಾತನ್ನು ಕೇಳಿ ಹೆಬ್ಬಾವು ತಾನು ಜೀವಿಸಿರುವವರೆಗೂ ಆಹಾರವನ್ನು

ಶರೀರಕ್ಕಂ ಜಾವಜ್ಜೀವಂ ನಿವೃತ್ತಿಗೆಯ್ದು ಸಂನ್ಯಸನಂಗೆಯ್ದಿರ್ದೊಡದಂ ಭಟಾರರಱಿದನಂತ
ವೀರ್ಯಂಗೆ ಪೇೞ್ದರಿದು ಸಂನ್ಯಸನಂ ಗೆಯ್ದಿರ್ದುದಿದರ್ಕೆ ಪೂಜೆಯಂ ಮಾಡಿಮೆನೆ ಆತನುಂ
ಪಿರಿಯ ಪಂದರಂ ಮಾಡಿಸಿಯಲ್ಲಿ ನಾನಾಪ್ರಕಾರದ ನೇತ್ರ ಪಟ್ಟಿಯುಲ್ಲವಂಗಳುಮಂ ಧ್ವಜಂ
ಗಳುಮಂ ಕಟ್ಟಿಸಿ ದೇವತಾಪ್ರತಿಮೆಯಂ ನಿಱಿಸಿಯಭಿಷೇಕಂ ಗೆಯ್ಯುತ್ತಂ ಮೂಱು ಪೊೞ್ತುಂ
ಮಹಾಮಹಿಮೆಯುಂ ಪೂಜೆಗಳುಮಂ ಪೊಡೆವಡಿಸುತ್ತಿರೆ ಭಟಾರರುಮಾರಾಧನೆಯನರ್ಚಿಸಿ
ಸ್ವಾಧ್ಯಾಯಂಗೊಂಡಿಂತೆಂದಾರಾಧನೆಯಂ ವಕ್ಕಾಣಿಸಲ್ ತಗುಳ್ದರ್

ಶ್ಲೋಕ॥ ಸಂನ್ಯಸನೇಸ್ಮಿ [ಮತಿರ್ಯೋ ?] ಪ್ರಾಣೈಃ ಕಂಠಗತೈರಪಿ
ಸ ಗಚ್ಛೇನ್ಮೋಕ್ಷಸದನಂ ಪುನರಾಗಮ ವರ್ಜಿತಮ್

ಇಹ ಜನ್ಮಕೃತಂ ಪಾಪಂ ಯಚ್ಚ ಪಾಪಂ ಪುರಾಕೃತಂ
ಸಂನ್ಯಸನೇನ ತತ್ಸರ್ವಂ ದಹತ್ಯಗ್ನಿರಿವೇಂಧನಂ

ಅಜ್ಞಾನಾಭಾವಾತ್ ಕೃತ ಕರ್ಮಭಾರಃ
ಸಂನ್ಯಾಸನಾತ್ ಸತ್‌ಪ್ರಲಯಂ ಪ್ರಯಾತಿ
ಮುಹೂರ್ತ ಕಾಲೇ ಹೃದಯೇ ಲಲಾಟೇ
ಜೀವಂ ಕರಂ ನ್ಯಸ್ಯ ಸಮಸ್ಥಿತಸ್ಯ

ಬಿಟ್ಟು ಸಂನ್ಯಾಸವನ್ನು ಕೈಗೊಂಡಿತು. ಇದನ್ನು ಋಷಿಗಳು ತಿಳಿದು ಅನಂತವೀರ್ಯ
ನೊಡನೆ—"ಇದು ಸಂನ್ಯಾಸವನ್ನು ಮಾಡಿಕೊಂಡಿದೆ. ಇದಕ್ಕೆ ನೀವು ಪೂಜೆಮಾಡಿ"
ಎಂದು ಹೇಳಿದರು. ಅದರಂತೆ ಅನಂತವೀರ್ಯನು ದೊಡ್ಡದೊಂದು ಚಪ್ಪರವನ್ನು
ಮಾಡಿಸಿದನು. ಅಲ್ಲಿ ಹಲವಾರು ವಿಧವಾದ ನೇತ್ರವೆಂಬ ಹೆಸರುಳ್ಳ ರೇಷ್ಮೆವಸ್ತ್ರದ
ಮೇಲ್ಕಟ್ಟುಗಳನ್ನೂ ಪತಾಕೆಗಳನ್ನೂ ಕಟ್ಟಿಸಿದನು. ಅಲ್ಲಿ ದೇವತಾ ಪ್ರತಿಮೆಯನ್ನು
ಇಟ್ಟು ಅಭಿಷೇಕವನ್ನು ಮಾಡುತ್ತ ಮೂರು ಹೊತ್ತೂ ಮಹಾಮಹಿಮೆಯನ್ನೂ ಪೂಜೆ
ಗಳನ್ನೂ ನಡೆಸುತ್ತ ನಮಸ್ಕಾರಗಳನ್ನು ಮಾಡಿಸುತ್ತ ಇರಲು, ಋಷಿಗಳು ಆರಾಧನಾ
ಎಂಬ ಗ್ರಂಥವನ್ನು ಪೂಜೆಮಾಡಿ ವ್ಯಾಖ್ಯಾನವನ್ನು ಮಾಡತೊಡಗಿದರು—ಪ್ರಾಣವು
ಗಂಟಲಿಗೆ ಬಂದಾಗ ಕೂಡ ಯಾವನು ಸಂನ್ಯಾಸದಲ್ಲಿ ಮನಸ್ಸುಳ್ಳವನಾಗಿರುವನೋ
ಅವನು ಹಿಂದಿರುಗಿ ಬರುವುದೆಂಬುದು ಇಲ್ಲದ ಮೋಕ್ಷವೆಂಬ ಮನೆಗೆ ಹೋಗುತ್ತಾನೆ
ಈ ಜನ್ಮದಲ್ಲಿ ಮಾಡಿದ ಪಾಪವು, ಹಿಂದೆ ಮಾಡಿದ ಪಾಪವು ಯಾವುದೋ
ಅದೆಲ್ಲ ಅಗ್ನಿಯಿಂದ ಸೌದೆ ಹೇಗೋ ಹಾಗೆ, ಸಂನ್ಯಾಸದಿಂದ ಸುಟ್ಟುಹೋಗುತ್ತದೆ.
ಹೃದಯದಲ್ಲಿಯೂ ಹಣೆಯಲ್ಲಿಯೂ (ಹುಬ್ಬುಗಳ ನಡುವೆಯೂ), ಆತ್ಮವನ್ನೂ
ಕೈಯನ್ನೂ ಒಂದು ಮುಹೂರ್ತಕಾಲವಾದರೂ ಇಟ್ಟುಕೊಂಡು ಸಮತ್ವದಿಂದ ನಿಂತಿರು
ವವನ ಅಜ್ಞಾನತೆಯಿಂದಾಗಿ ಮಾಡಲ್ಪಟ್ಟ ಪುಣ್ಯಪಾಪರೂಪವಾದ ಕರ್ಮಗಳ ಭಾರವು

ಗಾಹೆ॥ ಉಡ್ಢಮಹೇ ತಿರಿಯಮ್ಮಿಯ ಮದಾಣಿ ಯಕಾಮಗಾಣಿ ಮರಣಾಣಿ
ದಂಸಣ ಣಾಣ ಸಮಗ್ಗೋ ಪಂಡಿಯ ಮರಣಂ ಅಣುಮಲಿಸ್ಸಂ

ಉವ್ವೆಯ ಮರಣಂ ಜಾ ಈ ಮರಣಂ ಣಿರಯೇ ಸುವೇದಣಾ ಓ ಯ
ಏದಾಣಿ ಸಂಚರಂತೋ ಪಂಡಿಯ ಮರಣಂ ಅಣುಮಲಿಸ್ಸಂ

ಎಕ್ಕಂ ಪಂಡಿಯ ಮರಣಂ ಛಿಂದ ಇ ಜಾಈಸದಾಣಿ ಬಹುಗಾಣಿ
ತಂ ಮರಣಂ ಮರಿದವ್ವಂ ಜೇಣ ಮದಂ ಸುಮ್ಮದಂ ಹೋ ಇ

ಜ ಇ ಉಪ್ಪಜ್ಜ ಇ ದುಕ್ಖಂ ತೋ ದಟ್ಠವ್ವೋ ಸಭಾವದೋ ಣಿರಯೇ
ಕದಮಂ ಮಏ ಣ ಪತ್ತಂ ಸಂಸಾರೇ ಸಂಸರಂತೇಣ

ಸಂಸಾರಚಕ್ಕವಾಳಮ್ಮಿ ಮ ಏ ಸವ್ವೇ ಪೊಗ್ಗಳಾ ಬಹುಸೋ
ಅಹಾರಿದಾ ಯ ಪರಿಣಾಮಿದಾಯ ಣ ಚ ಮೇ ಗದಾ ತಿತ್ತೀ

ಆಹಾರಣಿಮಿತ್ತಂ ಕಿರ ಮಚ್ಛಾ ಗಚ್ಛಂತಿ ಸತ್ತಮಂ ಪುಥವಿಂ
ಸಚ್ಚಿತ್ತೋ ಆಹಾರೋ ಣಖಮದಿ ಮಣಸಾ ಏ ಪತ್ಥೇದುಂ

ಸಂನ್ಯಾಸದಿಂದ ಒಳ್ಳೆಯ ವಿನಾಶವನ್ನು ಹೊಂದುತ್ತದೆ ಊರ್ಧ್ವಲೋಕ (ಸ್ವರ್ಗ) ದಲ್ಲಿ, ಕೆಳಗಿನ ಲೋಕಗಳಾದ ನರಕಭವನ ವ್ಯಂತರ ಜ್ಯೋತಿಷ್ಕಲೋಕಗಳಲ್ಲಿ ಏಕೇಂದ್ರಿಯಾದಿ ಜೀವಜಾತಿಗಳಲ್ಲಿ ಅನೇಕ ಬಾಲಮರಣಗಳನ್ನು ಪಡೆದಿದ್ದೇನೆ ಇನ್ನುಮೇಲೆ ಸಮ್ಯಗ್ದರ್ಶನ ಜ್ಞಾನಗಳಿಂದ ಕೂಡಿದ ಪಂಡಿತ ಮರಣವನ್ನು ಪಡೆಯುತ್ತೇನೆ. ಉದ್ವೇಗಯುಕ್ತ ಮರಣ, ಜಾತಿಮರಣ (ಹುಟ್ಟುವಾಗಲೇ ಸಾಯುವುದು), ನರಕಗಳಲ್ಲಿ ನೋವು ಹಿಂಸೆಗಳು, ಇವನ್ನು ಚೆನ್ನಾಗಿ ಸ್ಮರಿಸಿಕೊಳ್ಳುತ್ತ ನಾನು ಪಂಡಿತಮರಣವನ್ನು ಸಾಯುತ್ತೇನೆ ಒಂದು ಪಂಡಿತಮರಣವು ನೂರು ಜನ್ಮಗಳನ್ನೂ ಅನೇಕವಾದವುಗಳನ್ನು ನಾಶಗೊಳಿಸುತ್ತದೆ. ಯಾವುದರಿಂದ ಸಾವು ಒಳ್ಳೆಯ ಮರಣವಾಗುತ್ತದೋ ಆ ಮರಣವೇ ಪಡೆಯಬೇಕಾದ ಮರಣ. ಸಂನ್ಯಾಸ ಕಾಲದಲ್ಲಿ ಉತ್ಪನ್ನವಾಗುವ ಹಸಿವು ಮುಂತಾದ ಹಿಂಸೆಗಳು ನರಕದುಃಖದ ಸ್ವರೂಪವನ್ನು ತೋರಿಸುತ್ತವೆ. ಹೀಗಿರುವಾಗ ಸಂಸಾರದಲ್ಲಿ ಸುತ್ತುತ್ತಿರುವ ನನಗೆ ದುಃಖ ಬಾರದಿರುವುದೆ ?—ಎಂದು ಚಿಂತಿಸಬೇಕು. ಸಂಸಾರವೆಂಬ ಚಕ್ರದಲ್ಲಿ ಸುತ್ತುತ್ತಿರುವ ನಾನು ಎಷ್ಟೋ ಬಾರಿ ಅನೇಕ ರೀತಿಯ ಪುದ್ಗಲಗಳನ್ನು (ಮೊಸರು, ಸಕ್ಕರೆ, ಬೆಲ್ಲ ಮುಂತಾದ ಭೋಗ್ಯವಸ್ತುಗಳನ್ನು) ತಿಂದು ಜೀರ್ಣಿಸಿದ್ದೇನೆ. ಆದರೂ ತೃಪ್ತಿಯಾಗಲಿಲ್ಲ—ಎಂದು ಚಿಂತಿಸತಕ್ಕುದು. ಮೀನುಗಳು ಆಹಾರಕ್ಕಾಗಿ ಏಳನೆಯ ಪೃಥ್ವಿ (ಅವಧಿಸ್ಥಾನ)ಯನ್ನು ಪ್ರವೇಶಿಸುತ್ತವಲ್ಲವೆ ? ಚೇತನದಿಂದ ಕೂಡಿದ (ಪ್ರಾಣಿ ಹಿಂಸೆಯಿಂದ ಬಂದ) ಅಯೋಗ್ಯ ಆಹಾರವು ಮನಸ್ಸಿನಲ್ಲಿಯೂ ಬಯಸಲು ಯೋಗ್ಯವೆನಿಸುವುದಿಲ್ಲ. ಹುಲ್ಲು

ತಣಕಟ್ಠೇಣ ವ ಅಗ್ಗೀ ಲವಣ ಸಮುದ್ದೋ ಣದೀ ಸಹಸ್ಸೇಹಿಂ
ಣ ಇವೋ ಜೀವೋ ಸಕ್ಕೋ ತಪ್ಪೇದುಂ ಕಾಮಭೋಗೇಹಿಂ

ಜಹ ಜಹ ಭುಂಜ ಇ ಭೋಗೇ ತಹತಹ ಭೋಗೇಸು ವಡ್ಢದೇ ತಣ್ಹಾ
ಅಗ್ಗೀವ ಇಂಧಣಾಇಂ ತಣಂ ದ್ದೀವಂತಿ ಸೇ ಭೋಗಾ

ವೃತ್ತ॥ ಸ ಲವಣರಸಮಂಭೋ ಭುಜ್ಯಮಾನಂ ತೃಷಾರ್ತೈ
ರಧಿಕತರ ತೃಷಾರ್ತಾನ್ ದುಃಖಿತಾನೇನ ಕುರ್ಯಾತ್
ವಿಷಯ ಸುಖಮಿದಂ ಭುಜ್ಯಮಾನಂ ತೃಷಾರ್ತೈ
ರಧಿಕತರ ತೃಷಾರ್ತಾನ್ ದುಃಖಿತಾನೇನ ಕುರ್ಯಾತ್

ಆರ್ಯ॥ ಯದ್ಯಪಿ ನಿಷೇವ್ಯಮಾಣಾ
ಮನಸಸ್ಸಂತುಷ್ಟಿಕಾರಕಾ ವಿಷಯಾಃ
ಕಿಂಪಾಕಫಲಾಶನವದ್
ಭವಂತಿ ಪಶ್ಚಾದತಿ ದುರಂತಾಃ

ಕಟ್ಟಿಗೆಗಳಿಂದ ಬೆಂಕಿ ಹೇಗೆ ತೃಪ್ತಿಗೊಳ್ಳುವುದಿಲ್ಲವೋ ಉಪ್ಪುಗಡಲು ಸಾವಿರಾರು ನದಿಗಳಿಂದಲೂ ಹೇಗೆ ತುಂಬುವುದಿಲ್ಲವೋ ಹಾಗೆಯೇ, ಈ ಜೀವನು ಕಾಮಭೋಗದಿಂದ (ಸ್ತ್ರೀವಸ್ತ್ರಾದಿ ಭೋಗವಸ್ತುಗಳಿಂದ) ತೃಪ್ತಿಪಡಿಸಲು ಸಾಧ್ಯವಾಗದವನು. ಭೋಗಗಳು ಹೇಗೆ ಹೇಗೆ ಭೋಗಿಸಲ್ಪಡುವವೋ ಹಾಗೆ ಹಾಗೆ ಭೋಗಗಳಲ್ಲಿ ಆಸೆ ಹೆಚ್ಚಾಗುತ್ತದೆ. ಸೌದೆಗಳಿಂದ ಬೆಂಕಿಯಹಾಗೆ ಆ ಭೋಗಗಳು ತೃಷ್ಣೆಯನ್ನು (ಆಸೆಯನ್ನು) ಉದ್ದೀಪನಗೊಳಿಸುತ್ತವೆ. ಬಾಯಾರಿಕೆಯಿಂದ ಪೀಡಿತರಾದವರು ಉಪ್ಪು ನೀರನ್ನು ಕುಡಿದರೆ ಅದು ಅವರ ಬಾಯಾರಿಕೆಯನ್ನು ಅಧಿಕಗೊಳಿಸಿ ಪೀಡಿಸುವುದು, ದುಃಖಿತರನ್ನಾಗಿ ಮಾಡುವುದು. ಈ ವಿಷಯ ಸುಖವು ಕೂಡ, ಆಶಾಪೀಡಿತರಾದವರಿಂದ ಸೇವಿತವಾಗಿದ್ದು ಹೆಚ್ಚಾದ ಆಶೆಯಿಂದ ಪೀಡಿತರನ್ನಾಗಿಯೂ ದುಃಖಿತರನ್ನಾಗಿಯೂ ಮಾಡುತ್ತದೆ. ಮನಸ್ಸಿಗೆ ಸಂತೋಷವನ್ನುಂಟುಮಾಡುವ ವಸ್ತುಗಳು ಸೇವಿಸಲ್ಪಡುವವಾದರೂ ಅನಂತರ ಅವು, ಕಿಂಪಾಕಫಲವನ್ನು (ಹೆಮ್ಮುಷ್ಟಿ ಹಣ್ಣನ್ನು) ತಿಂದಹಾಗೆ ಬಹಳ ಕೆಟ್ಟಪರಿಣಾಮಕರವಾಗಿ ಪರಿಣಮಿಸುತ್ತವೆ.—ಈ ಹಣ್ಣು ಕಾಣಲು ಚೆಲುವು, ತಿನ್ನಲು ರುಚಿ, ತಿಂದರೆ ಪ್ರಾಣಹಾನಿ. ಮೃತ್ಯುದೇವತೆ ಮೇಲೆ

ವೃತ್ತ॥ ಮರ್ದುಂ ಮಂತ್ರಮುಮಿಷ್ಟದೇವತೆಗಳುಂ ದಿವ್ಯಾಸ್ತ್ರಮುಂ ಕೋಂಟೆಯುಂ
ಗುರ್ದುಂ ಪೊರ್ದಿದ ಚಾತುರಂಗಬಲಮುಂ ಮೆಯ್ಗಾಪುಮಾ ವೇಳೆಗೊಂ
ಡಿರ್ದತ್ಯುಗ್ರ ಭಟರ್ಕಳುಂ ಕವಚಮುಂ ಮಿತ್ರರ್ಕಳುಂ ಮುಟ್ಟಿ ಮೇ
ಲೆರ್ದಾಗಳ್ ಶರಣಪ್ಪೊಡೇಕೆ ಮಡಿದರ್ ಪನ್ನಿರ್ವರುಂ ಚಕ್ರಿಗಳ್

ಸಾವನಿತೊಂದವಸ್ಥೆ ತನಗಾದೆಡೆಯೊಳ್ ತಳರ್ಸಂದು ತತ್ವಮುಂ
ಭಾವಿಸಿ ಬಾಹ್ಯವಸ್ತುಗಳೊಳೊಂದದೆ ತನ್ನೊಳೆ ನಿಂದು ಕರ್ಮವಿ
ಶ್ರಾವಣೆಯಿಂ ವಿಶೋಧಿ ದೊರೆಕೊಂಡಿರೆ ಗೆಲ್ದು ಪರೀಷಹಂಗಳಂ
ಜೀವಮನಿಂತು ಸಂತವೊಡಲಿಂ ಕಳೆಗೆಂಬುದು ಜೈನಶಾಸನಂ



ಆರೊಳಮಿಲ್ಲ ಮೋಹಮೆನಗೆನ್ಗೆ ಜಿನೇಂದ್ರ ಪದಂಗಳುಗ್ರ ಸಂ
ಸಾರಹರಂಗಳೆನ್ಗೆ ಪೆಱತಿಲ್ಲೆನಗೆನ್ನಱಿವಲ್ಲದೆನ್ಗೆ ನಿಂ
ದಾರಯೆ ಧರ್ಮಮೊಂದೆ ಶರಣೆನ್ಗೆ ಪಲಾಲಮನೊಲ್ಲೆನಿನ್ ನಮ
ಸ್ಕಾರಮೆ ಸಾಲ್ಗುಮೆನ್ಗಿನಿತನೆನ್ಗೆನಲಾರ್ಪೊಡೆ ಜೀವಿತಾಂತ್ಯದೊಳ್

ಸಾಯುವುದು ಬಂದಾಗ ರಕ್ಷಿಸತಕ್ಕವು ಯಾವುವೂ ಇಲ್ಲ. ಅಂತಹ ಸಂದರ್ಭದಲ್ಲಿ ಔಷಧಿ, ಮಂತ್ರ, ಇಷ್ಟದೇವತೆಗಳು, ಶ್ರೇಷ್ಠವಾದ ಬಾಣಗಳು, ಕೋಟೆ, ಗುದ್ದು (ಮುಷ್ಟಿಯಿಂದ ತಿವಿತ), ಸೇರಿರುವ ಚತುರಂಗ ಸೈನ್ಯ, ಅಂಗರಕ್ಷಕರು, ಒಡೆಯನು ಸಾಯುತ್ತಲೇ ತಾವೂ ಸಾಯುತ್ತೇವೆ ಎಂಬ ಸಮಯ ಪಾಲನೆಯ ಪ್ರತಿಜ್ಞೆ ಮಾಡಿದ ಅತಿ ಭಯಂಕರ ಯೋಧರು, ಕವಚ, ಸ್ನೇಹಿತರು—ಇಂಥವು ಆಶ್ರಯವಾಗುವುದಾದರೆ, ಹನ್ನೆರಡು ಮಂದಿ ಚಕ್ರವರ್ತಿಗಳು ಏಕೆ ಸತ್ತರು?. ಸಾಯುವ ಒಂದು ಸ್ಥಿತಿ ತನಗುಂಟಾದ ಸಂದರ್ಭದಲ್ಲಿ ನಿಶ್ಚಯ ಮಾಡಿಕೊಂಡು, ಜೈನತತ್ತ್ವವನ್ನು ಧ್ಯಾನಿಸಿ, ಹೊರಗಿನ ವಿಷಯಗಳಲ್ಲಿ ಸೇರಿಕೊಳ್ಳದೆ, ತನ್ನಲ್ಲಿಯೇ ಮನಸ್ಸನ್ನು ನಿಲ್ಲಿಸಬೇಕು. ಕರ್ಮ ಕಳಚಿ ಹೋಗುವುದರಿಂದ ನಿರ್ಮಲತ್ವವು ಲಭ್ಯವಾಗಿರಲು ಇಪ್ಪತ್ತೆರಡು ಪರೀಷಹಗಳನ್ನು ಜಯಿಸಿ, ಶಾಂತರೀತಿಯಲ್ಲಿ ಪ್ರಾಣವನ್ನು ಶರೀರದಿಂದ ಹೊರಪಡಿಸಲಿ–ಎಂದು ಜೈನಶಾಸನವು ಹೇಳುತ್ತದೆ. ನನಗೆ ಯಾರಲ್ಲಿಯೂ ಪ್ರೀತಿಯಿಲ್ಲ ಎನ್ನಲಿ. ಜಿನೇಶ್ವರನ ಪಾದಗಳು ಭಯಂಕರವಾದ ಜನನ ಮರಣಗಳನ್ನು ಪರಿಹಾರಮಾಡುವುವು ಎನ್ನಲಿ. ನನಗೆ ನನ್ನ ಜ್ಞಾನವಲ್ಲದೆ ಬೇರೆ ಇಲ್ಲ ಎನ್ನಲಿ. ನಿಂತು ವಿಚಾರಮಾಡಿದರೆ ಧರ್ಮವೊಂದೇ ಆಶ್ರಯ ಸ್ಥಾನವು, ಜೊಳ್ಳಾದುದನ್ನು ಒಪ್ಪಲಾರೆನು, ಇನ್ನು ಜೀವನದ ಕೊನೆಗಾಲದಲ್ಲಿ ಬಾಯಿಂದ ಹೇಳುವಷ್ಟು ಶಕ್ತಿಯಿದ್ದರೆ, ಪಂಚನಮಸ್ಕಾರಗಳೇ ಸಾಕು ಎನ್ನುವ ಇಷ್ಟನ್ನು ಹೇಳಲಿ. ಈ ಜಿನನ ಉಪದೇಶವು ವಿಷಯ ಸುಖಗಳಿಗೆ ವಿರೇಚನ ಪ್ರಾಯ

ಗಾಹೆ॥ ಜಿಣವಯಣ ಮೋಸಹಮಿಣಂ ವಿಸಯಸುಹ ವಿರೇಯಣಂ ಅಮಿದಭೂದಂ
ಜರಮರಣ ಜಮ್ಮವಾಹಿ ಸುಹಕರಣಂ ಸವ್ವಜೀವಾಣಂ
ಎಕ್ಕಮ್ಮಿ ಭವಗ್ಗಹಣೇ ಸಮಾಹಿ ಮರಣಂ ಮರೇದ್ದ ಜದಿ ಜೀವೋ
ಸತ್ತಟ್ಠ ಭವಗ್ಗಹಣೇ ಣಿವ್ವಾಣಮಣುತ್ತರಂ ಲಹಇ
ಸತ್ತಕ್ಖರ ಸಜ್ಝಾಯಂ ಅರಹಂತಾಣ ಣಮೋ ತ್ತಿಭಾವೇಣಂ
ಜೋ ಕುಣಇ ಅಣ್ಣಮ ಈ ಸೋ ಪಾವಇ ಸವ್ವಕಲ್ಲಾಣಂ
ಏಸೋ ಪಂಚಣಮೊಕ್ಕಾರೋ ಸವ್ವ ಪಾವ ಪಣಾಸಣೋ
ಮಂಗಳೇಸು ಯ ಸವ್ವೇಸು ಪಢಮಂ ಹವಇ ಮಂಗಳಂ
ಭಾವಣಮೊಕ್ಕಾರಗದೋ ಝಾಯಂ ಜೋಣಿಯಮಿಯಮ್ಮಿ ಚಿತ್ತಮ್ಮಿ
ಏ ಅಗ್ಗೇಣ ವಿಸುದ್ಧೋ ತೋ ಪೋಹಿಸಿ ಮೋಕ್ಖ ಸುಹ ಭಾ ಈ

ಆರ್ಯೆ ॥ ಗುರುಮೂಲೇ ಯತಿನಿಕಟೇ
ಚೈತ್ಯೇ ಸಿದ್ಧಾಂತವಾರ್ಧಿಸದ್ಘೋಷೇ
ಮಮ ಭವತು ಜನ್ಮಜನ್ಮನಿ
ಸಂನ್ಯಸನಸಮನ್ವಿತಂ ಮರಣಂ

ವಾದ ಔಷಧವಾಗಿದೆ. ಅಮೃತಸ್ವರೂಪವಾಗಿದೆ. ಎಲ್ಲಾ ಜೀವಿಗಳ ಮುಪ್ಪು, ಸಾವು, ಜನ್ಮ ವೇದನೆಗಳನ್ನು ಕ್ಷಯಮಾಡುವಂಥವಾಗಿದೆ. ಒಂದೇ ಆದ ಜನ್ಮಧಾರಣೆಯಲ್ಲಿ ಜೀವಾತ್ಮನು 'ಸಮಾಧಿಮರಣ' ಎಂಬ ಸಾವನ್ನು ಯಾವಾಗ ಪಡೆಯುವನೋ ಆ ಮೇಲಿನ ಏಳೆಂಟು ಹುಟ್ಟುಗಳಲ್ಲಿ ಅತಿಶ್ರೇಷ್ಠವಾದ ಮೋಕ್ಷವನ್ನು ಪಡೆಯುತ್ತಾನೆ. 'ಣಮೋ ಅರಹಂತಾಣಂ' ಎಂಬ ಸಪ್ತಾಕ್ಷರ ಮಂತ್ರದ ಪಠನವನ್ನು ಮನೋವಾಕ್ಕಾಯ ಎಂಬ ಮೂರು ಭಾವಗಳಿಂದ ಅನನ್ಯಮತಿಯಾದ ಯಾವನು ಮಾಡುವನೋ ಅವನು ಸಮಸ್ತಕಲ್ಯಾಣಗಳನ್ನು ಪಡೆಯುತ್ತಾನೆ. ಸರ್ವ ಪಾಪಗಳನ್ನೂ ನಾಶಮಾಡತಕ್ಕ ಈ ಪಂಚನಮಸ್ಕಾರಗಳು ಎಲ್ಲ ಮಂಗಳಗಳಲ್ಲಿಯೂ ಮೊದಲನೆಯ ಮಂಗಳವಾಗಿರುತ್ತವೆ. ಯಾವನು ಮನಸ್ಸಿನಲ್ಲಿಯೇ ಧ್ಯಾನಿಸುವ (ಪಂಚಪರಮೇಷ್ಠಿಗಳಾದ ಅರ್ಹಂತರು, ಸಿದ್ಧರು, ಆಚಾರ್ಯರು, ಉಪಾಧ್ಯಾಯರು, ಸಾಧುಗಳು– ಎಂಬೀ ಐವರ ಕುರಿತು ಮಾಡುವ) ಪಂಚನಮಸ್ಕಾರಗಳನ್ನು ಉಳ್ಳವನಾಗಿ ನಿಯತ ಮನಸ್ಸಿನಿಂದ ಧ್ಯಾನಿಸುತ್ತ ಏಕಾಗ್ರತೆಯಿಂದ ನಿರ್ಮಲನಾಗುವನೋ ಅವನು ಮೋಕ್ಷ ಸುಖಕ್ಕೆ ಭಾಗಿಯಾಗಿ ಪರಿಣಮಿಸುವನು ಗುರುಗಳ ಸಾನ್ನಿಧ್ಯದಲ್ಲೀ ಯತಿಗಳ ಸಮೀಪದಲ್ಲಿ, ಜಿನಾಲಯದಲ್ಲಿ, ತತ್ತ್ವಸಿದ್ಧಾಂತವೆಂಬ ಸಮುದ್ರದ ಒಳ್ಳೆಯ ನಾದದಲ್ಲಿ ಪ್ರತಿಯೊಂದು ಜನ್ಮದಲ್ಲಿಯೂ ನನಗೆ ಸಂನ್ಯಾಸ ಸಮೇತವಾದ ಮರಣವು ಪ್ರಾಪ್ತವಾಗಲಿ

ಎಂದಿಂತಾರಾಧನೆಯುಂ ಪದಿನಯ್ದು ದಿವಸಂ ವಕ್ಖಾಣಿಸೆ ಧರ್ಮಾನುರಾಗದಿಂ ಕೇಳ್ದು ಮುನಿಪ್ಪ ವಾಗಳ್ ವಜ್ರದಾಡಂ ದುರಾತ್ಮಂ ನಿಷ್ಕಾರಣಮೆನ್ನಂ ಕೊಂದನೆಂದು ಮನದೊಳ್ ರೋಷಮಂ ಬಗೆದು ಮುನಿಸಿ ಭವನವಾಸಿಗ ಲೋಕದೊಳ್ ನೂಱು ಪಳಿತೋಪಮಾಯುಷ್ಯಮನೊಡೆಯೊಂ ನಾಗೇಂದ್ರ ದೇವನಾಗಿ ಪುಟ್ಟಿದೊಂ ಮತ್ತಮನಂತವೀರ್ಯನುಂ ಭಟಾರರ್ ಪೇೞ್ದ ಧರ್ಮಶ್ರವಣಮಂ ಕೇಳ್ದು ಧರ್ಮದ ಫಲದಿಂದಂ ತಮ್ಮ ತಾಯ್ವಿರ್ಕಳ್ ದೇವಗತಿಯೊಳ್ ಪಿರಿದು ವಿಭೂತಿಯು ನೊಡೆಯೊರ್ ದೇವರ್ಕಳಾಗಿ ಪುಟ್ಟಿದುದುಮಂ ಕಂಡು ರಾಜ್ಯಪಿಮೋಹದಿಂ ತಂದೆಯು ಪೊಲ್ಲಗತಿಯೊಳ್ ಪುಟ್ಟಿದುದುಮಂ ಕಂಡು ಮನುಷ್ಯಜನ್ಮದುರ್ಲಭತ್ವಮುಮಂ ಭೋಗೋಪ ಭೋಗಂಗಳೊಳಪ್ಪನಿತ್ಯತ್ವಮುಮಂ ಮನದೊಳ್ ಬಗೆದು ಸಂಸಾರ ಶರೀರಭೋಗ ದೊಳಪ್ಪ ವೈರಾಗ್ಯಮನೊಡೆಯನಾಗಿ ಸುಬಾಹುವೆಂಬ ತನ್ನ ಪಿರಿಯ ಮಗಂ ತನ್ನೊಡನೆ ತೊಱೆಯಲ್ ಬಗೆದಿರ್ದೊನಂ ಬಾರಿಸಿ ಬಲ್ಲಾಳ್ತನದಿಂ ರಾಜ್ಯಪಟ್ಟಂಗಟ್ಟಿ ಸಂಕ್ಷೇಪದಿಂ ರಾಜ್ಯನೀತಿಯುಮಿಂತೆಂದು ಕಲ್ಪಿಸಿದಂ

ಈ ರೀತಿಯಾಗಿ ಹದಿನೈದು ದಿವಸಗಳ ವರೆಗೆ ಆರಾಧನೆಯ ಶಾಸ್ತ್ರವನ್ನು ಸಾರಸ್ವತಾಚಾರ್ಯರು ವ್ಯಾಖ್ಯಾನ ಮಾಡಲು ಧರ್ಮದ ಮೇಲಿನ ಪ್ರೀತಿಯಿಂದ ಅದನ್ನು ಕೇಳಿ ಸಾಯುವ ವೇಳೆಯಲ್ಲಿ ದುಷ್ಟನಾಗಿರುವ ವಜ್ರದಾಡನು ಕಾರಣವಿಲ್ಲದೆಯೇ ನನ್ನನ್ನು ಕೊಂದನು ಎಂದು ಮನಸ್ಸಿನಲ್ಲಿ ಸಿಟ್ಟನ್ನು ಭಾವಿಸಿಕೊಂಡು ಆ ಹೆಬ್ಬಾವು ಸತ್ತಿತು. ಆ ಜೀವನು ಮನೆಗಳಲ್ಲಿ ವಾಸ ಮಾಡತಕ್ಕವರಾದ ಅಸುರಾದಿಗಳ ಲೋಕದಲ್ಲಿ ನೂರು ಪಳಿತಗಳಿಗೆ ಸಮಾನವಾದ ಆಯುಷ್ಯವನ್ನುಳ್ಳ ನಾಗೇಂದ್ರ ದೇವನಾಗಿ ಜನಿಸಿದನು. ಆಮೇಲೆ ಅನಂತ ವೀರ್ಯನು ಸಾರಸ್ವತ ಮುನಿಗಳು ಹೇಳಿದ ಧರ್ಮವಿಚಾರವನ್ನು ಕೇಳಿ, ಧರ್ಮದ ಫಲದಿಂದ ತನ್ನ ತಾಯಂದಿರು ದೇವತ್ವದ ಗತಿಯನ್ನು ಪಡೆದು ಬಹಳ ವೈಭವವುಳ್ಳ ದೇವತೆಗಳಾಗಿ ಹುಟ್ಟಿದುದನ್ನು ಕಂಡು, ರಾಜ್ಯದ ಮೇಲಿನ ಹೆಚ್ಚಿನ ಆಸೆಯಿಂದಾಗಿ ತನ್ನ ತಂದೆ ದುರ್ಗತಿಯಲ್ಲಿ (ಹಾವಾಗಿ) ಹುಟ್ಟಿದುದನ್ನು ಕಂಡು, ಈ ಮನುಷ್ಯ ಜನ್ಮವು ದೊರೆಯುವಂಥದಲ್ಲವೆಂದು ಭಾವಿಸಿದನು. ಭೋಗ ಉಪಭೋಗಗಳೆಲ್ಲ ಅಶಾಶ್ವತವೆಂದು ಮನಸ್ಸಿನಲ್ಲಿ ಭಾವಿಸಿಕೊಂಡನು. ಸಂಸಾರದ ಸುಖ ಭೋಗದಲ್ಲಿ ವೈರಾಗ್ಯವುಳ್ಳವನಾದನು. ತನ್ನೊಂದಿಗೆ ರಾಜ್ಯಭೋಗವನ್ನೆಲ್ಲ ಬಿಟ್ಟು ಬಿಡಲು ಯೋಚಿಸಿದ ತನ್ನ ಹಿರಿಯ ಮಗನಾದ ಸುಬಾಹುವನ್ನು ತಡೆದು ಬಲಾತ್ಕಾರದಿಂದ ಅವನಿಗೆ ಸಾಮ್ರಾಜ್ಯದ ಪಟ್ಟಾಭಿಷೇಕವನ್ನು ಮಾಡಿ, ಅವನಿಗೆ ಸಂಕ್ಷೇಪವಾಗಿ ಈ ರೀತಿಯಲ್ಲಿ ರಾಜನೀತಿಯನ್ನು ಹೇಳಿಕೊಟ್ಟನು—

ವೃತ್ತ॥ ತೃಷ್ಣಾಂ ಛಿಂದಿ ಭಜ ಕ್ಷಮಾಂ ತ್ಯಜ ಮದಂ ಪಾಪೇ ರತಿಂ ಮಾ ಕೃಥಾಃ
ಸತ್ಯಂ ಬ್ರೂಹ್ಯನುಯಾಹಿ ಸಾಧು ಪದವೀಂ ಸೇವಸ್ವ ವಿದ್ವಜ್ಜನಂ
ಮಾನ್ಯಾನ್ ಮಾನಯ ವಿದ್ವಿಷೋऽಪ್ಯನುನಯ ಪ್ರಚ್ಛಾದಯಸ್ವಾನ್ ಗುಣಾನ್
ಕೀರ್ತಿಂ ಪಾಲಯ ದುಃಖಿತೇ ಕುರು ದಯಾಮೇತತ್ ಸತಾಂ ಚೇಷ್ಟಿತಂ

ಎಂದಿಂತು ಮಗನಂ ಕಲ್ಪಿಸಿ ಎಲ್ಲರೊಳಂ ನಿಶ್ಶಲ್ಯಂಗೆಯ್ದು ಬಾಹ್ಯಾಭ್ಯಂತರ ಪರಿಗ್ರಹಂಗಳಂ ತೊಱೆದು ಪಲಂಬರರಸುಮಕ್ಕಳ್ವೆರಸು ಸಾರಸ್ವತ ಭಟಾರರ ಪಕ್ಕದೆ ತಪಂಬಟ್ಟು ಉಗ್ರೋಗ್ರ ಘೋರವೀರ ತಪಶ್ಚರಣಂಗೆಯ್ದು ಸಮ್ಮೇದ ಪರ್ವತದ ಮೇಗಿರ್ದೆಂಟು ಕರ್ಮಂಗಳಂ ಕಿಡಿಸಿ ಮೋಕ್ಷಕ್ಕೆ ಪೋದನ್ ಮತ್ತಿತ್ತ ಧರಣೇಂದ್ರನೊಂದು ದಿವಸಂ ಜಿನೇಂದ್ರ ಚೈತ್ಯಾಲಯಂಗಳಂ ಬಂದಿಸಲ್ವೇಡಿ ಮಂದರಗಿರಿಗೆ ವಿಮಾನಮನೇಱಿ ಪೋಪಾಗಳ್ ವಜ್ರದಾಡಂ ಮತ್ತಗ್ಗಳ ಮಪೂರ್ವಮಪ್ಪ ವಿದ್ಯೆಗಳಂ ಸಾಧಿಸಲ್ವೇಡಿ ಕಳತ್ರಸಹಿತಂ ವಿಮಾನಮನೇಱಿ ಮಂದರಗಿರಿಗೆ ವಂದಾತನಂ ಕಂಡು ತನ್ನ ವಿಭಂಗಜ್ಞಾನದಿಂದೆನ್ನ ಪಗೆವನೀತನೆಂದಱಿದೆಲವೊ ಪಾಪಕರ್ಮಾ ನಿಷ್ಕಾರಣಮೆನ್ನಂ ಜಲಕ್ರೀಡೆಯಾಡುವೊನಂ ಕಳತ್ರಸಹಿತಂ ಕೊಂದೆಯೆಂದು ಮೂದಲಿಸಿಯಾತನ

ಆಸೆಯನ್ನು ಕತ್ತರಿಸು. ಕ್ಷಮಾಗುಣವನ್ನು ಭಜಿಸು. ಮದವನ್ನು ಬಿಡು. ಪಾಪದಲ್ಲಿ ಪ್ರೀತಿಯನ್ನು ಮಾಡಬೇಡ. ಸತ್ಯವನ್ನು ಹೇಳು. ಸಾಧುಗಳ ಪದವಿಯನ್ನು ಅನುಸರಿಸಿ ಹೋಗು. ವಿದ್ವಾಂಸರನ್ನು ಸೇವೆ ಮಾಡು. ಮಾನ್ಯರಾದವರನ್ನು ಗೌರವಿಸು. ಶತ್ರುಗಳನ್ನು ಕೂಡ ಆದರಿಸು. ಸ್ವಕೀಯವಾದ ಸದ್ಗುಣಗಳನ್ನು ಮುಚ್ಚಿಡು (ಆತ್ಮಶ್ಲಾಘನೆ ಮಾಡ ದಿರು). ಕೀರ್ತಿಯನ್ನು ಪಾಲಿಸು. ದುಃಖಿತನಾದವನಲ್ಲಿ ದಯೆಯನ್ನು ಮಾಡು, ಈ ರೀತಿ ಯದು ಸತ್ಪುರುಷರ ಆಚರಣೆಯೆನಿಸುವುದು ಈ ರೀತಿಯಾಗಿ ಮಗನಿಗೆ ನೀತಿಯನ್ನು ಕಲಿಸಿ, ಎಲ್ಲರಲ್ಲಿಯೂ ಪಾಪದ ವರ್ತನೆಯಿಲ್ಲದವನಾಗಿ ಮಾಡಿ, ಬಾಹ್ಯ ಮತ್ತು ಅಭ್ಯಂತರ ವೆನಿಸುವ ಪರಿಗ್ರಹಗಳನ್ನು ತ್ಯಜಿಸಿ, ಹಲವರು ರಾಜಕುಮಾರರೊಂದಿಗೆ ಸಾರಸ್ವತ ಮುನಿಗಳ ಬಳಿ ತಪಸ್ಸನ್ನು ಸ್ವೀಕರಿಸಿ ಅತಿ ಘೋರವಾದ ತಪಸ್ಸನ್ನು ಮಾಡಿ, ಸಮ್ಮೇದ ಪರ್ವತದ ಶಿಖರದಲ್ಲಿದ್ದು ಎಂಟು ಕರ್ಮಗಳನ್ನು ನಾಶಮಾಡಿ ಮುಕ್ತಿಗೆ ಹೋದನು. ಆ ಮೇಲೆ ಇತ್ತ ಧರಣೇಂದ್ರನು ಒಂದು ದಿನಸ ಜಿನೇಂದ್ರರಿಂದ ಕೂಡಿದ ಬಸದಿಗಳಿಗೆ ಹೋಗಿ ವಂದಿಸುವುದಕ್ಕಾಗಿ ವಿಮಾನವನ್ನೇರಿ ಮಂದರ ಪರ್ವತದ ಕಡೆಗೆ ಹೋದನು. ಆಗ ವಜ್ರದಾಡನು ಇನ್ನಷ್ಟು ಶ್ರೇಷ್ಠವೂ ಅಪೂರ್ವವೂ ಆದ ವಿದ್ಯೆಗಳನ್ನು ಸಾಧಿಸುವುದ ಕ್ಕಾಗಿ ಪತ್ನೀಸಮೇತ ವಿಮಾನವನ್ನೇರಿ ಮಂದರಗಿರಿಗೆ ಬಂದನು. ಅವನನ್ನು ಧರ ಣೇಂದ್ರನು ಕಂಡು, ತನ್ನ ಮುರುಕಾದ ಜ್ಞಾನದಿಂದ ಈತನು ತನ್ನ ಶತ್ರುವೆಂದು ತಿಳಿದು, "ಎಲೋ ಪಾಪಕರ್ಮನೇ, ಜಲಕ್ರೀಡೆಯಲ್ಲಿದ್ದ ನನ್ನನ್ನು ನನ್ನ ಪತ್ನಿಯರಸಮೇತ ನಿಷ್ಕಾರಣ ವಾಗಿ ಕೊಂದಿರುವೆ" ಎಂದು ಮೂದಲಿಸಿದನು. ಅವನ ವಿದ್ಯೆಯನ್ನೆಲ್ಲ ಕತ್ತರಿಸಿಹಾಕಿದನು.

ವಿದ್ಯೆಯೆಲ್ಲಮಂ ಕೊಱದಿಕ್ಕಿ ಕಳತ್ರಸಹಿತಂ ಪಿಡಿದೆತ್ತಿಕೊಂಡು ಪೋಗಿ ಸಮುದ್ರದೊಳ್
ಮಹಾಪಾತಾಳದ ಮೊದಲೊಳಿಕ್ಕಿ ಪುದುಕುನೀರನದ್ದುತ್ತಂ ಪಿರಿದುಂ ಬೇಗಂ ದುಃಖ
ಮನೆಯ್ದಿಸಿ ಕಾಡಿಕೊಲೆಯಾತಂ ಸತ್ತು ಪ್ರಥಮನರಕದೊಳತಿ ಘೋರಮಪ್ಪುದಱೊಳ್ ಖಳ
ಖಳಮೆಂಬ ನರಕಬಿಲದೊಳ್ ಮೂರು ಪಳಿತೋಪಮಾಯುಷ್ಯಮನೊಡೆಯೊಂ ನಾರಕನಾಗಿ
ಪುಟ್ಟಿಯಲ್ಲಿಯ ದುಃಖಂಗಳೆಲ್ಲಮನನುಭವಿಸಿಯಾಯುಷ್ಯಾಂತದೊಳ್ ಪೊಱಮಟ್ಟು ಬಂದು
ಪಿರಿದಪ್ಪ ನೀಲಗಿರಿಯೆಂಬ ಪರ್ವತದೊಳ್ ಪುಲಿಯಾಗಿ ಪುಟ್ಟಿದೊಂ ಧರಣೇಂದ್ರನುಮಾಯು
ಷ್ಯಾಂತದೊಳ್ ಬಂದು ಕುರುಜಾಂಗಣಮೆಂಬ ನಾಡೊಳ್ ಹಸ್ತಿನಾಪುರಮೆಂಬುದು ಪೊಲಲದ
ನಾಳ್ಗೊನಿಕ್ಷ್ವಾಕು ವಂಶದ ವಿಜಯದತ್ತನೆಂಬರಸಂಗಂ ವಿಜಯಮತಿ ಮಹಾದೇವಿಗಂ ಗುರು
ದತ್ತನಾಗಿ ಪುಟ್ಟಿದೊಂ ಒಂದು ದಿವಸಂ ಪುತ್ರಾರ್ಥಿಯಪ್ಪ ವಿಜಯ ಮಹಾದೇವಿಯಿಂ ಬೆಸ
ಗೊಳೆಪಟ್ಟ ಗುರುಗಳೆಂಬ ಋಷಿಯರಾದೇಶದಿಂ ಪುಟ್ಟಿದೊಂ ಗುರುಗಳಿತ್ತರಪ್ಪುದಱಿಂದಾತಂಗೆ
ಪಿತೃಮಾತೃಗಳ್ ಗುರುದತ್ತನೆಂದು ಪೆಸರನಿಟ್ಟರ್ ಮತ್ತೇೞು ವರ್ಷದೊಳಗೆ ಚತುಷ್ಷಷ್ಟಿ
ಕಳೆಗಳುಂ ದ್ವಾಸಪ್ತತಿ ವಿಜ್ಞಾನಂಗಳುಮನೆಲ್ಲಮಂ ನಿರವಶೇಷಂ ಕಲ್ತಾದಮೂನುಂ ರೂಪುಂ
ತೇಜಮುಂ ಗಾಡಿಯುಂ ಸೌಭಾಗ್ಯಮನೊಡೆಯನಾಗಿರ್ದೆಂಟನೆಯ ವರುಷದಂದು ಗುರುದತ್ತಂಗೆ

ಅವನನ್ನೂ ಅವನ ಹೆಂಡತಿಯನ್ನೂ ಕೂಡ ಹಿಡಿದು ಎತ್ತಿಕೊಂಡು ಹೋಗಿ ಸಮುದ್ರ
ದಲ್ಲಿ ಮಹಾ ಪಾತಾಳದ ಅಡಿಯಲ್ಲಿ ಹಾಕಿ, ಕುದಿಯುತ್ತಿರುವ ನೀರಿನಲ್ಲಿ
ಅದ್ದಿ ಬಹಳ ಹೊತ್ತಿನ ವರೆಗೆ ದುಃಖಕ್ಕೆ ಈಡುಮಾಡಿ ತೊಂದರೆಗೊಳಿಸಿ ಕೊಂದನು.
ಆ ವಜ್ರದಾಡನು ಸತ್ತು, ಮೊದಲನೆಯ ನರಕದಲ್ಲಿ ಅತ್ಯಂತ ಭಯಂಕರವಾಗಿರುವ ಖಳ
ಖಳ ಎಂಬ ನರಕ ಕೂಪದಲ್ಲಿ ಮೂರು ಪಳಿತಕ್ಕೆ ಸಮಾನವಾದ ಆಯುಷ್ಯವುಳ್ಳ ನರಕ
ಜೀವಿಯಾಗಿ ಹುಟ್ಟಿದನು. ಅಲ್ಲಿಯ ದುಃಖಗಳನ್ನೆಲ್ಲ ಅನುಭವಿಸಿ ಆಯುಷ್ಯವು ಕೊನೆ
ಯಾದಾಗ ಅಲ್ಲಿಂದ ಹೊರಟು ಬಂದು, ಹಿರಿದಾಗಿರತಕ್ಕ ನೀಲಗಿರಿ ಎಂಬ ಬೆಟ್ಟದಲ್ಲಿ
ಹುಲಿಯಾಗಿ ಹುಟ್ಟಿದನು. ಧರಣೇಂದ್ರನು ತನ್ನ ಆಯುಷ್ಯವು ಕೊನೆಯಾದಾಗ ಒಂದು
ಕುರುಜಾಂಗಣವೆಂಬ ನಾಡಿನಲ್ಲಿ ಹಸ್ತಿನಾಪುರ ಎಂಬ ಪಟ್ಟಣದಲ್ಲಿ ಆಳುತ್ತಿರುವ
ಇಕ್ಷ್ವಾಕುವಂಶದ ವಿಜಯದತ್ತನೆಂಬ ಅರಸನಿಗೂ ವಿಜಯಮತಿ ಎಂಬ ಮಹಾರಾಣಿಗೂ
ಗುರುದತ್ತನೆಂಬ ಮಗನಾಗಿ ಹುಟ್ಟಿದನು. ಮಗನನ್ನು ಬಯಸುತ್ತಿದ್ದ ವಿಜಯಮತಿ
ಮಹಾದೇವಿ ಒಂದು ದಿನ ಗುರುಗಳೆಂಬ ಋಷಿಗಳನ್ನು ಕೇಳಿ, ಅವರ ಭವಿಷ್ಯವಾಣಿಯಂತೆ
ಹುಟ್ಟಿದುದರಿಂದ ಗುರುಗಳೇ ಕೊಟ್ಟರೆಂದು ಆ ಮಗುವಿಗೆ ತಂದೆತಾಯಿಗಳು ಗುರುದತ್ತ
ಎಂದು ನಾಮಕರಣ ಮಾಡಿದರು. ಅನಂತರ ಏಳು ವರ್ಷಗಳೊಳಗೆ ಗುರುದತ್ತನು
ಅರುವತ್ತನಾಲ್ಕು ಕಲೆಗಳನ್ನೂ ಎಪ್ಪತ್ತೆರಡು ವಿಜ್ಞಾನಗಳನ್ನೂ ಎಲ್ಲವನ್ನೂ ಸ್ವಲ್ಪವೂ
ಉಳಿಯದಂತೆ ಕಲಿತನು ಅತಿಶಯವಾದ ರೂಪ, ಕಾಂತಿ, ಸೌಂದರ್ಯ, ಸೌಭಾಗ್ಯವುಳ್ಳ
ವನಾದನು. ಎಂಟನೆಯ ವರ್ಷವಾದಾಗ ವಿಜಯದತ್ತರಾಜನು ಗುರುದತ್ತನಿಗೆ ರಾಜ್ಯ

ವಿಜಯದತ್ತ ನೃಪತಿ ರಾಜ್ಯಪಟ್ಟಂಗಟ್ಟಿ ಸುಧರ್ಮರೆಂಬ ಭಟಾರರ ಪಕ್ಕದೆ ತಪಂಬಟ್ಟನಿತ್ತ ಗುರುದತ್ತಕುಮಾರನರಸನಾಗಿ ಸಿಂಹಾಸನಮಸ್ತಕಸ್ಥಿತನಾಗಿ ತಂದೆಗೆಂತಪ್ಪೊಡಂ ಕಪ್ಪಂಗೊಡದ ಮಂಡಳಿಕರ್ಕಳ ಮೇಗೆತ್ತಿ ಮೊಟ್ಟೆಯಿಸಿಱಿದು ಮಂಡಲಂಗಳುಂ ದುರ್ಗವಸ್ತು ವಾಹನಂಗಳುಂ ಸಮಸ್ತ ಕಪ್ಪಂಗೊಂಡೆಲ್ಲರುಮನಂಜಿಸಿ ಯಶಮುಂ ಕೀರ್ತಿಯುಮನೊಡೆಯನಾಗಿ ಇಂತು ಪೃಥಿವೀ ರಾಜ್ಯಂಗೆಯ್ಯುತ್ತಿರ್ಪನ್ನೆಗಂ ಒಂದು ದಿವಸಂ ಪುಲಿಯುಪದ್ರವಮಂ ನಾಡವರ್ವಂದಿಂತೆಂದು ಪೇಳ್ದರ್ ದೇವಾ ನೀಲಗಿರಿಯೆಂಬ ಪರ್ವತದ ಬಳಸಿಯುಮಿರ್ದ ನಾಡೆಲ್ಲಂ ಪಾೞಾದುದಾ ಪರ್ವತದ ಗುಹೆಯೊಳೊಂದು ಪೆರ್ಬುಲಿಯಿರ್ದುದದು ನಾಡೆಲ್ಲರುಮಂ ಜವನ ರೂಪಿನೊಳ್ ಕೊಂದುದಪ್ಪುದಾರಪ್ಪೊಡಂ ನಾಡೊಳಿರಲಣ್ಮರೆಂದೊಡಾ ಮಾತಂ ಕೇಳ್ದು ಪೂರ್ವವೈರಂ ಕಾರಣಮಾಗಿ ಕ್ರೋಧಾಗ್ನಿ ಪೆರ್ಚೆ ಕಡು ಮುಳಿದು ಪುಲಿಯಂ ಕೊಲಲೆಂದು ಪಯಣಂಬೋಗಿ ಪುಲಿಯಿರ್ಪ ಗುಹೆಯನೆಯ್ದಿಯದಂ ಬಳಸಿಯುಂ ಮುತ್ತಿ ಮಹಾಸಮುದ್ರದ ಗರ್ಜನೆಯನೆ ಪೋಲ್ವ ಜನರವಮುಂ ಪಟುಪಟಹ ಶಂಖ ತಾಳ ಮಾರ್ದಳ ಕಹಳಾದಿ ಧ್ವನಿಗಳುಮನೆನಿತೆನಿತನಾ ಪುಲಿ ಕೇಳ್ಗುಮನಿತನಿತಂಜಿ ಗುಹೆಯೊಳಡಂಗಿರ್ದತ್ತು ಪೊಱಮಡಲೊಲ್ಲದಿರ್ದೊಡಾ ಗುಹೆಯ ಬಾಗಿಲೊಳನಿತಾನುಂ ಪುಲ್ಲುಂ ಪುಳ್ಳಿಯುಮನೊಟ್ಟಿ ಕಿಚ್ಚಂ ತಗುಳ್ಚಿ.

ಪಟ್ಟವನ್ನು ಕಟ್ಟಿ, ಸುಧರ್ಮರೆಂಬ ಋಷಿಗಳ ಬಳಿಯಲ್ಲಿ ತಪಸ್ಸನ್ನು ಸ್ವೀಕರಿಸಿದನು. ಇತ್ತ ಗುರುದತ್ತಕುಮಾರನು ರಾಜನಾಗಿ ಸಿಂಹಾಸನದ ಮೇಲಿದ್ದು ತನ್ನ ತಂದೆಗೆ ಹೇಗೂ ಕಪ್ಪವನ್ನು ಕೊಡದ ಸಾಮಂತರಾಜರ ಮೇಲೆ ದಂಡೆತ್ತಿ ಪ್ರತಿಭಟಿಸಿ ಕಾದಾಡಿ ನಾಡು, ದುರ್ಗ, ವಸ್ತುವಾಹನಗಳು ಮುಂತಾದ ಕಪ್ಪಗಳನ್ನು ಪಡೆದು ಎಲ್ಲರನ್ನೂ ಹೆದರಿಸಿ ಖ್ಯಾತಿವಂತನಾಗಿ ಹೀಗೆ ಭೂಮಿಯ ರಾಜ್ಯಭಾರವನ್ನು ಮಾಡುತ್ತಿದ್ದನು. ಹೀಗಿರಲು ಒಂದು ದಿವಸ ನಾಡ ಜನರು ಬಂದು ಹುಲಿಯ ಉಪದ್ರವವನ್ನು ಈ ರೀತಿಯಾಗಿ ಹೇಳಿದರು—"ಪ್ರಭುವೇ, ನೀಲಗಿರಿ ಎಂಬ ಪರ್ವತದ ಸುತ್ತಲೂ ಇದ್ದ ನಾಡೆಲ್ಲವೂ ಹಾಳಾಯಿತು. ಆ ಪರ್ವತದ ಗುಹೆಯಲ್ಲಿ ಒಂದು ಹೆಬ್ಬುಲಿಯಿದೆ. ಅದು ಯಮನ ರೂಪದಲ್ಲಿ ನಾಡಿನವರನ್ನೆಲ್ಲ ಕೊಲ್ಲುತ್ತಿದೆ. ಯಾರೊಬ್ಬರೂ ನಾಡಿನಲ್ಲಿ ನೆಲಸಿಕೊಂಡಿರುವುದಕ್ಕೆ ಕೂಡ ಸಮರ್ಥರಾಗರು". ಹೀಗೆ ಹೇಳಲು ಆ ಮಾತನ್ನು ಗುರುದತ್ತನು ಕೇಳಿ, ಪೂರ್ವಜನ್ಮದ ವೈರವೇ ಕಾರಣವಾಗಿ ಕೋಪಾಗ್ನಿ ಹೆಚ್ಚಾಗಿ ಬಹಳ ಸಿಟ್ಟಾಗಿ ಹುಲಿಯನ್ನು ಕೊಲ್ಲುವುದಕ್ಕಾಗಿ ಪ್ರಯಾಣ ಹೊರಟನು. ಹುಲಿ ವಾಸಮಾಡತಕ್ಕ ಗುಹೆಯಿದ್ದಲ್ಲಿಗೆ ಬಂದು ಅದರ ಸುತ್ತಲೂ ಮುತ್ತಿಗೆ ಹಾಕಿದನು ಮಹಾಸಾಗರದ ಗರ್ಜನೆಯಂತಿರುವ ಜನಶಬ್ದವನ್ನೂ ಸಮರ್ಥವಾದ ಪಟಹ, ಶಂಖ, ತಾಳ, ಮದ್ದಳೆ, ತುತ್ತೂರಿ ಮುಂತಾದ ವಾದ್ಯಗಳ ರವಗಳನ್ನು ಆ ಹುಲಿ ಎಷ್ಟೆಷ್ಟು ಕೇಳಿತೋ ಅಷ್ಟಷ್ಟು ಹೆದರಿಕೊಂಡು ಗುಹೆಯೊಳಗೆ ಅಡಗಿದ್ದಿತು, ಹೊರಗೆ ಬರಲೊಲ್ಲದೆ ಇದ್ದಿತು. ಆಗ ಗುರುದತ್ತನು ಆ ಗುಹೆಯ ಬಾಗಿಲಲ್ಲಿ ಎಷ್ಟೋ ಹುಲ್ಲನ್ನೂ ಕಟ್ಟಿಗೆಯನ್ನೂ ರಾಶಿಹಾಕಿ

ಪುಲಿಯುಂ ಸುಟ್ಟು ಕೊಂಡು ತನ್ನ ಪೊೞಲ್ಗೆ ಪೋಗಿ ಅರಸುಗೆಯ್ಯುತ್ತಿರ್ದನಾ ಪುಲಿಯುಂ ಕರ್ಮನಿರ್ಜರೆಯಿಂ ಸತ್ತು ಸುರಾಷ್ಟ್ರವಿಷಯದೊಳ್ ದ್ರೋಣೀಮಂತಮೆಂಬ ಪರ್ವತದ ಸಾರೆ ಪಲ್ಲಿಖೇಡಮೆಂಬೂರೊಳ್ ಸಲಿಲಾಭರಣನೆಂಬ ಪಾರ್ವಂಗಂ ಕಟುಕಿಯೆಂಬ ಪಾರ್ವಂತಿಗಂ ಹಳಮುಖನೆಂಬೊಂ ಮಗನಾಗಿ ಪುಟ್ಟಿದೊಂ ಮತ್ತಿತ್ತಂಗಮೆಂಬುದು ನಾಡಲ್ಲಿ ಚಂಪಾನಗರ ಮೆಂಬುದು ಪೊೞಲದನಾಳ್ವಂ ಧಾತ್ರಿವಾಹನನೆಂಬರಸನಾತನ ಮಹಾದೇವಿ ಶ್ರೀಮತಿಯೆಂಬೊ ಳಾಯಿರ್ವರ್ಗಂ ಮಗಳಭಯಮತಿಯೆಂಬೊಳಾಕೆಯತ್ಯಂತ ರೂಪ ಲಾವಣ್ಯ ಸೌಭಾಗ್ಯ ಕಾಂತಿ ಹಾವ ಭಾವ ವಿಲಾಸ ವಿಭ್ರಮಂಗಳನೊಡೆಯೊಳಾಕೆಯಂ ಗುರುದತ್ತನೆನಿತಾನುಂ ಸೂಳ್ ಬೇಡಿಯಟ್ಟಿದೊಡರಸಂ ಕುಡಲೊಲ್ಲನಂತವರ್ಗಳಿಷ್ಟ ವಿಷಯ ಕಾಮಭೋಗಂಗಳನನುಭವಿಸುತ್ತಂ ಕಾಲಂ ಸಲೆ ಮತ್ತೊಂದು ದಿವಸಂ ಧಾತ್ರಿವಾಹನ ನೃಪತಿ ತನ್ನ ಬಡಗಿಗಳ್ ವಿಶ್ವಕರ್ಮನುಂ ವಿಶ್ವಮತಿಯುಮೆಂಬೊರಂ ಕರೆಯಿಸಿಯಿಂತೆಂದನಱುದಿಂಗಳೊಳಗೆ ನೀವಿರ್ವರುಮೋರೊರ್ವರ ಯ್ನೂಱು ರಥಂಗಳಂ ಬೇಗಂ ಮಾಡಿಯೆನಗೊಪ್ಪಿಸವೇೞ್ಕುಮೆಂದು ಪೇೞ್ದೊಡವರುಮಂತೆ ಗೆಯ್ವೆಮೆಂದು ರಥಂಗಳಂ ಮಾಡಲ್ ತಗುಳ್ದು ಅಱುದಿಂಗಳೊಳಾ ಅಯ್ನೂರು ರಥಮಂ ಸಮೆದು

ಊರಿಯನ್ನು ಹಚ್ಚಿ ಹುಲಿಯನ್ನು ಸುಟ್ಟು ಕೊಂಡು, ತನ್ನ ಪಟ್ಟಣಕ್ಕೆ ಹೋಗಿ ರಾಜ್ಯ ಭಾರ ಮಾಡುತ್ತ ಇದ್ದನು. ಆ ಹುಲಿ ಕರ್ಮಗಳು ನಾಶವಾದುದರಿಂದ ಸತ್ತು ಸುರಾಷ್ಟ್ರ ವೆಂಬ ನಾಡಿನಲ್ಲಿ ದ್ರೋಣಿಮಂತವೆಂಬ ಪರ್ವತದ ಬಳಿಯ ಪಲ್ಲಿಖೇಡವೆಂಬ ಊರಿನಲ್ಲಿ ಸಲಿಲಾಭರಣನೆಂಬ ಬ್ರಾಹ್ಮಣನಿಗೂ ಕಟುಕಿಯೆಂಬ ಬ್ರಾಹ್ಮಣಿತಿಗೂ ಹಳಮುಖನೆಂಬ ಹೆಸರುಳ್ಳ ಮಗನಾಗಿ ಹುಟ್ಟಿತು. ಅನಂತರ, ಇತ್ತ ಅಂಗವೆಂಬ ನಾಡಿನಲ್ಲಿ [ಚಂಪಾ ನಗರವೆಂಬ ಪಟ್ಟಣವಿದ್ದಿತು. ಅದನ್ನು ಧಾತ್ರಿವಾಹನನೆಂಬ ರಾಜನು ಆಳುತ್ತಿದ್ದನು. ಅವನ ಮಹಾರಾಣಿ ಶ್ರೀಮತಿಯೆಂಬವಳು. ಆ ದಂಪತಿಗಳಿಗೆ ಮಗಳು ಅಭಯಮತಿ ಯೆಂಬವಳು. ಆಕೆ ಅತ್ಯಂತ ರೂಪ, ಲಾವಣ್ಯ, ಸೌಭಾಗ್ಯ, ಕಾಂತಿ, ಹಾವ, ಭಾವ, ವಿಲಾಸ, ವಿಭ್ರಮಗಳುಳ್ಳವಳಾಗಿದ್ದಳು. ಗುರುದತ್ತನು ಆಕೆಯನ್ನು ಮದುವೆಯಾಗಲು ಬಯಸಿ ಆಕೆಯನ್ನು ಕೊಡುವಂತೆ ಎಷ್ಟು ಬಾರಿ ಜನ ಕಳುಹಿಸಿದರೂ ಧಾತ್ರಿವಾಹನ ರಾಜನು ಕೊಡಲು ಒಪ್ಪಲಿಲ್ಲ. ಅಂತು ಅವರು ತಮ್ಮ ಇಷ್ಟವಾದ ಸಂಗತಿಯ ಕಾಮ ಸುಖಗಳನ್ನು ಅನುಭವಿಸುತ್ತ ಇದ್ದು ಹೀಗೆಯೇ ಕಾಲ ಕಳೆಯುತ್ತಿತ್ತು. ಅಮೇಲೆ, ಒಂದು ದಿವಸ ಧಾತ್ರಿವಾಹನ ರಾಜನು ತನ್ನ ಬಡಗಿಗಳಾದ ವಿಶ್ವಕರ್ಮ, ವಿಶ್ವಮತಿ ಎಂಬಿಬ್ಬರನ್ನು ಕರೆಯಿಸಿ ಅವರೊಡನೆ ಹೀಗೆ ಹೇಳಿದನು. "ನೀವಿಬ್ಬರಲ್ಲಿ ಒಬ್ಬೊಬ್ಬರೂ ಐನೂರು ರಥಗಳನ್ನು ಬೇಗನೆ ಆರು ತಿಂಗಳೊಳಗೆ ರಚಿಸಿ, ನನಗೆ ಒಪ್ಪಿಸಬೇಕು". ಹೀಗೆ ಹೇಳಲು 'ಹಾಗೆಯೇ ಮಾಡುವೆವು' ಎಂದು ರಥಗಳನ್ನು ಮಾಡತೊಡಗಿದರು. ಅದರಂತೆ ಆರು ತಿಂಗಳುಗಳಲ್ಲಿ ವಿಶ್ವಮತಿಯು ಅಯ್ನೂರು ರಥಗಳನ್ನು ಪೂರ್ತಿಯಾಗಿ

ವಿಶ್ವಮತಿಯರಸಂಗೆ ತಂದುತೋಱಿದೊಡರಸಂ ಕಂಡಾದಮಾನುಮಾತಂಗೊಸೆದು ತುಷ್ಟಿದಾನಂ ಗೊಟ್ಟಂ ಮತ್ತೆ ವಿಶ್ವಕರ್ಮನಾಱುದಿಂಗಳೊಳ್ ರಥಮೊಂದು ಗಾಲಿಯುಮಂ ಸಮೆಯಿಸಿ ತಂದು ತೋಱಿದೊಡರಸಂ ಕಂಡು ಮುಳಿದಾತನಂ ಕೊಲಲ್ ಬಗೆದೊಡಂಜಿ ಆತನುಮಾಗಾಲಿಯು ನರಸನಮುಂದೆ ಮಣಿಕುಟ್ಟಿಮಮಪ್ಪ ಭೂಮಿಯೊಳಿಕ್ಕಿ ಪ್ರಾಣಭಯದಿಂದೋಡಿ ಗುರುದತ್ತ ನೃಪತಿಯಲ್ಲಿಗೆ ಪೋದೊನಾಗಾಲಿಯುಂ ಪದಿನಯ್ದು ದಿವಸಂ ಬರೆಗಂ ತನಗೆ ತಾನೆಯುಂತರಿಕ್ಷದೊಳ್ ನೆಲನಂ ಮುಟ್ಟದೆ ತಿಱ್ಱನೆ ತಿರಿಯುತ್ತಿರ್ದುದಂ ಕಂಡರಸಂ ವಿಶ್ವಕರ್ಮಂಗೊಸೆದಾತನಂ ಬೇಗಮಾರಯ್ದುಕೊಂಡು ಬನ್ನಿಮೆಂದೊಡೆ ಕೆಲದವರೆಂದರಾತಂ ನಿಮಗಂಜಿಯೋಡಿ ಪೋಗಿ ಗುರುದತ್ತಂಗಾಳಾಗಿರ್ದನೆನೆ ಕೇಳ್ದರಸಂ ಗುರುದತ್ತನಲ್ಲಿಗೆ ತನ್ನ ಪೆರ್ಗಡೆಗಳನಿಂತೆಂದು ಕಲ್ಪಿಸಿಯಟ್ಟಿದೊಂ ಕಪ್ಪಂ ಬೆರಸೆಮ್ಮ ಬಡಗಿಯುಮಂ ಬೇಗಮಟ್ಟುಗೆಂದು ಪೋಗಿ ಪೇೞಿಮೆಂದೊಡವರುಂ ಪೋಗಿಯವರಾತಂ ಗುರುದತ್ತನೃಪತಿಗೆ ತಮ್ಮರಸಂ ಕಲ್ಪಿಸಿದಂತೆ ನುಡಿದೊಡಾ ಮಾತಂ ಗುರುದತ್ತನೃಪತಿ ಕೇಳ್ದು ದವನಾನು ಮುಳಿದಿಂತೆಂದಂ ಮಂಡಳಮನಾಳ್ವರಸನಾಗಿಯುಂ ಪೆಱರ್ಗೆ ಕಪ್ಪಂಗುಡುವೊಡೀ ಸಿಂಹಾಸನಮುಂ ಬೆಳ್ಗೊಡೆಗಳುಂ ಚಾಮರಂಗಳುಂ ಪಾಳಿಧ್ವಜಂಗಳುಂ

ಮಾಡಿ ತಂದು ರಾಜನಿಗೆ ತೋರಿಸಿದನು. ಆಗ ರಾಜನು ಕಂಡು ಅವನ ಮೇಲೆ ಬಹಳ ಪ್ರೀತಿಪಟ್ಟು ಅವನಿಗೆ ತೃಪ್ತಿಯಾಗುವ ದಾನವನ್ನಿತ್ತನು. ಅನಂತರ, ವಿಶ್ವಕರ್ಮನು ಆರು ತಿಂಗಳುಗಳಲ್ಲಿ ರಥದ ಒಂದು ಗಾಲಿಯನ್ನು ಮಾಡಿ ತಂದು ತೋರಿಸಿದನು. ರಾಜನು ನೋಡಿ ಕೋಪಗೊಂಡು ಅವನನ್ನು ಕೊಲ್ಲಲು ಯೋಚಿಸಿದನು. ಆಗ ವಿಶ್ವಕರ್ಮನು ಹೆದರಿ, ಆ ಗಾಲಿಯನ್ನು ರಾಜನ ಎದುರಿನಲ್ಲಿ ರತ್ನಮಯವಾದ ಜಗಲಿಯ ನೆಲದ ಮೇಲೆ ಎತ್ತಿಹಾಕಿ, ಪ್ರಾಣದ ಭಯದಿಂದ ಓಡಿ ಗುರುದತ್ತರಾಜನಲ್ಲಿಗೆ ಹೋದನು. ಆ ಗಾಲಿ ಹದಿನೈದು ದಿವಸಗಳವರೆಗೆ ತಾನೇ ತಾನಾಗಿ ಆಕಾಶದಲ್ಲಿದ್ದುಕೊಂಡು ನೆಲವನ್ನು ಮುಟ್ಟದೆ ತಿರ್‍ರನೆ ತಿರುಗುತ್ತಾ ಇತ್ತು. ಅದನ್ನು ಧಾತ್ರಿವಾಹನನು ಕಂಡು ವಿಶ್ವಕರ್ಮನ ಮೇಲೆ ಸಂತೋಷಗೊಂಡು 'ಅವನನ್ನು ಬೇಗನೆ ವಿಚಾರಿಸಿಕೊಂಡು ಬನ್ನಿ' ಎಂದು ಹೇಳಲು, ಅವನ ಬಳಿಯಲ್ಲಿದ್ದವರು ಹೀಗೆಂದರು–"ಆತನು ನಿಮಗೆ ಹೆದರಿ ಓಡಿಹೋಗಿ ಗುರುದತ್ತನ ಸೇವಕನಾಗಿದ್ದಾನೆ". ಇದನ್ನು ರಾಜನು ಕೇಳಿ ಗುರುದತ್ತನಲ್ಲಿಗೆ ತನ್ನ ಅಧಿಕಾರಿಗಳನ್ನು ಕಳುಹಿಸಿದನು. "ಕಪ್ಪ ಸಮೇತವಾಗಿ ನಮ್ಮ ಬಡಗಿಯನ್ನು ಬೇಗನೆ ಕಳುಹಿಸಿಕೊಡಲಿ– ಎಂದು ಹೋಗಿ ಹೇಳಿ" ಎಂದು ತಿಳಿಸಲು, ಆ ಅರಮನೆಯ ಅಧಿಕಾರಿಗಳು ಗುರುದತ್ತನಲ್ಲಿಗೆ ಹೋಗಿ, ತಮ್ಮ ರಾಜನು ಹೇಳಿದಂತೆ ಆ ಮಾತನ್ನು ತಿಳಿಸಿದರು. ಅದನ್ನು ಗುರುದತ್ತರಾಜನು ಕೇಳಿ ಬಹಳವಾಗಿ ಕೋಪಗೊಂಡು ಹೀಗೆಂದನು–"ನಾನು ಮಂಡಲವನ್ನಾಳುವ ರಾಜನಾಗಿದ್ದು ಬೇರೆಯವರಿಗೆ ಕಪ್ಪ ಕೊಡುವುದಾದರೆ, ಈ ಸಿಂಹಾಸನ, ಶ್ವೇತಚ್ಛತ್ರಗಳು, ಚಾಮರಗಳು, ಪಾಳಿಧ್ವಜಗಳು, ಪಂಚಮಹಾಶಬ್ದಗಳು, ಸೊಕ್ಕಿದ

ಪಂಚಮಹಾಶಬ್ದಂಗಳುಂ ಸೊಕ್ಕಾನೆಗಳುಂ ಜಾತ್ಯಶ್ವಂಗಳುಮೆಂಬೀ ಬಲಂಗಳಿಂ ಕಜ್ಜಮೇನೆಂದು ನಿಮ್ಮರಸಂಗೆ ಪೇಟಿಂ ತನ್ನ ಮಗಳಭಯಮತಿ ಕನ್ನೆವೆರಸು ತನ್ನ ಪಟ್ಟವರ್ಧನಮುಮಗ್ಗಳ ವಸ್ತುವಾಹನಂಗಳುಮಂ ಬೇಗಮಟ್ಟುಗಟ್ಟಿದಾಗಳ್ ತನ್ನ ತಲೆವೆರಸುಕೊಳ್ವೆನೆಂದು ಪೇಟಿ ಮೆಂದವರ ಪೆರ್ಗಡೆಗಳೊಳ್ ನುಡಿದು ನಿಮ್ಮ ಬಟಿಯನೆ ಆನುಂ ಪಯಣಂ ಬಂದಪ್ಪೆನೆಂದು ನುಡಿವವರ್ಗಳಂ ಪೋಗಲ್ವೇಟ್ಟವರ ಬಟಿಯನೆ ಪಿರಿದು ವಿಭೂತಿಯಿಂ ಚಾತುರ್ವಲಂ ಬೆರಸು ಪೊಱಮಟ್ಟು ಪಯಣಂ ಬೋಗಿ ಕತಿಪಯ ದಿವಸಂಗಳಿಂ ಚಂಪಾನಗರಮನೆಯ್ದಿ ಪೊಟಲಂ ಮೂವಳಸು ಬಳಸಿ ಮುತ್ತಿದಾಗಳ್ ಧಾತ್ರಿವಾಹನಂ ತನ್ನ ಸಮಸ್ತ ಸಾಧನಂ ಬೆರಸು ಪೊಱಮಟ್ಟೊಡ್ಡಣಮನೊಡ್ಡೆ ಬಿಲ್ ಬಿಲ್ಲೊಳ್ ಕುದುರೆ ಕುದುರೆಯೊಳ್ ರಥಂ ರಥದೊಳಣೆ ಯಣೆಯೊಳ್ ಘಟೆಯಾನೆ ಘಟೆಯಾನೆಯೊಳ್ ತಳ್ತು ತಾಗಿ ಪಲವು ದಿವಸಂ ಕಾದೆಯೊಂದು ದಿವಸಂ ಗುರುದತ್ತನೃಪತಿಯ ಪ್ರಧಾನನಪ್ಪ ಮಹಾಸಾಮಂತಂ ಮಹೇಂದ್ರದತ್ತನೆಂಬರಸ ನಾತನ ಮುಂಗಯ್ ಧಾತ್ರಿವಾಹನನ ಯೋಧನಿಂ ಚಕ್ರಪಾಣಿಯಿಂ ಖಂಡಿಸೆ ಪಟ್ಟುದಾಗಿ ನೆಲದೊಳ್ ಬಿರ್ದುದಂ ಪರ್ದು ಕಂಡು ಕೊಂಡಾಕಾಶದೊಳ್ ಪಾಱಿಪೋಗುತ್ತಮಭಯಮತಿ ತನ್ನ ಕನ್ಯಾಮಾಡದೆರಡನೆಯ ನೆಲೆಯ ಮುಂದಣ ಚವುಕಿಗೆಯ ಮೇಲೆ ದಾದಿಯುಂ ಸಖೀ

ಆನೆಗಳು, ಜಾತಿಯ ಕುದುರೆಗಳು, ಎಂಬೀ ಬಲಗಳಿಂದ ಏನು ಕೆಲಸವಿದೆ ?–ಎಂದು ನಿಮ್ಮೊಡೆಯನಿಗೆ ಹೇಳಿ. ತನ್ನ ಮಗಳಾದ ಅಭಯಮತಿ ಕನ್ಯೆಸಮೇತ ತನ್ನ ಪಟ್ಟದಾನೆ ಯನ್ನೂ ಶ್ರೇಷ್ಠ ವಸ್ತುವಾಹನಗಳನ್ನೂ ಬೇಗ ಕಳುಹಿಕೊಡಲಿ. ಕಳುಹದಿದ್ದರೆ ಅವನ ತಲೆ ಸಹಿತವಾಗಿ ಅವನ್ನು ತೆಗೆದುಕೊಳ್ಳುತ್ತೇನೆ–ಎಂದು ತಿಳಿಸಿರಿ.” ಹೀಗೆ ಅಧಿಕಾರಿಗಳಿಗೆ ಹೇಳಿ 'ನಿಮ್ಮೊಡನೆಯೇ ನಾನೂ ಪ್ರಯಾಣ ಬರುತ್ತೇನೆ' ಎಂದು ನುಡಿದು, ಅವರಿಗೆ ತೆರಳಲು ಆಜ್ಞೆಮಾಡಿದನು. ಅವರ ಒಟ್ಟಿಗೇ ಹೆಚ್ಚಿನ ವೈಭವದಿಂದ ಚತುರಂಗಸೇನೆ ಯೊಂದಿಗೆ ಹೊರಟು ಹೋಗಿ ಕೆಲವು ದಿನಗಳಲ್ಲಿ ಚಂಪಾನಗರಕ್ಕೆ ತಲಪಿ, ಪಟ್ಟಣವನ್ನು ಮೂರು ಬಳಸಾಗುವಂತೆ ಮುತ್ತಿದನು. ಆಗ ಧಾತ್ರಿವಾಹನನು ತನ್ನ ಎಲ್ಲಾ ಸೈನ್ಯ ವನ್ನೂ ಕೂಡಿ ಹೊರಟು, ಸೈನ್ಯವನ್ನು ಎದುರಿಗೆ ನಿಲ್ಲಿಸಿದನು. ಆಗ ಬಿಲ್ಲುಗಾರರು ಬಿಲ್ಲುಗಾರರೊಂದಿಗೂ ಕುದುರೆ ಕುದುರೆಯೊಂದಿಗೂ ರಥವು ರಥವೊಂದಿಗೂ ಸೈನ್ಯವು ಸೈನ್ಯದೊಂದಿಗೂ ಆನೆಗಳ ಸೈನ್ಯವು ಆನೆಗಳ ಸೈನ್ಯದೊಂದಿಗೂ ಮೇಲೆ ಬಿದ್ದು ಹಲವು ದಿವಸ ಕಾದಾಡಿದವು. ಒಂದು ದಿವಸ ಗುರುದತ್ತರಾಜನ ಪ್ರಧಾನ ಸಾಮಂತ ರಾಜನಾದ ಮಹೇಂದ್ರದತ್ತನ ಮುಂಗೈಯನ್ನು ಧಾತ್ರಿವಾಹನನ ಯೋಧನಾದ ಚಕ್ರಪಾಣಿ ಎಂಬವನು ತುಂಡರಿಸಿದನು. ತುಂಡಾದ ಮುಂಗೈ ನೆಲದ ಮೇಲೆ ಬಿದ್ದಿತು. ಅದನ್ನು ಒಂದು ಹದ್ದು ಕಂಡು, ತೆಗೆದುಕೊಂಡು ಆಕಾಶದಲ್ಲಿ ಹಾರಿಹೋಯಿತು. ಆಗ ಅಭಯ ಮತಿ ತನ್ನ ಕನ್ನೆವಾಡದ ಎರಡನೆಯ ಉಪ್ಪರಿಗೆಯ ಎದುರಿನ ಅಂಗಳದಲ್ಲಿ

ಜನಂಗಳ್ ಬೆರಸು ನಡಪಾಡುತ್ತಿರ್ದಳ ಮುಂದಾ ಕೆಯ್ಯುಂ ಪರ್ದು ತಂದಿಕ್ಕಿದೊಡದು ವಜ್ರ ವೈಢೂರ್ಯ ಪದ್ಮರಾಗ ಪುಷ್ಪರಾಗ ಸಸ್ಯ ಕರ್ಕೇತನ ಇಂದ್ರನೀಲಂ ಮೊದಲಾಗೊಡೆಯ ಅನರ್ಘ್ಯಮಪ್ಪ ಮಾಣಿಕದಿಂ ಸಮೆದ ಪಲವುಂ ನಾನಾಪ್ರಕಾರದ ಕಂಕಣಂಗಳುಮಂ ತೊಟ್ಟ ಮುಂಗಯ್ಯುಂ ಬೆರಲ್ಗಳುಂ ಶಂಖ ಚಕ್ರ ಪದ್ಮಾಂಕುಶ ಚಾಮರ ತೋರಣ ಪತಾಕಾದಿ ಶುಭ ಲಕ್ಷಣಾಂಕಿತಮಾಗಿ ಕೆಂದಾವರೆಯ ಬಣ್ಣದಂತಪ್ಪ ತಳಮುಮಂ ಕಂಡೀ ತಳಮನೊಡೆಯಾತಂ ಸಾಮಾನ್ಯ ಪುರುಷನಲ್ಲಂ ಪಿರಿಯರಸನಾಗಲವೇಟ್ಕುಮೆಂದು ಮತ್ತೀ ಕೆಯ್ಯೇಕೆ ಪಿಂಡಿಸಿ ಪರ್ದುದಬ್ಬಾ ಎಂದು ದಾದಿಯುಂ ಬೆಸಗೊಂಡೊಡಾಕೆಯಿಂತೆಂದಳ್ ಮಗಳೆ ನೀಂ ಕಾರಣಮಾಗಿ ಇಂತಪ್ಪವಯವಂಗಳನೊಡೆಯ ಅರಸುಗಳ್ ಪಲಂಬರುಂ ಸತ್ತಪರೆಂದೊಡಾಂ ಕಾರಣಮಾಗಿ ಏಕೆ ಸತ್ತಪರೆನಗದನಱಿಯೆ ಪೇೞಬ್ಬಾ ಎಂದೊಡಾ ದಾದಿಯಿಂತೆಂದು ಪೇೞ್ಗುಂ ಕುರುಜಾಂಗಣಮೆಂಬುದು ನಾಡದರ್ಕೆ ತಿಲಕಮನೆ ಪೋಲ್ವುದು ಹಸ್ತಿನಾಪುರಮೆಂಬುದು ಪೊೞಲದಾದಮಾನುಂ ಸೇವ್ಯಮಪ್ಪುದದನಾಳ್ವಾಂ ಗುರುದತ್ತನೆಂಬೊನರಸನಾತನತ್ಯಂತ ರೂಪ ಲಾವಣ್ಯ ಸೌಭಾಗ್ಯ ಕಾಂತಿ ದೀಪ್ತಿ ಧೃತಿ ಕೀರ್ತಿ ಶೌರ್ಯ ವೀರ್ಯ ಬಳಪರಾಕ್ರಮನೊಡೆಯೊಂ ನವಯೌವನಂ ಸಾಕ್ಷಾತ್

ದಾದಿಯರನ್ನೂ ಗೆಳತಿಯರನ್ನೂ ಕೂಡಿಕೊಂಡು ನಡೆದಾಡುತ್ತಿದ್ದಳು. ಅವಳ ಮುಂದೆ ಆ ಕೈಯನ್ನು ಹದ್ದು ತಂದಿಕ್ಕಿತು. ಆ ಕೈ ವಜ್ರ, ವೈಡೂರ್ಯ, ಪದ್ಮರಾಗ, ಪುಷ್ಯರಾಗ, ಸಸ್ಯ (?) ಕರ್ಕೇತನ (ಒಂದು ಬಗೆಯ ಸ್ಫಟಿಕಮಣಿ), ಇಂದ್ರನೀಲ—ಮೊದಲಾಗುಳ್ಳ ಅಮೂಲ್ಯವಾದ ಮಾಣಿಕ್ಯಗಳಿಂದ ಮಾಡಿದ ಹಲವು ಬೇರೆ ಬೇರೆ ರೀತಿಯ ಕೈಬಳೆಗಳನ್ನು ಧರಿಸಿಕೊಂಡಿರುವ ಮುಂಗೈಯೂ ಬೆರಳುಗಳೂ ಇದ್ದು ಶಂಖ, ಚಕ್ರ, ತಾವರೆ, ಅಂಕುಶ, ಚಾಮರ, ತೋರಣ, ಧ್ವಜ ಮುಂತಾದ ಶುಭಲಕ್ಷಣಗಳ ಗುರುತುಗಳುಳ್ಳದಾಗಿದ್ದಿತು. ಕೆಂಪುತಾವರೆಯ ಬಣ್ಣದ ಹಾಗಿರುವ ಅಂಗೈಯನ್ನೂ ಕಂಡು "ಈ ಅಂಗೈಯನ್ನುಳ್ಳವನು ಸಾಮಾನ್ಯನಾದ ಮನುಷ್ಯನಲ್ಲ ಶ್ರೇಷ್ಠನಾದ ರಾಜನೇ ಆಗಿರಬೇಕು" ಎಂದುಕೊಂಡಳು. ಆ ಮೇಲೆ "ಅಮ್ಮಾ ಈ ಕೈ ಯಾಕೆ ತುಂಡಾಗಿ ಬಿದ್ದಿದೆ?" ಎಂದು ಅಭಯ ಮತಿಯು ದಾದಿಯನ್ನು ಪ್ರಶ್ನಿಸಿದಳು. ಆಗ ದಾದಿಯು "ಮಗಳೇ, ನಿನ್ನ ಕಾರಣದಿಂದಲೇ, ಈ ರೀತಿಯ ಅಂಗೋಪಾಂಗಗಳಿರುವ ಹಲವರು ರಾಜರು ಸಾಯುತ್ತಿದ್ದಾರೆ" ಎನ್ನಲು ಅವಳು "ನನ್ನ ಕಾರಣದಿಂದ ಯಾಕೆ ಸಾಯುತ್ತಿದ್ದಾರೆ ? ನನಗೆ ಅದನ್ನು ತಿಳಿಯುವಂತೆ ಹೇಳು, ತಾಯೀ" ಎಂದಳು. ಆಗ ದಾದಿಯು ಈ ರೀತಿಯಾಗಿ ಹೇಳಿದಳು—ಕುರು ರಾಜಾಂಗಣವೆಂಬ ನಾಡಿದೆ. ಆ ನಾಡಿನ ತಿಲಕದಂತೆ ಇರತಕ್ಕ ಹಸ್ತಿನಾಪುರವೆಂಬ ಪಟ್ಟಣವು ಅತಿಶಯವಾಗಿ ಸೇವ್ಯವಾಗಿದೆ. ಅದನ್ನು ಗುರುದತ್ತನೆಂಬ ರಾಜನು ಆಳುತ್ತಿರುವನು. ಅವನು ಅತಿಶಯವಾದ ರೂಪ, ಲಾವಣ್ಯ, ಕಾಂತಿ, ತೇಜಸ್ಸು, ಧೈರ್ಯ ಗುಣ, ಕೀರ್ತಿ, ಶೂರತ್ವ, ವೀರತ್ವ, ಬಲ, ಪರಾಕ್ರಮಗಳುಳ್ಳವನಾಗಿ ಹೊಸ ತಾರುಣ್ಯ

ಕಾಮದೇವನೆ ಆದಮಾನುಂ ಪ್ರಚಂಡ ದೋರ್ದಂಡನುಂ ಬಲಗರ್ವಿತನುಂ ಪರಮಂಡಲಂಗಳಂ ಪಲವುಮನಿಱಿದೊಟ್ಟಯಿಸಿ ಕೊಂಡಾಳ್ವಪ್ಪೊನಂತಪ್ಪಾತಂ ನಿನ್ನಂ ಬೇಡಿ ಪಾಗುಡಂಗಳಂ ಪೆರ್ಗಡೆಗಳುಮಂ ಪಲವು ಸೂೞಟ್ಟಿದೊಡಂ ನಿಮ್ಮಮ್ಮಂ ನಿನ್ನಂ ಕುಡಲೊಲ್ಲದಿರ್ದೊಡೆ ಮುನಿದಾತನ ತಲೆವೆರಸು ಕೂಸಂ ಕೊಳ್ವೆನೆಂದು ಗರ್ಜಿಸಿ ಪ್ರಳಯಕಾಲದ ಸಮುದ್ರಂ ಮೇರೆದಪ್ಪಿದಂತೆ ಚಾತುರ್ದಂತ ಬಲಂ ಬೆರಸು ಬಂದು ಪೊೞಲಂ ಮೂವಳಸಾಗಿ ಮುತ್ತಿದೊಡೆ ನಿಮ್ಮರಸಂ ತನ್ನುಳ್ಳ ಬಲಂ ಬೆರಸು ಪೊಱಮಟ್ಟೊಡ್ಡಿ ನಿಂದನಿಂತೆರಡುಂ ಪಡೆಗಳಿಂದಿಂಗೇೞು ದಿವಸಂ ಕಾದಿದಪ್ಪುದು ಸಾಮಂತ ಮಹಾಸಾಮಂತರ್ ಮೊದಲಾಗಿ ಪಲಂಬರುಮರಸುಮಕ್ಕಳ್ ಸತ್ತರಾನೆ ಕುದುರೆ ಪದಾತಿ ಸತ್ತುದರ್ಕೆ ಪ್ರಮಾಣಂ ಮೇರೆಯುಮಿಲ್ಲ ಮಹಾಘೋರತರಂ ಕಾಳೆಗಮಾಗಿರ್ಕುಮೆಂದು ಪೇೞ್ದೊಡದಂ ಕೇಳ್ದಂತಪ್ಪೊಡಬ್ಬಾ ನೀಮರಸನಲ್ಲಿಗೆ ಪೋಗಿ ಇಂತೆಂದು ನುಡಿಯಿಂ ನಿಮ್ಮ ಮಗಳಿಂತೆಂದು ಪೇೞ್ದಟ್ಟಿದೊಳೆನ್ನಂ ಗುರುದತ್ತಂಗೆ ಕುಡುವೊಡೆ ಕುಡುಗೆ ಯುೞಿದ ಪುರುಷರ್ಕಳೆಲ್ಲಂ ಮೊಱೆಯಲ್ಲದವರೆನಗೆ ತಮ್ಮ ಮೆಚ್ಚಲ್ಲದಾಗಳೀಗಳೆ ತಪಂಬಡುವೆನೆಂದಟ್ಟಿದೊಳೆಂದಭಯಮತಿ ಕಲ್ಪಿಸಿದ ಮಾತೆಲ್ಲಮನರಸಂಗೆ ದಾದಿ ಪೇೞ್ದೊಡೆ ಅರಸನುಂ

•

ದಿಂದ ಪ್ರತ್ಯಕ್ಷವಾದ ಮನ್ಮಥನಂತೆ ಇದ್ದಾನೆ. ಬಹಳ ಭಯಂಕರವಾದ ಭುಜದಂಡವುಳ್ಳವನೂ ಶಕ್ತಿಯಿದೆಯೆಂಬ ಗರ್ವದಿಂದ ಕೂಡಿದವನೂ ಶತ್ರುಗಳೊಡನೆ ಕಾದಿ ಅವರ ರಾಜ್ಯಗಳನ್ನು ಒಂದುಗೂಡಿಸಿ ಆಳುತ್ತಿರುವನು. ಅಂತಹ ಆತನು ನಿನ್ನನ್ನು ಅಪೇಕ್ಷಿಸಿ ಕಾಣಿಕೆಗಳ ಸಮೇತ ಅಧಿಕಾರಿಗಳನ್ನು ಹಲವು ಬಾರಿ ಕಳುಹಿಸಿದರೂ ನಿನ್ನ ತಂದೆ ನಿನ್ನನ್ನು ಅವನಿಗೆ ಕೊಡಲು ಒಪ್ಪಲಿಲ್ಲ. ಇದರಿಂದ ಗುರುದತ್ತನು ಕೋಪಗೊಂಡು ಆತನ (ನಿನ್ನ ತಂದೆಯ) ತಲೆ ಸಮೇತ ಕನ್ಯೆಯನ್ನು (ನಿನ್ನನ್ನು) ವಶಮಾಡುವೆನೆಂದು ಗರ್ಜಿಸಿ ಪ್ರಳಯಕಾಲದ ಸಮುದ್ರವೇ ಮೇರೆದಪ್ಪಿ ಹರಿಯಿತೋ ಎಂಬಂತೆ ಚತುರಂಗ ಸೈನ್ಯ ಸಮೇತನಾಗಿ ಬಂದು ಪಟ್ಟಣವನ್ನು ಮೂರು ಸುತ್ತಾಗಿ ಮುತ್ತಿಗೆ ಹಾಕಿದ್ದಾನೆ. ನಿಮ್ಮ ರಾಜನು (ತಂದೆ) ತನ್ನಲ್ಲಿರತಕ್ಕ ಸೈನ್ಯದೊಡನೆ ಹೊರಟು ಯುದ್ಧಕ್ಕೆ ಸೈನ್ಯವನ್ನೊಡ್ಡಿ ನಿಂತಿದ್ದಾನೆ. ಹೀಗೆ ಎರಡೂ ಸೈನ್ಯಗಳು ಇಂದಿಗೆ ಏಳು ದಿವಸಗಳಿಂದ ಕಾದಾಡುತ್ತಿವೆ. ಸಾಮಂತರು ಮಹಾಸಾಮಂತರು ಮೊದಲಾಗಿ ಹಲವರು ರಾಜಕುಮಾರರು ಸತ್ತುಹೋದರು. ಆನೆ, ಕುದುರೆ, ಕಾಲಾಳುಗಳು ಸತ್ತುದಕ್ಕೆ ಲೆಕ್ಕವೂ ಇಲ್ಲ, ಮೇರೆಯೂ ಇಲ್ಲ. ಬಹಳ ಭಯಂಕರವಾದ ಯುದ್ಧವಾಗುತ್ತಿದೆ — ಎಂದು ದಾದಿ ಹೇಳಿದಳು. ಅದನ್ನು ಆಕೆ ಕೇಳಿ, ಅವ್ವಾ, ನೀವು ರಾಜನ ಬಳಿಗೆ ಹೋಗಿ ಹೀಗೆನ್ನಿರಿ– "ನಿಮ್ಮ ಮಗಳು ನನ್ನೊಡನೆ ಹೀಗೆ ಹೇಳಿ ಕಳುಹಿಸಿರುತ್ತಾಳೆ– ನನ್ನನ್ನು ಗುರುದತ್ತನಿಗೆ ಕೊಡುವುದಾದರೆ ಕೊಡಲಿ. ಉಳಿದ ಗಂಡಸರೆಲ್ಲರೂ ಸಂಬಂಧಕ್ಕೆ ಆಗದವರು. ನನಗೆ ಅವನು ತನ್ನ ದೃಷ್ಟಿಯಿಂದ ಮೆಚ್ಚಿಲ್ಲವಾದರೆ, ಈಗಲೇ ತಪಸ್ಸನ್ನು ಕೈಕೊಳ್ಳುವೆನು- ಎಂದು ಹೇಳಿ ನನ್ನನ್ನು ಕಳುಹಿಸಿದ್ದಾಳೆ". ಹೀಗೆ ಅಭಯಮತಿ

ಕೇಳ್ದು ತನ್ನ ಪ್ರಧಾನರಪ್ಪ ನಾಲ್ವರುಂ ಪೆರ್ಗಡೆಗಳಂ ಕಲ್ಪಿಸಿ ಗುರುದತ್ತನಲ್ಲಿಗೆ ಕೂಸಂ ಕೊಟ್ಟೆ ನೆಂದಟ್ಟಿದೊಡಾತನುಂ ತನ್ನ ಬಲಮಂ ಕಾದಲೀಯದೆ ಬಾರಿಸಿದಂ ಧಾತ್ರಿವಾಹನನುಂ ತನ್ನ ಬಲಮಂ ಬಾರಿಸಿದನಿಂತೆರಡುಂ ಪಡೆಗಳ್ ಸಂಗ್ರಾಮಮನುಪಸಂಹರಿಸಿ ಸತ್ತವರ್ಗ್ಗೆ ನೊಂದವರ್ಗ್ಗೆ ತಕ್ಕ ವಿಧಿಯಂ ಮಾಡಿದ ಬಳಿಕ್ಕೆ ಕೆಲವು ದಿವಸದಿಂ ಪ್ರಶಸ್ತ ದಿವಸ ವಾರ ನಕ್ಷತ್ರದಿಂ ಹೋರಾ ಮುಹೂರ್ತದೊಳ್ ಕೂಸಿನನುಕೂಲದೊಳ್ ಮಹಾವಿಭೂತಿಯಿಂ ಪಾಣಿಗ್ರಹಣ ಪುರಸ್ಸರಮಭಯಮತಿ ಕನ್ನೆಯುಂ ಗುರುದತ್ತ ನೃಪತಿಗೆ ಕೊಟ್ಟು ಸನ್ಮಾನದಾನಾದಿಗಳಿಂದಾತನಂ ಪೂಜಿಸಿದನಾತನುಂ ಚಂಪಾನಗರದೊಳ್ ಪಲವು ದಿವಸಮಿರ್ದ್ದಿನ್ನೆಮ್ಮ ನಾಡಿಂಗೆ ಪೋಪಮೆಂದರಸನಂ ಬೆಸಗೊಳಲಟ್ಟಿದೊಡರಸನುಂ ಕೂಸಿಂಗೆ ತಕ್ಕ ಪೆಂಡವಾಸದ ಪಲಂಬರುಮಗ್ಗಳದ ಸೂಳೆಯರ್ಕಳುಮಂ ಕರಿಕರಿಣಿ ತುರಗಾಶ್ವ ರಥ ಶಿಬಿಕಾದ್ಯನೇಕ ವಾಹನಂಗಳುಮಂ ಮುತ್ತಿನ ಮಾಣಿಕದ ಪೊನ್ನ ಮೂದೆಖಿದ ಪಲವುಂ ನಾನಾಪ್ರಕಾರದನರ್ಘ್ಯಮಪ್ಪ ತುಡುಗೆಗಳುಮಂ ಬಳಿವಳಿಗೊಟ್ಟವರ್ಗಳುಮಂ ಪರಸಿಯವರನಾಡಿಂಗೆ ಕಳಿಪಿದಂ ಮತ್ತೆ ಗುರುದತ್ತ ನೃಪತಿಯುಂ ಕತಿಪಯ ದಿವಸಂಗಳಿಂ ತನ್ನ ಪೊೞಲಂ ಹಸ್ತಿನಾಪುರಮನೆಯ್ದಿ ಮಹಾವಿಭೂತಿಯಿಂ ಪೊಕ್ಕಿರ್ದಿಪ್ಪವಿಷಯ

ಹೇಳಿಕೊಟ್ಟ ಮಾತನ್ನೆಲ್ಲ ದಾದಿಯು ಅರಸನಿಗೆ ಹೇಳಿದಳು. ಅರಸನು ಕೇಳಿ, ತನ್ನ ಮುಖ್ಯಸ್ಥರಾದ ನಾಲ್ಕು ಮಂದಿ ಅಧಿಕಾರಿಗಳಿಗೆ ಸಂಗತಿಯನ್ನು ತಿಳಿಸಿ, 'ಕನ್ಯೆಯನ್ನು ಗುರುದತ್ತನಿಗೆ ಕೊಡುತ್ತೇನೆ' ಎಂದು ಅವರನ್ನು ಗುರುದತ್ತನಲ್ಲಿಗೆ ಕಳುಹಿಸಿದನು. ಇದರಿಂದ ಗುರುದತ್ತನು ತನ್ನ ಸೈನ್ಯವು ಯುದ್ಧಮಾಡದಂತೆ ತಡೆದನು. ಧಾತ್ರಿವಾಹನನೂ ತನ್ನ ಸೈನ್ಯವನ್ನು ತಡೆದನು. ಹೀಗೆ ಎರಡೂ ಸೈನ್ಯಗಳು ಯುದ್ಧವನ್ನು ನಿಲ್ಲಿಸಿ, ಸತ್ತವರಿಗೂ ನೊಂದವರಿಗೂ ತಕ್ಕುದಾದ ವಿಧಿಯನ್ನು ಮಾಡಿದನಂತರ ಕೆಲವು ದಿವಸಗಳು ಕಳೆಯಲು ಧಾತ್ರಿವಾಹನನು ಶುಭಕರವಾದ ದಿನ, ವಾರ, ನಕ್ಷತ್ರ, ಹೋರೆ, ಮುಹೂರ್ತದಲ್ಲಿ ಕನ್ಯೆಯ ಅನುಕೂಲದಂತೆ ಬಹಳ ವೈಭವದಿಂದ ಕರಗ್ರಹಣ ಪೂರ್ವಕವಾಗಿ ಅಭಯಮತಿ ಕನ್ಯೆಯನ್ನು ಗುರುದತ್ತ ರಾಜನಿಗೆ ಕೊಟ್ಟನು. ಅವನನ್ನು ಸನ್ಮಾನ ದಾನ ಮುಂತಾದವುಗಳಿಂದ ಸತ್ಕರಿಸಿದನು. ಗುರುದತ್ತನು ಚಂಪಾನಗರದಲ್ಲಿ ಹಲವು ದಿವಸ ಇದ್ದು "ಇನ್ನು ನಮ್ಮ ನಾಡಿಗೆ ಹೋಗೋಣ" ಎಂದು ಧಾತ್ರಿವಾಹನ ರಾಜನನ್ನು ಕೇಳಿ ಅನುಮತಿ ಪಡೆಯಲು ಹೇಳಿ ಕಳುಹಿಸಿದನು. ರಾಜನು ತನ್ನ ಮಗಳಿಗೆ ಯೋಗ್ಯವಾದ ರಾಣೀವಾಸದ ಹಲವರು ಶ್ರೇಷ್ಠರಾದ ದಾಸಿಯರನ್ನೂ ಆನೆ, ಹೆಣ್ಣಾನೆ, ವೇಗವಾಗಿ ಓಡುವ ಕುದುರೆ, ರಥ, ಪಲ್ಲಕ್ಕಿ–ಮುಂತಾದ ಅನೇಕ ವಾಹನಗಳನ್ನೂ ಮುತ್ತು, ಮಾಣಿಕ್ಯ, ಚಿನ್ನ–ಈ ಮೂರು ವಿಧದ ಹಲವು ಹಲವಾರು ರೀತಿಯ ಅಮೂಲ್ಯವಾದ ಆಭರಣಗಳನ್ನೂ ಬಳುವಳಿ ಕೊಟ್ಟು ಇಬ್ಬರನ್ನೂ ಆಶೀರ್ವದಿಸಿ, ಅವರ ನಾಡಿಗೆ ಕಳುಹಿಸಿದನು. ಆಮೇಲೆ, ಗುರುದತ್ತ ರಾಜನು ಕೆಲವು ದಿವಸಗಳಲ್ಲಿ ತನ್ನ ಪಟ್ಟಣವಾದ ಹಸ್ತಿನಾಪುರಕ್ಕೆ ಹೋಗಿ ಬಹಳ

ಕಾಮಭೋಗಂಗಳಂ ಪಲಕಾಲಮಭಯಮತಿಯೊಳ್ ಅನುನಯದಿಂದನುಭವಿಸುತ್ತಿರೆಯಾಕೆಗೆ ಸುವರ್ಣಭದ್ರನೆಂಬೊಂ ಮಗಂ ಪುಟ್ಟಿದನಿಂತು ಸಂತೋಷದಿಂ ಕಾಲಂ ಸಲೆ ಮತ್ತೊಂದು ದಿವಸಂ ಹಸ್ತಿನಾಪುರದ ಸಾರೆ ಧರಣಿಭೂಷಣಮೆಂಬ ಪರ್ವತದೊಳಮೃತಾಸ್ರವರೆಂಬ ಗುರುಗಳುಂ ಅಯ್ನೂರ್ವರ್ ಋಷಿಯರಿರ್ದರೆಂಬುದಂ ಕೇಳ್ದು ಪುತ್ರ ಮಿತ್ರ ಕಳತ್ರ ಪರಿವಾರ ಸಮೇತಂ ವಂದನಾ ಭಕ್ತಿಗೆ ಪೋಗಿ ಗೆಂಟಱ್ಗೊಳ್ ವಾಹನಂಗಳಿಂದಿೞಿದು ಬಲಗೊಂಡು ಬಂದರ್ಚಿಸಿ ಗುರುಭಕ್ತಿಗೆಯ್ದು ಭಟಾರರಂ ಬಂದಿಸಿಯುೞಿದ ಋಷಿಯರ್ಕಳುಮಂ ಗುರುಪರಿವಿಡಿಯಿಂದಂ ಬಂದಿಸಿ ಪಿರಿದು ಬೇಗಂ ಧರ್ಮಮಂ ಕೇಳ್ದು ತದನಂತರಮಿಂತೆಂದು ಬೆಸಗೊಂಡಂ ಭಟಾರಾ ಎನ್ನ ಮುನ್ನಿನ ಭವಂಗಳೆನಗಱಿಯೆ ಬೆಸಸಿಮೆನೆ ಭಟಾರರಿಂತೆಂದು ಪೇೞ್ದರೀ ಭವದಿಂ ತೊಟ್ಟು ನಾಲ್ಕನೆಯ ಭವದಂದು ನೀಂ ಸಾವಸ್ತಿಯೆಂಬ ಪೊೞಲೊಳ್ ಉಪರಿಚರನೆಂಬ ಮಂಡಳಿಕನಯ್ ಜಲಕ್ರೀಡೆಯಾಡುತ್ತಿರ್ಪನ್ನೆಗಂ ವಜ್ರದಾಡನೆಂಬ ವಿದ್ಯಾಧರನಿಂ ಕೊಲೆಪಟ್ಟೆಯಾಗಿ ಸತ್ತಾ ಪೊೞಲೊಳ್ ಪೆರ್ವಾವಾಗಿ ಪುಟ್ಟಿದೆಯಲ್ಲಿಂದಂ ಸತ್ತು ಭವನವಾಸಿಗಲೋಕದೊಳ್ ಧರಣೇಂದ್ರನಾಗಿ ಪುಟ್ಟಿದೆಯಲ್ಲಿಂ ಬಂದೀಗಳ್ ಗುರುದತ್ತನೆಯಾದೆಯೆಂದು

ವೈಭವದಿಂದ ಪ್ರವೇಶಿಸಿ, ಅಭಯಮತಿಯೊಂದಿಗೆ ಮೆಚ್ಚುಗೆಯಾದ ವಿಷಯದ ಇಚ್ಛೆಯ ಸುಖಗಳನ್ನು ಹಲವು ಕಾಲ ಮನಸ್ಸಿಗೊಪ್ಪುವಂತೆ ಅನುಭವಿಸುತ್ತ ಇದ್ದನು. ಹೀಗಿರಲು ಆಕೆಗೆ ಸುವರ್ಣಭದ್ರನೆಂಬ ಮಗನು ಹುಟ್ಟಿದನು. ಹೀಗೆ ಸಂತೋಷದಿಂದ ಕಾಲ ಕಳೆಯುತ್ತಿದ್ದಿತು. ಅನಂತರ, ಒಂದು ದಿವಸ ಹಸ್ತಿನಾಪುರದ ಬಳಿಯ ಧರಣಿ ಭೂಷಣವೆಂಬ ಪರ್ವತದಲ್ಲಿ ಅಮೃತಾಸ್ರವರೆಂಬ ಗುರುಗಳೂ ಐನೂರು ಮಂದಿ ಋಷಿಗಳೂ ಇದ್ದಾರೆ ಎಂಬುದನ್ನು ಕೇಳಿ, ಗುರುದತ್ತ ರಾಜನು ತನ್ನ ಪುತ್ರ ಮಿತ್ರ ಪತ್ನೀ ಪರಿವಾರವನ್ನು ಕೂಡಿಕೊಂಡು ಭಕ್ತಿಯಿಂದ ವಂದಿಸುವುದಕ್ಕಾಗಿ ಹೋದನು. ದೂರದಲ್ಲಿಯೇ ವಾಹನಗಳಿಂದ ಇಳಿದು ಪ್ರದಕ್ಷಿಣೆ ಬಂದು ಪೂಜಿಸಿ, ಗುರು ಭಕ್ತಿಯನ್ನು ಮಾಡಿ, ಋಷಿಗಳನ್ನು ವಂದಿಸಿ ಉಳಿದ ಋಷಿಗಳನ್ನೂ ಗುರುತ್ವದ ಅನುಕ್ರಮದಿಂದ ನಮಸ್ಕರಿಸಿ ಬಹಳ ಹೊತ್ತಿನವರೆಗೆ ಧರ್ಮಶ್ರವಣವನ್ನು ಮಾಡಿದನು. ಆಮೇಲೆ ಅವರೊಡನೆ– "ಪೂಜ್ಯರೇ, ನನ್ನ ಹಿಂದಿನ ಜನ್ಮಗಳ ವಿಚಾರವನ್ನು ನನಗೆ ತಿಳಿಯುವಂತೆ ಅಪ್ಪಣೆ ಕೊಡಿ" ಎಂದನು. ಆಗ ಋಷಿಗಳು ಹೀಗೆಂದರು. "ನೀನು ಈ ಜನ್ಮದಿಂದ ತೊಡಗಿ ಹಿಂದೆ ನಾಲ್ಕನೆಯ ಜನ್ಮದಲ್ಲಿ ಸಾವಸ್ತಿ ಎಂಬ ಪಟ್ಟಣದಲ್ಲಿ ಉಪರಿಚರನೆಂಬ ಮಾಂಡಳಿಕನಾಗಿದ್ದಿ. ನೀನು ನೀರಿನಲ್ಲಿ ಆಡುತ್ತಿದ್ದ ವೇಳೆಯಲ್ಲಿ ವಜ್ರದಾಡನೆಂಬ ವಿದ್ಯಾಧರನು ನಿನ್ನನ್ನು ಕೊಂದನು. ಹಾಗೆ ಸತ್ತು ಆ ಪಟ್ಟಣದಲ್ಲಿ ಹೆಬ್ಬಾವಾಗಿ ನೀನು ಹುಟ್ಟಿದೆ. ಆಮೇಲೆ ಸತ್ತು ಭವನವಾಸಿಗಳ ಲೋಕದಲ್ಲಿ ಧರಣೇಂದ್ರನಾಗಿ ಹುಟ್ಟಿರುತ್ತೀಯೆ. ಅಲ್ಲಿಂದ ಬಂದು ಈಗ ಈ ಜನ್ಮದಲ್ಲಿ ನೀನು ಗುರುದತ್ತನೆಂಬವನಾಗಿರುವೆ." ಋಷಿಗಳು

ಆತನ ನಾಲ್ಕು ಭವಂಗಳಂ ಸವಿಸ್ತರಂ ಭಟಾರರ್ ಪೇೞೆ ಕೇಳ್ದಾದಮಾನುಂ ವೈರಾಗ್ಯಮನೊಡೆಯೊನಾದೊಂ ಮತ್ತಭಯಮತಿಯುಂ ಎನ್ನ ಭವಮುಮಂ ಭಟಾರಾ ಎನಗೆ ಬೆಸಸಿಮೆಂದು ಬೆಸಗೊಂಡೊಡೆ ಭಟಾರರಿಂತೆಂದು ಪೇೞ್ದರ್ ಚಂಪಾನಗರದೊಳೊರ್ವಂ ಪುಳುಂಗಾಱಂ ಗರುಡವೇಗನೆಂಬೊನಾತಂಗೆ ನೀಂ ಮುನ್ನಿನ ಭವದೊಳ್ ಪೆಂಡತಿಯುಯ್ ಗೋಮತಿಯೆಂಬೆಯೊಂದು ದಿವಸಂ ಸಮಾಧಿಗುಪ್ತರೆಂಬ ಭಟಾರರ್ ಪಲಂಬರ್ ರಿಸಿಯರ್ವೆರಸ್ ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ ವಿಹಾರಿಸುತ್ತಂ ಚಂಪಾನಗರಕ್ಕೆವಂದೊಡವರ ಪಕ್ಕದೆ ನೀಂ ಪೋಗಿ ಧರ್ಮಮಂ ಕೇಳ್ದು ಕೊಲ್ಲದ ಕಳ್ಳದ ಮಧು ಮದ್ಯಮಾಂಸಂಗಳುಮಯ್ದು ಪಾಲ್ಮರನ ಪಣ್ಣುಂ ಗಿಣ್ಣುಮಾಳಂಬೆಯುಂ ಇಂತಿವೆಲ್ಲಮಂ ತಿನ್ನದ ಬ್ರತಗಳುಮಂ ಕೈಕೊಂಡು ಭಟಾರರಂ ವಂದಿಸಿ ಮನೆಗೆ ಪೋಗೆಯುನ್ನೆಗಂ ನಿನ್ನ ಭರ್ತಾರಂ ಬೇಂಟೆಯಾಡಿ ಪಲವುಂ ಲಾವುಗೆಯುಂಕೆ ಕೊರಸುಂ ಮೊದಲಾಗೊಡೆಯ ಪಕ್ಷಿಜಾತಿಗಳಂ ಬಲೆಯನೊಡ್ಡಿ ಪಿಡಿದು ಕಟ್ಟಿ ಬಾೞೆವಾೞೆ ಮನೆಯೊಳ್ ತಂದಿಟ್ಟು ಮತ್ತೆ ಬೇಂಟೆಗೆ ಪೋದನನ್ನೆಗಂ ನೀನವಂ ಕಂಡು ಕಾರುಣ್ಯಭಾವದಿಂದನಿತುಮಂ ಬಿಟ್ಟು ಕಳೆದೊಡವು ಪಾಱೆ

ಈ ರೀತಿಯಾಗಿ ಅವನ ನಾಲ್ಕು ಜನ್ಮಗಳ ಸಂಗತಿಯನ್ನು ವಿಸ್ತಾರವಾಗಿ ತಿಳಿಸಿದರು. ಅದನ್ನು ಕೇಳಿ ಗುರುದತ್ತನು ಅತ್ಯಂತ ವೈರಾಗ್ಯವುಳ್ಳವನಾದನು. ಆಮೇಲೆ ಅಭಯಮತಿ ಅಮೃತಾಸ್ರವ ಮುನಿಗಳೊಡನೆ, "ಪೂಜ್ಯರೇ, ನನ್ನ ಪೂರ್ವ ಜನ್ಮ ವೃತ್ತಾಂತವನ್ನೂ ನನಗೆ ತಿಳಿಸಿರಿ" ಎಂದು ಕೇಳಲು, ಋಷಿಗಳು ಹೀಗೆಂದರು— "ಚಂಪಾನಗರದಲ್ಲಿ ಗರುಡವೇಗನೆಂಬ ಹಕ್ಕಿಗಳನ್ನು ಹಿಡಿವವನೊಬ್ಬನು ಇದ್ದನು. ಹಿಂದಿನ ಜನ್ಮದಲ್ಲಿ ನೀನು ಗೋಮತಿ ಎಂಬವಳಾಗಿದ್ದು ಗರುಡವೇಗನ ಹೆಂಡತಿಯಾಗಿದ್ದೆ. ಒಂದು ದಿವಸ ಸಮಾಧಿಗುಪ್ತರೆಂಬ ಋಷಿಗಳು ಹಲವು ಮಂದಿ ಋಷಿಗಳನ್ನು ಕೂಡಿಕೊಂಡು ಗ್ರಾಮ, ನಗರ, ಖೇಡ, ಖರ್ವಡ, ಮಡಂಬ, ಪಟ್ಟಣ, ದ್ರೋಣಾಮುಖಗಳಲ್ಲಿ ಸಂಚಾರಮಾಡುತ್ತ ಚಂಪಾನಗರಕ್ಕೆ ಬಂದರು. ನೀನು ಅವರ ಬಳಿಗೆ ಹೋಗಿ ಅವರ ಸಮೀಪ ಧರ್ಮವಿಚಾರವನ್ನು ಕೇಳಿದೆ. ಕೊಲ್ಲದಿರುವ, ಕಳವು ಮಾಡದಿರುವ, ಜೇನು-ಹೆಂಡ-ಮಾಂಸಗಳು ಐದು ಬಗೆಯ ಹಾಲುಮರಗಳ ಹಣ್ಣು, ಹಸು ಕರುಹಾಕಿದ ಹೊಸತರಲ್ಲಿ ಕೊಡತಕ್ಕ ಗಿಣ್ಣದ ಹಾಲು, ಆಳಂಬೆ (ನಾಯಿಕೊಡೆ)—ಇವೆಲ್ಲವನ್ನು ತಿನ್ನದಿರುವ ವ್ರತಗಳನ್ನು ಸ್ವೀಕರಿಸಿ ಋಷಿಗಳನ್ನು ವಂದಿಸಿ ಮನೆಗೆ ಹೋಗಿರುವ ವೇಳೆಗೆ ನಿನ್ನ ಗಂಡನು ಬೇಟೆಯಾಡಿ ಮನೆಗೆ ಬಂದಿದ್ದನು. ಅವನು ಹಲವು ಲಾವಗೆ, ಉಂಕೆ (ಒಂದು ಬಗೆಯ ಹಕ್ಕಿ), ಕೊರಸು–ಮುಂತಾದ ಹಕ್ಕಿಯ ಜಾತಿಗಳನ್ನು ಬಲೆಹಾಕಿ ಹಿಡಿದು, ಕಟ್ಟಿ ಬದುಕಿಕೊಂಡಿದ್ದ ಹಾಗೆಯೇ ಮನೆಗೆ ತಂದು ಇಟ್ಟು ಮತ್ತೆ ಬೇಟೆಗೆ ಹೋದನು. ಅಷ್ಟರಲ್ಲಿ ನೀನು ಆ ಹಕ್ಕಿಗಳನ್ನು ಕಂಡು ದಯಾಭಾವನೆಯಿಂದ ಅವಷ್ಟನ್ನೂ ಬಿಟ್ಟು ಬಿಟ್ಟೆ. ಆಗ ಅವು ಹಾರಿಹೋದುವು. ಆಮೇಲೆ ನಿನ್ನ ಗಂಡನು

ಪೋದವು ಮತ್ತೆ ನಿನ್ನ ಭರ್ತಾರಂ ಬಂದು ಪಕ್ಕಿಗಳಂ ಕಾಣದೆ ಬಿಟ್ಟು ಕಳೆದರಾರೆಂದು ಬೆಸ ಗೊಂಡೊಡಾಂ ಬಿಟ್ಟು ಕಳೆದೆನೆಂದೊಡೆ ಇಂತಪ್ಪ ಧರ್ಮಾರ್ಥಿಯೆನ್ನ ಮನೆಯೊಳಿರಲ್ವೇಡೆಂದು ಬಯ್ದು ಪೊಯ್ದುಟ್ಟಿಕಳೆದೊಂ ನೀನುಂ ಮನೆಯಿಂದಂ ಪೊಱಮಟ್ಟು ಪೋಗಿ ನಂಟರ ಮನೆ ಯೊಳಿರ್ದೆಯನ್ನೆಗವೊಂದು ದಿವಸಮಾ ಚಂಪಾಪುರವನಾಳ್ವೊಂ ಧಾತ್ರಿವಾಹನನನೆಂಬೊನರಸನು ಮಾತನ ಮಹಾದೇವಿ ಶ್ರೀಮತಿಯುಮಂತಿರ್ವರುಂ ಮಹಾವಿಭೂತಿಯಿಂ ಪೊಟಲಂ ಪೊಱ ಮಟ್ಟವರ ಶ್ರೀಯುಂ ವಿಭೂತಿಯುಮಂ ಕಂಡಿವರ್ಗಾಂ ಪುಟ್ಟಿದೊಡೊಳ್ಳಿತ್ತೆಂದು ಮನದೊಳ್ ಬಗೆದಿರ್ದು ಕೆಲವು ದಿವಸದಿಂ ಸತ್ತು ಶ್ರೀಮತಿಯ ಗರ್ಭದೊಳ್ ನೆಲೆಸಿರೆಯಾಕೆಗೆಲ್ಲಾ ಜೀವಂ ಗಳಂ ದಯೆಗೆಯ್ವ ಬಯಕೆಯಾದುದರಸಂ ಕೇಳ್ದು ತನ್ನ ಪೊಟಲೊಳಂ ನಾಡೊಳಮಾರಪ್ಪೊಡಂ ಜೀವಂಗಳಂ ಕೊಲ್ಲದಂತು ಗೋಸನೆಗಳೆಯಿಸಿದನದು ಕಾರಣದಿಂ ನಿನಗಭಯಮತಿಯೆಂದಾ ತಾಯುಂ ತಂದೆಯುಂ ಪೆಸರನಿಟ್ಟು ಬಾಟ್ದರ್ ಎಂದಿರ್ವರ ಭವಂಗಳುಮಂ ಭಟಾರರ್ ಪೇಟಿಂದು ದರಸನುಮರಸಿಯುಂ ಕೇಳ್ದು ಸಂಸಾರ ಶರೀರ ಭೋಗ ವೈರಾಗ್ಯಮನೊಡೆಯರಾಗಿ ಶ್ರೀದತ್ತ ನೆಂಬ ಪಿರಿಯ ಮಗಂಗೆ ರಾಜ್ಯ ಪಟ್ಟಂಗಟ್ಟಿ ಪಲಂಬರರಸುಮಕ್ಕಳ್ವೆರಸಮೃತಾಸ್ರವ ಭಟಾರರ

ಬಂದನು. ಹಕ್ಕಿಗಳನ್ನು ಕಾಣದೆ ಅವನ್ನು ಬಿಟ್ಟುಬಿಟ್ಟವರು ಯಾರೆಂದು ಕೇಳಿ ದನು. 'ನಾನು ಬಿಟ್ಟು ಬಿಟ್ಟೆ'ನೆಂದು ನೀನು ಹೇಳಿದೆ. ಆಗ ಗರುಡವೇಗನು—'ಈ ರೀತಿಯ ಧರ್ಮಾರ್ಥಿಯಾದವಳು ನನ್ನ ಮನೆಯಲ್ಲಿ ಇರುವುದು ಬೇಡ' ಎಂದು ಬೈದು, ಹೊಡೆದು ಹೊರಗೆ ಅಟ್ಟಿಬಿಟ್ಟನು. ನೀನು ಮನೆಯಿಂದ ಹೊರಟುಹೋಗಿ ನಂಟರ ಮನೆ ಯನ್ನು ಸೇರಿಕೊಂಡಿದ್ದೆ. ಹೀಗಿರಲು ಒಂದು ದಿವಸ ಚಂಪಾಪುರವನ್ನು ಆಳತಕ್ಕ ಧಾತ್ರಿ ವಾಹನನೆಂಬ ರಾಜನು ಮತ್ತು ಅವನ ಮಹಾರಾಣಿ ಶ್ರೀಮತಿ–ಅಂತು ಇಬ್ಬರೂ ಬಹಳ ವೈಭವದಿಂದ ಪಟ್ಟಣದ ಹೊರಗೆ ಹೊರಟಿದ್ದರು. ಅವರ ಶ್ರೀಮಂತಿಕೆಯನ್ನೂ ವೈಭವ ವನ್ನೂ ಕಂಡು, ನಾನು ಇವರಿಗೆ ಹುಟ್ಟಿದರೆ ಒಳ್ಳೆಯದಿತ್ತೆಂದು ಮನಸ್ಸಿನಲ್ಲಿ ಭಾವಿಸಿದೆ. ಕೆಲವು ದಿವಸಗಳಲ್ಲಿ ನೀನು ಸತ್ತು ಶ್ರೀಮತಿಯ ಬಸಿರಲ್ಲಿ ನೆಲಸಿದೆ. ಇದರಿಂದ ಆಕೆಗೆ ಎಲ್ಲ ಜೀವಿಗಳಲ್ಲಿಯೂ ದಯೆಯನ್ನು ತೋರಿಸುವ ಅಪೇಕ್ಷೆಯುಂಟಾಯಿತು. ಈ ಸಂಗತಿ ಯನ್ನು ರಾಜನು ಕೇಳಿ, ತನ್ನ ಪಟ್ಟಣದಲ್ಲಿಯೂ ನಾಡಿನಲ್ಲಿಯೂ ಯಾರೇ ಆಗಲಿ, ಜೀವಿ ಗಳನ್ನು ಕೊಲ್ಲಕೂಡದು–ಎಂದು ಡಂಗುರ ಸಾರಿಸಿದನು. ಆ ಕಾರಣದಿಂದ ನಿನಗೆ ಆ ತಾಯಿಯೂ ತಂದೆಯೂ ಅಭಯಮತಿ ಎಂದು ಹೆಸರನ್ನಿಟ್ಟು ಬಾಳಿದರು"—ಎಂದು ಋಷಿಗಳು ಅವರಿಬ್ಬರ ಜನ್ಮವೃತ್ತಾಂತಗಳನ್ನು ಹೇಳಿದರು. ರಾಜನೂ ರಾಣಿಯೂ ಇದನ್ನು ಕೇಳಿ ಸಂಸಾರದಲ್ಲಿಯೂ ಶರೀರ ಸುಖದಲ್ಲಿಯೂ ವೈರಾಗ್ಯವನ್ನುಳ್ಳವರಾದರು. ಶ್ರೀದತ್ತನೆಂಬ ಹಿರಿಯ ಮಗನಿಗೆ ರಾಜ್ಯದ ಪಟ್ಟವನ್ನು ಕಟ್ಟಿ ಹಲವು ಮಂದಿ ರಾಜ ಕುಮಾರರೊಂದಿಗೆ ಅಮೃತಾಸ್ರವ ಋಷಿಗಳ ಬಳಿಯಲ್ಲಿ ಗುರುದತ್ತಮಹಾರಾಜನು

ಪಕ್ಕವೆ ಗುರುದತ್ತ ಮಹಾರಾಜಂ ತಪಂಬಟ್ಟನಭಯಮತಿಯುಮಾ ಭಟಾರರೆ ಗುರುಗಳಾಗೆ ಸುವ್ರತೆಯೆಂಬ ಕಂತಿಯರೆ ಕಂತಿಯರಾಗೆ ತಪಂಬಟ್ಟು ಸಮ್ಯಕ್ತ್ವಪೂರ್ವಕಂ ಮಹಾವ್ರತಂಗಳಂ ಕೈಕೊಂಡಾಚಾರಮಾರಾಧನೆ ಮೊದಲಾಗೊಡೆಯ ಚರಣಗ್ರಂಥಂಗಳಂ ಕಲ್ತು ಪಲಕಾಲಮು ಗ್ರೋಗ್ರ ತಪಶ್ಚರಣಂಗೆಯ್ದು ನೋಂಪಿಗಳಿಂದಂ ಗಿಡಿಗಿಡಿಜಂತ್ರಂ ಮಿಳಿಮಿಳಿ ನೇತ್ರಮಾಗಿ ತಮ್ಮ ಮೆಯ್ಯಂ ತವಿಸಿ ಪಶ್ಚಾತ್ಕಾಲದೊಳ್ ಸಂನ್ಯಸನಂ ಗೆಯ್ದು ಸಮಾಧಿಮರಣದಿಂ ಮುಡಿಪಿ ಕಾಪಿಷ್ಟಮೆಂಬೆಂಟನೆಯ ಸ್ವರ್ಗದೊಳ್ ಸ್ವಯಂಪ್ರಭಮೆಂಬ ವಿಮಾನದೊಳ್ ಪದಿನಾಲ್ಕು ಸಾಗರೋಪಮಾಯುಷ್ಯಮನೊಡೆಯನಮಿತಕಾಂತನೆಂಬೊಂ ದೇವನಾಗಿ ಪುಟ್ಟಿದೋಳಿತ್ತ ಗುರುದತ್ತ ಭಟಾರರುಂ ಪನ್ನೆರಡು ವರುಷಂ ಬರೆಗಂ ಗುರುಗಳನಗಲದಿರ್ದು ದ್ವಾದಶಾಂಗ ಚತುರ್ದಶ ಪೂರ್ವಮಪ್ಪಾಗಮಮೆಲ್ಲಮಂ ಕಲ್ತು ಗುರುಗಳಂ ಬೆಸಗೊಂಡವರನುಮತದಿಂದೇಕ ವಿಹಾರಿಯಾಗಿ ಘೋರ ವೀರ ತಪಶ್ಚರಣಂಗೆಯ್ಯುತ್ತಂ ಗ್ರಾಮೇಕರಾತ್ರಂ ನಗರೇ ಪಂಚರಾತ್ರಂ ಅಟವ್ಯಾಂ ದಶರಾತ್ರಮೆಂಬೀ ನ್ಯಾಯದಿಂ ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ ವಿಹಾರಿಸುತ್ತಂ ಕ್ರಮದಿಂ ಸುರಾಷ್ಟ್ರಮನೆಯ್ದಿಯಲ್ಲಿ ದ್ರೋಣಿಮಂತಮೆಂಬ ಪರ್ವತದ ಸಾರೆ ಪಳಮುಖನೆಂಬ ಪಾರ್ವನಿರ್ಪ ಪಲ್ಲಿಖೇಡಮೆಂಬೂರನೆಯ್ದುವನ್ನೆ·

ತಪಸ್ಸನ್ನು ಸ್ವೀಕರಿಸಿದನು. ಅಭಯಮತಿಯೂ ಆ ಋಷಿಗಳೇ ಗುರುಗಳಾಗಿರಲು ಸುವ್ರತೆ ಎಂಬ ಕಂತಿಯರೇ ತಪಸ್ಸಿಗೆ ದಾರಿ ತೋರುವವರಾಗಿರಲು ತಪಸ್ಸನ್ನು ಕೈಗೊಂಡಳು. ಅವಳು ಜೈನಧರ್ಮತತ್ತ್ವಪೂರ್ವಕ ಮಹಾವ್ರತಗಳನ್ನು ಸ್ವೀಕರಿಸಿ, ಆಚಾರ-ಆರಾಧನೆ ಮುಂತಾಗಿರತಕ್ಕ ಚರಣ ಗ್ರಂಥಗಳನ್ನು ಕಲಿತು ಹಲವು ಕಾಲ ಕಠೋರವಾದ ತಪಸ್ಸನ್ನು ಮಾಡಿ ಉಪವಾಸಾದಿ ವ್ರತಗಳಿಂದ ಅತ್ಯಂತ ಕೃಶರಾಗಿ ಗುಳಿಬಿದ್ದ ಕಣ್ಣುಳ್ಳವರಾದರು. ತಮ್ಮ ಶರೀರವನ್ನು ಕ್ಷೀಣಗೊಳಿಸಿ ಅನಂತರದ ಕಾಲದಲ್ಲಿ ಸಂನ್ಯಾಸವನ್ನು ಆಚರಿಸಿ ಸಮಾಧಿ ಮರಣದಿಂದ ಸತ್ತು ಕಾಪಿಷ್ಟವೆಂಬ ಎಂಟನೆಯ ಸ್ವರ್ಗದಲ್ಲಿ ಸ್ವಯಂಪ್ರಭವೆಂಬ ಏಳಂತಸ್ತಿನ ವಿಮಾನದಲ್ಲಿ ಹದಿನಾಲ್ಕು ಸಾಗರದಷ್ಟು ಆಯುಷ್ಯವುಳ್ಳ ಅಮಿತಕಾಂತನೆಂಬ ದೇವನಾಗಿ ಜನಿಸಿದಳು. ಇತ್ತ ಗುರುದತ್ತ ಋಷಿಗಳು ಹನ್ನೆರಡು ವರ್ಷಗಳವರೆಗೆ ಗುರುಗಳೊಡನೆಯೇ ಇದ್ದು ಹನ್ನೆರಡು ಅಂಗಗಳೂ ಹದಿನಾಲ್ಕು ಪೂರ್ವಗಳೂ ಉಳ್ಳ ಶಾಸ್ತ್ರಗಳನ್ನೆಲ್ಲ ಕಲಿತು ಗುರುಗಳನ್ನು ಕೇಳಿ ಅವರ ಒಪ್ಪಿಗೆ ಪಡೆದು ಒಬ್ಬರೇ ಸಂಚಾರ ಮಾಡುವವರಾಗಿ ಉಗ್ರವೂ ಶ್ರೇಷ್ಠವೂ ಆದ ತಪಸ್ಸನ್ನು ಮಾಡುತ್ತ "ಗ್ರಾಮದಲ್ಲಿ ಒಂದು ರಾತ್ರಿಯಿದ್ದರೆ, ನಗರದಲ್ಲಿ ಐದು ರಾತ್ರಿ ಕಾಡಿನಲ್ಲಿ ಹತ್ತು ರಾತ್ರಿ" ಎಂಬ ನ್ಯಾಯದಂತೆ ಗ್ರಾಮ, ನಗರ, ಖೇಡ, ಖರ್ವಡ, ಮಡಂಬ, ಪಟ್ಟಣ, ದ್ರೋಣಾಮುಖ-ಎಂಬ ಭೂಭಾಗಗಳಲ್ಲಿ ಸಂಚಾರಮಾಡುತ್ತ ಕ್ರಮವಾಗಿ ಸುರಾಷ್ಟ್ರ ಎಂಬ ದೇಶವನ್ನು ಸೇರಿ ಅಲ್ಲಿ ದ್ರೋಣಿಮಂತವೆಂಬ ಪರ್ವತದ ಹತ್ತಿರ ಹಳಮುಖನೆಂಬ ಬ್ರಾಹ್ಮಣನು ಇರತಕ್ಕ ಪಲ್ಲಿಖೇಡವೆಂಬ ಊರಿಗೆ ಬರುತ್ತಿದ್ದರು. ಎಡೆಯಲ್ಲಿ ಸೂರ್ಯಾಸ್ತವಾಯಿತು. ಎಲ್ಲಿ ಕತ್ತಲಾಯಿತೋ

ಗನೆುಡೆಯೊಳ್ ನೇಸರ್ಪಟ್ಟೊಡೆ ಯತ್ರಾಸ್ತಮಿತವಾಸಿಗಳೆಲ್ಲ ನೇಸರ್ಪಟ್ಟಿತ್ತಲ್ಲಿಯೆ ನಿಲ್ವರಪ್ಪುದ ಱಿಂದೂರ ಪೊಱ ಪೊಬಲ ಪೊಲದೊಳ್ ಬಟ್ಟೆಯ ಕಣ್ಣೊಳ್ ರಾತ್ರಿ ಪ್ರತಿಮೆನಿಂದೊರನ್ನೆಗ ಮಿರುಳ್ ನಾಲ್ಕು ಜಾವಮುಂ ಭೋರೆಂದು ಪೆರ್ಮೞೆ ಕೊಂಡು ಕೆಸಱಾದೊಡೆ ನೇಸಮೂಡಿ ದೊಡಪ್ರಾಸುಕಂ ಬಟ್ಟೆಯೆಂದು ಕೈಯನೆತ್ತಿಕೊಳ್ಳದೆ ಮತ್ತಂತೆ ಸೂರ್ಯಪ್ರತಿಮೆನಿಂದೊರನ್ನೆಗಂ ಹಳಮುಖನೆಂಬ ಪಾರ್ವಂ ತನ್ನ ಮೂಡಣ ಕೆಯ್ಯನುೞಲೆಂದು ಪೋಗಿ ಕೆಸಱಾದುದಂ ಕಂಡು ೞಲ್ ಪದನಲ್ತೆಂದು ಬೆಟ್ಟದ ಪಡುವಣ ಕೆಯ್ಯನುೞಲ್ ಪೋಗುತ್ತಂ ತನ್ನ ಕೆಯ್ಯಸಾರೆ ಸೂರ್ಯ ಪ್ರತಿಮೆನಿಂದ ಭಟಾರರಂ ಕಂಡಿಂತೆಂದನಜ್ಜಾ ಎನ್ನ ಪೆಂಡತಿ ಕೂೞನಿಲ್ಲಿಗೆ ಕೊಂಡು ಬಂದೊಡೆ ಪಡುವಣ ಕೆಯ್ಗೆ ಪೋದನೆಂದು ಪೇೞ್ವಟ್ಟಂ ಗಡಿಮೆಂದು ಪಡುವಣಕೆಯ್ಗೆ ಪೋದನನ್ನೆಗಮಾತನ ಪಾರ್ವಂತಿಯುಂ ಪಗಲಪ್ಪಾಗಳ್ ಕೂೞಂ ಕೊಂಡು ಬಂದು ಕೆಯ್ಯೊಳಗಲಮಱಸಿ ಕಾಣದೆ ಸೂರ್ಯಪ್ರತಿಮೆನಿಂದ ಭಟಾರರಂ ಬೆಸಗೊಂಡಳಜ್ಜಾ ಎನ್ನ ಭಟ್ಟನೀ ಕೆಯ್ಯನುೞಲ್ ಬಂದಾ ತನೆತ್ತಪೋದಂ ಪೇೞಿಮೆಂದು ಬೆಸಗೊಂಡೊಡಾ ಭಟಾರರ್ ಮೌನವ್ರತಂಗೊಂಡು ನುಡಿಯದೆ

ಅಲ್ಲಿ ವಾಸಮಾಡುವವರೆನಿಸಿದ ಸಂನ್ಯಾಸಿಗಳು ಸೂರ್ಯನು ಅಸ್ತವಾದಾಗ ಇದ್ದಲ್ಲೇ ನಿಲ್ಲುವರಾದ್ದರಿಂದ ಊರಿನ ಪಟ್ಟಣದ ಹೊರಗಿರುವ ಹೊಲದಲ್ಲಿ ದಾರಿಯ ಎದುರಿ ನಲ್ಲಿಯೇ ರಾತ್ರಿಯ ಹೊತ್ತು ಪ್ರತಿಮಾಯೋಗವಲ್ಲಿ ನಿಂತರು. ಆಗ ರಾತ್ರಿಯ ನಾಲ್ಕು ಜಾವವೂ (ಹನ್ನೆರಡು ಗಂಟೆಯೂ) ಭೋರೆಂದು ಶಬ್ದಮಾಡುತ್ತ ದೊಡ್ಡ ಮಳೆ ಬಂದು ಕೆಸರಾಯಿತು. ಸೂರ್‍ಯೋದಯವಾದಾಗ, ದಾರಿಯು ಜೀವಜಂತುಗಳಿಂದ ಕೂಡಿದೆ ಯೆಂದು, ಇಳಿಬಿಟ್ಟಿದ್ದ ಕೈಗಳನ್ನು ಮೇಲಕ್ಕೆತ್ತದೆ ಮತ್ತೂ ಹಾಗೆಯೇ ಬಿಸಿಲಿನಲ್ಲಿ ಪ್ರತಿಮೆಯಂತೆ ನಿಂತಿದ್ದರು ಆ ವೇಳೆಗೆ ಹಳಮುಖನೆಂಬ ಬ್ರಾಹ್ಮಣನು ತನ್ನ ಮೂಡಣ ಹೊಲವನ್ನು ಉಳುವುದಕ್ಕೆಂದು ಹೋಗಿ ಗದ್ದೆ ಕೆಸರಾದುದನ್ನು ಕಂಡು, ಉಳುವುದಕ್ಕೆ ಇದು ಸಂದರ್ಭವಲ್ಲವೆಂದು ಆ ಬೆಟ್ಟದ ಪಶ್ಚಿಮದ ಕಡೆಗಿದ್ದ ಹೊಲವನ್ನು ಉಳುವುದಕ್ಕೆ ಹೋಗುತ್ತ, ತನ್ನ ಹೊಲದ ಬಳಿಯಲ್ಲಿ ಬಿಸಿಲಿಗೆ ಪ್ರತಿಮೆಯಂತೆ ನಿಂತಿದ್ದ ಋಷಿಗಳನ್ನು ಕಂಡನು. ಅವರೊಡನೆ—"ಅಜ್ಜಾ, ನನ್ನ ಹೆಂಡತಿ ಊಟವನ್ನು ಇಲ್ಲಿಗೆ ತೆಗೆದುಕೊಂಡು ಬಂದರೆ ನನ್ನನ್ನು ಪಶ್ಚಿಮದ ಹೊಲಕ್ಕೆ ಹೋದನೆಂದು ಹೇಳಿ, ಅವಳನ್ನು ನನ್ನಲ್ಲಿಗೆ ಕಳುಹಿಸಿರಿ, ತಿಳಿಯಿತೇ ?" ಎಂದು ಹೇಳಿ ಪಡುವಣ ಹೊಲಕ್ಕೆ ಹೋದನು. ಹೀಗಿರಲು ಅವನ ಬ್ರಾಹ್ಮಣಿತಿ ಹಗಲಾಗಿದ್ದಾಗಲೇ ಅನ್ನವನ್ನು ತೆಗೆದುಕೊಂಡು ಬಂದಳು. ಹೊಲದ ವಿಸ್ತಾರವನ್ನೆಲ್ಲ ಸುತ್ತಿ ಹುಡುಕಿದರೂ ಕಾಣದಿರಲು ಬಿಸಿಲಿನಲ್ಲಿ ಪ್ರತಿಮೆಯಾಗಿ ನಿಂತಿದ್ದ ಋಷಿಗಳನ್ನು ಕುರಿತು—"ಅಜ್ಜಾ, ನನ್ನ ಭಟ್ಟನು ಈ ಹೊಲವನ್ನು ಉಳುವುದಕ್ಕಾಗಿ ಬಂದವನು ಯಾವ ಕಡೆಗೆ ಹೋದನು ? ಹೇಳಿ" ಎಂದು ಕೇಳಿದಳು. ಆಗ ಆ ಋಷಿ ಗಳು ಮೌನದ ವ್ರತವನ್ನು ಸ್ವೀಕರಿಸಿ, ಮಾತಾಡದೆ ಸುಮ್ಮಗಿರಲು ಹೆಚ್ಚು ಹೊತ್ತು

ಕೆಮ್ಮಗಿರ್ದೊಡೆ ಪಿರಿದುಂ ಬೇಗಮಿರ್ದು ಬೇಸತ್ತು ಕೂೞಂ ಮನೆಗೆ ಕೊಂಡು ಪೋದಳನ್ನೆ ಗಮಿತ್ತ ಪಳಮುಖನುಂ ಕೆಯ್ಯಂ ಪಿರಿದು ಬೇಗಮುೞ್ತು ಪೇದೆಗೆಟ್ಟು ಪಸಿದು ನೀರಡಿಸಿ ಬಸಮುೞಿದು ಕೂೞಂ ತರ್ಪುದಂ ಪಿರಿದು ಬೇಗಂ ಪಾರುತ್ತಿರ್ದು ತಾರದಿರ್ದೊಡೆ ಬೇಸತ್ತು ಮುಳಿದು ಮನೆಗೆ ಪೋಗಿ ಎಲೆಗೆ ಕೂೞಂ ತಂದೆಯಿಲ್ಲೆಂದು ಪೆಂಡತಿಯುಂ ಸೊಪ್ಪುನಾರಾಗಿ ಬಡಿಯೆ ಆಕೆಯಿಂತೆಂದಳೇಕೆ ಬಡಿವೆಯಾಂ ಕೂೞಂ ಕೊಂಡು ಪೋಗಿ ಕೆಯ್ಯೊಳಱಸಿ ಪಿರಿದು ಬೇಗಮಿರ್ದು ಪಾರ್ದು ನಿಮ್ಮಂ ಕಾಣದೆ ಮನೆಗೆ ಕೂೞಂ ತಂದೆನೆಂದೊಡೇಕಲ್ಲಿರ್ದ ಕ್ಷಪಣಕನಂ ಬೆಸಗೊಂಡೆಯಿಲ್ಲಾತಂಗಾಂ ಮೂಡಣ ಕೆಯ್ಗೆ ನೀಂ ಬಂದೊಡೆ ಪಡುವಣ ಕೆಯ್ಗೆ ಕೂೞಂ ಕೊಂಡು ಬರ್ಪಂತಿರೆ ಪೇೞ್ದು ಪೋದೆನೆಂದೊಡಾಕೆಯಿಂತೆಂದಳೆನಿತಾನುಂ ಸೂೞಾಂ ಬೆಸ ಗೊಂಡೊಡಂ ಪೇೞ್ದನಿಲ್ಲೆಂದೊಡಂತಪ್ಪೊಡೆ ನಿನಗೇನುಂ ದೋಷಮಿಲ್ಲೆನ್ನನಾತನುಣ್ಣಪಡಿಸಿ ಕೊಂದನೆಂದು ಪೆಂಡತಿಯ ಮೇಗಣ ಮುಳಿಸನುೞಿದು ಋಷಿಯರ ಮೇಗೆ ಮುನಿಸಾಗಿ ಭವಸಂಬಂಧಿಯಪ್ಪ ವೈರಂ ಕಾರಣಮಾಗಿ ಕ್ರೋಧಾಗ್ನಿ ಪೆರ್ಚೆಯೆನ್ನಂ ಪಸಿವಿನಿಂ ಸುಟ್ಟೊನಂ ಕಿಚ್ಚಿನಿಂ ಸುಟ್ಟಲ್ಲದುಣ್ಣೆನೆಂದು ಪ್ರತಿಜ್ಞೆಗೆಯ್ದು ಪುಲ್ಲಬೆಂಟೆಯುಂ ಪೊಸೆದು ಕಿಚ್ಚುಮೆಣ್ಣೆಯು

ಇದ್ದು ಬೇಸರಗೊಂಡು ಅನ್ನವನ್ನು ಮನೆಗೆ ಕೊಂಡುಹೋದಳು. ಅಷ್ಟರಲ್ಲಿ ಇತ್ತ ಹಳಮುಖನು ಬಹಳ ಹೊತ್ತಿನವರೆಗೆ ಗದ್ದೆಯನ್ನು ಉತ್ತು, ಆಯಾಸಪಟ್ಟು, ಹಸಿವಾಗಿ, ಬಾಯಾರಿ, ಶಕ್ತಿಕುಂದಿ, ಹೆಂಡತಿ ಅನ್ನ ತರುವುದನ್ನು ಬಹಳಹೊತ್ತು ಎದುರು ನೋಡುತ್ತಿದ್ದು ತಾರದಿರಲು ಬೇಸರಗೊಂಡು, ಕೋಪಗೊಂಡು, ಮನೆಗೆ ಹೋದನು. "ಎಲೀ ನೀನು ಅನ್ನವನ್ನು ಏಕೆ ತರಲಿಲ್ಲ !" ಎಂದು ಹೆಂಡತಿಯನ್ನು ಸೊಪ್ಪು ನಾರುಗಳನ್ನು ಜಜ್ಜುವ ಹಾಗೆ ಹೊಡೆದನು ಆಗ ಆಕೆ "ಯಾಕೆ ನನಗೆ ಹೊಡೆಯುತ್ತಿ ? ನಾನು ಅನ್ನವನ್ನು ಕೊಂಡು ಹೋಗಿ ಹೊಲದಲ್ಲಿ ಹುಡುಕಿ ಬಹಳ ಹೊತ್ತು ಇದ್ದು ನಿನ್ನನ್ನು ಎದುರು ನೋಡಿದೆ. ಆದರೆ ಕಾಣದೆ, ಅನ್ನವನ್ನು ಮನೆಗೆ ತಂದೆನು" ಎಂದು ಹಳಮುಖನಿಗೆ ಹೇಳಿದಳು. ಅದಕ್ಕೆ ಅವನು "ಅಲ್ಲಿದ್ದ ಜೈನ ಸಂನ್ಯಾಸಿಯನ್ನು ನೀನು ಯಾಕೆ ಕೇಳಲಿಲ್ಲ ? ನೀನು ಪೂರ್ವದಿಕ್ಕಿನ ಹೊಲಕ್ಕೆ ಬಂದರೆ, ಪಶ್ಚಿಮ ದಿಕ್ಕಿನ ಹೊಲಕ್ಕೆ ಅನ್ನ ತೆಗೆದುಕೊಂಡು ಬರುವಂತೆ ನಾನು ಹೇಳಿ ಹೋಗಿದ್ದೆನು" ಎಂದನು. ಆಗ ಆಕೆ ಹೀಗೆಂದಳು—"ನಾನು ಎಷ್ಟುಬಾರಿ ಕೇಳಿದರೂ ಅವನು ಹೇಳಲಿಲ್ಲ." ಹೀಗೆಂದಾಗ ಹಳಮುಖನು—"ಹಾಗಾದರೆ ನಿನ್ನದೇನೂ ತಪ್ಪಿಲ್ಲ. ನನ್ನನ್ನು ಅವನು ಉಣ್ಣದೆ ಬೀಳುವಂತೆ ಮಾಡಿ ಕೊಂದನು" ಎಂದು ಹೇಳಿ ಹೆಂಡತಿಯ ಮೇಲಿನ ಕೋಪವನ್ನು ತ್ಯಜಿಸಿ, ಋಷಿಗಳ ಮೇಲೆ ಕೋಪಗೊಂಡನು. ಪೂರ್ವಜನ್ಮದ ಸಂಬಂಧದ ದ್ವೇಷದ ಕಾರಣವಾಗಿ ಕೋಪಾಗ್ನಿ ಹೆಚ್ಚಾಗಿ 'ನನ್ನನ್ನು ಹಸಿವಿನಿಂದ ಸುಟ್ಟವನನ್ನು ಬೆಂಕಿಯಿಂದ ಸುಟ್ಟಲ್ಲದೆ ಉಣ್ಣೆನು' ಎಂದು ಪ್ರತಿಜ್ಞೆಮಾಡಿದನು. ಅದರಂತೆ, ಹುಲ್ಲಿನ ಹಗ್ಗವನ್ನು ಹುರಿಮಾಡಿ–ಬೆಂಕಿ, ಎಣ್ಣೆಯ ಕೊಡ, ಹುಲ್ಲಿನ ಹಗ್ಗ ಇವನ್ನು ತೆಗೆದುಕೊಂಡು

ಕೊಡನುಂ ಬೆಂಟೆಯುಮಂ ಕೊಂಡು ಪೋಗಿ ಭಟಾರರ ಮುಂದಿಟ್ಟೆಲವೊ ಸವಣಾ ನೀನೆನ್ನಂ ಪಸಿವಿನಿಂದಂ ಸುಟ್ಟೆಯಂತೆಯಾನುಂ ನಿನ್ನಂ ಕಿಚ್ಚಿನಿಂದಂ ಸುಟ್ಟಪ್ಪೆಂ ಕಾವೊರಾರೆಂದು ಮುಟ್ಟಿ ಮೂದಲಿಸಿದಾಗಳ್ ಭಟಾರರಿಂತೆಂದು ಬಗೆದರೀತಂಗೇನುಂ ದೋಷಮಿಲ್ಲೆಮ್ಮ ಮುನ್ನಿನ ಗೆಯ್ದ ಕರ್ಮದುದಯಕಾಲಂ ಬಂದುದಕ್ಕುಮದೆಮ್ಮಂ ಸುಟ್ಟಪ್ಪುದೀತನೆಮ್ಮಂ ಸುಟ್ಟಪ್ಪೊನಲ್ಲಂ ಸುಡುವೊಡಂ ಕಿಡುವೊಡಲನೆ ಸುಡುಗುಮೆಮ್ಮ ದರ್ಶನ ಜ್ಞಾನ ಚಾರಿತ್ರಂಗಳಂ ಸುಡಲ್ ನೆಱೆಯನೀತನೆಮಗೆ ಕಲ್ಯಾಣಮಿತ್ರನೆಂದು ಬಗೆದಿಂತೆಂದು ಭಾವಿಸಲ್ ತಗುಳ್ದರ್

ಗಾಹೆ॥ ಣಿಂದಂತಂ ಸಿಳಹಂತಂ ಸತ್ತುಂ ಮಿತ್ತುಂ ತಹೇವ ಸುಹದುಕ್ಖಂ
ಜೋ ಸಮಭಾವಇ ಪೆಚ್ಛ ಇ ಸೋ ಸಮಣೋ ಸೋಯಪವ್ವಯಓ

ದುಜ್ಜಣವಯಣ ಸಡಗರಂ ಸಂಹತಿ ಉಚ್ಛೋಡಣಂ ಚ ಪಹರಂ ಚ
ಣ ಯ ಕುಪ್ಪಂತಿ ಮಹಾರಿಸಿ ಸಮಣ ಗುಣ ವಿಜಾಣಗಾ ಸಮಣಾ

ಜೀವಿದ ಮರಣೇ ಲಾಭಾಲಾಭೇ ರಂಜೋಗವಿಪ್ಪ ಜೋಗೇ ಯ
ಬದ್ದಂ (?) ಸುಹದುಕ್ಖಾದಿಸು ಸಮದಾ ಸಾಮಾಯಿಗಂ ಣಾಮ

ಹೋಗಿ ಋಷಿಗಳ ಮುಂದೆ ಇಟ್ಟು "ಎಲವೋ ಸವಣಾ (ಸಂನ್ಯಾಸಿಯೇ) ನೀನು ನನ್ನನ್ನು ಹಸಿವಿನಿಂದ ಸುಟ್ಟೆ. ಹಾಗೆಯೇ ನಾನು ನಿನ್ನನ್ನು ಬೆಂಕಿಯಿಂದ ಸುಡುತ್ತೇನೆ, ಆಗ ನಿನ್ನನ್ನು ಯಾರು ಕಾಪಾಡುತ್ತಾರೆ ?" ಎಂದು ಮುಟ್ಟಿ ಮೂದಲಿಸಿದನು. ಆಗ ಋಷಿಗಳು ಹೀಗೆ ಭಾವಿಸಿದರು—"ಈತನಲ್ಲಿ ಏನೂ ತಪ್ಪಿಲ್ಲ. ನಾನು ಹಿಂದೆ ಮಾಡಿದ ಕರ್ಮದ ಫಲ ಮೂಡಿ ಬರುವ ಕಾಲ ಬಂದಿದೆ. ಅದು ನನ್ನನ್ನು ಸುಡುತ್ತಿದೆ. ಈತನು ನನ್ನನ್ನು ಸುಡುತ್ತಾ ಇಲ್ಲ. ಸುಡುವುದಾದರೂ ನಾಶವಾಗತಕ್ಕ ದೇಹವನ್ನು ಸುಡುತ್ತಾನೆ. ನನ್ನ ದರ್ಶನ-ಜ್ಞಾನ-ಚಾರಿತ್ರಗಳನ್ನು ಸುಡಲಾರನು. [ನಿಂದಿಸುವವನನ್ನೂ, ಶ್ಲಾಘಿಸುವವನನ್ನೂ, ಶತ್ರುವನ್ನೂ ಮಿತ್ರನನ್ನೂ ಯಾವನು ಹಾಗೆಯೇ ಸಮತೆಯಿಂದ ಭಾವಿಸುವನೋ ನೋಡುವನೋ ಅವನು ಸವಣನು. ದುರ್ಜನರ ಮಾತುಗಳೆಂಬ ಚಟಚಟ ಎಂಬ ಸಿಡಿವ ಕಿಡಿಗಳ ಹಾಗೆ ಸಂತಾಪಕರವಾದುವನ್ನು ಸಹಿಸುತ್ತಾರೆ. ಚಾಡಿಮಾತುಗಳನ್ನೂ ಅಥವಾ ಕೋಲು ಬಡಿಗೆಗಳ ಏಟುಗಳನ್ನೂ ಶಸ್ತ್ರಪ್ರಹಾರಗಳನ್ನೂ ಸೈರಿಸುತ್ತಾರೆ. ಮಹಾಋಷಿಗಳು ಸಿಟ್ಟಾಗುವುದಿಲ್ಲ. ಸಮಣರು (ಸಾಧುಗಳು) ಕ್ಷಮಾಗುಣವನ್ನು ಬಲ್ಲವರು. ಬದುಕು ಸಾವುಗಳಲ್ಲಿಯೂ ಲಾಭನಷ್ಟಗಳಲ್ಲಿಯೂ ಇಷ್ಟವಸ್ತುವಿನ ಸಂಯೋಗ ವಿಯೋಗಗಳಲ್ಲಿಯೂ ಬಂಧುಗಳು - ಶತ್ರುಗಳು ಇವರಿಗೆ ಸಂಬಂಧಿಸಿದ ಸುಖದುಃಖಗಳಲ್ಲಿಯೂ ಹಸಿವು ಬಾಯಾರಿಕೆ ಶೀತೋಷ್ಣಾದಿಗಳಲ್ಲಿಯೂ ಸಮತೆಯು ಸಾಮಾಯಿಕ ಎಂಬ ಹೆಸರುಳ್ಳುದಾಗಿದೆ.

ಖಮ್ಮಾಮಿ ಸವ್ವಜೀವಾಣಂ ಸವ್ವೇ ಜೀವಾ ಖಮಂತು ಮೇ
ಮೆತ್ತೀ ಮೇ ಸವ್ವ ಭೂದೇಸು ವೇರಂ ಮಜ್ಝ ಣ ಕೇಣ ಚಿ

ಎಂದಿಂತು ಕ್ಷಮೆಯಂ ಭಾವಿಸುತ್ತಿರ್ಪನ್ನೆಗಂ ಹಳಮುಖನುಂ ಬೆಂಟೆಯನೆಣ್ಣೆಯೊಳ್ ತೊಯ್ದು ನಖಾಗ್ರದಿಂ ತೊಟ್ಟು ನೆತ್ತಿವರೆಗಂ ಬಳಸಿಯುಂ ಮೆಯ್ಯುಂ ಸುತ್ತಿ ಎಲ್ಲಾ ಎಡೆಗಳೊಳಂ ಕಿಚ್ಚಂ ತಗುಳ್ಚಿಯೆಣ್ಣೆಯುಂ ತಳಿಯುತ್ತಿರಲುರಿ ಕೊಂಡೇಕ ಜ್ವಾಲೆಯಾಗಿ ಸುಡೆಯಾ ಕಿಚ್ಚು ಮೆಯ್ಯಂ ಪೊರ್ದದನ್ನೆಗಂ ಭಟಾರರಾಜ್ಞಾವಿಚಯಮಪಾಕವಿಚಯ ವಿಪಾಕವಿಚಯ ಸಂಸ್ಥಾನವಿಚಯ ಮೆಂಬೀ ನಾಲ್ಕು ಧರ್ಮಧ್ಯಾನಂಗಳಂ ಧ್ಯಾನಿಸುತ್ತಂ ಬಟಿಕ್ಕೆ ಪೃಥಕ್ತ್ವ ವಿತರ್ಕ ವಿಚಾರ ಮೆಂಬ ಪ್ರಥಮ ಶುಕ್ಲಧ್ಯಾನಮಂ ಧ್ಯಾನಿಸಿ ಸೂಕ್ಷ್ಮ ಸಾಂಪರಾಯ ಗುಣಸ್ಥಾನದೊಳ್ ಮೋಹನೀಯದಕಾಂಡಕ ಘಾತಂ ತೀರ್ದು ಚರಮ ಕಾಂಡಕದ ಚರಮ ಪಾಳಿ ಬಿರ್ದನಂತರ ಸಮಯಂ ಮೊದಲ್ಗೊಂಡು ಜಾನಿಸಿಯಲ್ಲಿಂ ಬಟಿಯವ್ಪೇಕತ್ವ ವಿತರ್ಕ ವಿಚಾರಮೆಂಬೆರಡನೆಯ ಶುಕ್ಲಧ್ಯಾನಮಂ ಕ್ಷೀಣಕಷಾಯನಾಗಿ ಜಾನಿಸಿ ಬಟಿಯಂ ಚರಮಸಮಯದೊಳ್ ನಾಲ್ಕು ಕರ್ಮಮಂ ಕಿಡಿಸುವ ಸಮಯದೊಳ್ ರಸ ರುಧಿರ ಮಾಂಸ ಮೇದೋಸ್ಥಿಮಜ್ಜ ಶುಕ್ಲಮೆಂಬ ಸಪ್ತಧಾತುಗಳುಮವಱೊಡನೆ ಕೆಟ್ಟುವು ಮತ್ತೆ ಘಾತಿಕರ್ಮಂಗಳಾವುವೆಂದೊಡೆ ಅಯ್ದು ತೆಱದ

18500

ಎಲ್ಲ ಜೀವಗಳನ್ನೂ ಕ್ಷಮಿಸುತ್ತೇನೆ, ಎಲ್ಲ ಜೀವಗಳೂ ನನ್ನನ್ನು ಕ್ಷಮಿಸಲಿ. ಎಲ್ಲ ಜೀವಗಳಲ್ಲಿಯೂ ನನಗೆ ಸ್ನೇಹವಿದೆ. ನನಗೆ ಎಲ್ಲಿಯೂ ವೈರವಿಲ್ಲ ಎಂದೀ ರೀತಿಯಾಗಿ ಕ್ಷಮೆಯನ್ನೇ ಭಾವಿಸುತ್ತ ಗುರುದತ್ತ ಋಷಿಗಳು ಇದ್ದರು. ಹೀಗಿರಲು ಹಳಮುಖನು ಆ ಹುಲ್ಲಿನ ಹಗ್ಗವನ್ನು ಎಣ್ಣೆಯಲ್ಲಿ ನೆನೆಸಿದನು. ಅದನ್ನು ಋಷಿಗಳ ಉಗುರಿನಿಂದ ತೊಡಗಿ ನೆತ್ತಿಯವರೆಗೂ ಆವರಿಸುವಂತೆ ಶರೀರಕ್ಕೆ ಸುತ್ತಿ ಎಲ್ಲಾ ಕಡೆ ಗಳಲ್ಲಿಯೂ ಬೆಂಕಿ ಹಚ್ಚಿ ಎಣ್ಣೆಯನ್ನು ಸಿಂಪಡಿಸುತ್ತಿರಲು ಬೆಂಕಿ ಹಿಡಿದು ಒಂದೇ ಜ್ವಾಲೆ ಯಾಗಿ ಸುಡತೊಡಗಿತು. ಆ ಬೆಂಕಿ ದೇಹವನ್ನು ಮುಟ್ಟುವ ಮೊದಲೇ ಋಷಿಗಳು ಆಜ್ಞಾವಿಚಯ, ಅಪಾಕವಿಚಯ, ವಿಪಾಕ ವಿಚಯ, ಸಂಸ್ಥಾನ ವಿಚಯ-ಎಂಬ ಈ ನಾಲ್ಕು ಧರ್ಮಧ್ಯಾನಗಳನ್ನು ಧ್ಯಾನಿಸಿದರು. ಆಮೇಲೆ ಪೃಥಕ್ತ್ವ, ವಿತರ್ಕ, ವಿಚಾರ-ಎಂಬ ಮೊದಲನೆಯ ಶುಕ್ಲಧ್ಯಾನವನ್ನು ಧ್ಯಾನಿಸಿದರು. ಸೂಕ್ಷ್ಮ ಸಾಂಪರಾಯದ ಗುಣಸ್ಥಾನದಲ್ಲಿ ಮೋಹನೀಯದ ಕಾಂಡಕ ಘಾತವು ಮುಗಿದು ಚರಮಕಾಂಡಕದ ಚರಮಪಾಳಿ ಬಿದ್ದನಂತರ ಸಮಯ ಮೊದಲಾಗಿ ಧ್ಯಾನಿಸಿದರು. ಆ ಮೇಲೆ ಏಕತ್ವ, ವಿತರ್ಕ, ವಿಚಾರ-ಎಂಬ ಎರಡನೆಯ ಶುಕ್ಲಧ್ಯಾನವನ್ನು ಧ್ಯಾನಿಸಿ ಕಷಾಯವನ್ನು ಕ್ಷೀಣಗೊಳಿಸಿದರು. ಆ ಮೇಲೆ ಚರಮಸಮಯದಲ್ಲಿ ನಾಲ್ಕು ಕರ್ಮಗಳನ್ನು ನಾಶಗೊಳಿ ಸುವ ಸಂದರ್ಭದಲ್ಲಿ ರಸ, ರಕ್ತ, ಮಾಂಸ, ಮೇದಸ್ಸು, ಎಲುಬು, ಕೊಬ್ಬು, ಶುಕ್ಲ-ಎಂಬ ಏಳು ಬಗೆಯ ಧಾತುಗಳೂ ಅವುಗಳೊಂದಿಗೆ ನಾಶವಾದುವು. ಆ ಮೇಲೆ ಘಾತಿ ಕರ್ಮಗಳು ಯಾವುವೆಂದರೆ-ಮತಿ, ಶ್ರುತ, ಅವಧಿ, ಮನಃಪರ್ಯಯ ಮತ್ತು ಕೇವಲ ಜ್ಞಾನ.

ಜ್ಞಾನಾವರಣೀಯುವೊಂಬತ್ತು ತೆಱದ ದರ್ಶನಾವರಣೀಯುಮಂತೆರಡುಂ ಕರ್ಮಂಗಳ ಕೇಡಿನೊಳ್ ಲೋಕಾಲೋಕದೊಳಗಣ ಸೂಕ್ಷ್ಮಾಂತರಿತ ದೂರ ಪದಾರ್ಥವಸ್ತುಗಳೆಲ್ಲಮಂ ಕ್ರಮ ಕರಣ ವ್ಯವಧಾನರಹಿತವಾಗಿ ಬಗೆಯದೆ ತಡೆಯದೆ ಸುಟಿಯದೆ ಮೋಹಿಸದೆ ಎಲ್ಲಾ ವಸ್ತುಗಳ ನೊರ್ವೊದಲಱಿವ ಕಾಣ್ಬನಂತಜ್ಞಾನಮುಮನಂತದರ್ಶನಮುಮನೊಡೆಯುರಾದರ್ ಮತ್ತಿರ್ಪ ತ್ತೆಂಟು ತೆಱದ ಮೋಹನೀಯುಮೆಂಬ ಕರ್ಮದ ಕೇಡಿನಿಂ ಅನಂತಸುಖಿಗಳಾದರ್ ಮತ್ತಮಯ್ದು ತೆಱದಂತರಾಯುಮೆಂಬ ಕರ್ಮದ ಕೇಡಿನಿಂದಮನಂತವೀರ್ಯಮನೊಡೆಯುರಾದರ್ ಅಂತೊರ್ವೊದಲೆ ಘಾತಿಕರ್ಮಂಗಳ ನಾಲ್ಕಱ ಕೇಡಿನಿಂದಮನಂತಚತುಷ್ಟಯುಮನೊಡೆಯರ್ ಮುಂಡಕೇವಳಿಗಳ್ಳಾ ಗಿರ್ದರ್ ಅನ್ನೆಗಮಿಂದ್ರನ ಬೆಸದಿಂ ಧನದಂ ಮಾಡಿದ ನೆಲದ ಮೇಗೈಸಾಸಿರ ಬಿಲ್ಲಂತ್ಸೇಧ ದೊಳಂತರಿಕ್ಷದೊಳೊಂದು ಯೋಜನ ವಿಸ್ತೀರ್ಣಮೇಕಶಿಲೆಯುಪ್ಪಿಂದ್ರನೀಲ ಮಣಿಕುಟ್ಟಿಮ ಭೂಮಿ ಯಕ್ಕುಮದಱ ಮೇಗೆ ಏಕಯೋಜನ ವಿಸ್ತೀರ್ಣ ರತ್ನಮಯುಮಪ್ಪ ಶ್ರೀಮಂಟಪಮಕ್ಕುಂ ಮತ್ತಂ ನಾಲ್ಕುಂ ದೆಸೆಯೊಳಂ ಕನಕಮಯುಮಪ್ಪ ನಾಲ್ಕುಂ ಸೋಪಾನಪಂಕ್ತಿಗಳನೊಡೆಯ ಭೂಮಿಯ

–ಎಂಬ ಐದು ಬಗೆಯ ಜ್ಞಾನಾವರಣೀಯಗಳೂ ಚಕ್ಷು, ಅಚಕ್ಷು, ಅವಧಿ, ಕೇವಲ ದರ್ಶನ, ನಿದ್ರಾ, ನಿದ್ರಾನಿದ್ರೆ, ಪ್ರಚಲಾ, ಪ್ರಚಲಾಪ್ರಚಲಾ, ಸ್ತ್ಯಾನಗೃದ್ಧಿ–ಎಂಬೀ ಒಂಬತ್ತು ಬಗೆಯ ದರ್ಶನಾವರಣೀಯ ಕರ್ಮಗಳೂ ಅಂತೂ ಘಾತಿ ಅಘಾತಿ ಎಂಬ ಎರಡು ಬಗೆಯ ಕರ್ಮಗಳು ನಾಶವಾದವು. ಲೋಕದ ಮತ್ತು ಲೋಕವಲ್ಲದ ಇತರ ಕಡೆಯ ಸೂಕ್ಷ್ಮವಾದ, ನಿಗೂಢವಾದ, ದೂರದಲ್ಲಿರುವ–ಪದಾರ್ಥಗಳು ವಸ್ತುಗಳೆಲ್ಲವನ್ನೂ ಕ್ರಮ–ಕರಣ–ವ್ಯವಧಾನಗಳಿಲ್ಲದೆಯೆ, ಬಗೆಯದೆ, ತಡೆಯದೆ, ಸುತ್ತಾಡದೆ, ಪ್ರೀತಿಸದೆ, ಎಲ್ಲಾ ವಸ್ತುಗಳನ್ನು ಒಮ್ಮೆಗೇ ತಿಳಿಯತಕ್ಕ ಕಾಣತಕ್ಕ ಅನಂತ ಜ್ಞಾನವನ್ನೂ ಅನಂತದರ್ಶನವನ್ನೂ ಉಳ್ಳವರಾದರು. ಅನಂತರ ಇಪ್ಪತೆಂಟು ವಿಧದ ಉತ್ತರ ಪ್ರಕೃತಿ ಗಳಿಂದ ಕೂಡಿದ ಮೋಹನೀಯುಮೆಂಬ ಕರ್ಮನಾಶವಾಗಿ ಅನಂತಸುಖವುಳ್ಳವರಾದರು. ಆ ಮೇಲೆ ದಾನಾಂತರಾಯ, ಲಾಭಾಂತರಾಯ, ಭೋಗಾಂತರಾಯ, ಉಪಭೋಗಾಂತ ರಾಯ, ವೀರ್ಯಾಂತರಾಯ–ಎಂಬ ಐದು ಬಗೆಯ ಅಂತರಾಯ ಕರ್ಮವು ನಾಶವಾಗಿ ಅನಂತ ವೀರ್ಯವುಳ್ಳವರಾದರು. ಅಂತೂ ಒಮ್ಮೆಯೇ ನಾಲ್ಕು ಬಗೆಯ ಘಾತಿಕರ್ಮಗಳು ನಾಶವಾಗಿ ಅನಂತಸುಖ–ಎಂಬ ನಾಲ್ಕು ಅನಂತಗಳುಳ್ಳವರೂ ಹತ್ತು ಬಗೆಯ ಮುಂಡನ (ವಶಪಡಿಸುವಿಕೆ)ವುಳ್ಳ ಮುಂಡಕೇವಲಿಗಳಾಗಿ ಇದ್ದರು. ಆ ವೇಳೆಗೆ ಇಂದ್ರನ ಆಜ್ಞೆ ಯಂತೆ ಕುಬೇರನು ಮಾಡಿದ ನೆಲದ ಮೇಲ್ಗಡೆ ಐದು ಸಾವಿರ ಬಿಲ್ಲಿನಷ್ಟು ದೂರದಲ್ಲಿ ಆಕಾಶದಲ್ಲಿ ಒಂದು ಏಕಶಿಲೆಯಾಗಿರತಕ್ಕ ಇಂದ್ರನೀಲದ ರತ್ನದ ಜಗಲಿಯ ನೆಲವಾಗಿ ದ್ದಿತು. ಅದರ ಮೇಲೆ ಒಂದು ಯೋಜನ ವಿಸ್ತಾರವಾದ, ರತ್ನಗಳಿಂದೊಪ್ಪುವ ಕಾಂತಿ ಯುಕ್ತವಾದ ಮಂಟಪವಿದ್ದಿತು. ಅದಲ್ಲದೆ, ನಾಲ್ಕು ದಿಕ್ಕುಗಳಲ್ಲಿಯೂ ಚಿನ್ನದಿಂದ ಕೂಡಿದ ನಾಲ್ಕು ಮೆಟ್ಟಲುಗಳ ಸಾಲುಗಳಿರುವ ನೆಲದ ಮೇಲೆ ಸಿಂಹಾಸನವಿದ್ದಿತು. ಆ

ಮೇಗೆ ಸಿಂಹಾಸನಮಕ್ಕುಂ ಅದಱ ಮೇಗಲರ್ದ ಪೊಂದಾವರೆಯಕ್ಕುಮದಂ ನಾಲ್ವೆರಲಂ ಮುಟ್ಟದೆ ಅದಱ ಮೇಗೆ ಪಲ್ಯಂಕದೊಳಿರ್ದೊಂದು ಬೆಳ್ಗೊಡೆಯನೊಡೆಯನಾಗಿ ಮೂವತ್ತೆರಡುಂ ಚಾಮರಂಗಳಂ ದೇವರ್ಕಳ್ ಬೀಸುತ್ತಮಿರ್ಪನ್ನೆಗಂ

ಗಾಹೆ ॥ ಸವ್ವೇ ಹಿ ಭವಣವಾಸೀವೇಂತರ ದೇವಾಯ ಪಳಹಪಳಂತಸಿಯಾ
ಘಂಟಿಯ ಕಪ್ಪವಾಸೀ ಸಿಹಣಿಣಾ ಎ ಇ ಜೋಇಸಿಯಾ

ಎಂದೀ ಪೇಳ್ದ ಚಿಹ್ನಂಗಳಿಂದಱಿದು ಚತುರ್ವಿಧ ದೇವನಿಕಾಯಂ ತಂತಮ್ಮ ಪರಿವಾರಂ ಬೆರಸು ಬಂದು ದಿವ್ಯಮಪ್ಪ ಗಂಧ ಪುಷ್ಪ ಧೂಪ ದೀಪಾಕ್ಷತಂಗಳಿಂದರ್ಚಿಸಿ ವಂದಿಸಿ ಸಮವಸರಣ ಕೋಷ್ಠಂಗಳೊಳ್ ತಂತಮ್ಮಿರ್ಪ ಸ್ಥಾನಂಗಳೊಳ್ ದೇವರ್ಕಳುಂ ದೇವಿಯರ್ಕಳುಂ ಚಾತುರ್ವರ್ಣ್ಯ ಸಂಘಮುಂ ಮೃಗಂಗಳುಂ ಬಳಸಿಯುಂ ಬಂದು ಧರ್ಮಮಂ ಕೇಳುತ್ತಿರ್ದರನ್ನೆಗಂ ಪಳಮುಖನುಂ ಧರ್ಮಮಂ ಕೇಳ್ದು ನಿಂದಿರ್ದಿಂತೆಂದು ಬಿನ್ನಪಂಗೆಯ್ಗುಂ ಭಟಾರಾ ನಿಮಗಾಂ ಪೊಲ್ಲಕೆಯ್ದೆನದನೆನಗೆ ಕ್ಷಮಿಯಿಸಿಮೆಂದೆಱಗಿ ಪೊಡೆವಟ್ಟೊಡೆ ಭಟಾರರೆಂದರ್ ನಿನಗೇನುಂ ದೋಷಮಿಲ್ಲೆಂದಾತನ ತಮ್ಮ ಭವಂಗಳಂ ಪೇಳ್ದೊಡೆ ಕೇಳ್ದು ಗೆಯ್ದ ಪಾಪಮಿಂತಲ್ಲದೆ ಪಿಂಗದೆನಗೆ ದೀಕ್ಷೆಯಂ ದಯೆಗೆಯ್ಯಿಮೆಂದು ಬೇಡಿ ತಪಂಬಟ್ಟು ಶಿಷ್ಯನಾಗಿ ಆಗಮಂಗಳನೋದುತ್ತಿರ್ದ

ಸಿಂಹಾಸನದ ಮೇಲೆ ಅರಳಿರುವ ಹೊಂದಾವರೆಯಿದ್ದಿತು. ಅದು ನಾಲ್ಕು ಬೆರಳನ್ನು ಮುಟ್ಟದ ಹಾಗೆ ಅದರ ಮೇಲುಗಡೆಯಲ್ಲಿ ಪದ್ಮಾಸನದಲ್ಲಿದ್ದುಕೊಂಡು ಒಂದು ಶ್ವೇತ ಛತ್ರವುಳ್ಳವನಾಗಿ ದೇವತೆಗಳು ಮೂವತ್ತೆರಡು ಚಾಮರಗಳನ್ನು ಬೀಸುತ್ತಿರಲು, ಹೀಗೆ ಗುರುದತ್ತ ಋಷಿಗಳು ಇರುತ್ತಿದ್ದರು. ಆ ಸಂದರ್ಭದಲ್ಲಿ—ಎಲ್ಲ ಭವನವಾಸಿಗಳು ಮತ್ತು ವ್ಯಂತರ ದೇವತೆಗಳು ಪಟಹಗಳ ಶಬ್ದದಿಂದ ಹೆದರಿದರು. ಕಲ್ಪವಾಸಿಗಳು ಗಂಟೆಯ ಶಬ್ದದಿಂದಲೂ ಜ್ಯೋತಿಷ್ಕದೇವತೆಗಳು ನವಿಲುಗಳ ಕೇಗುವಿಕೆಗಳಿಂದಲೂ ಹೆದರಿದರು. ಹೀಗೆ ಹೇಳಿದ ಚಿಹ್ನೆಗಳಿಂದ ತಿಳಿದುಕೊಂಡು ನಾಲ್ಕು ವಿಧದ ದೇವತಾ ಸಮೂಹದವರು ತಮ್ಮ ತಮ್ಮ ಪರಿವಾರ ಸಮೇತ ಬಂದು ದಿವ್ಯವಾದ ಗಂಧ ಪುಷ್ಪ ಧೂಪ ದೀಪ ಅಕ್ಷತೆಗಳಿಂದ ಪೂಜಿಸಿ ನಮಸ್ಕರಿಸಿ ಜಿನನು ಉಪದೇಶಮಾಡತಕ್ಕ ಸಭಾ ಭವನದ ಪ್ರದೇಶಗಳಲ್ಲಿ ತಾವು ತಾವು ಇರತಕ್ಕ ಸ್ಥಳಗಳಲ್ಲಿ ದೇವರುಗಳೂ ದೇವಿಯರುಗಳೂ ನಾಲ್ಕು ವರ್ಣಗಳ ಸಂಘವೂ ಮೃಗಗಳೂ ಸುತ್ತಲೂ ಕವಿದುಕೊಂಡು ಬಂದು ಧರ್ಮವನ್ನು ಕೇಳುತ್ತಿದ್ದವು. ಆ ವೇಳೆಯಲ್ಲಿ ಹಳಮುಖನೂ ಧರ್ಮವನ್ನು ಕೇಳಿಕೊಂಡು ನಿಂತಿದ್ದು ಈ ರೀತಿಯಾಗಿ ವಿಜ್ಞಾಪಿಸಿದನು—"ಋಷಿಗಳೇ, ನಿಮಗೆ ನಾನು ಕೆಟ್ಟದನ್ನು ಮಾಡಿದೆನು. ಅದನ್ನು ನೀವು ಕ್ಷಮಿಸಬೇಕು" ಎಂದು ಸಾಷ್ಟಾಂಗ ವಂದನೆ ಮಾಡಲು; ಋಷಿಗಳು "ನಿನಗೇನೂ ದೋಷವಿಲ್ಲ"-ಎಂದು ಆತನ ಜನ್ಮವೃತ್ತಾಂತವನ್ನು ಹೇಳಲು ಕೇಳಿ "ನಾನು ಮಾಡಿದ ಈ ಪಾಪಗಳು ಹೀಗಲ್ಲದೆ ಪರಿಹಾರವಾಗವು. ನನಗೆ ದೀಕ್ಷೆಯನ್ನು ದಯೆಪಾಲಿಸಿರಿ" ಎಂದು ಬೇಡಿ ತಪಸ್ಸನ್ನು ಉಪದೇಶ ಪಡೆದು ಶಿಷ್ಯನಾಗಿ

ನಿತ್ತ ಗುರುದತ್ತ ಕೇವಳಿಯುಂ ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾ ಮುಖಂಗಳಂ ವಿಹಾರಿಸುತ್ತಂ ಭವ್ಯವರ ಪುಂಡರೀಕರ್ಕಳ್ಗೆ ಧರ್ಮಾಮೃತಮಂ ಕರೆಯುತ್ತಂ ಪಲಂಬರುಮಂ ಧರ್ಮಂಗೊಳಿಸುತ್ತಂ ಮತ್ತಮಾ ಪಲ್ಲಿಖೇಡಮೆಂಬ ಊರ್ಗೆ ಬಂದು ಯೋಗ ನಿರೋಧಂ ಗೆಯ್ದು ಅಯೋಗಿ ಭಟಾರರಾಗಿ ಪಂಚ ಹ್ರಸ್ವಾಕ್ಷರೋಚ್ಚಾರಣ ಮಾತ್ರ ಕಾಲ ದಿಂದಾಯುರ್ನಾಮಗೋತ್ರ ವೇದನೀಯಮೆಂಬ ನಾಲ್ಕುಮಘಾತಿ ಕರ್ಮಂಗಳನೊರ್ಮೊದಲೆ ಕಿಡಿಸಿ ಏಕ ಸಮಯದೊಳಗೆ ಮೋಕ್ಷಸ್ಥಾನದೊಳ್ ನಿಲಸಿ ಜಾತಿ ಜರಾಮರಣಂಗಳುಂ ಪಸಿವುಂ ನೀರಟ್ಕೆ ಶೀತೋಷ್ಣವಾತಂ ಮೊದಲಾಗೊಡೆಯ ಆವ ಬಾಧೆಗಳಿಲ್ಲದ ಅನಂತಜ್ಞಾನಮನಂತ ದರ್ಶನಮನಂತಸುಖಮನಂತವೀರ್ಯದೊಳ್ ಕೂಡಿ ಎಲ್ಲಾ ಕಾಲಮುಂ ಸುಖಿಯಾಗಿರ್ದರ್

ಗಾಹೆ ॥ ಅರುಜಮಮರಣಂ ಮಧುರಂ ಅಕ್ಖಯ ಸೋಕ್ಖಂ ಅಣೋವಮಂ ಪತ್ತಾ
ಅವ್ವಾಬಾಧಮಣಂತಂ ಅಣಗಾರಾ ಕಾಲಮಚ್ಛಂತಿ

ಮತ್ತೆ ಪಳಮುಖರಿಸಿಯುರುಮಾಗಮಂಗಳೆಲ್ಲಮಂ ಕಲ್ತು ಏಕವಿಹಾರಿಯಾಗಿ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಕೊಂಕಣವಿಷಯ ಮನೆಯ್ದಿಯಾ ನಾಡೊಳ್ ಪೋಗುತ್ತಂ ಊರನೆಯ್ದದೆಡೆಯೊಳ್ ಪೊಲದೊಳ್ ನೇಸರ್ಪಟ್ಟೊಡೆ

ಶಾಸ್ತ್ರಗಳನ್ನು ಅಭ್ಯಾಸಮಾಡುತ್ತಿದ್ದನು. ಇತ್ತ ಗುರುದತ್ತರು ಕೇವಲ ಗ್ರಾಮ, ನಗರ, ಖೇಡ, ಖರ್ವಡ, ಮಡಂಬ, ಪಟ್ಟಣ, ದ್ರೋಣಾಮುಖಗಳಲ್ಲಿ ಸಂಚಾರ ಮಾಡುತ್ತ ಭವ್ಯ ರೆಂಬ ಶ್ರೇಷ್ಠರಾದ ತಾವರೆಗಳಿಗೆ ಧರ್ಮಾಮೃತವನ್ನು ಸುರಿಸುತ್ತ ಹಲವರನ್ನು ಧರ್ಮ ನಿಷ್ಠರನ್ನಾಗಿ ಮಾಡುತ್ತ ಆ ಮೇಲೆ ಆ ಪಲ್ಲಿಖೇಡವೆಂಬ ಊರಿಗೆ ಬಂದು ಯೋಗವನ್ನು ಬಲವಂತದಿಂದ ಮಾಡಿ, ಯೋಗಿಸಂನ್ಯಾಸಿಗಳಾಗಿ ಐದು ಹ್ರಸ್ವಾಕ್ಷರಗಳನ್ನು ಉಚ್ಚರಿಸಿದ ಮಾತ್ರಾಕಾಲದಿಂದ ಆಯುಸ್ಸು, ನಾಮ, ಗೋತ್ರ, ವೇದನೀಯ–ಎಂಬ ನಾಲ್ಕು ಬಗೆಯ ಅಘಾತಿಕರ್ಮಗಳನ್ನು ಏಕಕಾಲದಲ್ಲೇ ನಾಶಮಾಡಿ ಒಮ್ಮೆಗೇ ಮೋಕ್ಷಸ್ಥಾನದಲ್ಲಿ ನಿಂತು– ಜನ್ಮ, ಮುಪ್ಪು, ಸಾವು, ಹಸಿವು, ಬಾಯಾರಿಕೆ, ಶೀತ, ಉಷ್ಣ, ವಾಯು–ಮುಂತಾಗಿ ರುವ ಯಾವ ತೊಂದರೆಗಳೂ ಇಲ್ಲದ ಅನಂತ ಜ್ಞಾನ, ಅನಂತ ದರ್ಶನ, ಅನಂತ ಸುಖ, ಅನಂತವೀರ್ಯ—ಎಂಬ ಅನಂತ ಚತುಷ್ಟಯದಲ್ಲಿ ಸೇರಿ ಎಲ್ಲಾ ಕಾಲವೂ ಸುಖದಿಂದ ಇದ್ದರು. [ಮುಕ್ತರಾದವರು ರೋಗವಿಲ್ಲದ, ಮರಣವಿಲ್ಲದ, ಮಧುರವಾದ, ಅಸದೃಶ ವಾದ ಯಾವ ಕಡೆಯೂ ಇಲ್ಲದ ಅಕ್ಷಯ ಸುಖವನ್ನು ಅನಂತವಾದ ಭವಿಷ್ಯತ್ತಿನ ವರೆಗೂ ಪಡೆಯುತ್ತಾರೆ.] ಆ ಮೇಲೆ ಹಳಮುಖ ಋಷಿಗಳು ಶಾಸ್ತ್ರಗಳೆಲ್ಲ ವನ್ನೂ ಕಲಿತು ಒಬ್ಬರೇ ಸಂಚಾರ ಮಾಡುವವರಾಗಿ ಗ್ರಾಮ, ನಗರ, ಖೇಡ, ಖರ್ವಡ, ಮಡಂಬ, ಪಟ್ಟಣ, ದ್ರೋಣಾಮುಖಗಳೆಂಬ ಭೂ ಭಾಗಗಳಲ್ಲಿ ಸಂಚಾರ ಮಾಡುತ್ತ ಕೊಂಕಣ ದೇಶಕ್ಕೆ ಹೋದರು. ಆ ನಾಡಿನಲ್ಲಿ ಹೋಗುತ್ತ ಊರಿಗೆ ಹೋಗದೆ ಮಧ್ಯ

ಗಮನದ ಮರಣದ ವಿಧಾನಮಂ ಬೆಸಗೊಂಡೊಡೆ ಭಟಾರರಿಂತೆಂದು ಪೇೞ್ದರ್ :

ಶ್ಲೋಕ ॥ ಸ್ಥಿತಸ್ಯ ವಾ ನಿಷಣ್ಣಸ್ಯ ಯಾವತ್ ಸುಪ್ತಸ್ಯ ವಾ ಪುನಃ
ಸರ್ವಾಭೀಷ್ಟ ಪರಿತ್ಯಾಗಃ ಪ್ರಾಯೋಪಗಮನಂ ಸ್ಮೃತಂ ॥

ಇಂತುಟಾ ಪ್ರಾಯೋಪಗಮನದ ಲಕ್ಷಣಮೆಂದು ಭಟಾರರ್ ವಕ್ಕಾಣಿಸಿ ಪೇೞೆ ಕೇಳ್ದಱಿದು ಲಲಿತಘಟೆಯನಿಬರುಂ ಭಟಾರರ ಪಕ್ಕದೆ ಚತುರ್ವಿಧಮಪ್ಪಾಹಾರಮುಂ ಶರೀರಮುಮಂ ಯಾವಜ್ಜೀವಂ ತೊಱೆದು ಭಟಾರರು ಬಂದಿಸಿ ಪೋಗಿ ವಿಶಾಳೆಯೆಂಬ ತೊಱೆಯ ತಡಿಯೊಳನಿಬರುಮೇಕಪಾರ್ಶ್ವದೊಳ್ ಪಟ್ಟಿರ್ದು ಕೈಯುಂ ಕಾಲುಮನಾಡಿಸದೊಂದು ಕೆಲದಿಂದೊಂದು ಕೆಲಕ್ಕೆ ಮಗುೞದೆ ಕುಳ್ಳಿರದೆ ನಿಂದಿರದೆ ನುಡಿಯದೆ ಕಣ್ಗಳಂ ನೋಡದಿಂತು ಪ್ರಾಯೋಪಗಮನಂಗೆಯ್ದು ಪದಿನಯ್ದು ದಿವಸಂ ಮೆಯ್ಯಂ ತೊಱೆದಿರ್ದೊರನ್ನೆಗಂ ಮೇಗೆ ಪಿರಿದೊಂದು ಮೞೆಕೊಂಡು ಪೂರಂ ಬಂದವರನೆೞೆದುಕೊಂಡು ಪೋಗಿ ಪಿರಿದೊಂದು ಮಡುವಿನೊಳಿಕ್ಕಿದೊಡೆ ನೀರೊಳಗಿರ್ದು ಮೋಹಿಸದ ಬುದ್ಧಿಯನೊಡೆಯರಾಗಿ ದೇವರಂ ಜಾನಿಸುತ್ತಂ ಪಂಚನಮಸ್ಕಾರಮಂ ಮನದೊಳುಚ್ಚಾರಿಸುತ್ತಂ ಶುಭಧ್ಯಾನದೊಳ್ ಪರಿಣತರಾಗಿ ದರ್ಶನ ಜ್ಞಾನ

ಗ್ರಹ ಎಂಬ ಐದು ಮಹಾವ್ರತಗಳನ್ನು ಕೈಕೊಂಡು ಪ್ರಾಯೋಪಗಮನದ ಪದ್ಧತಿಯಲ್ಲಿ ಮರಣದ ವಿಧಾನ ಹೇಗೆಂದು ಕೇಳಲು ಭಟಾರರು ಹೀಗೆಂದರು–[ನಿಂತಿರುವವನದಾಗಲಿ ಕುಳಿತಿರುವವನದಾಗಲಿ ಮತ್ತು ಮಲಗಿರುವವನದಾಗಲಿ ಯಾವಾಗ ಎಲ್ಲ ಆಕಾಂಕ್ಷೆಗಳನ್ನು ಬಿಟ್ಟುಬಿಡುವುದು ಆಗುತ್ತದೋ ಅದು ಪ್ರಾಯೋಪಗಮನವೆಂದು ತಿಳಿಯಬಹುದು.] ಆ ಪ್ರಾಯೋಪಗಮನದ ಲಕ್ಷಣ ಈ ರೀತಿಯೆಂದು ಭಟಾರರು ವ್ಯಾಖ್ಯಾನಿಸಿ ಹೇಳಲು, ಅವರೆಲ್ಲರೂ ಕೇಳಿ ತಿಳಿದುಕೊಂಡರು. ಲಲಿತಘಟೆಯವರೆಲ್ಲರೂ ಋಷಿಗಳ ಬಳಿಯಲ್ಲಿ ನಾಲ್ಕು ವಿಧದ ಆಹಾರವನ್ನೂ ಶರೀರವನ್ನೂ ಜೀವವಿರುವವರೆಗೂ ಬಿಟ್ಟು ಋಷಿಗಳಿಗೆ ವಂದಿಸಿ ಹೋಗಿ ವಿಶಾಳೆ ಎಂಬ ಹೊಳೆಯದಡದಲ್ಲಿ ಅವರೆಲ್ಲರೂ ಒಂದು ಮಗ್ಗುಲಲ್ಲಿ ಮಲಗಿದರು. ಕೈಕಾಲುಗಳನ್ನು ಆಡಿಸದೆ, ಒಂದು ಮಗ್ಗುಲಿಂದ ಮತ್ತೊಂದು ಮಗ್ಗುಲಿಗೆ ಹೊರಳದೆ, ಕುಳಿತಿರದೆ, ನಿಂತಿರದೆ, ಮಾತಾಡದೆ ಅತ್ತಿತ್ತ ನೋಡದೆ—ಹೀಗೆ ಪ್ರಾಯೋಪಗಮನವನ್ನು ಮಾಡಿ ಹದಿನೈದು ದಿನ ಶರೀರದ ಗೊಡವೆಯನ್ನೇ ಬಿಟ್ಟಿದ್ದರು. ಹೀಗಿರಲು ಮೇಲೆ ದೊಡ್ಡದೊಂದು ಮಳೆ ಸುರಿದು, ಮಹಾಪ್ರವಾಹ ಬಂದು, ಅವರನ್ನು ಎಳೆದುಕೊಂಡು ಹೋಗಿ ದೊಡ್ಡದೊಂದು ಮಡುವಿಗೆ ಹಾಕಿತು. ಅವರು ಅಲ್ಲಿ ನೀರಿನೊಳಗೆ ಇದ್ದುಕೊಂಡು ಆಸೆಪಡದ ಬುದ್ಧಿಯುಳ್ಳವರಾಗಿ ದೇವರನ್ನು ಧ್ಯಾನ ಮಾಡುತ್ತ ಪಂಚನಮಸ್ಕಾರ ಮಂತ್ರಗಳನ್ನು ಮನಸ್ಸಿನಲ್ಲಿಯೇ ಉಚ್ಚಾರಣೆ ಮಾಡುತ್ತ ಶುಭವಾದ ಧ್ಯಾನದಲ್ಲಿ ಕುಶಲರಾಗಿ ದರ್ಶನ–ಜ್ಞಾನ–

ಶಿಲಾತಲದ ಮೇಗೆ ಪಂಥಾತಿಚಾರ ನಿಯಮಂ ಗೆಯ್ದಿರ್ದ ಗುಣೋತ್ತಮರೆಂಬ ಭಟಾರರಂ ವನಕ್ರೀಡೆಗೆ ಪೋದ ಧರ್ಮಘೋಷನುಂ ಧರ್ಮಕೀರ್ತಿಕುಮಾರನುಂ ಕಂಡು ಬಂದಿಸಿ ಭಟಾರಾ ಎಮಗೆ ಧರ್ಮಮಂ ಪೇಟಿ ಮೆಂದೊಡೆ ಭಟಾರರಿಂತೆಂದು ಧರ್ಮಮಂ ಪೇೞ್ದರ್ :

ವೃತ್ತ ॥ ಕೋ ಧರ್ಮಪ್ರವರೋ ದಯಾತ್ಮಸುಭಗಃ ಕಃ ಸ್ಯಾನ್ನರಃ ಪಂಡಿತಃ
ಕಾ ಯೋಷಿದ್ವಶಗಾ ಕಲಿಪ್ಯಯತಿ (?) ಚೇತ್ ಕ್ರೋಧೋ ऽ ಶುಭಸ್ಯೋದಯಃ
ಕಾ ऽ ಲಕ್ಷ್ಮೀರವಿಚಾರ ಕಾರ್ಯಘಟನಾ ಕಿಂ ಮಿತ್ರಮಾತ್ಮಾऽऽತ್ಮನಃ
ಕಿಂ ಸೌಖ್ಯಂ ಭುವಿ ಶಾಸ್ತ್ರವಾಚನಮತಿಃ ಕಾ ವಾ ಗತಿರ್ನಿರ್ವೃತಿಃ ॥

ಸಮ್ಯಕ್ತ್ವೋತ್ತಮಃ ಹಸ್ತಿ ಮಸ್ತಕ ಗತಃ ಸುಜ್ಞಾನಕೇತು ಪ್ರಜೋ
ನಾನಾಶೀಲಗುಣವ್ರತೋರುಪೃತನಃ ಸ್ವಾಧ್ಯಾಯ ಶಂಖಧ್ವನಿಃ
ಭಾಸ್ವತ್ಸಂವರ ಭೂರಿ ಚಾರುಕವಚೋ ನಾತೀವ ತೀಕ್ಷ್ಣಾಯುಧಃ
ಸೇವ್ಯೋ ಧರ್ಮಮಹಾನೃಪೋ ಬುಧಭಟೈಃ ಸ್ವರ್ಮೋಕ್ಷವೃತ್ತಿಪ್ರದಃ ॥

ಶ್ಲೋಕ ॥ ಧರ್ಮಾರ್ಥಕಾಮಮೋಕ್ಷಾಣಾಂ ಯಸ್ಯೈಕೋऽಪಿ ನ ವಿದ್ಯತೇ
ಅಜಾಗಲ ಸ್ತನಸ್ಯೇವ ತಸ್ಯ ಜನ್ಮ ನಿರರ್ಥಕಂ ॥

ಕುಳಿತು ತಮ್ಮ ದಾರಿಯಲ್ಲಿ ಆಗಿರಬಹುದಾದ ಅತಿಚಾರ (ಧರ್ಮವಿರುದ್ಧವಾದ ಕೃತ್ಯ)ಗಳ ಪ್ರಾಯಶ್ಚಿತ್ತಗಳೆನಿಸಿದ ಪಂಥಾತಿಚಾರ ನಿಯಮಗಳನ್ನು ಆಚರಿಸುತ್ತಿದ್ದರು. ಆ ವೇಳೆಯಲ್ಲಿ ಉದ್ಯಾನ ಕೇಳಿಗೆಂದು ಹೋಗಿದ್ದ ಧರ್ಮಘೋಷನೂ ಧರ್ಮಕೀರ್ತಿಯೂ ಋಷಿಗಳನ್ನು ಕಂಡು ವಂದನೆಗೈದರು. "ಪೂಜ್ಯರೇ, ನಮಗೆ ಧರ್ಮೋಪದೇಶವನ್ನು ಮಾಡಿ" ಎಂದು ಕೇಳಿಕೊಂಡರು. ಆಗ ಭಟಾರರು ಈ ರೀತಿಯಾಗಿ ಧರ್ಮವನ್ನು ವಿವರಿಸಿ ಹೇಳಿದರು— ಧರ್ಮದಲ್ಲಿ ಅತ್ಯಂತ ಶ್ರೇಷ್ಠನು ಯಾರು ?–ದಯೆಯಿಂದ ಕೂಡಿದ ಆತ್ಮ ಸೌಭಾಗ್ಯವುಳ್ಳವನು. ಮನುಷ್ಯನು ಯಾವನು ?–ಪಾಂಡಿತ್ಯವುಳ್ಳವನು. ಹೆಂಗುಸು ಯಾವಳು ?–ವಶವರ್ತಿಯಾಗಿರುವವಳು. ಕೋಪದಿಂದ ಏನಾಗುತ್ತದೆ ?–ಅಶುಭವುಂಟಾಗುತ್ತದೆ. ಅಲಕ್ಷ್ಮಿ (ದಾರಿದ್ರ್ಯ) ಯಾವುದು ?–ವಿಚಾರವಿಲ್ಲದೆ ಕೆಲಸ ಮಾಡುವುದು. ತನ್ನ ಮಿತ್ರನು ಯಾವನು ?–ತಾನೇ. ಲೋಕದಲ್ಲಿ ಸುಖ ಯಾವುದು ?–ಶಾಸ್ತ್ರವನ್ನು ಓದುವ ಬುದ್ಧಿ. ಗತಿ (ಗುರಿ) ಯಾವುದು?–ಮೋಕ್ಷವು. ಸಮ್ಯಕ್ತ್ವವೆಂಬ ಆನೆಯ ತಲೆಯ ಮೇಲೆ ಕುಳಿತಿರುವ, ಸುಜ್ಞಾನವೆಂಬ ಧ್ವಜಸಮೂಹವುಳ್ಳ, ಹಲವು ಬಗೆಯ ಶೀಲ ಗುಣವ್ರತಗಳೆಂಬ ಸೈನ್ಯವುಳ್ಳ, ಶಾಸ್ತ್ರಾಭ್ಯಾಸವೆಂಬ ಶಂಖಧ್ವನಿಯುಳ್ಳ, ಹೊಳೆಯುವ ಸಂವರವೆಂಬ ಅತಿ ಸುಂದರವಾದ ಕವಚವುಳ್ಳ, ಅತಿ ತೀಕ್ಷ್ಣವಾದ ಆಯುಧಗಳಿಲ್ಲದ, ಸ್ವರ್ಗ ಮೋಕ್ಷಗಳ ಸ್ಥಿತಿಯನ್ನು ಕೊಡುವ, ಧರ್ಮವೆಂಬ ಮಹಾರಾಜನು ವಿದ್ವಾಂಸರೆಂಬ ಸೈನಿಕರಿಂದ

ಯತ್ರಾಸ್ತಮಿತವಾಸಿಯೆಲ್ಲಿ ನೇಸರ್ಪಟ್ಟೊಡಲ್ಲಿಯೆ ನಿಲ್ವರಪ್ಪುದಱಿಂ ಕುಮ್ಮರಿಯುಂ ಸುಡಲೆಂದು ಕಡಿದೊಟ್ಟಿದ ಮರಂಗಳ ಮೇಗಿರುಳ್ ದೇವರಂ ಬಂದಿಸಿ ನಿಯಮಂಗೆಯ್ದು ಜೋಗಭಕ್ತಿಯಿಂ ದಿರ್ದರನ್ನೆಗಂ ಕುಮ್ಮರಿಯುಂ ಸುಡಲೆಂದು ತುಂಗಭದ್ರನೆಂಬ ಪೊಡುಂಗಾಱಂ ಸೊರ್ಕಿ ತೊಂಕಡಿಂದಿರುಳ್ ಕಟ್ಟಿಂಗಳ್ ಕಡುಗತ್ತಲೆಯೊಳ್ ಬಂದು ಕಿಚ್ಚಂ ತಗುಟ್ಚಿಪೋದೊನಾ ಕಿಚ್ಚಿನಿಂದಾ ಹಳಮುಖರಿಸಿಯುಂ ಬೇಯುತ್ತಂ ಧರ್ಮಧ್ಯಾನಂಗಳಂ ಧ್ಯಾನಿಸಿ ಶುಭ ಪರಿಣಾಮದಿಂ ಮುಡಿಪಿ ಪದಿನಾಱನೆಯಚ್ಯುತ ಕಲ್ಪದೊಳ್ ಇರ್ಪತ್ತೆರಡು ಸಾಗರೋಪಮಾಯುಷ್ಯಮನೊಡೆಯೊನಚ್ಯುತೇಂದ್ರನಾಗಿ ಪುಟ್ಟಿದೊಂ ಮತ್ತಿತ್ತ ತುಂಗಭದ್ರನೆಂಬೊಂ ಪೊಡುಂಗಾಱಂ ನೇಸಮೂರ್ಡೆ ಕುಮ್ಮರಿಯುಂ ನೋಡಲೆಂದು ಪೋದನನ್ನೆಗಂ ಸತ್ತಿರ್ದ ರಿಸಿಯುಂ ಕಂಡು ಪಂಚಮಹಾಪಾತಕನೆಂ ನಿಷ್ಕಾರಣಮಱಿಯದೆ ರಿಸಿಯರಂ ಕೊಂದೆನೆಂದು ನಿಂದಣೆ ಗರುಹಣೆ ಗೆಯ್ದು ತಾನುಮಲ್ಲಿಯೆ ಕಿಚ್ಚಂ ಪೊಕ್ಕು ಸತ್ತು ವ್ಯಂತರದೇವನಾಗಿ ಪುಟ್ಟಿ ಆಯುಷ್ಯಾಂತದೊಳ್ ಬಂದಿಲ್ಲಿ ವಿಂಧ್ಯಾಟವಿಯೊಳಾದಮಾನುಂ ರೌದ್ರಮಪ್ಪ ಬಿಳಿಯ ಪೇರಾನೆಯಾಗಿ ಪುಟ್ಟಿ ಬಟ್ಟೆಯೊಳ್ ಪೋಪ ಬರ್ಪ

ದಲ್ಲಿ ಒಂದು ಹೊಲಕ್ಕೆ ತಲಪಿದಾಗ ಸೂರ್ಯನು ಮುಳುಗಿದನು. ಯತ್ರಾಸ್ತಮಿತವಾಸಿಯಾದ ಸಂನ್ಯಾಸಿಗಳು ಎಲ್ಲಿ ಸೂರ್ಯಾಸ್ತವಾಯಿತೋ ಅಲ್ಲಿಯೇ ನಿಲ್ಲುವರಾದುದರಿಂದ ಕುಮ್ಮರಿಯನ್ನು ಸುಡುವುದಕ್ಕಾಗಿ ಕಡಿದು ರಾಶಿ ಹಾಕಿದ ಮರಗಳ ಮೇಲೆ ರಾತ್ರಿಯಲ್ಲಿ ದೇವರನ್ನು ವಂದಿಸಿ ನಿಯಮಗಳನ್ನು ಆಚರಿಸಿ ಯೋಗಯುಕ್ತವಾದ ಭಕ್ತಿಯಿಂದ ಇದ್ದರು. ಹೀಗಿರಲು, ಕಾಡುಕತ್ತರಿಸುವವನಾದ ತುಂಗಭದ್ರನೆಂಬವನು ಕುಮ್ಮರಿಯನ್ನು ಸುಡುವುದಕ್ಕಾಗಿ ಅಮಲೇರಿದ ನಿದ್ದೆಯಿಂದ, ರಾತ್ರಿ ಅಮಾವಾಸ್ಯೆಯ ತೀವ್ರವಾದ ಕತ್ತಲೆಯಲ್ಲಿ ಬಂದು ಮರದ ರಾಶಿಗೆ ಬೆಂಕಿಯನ್ನು ಹಚ್ಚಿ ಹೋದನು. ಆ ಬೆಂಕಿಯಿಂದ ಹಳಮುಖ ಋಷಿ ಬೇಯುತ್ತಿರುವಾಗಲೇ ಆಜ್ಞಾವಿಚಯ, ಅಪಾಯ ವಿಚಯ, ವಿಪಾಕ ವಿಚಯ, ಸಂಸ್ಥಾನ ವಿಚಯ–ಎಂಬ ಧರ್ಮಧ್ಯಾನಗಳನ್ನು ಧ್ಯಾನಿಸಿ ಶುಭ ಪರಿಣಾಮದಿಂದ ಸತ್ತು, ಹದಿನಾರನೆಯ ಅಚ್ಯುತವೆಂಬ ಸ್ವರ್ಗದಲ್ಲಿ ಇಪ್ಪತ್ತೆರಡು ಸಾಗರವನ್ನು ಹೋಲುವ ಪರಿಮಾಣವುಳ್ಳ ಆಯುಷ್ಯವಿರತಕ್ಕ ಅಚ್ಯುತೇಂದ್ರನಾಗಿ ಹುಟ್ಟಿದರು. ಆಮೇಲೆ ಇತ್ತ ಕಾಡುಕಡಿವವನಾದ ತುಂಗಭದ್ರನು ಸೂರ್ಯೋದಯವಾಗಲು ಕುಮ್ಮರಿಯನ್ನು ನೋಡುವುದಕ್ಕಾಗಿ ಹೋದನು. ಆಗ ಸತ್ತು ಹೋಗಿದ್ದ ಋಷಿಯನ್ನು ಕಂಡು, "ಪಂಚಮಹಾಪಾಪ ಮಾಡಿದವನಾಗಿದ್ದೇನೆ. ಏನೂ ಕಾರಣವಿಲ್ಲದೆ, ತಿಳಿಯದೆ ಋಷಿಗಳನ್ನು ಕೊಂದೆನು" ಎಂದು ನಿಂದನೆ ಗರ್ಹಣೆ (ತೆಗಳು) ಗಳನ್ನು ಮಾಡಿಕೊಂಡು, ತಾನೂ ಅಲ್ಲಿಯೇ ಅಗ್ನಿಪ್ರವೇಶ ಮಾಡಿ ಸತ್ತು ವ್ಯಂತರ ದೇವನಾಗಿ ಹುಟ್ಟಿದನು. ಅಲ್ಲಿ ಆಯುಷ್ಯ ತೀರಲು ಭೂಲೋಕಕ್ಕೆ ಬಂದು ವಿಂಧ್ಯೆಯ ಕಾಡಿನಲ್ಲಿ ಅತ್ಯಂತ ಭಯಂಕರವಾದ ಬಿಳಿಯ ಮಹಾಗಜವಾಗಿ ಹುಟ್ಟಿ, ಆ ಆನೆ ದಾರಿಯಲ್ಲಿ ಹೋಗುವ ಬರುವ ಜನ

ಜನಂಗಳನೆಬ್ಬಿಟ್ಟಿ ಕೊಲುತ್ತಮಿರ್ಪುದಂ ಹಳಮುಖಚರನಪ್ಪ ಅಚ್ಯುತೇಂದ್ರನವಧಿಜ್ಞಾನದಿಂ
ದಱಿದು ಬಂದು ಧರ್ಮಮಂ ಪೇೞ್ದು ಪ್ರತಿಬೋಧಿಸಿ ಶ್ರಾವಕವ್ರತಂಗಳ ಫಲಮಂ ಪೇೞ್ದು
ಸಮ್ಯಕ್ತ್ವಪೂರ್ವಕಂ ಬ್ರತಂಗಳಂ ಕೈಕೊಳಿಸಿ ಪೋದನಾನೆಯುಂ ಕೊಲೆಯನುೞಿದು ಮಧು
ಮದ್ಯಮಾಂಸಂಗಳಂ ತೊಱೆದು ಷಷ್ಠಾಷ್ಟಮ ದಶಮ ದ್ವಾದಶಾದಿ ನೋಂಪಿಗಳಂ ನೋನುತ್ತಂ
ಪಾರಿಸುವ ದಿವಸಂ ಪ್ರಾಸುಕಮಾಗುತಿರ್ದ ತಱಗೆಲೆಗಳಂ ಮೇದು ಗಜಯೂಥಮುಂಡು ಪೋದ
ಬೞಿಕ್ಕೆ ಕದಡಿದ ನೀರ್ಗಳನುಂಡಿಂತು ಪಲಕಾಲಂ ಸಂಯಮಮೆಂಬ ಬ್ರತಮಂ ಸಲಿಸುತ್ತ
ಮಿರ್ಪನ್ನೆಗಂ ಮತ್ತೊಂದು ದಿವಸಮಡವಿಯೊಳ್ ಬೇಸಗೆಯ ದಿನಂ ಕಾಟ್ಕಿಚ್ಚು ತಗು
ಳ್ದೊಡೆ ಕಿಚ್ಚಿಂಗಂಜಿ ಪಿರಿದೊಂದಾಲದ ಮರದ ಕೆೞಗೆ ಗಜಯೂಥದೊಡನೆ ಬಂದಿರ್ದುದಾ
ಮರದೊಣಗಿದ ಕೊಂಬುಗಳೊಳ್ ಕಿಚ್ಚು ತಗುಳ್ದು ತನ್ನಂ ಸುಡುವನ್ನೆಗಮೊಂದು ಮೊಲಂ
ಕಿಚ್ಚಿನಿಂದಂ ಬೆಂದುರಿಯ ಬಣ್ಣಮಾಗಿ ಪರಿತಂದು ತನ್ನ ಕಾಲ ಕೆೞಗೆ ಪೊಕ್ಕೊಡದಂ ಕಂಡು
ದಯೆಯಿಂದಕ್ಕಟ ಅಯ್ಯೋ ಎಂದು ಕಾರುಣ್ಯಮಪ್ಪ ಮನದೊಳ್ ಕೂಡಿ ಸತ್ತು ಪನ್ನೆರಡನೆಯ
ಸಹಸ್ರಾರ ಕಲ್ಪದೊಳ್ ಪದ್ಮಗುಲ್ಮಮೆಂಬ ವಿಮಾನದೊಳ್ ಪದಿನೆಂಟು ಸಾಗರೋಪಮಾಯುಷ್ಯ
ಮನೊಡೆಯೊಂ ಸಾಮಾನಿಕ ದೇವನಾಗಿ ಪುಟ್ಟಿದೊಂ ಪುಟ್ಟಿ ದೇವಲೋಕದ ಸುಖಮಂ

ರನ್ನು ಎಬ್ಬಿಸಿ ಓಡಿಸಿ ಕೊಲ್ಲುತ್ತ ಇದ್ದಿತು. ಇದನ್ನು ಹಳಮುಖನಾಗಿ ಹಿಂದೆ ವರ್ತಿ
ಸಿದ್ದ ಅಚ್ಯುತೇಂದ್ರನು ಅವಧಿಜ್ಞಾನದಿಂದ ತಿಳಿದು ಬಂದು, ಧರ್ಮವನ್ನು ತಿಳಿಸಿ,
ಉಪದೇಶಿಸಿ ಶ್ರಾವಕವ್ರತಗಳಿಂದಾಗತಕ್ಕ ಫಲವನ್ನು ಹೇಳಿ ಜೈನಧರ್ಮದಲ್ಲಿ ಪರಿಪೂರ್ಣ
ವಾದ ನಂಬಿಕೆಯೊಂದಿಗೆ ವ್ರತಗಳನ್ನು ಸ್ವೀಕಾರಗೊಳಿಸಿ ತೆರಳಿದನು. ಆನೆಯು ಕೊಲೆ
ಮಾಡುವುದನ್ನು ಬಿಟ್ಟು, ಮಧು ಮದ್ಯಮಾಂಸ ಸೇವನೆಯನ್ನೂ ಬಿಟ್ಟು ಆರನೆಯ
ಎಂಟನೆಯ ಹತ್ತನೆಯ ಹನ್ನೆರಡನೆಯದೇ ಮುಂತಾದ ವ್ರತಗಳನ್ನು ಆಚರಿಸುತ್ತ ಪಾರಣೆ
ಮಾಡುವ ದಿವಸ ಜೀವರಹಿತ (ನಿರ್ಮಲ) ವಾಗಿದ್ದ ತರಗೆಲೆಗಳನ್ನು ಮೇದು ಆನೆಗಳ ಹಿಂಡು
ಸೇವಿಸಿ ಹೋದನಂತರ ಕದಡಿದ ನೀರುಗಳನ್ನು ಸೇವಿಸಿ–ಹೀಗೆ ಹಲವು ಕಾಲದ ತನಕ
ಸಂಯಮ ವ್ರತವನ್ನು ನಡೆಸುತ್ತಾ ಇದ್ದಿತು. ಅನಂತರ ಒಂದು ದಿವಸ ಕಾಡಿನಲ್ಲಿ
ಬೇಸಗೆಯ ದಿನದಂದು ಕಾಡುಗಿಚ್ಚು ಅಟ್ಟಿಕೊಂಡು ಬಂದಿತು. ಆ ಕಾಡುಗಿಚ್ಚಿಗೆ
ಹೆದರಿ ಆನೆಯು ದೊಡ್ಡದಾದ ಒಂದು ಆಲದ ಮರದ ಕೆಳಗೆ ಆನೆಗಳ ಹಿಂಡಿನೊಡನೆ
ಬಂದಿದ್ದಿತು. ಆ ಮರದ ಒಣಗಿದ ಕೊಂಬೆಗಳಿಗೆ ಬೆಂಕಿ ತಗಲಿ ಅಲ್ಲಿದ್ದ ಒಂದು ಮೊಲದ
ನ್ನು ಸುಡುತ್ತಿರಲು, ಆ ಮೊಲವು ಬೆಂಕಿಯಿಂದ ಬೇದು ಬೆಂಕಿಯ ಬಣ್ಣವಾಗಿ ಬಂದು
ಆ ಆನೆಯ ಕಾಲ ಕೆಳಗಡೆ ಹೊಕ್ಕಿತು. ಅದನ್ನು ಆನೆ ಕಂಡು, ಕರುಣೆಯಿಂದ "ಅಕ್ಕಟಾ,
ಅಯ್ಯೋ" ಎಂದು ದಯೆಯಿಂದ ಕೂಡಿದ ಮನಸ್ಸುಳ್ಳುದಾಗಿ ಸತ್ತು ಹನ್ನೆರಡನೆಯ
ಸಹಸ್ರಾರ ಕಲ್ಪದಲ್ಲಿ ಪದ್ಮಗುಲ್ಮವೆಂಬ ಏಳು ಅಂತಸ್ತಿನ ಅರಮನೆಯಲ್ಲಿ ಹದಿನೆಂಟು
ಸಾಗರಕ್ಕೆ ಸಮಾನವಾದ ಆಯುಷ್ಯವನ್ನುಳ್ಳ ಸಾಮಾನಿಕ ದೇವನಾಗಿ ಹುಟ್ಟಿದನು.

ವಿದ್ಯೆಗಳೆಲ್ಲಮಂ ಸಾಧಿಸುವಲ್ಲಿಯಾಕಾಶಕ್ಕೆ ನೆಗೆಯುತ್ತುಂ ಬೀೞುತ್ತುಮಿರ್ಪನ್ನೆಗಮಭಯ ಕುಮಾರಂ ತಂದೆಯ ಬೆಸನಂ ತೀರ್ಚಲೆಂದುಪಾಯಮಂ ಬಗೆಯಲ್ವೇಡಿ ಕಱ್ತಿಂಗಳೊಳ್ ನಟ್ಟ ನಡುವಿರುಳೊಳ್ ಮಣಿಖೇಟಮನುರದೊಳ್ ಸಾರ್ಚಿ ಕಟ್ಟಿ ಬಾಳ್ವೆರಸು ಪೊಱಮಟ್ಟು ಪೊೞಲೊಳೆಲ್ಲಂ ತೊೞಲ್ದು ಪೊಱಪೊೞಲಂ ತೊೞಲ್ವನ್ನೆಗಂ ಶ್ಮಶಾನದೊಳ್ ಮೇಗಣ್ಗೊಗೆಯುತ್ತುಂ ಬೀೞುತ್ತುಮಿರ್ದ ಪುರುಷನಂ ಕಂಡು ನೀನಾರ್ಗೆನೆಂಬೆಯೆಲ್ಲಿರ್ಪೆಯಾಕಾಶಕ್ಕೆ ನೆಗೆದು ಮತ್ತಂ ನೆಲದೊಳೇಕೆ ಬೀೞ್ವೆಯೆಂದು ಬೆಸಗೊಂಡೊಡಾತನಿಂತೆಂದಂ ಆಂ ವಿದ್ಯಾಧರನೆಂಬೆಂ ಚಿಂತಾಗತಿ ನಾಮಧೇಯನೆನೆಂದು ತನ್ನ ವೃತ್ತಾಂತಮೆಲ್ಲಮಂ ಪೇೞ್ದೊಡೆ ಮತ್ತೀಗಳ್ ನೀನೇಗೆಯ್ವಪ್ಪೆಯೆಂದು ಬೆಸಗೊಂಡೊಡಾತನಿಂತೆಂದಂ ನಾಂ ವಿದ್ಯೆಗಳಂ ಸಾಧಿಸಿಯೆನ್ನ ವಿದ್ಯಾಧರಲೋಕಕ್ಕೆ ಪೋಗಲ್ ಬಗೆದಪ್ಪೆಂ ವಿದ್ಯೆಗಳ್ ಸಾಧನೆಗೆ ಸಲ್ಲವಾಗಪ್ಪುದಱಿಂದಾಕಾಶಕ್ಕೊಗೆದು ಮತ್ತಂ ನೆಲದೊಳ್ ಬೀೞ್ವೆನೆಂದೊಡಾ ವಿದ್ಯಾಮಂತ್ರಂಗಳನೆನಗೆ ಪೇೞೆಂದಭಯ ಕುಮಾರಂ ಬೆಸಗೊಂಡು ಮಂತ್ರ ವ್ಯಾಕರಣದೊಳಾದಮಾನುಂ ಕುಶಲನಪ್ಪುದಱಿಂ ಪ್ರಸ್ತಾರಿಸಿ ನೋೞ್ಪಾಗಳ್ ಮಂತ್ರಂ

ದಿವಸ ಶ್ಮಶಾನಕ್ಕೆಹೋಗಿ ರಾತ್ರಿಯಲ್ಲಿ ವಿದ್ಯೆಗಳನ್ನೆಲ್ಲ ಸಾಧಿಸುವ ಸಂದರ್ಭದಲ್ಲಿ ಆಕಾಶಕ್ಕೆ ನೆಗೆಯುತ್ತಲೂ ಬೀಳುತ್ತಲೂ ಇದ್ದನು. ಹೀಗಿರಲು ಅಭಯ ಕುಮಾರನು ತಂದೆಯ ಅಪ್ಪಣೆಯನ್ನು ನೆರವೇರಿಸುವುದಕ್ಕೆ ಒಂದು ಉಪಾಯವನ್ನು ಭಾವಿಸಿಕೊಂಡನು. ಅಮಾವಾಸ್ಯೆಯ ನಟ್ಟನಡುವಿನ ರಾತ್ರಿಯಲ್ಲಿ ರತ್ನ ಖಚಿತವಾದ ಗುರಾಣಿಯನ್ನು ಎದೆಗೆ ಅವಚಿಕೊಂಡು, ಒರೆಯಿಂದ ಹೊರಕ್ಕೆಳೆದ ಖಡ್ಗದೊಡನೆ ಹೊರಗೆ ಬಂದು ಪಟ್ಟಣದಲ್ಲೆಲ್ಲ ಸುತ್ತಾಡಿ ಪಟ್ಟಣದ ಹೊರಗಿನ ಪ್ರದೇಶದಲ್ಲಿ ಸುತ್ತಾಡುತ್ತಿದ್ದನು. ಅಷ್ಟರಲ್ಲಿ ಶ್ಮಶಾನದಲ್ಲಿ ಮೇಲೆ ಆಕಾಶಕ್ಕೆ ಹಾರುತ್ತಲೂ ಬೀಳುತ್ತಲೂ ಇದ್ದ ಗಂಡು ವ್ಯಕ್ತಿಯನ್ನು ಕಂಡು "ನೀನು ಯಾರು ? ಏನೆನ್ನುತ್ತಿರುವೆ ? ಎಲ್ಲಿ ಇರುತ್ತಿ? ಆಕಾಶಕ್ಕೆ ಹಾರಿ ಆಮೇಲೆ ನೆಲದ ಮೇಲೆ ಏಕೆ ಬೀಳುತ್ತಿ? ಎಂದು ಕೇಳಿದನು. ಆಗ ಅವನು ಹೀಗೆಂದನು—'ನಾನು ವಿದ್ಯಾಧರನು ಎನ್ನುತ್ತಿದ್ದೇನೆ; ಚಿಂತಾಗತಿ ಎಂಬ ಹೆಸರುಳ್ಳವನಾಗಿರುವೆನು' ಎಂದು ಅವನು ತನ್ನ ವೃತ್ತಾಂತವನ್ನೆಲ್ಲ ಹೇಳಿದನು. ಆಗ ಅಭಯ ಕುಮಾರನು–" ಮತ್ತೆ ನೀನೀಗ ಏನು ಮಾಡುತ್ತಿರುವೆ" ಎಂದು ಕೇಳಿದನು. ಆಗ ಅವನು– "ನಾನು ವಿದ್ಯೆಗಳನ್ನು ಸಾಧನೆಮಾಡಿ ನನ್ನ ವಿದ್ಯಾಧರ ಲೋಕಕ್ಕೆ ಹೋಗಲು ಇಚ್ಛಿಸುತ್ತಿದ್ದೇನೆ. ವಿದ್ಯೆಗಳು ಇನ್ನೂ ನನ್ನ ಸಾಧನೆಗೆ ವಶವಾಗದೆ ಇರುವುದರಿಂದ ಆಕಾಶಕ್ಕೆ ಹಾರಿ ಮತ್ತೆ ನೆಲದಲ್ಲಿ ಬೀಳುತ್ತಿದ್ದೇನೆ" ಎಂದನು. "ಆ ವಿದ್ಯಾಮಂತ್ರಗಳನ್ನು ನನಗೆ ತಿಳಿಸು" ಎಂದು ಅಭಯ ಕುಮಾರನು ಅವನನ್ನು ಕೇಳಿದನು. ಅವನು ಹೇಳಿದಾಗ– ಅಭಯ ಕುಮಾರನು ಸ್ವತಃಮಂತ್ರ ವ್ಯಾಕರಣಗಳಲ್ಲಿ ಅತ್ಯಂತ ಕುಶಲನಾಗಿದ್ದುದರಿಂದ ಆ ಮಂತ್ರಕ್ಕೆ ಪ್ರಸ್ತಾರ ಹಾಕಿ ನೋಡಿದನು, ಆ ಮಂತ್ರಗಳು ಕೆಲವೆಡೆ ಕಡಮೆ ಅಕ್ಷರದಿಂದಲೂ ಕೆಲವೆಡೆ ಹೆಚ್ಚಿನ ಅಕ್ಷರ

ಗಳ್ ಹೀನಾಧಿಕಾಕ್ಷರ ಸಹಿತಂಗಳೆಂದಱಿದು ಹೀನಮಪ್ಪಲ್ಲಿಯಕ್ಷರಂಗಳನಿಟ್ಟಧಿಕಮಪ್ಪಲ್ಲಿಯಕ್ಷರಂಗಳಂ ಕಳೆದು ತಿರ್ದೀ ಪಾಂಗಿನೊಳ್ ಮಂತ್ರಂಗಳನೋದೆಂದು ಪೇೞ್ದೊಡಾತನುಮಾ ಪಾಂಗಿನೊಳ್ ಮಂತ್ರಂಗಳನೋದಿದೊಡೆ ವಿದ್ಯೆಗಳ್ ಸಾಧನೆಗೆ ಸಂದುವು ಸಂದೊಡೆ ವಿದ್ಯಾಧರನೆಂದನೆನಗುಪಕಾರಿಯುಮ್ ಪರಮಮಿತ್ರನುಮ್ ನಿನಗಾಂ ಬೆಸಕೆಯ್ವೆನೆನಗೇನಪ್ಪೊಡಮೊಂದು ಬೆಸನಂ ಪೇೞೆಂದೊಡೆ ಅಭಯಕುಮಾರನೆಂದಂ ಎಮ್ಮಬ್ಬೆಯ ಬಯಕೆಯಂ ತೀರ್ಚೆಂದೊಡಾತನುಂ ಬಯಕೆಯುಂ ಬೆಸಗೊಂಡು ನೇಸರ್ಮೂಡಿದೊಡೆ ವಿದ್ಯೆಗಳಿಂದಮೆ ಬೇಸಗೆಯಂ ಮೞೆಗಾಲಂ ಮಾಡಿ ಬಿಳಿಯಾನೆಯನರಸಿಯನೇಱಿಸಿ ಪರಿವಾರಮುಂ ಪಡೆಯುಂ ಬೆರಸು ಗಂಧಪುಷ್ಪ ವೃಷ್ಟಿಯುಂ ಕಱೆಯುತ್ತಂ ಪಟು ಪಟಹ ಪಣವ ತುಣವ ಭಂಭಾ ಮರ್ದಳೆ ಝಲ್ಲರಿ ಮೃದಂಗ ಶಂಖ ವಂಶ ಕಹಳಾದಿಗಳುಂ ಮುಂದೆ ಬಾಜಿಸೆ ಪೊೞಲಂ ಪೊಱಮಟ್ಟು ವಿಂಧ್ಯಾಟವಿಗೆ ಪೋಗಿಯುಡವಿಯೆಲ್ಲಮಂ ತೊೞಲ್ದು ನೋಡಿಯಾಲದ ಪಣ್ಗಳಂ ತಾನೆಯಾಯ್ದು ಸೋಂಕಿಲಂ ತೀವಿಕೊಂಡಾಗಳ್ ಬಯಕೆ ನೆಱೆದೊಡೆ ಮತ್ತಾ ಪೊೞಲ್ಗರಸಿಯುಂ ತಂದು ಕರುಮಾಡಮಂ ಪುಗಿಸಿದ ಬೞಿಕ್ಕಭಯಕುಮಾರಂಗಿಂತೆಂದನಾನಿಂ ಪೋಪೆನೆಂದಾನುಂ ನಿನಗೆ

ದಿಂದಲೂ ಕೂಡಿ ತಪ್ಪಾಗಿರುವುದನ್ನು ತಿಳಿದು, ಕಡಮೆಯಿರುವಲ್ಲಿ ಅಕ್ಷರಗಳನ್ನು ಸೇರಿಸಿ ಅಧಿಕ ವಿರುವಲ್ಲಿ ಅಕ್ಷರಗಳನ್ನು ಕಳೆದು ತಿದ್ದಿ, 'ಈ ರೀತಿಯಾಗಿ ಅಕ್ಷರಗಳನ್ನು ಓದು' ಎಂದು ಹೇಳಿದನು. ಚಿಂತಾಗತಿ ಆ ರೀತಿಯಲ್ಲಿ ಮಂತ್ರಗಳನ್ನು ಉಚ್ಚಾರಣೆ ಮಾಡಲು ಅವನಿಗೆ ವಿದ್ಯೆಗಳು ಸಿದ್ಧಿಯಾದವು. ಸಿದ್ಧಿಯಾಗಲು ವಿದ್ಯಾಧರನು ಹೀಗೆ ಹೇಳಿದನು– "ನೀನು ನನಗೆ ಉಪಕಾರ ಮಾಡಿದವನಾಗಿರುವೆ. ಶ್ರೇಷ್ಠ ಮಿತ್ರನಾಗಿರುವೆ ನಿನಗೆ ನಾನು ಆಜ್ಞಾಧಾರಕನಾಗುವೆನು. ನನಗೇನಾದರೂ ಒಂದು ಕೆಲಸವನ್ನು ಹೇಳು". ಹೀಗೆ ಹೇಳಿದಾಗ, ಅಭಯ ಕುಮಾರನು "ನನ್ನ ತಾಯಿಯ ಬಯಕೆಯನ್ನು ಈಡೇರಿಸು" ಎಂದನು. ಆತನು ಬಯಕೆ ಏನೆಂಬುದನ್ನು ಕೇಳಿಕೊಂಡು, ಸೂರ್ಯನು ಉದಯಿಸಿದೊಡನೆ ತನ್ನ ವಿದ್ಯೆಗಳಿಂದಲೇ ಬೇಸಗೆಯನ್ನು ಮಳೆಗಾಲವನ್ನಾಗಿ ಮಾಡಿದನು. ಬಿಳಿಯಾದ ಆನೆಯ ಮೇಲೆ ರಾಣಿಯನ್ನು ಕುಳಿತುಕೊಳ್ಳಿಸಿ ಪರಿವಾರವನ್ನೂ ಸೈನ್ಯವನ್ನೂ ಕೂಡಿಸುವ ಸನೆಯ ಹೂಗಳ ಮಳೆಯನ್ನು ಸುರಿಸುತ್ತಾ, ಸಮರ್ಥವಾದ ಪಟಹ, ಪಣವ, ತುಣವ, ಭಂಭಾ, ಮದ್ದಳೆ, ಝಲ್ಲರಿ, ಮೃದಂಗ, ಶಂಖ, ಕೊಳಲು, ಕಹಳೆ–ಮುಂತಾದವುಗಳು ಶಬ್ದಮಾಡುತ್ತ ಮುಂದೆ ಬರುತ್ತಿರಲು, ಪಟ್ಟಣವನ್ನು ಹೊರಟು ವಿಂಧ್ಯಪರ್ವತದ ಕಾಡಿಗೆ ಹೋಗಿ, ಕಾಡನ್ನೆಲ್ಲ ಸುತ್ತಾಡಿ ನೋಡಿ ಆಲದ ಹಣ್ಣುಗಳನ್ನು ತಾನೇ ಆಯ್ದುಕೊಂಡು ಮಡಿಲಲ್ಲಿ ತುಂಬಿಸಿಕೊಂಡಳು. ಆಗ ಅವಳ ಬಯಕೆ ಪೂರ್ಣವಾಯಿತು. ಆಮೇಲೆ ಆ ಪಟ್ಟಣಕ್ಕೆ ರಾಣಿಯನ್ನು ಕರೆತಂದು ಅರಮನೆಯನ್ನು ಪ್ರವೇಶಗೊಳಿಸಿದ ನಂತರ ಚಿಂತಾಗತಿ ವಿದ್ಯಾಧರನು ಅಭಯ ಕುಮಾರನಿಗೆ ಹೀಗೆಂದನು– "ನಾನೀಗ ಹೋಗುತ್ತೇನೆ. ಎಂದಾದರೂ ನಿನಗೆ ಉಪಯುಕ್ತವಾದಂದು ನನ್ನನ್ನು ಸ್ಮರಿಸುವುದು."–

ಬಾೞ್ತಿಯಾದಂದೆನ್ನಂ ನೆನೆವುದೆಂದಭಯಕುಮಾರನಂ ಬೀೞ್ಕೊಂಡು ಕಾಮಲತೆಗಂ ಪೇೞ್ದು ತನ್ನ ವಿದ್ಯಾಧರಲೋಕಕ್ಕೆ ಪೋದಂ ಮತ್ತೆ ಧನಶ್ರೀ ಮಹಾದೇವಿಯುಂ ನವಮಾಸಂ ನೆಱೆದು ಬೆಸಲೆಯಾಗಿ ಮಗಂ ಪುಟ್ಟಿದೊಡಾತಂಗೆ ತಾಯುಂ ತಂದೆಯುಂ ಗಜಕುಮಾರನೆಂದು ಪೆಸರ ನಿಟ್ಟರ್ ಇಂತಿಷ್ಟ ವಿಷಯ ಕಾಮ ಭೋಗಂಗಳನನುಭವಿಸುತ್ತಂ ಪಲಕಾಲಂ ಸಲೆ ಮತ್ತೊಂದು ದಿವಸಂ ರಾಜಗೃಹದ ನೈಋತಿಯ ದೆಸೆಯೊಳ್ ವಿಪುಳಗಿರಿಯೆಂಬ ಪರ್ವತದ ಮೇಗೆ ವರ್ಧಮಾನ ಭಟಾರರ ಸಮವಸರಣಂ ಬಂದಿರ್ದೊಡೆ ಋಷಿನಿವೇದಕಂ ಕಂಡು ಪೋಗಿ ಶ್ರೇಣಿಕ ಮಹಾರಾಜಂಗೆ ಭಟಾರರ ಬರವಂ ಪೇೞ್ದೊಡಾತನುಂ ಸಿಂಹಾಸನದಿಂದೆರ್ದಾ ದೆಸೆಯತ್ತೇೞಡಿಯಂ ನಡೆದು ಸಾಷ್ಟಾಂಗಮೆಱಗಿ ಪೊಡೆವಟ್ಟು ಪೇೞ್ದಾತಂಗೆ ತುಷ್ಟಿದಾನಂಗೊಟ್ಟು ಆನಂದಭೇರಿಯಂ ಪೊಯ್ಸಿ ಪುತ್ರ ಪೌತ್ರ ಕಳತ್ರ ಮಿತ್ರ ಪರಿವಾರ ಸಹಿತಂ ವಂದನಾ ಭಕ್ತಿಗೆ ಪೋಗಿ ಸ್ಫಟಿಕಮಣಿಮಯಮಪ್ಪ ಸೋಪಾನ ಪಂಕ್ತಿಗಳಿಂದೇಱಿ ಸಮವಸರಣಂಬೊಕ್ಕು ಗಂಧ ಕುಟಿ ಪ್ರಾಸಾದಮಂ ತ್ರಿಃ ಪ್ರದಕ್ಷಿಣಂಗೆಯ್ದು ಮುಂದೆ ನಿಂದು ಸ್ತುತಿಶತ ಸಹಸ್ರಂಗಳಿಂ ಸ್ತುತಿಯಿಸಿ ಬಂದಿಸಿ ಗಂಧ ಪುಷ್ಪ ದೀಪ ಧೂಪಾಕ್ಷತಂಗಳಿಂದರ್ಚಿಸಿ ಗಣಧರದೇವರ್ ಮೊದಲಾಗೊಡೆಯ ರಿಸಿಯರ್ಕಳುಮಂ ಗುರು ಪರಿಪಾಡಿಯಿಂದಂ ವಂದಿಸಿ ತಮ್ಮ ಪೋರ್ವಱಿಯೊಳಿರ್ದು ಪಿರಿದು ಬೇಗಂ

ಹೀಗೆ ಹೇಳಿ, ಅಭಯ ಕುಮಾರನನ್ನು ಬೀಳ್ಕೊಂಡು ಕಾಮಲತೆಗೂ ಹೇಳಿ, ತನ್ನ ವಿದ್ಯಾಧರಲೋಕಕ್ಕೆ ತೆರಳಿದನು. ಆಮೇಲೆ ಧನಶ್ರೀ ಮಹಾದೇವಿಗೆ ಒಂಬತ್ತು ತಿಂಗಳು ತುಂಬಿ, ಹೆರಿಗೆಯಾಗಿ ಮಗನು ಹುಟ್ಟಲು ಅವನಿಗೆ ತಾಯಿಯೂ ತಂದೆಯೂ ಗಜಕುಮಾರನೆಂದು ಹೆಸರಿಟ್ಟರು. ಈ ರೀತಿಯಾಗಿ ಇಷ್ಟವಿಷಯದ ಕಾಮಸುಖಗಳನ್ನು ಅನುಭವಿಸುತ್ತ ಹಲವು ಕಾಲ ಕಳೆಯಲು ಮತ್ತೊಂದು ದಿವಸ ರಾಜಗೃಹದ ನೈಋತ್ಯದಿಕ್ಕಿನ ವಿಪುಳಗಿರಿಯೆಂಬ ಪರ್ವತದ ಮೇಲೆ ವರ್ಧಮಾನತೀರ್ಥಂಕರರ ಧರ್ಮೋಪದೇಶದ ಸಭೆ ಬಂದಿರಲು ಋಷಿನಿವೇದಕನು ಕಂಡು, ಶ್ರೇಣಿಕ ಮಹಾರಾಜನ ಬಳಿಗೆ ಹೋಗಿ ತೀರ್ಥಂಕರರ ಬರವನ್ನು ತಿಳಿಸಿದನು. ಶ್ರೇಣಿಕನು ಸಿಂಹಾಸನದಿಂದ ಎದ್ದು ಆ ದಿಕ್ಕಿನ ಕಡೆಗೆ ಏಳು ಹೆಜ್ಜೆಯನ್ನು ನಡೆದು ಸಾಷ್ಟಾಂಗನಮಸ್ಕಾರವನ್ನು ಮಾಡಿ, ಈ ಸಂಗತಿಯನ್ನು ಹೇಳಿದವನಿಗೆ ಸಂತೃಪ್ತಿಯಾಗತಕ್ಕ ದಾನವನ್ನು ಕೊಟ್ಟು ಆನಂದ ಭೇರಿಯನ್ನು ಹೊಡೆಸಿದನು. ಮಕ್ಕಳು, ಮೊಮ್ಮಕ್ಕಳು, ಹೆಂಡತಿ, ಗೆಳೆಯರ ಪರಿವಾರ ಸಮೇತವಾಗಿ ಭಕ್ತಿಯ ವಂದನೆ ಸಲ್ಲಿಸಲು ಹೋಗಿ ಸ್ಫಟಿಕ ರತ್ನಮಯವಾದ ಮೆಟ್ಟಿಲುಗಳ ಸಾಲುಗಳನ್ನು ಹತ್ತಿ ಧರ್ಮಸಭೆಯನ್ನು ಹೊಕ್ಕನು. ಗಂಧಕುಟಿಯ ಮಹಾ ಗೃಹವನ್ನು ಮೂರು ಪ್ರದಕ್ಷಿಣೆ ಹಾಕಿ ಮುಂದೆ ನಿಂತು ಸಾವಿರಾರು ಸ್ತುತಿಗಳಿಂದ ಸ್ತುತಿಸಿ, ವಂದಿಸಿ, ಗಂಧ ಪುಷ್ಪ ದೀಪ ಧೂಪ ಅಕ್ಷತೆಗಳಿಂದ ಪೂಜಿಸಿ ಗಣಧರ ದೇವರೇ ಮುಂತಾಗಿ ಉಳ್ಳ ಋಷಿಗಳನ್ನು ಗೌರವಾನುಕ್ರಮದಿಂದ ನಮಿಸಿ ತಾವು ಇರಬೇಕಾದ ಕೊಠಡಿಯಲ್ಲಿದ್ದು ಬಹಳ ಹೊತ್ತು ಧರ್ಮವನ್ನು ಕೇಳಿ, ಆ ಮೇಲೆ ಗಜಕುಮಾರನು

ಧರ್ಮಮಂ ಕೇಳ್ದು ತದನಂತರಮೆ ಗಜಕುಮಾರಂ ತನ್ನ ಭವಾಂತರಂಗಳಂ ಬೆಸಗೊಂಡೊಡೆ ಗಣ ಧರ ದೇವರಿಂತೆಂದು ಪೇಟ್ದರೀ ಭವದಿಂ ತೊಟ್ಟು ಅಯ್ದನೆಯ ಭವದಂದು ನೀಂ ಕೊಂಕಣ ನಾಡೊಳ್ ತುಂಗಭದ್ರನೆಂಬ ಪೊಡುಂಗಾಜನಯ್ ನೀಂ ಕುಮ್ಮರಿಯುಂ ಸುಟ್ಟು ಪೋಗಿ ಪೊಟ್ಟಡೆ ಬಂದು ನೋಡುವನ್ನೆಗಮಾ ಕಿರ್ಚಿನೊಳ್ ಸತ್ತ ಋಷಿರೂಪಂ ಕಂಡು ಕರುಣಿಸಿ ಯಲ್ಲಿಯೆ ಕಿರ್ಚಂ ಪೊಕ್ಕು ಸತ್ತು ವ್ಯಂತರದೇವನಾಗಿಯಾಯುಷ್ಯಾಂತದೊಳ್ ವಿಂಧ್ಯಾಟವಿ ಯೊಳ್ ಬಿಳಿಯಾನೆಯಾಗಿ ಪುಟ್ಟಿಯಚ್ಯುತೇಂದ್ರಂ ಪ್ರತಿಬೋಧಿಸೆ ಸಮ್ಯಕ್ತ್ವಪೂರ್ವಕಂ ಶ್ರಾವಕ ವ್ರತಂಗಳಂ ಕೈಕೊಂಡು ಪ್ರತಿಪಾಳಿಸಿಯಾಯುಷ್ಯಾಂತದೊಳ್ ಪದಿನೆಂಟು ಸಾಗರೋಪಮಾ ಯುಷ್ಯಮನೊಡೆಯ ಸಹಸ್ರಾರ ಕಲ್ಪದೊಳ್ ದೇವನಾಗಿ ಪುಟ್ಟಿ ಅಲ್ಲಿಂ ಬಂದೀಗಳ್ ಗಜ ಕುಮಾರನೆ ಆದೆಯೆಂದು ಪೇಟ್ದೊಡೆ ತನ್ನ ಭವಂಗಳಂ ಕೇಳ್ದು ವೈರಾಗ್ಯಮನೊಡೆಯನಾಗಿ ಎರ್ದು ವರ್ಧಮಾನ ಭಟಾರರ್ಗಿದಿರಂ ನಿಂದು ಕೈಗಳಂ ಮುಗಿದು ದೀಕ್ಷಾಪ್ರಸಾದಂ ಗೆಯ್ಯ ವೆಂದು ಬೇಡಿ ತಪಂಬಟ್ಟಾಗಮಂಗಳೆಲ್ಲಮಂ ಕಲ್ತೇಕವಿಹಾರಿಯಾಗಿ ಗ್ರಾಮೇಕರಾತ್ರಂ ನಗರೇ ಪಂಚರಾತ್ರಂ ಅಟವ್ಯಾಂ ದಶರಾತ್ರಮೆಂಬೀ ನ್ಯಾಯದಿಂ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಕಳಿಂಗನಾಡನೆಯ್ದಿಯಲ್ಲಿ ದಂತಪುರ

ತನ್ನ ಜನ್ಮಾಂತರದ ಸಂಗತಿಗಳನ್ನು ಕೇಳಿದನು. ಆಗ ಗಣಧರದೇವರು ಈ ರೀತಿಯಾಗಿ ಹೇಳಿದರು—"ಈ ಜನ್ಮದಿಂದ ಹಿಡಿದು ಐದನೆಯ ಜನ್ಮದಂದು ನೀನು ಕೊಂಕಣ ನಾಡಿನಲ್ಲಿ ತುಂಗಭದ್ರನೆಂಬ ಕಾಡು ಕಡಿವವನಾಗಿದ್ದಿ. ನೀನು ಕುಮ್ಮರಿ ಯನ್ನು ಸುಟ್ಟು ಹೋಗಿ, ಹೊತ್ತಾರೆ ಬಂದು ನೋಡುವಾಗ ಆ ಬೆಂಕಿಯಲ್ಲಿ ಸತ್ತಿದ್ದ ಋಷಿ ರೂಪವನ್ನು ಕಂಡು ದುಃಖಿತನಾಗಿ ಅಲ್ಲಿಯೇ ಬೆಂಕಿಯನ್ನು ಹೊಕ್ಕು ಸತ್ತು ವ್ಯಂತರ ದೇವನಾದೆ. ಅಲ್ಲಿ ಆಯುಷ್ಯವು ಕೊನೆಗೊಂಡಾಗ ವಿಂಧ್ಯೆಯ ಕಾಡಿನಲ್ಲಿ ಬಿಳಿಯ ಆನೆಯಾಗಿ ಹುಟ್ಟಿದೆ. ಅಚ್ಯುತೇಂದ್ರನ ಉಪದೇಶದಿಂದ ಸಮ್ಯಕ್ತ್ವಪೂರ್ವಕ ವಾಗಿ ಶ್ರಾವಕ ವ್ರತಗಳನ್ನು ಸ್ವೀಕರಿಸಿ, ನಡೆಸಿ, ಆಯುಷ್ಯ ಕೊನೆಯಾಗಲು ಹದಿನೆಂಟು ಸಾಗರವನ್ನು ಹೋಲುವ ಆಯುಷ್ಯವುಳ್ಳ ಸಹಸ್ರಾರಕಲ್ಪದಲ್ಲಿ ದೇವನಾಗಿ ಹುಟ್ಟಿ ಅಲ್ಲಿಂದ ಬಂದು ಈಗ ಗಜಕುಮಾರನಾಗಿರುವೆ"—ಎಂದು ಗಣಧರರು ಹೇಳಿದಾಗ ಗಜ ಕುಮಾರನು ತನ್ನ ಹಿಂದಿನ ಜನ್ಮಗಳ ಸಂಗತಿಯನ್ನು ಕೇಳಿ ವೈರಾಗ್ಯವುಳ್ಳವನಾದನು. ಎದ್ದು ವರ್ಧಮಾನತೀರ್ಥಂಕರರ ಎದುರಿನಲ್ಲಿ ನಿಂತು ಕೈಗಳನ್ನು ಮುಗಿದು 'ದೀಕ್ಷೆ ಯನ್ನು ಅನುಗ್ರಹಿಸಿರಿ' ಎಂದು ಬೇಡಿಕೊಂಡನು. ತಪಸ್ಸನ್ನು ಸ್ವೀಕರಿಸಿದನು. ಶಾಸ್ತ್ರ ಗಳೆಲ್ಲವನ್ನೂ ಕಲಿತು ಪರಿವ್ರಾಜಕರಾಗಿ 'ಗ್ರಾಮದಲ್ಲಿ ಒಂದು ರಾತ್ರಿ, ನಗರದಲ್ಲಿ ಐದು ರಾತ್ರಿ, ಕಾಡಿನಲ್ಲಿ ಹತ್ತು ರಾತ್ರಿ' ಎಂಬೀ ನ್ಯಾಯದಂತೆ ಗ್ರಾಮ, ನಗರ, ಖೇಡ, ಖರ್ವಡ, ಮಡಂಬ, ಪಟ್ಟಣ, ದ್ರೋಣಾಮುಖಗಳನ್ನು ಸಂಚಾರಮಾಡುತ್ತ ಕಳಿಂಗ ನಾಡಿಗೆ ಹೋದನು. ಅಲ್ಲಿ ದಂತಪುರ ಎಂಬ ಪಟ್ಟಣದ ಪಶ್ಚಿಮದ ಬೆಟ್ಟದ ಮೇಲೆ ಬಂದೇ ಆದ

ಮೆಂಟೆ ಪೊೞಲ ಪಡುವಣ ಬೆಟ್ಟದ ಮೇಗೆ ಸ್ಥಿರ ಯೋಗಂಗೊಂಡು ಕಲ್ಲೆಡೆನಿಂದರನ್ನೆಗಂ ಆ ಪೊೞಲನಾಳ್ವಂ ನರಸಿಂಹನೆಂಬರಸನಾತನ ಮಹಾದೇವಿ ವಸುಮತಿಯೆಂಬೊಳಾಯಿ ರ್ವ್ವರ್ಗ್ಗಂ ಮಗಂ ನರಪಾಳನೆಂಬೊಂ ಮಂತ್ರಿ ಬುದ್ಧದಾಸನೆಂಬೊನಿಂತವರ್ಗಳ್ವೆರಸೊಂದು ದಿವಸಂ ಅರಮನೆಯ ಮೇಗಣ ನೆಲೆಯೊಳಿರ್ದರಸಂ ದಿಶಾವಳೋಕನಂ ಗೆಯ್ಯುತ್ತಿರ್ದಾತಂ ಬೆಟ್ಟದ ಮೇಗಾ ತಪದಿರ್ದ ಋಷಿಯರಂ ಕಂಡೀ ತಪಸ್ವಿ ಬೇಸಗೆಯೊಳ್ ಬೆಟ್ಟದ ಮೇಗಿ ರ್ದ್ದೇಕೆ ಬಿಸಿಲ್ಗಾಯುತ್ತಿರ್ಪ್ಪನೆಂದು ಮಂತ್ರಿಯಪ್ಪ ಬುದ್ಧದಾಸನಂ ಬೆಸಗೊಂಡೊಡಾತಂ ಕೌಟಿಲ್ಯ ಭಾವದಿಂದಿಂತೆಂದನೀ ತಪಸ್ವಿಗೆ ಮಹಾವಾತಂ ತಗುಳ್ದುದದರಿಂದಂ ನಿಂದಿರ್ದೊನೆಂದೊಡದಱ ನಿವರ್ತ್ತನ ಮದ್ದೇನೆಂದು ಬೆಸಗೊಂಡೊಡಾತನಿಂತೆಂದನಾ ತಪಸ್ವಿಯೇಱಿರ್ದ ಶಿಲೆಯಂ ಕಾಸುವು ದೆಂದೊಡಂತಪ್ಪೊಡೆ ನೀಂ ಪಕ್ಕದಿರ್ದು ಕಾಸೆಂದು ಬೆಸವೇೞ್ದಾತನಂತೆ ಗೆಯ್ವೆನೆಂದು ಪೋಗೆಯಾ ಋಷಿಯರ್ ಚರಿಗೆವೋದನ್ನೆಗಂ ಯೋಗಪೀಠದ ಶಿಲೆಯಂ ಕಿಚ್ಚಿನ ಬಣ್ಣದಂತಾಗಿ ಕಾಸಿ ಪೋದನನ್ನೆಗಂ ಚರಿಗೆವುಗುತ್ತಿರ್ದ ರಿಸಿಯರಂ ದೇವತೆ ಕಂಡಿಂತೆಂದಳ್ ನಿಮಗಾಯುಷ್ಯ ವಿಲ್ಲೇಕೆ ಚರಿಗೆ ಮಾಡಲ್ ಪೋಪಿರೆಂದೊಡೆ ಚರಿಗೆವುಗದಂತೆ ಮಗುೞ್ದು ಬರ್ಪೊರನ್ನೆಗಂ

ಸ್ಥಿರವಾದ ಯೋಗವನ್ನು ಕೈಕೊಂಡು ಕಲ್ಲಿನಂತೆ ನಿಲಿನಿಂತರು. ಆ ಪಟ್ಟಣವನ್ನು ನರಸಿಂಹನೆಂಬ ರಾಜನು ಆಳುತ್ತಿದ್ದನು. ಅವನಿಗೆ ವಸುಮತಿ ಎಂಬವಳು ಮಹಾರಾಣಿಯಾಗಿದ್ದಳು. ಆ ದಂಪತಿಗಳಿಗೆ ನರಪಾಳನೆಂಬವನು ಮಗನು. ಬುದ್ಧದಾಸನು ಮಂತ್ರಿ. ಒಂದು ದಿವಸ ನರಸಿಂಹ ರಾಜನು ಅವರನ್ನೆಲ್ಲ ಕೂಡಿಕೊಂಡು ಅರಮನೆಯ ಮೇಲಣ ಉಪ್ಪರಿಗೆಯಲ್ಲಿ ಇದ್ದುಕೊಂಡು ದಿಕ್ಕುಗಳನ್ನು ನೋಡುತ್ತಾ ಇದ್ದನು. ಆತನು ಬೆಟ್ಟದ ಮೇಲುಗಡೆ ತಪಸ್ಸನ್ನು ಮಾಡುತ್ತಿದ್ದ ಋಷಿಗಳನ್ನು ಕಂಡು—'ಈ ತಪಸ್ವಿಯು ಬೇಸಗೆಯಲ್ಲಿ ಬೆಟ್ಟದ ತುದಿಯಲ್ಲಿದ್ದು ಯಾಕೆ ಬಿಸಿಲನ್ನು ಕಾಯಿಸುತ್ತ ಇದ್ದಾನೆ ?' ಎಂದು ಮಂತ್ರಿಯಾದ ಬುದ್ಧದಾಸನನ್ನು ಕೇಳಿದನು. ಆಗ ಅವನು ಕುಹಕದ ಭಾವನೆಯಿಂದ ಹೀಗೆಂದನು—"ಈ ಋಷಿಗೆ ಮಹತ್ತರವಾದ ವಾತರೋಗ ಸೇರಿದೆ. ಅದರಿಂದ ಬಿಸಿಲಲ್ಲಿ ನಿಂತಿದ್ದಾನೆ"—ಎಂದಾಗ ರಾಜನು 'ಇದಕ್ಕೆ ಮದ್ದೇನಿದೆ ?' ಎಂದು ಕೇಳಿದನು. ಬುದ್ಧದಾಸನು ಆಗ ಹೀಗೆ ಹೇಳಿದನು.—'ಆ ತಪಸ್ವಿ ಕುಳಿತು ಕೊಂಡಿರುವ ಶಿಲೆಯನ್ನು ಕಾಯಿಸುವುದೇ ಮದ್ದು' ಎಂದಾಗ ರಾಜನು 'ಹಾಗಾದರೆ ನೀನು ಬಳಿಯಲ್ಲಿದ್ದು ಕಾಯಿಸು' ಎಂದು ಆಜ್ಞೆ ಮಾಡಿದನು : ಮಂತ್ರಿಯು 'ಹಾಗೆಯೇ ಮಾಡುವೆನು' ಎಂದು ಕೊಂಡು ತೆರಳಿದನು. ಋಷಿಗಳು ಭಿಕ್ಷೆಗೆ ಹೋದ ವೇಳೆಗೆ ಅವರ ಯೋಗಪೀಠದ ಶಿಲೆಯನ್ನು ಬೆಂಕಿಯ ಬಣ್ಣದ ಹಾಗೆ ಆಗುವಂತೆ ಕಾಯಿಸಿ ಹೋದನು. ಆ ವೇಳೆಗೆ ಭಿಕ್ಷಾಟನೆ ಮಾಡುತ್ತಿದ್ದ ಋಷಿಗಳನ್ನು ದೇವತೆ ಕಂಡು—"ನಿಮಗೆ ಆಯುಷ್ಯವಿಲ್ಲ ಏಕೆ ಭಿಕ್ಷೆಗೆ ಹೋಗುತ್ತೀರಿ ?" ಎನ್ನಲು ಮತ್ತೆ ಭಿಕ್ಷೆಗೆ ಹೋಗದೆ ಹಾಗೆಯೇ ಹಿಂದೆ

ಕಿಚ್ಚಿನ ಬಣ್ಣದಾಗಿ ಕಾಯ್ವುದರ್ ತಿಳಿದುಂ ಆಂತೆನಗಿನಿತೆಯಾಯುಷ್ಯಮೆಂದು ಪರಿಚ್ಛೇದಿಸಿ
ಸಿದ್ಧಭಕ್ತಿ ಯೋಗಭಕ್ತಿಗೆಯ್ದು ಚತುರ್ವಿಧಮಪ್ಪಾಹಾರಕ್ಕಂ ಶರೀರಕ್ಕಂ ಯಾವಜ್ಜೀವಂ
ನಿವೃತ್ತಿಗೆಯ್ದಾಚಾರ್ಯ ಭಕ್ತಿಗೆಯ್ದು ಕಾಯ್ವುದರ್ ಯೋಗ ಪೀಠಮನೇಱಿ ಬಾಹ್ಯಾಭ್ಯಂತರ
ಪರಿಗ್ರಹಂಗಳಂ ತೊಱೆದು ಸಮತ್ವ ಭಾವನೆಯಂ ಭಾವಿಸಿ ಕಿಚ್ಚಿನುಪಸರ್ಗಮಂ ಸೈರಿಸಿ
ಚತುರ್ವಿಧಮಪ್ಪ ಧರ್ಮ್ಯಧ್ಯಾನಮುಂ ನಾಲ್ಕುಂ ತೆಱದ ಶುಕ್ಲಧ್ಯಾನಂಗಳುಮಂ ಧ್ಯಾನಿಸಿ ಎಂಟು
ಕರ್ಮಂಗಳನೊರ್ಮೊದಲೆ ಕಿಡಿಸಿ ಮೋಕ್ಷಕ್ಕೆ ಪೋದರ್ ಅನ್ನೆಗಂ ಚತುರ್ವಿಧ ದೇವನಿಕಾಯಂ
ಬಂದು ದಿವ್ಯಮಪ್ಪ ಗಂಧ ಪುಷ್ಪ ದೀಪಧೂಪಾಕ್ಷತಂಗಳಿಂ ಶ್ರೀಪಾದಮನರ್ಚಿಸಿ ಪೊಡೆವಟ್ಟು
ಮತ್ತೆ ಬುದ್ಧದಾಸನಂ ದೇವರ್ಕಳ್ ಪಿಡಿದು ಬಡಿದೊಡವನಂಜಿಯಿಂತೆಂದನಾನಱಿಯದೆ ಪಂಚ
ಮಹಾಪಾತಕನೆ ಪೊಲ್ಲಕೆಯ್ದೆನೆನಗೊರ್ಮೆಗೆ ಕ್ಷಮಿಯಿಸಿಮೆಂದು ಪಡಿದೊಡೆ ದೇವರ್ಕಳ್
ಕ್ಷಮಿಯಿಸಿ ತಂತಮ್ಮ ಸ್ಥಾನಂಗಳ್ಗೆ ಪೋದರ್ ಇತ್ತ ಬುದ್ಧದಾಸನುಮಾ ರಿಸಿಯರ ತಪದ
ಮಾಹಾತ್ಮ್ಯಮುಮಂ ದೇವರ್ಕಳ್ ಬಂದು ಪೂಜಿಸಿದುದುಮಂ ಕಂಡಿದುವೆ ಧರ್ಮಮಿದುವೆ ತಪ
ಮೆಂದು ನಂಬಿ ಸಮ್ಯಕ್ತ್ವಪೂರ್ವಕಂ ಶ್ರಾವಕವ್ರತಂಗಳಂ ಕೈಕೊಂಡು ನೆಗಟ್ದಂ ಮತ್ತಾ

ಬರುತ್ತಿದ್ದರು. ಆಗ ಬೆಂಕಿಯ ಬಣ್ಣವಾಗಿ ಕಾಯ್ದು ತಿಳಿಯನ್ನು ಕಂಡು, ನನಗೆ ಇಷ್ಟೇ
ಆಯುಷ್ಯವಿರುವುದೆಂದು ನಿಶ್ಚಯ ಮಾಡಿಕೊಂಡು ಸಿದ್ಧಭಕ್ತಿ ಯೋಗಭಕ್ತಿಯನ್ನು ಮಾಡಿ
ನಾಲ್ಕು ವಿಧದ ಆಹಾರಕ್ಕೂ ಶರೀರಕ್ಕೂ ಪ್ರಾಣವಿರುವವರೆಗೂ ನಿವೃತ್ತಿ ಮಾಡಿ, ಆಚಾರ್ಯ
ರಲ್ಲಿ ಭಕ್ತಿಯನ್ನು ಮಾಡಿ ಕಾಯ್ದಿದ್ದ ಯೋಗಪೀಠದ ಮೇಲೆ ಕುಳಿತು ಭೂಮಿ, ಮನೆ,
ಧನ, ಧಾನ್ಯ–ಮುಂತಾದ ಬಾಹ್ಯ ಪರಿಗ್ರಹಗಳನ್ನೂ ಮಿಥ್ಯಾತ್ವ, ರಾಗ, ದ್ವೇಷ–
ಮುಂತಾದ ಆಂತರಿಕ ಪರಿಗ್ರಹಗಳನ್ನೂ ತ್ಯಜಿಸಿ ಸಮತ್ವದ ಭಾವನೆಯನ್ನು ಭಾವಿಸಿ
ಅಗ್ನಿಯಿಂದಾದ ಉಪಸರ್ಗವನ್ನು ಸಹಿಸಿ ನಾಲ್ಕು ವಿಧವಾದ ಧರ್ಮ್ಯಧ್ಯಾನಗಳನ್ನೂ ನಾಲ್ಕು
ರೀತಿಯ ಶುಕ್ಲಧ್ಯಾನಗಳನ್ನೂ ಧ್ಯಾನಿಸಿ ಘಾತಿ-ಅಘಾತಿರೂಪದ ಎಂಟು ಕರ್ಮಗಳನ್ನು
ಒಮ್ಮೆಗೇ ನಾಶಪಡಿಸಿ ಮೋಕ್ಷಕ್ಕೆ ಹೋದರು. ಅಷ್ಟರಲ್ಲಿ ನಾಲ್ಕು ವಿಧದ ದೇವತಾ
ಸಮೂಹವು ಬಂದು ದಿವ್ಯವಾದ ಗಂಧ, ಪುಷ್ಪ, ದೀಪ, ಧೂಪ, ಅಕ್ಷತೆಗಳಿಂದ ಮುನಿಗಳ
ಶ್ರೀಪಾದವನ್ನು ಪೂಜಿಸಿ ಸಾಷ್ಟಾಂಗನಮನ ಮಾಡಿದರು. ಆಮೇಲೆ ಬುದ್ಧದಾಸನನ್ನು
ದೇವತೆಗಳು ಗದರಿಸಿ ಹೊಡೆಯಲು ಅವನು ಹೆದರಿ—"ಪಂಚಮಹಾಪಾತಕನಾದ ನಾನು
ತಿಳಿಯದೆ ಕೆಟ್ಟುದನ್ನು ಮಾಡಿದೆನು. ನನಗೆ ಒಮ್ಮೆಗೆ ಕ್ಷಮೆಯನ್ನು ಕೊಡಿ" ಎಂದು
ಕೇಳಲು ದೇವತೆಗಳು ಅವನನ್ನು ಕ್ಷಮಿಸಿ ತಂತಮ್ಮ ಸ್ಥಳಗಳಿಗೆ ಹೋದರು. ಇತ್ತ
ಬುದ್ಧದಾಸನು ಆ ಮುನಿಗಳ ತಪಸ್ಸಿನ ಮಹಿಮೆಯನ್ನೂ ದೇವತೆಗಳು ಬಂದು ಪೂಜಿಸಿ
ದುದನ್ನೂ ಕಂಡು—"ಇದೇ ಧರ್ಮವು, ಇದೇ ತಪಸ್ಸು" ಎಂದು ನಂಬಿ ಜೈನಧರ್ಮದಲ್ಲಿ
ಪೂರ್ಣವಾದ ನಂಬಿಕೆಯೊಂದಿಗೆ ಶ್ರಾವಕವ್ರತಗಳನ್ನು ಸ್ವೀಕರಿಸಿ, ಅವುಗಳನ್ನು ಆಚರಿಸಿ,

ನರಸಿಂಹನೃಪತಿಯುಂ ಪಶ್ಚಾತ್ತಾಪಮಾಗಿ ಋಷಿವಧೆಗೆಯ್ದ ಪಾಪಮಿಂತಲ್ಲದೆ ನೀಗದೆಂದು ನರ ಪಾಳನೆಂಬ ಪಿರಿಯ ಮಗಂಗೆ ರಾಜ್ಯಪಟ್ಟಂಗಟ್ಟಿ ಪಲಂಬರರಸುಮಕ್ಕಳ್ವೆರಸು ಸುಧರ್ಮರೆಂಬ ಭಟಾರರ ಪಕ್ಕದೆ ತಪಂಬಟ್ಟು ಪಲಕಾಲಮುಗ್ರೋಗ್ರ ತಪಶ್ಚರಣಂಗೆಯ್ದು ಸಮಾಧಿ ಮರಣ ದಿಂದಂ ಮಿಕ್ಕ ರತ್ನಂಗಳಂ ಸಾಧಿಸಿ ಸರ್ವಾರ್ಥಸಿದ್ಧಿಯೊಳ್ ಮೂವತ್ತುಮೂಱು ಸಾಗರೋಪ ಮಾಯುಷ್ಯಮನೊಡೆಯೊನಹಮಿಂದ್ರ ದೇವನಾದೊನ್ ಇಂತೀ ಕಥೆಗಳೆಲ್ಲಂ ಗುರುದತ್ತ ಭಟಾರರ ಕಥೆಗೆ ಪ್ರತಿಬದ್ಧಂಗಳ್ ಮತ್ತಂ ಪೆಱರ್ ಸಂನ್ಯಸನಂಗೆಯ್ದ ಭವ್ಯರ್ಕಳ್ ಗುರುದತ್ತ ಭಟಾರರುಮಂ ಪಳಮುಖ ಋಷಿಯರುಮಂ ಗಜಕುಮಾರ ಭಟಾರರುಮನಿಂತಿವರ್ಗಳಂ ಮನ ದೊಳ್ ಬಗೆದುಪಸರ್ಗಂಗಳುಮಂ ಪಸಿವುಂ ನೀರಟ್ಕೆ[3] ಮೊದಲಾಗೊಡೆಯ ಇರ್ಪತ್ತೆರಡು ಪರೀಷಹಂಗಳಂ ಸೈರಿಸಿ ಸಮಾಧಿ ಮರಣದಿಂದಂ ಪರಮ ಶುದ್ಧ ಸಹಜ ದರ್ಶನ ಜ್ಞಾನ. ಚಾರಿತ್ರಂಗಳಂ ಸಾಧಿಸಿ ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

ದನು. ಅನಂತರ ಆ ನರಸಿಂಹರಾಜನು ಪಶ್ಚಾತ್ತಾಪಗೊಂಡವನಾಗಿ ಋಷಿಯನ್ನು ಕೊಂದ ಪಾಪವು ಈ ರೀತಿಯಿಂದಲ್ಲದೆ ಪರಿಹಾರವಾಗದೆಂದು ನರಪಾಳನೆಂಬ ಹಿರಿಯ ಮಗನಿಗೆ ರಾಜ್ಯಪಟ್ಟವನ್ನು ಕಟ್ಟಿ ಹಲವರು ರಾಜಕುಮಾರರೊಂದಿಗೆ ಸುಧರ್ಮರೆಂಬ ಋಷಿಗಳ ಬಳಿಯಲ್ಲಿ ತಪಸ್ಸನ್ನು ಸ್ವೀಕಾರಮಾಡಿ, ಅತ್ಯಂತ ಘನಘೋರವಾದ ತಪಸ್ಸನ್ನು ಆಚರಿಸಿ ಸಮಾಧಿ ಮರಣದಿಂದ ಶ್ರೇಷ್ಠವಾದ ದರ್ಶನ ಜ್ಞಾನ ಚರಿತ್ರಗಳೆಂಬ ರತ್ನತ್ರಯ ವನ್ನು ಸಾಧಿಸಿ ಸರ್ವಾರ್ಥಸಿದ್ಧಿಯೆಂಬ ಉನ್ನತವಾದ ಸ್ವರ್ಗದಲ್ಲಿ ಮೂವತ್ತಮೂರು ಸಾಗರವನ್ನು ಹೋಲುವ ಆಯುಃ ಪರಿಮಾಣವುಳ್ಳ ಅಹಮಿಂದ್ರ ದೇವನಾದನು. ಹೀಗೆ ಈ ಕಥೆಗಳೆಲ್ಲವೂ ಗುರುದತ್ತ ಭಟಾರರ ಕಥೆಗೆ ಅನುಬಂಧಗಳಾಗಿವೆ. ಮತ್ತು ಸಂನ್ಯಾಸ ಮಾಡಿದ ಇತರ ಭಟ್ಟರು ತಮ್ಮ ಮನಸ್ಸಿನಲ್ಲಿ ಗುರುದತ್ತ ಋಷಿಗಳನ್ನೂ ಹಳಮುಖ ಋಷಿಗಳನ್ನು ಸುಕುಮಾರಭಟಾರರನ್ನೂ-ಹೀಗೆ ಇವರನ್ನು ಭಾವಿಸಿಕೊಂಡು ಉಪಸರ್ಗಗಳನ್ನೂ ಹಸಿವು ಬಾಯಾರಿಕೆ ಮುಂತಾಗಿರುವ ಇಪ್ಪತ್ತೆರಡು ಪರೀಷಹಗಳನ್ನೂ ಸಹಿಸಿಕೊಂಡು ಸಮಾಧಿಮರಣದಿಂದ ಶ್ರೇಷ್ಠವೂ ಪವಿತ್ರವೂ ಸಹಜವೂ ಆದ ದರ್ಶನ-ಜ್ಞಾನ-ಚಾರಿತ್ರಗಳನ್ನು ಸಾಧಿಸಿ ಸ್ವರ್ಗ-ಮೋಕ್ಷ ಸುಖಗಳನ್ನು ಪಡೆಯಲಿ !

# ೧೫. ಚಿಲಾತಪುತ್ರನ ಕಥೆ

ಚಿಲಾತಪುತ್ರನ ಕಥೆಯಂ ಪೇೞ್ವೆಂ :

ಗಾಹೆ॥ ಗಾಢಪ್ಪಹಾರ ವಿದ್ಧೋ ಮೂಇಂ ಗಾಳೀಹಿ ಚಾಳಿಣಿ ಕದೊ ವಾ
ತದವಿಯು ಚಿಲಾತಪುತ್ತೋ ಪಡಿವಣ್ಣೋ ಉತ್ತಮಂ ಅಟ್ಠಂ

[ಗಾಢಪ್ಪಹಾರ-ಆದವಾನುಂ ಸೈರಿಸಲ್ಕರಿಯುವಪ್ಪೇಱುಗಳಿಂದಂ, ವಿದ್ಧೋ-ಉರ್ಚಿ ಪಟ್ಟೊನಾಗಿ, ಮೂಇಂಗಾಳೀಹಿ-ಕಟ್ಟಿಱುಂಪೆಗಳಿಂದಂ, ಚಾಳಿಣಿಕದೋ ವಾ-ಬನಲಿಯುವೊಲ್ ಛಿದ್ರಂ ಮಾಡೆಪಟ್ಟ ಮೆಯ್ಯನೊಡೆಯನಾಗಿ, ತದವಿಯು-ಅಂತು, ಚಿಲಾತಪುತ್ತೋ-ಚಿಲಾತ ಪುತ್ರನೆಂಬ ರಿಸಿ, ಪಡಿವಣ್ಣೋ-ಪೊರ್ದಿದೊಂ, ಉತ್ತಮಂ ಅಟ್ಠಂ-ಮಿಕ್ಕ ದರ್ಶನ ಜ್ಞಾನ ಚಾರಿತ್ರಂಗಳಾರಾಧನೆಯಂ]

ಅದೆಂತೆಂದೊಡೆ : ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ಮಗಧೆಯೆಂಬುದು ನಾಡಲ್ಲಿ ರಾಜಗೃಹಮೆಂಬುದು ಪೊೞಲದನಾಳ್ವೊಂ ಉಪಶ್ರೇಣಿಕನೆಂಬೊನರಸನಾತಂಗೆ ಜಯಾವತಿ ಮಹಾದೇವಿ ಮೊದಲಾಗಿ ಮೂಸಾಸಿರರಸಿಯರ್ಕಳಂತವರಿಪ್ಪವಿಷಯ ಕಾಮ ಭೋಗಂಗಳನನುಭವಿಸುತ್ತಂ ಪಲಕಾಲಂ ಸಲೆ ಮತ್ತೊಂದು ದಿವಸಂ ಉಪಶ್ರೇಣಿಕಂ ಬೇಂಟೆಯಾಡಲ್ವೋಗಿಯುಡವಿಯೊಳ್ ದುಷ್ಟಾಶ್ವಮನೇಱಿ ಪಂದಿಯ ಬೞಿಯಂ ತಗುಳ್ದೋಡದು ಗಾಳಿಗೊಂಡೊಂದು ದೆಸೆಗೆವರಿದು ವಿಂಧ್ಯಾಟವಿಯ ನಟ್ಟನಡುವೆ ಸುರಮ್ಯಮೆಂಬ ಬೇಡವಳ್ಳಿಯ ಸಾರೆ ತೊಱೆಯ

ಚಿಲಾತ ಪುತ್ರನ ಕಥೆಯನ್ನು ಹೇಳುವೆನು : [ಅತ್ಯಂತ ಅಸಹನೀಯವಾದ ಗಾಯಗಳಿಂದ ಭೇದಿಸಲ್ಪಟ್ಟವನಾಗಿಯೂ ಕಟ್ಟಿರುವೆಗಳಿಂದ ಜರಡಿಯ ಹಾಗೆ ತೂತು ಮಾಡಲ್ಪಟ್ಟ ಶರೀರವುಳ್ಳವನಾಗಿಯೂ ಅಂತು ಚಿಲಾತ ಪುತ್ರನೆಂಬ ಋಷಿ ಶ್ರೇಷ್ಠವಾದ ದರ್ಶನ ಜ್ಞಾನ ಚಾರಿತ್ರಗಳ ಆರಾಧನೆಯನ್ನು ಮಾಡಿದನು.] ಅದು ಹೇಗೆಂದರೆ: ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಮಗಧೆ ಎಂಬ ನಾಡಿನಲ್ಲಿ ರಾಜಗೃಹವೆಂಬ ಪಟ್ಟಣವನ್ನು ಉಪಶ್ರೇಣಿಕನೆಂಬ ರಾಜನು ಆಳುತ್ತಿದ್ದನು. ಅವನಿಗೆ ಜಯಾವತಿ ಮಹಾದೇವಿ ಮೊದಲಾದ ಮೂರು ಸಾವಿರ ಮಂದಿ ರಾಣಿಯರಿದ್ದರು. ಅಂತು ಅವರು ಇಷ್ಟವಿಷಯದ ಕಾಮಸುಖಗಳನ್ನು ಅನುಭವಿಸುತ್ತ ಹಲವು ಕಾಲ ಕಳೆಯಿತು. ಅನಂತರ ಒಂದು ದಿನಸ ಉಪಶ್ರೇಣಿಕನು ಬೇಟೆಯಾಡಲು ಹೋದನು. ಕಾಡಿನಲ್ಲಿ ಕುಂಟ ಕುದುರೆಯನ್ನೇರಿ ಒಂದು ಹಂದಿಯನ್ನು ಅದರ ದಾರಿಯಲ್ಲಿ ಬೆನ್ನಟ್ಟಿಕೊಂಡು ಹೋದನು. ಆ ಕುದುರೆ ಗಾಳಿಯ ಮೂಲಕ ವಾಸನೆ ಹಿಡಿದು ಒಂದು ದಿಕ್ಕಿಗೆ ಓಡುತ್ತ ವಿಂಧ್ಯೆಯ ಕಾಡಿನ ನಟ್ಟನಡುವೆ ಸುರಮ್ಯವೆಂಬ ಬೇಡರ ಹಳ್ಳಿಯ ಸಮೀಪ ಹೊಳೆಯ ದಡದಲ್ಲಿ

ತಡಿಯೊಳ್ ಕುದುರೆ ತನ್ನಂ ತಾನೆ ಸೇದೆಗೆಟ್ಟು ನಿಂದಾಗಳ್ ಕುದುರೆಯಿಂದಿೞಿದು ಪಲ್ಲಣಮುಂ ಚದುರಸಿಗೆಯುಮಂ ಕೀೞುಮಂ ಕಳೆದು ಕುದುರೆಯುಂ ನೀರೂಡಿ ಮೈದೊಳೆದು ಕಟ್ಟಿ ತಾನುಂ ನೀರಂ ಕುಡಿದೊಂದು ಮರದ ಕೆೞಗೆ ಚದುರಸಿಗೆಯುಂ ಪಾಸಿ ಪಟ್ಟಿರ್ದನ್ ಅನ್ನೆಗಮಾ ಬೇಡ ವಳ್ಳಿಯರಸಂ ಮಹಾಕಾಳನೆಂಬೊನಾತಂ ಕುಲದೊಳರಸು ಕುಲಂ ದಾಯಿಗರಿಂದಮುಚ್ಚಾಟಿಸಿ ಕಳೆಯೆ ಪಟ್ಟೊಬನಾಗಿ ಬಂದಲ್ಲಿ ಪೊೞಲಂ ಮಾಡಿ ಪಲಕಾಲಮಿರ್ದೊನಾತನರಸಿ ಸೌಂದರಿ ಯೆಂಬೊಳಾಯಿರ್ವರ್ಗ್ಗಂ ಮಗಳ್ ಗುಣಸೌಂದರಿಯೆಂಬೊಳತ್ಯಂತ ರೂಪಲಾವಣ್ಯ ಸೌಭಾಗ್ಯ ಕಾಂತಿ ಹಾವ ಭಾವ ವಿಲಾಸ ವಿಭ್ರಮಂಗಳನೊಡೆಯೊಳಾಕೆ ಪಲರುಂ ಕನ್ನೆಯರ್ಕಳುಂ ಕಾಪಿನ ವರುಂ ಬೆರಸುದ್ಯಾನವನದೊಳ್ ವನಕ್ರೀಡೆಯಾಡಿ ಬರ್ಪಾಕೆ ಉಪಶ್ರೇಣಿಕನ ರೂಪುಂ ಕಂಡಾಟಿಸಿ ನೋಡೆ ಆತನುಮಾಕೆಗಾಟಿಸಿ ಸೋಲ್ತು ನೋಡಿ ಬಸಮೞಿದು ನೀಡುಮೊಲ್ದು ನೋಡೆ ಕಾಪಿನವರ್ ಪಿಡಿದು ಕೊಂಡು ಪೋಪಾಗಳೊಂದೋಲೆಯನಿಂತೆಂದು ಬರೆದಳ್ ನೀನಲ್ಲ ದೆನಗುೞಿದ ಪುರುಷರ್ ಪೊರೆಯಲ್ಲರೆಂದು ಬಗೆದು ಬರೆದು ಪೆಱಗಣಿಂದೋಲೆಯನಿಕ್ಕಿ ಪೋದಾಗಳೋಲೆಯುಂ ಬಾಚಿಸಿ ನೋಡಿ ಸಂತುಷ್ಟಚಿತ್ತನಾಗಿರ್ದನನ್ನೆಗಂ ಪೆಱಗಣಿಂದಡಿ

ಆಯಾಸ ಪಟ್ಟು ನಿಂತಿತು. ಆಗ ಉಪಶ್ರೇಣಿಕನು ಕುದುರೆಯಿಂದ ಇಳಿದು ಅದರ ಹಲ್ಲಣವನ್ನೂ ಜೀನಿನ ಮೇಲೆ ಹಾಕಿದ ಚೌಕದ ವಸ್ತ್ರವನ್ನೂ ಕಡಿವಾಣವನ್ನೂ ತೆಗೆದು ಹಾಕಿ, ಕುದುರೆಗೆ ನೀರನ್ನು ಕುಡಿಸಿ ಅದರ ಮೈಯನ್ನು ತೊಳೆದು ಅದನ್ನು ಕಟ್ಟಿ ಹಾಕಿದನು. ತಾನೂ ನೀರನ್ನು ಕುಡಿದು ಒಂದು ಮರದ ಕೆಳಗೆ ಚೌಕವಸ್ತ್ರವನ್ನು ಹಾಸಿ ಮಲಗಿದ್ದನು. ಆ ಬೇಡರ ಹಳ್ಳಿಯ ಅರಸನು ಮಹಾಕಾಳನೆಂಬವನು. ಅವನು ಕುಲವಲ್ಲಿ ರಾಜಕುಲದವನು; ದಾಯಾದಿಗಳಿಂದ ಬುಡಸಹಿತ ಕಿತ್ತು ಅಟ್ಟಲ್ಪಟ್ಟವ ನಾಗಿ, ಬಂದು ಅಲ್ಲಿ ಪಟ್ಟಣವನ್ನು ನಿರ್ಮಾಣ ಮಾಡಿ ಹಲವು ಕಾಲದಿಂದಲೇ ಇದ್ದನು. ಅವನ ರಾಣಿ ಸೌಂದರಿಯೆಂಬವಳು. ಆ ಇಬ್ಬರಿಗೂ ಗುಣಸೌಂದರಿ ಎಂಬವಳು ಮಗಳಾಗಿದ್ದಳು. ಅವಳು ಅತಿಶಯವಾದ ರೂಪ, ಲಾವಣ್ಯ, ಸೌಭಾಗ್ಯ, ಕಾಂತಿ, ಹಾವ, ಭಾವ, ವಿಲಾಸ, ವಿಭ್ರಮಗಳನ್ನುಳ್ಳವಳಾಗಿದ್ದಳು. ಆಕೆ ಹಲವು ಮಂದಿ ಕನ್ಯೆಯರನ್ನೂ ಕಾವಲುಗಾರರನ್ನೂ ಕೂಡಿಕೊಂಡು ಅಷ್ಟರಲ್ಲಿ ಆ ಉದ್ಯಾನವನದಲ್ಲಿ ಕ್ರೀಡೆಗಳನ್ನಾಡಿ ಬರುತ್ತಿದ್ದಳು. ಹಾಗೆ ಬರುವಾಗ ಉಪಶ್ರೇಣಿಕನ ರೂಪವನ್ನು ಕಂಡು ಪ್ರೀತಿಸಿ ನೋಡಿದಳು. ಉಪಶ್ರೇಣಿಕನೂ ಆಕೆಯ ಮೇಲೆ ಮೋಹಪಟ್ಟು ಸೋತು ನೋಡಿ ಪರವಶನಾಗಿ ಬಹಳ ಹೊತ್ತಿನವರೆಗೆ ಪ್ರೀತಿಯಿಂದ ನೋಡಿದನು. ಆಗ ಕಾವಲಿ ನವರು ಗುಣಸೌಂದರಿಯನ್ನು ಹಿಡಿದು ಕರೆದುಕೊಂಡು ಹೋಗುವಾಗ ಆಕೆ ಒಂದು ಓಲೆ ಯನ್ನು ಈ ರೀತಿಯಾಗಿ ಬರೆದಳು—"ನೀನಲ್ಲದೆ ನನಗೆ ಬೇರೆ ಗಂಡುಸರು ಯಾರೂ ಸಂಬಾಗಲಾರರು". ಹೀಗೆ ಭಾವನಾಪೂರ್ಣವಾಗಿ ಬರೆದು ಹಿಂದುಗಡೆಯಿಂದ ಓಲೆ ಯನ್ನು ಬಿಸಾಡಿ ಹೋದಳು. ಉಪಶ್ರೇಣಿಕನು ಆ ಓಲೆಯನ್ನು ವಾಚಿಸಿ ನೋಡಿ

ವಜ್ಜೆಯುಂ ನೋಡಿ ತೇನತೇನದಿಂ ತಂತ್ರಮೆಲ್ಲಂ ನೆರೆದು ಬಂದು ಪಱೆಯು ಕಹಳೆಯು ಶಂಖ ಧ್ವನಿಗಳೊವರ್ೞಿದಲೆ ಬಾಜಿಸೆ ಬೇಡರಸಂ ಕೇಳ್ದು ದಾೞಿ ಬಂದುದೆಂದಂಜಿ ತ್ರಸ್ತಾಭಿಭೂತ ನಾಗಿಯೋಡಲ್ ತಗುಳ್ದೊಡುಪಶ್ರೇಣಿಕಂ ತನ್ನ ಪೆರ್ಗಡೆಗಳನಟ್ಟಿಯೋಡಲೀಯದೆ ಸಂತವಿಸಿ ದೊಡಾತನುಂ ಆನೆಗಳ ದಂತಂಗಳುಂ ಮುತ್ತುಗಳುಂ ಪುಲಿಯ ತೊವಲ್ಗಳುಮಂ ಚಮರಿ ಗಳುಮಂ ಕೊಂಡು ಬಂದು ಕಂಡು ಕ್ಷೇಮ ಕುಶಲಂಗಳಂ ಬೆಸಗೊಂಡ ಬೞಿಕ್ಕೆ ನಿಮ್ಮ ಕುಲ ಮೇನೆಂದು ಬೆಸಗೊಂಡೊಡಾತನರಸುಕುಲಮೆಂದು ಪೇೞ್ದೊಡೆ ಕೇಳ್ದು ಸಂತೋಷಂಬಟ್ಟಿರ್ದೊ ಡಾತನುಂ ಅರಸಂಗೆ ಬಿರ್ದ್ದ ಮಾಡಿರ್ದ ಬೞಿಕ್ಕೆ ಕೂಸಂ ಬೇಡಿಯಟ್ಟಿ ಪೆತ್ತು ಪ್ರಶಸ್ತ ದಿವಸ ವಾರ ನಕ್ಷತ್ರ ಮುಹೂರ್ತದೊಳ್ ಮದುವೆ ನಿಂದು ಕೂಸನೊಡಗೊಂಡು ತನ್ನ ಪೊೞಲ್ಗೆ ವೋಗಿ ಚಿಳಾತ ಮಹಾದೇವಿಯೆಂದು ಪೆಸರನಿಟ್ಟು ಇಂತಿಷ್ಟವಿಷಯ ಕಾಮ ಭೋಗಂಗಳನನು ಭವಿಸುತ್ತಂ ಪಲಕಾಲಂ ಸಲೆ ಮತ್ತಿತ್ತ ನಾಡೊಳ್ ಸಾರ್ಥಾಧಿಪತಿ ನಂದಿಮಿತ್ರನೆಂಬೊಂ ಸಟ್ಟಿ ಸಾರ್ಥಂ ಬೆರಸು ಪರದಿಂಗೆ ಪೋಗುತ್ತಿರ್ದಾತನೆಡೆಯೊಳೊಂದೂರೊಳ್ ಬಿಟ್ಟಿರ್ದನನ್ನೆಗಂ

ಸಂತ್ರಸಗೊಂಡ ಮನಸ್ಸಿನವನಾಗಿ ಇದ್ದನು. ಹೀಗಿರಲು ಹಿಂದಿನಿಂದ ಪಾದದ ಗುರುತು ಗಳನ್ನು ನೋಡಿಕೊಂಡು ಮೇಲೆ ಮೇಲಾಗಿ ರಾಜನ ಸೈನ್ಯವೆಲ್ಲವೂ ಬಂದು ಸೇರಿದವು. ತಂಬಟೆ, ಕಹಳೆ, ಶಂಖಗಳು ಒಟ್ಟಿಗೇ ಶಬ್ದ ಮಾಡುತ್ತಿರಲು, ಬೇಡರ ರಾಜನು ಕೇಳಿ ದಾಳಿ ಬಂದಿದೆ ಎಂದು ಹೆದರಿ ಭಯಪೀಡಿತನಾಗಿ ಓಡಲು ಉಪಕ್ರಮಿಸಿದಾಗ ಉಪಶ್ರೇಣಿ ಕನು ತನ್ನ ಅಧಿಕಾರಿಗಳನ್ನು ಕಳುಹಿಸಿ ಓಡುವುದಕ್ಕೆ ಬಿಡದೆ ಸಮಾಧಾನ ಪಡಿಸಿದನು. ಅವನು ಆನೆಗಳ ದಂತಗಳು, ಮುತ್ತುಗಳು, ಹುಲಿದೊಗಲುಗಳು, ಚಮರೀ ಮೃಗಗಳು– ಇವನ್ನೆಲ್ಲ ಕಾಣಿಕೆಯಾಗಿ ತಂದು ರಾಜನನ್ನು ಕಂಡನು. ಕ್ಷೇಮ ಕುಶಲಗಳನ್ನು ಕೇಳಿದ ನಂತರ 'ನಿಮ್ಮ ಕುಲ ಯಾವುದು ?' ಎಂದು ರಾಜನು ಕೇಳಿದನು. ಆತನು 'ನನ್ನದು ಕ್ಷತ್ರಿಯ ಕುಲ' ಎಂದನು. ಅದನ್ನು ಕೇಳಿ ಉಪಶ್ರೇಣಿಕನು ಸಂತೋಷಪಟ್ಟು ಕೊಂಡಿದ್ದನು. ಬೇಡರ ರಾಜನು ಅರಸನಿಗೆ ಔತಣ ಮಾಡಿದನು. ಆಮೇಲೆ ಉಪ ಶ್ರೇಣಿಕನು ಬೇಡರರಸನ ಮಗಳನ್ನು ಅಪೇಕ್ಷಿಸಿ ಅದಕ್ಕಾಗಿ ಜನ ಕಳುಹಿಸಿ, ಸಮ್ಮತಿ ಪಡೆದನು. ಶುಭ ದಿವಸ, ವಾರ, ನಕ್ಷತ್ರ, ಮುಹೂರ್ತದಲ್ಲಿ ಮದುವೆಯಾಗಿ ಕನ್ಯೆ ಯನ್ನು ಕೂಡಿಕೊಂಡು ತನ್ನ ಪಟ್ಟಣಕ್ಕೆ ಹೋಗಿ ಅವಳಿಗೆ ಚಿಳಾತ ಮಹಾದೇವಿ (ಚಿಳಾತ=ಕಿರಾತ) ಎಂದು ಹೆಸರನ್ನಿಟ್ಟು ಹೀಗೆಯೇ ಇಷ್ಟವಾದ ವಿಷಯದ ಕಾಮ ಸುಖಗಳನ್ನು ಅನುಭವಿಸುತ್ತ ಹಲವು ಕಾಲ ಕಳೆಯಿತು. ಅನಂತರದಲ್ಲಿ ಇತ್ತ ಆ ನಾಡಿನಲ್ಲಿ ಸರಕು ಗಾಡಿಗಳಿಗೆ ಯಜಮಾನನಾದ ನಂದಿಮಿತ್ರಸೆಟ್ಟಿ ವ್ಯಾಪಾರದ ಸರಕಿ ನೊಂದಿಗೆ ವ್ಯಾಪಾರಕ್ಕಾಗಿ ಹೋಗುತ್ತಿದ್ದನು. ಆತನು ಎಡೆಯಲ್ಲಿ ಒಂದು ಊರಲ್ಲಿ ತಂಗಿದ್ದನು. ಹೀಗಿರಲು ತಪೋಧನರೆಂಬ ಒಂಟಿಯಾಗಿ ಸಂಚರಿಸುವ ಜೈನಯತಿಗಳು

ತಪೋವರರೆಂಬ ರಿಸಿಯರೇಕವಿಹಾರಿಗಳ್ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಬರ್ಪೊರಾ ಸಾರ್ಥಾಧಿಪತಿಯ ಬಿಟ್ಟಿರ್ದೂರ್ಗೆ ಬಂದು ಪಂಥಾತಿಚಾರ ನಿಯಮಂಗೆಯ್ದು ಪಗಲ್ ದೇವರಂ ವಂದಿಸಿಯೂರ್ಗೆ ಚರಿಗೆ ಪೋಗಿ ಯೂರೆಲ್ಲಮಂ ತಿಜ್ಜನೆ ತಿರಿದು ತೊಟಲ್ದಾರುಂ ನಿಱಿಸದಿರ್ದೊಡೆ ಊರಿಂ ಪೊಱಮಟ್ಟು ಪೋಪ ರಿಸಿಯರಂ ನಂದಿಮಿತ್ರಂ ಕಂಡು ಕಾರುಣ್ಯದಿಂ ನಿಱಿಸಿ ಎಳ್ಳುಂಡೆಯನಿಕ್ಕಿದೊಡದಂ ಚರಿಗೆ ಮಾಡಿ ಪ್ರಾಸುಕಮಪ್ಪ ನೀರಂ ಕುಡಿದು ಪರಸಿ ಪೋದರಾ ನಂದಿಮಿತ್ರನುಂ ಪಲಕಾಲಂ ಬರ್ದಾಯುಷ್ಯಾಂತದೊಳ್ ಜಂಬೂದ್ವೀಪದ ಹೈಮವತಮೆಂಬ ಜಘನ್ಯಭೋಗಭೂಮಿಯೊಳೊಂದು ಪಳಿತೋಪಮಾಯುಷ್ಯಮನೊಡೆಯೊಂ ಭೋಗಭೂಮಿಜನಾಗಿ ಪುಟ್ಟಿದೊಂ ಪುಟ್ಟಿಯಲ್ಲಿ

ವೃತ್ತ॥ ಮದ್ಯಾಂಗ ತೂರ್ಯಾಂಗ ವಿಭೂಷಣಾಂಗಾ
ಜ್ಯೋತಿರ್ಗೃಹಾ ಭೋಜನ ಭಾಜನಾಂಗಾಃ
ಪ್ರದೀಪ ವಸ್ತ್ರಾಂಗ ವರಸ್ರಜಾಂಗಾ
ದಶಪ್ರಕಾರಾಸ್ತರವಸ್ತು ತತ್ರ ॥

ಅಂತು ಪತ್ತುಂ ತೆಱದ ವೃಕ್ಷಂಗಳ್ ಭೋಗಂಗಳಂ ಕುಡೆ ಪಲಕಾಲಂ ಭೋಗೋಪಭೋಗಂಗಳ

ಗ್ರಾಮ, ನಗರ, ಖೇಡ, ಖರ್ವಡ, ಮಡಂಬ, ಪಟ್ಟಣ, ದ್ರೋಣಾಮುಖ ಎಂಬ ಭೂಭಾಗಗಳಲ್ಲಿ ಸಂಚಾರ ಮಾಡುತ್ತ ಬರತಕ್ಕವರು ಆ ವರ್ತಕನು ತಂಗಿದ್ದ ಊರಿಗೆ ಬಂದು ಪಂಥಾತಿಚಾರ (ದಾರಿ ನಡೆವಾಗ ಆಗುವ ಪ್ರಾಣಿಹಿಂಸೆ ಮುಂತಾದ ಅತಿಚಾರಗಳಿಗೆ ಪ್ರಾಯಶ್ಚಿತ್ತ) ನಿಯಮವನ್ನು ಮಾಡಿ ಹಗಲು ಹೊತ್ತಿನಲ್ಲಿ ದೇವರನ್ನು ವಂದಿಸಿ ಊರಿಗೆ ಭಿಕ್ಷೆಗಾಗಿ ಹೋದರು. ಊರೆಲ್ಲವನ್ನೂ ತಿರ್ರನೆ ತಿರುಗಿ ಸುತ್ತಾಡಿದರೂ ಯಾರೂ ಊಟಕ್ಕೆ ನಿಲ್ಲಿಸಲಿಲ್ಲ. ಊರಿನಿಂದ ಹೊರಟು ಹೋಗತಕ್ಕ ಋಷಿಗಳನ್ನು ನಂದಿಮಿತ್ರನು ಕಂಡು ದಯೆಯಿಂದ ನಿಲ್ಲಿಸಿಕೊಂಡು ಎಳ್ಳಿನ ಉಂಡೆಗಳನ್ನು ಕೊಟ್ಟನು. ಋಷಿಗಳು ಅದನ್ನು ಭಿಕ್ಷೆಯಾಗಿ ಮಾಡಿ ಜೀವಜಂತುವಿಲ್ಲದೆ ನಿರ್ಮಲವಾದ ನೀರನ್ನು ಕುಡಿದು ಆಶೀರ್ವಾದ ಮಾಡಿ ತೆರಳಿದರು. ಆ ನಂದಿಮಿತ್ರನು ಹಲವು ಕಾಲ ಬಾಳಿ ಆಯುಷ್ಯ ಕೊನೆಗೊಳ್ಳಲು ಜಂಬೂದ್ವೀಪದ ಹೈಮವತವೆಂಬ ನೀಚವಾದ ಭೋಗ ಭೂಮಿಯಲ್ಲಿ ಒಂದು ಪಳಿತಕ್ಕೆ (ಪಳಿತ ಎಂಬುದು ಒಂದು ದೊಡ್ಡ ಸಂಖ್ಯೆ) ಸಮಾನವಾದ ಆಯುಷ್ಯವುಳ್ಳವನಾಗಿ ಭೋಗ ಭೂಮಿಯವನಾಗಿ ಹುಟ್ಟಿದನು. [ಆ ಭೋಗ ಭೂಮಿಯಲ್ಲಿ ಮದ್ಯವನ್ನು, ವಾದ್ಯಗಳನ್ನು, ಆಭರಣಗಳನ್ನು, ಬೆಳಕನ್ನು, ಮನೆಯನ್ನು, ಊಟವನ್ನು, ಪಾತ್ರೆಗಳನ್ನು, ದೀಪವನ್ನು, ವಸ್ತ್ರವನ್ನು, ಹೂಮಾಲೆಗಳನ್ನು ಕೊಡುವ ಹತ್ತು ಬಗೆಯ ಮರಗಳು ಇರುತ್ತವೆ.] ಅಂತು ಹತ್ತು ಬಗೆಯ ಮರಗಳು ಸುಖಗಳನ್ನು ಕೊಡಲು ಹಲವು ಕಾಲದವರೆಗೆ ಭೋಗ ಉಪಭೋಗಗಳನ್ನು ಅನುಭವಿಸಿ ಆಯುಷ್ಯ ಕೊನೆ

ನನುಭವಿಸಿಯಾಯುಷ್ಯಾಂತದೊಳ್ ಮಂದರದ ನಂದನವೆಂಬ ವನದೊಳ್ ವ್ಯಂತರದೇವನಾಗಿ ಪುಟ್ಟಿ ಅಲ್ಲಿಂ ಬಟ್ಟಿ ಬಂದು ರಾಜಗೃಹದೊಳ್ ಉಪಶ್ರೇಣಿಕಂಗಂ ಚಿಲಾತ ಮಹಾದೇವಿಗಂ ಚಿಲಾತಪುತ್ರನೆಂಬೊಂ ಪಿರಿಯ ಮಗನಾಗಿ ಪುಟ್ಟಿದನಲ್ಲಿಂ ಬಱಿಯಂ ಜಯಾವತಿಯೆಂಬ ಪಿರಿಯ ಮಹಾದೇವಿಗೆ ಶ್ರೇಣಿಕನೆಂಬೊಂ ಮಗನಾಗಿ ಪುಟ್ಟಿದನುೞಿದರಸಿಯರ್ಕಳ್ಗಂ ಮಕ್ಕಳ್ ಪುಟ್ಟಿದ ರಂತೆಲ್ಲಮುಪಶ್ರೇಣಿಕಂಗೆ ಮಕ್ಕಳಯ್ನೂರ್ವರಂತುಪಶ್ರೇಣಿಕನಯ್ನೂರ್ವರ್ ಮಕ್ಕಳ್ವೆರಸು ಭೋಗೋಪಭೋಗಂಗಳನನುಭವಿಸುತ್ತಂ ಕಾಲಂ ಸಲೆ ಮತ್ತೊಂದು ದಿವಸಂ ನೈಮಿತ್ತಿಕ ನನರಸಂ ಬೆಸಗೊಂಡನೆನ್ನ ಮಕ್ಕಳೊಳಗೆ ರಾಜ್ಯಾರ್ಹರಾರೆಂದು ಬೆಸಗೊಂಡೊಡಾತನಿಂತೆಂದನ ಯ್ನೂರ್ವರ್ ಮಕ್ಕಳ್ಗೊಂದೆ ಪಂತಿಯೊಳ್ ತುಯ್ಯಲಂ ಬಡ್ಡಿಸಿಯಯ್ನೂಱು ನಾಯಸವರ ಮೇಗೆ ಬಿಟ್ಟೊಡಾವನೊರ್ವನಂಜದುಣ್ಗುಮಾತನಕ್ಕುಂ ಮತ್ತರಮನೆಯೊಳ್ ಕಿರ್ಚೆದೊರ್ಡಾವ ನೊರ್ವಂ ಸಿಂಹಾಸನಮುಂ ಬೆಳ್ಗೊಡೆಯುಂ ಪಾಳಿಧ್ವಜಂ ಮೊದಲಾಗೊಡೆಯ ರಾಜಚಿಹ್ನಂಗಳಂ ಕೈಕೊಳ್ಗುಮಾತಂ ರಾಜ್ಯಕ್ಕರ್ಹನಕ್ಕುಮೆಂದು ಪೇೞ್ದೊಡದಂ ಕೇಳ್ದೊಂದು ದಿವಸಮರಸನವ ರ್ಗುಣಲಿಕ್ಕವೇೞ್ದು ಪರೀಕ್ಷಿಸಿ ನೋಡಿದೊಡೆ ಶ್ರೇಣಿಕಂ ನಾಯ್ಗಳ್ಗೆ ತುಯ್ಯಲನಿಕ್ಕಿ ತಾನು

ಗ್ಗೊಂಡಾಗ ಮಂದರ ಪರ್ವತದ ನಂದನವೆಂಬ ಕಾಡಿನಲ್ಲಿ ವ್ಯಂತರ ದೇವನಾಗಿ ಹುಟ್ಟಿದನು. ಅಲ್ಲಿಂದ ಜಾರಿ ಬಂದು ರಾಜಗೃಹದಲ್ಲಿ ಉಪಶ್ರೇಣಿಕ ಮಹಾರಾಜನಿಗೂ ಚಿಲಾತ ಮಹಾರಾಣಿಗೂ ಚಿಲಾತಪುತ್ರನೆಂಬ ಹಿರಿಯ ಮಗನಾಗಿ ಹುಟ್ಟಿದನು. ಅದರ ನಂತರ ಜಯಾವತಿಯೆಂಬ ಹಿರಿಯ ಮಹಾರಾಣಿಗೆ ಶ್ರೇಣಿಕನೆಂಬವನು ಮಗನಾಗಿ ಜನಿಸಿದನು. ಉಳಿದ ರಾಣಿಯರಿಗೂ ಮಕ್ಕಳು ಹುಟ್ಟಿದರು. ಅಂತು ಎಲ್ಲ ಸೇರಿ, ಉಪಶ್ರೇಣಿಕನಿಗೆ ಐನೂರು ಮಂದಿ ಮಕ್ಕಳಾದರು. ಅಂತು ಉಪಶ್ರೇಣಿಕನು ಐನೂರು ಮಂದಿ ಮಕ್ಕ ಳನ್ನು ಕೂಡಿಕೊಂಡು ಭೋಗೋಪಭೋಗಗಳನ್ನು ಅನುಭವಿಸುತ್ತಿದ್ದನು. ಹೀಗೆಯೇ ಕಾಲ ಕಳೆಯುತ್ತಿತ್ತು. ಆಮೇಲೆ ಒಂದು ದಿವಸ ಉಪಶ್ರೇಣಿಕ ರಾಜನು ಜೋಯಿಸ ನನ್ನು ತನ್ನ ಮಕ್ಕಳ ಕುರಿತಾಗಿ ಪ್ರಶ್ನೆಮಾಡಿದನು. "ನನ್ನ ಮಕ್ಕಳಲ್ಲಿ ರಾಜ್ಯಾಧಿ ಕಾರಕ್ಕೆ ತಕ್ಕವರಾದವರು ಯಾರು" ಎಂದು ಕೇಳಲು ಜೋಯಿಸನು ಹೀಗೆಂದನು– "ಐನೂರು ಮಂದಿ ಮಕ್ಕಳಿಗೆ ಒಂದೇ ಪಂಕ್ತಿಯಲ್ಲಿ ಪಾಯಸವನ್ನು ಬಡಿಸಿ ಐನೂರು ನಾಯಿಗಳನ್ನು ಅವರ ಮೇಲೆ ಬಿಟ್ಟರೆ ಯಾವಾತನೊಬ್ಬನು ಹೆದರದೆ ಊಟಮಾಡು ವನೋ ಅವನು ತಕ್ಕವನಾಗುವನು. ಅದಲ್ಲದೆ, ಅರಮನೆಯಲ್ಲಿ ಬೆಂಕಿ ಮೇಲೆದ್ದಾಗ ಯಾವನೊಬ್ಬನು ಸಿಂಹಾಸನ, ಶ್ವೇತಚ್ಛತ್ರ, ಪಾಳಿಧ್ವಜ ಮೊದಲಾಗುಳ್ಳ ರಾಜ ಚಿಹ್ನೆ ಗಳನ್ನು ಹಿಡಿದುಕೊಳ್ಳುವನೋ ಅವನು ರಾಜ್ಯಕ್ಕೆ ಅರ್ಹನಾಗುವನು" ಎಂದು ಹೇಳಿ ದನು. ಅದನ್ನು ಕೇಳಿ ಉಪಶ್ರೇಣಿಕನು ಒಂದು ದಿವಸ ಅವರೆಲ್ಲರಿಗೂ ಊಟವನ್ನಿಕ್ಕಲು ಹೇಳಿ ಪರೀಕ್ಷಿಸಿ ನೋಡಿದಾಗ, ಶ್ರೇಣಿಕನು ಮಾತ್ರ ನಾಯಿಗಳಿಗೆ ಪಾಯಸವನ್ನು ಇಕ್ಕಿ ತಾನೂ ಊಟ ಮಾಡಿದನು. ಉಳಿದವರೆಲ್ಲರೂ ಓಡಿಹೋದರು. ಆಮೇಲೆ ಒಂದು

ಮುಂದೊನಱಿದರೆಲ್ಲರುಮೋಡಿದರ್ ಮತ್ತೊಂದುದಿವಸಮರಮನೆಯೊಳ್ ಕಿರ್ಚೆರ್ದೊ
ಡುಱಿವ ಮಕ್ಕಳೆಲ್ಲಂ ಭಂಡಾರಂಗಳುಮಾನೆಗಳುಂ ಕುದುರೆಗಳುಂ ಆಯುಧಶಾಲೆಯುಮಂ
ಕೈಕೊಂಡರ್ ಶ್ರೇಣಿಕಂ ರಾಜ್ಯ ಚಿಹ್ನಂಗಳಂ ಕೈಕೊಂಡದಱಿಂದರಸನೀತಂ ರಾಜ್ಯಕ್ಕರ್ಹನಕ್ಕು
ಮಿಲ್ಲಿರ್ದೊಡೆ ಪಲಂಬರುಂ ಮುನಿವರ್ ಪ್ರಮಾದಮಕ್ಕುಮೆಂದು ಬಗೆದು ನೀಂ ನಾಯೊಡ
ನುಂಡೆಯುಮ್ಮ ರಾಜ್ಯಚಿಹ್ನಂಗಳಂ ಕೈಕೊಂಡೆಯುಮ್ಮ ಬಾೞುತ್ತಿರೆಯರಸಿಂಗಾಟಿಸಿದೆಯೆಂದು
ನೆವಮಿಟ್ಟುಟ್ಟಿ ಕಳೆದನ್ ಆತನುಂ ದಕ್ಷಿಣ ಮಧುರೆಗೆ ಪೋಗಿ ಇಂದ್ರದತ್ತನೆಂಬ ಸೆಟ್ಟಿಗಂ
ಶ್ರೀಕಾಂತೆಯೆಂಬ ಪರದಿಗಂ ಮಗಳಭಯಮತಿಯೆಂಬೊಳಾಕೆಯುಂ ಮದುವೆನಿಂದನಾಕೆಗಭಯ
ಕುಮಾರನೆಂಬೊಂ ಮಗಂ ಪುಟ್ಟಿಯಿಂತಿಷ್ಟವಿಷಯ ಕಾಮಭೋಗಂಗಳನನುಭವಿಸುತ್ತಿರೆ ಮತ್ತಿ
ತ್ತುಪಶ್ರೇಣಿಕಂ ಮಾರುಗಮೆಂಬ ಪೊೞಲನಾಳ್ವೊಬ್ಬಾಯನನೆಂಬ ಮಹಾಸಾಮಂತಂಗಿಂತೆಂದು
ಪೇೞ್ದಟ್ಟಿದನುಜ್ಜೇನಿಯನಾಳ್ವ ಪ್ರದ್ಯೋತನೆಂಬರಸನೀಗಳೆಮ್ಮನುಜದಿರ್ಪೊನಾತನಂ ಪಿಡಿದು
ಕಟ್ಟಿಕೊಂಡು ಬರ್ಕೆಂದು ಬೆಸಪೇೞ್ದಟ್ಟಿದೊಡಾತನುಂ ತನ್ನುಳ್ಳ ಚಾತುರ್ದಂತ ಬಲಮೆಲ್ಲಮಂ
ಕೂಡಿಕೊಂಡು ಆತನ ಮೇಗೆಟ್ಟು ಕಾದಿದೊಡೆ ಪ್ರದ್ಯೋತಂ ಕಾಳೆಗಮಂ ಗೆಲ್ದೊಬ್ಬಾಯನನಂ

ದಿವಸ ಅರಮನೆಯಲ್ಲಿ ಬೆಂಕಿ ಬಿದ್ದಿತು. ಆಗ ಇತರ ಮಕ್ಕಳೆಲ್ಲರೂ ಭಂಡಾರದವರೂ
ಆನೆಗಳೂ ಕುದುರೆಗಳೂ ಆಯುಧಾಗಾರವನ್ನು ಸೇರಿಕೊಂಡರು. ಶ್ರೇಣಿಕನು ರಾಜ್ಯ
ಚಿಹ್ನೆಗಳನ್ನು ಹಿಡಿದುಕೊಂಡನು. ಆದುದರಿಂದ ಉಪಶ್ರೇಣಿಕ ರಾಜನು "ಈತನು
ರಾಜ್ಯಾಧಿಕಾರಕ್ಕೆ ತಕ್ಕವನಾಗಿರುವನು. ಇವನು ಇಲ್ಲಿದ್ದರೆ ಹಲವರು ಕೆಟ್ಟಾಗುವರು.
ತಪ್ಪುಗೆಲಸ ನಡೆದು ಹೋದೀತು" ಎಂದು ಭಾವಿಸಿ "ನೀನು ನಾಯಿಯೊಡನೆ ಊಟ
ಮಾಡಿದೆ, ಮತ್ತು ನನ್ನ ರಾಜ್ಯ ಚಿಹ್ನೆಗಳನ್ನು ಹಿಡಿದುಕೊಂಡೆ, ನಾನು ಬದುಕಿರು
ವಾಗ ಅರಸುತನಕ್ಕೆ ಅಪೇಕ್ಷೆ ಮಾಡಿದೆ" ಎಂದು ನೆಪವನ್ನಿಟ್ಟು ಅವನನ್ನು ಓಡಿಸಿಬಿಟ್ಟನು.
ಶ್ರೇಣಿಕನು ದಕ್ಷಿಣ ಮಧುರೆಗೆ ಹೋದನು. ಅಲ್ಲಿ ಇಂದ್ರದತ್ತನೆಂಬ ಸೆಟ್ಟಿಗೂ ಶ್ರೀಕಾಂತೆ
ಯೆಂಬ ಸೆಟ್ಟಿತಿಗೂ ಅಭಯಮತಿ ಎಂಬ ಮಗಳಿದ್ದಳು. ಶ್ರೇಣಿಕನು ಅವಳನ್ನು ಮದುವೆ
ಯಾದನು. ಆಕೆಯಲ್ಲಿ ಅಭಯ ಕುಮಾರನೆಂಬ ಮಗನು ಹುಟ್ಟಿದನು. ಹೀಗೆ ಅವರು
ಇಷ್ಟವಿಷಯದ ಕಾಮಭೋಗಗಳನ್ನು ಅನುಭವಿಸುತ್ತ ಇದ್ದರು. ಆಮೇಲೆ, ಇತ್ತ
ಉಪಶ್ರೇಣಿಕನು ಮಾರುಗನೆಂಬ ಪಟ್ಟಣವನ್ನು ಆಳುವ ಒಬ್ಬಾಯನನೆಂಬ ಮಹಾ
ಸಾಮಂತನಿಗೆ ಈ ರೀತಿಯಾಗಿ ಹೇಳಿ ಕಳುಹಿಸಿದನು—"ಉಜ್ಜಯಿನಿಯನ್ನು ಆಳುತ್ತಿರುವ
ಪ್ರದ್ಯೋತನೆಂಬ ರಾಜನು ನನ್ನನ್ನು ಅಲಕ್ಷ್ಯಮಾಡುತ್ತಿದ್ದಾನೆ. ಅವನನ್ನು ಹಿಡಿದು
ಬಂಧಿಸಿಕೊಂಡು ಬನ್ನಿ" ಎಂದು ಆಜ್ಞೆ ಮಾಡಿ ಕಳುಹಿಸಲು, ಆತನು ತನ್ನಲ್ಲಿದ್ದ
ಚತುರಂಗ ಸೈನ್ಯವೆಲ್ಲವನ್ನೂ ಕೂಡಿಕೊಂಡು ಪ್ರದ್ಯೋತನ ಮೇಲೆ ಬಿದ್ದು
ಕಾದಾಡಿದನು. ಆಗ ಪ್ರದ್ಯೋತನು ಯುದ್ಧದಲ್ಲಿ ಗೆದ್ದು ಒಬ್ಬಾಯನನ್ನು ಹಿಡಿದು

ಪಿಡಿದು ಕಟ್ಟಿ ಸೆಱೆಯಿಟ್ಟಂ ಮತ್ತೆ ವಿಜಯನೆಂಬ ಕುಮಾರನುಂ ಪಿರಿದು ತಂತ್ರಂ ಬೆರಸು ಪೋಗಿ ಏನಾನುಮೊಂದುಪಾಯದಿಂದೊದ್ದಾಯನನ ಸೆಱೆಯಂ ಬಿರ್ದುಂಕಿಸಿ ರಾಜಗೃಹಕ್ಕೊಡ ಗೊಂಡು ಪೋದೊಡೆ ಪ್ರದ್ಯೋತಂ ಮಗಧದವರ ನಾಡಂ ಸೂಱೆಗೊಳುತ್ತಂ ಸುಡುತ್ತಂ ಕಿಡಿ ಸುತ್ತಂ ಉಪಶ್ರೇಣಿಕನ ಮೇಗೆಪೋಗೆಯಾತನ ಬರವನಱಿದುಪಶ್ರೇಣಿಕಂ ತನ್ನ ಪೊೞಲೊಳ್ ಘೋಷಣೆಯನಿಂತೆಂದು ತೊೞಲ್ಚಿದನಾವನೊರ್ವಂ ಪ್ರದ್ಯೋತನಂ ಪಿಡಿದು ಕಟ್ಟಿಕೊಂಡು ಬರ್ಕು ಮಾತಂಗಾತನ ಬೇಡಿದೊಸಗೆಯುಂ ಕುಡುವೆನೆಂದು ತೊೞಲ್ವ ಗೋಸನೆಯುಂ ಚಿಲಾತಪುತ್ರಂ ಕೇಳ್ದು ಪಿಡಿದರಸಂಗೆ ಪೇೞ್ದು ಪಿರಿದುಂ ತಂತ್ರಂ ಬೆರಸು ಪೋಗಿ ಚರಪುರುಷರನಟ್ಟಿ ಬೇಗಂ ದಾೞಿ ಪೋಗಿ ಜಲಕ್ರೀಡೆಯಾಡುವನನಱಿದು ಪಿಡಿದು ಕಟ್ಟಿಕೊಂಡುಪಶ್ರೇಣಿಕಂಗೊಪ್ಪಿಸಿದೊಡಾತನು ಮಾದಮಾನುಂ ಮೆಚ್ಚಿಯೊಸಗೆಯುಂ ಬೇಡಿಕೊಳ್ ನಿನ್ನ ಬೇಡಿದುದೆಲ್ಲಮನೀವೆನೆಂದರಸಂ ನುಡಿ ದೊಡಾತನಿಂತೆಂದಂ ನಿಮ್ಮ ಪ್ರಸಾದದಿಂದೆನಗೆಲ್ಲಮುಂಟು ಒಂದಂ ಬೇಡುವೆಂ ನಿಮ್ಮಂತಃಪುರ ಮುಟ್ಟಿಯೆ ಪನ್ನೆರಡು ವರ್ಷಂಬರೆಗಂ ಪೆಂಡಿರ್ಕಳೊಳೆಲ್ಲಮೆನ್ನ ಮೆಚ್ಚಿದಂತೆ ಸಯ್ತಂ ಬಾೞ್ವೆ

ಬಂಧಿಸಿ ಸೆರೆಮನೆಯಲ್ಲಿ ಇಟ್ಟನು. ಆಮೇಲೆ ವಿಜಯನೆಂಬ ಕುಮಾರನು ಹೆಚ್ಚು ಸೈನ್ಯವನ್ನು ಕೂಡಿಕೊಂಡು ಹೋಗಿ, ಯಾವುದೋ ಒಂದು ಉಪಾಯದಿಂದ ಒದ್ದಾಯನನನ್ನು ಸೆರೆಯಿಂದ ಪಾರು ಮಾಡಿ, ಅವನನ್ನು ಕೂಡಿಕೊಂಡು ರಾಜ ಗೃಹಕ್ಕೆ ಹೋದನು. ಆಗ ಪ್ರದ್ಯೋತನು ಕೋಪಗೊಂಡು ಮಗಧೆಯ ನಾಡನ್ನು ಸೂರೆ ಮಾಡುತ್ತ ಸುಡುತ್ತ ಕೆಡಿಸುತ್ತ ಉಪಶ್ರೇಣಿಕನ ಮೇಲೆ ದಂಡೆತ್ತಿ ಹೋದನು. ಪ್ರದ್ಯೋತನ ಬರುವಿಕೆಯನ್ನು ತಿಳಿದು ಉಪಶ್ರೇಣಿಕನು ತನ್ನ ಪಟ್ಟಣದಲ್ಲಿ ಈ ರೀತಿ ಯಾಗಿ ಘೋಷಣೆಯನ್ನು ಸಾರಿಸಿದನು. "ಯಾವಾತನೊಬ್ಬನು ಪ್ರದ್ಯೋತನನ್ನು ಹಿಡಿದು ಕಟ್ಟಿಕೊಂಡು ಬರುವನೋ ಆತನಿಗೆ ಅವನು ಬಯಸಿದ ಮೆಚ್ಚನ್ನು ಕೊಡುವೆನು" ಈ ರೀತಿಯಾಗಿ ಪಟ್ಟಣದಲ್ಲಿ ಸುತ್ತುವ ಡಂಗುರವನ್ನು ಚಿಲಾತಪುತ್ರನು ಕೇಳಿ, ಅದನ್ನು ತಾನು ಕೈಗೊಂಡು ರಾಜನಿಗೆ ತಿಳಿಸಿ ದೊಡ್ಡದಾದ ಸೈನ್ಯವನ್ನು ಕೂಡಿಕೊಂಡು ಹೋದನು. ದೂತರನ್ನು ಕಳುಹಿಸಿದನು. ಬೇಗನೆ ದಂಡೆತ್ತಿಕೊಂಡು ಹೋಗಿ ಜಲಕ್ರೀಡೆಯಾಡುತ್ತಿದ್ದ ಪ್ರದ್ಯೋತನನ್ನು ತಿಳಿದು ಹಿಡಿದು ಬಂದಿಸಿಕೊಂಡು ಉಪಶ್ರೇಣಿಕನಿಗೆ ಒಪ್ಪಿಸಿದನು. ಉಪಶ್ರೇಣಿಕನು ಬಹಳವಾಗಿ ಮೆಚ್ಚಿ, "ನಿನಗೆ ಪ್ರಿಯವಾದುದನ್ನು ಬೇಡಿಕೋ. ನೀನು ಬೇಡಿದುದೆಲ್ಲವನ್ನೂ ಕೊಡುವೆನು"–ಎಂದು ರಾಜನು ಹೇಳಿದಾಗ ಆತನು ಹೀಗೆಂದನು– "ನಿಮ್ಮ ಅನುಗ್ರಹದಿಂದ ನನಗೆ ಎಲ್ಲವೂ ಉಂಟು. ಒಂದನ್ನು ಮಾತ್ರ ನಿಮ್ಮಲ್ಲಿ ಬೇಡು ತ್ತೇನೆ. ನಿಮ್ಮ ಅಂತಃಪುರದ ಸ್ತ್ರೀಯರನ್ನು ಮಾತ್ರ ಬಿಟ್ಟು ಹನ್ನೆರಡು ವರ್ಷಗಳವರೆಗೆ ಇತರ ಹೆಂಗುಸರೊಡನೆ ನನಗೆ ಮೆಚ್ಚಿಕೆಯಾದಂತೆ ನೇರವಾಗಿ (ಮುಚ್ಚುಮರೆಯಿಲ್ಲದೆ) ಬಾಳ್ವೆನಡೆಸುವೆನು. ಇದನ್ನು ನಿಮ್ಮಲ್ಲಿ ಬೇಡಿದ್ದೇನೆ. ಇದನ್ನು ನನಗೆ ದಯೆ ಮಾಡಿ

ಸಿದಂ ಬೇಡಿದೆನಿದನೆನಗೆ ದಯೆಗೆಯ್ದು ಸಲಿಸುವುದೆಂದೊಡೆ ಅರಸನುಮಂತೆಗೆಯ್ಯೆಂದೊಡೊಸಗೆಯುಂ ಪೆತ್ತು ಪ್ರಸಾದಮೆಂದು ಪೊಡೆಮಟ್ಟು ಸಾಮಂತ ಮಹಾಸಾಮಂತ ಪರಿವಾರದೆಱತನಿಗರ ಪಾರ್ವರ ಪರದರೊಳ್ಪೆಂಡಿರ್ಕಳೆಲ್ಲರುಮಂ ಸೆಱೆದು ಬಗ್ಗಿಸಿಯುಮೊಟ್ಟಯಿಸಿಯುಂ ಕೊಂಡವರೊಳ್ ಬಾೞುತ್ತುಮಿಂತು ಪನ್ನೆರಡು ವರುಷಂ ಬರೆಗಂ ತನ್ನಿಚ್ಚೆಯೊಳ್ ಬಟ್ದವಧಿಯ ದಿವಸಂ ನೆಱೆದೊಡರಸನಿಂತಪ್ಪ ಗೊಡ್ಡಮಸಿನ್ನಾಡಲ್ ಸಲ್ಲೆಂದು ಬಾರಿಸಿದೊಡಂ ಉೞಿಯದೆ ತನ್ನ ಮೆಚ್ಚಿದಂತೆ ಬಾೞೆ ಅರಸಂ ಮುಳಿದು ನಾಡಿಂದಿರದಟ್ಟಿ ಕಳೆದೊಡಾತನುಮಡವಿಯೊಳ್ ಮಹೇಂದ್ರನೆಂಬ ತಾಪಸನ ಪಕ್ಕಕ್ಕೆಪೋಗಿಯಲ್ಲಿಯ ದುರ್ಗಮಪ್ಪೆಡೆಯೊಳ್ ಪೊೞಲಂ ಮಾಡಿಯದರ್ಕೆ ಬಳಸಿಯುಂ ಕೋಂಟೆಯುಂ ಗೋಪುರದ್ವಾರಮುಮಂ ಮಾಡಿ ಕೆಲದೂರ್ಗಳನೊಟ್ಟಯಿಸಿಯುಮೋಡಿಸಿಯುಮೆಱೆದು ಸೂಱೆಗೊಂಡುಮಿಂತು ಪಲವು ಕಾಲಂ ಸುಖದಿಂ ಬಾೞುತ್ತಿರ್ಪನ್ನೆಗಂ ಇತ್ತಲುಪಶ್ರೇಣಿಕಂ ಕರ್ಮಂಗಳುಪಶಮಂ ಕಾರಣಮಾಗಿ ಯಮಧರ ಭಟ್ಟಾರರ ಪಕ್ಕದೆ ಧರ್ಮಮಂ ಕೇಳ್ದು ಶ್ರಾವಕವ್ರತಂಗಳಂ ಕೈಕೊಂಡು ವೈರಾಗ್ಯಪರಾಯಣನಾಗಿ ಶ್ರೇಣಿಕಂಗಂ ಬೞಿಯಟ್ಟಿ ಬರಿಸಿ ರಾಜ್ಯಪಟ್ಟಂಗಟ್ಟಿ ಯಮಧರ ಭಟಾರರ ಪಕ್ಕದೆ ತಪಂ ಬಟ್ಟು

ಸಲ್ಲಿಸಬೇಕು" ಎಂದು ಹೇಳಲು, ಅರಸನು 'ಹಾಗೆಯೇ ಮಾಡು' ಎಂದು ಹೇಳಿದನು. ಚಿಲಾತಪುತ್ರನು ತಾನು ಬಯಸಿದ ಮೆಚ್ಚನ್ನು ಪಡೆದು, 'ಹಸಾದ' ಎಂದು ಸಾಷ್ಟಾಂಗ ವಂದಿಸಿ, ಸಾಮಂತ ಮಹಾಸಾಮಂತರು, ಪರಿವಾರದವರು, ಪ್ರಭುತ್ವವುಳ್ಳವರು, ಬ್ರಾಹ್ಮಣರು, ವರ್ತಕರು,–ಇವರ ಒಳ್ಳೊಳ್ಳೆಯ ಪತ್ನಿಯರನ್ನೆಲ್ಲ ಎಳೆದು, ವಿಧೇಯರನ್ನಾಗಿ ಮಾಡಿ, ಒಡಗೂಡಿ, ಅವರೊಡನೆ ಬಾಳುತ್ತ, ಹೀಗೆ ಹನ್ನೆರಡು ವರ್ಷಗಳವರೆಗೆ ತನ್ನ ಇಚ್ಛೆಯ ಪ್ರಕಾರ ಬಾಳುವೆ ನಡೆಸಿದನು. ಅವಧಿಯ ದಿವಸ ಬಂದಾಗ, ರಾಜನು– "ಇಂತಹ ಚೇಷ್ಟೆಗಳನ್ನು ಆಡಲು ಸಲ್ಲದು" ಎಂದು ತಡೆದರೂ ಬಿಟ್ಟು ಬಿಡದೆ, ತನಗೆ ಮೆಚ್ಚಿಕೆಯಾದಂತೆ ಬಾಳುತ್ತಿದ್ದನು. ಆಗ ರಾಜನು ಕೋಪಗೊಂಡು ಅವನನ್ನು ನಾಡಿನಿಂದಲೇ ಒಡನೆಯೇ ಅಟ್ಟಿಬಿಟ್ಟನು. ಆತನು ಕಾಡಿನಲ್ಲಿ ಮಹೇಂದ್ರನೆಂಬ ತಪಸ್ವಿಯ ಬಳಿಗೆ ಹೋಗಿ, ಅಲ್ಲಿ ಇತರರಿಗೆ ಬರಲು ಸಾಧ್ಯವಾಗದ ಕಡೆಯಲ್ಲಿ ಪಟ್ಟಣವನ್ನು ನಿರ್ಮಿಸಿ, ಅದಕ್ಕೆ ಸುತ್ತಲಾಗಿ ಕೋಟೆಯನ್ನೂ ಗೋಪುರದ ಬಾಗಿಲನ್ನೂ ಮಾಡಿ, ಸಮೀಪದ ಊರುಗಳನ್ನು ಗೆದ್ದು ಸೇರಿಸಿಕೊಳ್ಳುತ್ತ, ಎದುರಿಸಿದವರನ್ನು ಓಡಿಸಿಯೂ ಎಳೆದು ಸೂರೆ ಮಾಡಿಯೂ ಹೀಗೆ ಹಲವು ಕಾಲ ಸುಖದಿಂದ ಬಾಳುತ್ತಿದ್ದನು. ಹೀಗಿರಲು ಇತ್ತ ಉಪಶ್ರೇಣಿಕನು ಕರ್ಮಗಳ ಉಪಶಮನವೇ ಕಾರಣವಾಗಿ ಯಮಧರರೆಂಬ ಋಷಿಗಳ ಬಳಿಯಲ್ಲಿ ಧರ್ಮವನ್ನು ಕೇಳಿ ಶ್ರಾವಕವ್ರತಗಳನ್ನು ಸ್ವೀಕರಿಸಿ ವೈರಾಗ್ಯದಲ್ಲಿ ತತ್ಪರನಾಗಿ ಶ್ರೇಣಿಕನ ಬಳಿಗೆ ಜನಕಳುಹಿಸಿ ಬರಮಾಡಿ ಅವನಿಗೆ ರಾಜ್ಯದ ಪಟ್ಟವನ್ನು ಕಟ್ಟಿದನು. ಆಮೇಲೆ ಯಮಧರ ಋಷಿಗಳ ಬಳಿಯಲ್ಲಿ ತಪೋದೀಕ್ಷೆಯನ್ನು ಸ್ವೀಕರಿಸಿ ಹಲವು ಕಾಲ ತಪಸ್ಸನ್ನು

**ಪಲಕಾಲಂ ತಪದೊಳ್ ನೆಗೞ್ದು ಸಮಾಧಿಮರಣದಿಂದಂ ಸ್ವರ್ಗದೊಳ್ ಪುಟ್ಟಿದೊಂ ಮತ್ತಿತ್ತ ಶ್ರೇಣಿಕ ಮಹಾರಾಜನರಸುಗೆಯ್ಯುತ್ತಿರ್ಪನ್ನೆಗಂ ಚಿಲಾತಪುತ್ರನಾಳ್ ಭಟ್ಟಿಮಿತ್ರನೆಂಬೊನಾತನ ಸೋದರಮಾವಂ ರುದ್ರಮಿತ್ರನೆಂಬೊಂ ರಾಜಗೃಹದೊಳಿರ್ಪೊನಾತನ ಮಗಳ್ ಸುಭದ್ರೆಯೆಂಬೊಳಾಕೆಯುಂ ಭಟ್ಟಿಮಿತ್ರಂ ಬೇಡಿದೊಡಾಕೆಯನಾತಂಗೆ ಕುಡದೆ ಪೆಱರ್ಗೆ ಕುಡಲ್ ತಗುಳ್ದೊಡಾತನುಂ ತಮ್ಮರಸಂಗಿಂತೆಂದು ಪೇೞ್ದನೆನ್ನ ಸೋದರಮಾವಂ ತನ್ನ ಮಗಳನೆನಗೆ ಕಿಱಿಯಂದೆ ಕುಡುವೆನೆಂದು ನುಡಿದನೀಗಳ್ ಪೆಱರ್ಗೆ ಕೊಟ್ಟಪ್ಪೊನಿಂದು ಮದುವೆ ನೆರೆವುದೆಂದು ಪೇೞ್ದೊಡಾತನುಮಯ್ನೂರ್ವರ್ ಸುಭಟರನಾಯ್ದುಕೊಂಡು ಪೊೞಲ್ಗೆವಂದು ಮೊಗವಡಂಗವಿದಿರ್ದ ಕೂಸಂ ಭಟ್ಟಿಮಿತ್ರಂಗೆ ಕುಡಿಮೆಂದು ಕೀೞಿ ಚಿಲಾತಪುತ್ರಂ ಬೇಡಿದೊಡಂ ಕುಡದಿರ್ದೊಡೆ ಮುಳಿದೆೞೆದುಕೊಂಡು ಪೋದೊಡೆ ಶ್ರೇಣಿಕ ಮಹಾರಾಜಂಗೆ ಪುಯ್ಯಲಿಟ್ಟೊಡಾತನುಮಾ ಪುಯ್ಯಲಂ ಕೇಳ್ದು ಅನ್ಯಾಯದೊಳ್ ನೆಗೞ್ದಾತನಂ ಕೊಂದು ಕೂಸಂ ಕೊಂಡು ಬನ್ನಿಮೆಂದು ಸಾಮಂತ ಮಹಾಸಾಮಂತ ಮಕುಟಬದ್ಧರ್ಕಳ್ಗೆ ಬೆಸವೇೞ್ದೊಡವರುಂ ಬೞಿಯನೆ ತಗುಳ್ವರನ್ನೆಗಂ ಪೋಗಲ್ ಪಾಂಗಿಲ್ಲದೆ ಚಿಲಾತಪುತ್ರಂ ಕನ್ನೆಯುಂ ಕೊಂದನಾಕೆಯುಂ ಸತ್ತಾಪೊೞ**

ಆಚರಿಸಿ ಸಮಾಧಿ ಮರಣದಿಂದ ಸ್ವರ್ಗಲೋಕದಲ್ಲಿ ಜನಿಸಿದನು. ಆಮೇಲೆ ಇತ್ತ ಶ್ರೇಣಿಕ ಮಹಾರಾಜನು ಅರಸುತನ ನಡೆಸುತ್ತಿದ್ದಾಗ–ಚಿಲಾತಪುತ್ರನ ಸೇವಕನಾದ ಭಟ್ಟಿಮಿತ್ರನೆಂಬವನಿದ್ದನು. ಭಟ್ಟಿಮಿತ್ರನ ಸೋದರಮಾವ ರುದ್ರಮಿತ್ರನು ರಾಜಗೃಹದಲ್ಲಿದ್ದನು. ರುದ್ರಮಿತ್ರನ ಮಗಳು ಸುಭದ್ರೆಯೆಂಬವಳು. ಆಕೆಯನ್ನು ತನಗೆ ಕೊಡಬೇಕೆಂದು ಭಟ್ಟಿಮಿತ್ರನು ಕೇಳಿದಾಗ, ಆಕೆಯನ್ನ ಅವನಿಗೆ ಕೊಡದೆ ಬೇರೆಯವರಿಗೆ ಕೊಡಲು ಮುಂದೆ ಬಂದುದರಿಂದ ಭಟ್ಟಿಮಿತ್ರನು ತಮ್ಮ ಅರಸನಾದ ಚಿಲಾತಪುತ್ರನಿಗೆ ಹೀಗೆ ಹೇಳಿದನು–"ನನ್ನ ಸೋದರಮಾವನು ತನ್ನ ಮಗಳನ್ನು ನನಗೆ ಕೊಡುವೆನೆಂದು ಚಿಕ್ಕಂದಿನಲ್ಲಿಯೇ ಹೇಳಿದ್ದಾನೆ. ಈಗ ಬೇರೆಯವರಿಗೆ ಕೊಡುತ್ತಿದ್ದಾನೆ. ಈ ದಿನ ಮದುವೆ ಏರ್ಪಡುವುದು"–ಎಂದು ಹೇಳಿದನು. ಆಗ ಚಿಲಾತಪುತ್ರನು ಐನೂರು ಮಂದಿ ಯೋಧರನ್ನು ಆರಿಸಿಕೊಂಡು ಪಟ್ಟಣಕ್ಕೆ ಬಂದು 'ಮುಖವಾಡವನ್ನು ಹಾಕಿಕೊಂಡಿದ್ದ ಕನ್ಯೆಯನ್ನು ಭಟ್ಟಿಮಿತ್ರನಿಗೆ ಕೊಡಿ' ಎಂದು ಕೂಗಿ ಹೇಳಿದನು. ಆದರೂ ಭಟ್ಟಿಮಿತ್ರನಿಗೆ ಕೊಡದಿದ್ದುದರಿಂದ ಅವನು ಕೋಪಗೊಂಡು ಆ ಕನ್ಯೆಯನ್ನು ಎಳೆದುಕೊಂಡು ಹೋದನು. ರುದ್ರಮಿತ್ರನು ಮಹಾರಾಜನಿಗೆ ದೂರು ಕೊಟ್ಟನು. ರಾಜನು ಆ ದೂರನ್ನು ಕೇಳಿ–"ಅನ್ಯಾಯದಲ್ಲಿ ಪ್ರವರ್ತಿಸಿದನನನ್ನೂ ಕೊಂದು ಕನ್ಯೆಯನ್ನು ಕೊಂಡು ಬನ್ನಿ" ಎಂದು ಸಾಮಂತ ಮಹಾಸಾಮಂತ ಕಿರೀಟಾಧಿಪತಿಗಳಿಗೆ ಆಜ್ಞೆಮಾಡಿದನು. ಆಗ ಅವರು ಹಿಂದೆ ಹಿಂದೆಯೇ ಅಟ್ಟಿಕೊಂಡು ಹೋದರು. ಅಷ್ಟರಲ್ಲಿ ಹೋಗಲು ಅವಕಾಶವಿಲ್ಲದ ಚಿಲಾತಪುತ್ರನು ಆ ಕನ್ಯೆಯನ್ನು ಕೊಂದನು. ಆಕೆ ಸತ್ತು ಆ ಪಟ್ಟಣದಲ್ಲಿ ವ್ಯಂತರ

ಳೊಳ್ ವ್ಯಂತರದೇವತೆಯಾಗಿ ಪುಟ್ಟಿದಳ್ ತಾನುಂ ಬೇಗಂ ಪೋಗಿ ವೈಭಾರಮೆಂಬ ಪರ್ವತ
ಮನೇಱಿದೊನಾ ಪರ್ವತದ ಮೇಗೆ ಸರ್ವಗುಪ್ತರೆಂಬಾಚಾರ್ಯರವಧಿಜ್ಞಾನಿಗಳ್ ಅಯ್ನೂರ್ವರ್
ಶಿಷ್ಯರ್ಕಳ್ವೆರಸಿರ್ದೋರಂ ಕಂಡು ಬೇಗಮೆನಗೆ ಸಂಕ್ಷೇಪದಿಂ ಧರ್ಮಮಂ ಪೇೞಿಮೆಂದೊಡೆ
ಭಟಾರರಿಂತೆಂದು ಪೇೞ್ದರ್

ಗಾಹೆ ॥ ಜಂ ಇಚ್ಛಸಿ ತಂ ಣಂತಂ ಜಂ ಪುಣ ಣೇಚ್ಛಸಿ ತಂ ತುಮಪ್ಪಂ
ಪುರಿಸ ಸೀಹ ತಂ ಇಚ್ಛಸು ಸಂಸಾರ ಮಹಣ್ಣವಂ ತರಿದುಂ

ಮತ್ತಂ ಅಭಾವಿದಂ ಭಾವೇಮಿ ಭಾವಿದಂ ಭಾವೇಮಿ ಎಂದಿಂತು ಸಂಕ್ಷೇಪದಿಂದಂ ಧರ್ಮಮಂ
ಪೇೞ್ದು ಮತ್ತಮಿಂತೆಂದರ್ ನಿನಗಾಯುಷ್ಯಂ ಕಿಱಿದೆಯೆಂದು ಪೇೞ್ದೊಡಾತನುಮಂತಪ್ಪೊ
ಡೆನಗೆ ದೀಕ್ಷಾಪ್ರಸಾದಂಗೆಯ್ಯಿಮೆಂದು ಬೇಡಿ ಬಾಹ್ಯಾಭ್ಯಂತರ ಪರಿಗ್ರಹಂಗಳೆಲ್ಲಮಂ ತೊಱೆದು
ತಪಂಬಟ್ಟು ಸರ್ವಂ ಸಾವದ್ಯ ಯೋಗಂ ವಿರದೋಽಸ್ಮಿಯೆಂದು ಬಾಹ್ಯನ್ನಿಗಮಾಹಾರಶರೀ
ನಿವೃತ್ತಿಗೆಯ್ದು ಚಿಲಾತಪುತ್ರಂ ತಪಂಬಟ್ಟು ಕಾಯೋತ್ಸರ್ಗಂ ಗೆಯ್ದಿರ್ದೊರ್ ಅನ್ನೆಗ
ಪೆಱಗಣಿಂ ಬಲಂ ಕೇಳ್ದು ಬಂದು ಕಾಯೋತ್ಸರ್ಗಂ ನಿಂದೊನಂ ಕಂಡೇನುಂ ಗೆಯ್ಯಲಱಿಯ
ಶ್ರೇಣಿಕಮಹಾರಾಜಂಗೆ ಚಿಲಾತಪುತ್ರಂ ತಪಂಬಟ್ಟು ಕಾಯೋತ್ಸರ್ಗಂ ಗೆಯ್ದಿರ್ದೊನೆನ್ನೆ

ದೇವತೆಯಾಗಿ ಹುಟ್ಟಿದ್ದಳು. ಚಿಲಾತಪುತ್ರನು ಬೇಗ ಹೋಗಿ ವೈಭಾರವೆಂಬ ಪರ್ವ
ವನ್ನೇರಿದನು. ಆ ಪರ್ವತದ ಮೇಲೆ ಅವಧಿ ಜ್ಞಾನಿಗಳಾದ ಸರ್ವಗುಪ್ತರೆಂಬ ಆಚಾರ್ಯ
ಐನೂರು ಮಂದಿ ಶಿಷ್ಯರೊಡನಿದ್ದರು. ಅವರನ್ನು ಕಂಡು 'ಬೇಗ ನನಗೆ ಸಂಕ್ಷೇಪವಾ
ಧರ್ಮವನ್ನು ಹೇಳಿರಿ' ಎನ್ನಲು ಋಷಿಗಳು ಹೀಗೆ ಹೇಳಿದರು–[ಎಲೈ ಪುರುಷಸಿಂಹನೆ
ಯಾವುದನ್ನು ಇಷ್ಟಪಡುವೆಯೋ ಅದು ಅನಂತವಾದುದು. ಮತ್ತೆ ಯಾವುದನ್ನು ಇ
ಪಡುವುದಿಲ್ಲವೋ ಅದು ನಿನಗೆ ಅಲ್ಪವಾದುದು. ಸಂಸಾರವೆಂಬ ಮಹಾಸಾಗರವನ
ದಾಟುವುದಕ್ಕೆ ಇಚ್ಛೆಪಡು] ಅನಂತರ. "ಆಗದಿರುವುದನ್ನು ಭಾವಿಸುತ್ತೇ
ಆಗುತ್ತಿರುವುದನ್ನು ಭಾವಿಸುತ್ತೇನೆ" ಎಂದು ಈ ರೀತಿಯಾಗಿ ಸಂಕ್ಷೇಪದಿ
ಧರ್ಮವನ್ನು ಹೇಳಿ ಆಮೇಲೆ ಹೀಗೆ ಹೇಳಿದರು–"ನಿನಗೆ ಆಯುಷ್ಯವಿರುವು
ಸ್ವಲ್ಪವೆ". ಹೀಗೆನ್ನಲು ಚಿಲಾತಪುತ್ರನು "ಹಾಗಾದರೆ ನನಗೆ ದೀಕ್ಷೆಯನ್ನು ಅ
ಗ್ರಹ ಮಾಡಿ" ಎಂದು ನುಡಿದು ಕೇಳಿ ಪಡೆದುಕೊಂಡು ಬಾಹ್ಯ ಪರಿಗ್ರಹಗಳನ
ಆಂತರಿಕ ಪರಿಗ್ರಹಗಳನ್ನೂ ತ್ಯಜಿಸಿ ತಪಸ್ಸನ್ನು ಕೈಗೊಂಡನು. "ಎ
ದೋಷಯುಕ್ತವಾದ ಯೋಗದಿಂದ ವಿರತನಾಗಿದ್ದೇನೆ" ಎಂದುಕೊಂಡು ಬಾ
ಆಹಾರಕ್ಕೂ ಶರೀರಕ್ಕೂ ನಿವೃತ್ತಿಯನ್ನು ಮಾಡಿ ಚಿಲಾತಪುತ್ರ ಋಷಿಗಳು ತಪಸ್ಸ
ಮಾಡಿ ದೇಹಾಭಿಮಾನ ತ್ಯಾಗವನ್ನು ಮಾಡಿದ್ದರು. ಅಷ್ಟರಲ್ಲಿ ಹಿಂದಿನಿಂದ ಸ
ಯನ್ನು ಕೇಳಿ, ಸೈನ್ಯವು ಬಂದು ದೇಹೋತ್ಸರ್ಗಕ್ಕಾಗಿ ನಿಂದಾತನನ್ನು ಕಂಡು ಏ
ಮಾಡಲಾರದೆ ಶ್ರೇಣಿಕ ಮಹಾರಾಜನ ಬಳಿಗೆ ಕಳುಹಿಸಿ "ಚಿಲಾತಪುತ್ರನು ತಪಸ್ಸ

ಬೆಸನೇನೆಂದು ಬಿನ್ನಪಂಗೆಯ್ದೊಡಾತನಿಂತೆಂದಂ ತಪಂಬಟ್ಟನಪ್ಪೊಡೊಳ್ಳಿತ್ತುಗೆಯ್ದಂ ತನ್ನ
ಮುಂಗೆಯ್ದ ಪಾಪಮುಮಯಶಮುಂ ಪಳಿಯುಂ ಪೊಲ್ಲಮೆಯುಮಂ ನೀಗಿದನೆಂದು ನುಡಿದು
ಪೋದ ಬಲಕ್ಕೆ ಬಟಿಯಟ್ಟಿದೊಡವರುಂ ಚಿಲಾತರಿಸಿಯಂ ಬಲಗೊಂಡು ಬಂದರ್ಚಿಸಿ
ಪೊಡೆವಟ್ಟು ಪೊಟಲ್ಗೆ ಪೋದರ್ ಮತ್ತಿತ್ತ ಸುಭದ್ರೆಯಪ್ಪ ವ್ಯಂತರದೇವತೆ ವಿಭಂಗಜ್ಞಾನದಿಂ
ದಱಿದು ಚಿಲಾತರಿಸಿಯರಂ ಕಂಡು ಪಗೆಯಂ ನೆನೆದು ಪರ್ದಿನ ರೂಪಂ ಕೈಕೊಂಡು ಬಂದು
ನೆತ್ತಿಯ ಮೇಗಿರ್ದು ಕಣ್ಗಳಂ ತೋಡಿ ತಿನೆ ಪೆರ್ದಲೆಯ ಕಟ್ಟಿರುಂಪೆಗಳುಮಾಗಿ ಮೆಯ್ಯೆಲ್ಲಮಂ
ನುರ್ಚಿಯುಂ ಸಟ್ಟುಗದಂತೆ ಬಳಸಿಯುಂ ಛಿದ್ರಂ ಮಾಡಿ ಕಾಡೆ ಎರಡು ದಿವಸಮಿರುಳುಂ
ಪಗಲುಂ ನಿರಂತರಂ ದೇವೋಪಸರ್ಗಮಂ ಸೈರಿಸಿ ಶುಭ ಪರಿಣಾಮದಿಂ ಮುಡಿಪಿ ಸರ್ವಾರ್ಥ
ಸಿದ್ಧಿಯೊಳ್ ಮೂವತ್ತುಮೂಱು ಸಾಗರೋಪಮಾಯುಷ್ಯಮನೊಡೆಯೊನಹಮಿಂದ್ರದೇವನಾಗಿ
ಪುಟ್ಟಿದಂ ಮತ್ತಂ ಪೆಱರ್ ಸಂನ್ಯಸನಂಗೆಯ್ದ ಭವ್ಯರ್ಕಳ್ ಚಿಲಾತರಿಸಿಯರಂ ಮನದೊಳ್
ಬಗೆದು ಚತುರ್ವಿಧಮಪ್ಪುಪಸರ್ಗಮುಮಂ ಪಸಿವು ನೀರಟ್ಕೆ ಮೊದಲಾಗೊಡೆಯ ದುಃಖಂ
ಗಳುಮಂ ಸೈರಿಸಿ ಪರಮ ಶುದ್ಧ ಸಹಜ ದರ್ಶನ ಜ್ಞಾನ ಚಾರಿತ್ರಂಗಳುಮಂ ಸಾಧಿಸಿ ಸ್ವರ್ಗಾ
ಪವರ್ಗ ಸುಖಂಗಳನೆಯ್ದುಗೆ

•

ಪಡೆದು ದೇಹತ್ಯಾಗ ಮಾಡಿದ್ದಾನೆ. ಇನ್ನು ನಮಗೆ ಅಪ್ಪಣೆಯೇನು ?" ಎಂದು
ವಿಜ್ಞಾಪನವನ್ನು ಮಾಡಲು ಶ್ರೇಣಿಕನು ಹೀಗೆಂದನು–"ತಪಸ್ಸನ್ನು ಕೈಗೊಂಡನಾದರೆ
ಒಳ್ಳೆಯದು ಮಾಡಿದನು. ತಾನು ಹಿಂದೆ ಮಾಡಿದ ಪಾಪವನ್ನೂ ಅಪಕೀರ್ತಿಯನ್ನೂ
ನಿಂದೆಯನ್ನೂ ಕೆಟ್ಟುದನ್ನೂ ನೀಗಿದನು" ಎಂದು ಹೇಳಿ, ಹೋಗಿದ್ದ ಸೈನ್ಯಕ್ಕೆ ಜನ
ಕಳುಹಿಸಲು ಆ ಸೈನ್ಯದವರು ಚಿಲಾತ ಋಷಿಯನ್ನು ಪ್ರದಕ್ಷಿಣೆ ಮಾಡಿ ಪೂಜಿಸಿ ಸಾಷ್ಟಾಂಗ
ನಮಸ್ಕಾರ ಮಾಡಿ ಪಟ್ಟಣಕ್ಕೆ ತೆರಳಿದರು. ಆಮೇಲೆ ಇತ್ತ ಸುಭದ್ರೆಯಾಗಿದ್ದ ವ್ಯಂತರ
ದೇವತೆ ವಿಭಂಗ ಜ್ಞಾನದಿಂದ ತಿಳಿದು ಚಿಲಾತ ಋಷಿಗಳನ್ನು ಕಂಡು ಶತ್ರುತ್ವವನ್ನು
ಜ್ಞಾಪಿಸಿ ಹದ್ದಿನ ರೂಪವನ್ನು ತಾಳಿ ಬಂದು ಚಿಲಾತ ಋಷಿಯ ನೆತ್ತಿಯ ಮೇಲೆ ಕುಳಿತು
ಕಣ್ಣುಗಳನ್ನು ತೋಡಿ ತಿನ್ನುತ್ತಿರಲು, ದೊಡ್ಡ ತಲೆಯುಳ್ಳ ಕಟ್ಟಿರುವೆಗಳು ಶರೀರವನ್ನೆಲ್ಲ
ಬಗಿದೂ ಸವುಟಿನಂತೆ ತೊಳಸಿಯೂ ತೂತುಗಳನ್ನು ಮಾಡಿ ಪೀಡಿಸುತ್ತಿರಲು ಎರಡು
ದಿವಸ ರಾತ್ರಿಯೂ ಹಗಲೂ ಎಡೆಬಿಡದೆ ದೇವೋಪಸರ್ಗವನ್ನು ಸಹಿಸಿ, ಶುಭ ಪರಿಣಾಮ
ದಿಂದ ಸತ್ತು ಸರ್ವಾರ್ಥಸಿದ್ಧಿ ಎಂಬ ಸ್ವರ್ಗದಲ್ಲಿ ಮೂವತ್ತಮೂರು ಸಾಗರದಂತಹ
ಆಯುಷ್ಯವುಳ್ಳ ಅಹಮಿಂದ್ರ ದೇವನಾಗಿ ಹುಟ್ಟಿದರು. ಅನಂತರ, ಸಂನ್ಯಾಸವನ್ನು
ಮಾಡಿದ ಇತರ ಭವ್ಯರು ಕೂಡ ಚಿಲಾತ ಋಷಿಗಳನ್ನು ಮನಸ್ಸಿನಲ್ಲಿ ಭಾವಿಸಿಕೊಂಡು
ನಾಲ್ಕು ವಿಧವಾದ ಉಪಸರ್ಗಗಳನ್ನೂ ಹಸಿವು ನೀರಡಿಕೆ ಮೊದಲಾಗಿ ಉಳ್ಳ ದುಃಖ
ಗಳನ್ನೂ ಸಹಿಸಿ ಶ್ರೇಷ್ಠವೂ ನಿರ್ಮಲವೂ ಸಹಜವೂ ಆದ ದರ್ಶನ ಜ್ಞಾನ ಚಾರಿತ್ರಗಳನ್ನು
ಸಾಧಿಸಿ ಸ್ವರ್ಗ ಮೋಕ್ಷ ಸುಖಗಳನ್ನು ಪಡೆಯಲಿ !

# ೧೬. ದಂಡಕನೆಂಬ ರಿಸಿಯ ಕಥೆ

ದಂಡಕನೆಂಬ ರಿಸಿಯ ಕಥೆಯಂ ಪೇೞ್ವೆಂ :

ಗಾಹೆ ॥ ದಂಡೋ ಯಮುಣಾವಂಕೇಣ ತಿಕ್ಖ ಕಂಡೇಣ ಪೂರಿದಂಗೋ ವಿ
ತಂ ವೇದಣಮಗಣಿತ್ತಾ ಪಡಿವಣ್ಣೋ ಉತ್ತಮಂ ಅಟ್ಠಂ ॥

[ದಂಡೋ—ದಂಡಕನೆಂಬ ರಿಸಿ, ಯಮುಣಾವಂಕೇಣ—ಯಮುನಾವಂಕನೆಂಬರಸನಿಂದಂ, ತಿಕ್ಖ ಕಂಡೇಣ—ಕೂರಿದಪ್ಪಂಬುಗಳಿಂದಂ, ಪೂರಿದಂಗೋ ವಿ—ತೀವೆ ಪಟ್ಟ ಮೆಯ್ಯ ನೊಡೆಯನಾಗಿಯುಂ, ತಂ ವೇದಣಂ—ಆ ವೇದನೆಯುಂ, ಅಗಣಿತ್ತಾ-ಬಗೆಯದೆ, ಪಡಿವಣ್ಣೋ—ಪೊರ್ದಿದೊಂ, ಉತ್ತಮಂ ಅಟ್ಠಂ-ಮಿಕ್ಕ ದರ್ಶನ ಜ್ಞಾನ ಚಾರಿತ್ರಂಗಳಾರಾಧನೆಯುಂ] ಅದೆಂತೆಂದೊಡೆ : ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ಅಮಳಕಂಠಮೆಂಬುದು ಪೊೞಲದನಾಳ್ವಂ ಅನಿಷ್ಟಸೇನನೆಂಬೊನರಸನಾತನ ಮಹಾದೇವಿ ನಂದಿನಿಯೆಂಬೊಳಾ ಯಿರ್ವರ್ಗಂ ಮಗಂ ದಂಡಕನೆಂಬೊಂ ಪುಟ್ಟಿದನಾತಂ ಗರ್ಭದೊಳಿರ್ದಂದು ನಂದಿನಿ ಮಹಾ ದೇವಿಗಿಂತುಟೊಂದು ಬಯಕೆಯಾದುದೆಲ್ಲಾ ಜನಂಗಳುಮಂ ದಂಡಿಸುವಂತಿರೆಯದಱಿಂ ದಾತಂಗೆ ತಾಯುಂ ತಂದೆಯುಂ ದಂಡಕನೆಂದು ಪೆಸರನಿಟ್ಟೊರಾತನಿಂ ಕಿಱಿಯೊಳ್ ನಂದವತಿ ಯೆಂಬೊಳ್ ಕೂಸಾಕೆಯನರ್ಧಚಕ್ರವರ್ತಿಯಪ್ಪ ವಿಷ್ಣುವಿಂಗೆ ಕೊಟ್ಟು ದಂಡಕನುಂ ವಿಷ್ಣುವಿಂ ಗಾದಮಾನುಂ ಪ್ರಿಯನಪ್ಪ ಸೇನಾಪತಿಯಾದನಂತನಿಬರುಮಿಷ್ಟವಿಷಯ ಕಾಮ ಭೋಗಂಗಳ

ದಂಡಕನೆಂಬ ಋಷಿಯ ಕಥೆಯನ್ನು ಹೇಳುವೆನು–[ದಂಡಕನೆಂಬ ಋಷಿ ಯಮುನಾ ವಂಕನೆಂಬ ಅರಸನಿಂದ ಹರಿತವಾದ ಬಾಣಗಳಿಂದ ತುಂಬಿದ ಲಿಂಗಗಳುಳ್ಳವನಾಗಿ ಆ ವೇದನೆಯನ್ನು ಬಗೆಯದೆ ಶ್ರೇಷ್ಠವಾದ ದರ್ಶನ ಜ್ಞಾನ ಚಾರಿತ್ರಗಳ ಆರಾಧನೆಯನ್ನು ಮಾಡಿದನು] ಅದು ಹೇಗೆಂದರೆ—ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಅಮ ಕಂಡನೆಂಬ ಪಟ್ಟಣವನ್ನು ಅನಿಷ್ಟಸೇನನೆಂಬ ರಾಜನು ಆಳುತ್ತಿದ್ದನು. ಅವ ಮಹಾರಾಣಿ ನಂದಿನಿಯೆಂಬವಳು. ಆ ಇಬ್ಬರಿಗೂ ದಂಡಕನೆಂಬ ಮಗನು ಹುಟ್ಟಿದನು ಆತನು ಗರ್ಭದಲ್ಲಿದ್ದಾಗ ನಂದಿನಿ ಮಹಾದೇವಿಗೆ ಎಲ್ಲಾ ಜನರನ್ನೂ ದಂಡಿಸಬೇಕೆಂ ಒಂದು ಬಯಕೆಯುಂಟಾಯಿತು. ಆದುದರಿಂದ ಆತನಿಗೆ ತಾಯಿಯೂ ತಂದೆಯೂ ದಂಡಕನೆಂದು ಹೆಸರನ್ನಿಟ್ಟರು. ಅವನಿಗಿಂತ ಕಿರಿಯವಳು ನಂದವತಿಯೆಂಬ ಹುಡುಗಿ ಆಕೆಯನ್ನು ಅರ್ಧಚಕ್ರವರ್ತಿಯಾದ ವಿಷ್ಣುವಿಗೆ ಕೊಟ್ಟು ದಂಡಕನು ವಿಷ್ಣುವಿಗೆ ಅತ್ಯಂ ಪ್ರೀತಿಯವನಾದ ಸೇನಾಪತಿಯಾದನು. ಅಂತು ಅವರೆಲ್ಲರೂ ಇಷ್ಟವಿಷಯದ ಕಾ ಸುಖಗಳನ್ನು ಅನುಭವಿಸುತ್ತ ಹಲವು ಕಾಲ ಕಳೆಯಿತು. ಹೀಗಿರುವಾಗ ಮತ್ತೊಂ

ಸೆನುಭವಿಸುತ್ತಂ ಪಲಕಾಲಂ ಸಲೆ ಮತ್ತೊಂದು ದಿವಸಂ ವಿಷ್ಣು ಅರಿಷ್ಟನೇಮಿ ಭಟಾರರಂ ಬಂದಿಸಲ್ಕೆಂದು ಬಲದೇವಂ ಬೆರಸು ಪುತ್ರ ಕಳತ್ರ ಮಿತ್ರ ಸಪರಿವಾರಂ ಪೋಗಿ ಸಮವಸರಣ ಮನೆಯ್ದಿ ಸ್ಫಟಿಕಮಯಮಪ್ಪ ಸೋಪಾನಪಂಕ್ತಿಗಳಿಂದೊಪ್ಪುವುದನೇಱಿ ಗಂಧಕುಟಿ ಪ್ರಾಸಾದಮಂ ತ್ರಿಃ ಪ್ರದಕ್ಷಿಣಂಗೆಯ್ದು ಬಂದಭಿಮುಖನಾಗಿರ್ದು ಸ್ತುತಿ ಶತಸಹಸ್ರಂಗಳಿಂ ಸ್ತುತಿಯಿಸಿ ಗಂಧಪುಷ್ಪ ದೀಪ ಧೂಪಾಕ್ಷತಂಗಳಿಂದರ್ಚಿಸಿ ಗಣಧರದೇವರ್ ಮೊದಲಾಗೊಡೆಯ ಋಷಿ ಸಮುದಾಯಮಂ ಗುರುಪರಿಪಾಡಿಯಿಂದಂ ವಂದಿಸಿ ತಮ್ಮಿರ್ಪೋರ್ವರಿರ್ಪೊಳಿರ್ದು ಧರ್ಮಮಂ ಕೇಳ್ದು ತದನಂತರಂ ವಿಷ್ಣುವಿಂತೆಂದು ಬೆಸಗೊಂಡಂ ಭಟಾರಾ ಈ ಅತಿ ರೌದ್ರನಪ್ಪ ದಂಡಕಂ ನರಕಂ ಬುಗುವಂತಿರೆ ಪಿರಿದುಂ ಪಾಪಮಂ ನೆರಪಿದನೀತನ ಪಾಪಕರ್ಮದುಪಶಮಮೆಸಿತು ಕಾಲದಿಂದಕ್ಕುಂ ಮತ್ತಮೀತನ ಮುನ್ನಿನ ಭವಮೇನೆಂದು ಬೆಸಗೊಂಡೊಡೆ ಸಕಲ ವಿಮಲ ಕೇವಲ ಜ್ಞಾನ ವಿರಾಜಿತರಪ್ಪ ಅರಿಷ್ಟನೇಮಿ ಭಟಾರರಿಂತೆಂದು ಪೇಟ್ದರ್ ಈ ಜಂಬೂದ್ವೀಪದ ಪೂರ್ವವಿದೇಹದೊಳ್ ವೀತಶೋಕಮೆಂಬುದು ಪೊಲುಂಟು ಅದನಾಳ್ವೊನ್ ಅಶೋಕನೆಂಬೊನರಸನಾತನ ಮಹಾಸಾಮಂತಂ ಸುಧಾಮುಕನೆಂಬೊಂ ತೀವ್ರಲೋಭದೊನತಿ ರೌದ್ರಮಪ್ಪಾರಂಭ ಕರ್ಮದೊಳ್ ಕೂಡಿದೊಂ ತನ್ನಾರಂಭದ ಕೆಯ್ಗಳನೊಕ್ಕುವೆಱ್ತುಗಳ ಬಾಯುಂ ಕಟ್ಟಿಯೊಕ್ಕಿಸುಗುಂ ಮತ್ತಮುವ

ದಿವಸ ವಿಷ್ಣುವು ಅರಿಷ್ಟನೇಮಿ ತೀರ್ಥಂಕರರನ್ನು ವಂದಿಸುವುದಕ್ಕಾಗಿ ಬಲದೇವನ ಸಮೇತವಾಗಿ ಪುತ್ರ ಪತ್ನಿ ಪರಿವಾರ ಸಹಿತ ಹೋದನು. ತೀರ್ಥಂಕರರ ಧರ್ಮಸಭೆಗೆ ಹೋಗಿ, ಬಿಳಿಯ ಶಿಲೆಯ ಮೆಟ್ಟಿಲುಗಳ ಸಾಲುಗಳಿಂದ ಒಪ್ಪುವುದನ್ನು ಹತ್ತಿ ಗಂಧ ಕುಟಿಯ ಮಹಾಸೌಧವನ್ನು ಮೂರು ಸುತ್ತು ಬಲಬಂದು ಎದುರಾಗಿದ್ದುಕೊಂಡು ನೂರು ಸಾವಿರ ಸ್ತುತಿಗಳಿಂದ ಸ್ತುತಿಸಿ ಗಂಧ ಪುಷ್ಪ ದೀಪ ಧೂಪ ಅಕ್ಷತೆಗಳಿಂದ ಪೂಜಿಸಿ ಗಣಧರ ದೇವರು ಮೊದಲಾಗುಳ್ಳ ಋಷಿಗಳ ಸಮೂಹವನ್ನು ಗೌರವಾನುಕ್ರಮದಿಂದ ನಮಸ್ಕರಿಸಿ ತಾನಿರತಕ್ಕ ಕೊಠಡಿಯಲ್ಲಿದ್ದು ಧರ್ಮಶ್ರವಣವನ್ನು ಮಾಡಿದನಂತರ ವಿಷ್ಣು ಈ ರೀತಿಯಾಗಿ ಪ್ರಶ್ನಿಸಿದನು–"ಪೂಜ್ಯರೆ ಈ ಅತ್ಯಂತ ಉಗ್ರರೂಪನಾಗಿರುವ ದಂಡಕನು ನರಕವನ್ನು ಪ್ರವೇಶಿಸುವ ಹಾಗೆ ಹೆಚ್ಚು ಪಾಪವನ್ನು ಕೂಡಿಸಿಕೊಂಡಿದ್ದಾನೆ. ಇವನ ಪಾಪದ ಪರಿಹಾರ ಎಷ್ಟು ಕಾಲದಿಂದ ಆದೀತು ? ಮತ್ತು ಇವನ ಹಿಂದಿನ ಜನ್ಮ ಏನಾಗಿದ್ದಿತು ?" ಎಂದು ಕೇಳಿದನು. ಆಗ ಪರಿಪೂರ್ಣವೂ ಶುದ್ಧವೂ ಆದ ಕೇವಲ ಜ್ಞಾನದಿಂದ ಶೋಭಿಸತಕ್ಕ ಅರಿಷ್ಟನೇಮಿ ಭಟಾರರು ಈ ರೀತಿಯಾಗಿ ಹೇಳಿದರು–ಈ ಜಂಬೂದ್ವೀಪದ ಪೂರ್ವವಿದೇಹದಲ್ಲಿ ವೀತಶೋಕವೆಂಬ ಪಟ್ಟಣವಿದೆ. ಅದನ್ನು ಅಶೋಕನೆಂಬ ರಾಜನು ಆಳುತ್ತಿದ್ದನು. ಅವನ ಮಹಾಸಾಮಂತನಾದ ಸುಧಾಮುಕನೆಂಬವನು ಅತ್ಯಂತ ದುರಾಶೆಯವನು. ಬಹಳ ಘೋರವಾದ ವ್ಯವಸಾಯಗಾರನು. ತನ್ನ ವ್ಯವಸಾಯದ ಹೊಲಗದ್ದೆಗಳನ್ನು ಒಕ್ಕಲು ಮಾಡುವ ಎತ್ತುಗಳ ಬಾಯನ್ನು ಕಟ್ಟಿ ಒಕ್ಕಿಸುತ್ತಿದ್ದನು ಮತ್ತು

ಬಡ್ಡಿಸುವ ಬೆಸಕೆಯ್ವ ಪೆಂಡಿರ ಮೊಲೆಗಳಂ ಸೀರೆಯಿಂ ಕಟ್ಟಿಸಿ ಕೂಸುಗಳಂ ಮೊಲೆಯುಣ ಲೀಯದೆ ಬೆಸಕೆಯ್ವುಗುಂ ಮತ್ತಂ ಕೊಲೆಯುಂ ಪಿರಿದಾರಂಭಮುಂ ಪೆರ್ವರದುಮೆಂಬಿವು ಕಾರಣಮಾಗಿ ನರಕಾಯುಷ್ಯಂ ಕಟ್ಟಿ ಕಾಲಂ ಸಲೆ ಆತಂಗೆ ಶಿರೋರೋಗಮುಂ ಮುಖರೋಗ ಮುಮಾಗಿ ವೇದನಾಭಿಭೂತನಾಗಿರ್ಪನ್ನೆಗಂ ವೈದ್ಯರಂ ಬೆಸಗೊಂಡೊಡದರ್ಕೆ ಪ್ರತೀಕಾರಮೊಂದು ದಿವಸಂ ತನಗೆ ಮರ್ದುವೆರಸಿಯಟ್ಟ ಕೂಟಿನಂಉಣಲೆಂದಿರ್ಪನ್ನೆಗಂ ಸಮಾಧಿಗುಪ್ತರೆಂಬ ಭಟಾರರ್ ಚರಿಗೆವೊಕ್ಕರವರನತಿ ಭಕ್ತಿಯಿಂದಂ ನಿಱಿಸಿ ತನಗುಳ್ಳ ವ್ಯಾಧಿಯವರ್ಗುಂಟೆಂಬುದನಱಿದು ತನಗೆಂದು ಮಾಡಿದ ಮರ್ದಿನ ಕೂಟಿನವರ್ಗೆ ಬಡ್ಡಿಸಿದೊಡವರ್ ಚರಿಗೆ ಮಾಡಿ ಪರಸಿ ಪೋದರ್ ಪನ್ನೆರಡು ವರುಷದ ಶಿರೋರೋಗಮುಂ ಮುಖರೋಗಮುಮಾ ರಿಸಿಯರ್ಗ್ಗೆ ಕೆಟ್ಟತ್ತಾ ಸುಧಾಮುಕನುಂ ದಾನದ ಫಲದಿಂದಂ ಕಿಱಿದು ಪುಣ್ಯಮಂ ನೆರಪಿಕೊಂಡು ಮತ್ತಂ ಬದ್ಧಾ ಯುಷ್ಯನಪ್ಪುದಱಿಂ ಮೂರನೆಯ ನರಕದೊಳೇಟು ಸಾಗರೋಪಮಾಯುಷ್ಯಮನೊಡೆಯೊಂ ನಾರಕನಾಗಿ ಪುಟ್ಟಿ

ಗಾಹೆ ॥ ಅಚ್ಛಿಣಿಮೀಳಣ ಮೇತ್ತಂ ಣತ್ಥಿ ಸುಹಂ ದುಖ್ಖಮೇವ ಅಣುಬದ್ಧಂ
ಣಿರಯೇ ಣಿರಯೀ ಯಾಣಂ ಅಹಣ್ಣಿಸಂ ಪಚ್ಚಮಾಣಾಣಂ॥

ಅಡಿಗೆ ಮಾಡುವ, ಬಡಿಸುವ, ಸೇವೆಮಾಡುವ ಹೆಂಡಿರ ಮೊಲೆಗಳನ್ನು ವಸ್ತ್ರದಿಂದ ಕಟ್ಟಿಸಿ ಶಿಶುಗಳನ್ನು ಮೊಲೆಯುಣ್ಣಲು ಬಿಡದೆ ಸೇವೆ ಮಾಡಿಸುತ್ತಿದ್ದನು. ಆಮೇಲೆ, ಕೊಲೆಯೂ ದೊಡ್ಡ ವ್ಯವಸಾಯವೂ ದೊಡ್ಡ ವ್ಯಾಪಾರವೂ ಕಾರಣವಾಗಿ ನರಕಕ್ಕೆ ಆಯುಷ್ಯವನ್ನು ಕಟ್ಟಿ (ಪಾಪಮಾಡಿ) ಕಾಲಕಳೆಯಲು ಅವನಿಗೆ ತಲೆಯ ರೋಗವೂ ಮುಖದ ರೋಗವೂ ಉಂಟಾಗಿ ನೋವಿನಿಂದ ಪೀಡಿತನಾಗಿದ್ದನು. ವೈದ್ಯರನ್ನು ಕೇಳಿದಾಗ ಅವರು ಹೇಳಿದಂತೆ ಪರಿಹಾರಕ್ಕಾಗಿ ಒಂದು ದಿವಸ ತನಗಾಗಿ ಔಷಧಿಯನ್ನು ಬೆರಸಿ ಬೇಯಿಸಿದ ಅನ್ನವನ್ನು ಉಣ್ಣುವುದಕ್ಕೆಂದು ಸಿದ್ಧನಾದಾಗ ಸಮಾಧಿಗುಪ್ತರೆಂಬ ಋಷಿಗಳು ಭಿಕ್ಷಕ್ಕಾಗಿ ಬಂದರು. ಅವರನ್ನು ಭಕ್ತಿಯಿಂದ ನಿಲ್ಲಿಸಿ ತನಗೆ ಇರತಕ್ಕ ರೋಗವು ಅವರಿಗೆ ಉಂಟೆಂಬುದಾಗಿ ತಿಳಿದು ತನಗಾಗಿ ಮಾಡಿದ ಮದ್ದಿನ ಅನ್ನವನ್ನು ಅವರಿಗೆ ಬಡಿಸಿದನು. ಅವರು ಭಿಕ್ಷೆ ಯನ್ನು ಸ್ವೀಕರಿಸಿ ಆಶೀರ್ವದಿಸಿ ತೆರಳಿದರು, ಋಷಿಗಳಿಗೆ ಹನ್ನೆರಡು ವರುಷದಿಂದ ಇದ್ದ ತಲೆಯ ರೋಗವೂ ಮುಖದ ರೋಗವೂ ನಾಶವಾದುವು ಆ ಸುಧಾಮುಕನೂ ದಾನದ ಫಲದಿಂದ ಸ್ವಲ್ಪ ಪುಣ್ಯವನ್ನು ಕೂಡಿಸಿಕೊಂಡು ಬದ್ಧಾಯುಷ್ಯನಾದುದರಿಂದ ಮೂರನೆಯ ನರಕದಲ್ಲಿ ಏಳು ಸಾಗರ ಸಮಾನವಾದ ಆಯುಷ್ಯವನ್ನುಳ್ಳ ನರಕಜೀವಿ ಯಾಗಿ ಹುಟ್ಟಿದನು. [ನರಕದಲ್ಲಿ ಅಹರ್ನಿಶವೂ ಬೇಯಿಸಲ್ಪಡುತ್ತಿರುವ ನರಕಜೀವಿಗಳಿಗೆ ಕಣ್ಣರೆಪ್ಪೆ ಹೊಡೆಯುವಷ್ಟು ಕಾಲ ಕೂಡ, ಸುಖವಿಲ್ಲ. ಕಟ್ಟಿಟ್ಟಿರುವುದು ದುಃಖ ವೊಂದೇ] ಹೀಗೆ ನರಕಲೋಕದಲ್ಲಿ ಕಣ್ಣಿವೆಯಿಕ್ಕುವಷ್ಟು ಹೊತ್ತಾದರೂ ಸುಖ

ಇಂತು ನರಕಲೋಕದೊಳ್ ಕಣ್ಣೆವೆಯಿಕ್ಕುವನಿತು ಪೊೞ್ತುಪ್ಪೊಡಂ ಸುಖಮಿಲ್ಲದೆ ಪಲಕಾಲಂ ದುಃಖಮನನುಭವಿಸಿ ಬಂದಿಲ್ಲಿ ದಂಡಕನಾದಂ ಮುನ್ನಿನ ಭವದೊಳ್ ಪ್ರಾಣಿಗಳಂ ದಂಡಿಸಿದ ತನ್ನ ಪೂರ್ವದಭ್ಯಾಸಮನೆ ನಂದಿನಿ ಮಹಾದೇವಿಯ ಗರ್ಭದೊಳಿರ್ದು ತೋಱಿದ ನಪ್ಪುದಱಿಂ ದಂಡಕನೆಂಬ ಪೆಸರಾಯ್ತಿಂತಪ್ಪ ಸ್ವಾನುಭೂತಮಪ್ಪ ನರಕಲೋಕದ ಮಹಾ ದುಃಖಮಂ ಸರ್ವಜ್ಞರ್ ಪೇೞೆ[3] ನಂಬಿ ನರಕದ ಮಹಾದುಃಖಕ್ಕಂಜಿ ದಂಡಕಂ ತಪಂಬಟ್ಟೋದು ಗಳೆಲ್ಲಮಂ ಕಲ್ತು ರಿಸಿಯರ್ಕಳೊಡನೆ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಚರಿಗೆವೊಕ್ಕೊಡಾರುಂ ನಿಱಿಸುವೊರಿಲ್ಲಮೂಱಿತ್ತು ನಿಱಿಸಿದೊಡಂ ಛರ್ದಿಯಕ್ಕುಂ ರಿಸಿಯರ್ಕಳೊಡನೆ ಚರಿಗೆ ವೊಕ್ಕೊಡನಿಬರ್ಗಮಲಾಭಮಕ್ಕುಂ ಮತ್ತಂ ವಾತ ಪಿತ್ತ ಶ್ಲೇಷ್ಮ ಖಾಸ ಶ್ವಾಸ ಜ್ವರಾರುಚಿ ಛರ್ದಿ ಅತಿಸಾರಾಕ್ಷಿ ಕುಕ್ಷಿ ವೇದನಾ ಸ್ಫೋಟಕ ಪಿಟಕ ಶೂಲ ಭಗಂದರ ಕುಷ್ಠ ಕ್ಷಯ ಗಂಡ ಶಿರೋವೇದನಾದಿ ವ್ಯಾಧಿಗಳಾಗಿ ರೂಪಱಿಯಲಾಗದಂತಿರೆ ವ್ಯಾಧಿಗಳಿಂದ ವೊಟ್ಟಯಿಸೆ ಪಟ್ಟನಾಗಿ ಮಗುೞ್ದು ವಿಹಾರಿಸುತ್ತಂ ರಿಸಿಯರ್ಕಳೊಡನೆ ದ್ವಾರಾವತಿಗೆ ಬಂದಿರ್ದೊರ್ ಅನ್ನೆಗವೊಂದು ದಿವಸಂ ವಿಷ್ಣು ಬಂದು ರಿಸಿಯರ್ಕಳಂ ವಂದಿಸಿಯವರೊಳಗೆ ದಂಡಕರಿಸಿಯಾರೆಂದೊಡೆ ಕೆಲದ ರಿಸಿಯರ್ ತೋಱಿದೊ

ವಿಲ್ಲದೆ ಹಲವು ಕಾಲ ದುಃಖವನ್ನು ಅನುಭವಿಸಿ ಬಂದು ಇಲ್ಲಿ ದಂಡಕನಾಗಿದ್ದಾನೆ. ಹಿಂದಿನ ಜನ್ಮದಲ್ಲಿ ಪ್ರಾಣಿಗಳನ್ನು ದಂಡಿಸಿದ ತನ್ನ ಹಿಂದಿನ ಅಭ್ಯಾಸವನ್ನೇ ನಂದಿನಿ ಮಹಾದೇವಿಯ ಬಸಿರಲ್ಲಿದ್ದಾಗ ತೋರಿಸಿದನಾದುದರಿಂದ ದಂಡಕನೆಂಬ ಹೆಸರು ಇವನಿಗಾಯಿತು. ಇಂತಹ ಸ್ವಾನುಭವವುಳ್ಳ ನರಕಲೋಕದ ಮಹಾದುಃಖವನ್ನು ಸರ್ವಜ್ಞರಾದ ಅರಿಷ್ಟನೇಮಿ ಭಟಾರರು ಹೇಳಿದರು. ದಂಡಕನು ಅದನ್ನು ನಂಬಿ, ನರಕದ ಮಹಾ ದುಃಖಕ್ಕೆ ಹೆದರಿ, ತಪಸ್ಸನ್ನು ಕೈಗೊಂಡು ಎಲ್ಲಾ ಶಾಸ್ತ್ರಗಳನ್ನೂ ಕಲಿತು ಋಷಿ ಗಳೊಡನೆ ಗ್ರಾಮ, ನಗರ, ಖೇಡ, ಖರ್ವಡ, ಮಡಂಬ, ಪಟ್ಟಣ, ದ್ರೋಣಾಮುಖ ಗಳಲ್ಲಿ ಸಂಚಾರಮಾಡುತ್ತ ಭಿಕ್ಷೆಗೆ ಹೋದಾಗ ಯಾರೂ ನಿಲ್ಲಿಸುವವರಿಲ್ಲ, ಒತ್ತಾಯದಿಂದ ನಿಲ್ಲಿಸಿದರೆ ಉಂಡುದು ವಾಂತಿಯಾಗುತ್ತದೆ. ಋಷಿಗಳೊಡನೆ ಭಿಕ್ಷೆಗೆ ಹೋದರೆ ಯಾರೊಬ್ಬರಿಗೂ ಭಿಕ್ಷೆ ಸಿಕ್ಕುವುದಿಲ್ಲ. ಅದಲ್ಲದೆ, ವಾತ, ಪಿತ್ತ, ಕಫ, ಖಾಸ, ಉಬ್ಬಸ, ಜ್ವರ, ಅರುಚಿ, ವಾಂತಿ, ಭೇದಿ, ಕಣ್ಣುನೋವು, ಹೊಟ್ಟೆನೋವು, ಒಡೆಯುವಿಕೆ, ಬೊಕ್ಕೆ, ಸಿಡಿತ, ಭಗಂದರ, ಕುಷ್ಠ, ಕ್ಷಯ, ಗಂಡ, ತಲೆನೋವು–ಮುಂತಾದ ರೋಗ ಗಳಾಗಿ ರೂಪವೇ ತಿಳಿಯದ ಹಾಗೆ ರೋಗಗಳಿಂದ ಪೀಡಿತನಾಗಿ ಮರಳಿ ಸಂಚಾರ ಮಾಡುತ್ತ ಋಷಿಗಳೊಡನೆ ದ್ವಾರಾವತಿಗೆ ಬಂದಿದ್ದರು. ಹೀಗಿರಲು ಒಂದು ದಿವಸ ವಿಷ್ಣು ಬಂದು ಋಷಿಗಳಿಗೆ ನಮಸ್ಕರಿಸಿ, ಅವರಲ್ಲಿ ದಂಡಕ ಋಷಿ ಯಾರೆಂದು ಕೇಳಿದನು. ಬಳಿಯಲ್ಲಿದ್ದ ಋಷಿಗಳು ತೋರಿಸಲು, ಅವರನ್ನು ನಮಸ್ಕರಿಸಿ ನೋಡಿ; ರೋಗವು

ಡವರಂ ವಂದಿಸಿ ನೋಡಿ ವ್ಯಾಧಿಯ ಪ್ರಬಲತ್ವಮಂ ಕಂಡು ವೈಯಾಪೃತ್ಯಂ ಗೆಯ್ವುದರ್ಕಾದ ಮಾನುಮೞ್ತಿಯೊಡೆಯನಾಗಿ ಪೊಡೆವಟ್ಟಿಂತೆಂದಂ ಭಟಾರಾ ನಿಮ್ಮನೊಂದಂ ಬೇಡಿದಪ್ಪೆಂ ದಂಡಕರಿಸಿಯೀ ವರ್ಷಾಕಾಲಮನೆನ್ನ ದೇಹಾರದೊಳಿರ್ದಂತಃಪುರದ ಮನೆಗಳೊಳ್ ಚರ್ಯಾ ಮಾರ್ಗಂಬುಗುವುದನೆನಗೆ ದಯೆಗೆಯ್ಯಲ್ವೇೞ್ಕುಮೆಂದೊಡವರುಮಂತೆಗೆಯ್ವೆಮೆಂದು ವಿಷ್ಣುವ ದೇಹಾರದೊಳ್ ಜೋಗುಗೊಂಡಿರ್ದೊಡೆ ವಿಷ್ಣು ತನ್ನ ಪ್ರಧಾನನಪ್ಪ ಜಯನೆಂಬ ವೈದ್ಯನಂ ಕರೆದಿಂತೆಂದಂ ನಮ್ಮ ದಂಡಕ ರಿಸಿಯ ಕುತ್ತಮನೆಂತು ಬಲ್ಲೆಯಂತೆ ತೀರ್ಚೆಂದು ಪೇೞ್ದೊಡಾ ತನುಮಂತೆಗೆಯ್ವೆನೆಂದು ದಿವ್ಯೌಷಧಿಗಳಿಂದಂ ಪಿಟ್ಟಿನೊಳ್ ಮಾಡಿದುಂಡೆಗಳಂ ಸಾಸಿರ್ವರರಸಿಯರ್ಕಳ ಮನೆಗಳೊಳ್ ಪ್ರಯೋಗಿಸಿಯಾರುಷಿಯರಂ ಮರ್ದನೂಡಿದಂ ಮತ್ತಂ ಪೊೞಲೊಳಗೆಲ್ಲಂ ಉಂಡೆಯ ಪರ್ವಮಂ ಮಾಡಿಸಿದನಿಂತು ವರ್ಷಾಕಾಲದ ನಾಲ್ಕುತಿಂಗಳೊಳಂ ಮರ್ದನೂಡಿ ಕುತ್ತಮನಿಂಬುಮಾಡಿದೊಡೆ ವೈಯಾಪೃತ್ಯಂ ಗೆಯ್ವುದಱೊಳಾದಮಾನುಂ ಉದ್ಯೋಗಪರನಪ್ಪುದಱಿಂ ವಿಷ್ಣುವಿಂಗೆ ತೀರ್ಥಂಕರನಾಮಂ ಕಟ್ಟಿತ್ತು ಮತ್ತಂ ದಂಡಕರಿಸಿಯರ ಮೆಯ್ಯ ತೊಗಲ್ ಪಾವಿನ ಪರೆ ಸುಲಿವಂತೆ ಸುಲಿದು ಪೋಗಿ ನಿರ್ವ್ಯಾಧಿತದೇಹರಾಗಿ ಮೆಯ್ಯ ತೇಜಂ ತೊಳಗುತ್ತಿರ್ದುದಂ ವಿಷ್ಣು ಕಂಡು ವ್ಯಾಧಿ ಕೆಟ್ಟುದೆಂದಱಿದು ಆದಮಾನುಂ ಹರ್ಷಚಿತ್ತನಾಗಿ ಆ

ಪ್ರಬಲವಾದುದನ್ನು ಕಂಡು ಉಪಚಾರಾದಿ ಚಿಕಿತ್ಸೆಯನ್ನು ಮಾಡುವುದಕ್ಕೆ ಅತ್ಯಂತ ಆಸಕ್ತಿಯುಳ್ಳವನಾಗಿ ಸಾಷ್ಟಾಂಗ ವಂದನೆ ಮಾಡಿ ಹೀಗೆಂದನು—"ಪೂಜ್ಯರೇ, ನಿಮ್ಮಲ್ಲಿ ಒಂದನ್ನು ಬೇಡುತ್ತಿದ್ದೇನೆ. ದಂಡಕಋಷಿಯು ಈ ಮಳೆಗಾಲದಲ್ಲಿ ನನ್ನ ಮನೆಯ ದೇವರ ಕೋಣೆಯಲ್ಲಿದ್ದು ನನ್ನ ರಾಣೀವಾಸದ ಮನೆಗಳಲ್ಲಿ ಭಿಕ್ಷಾದಿಗಳನ್ನು ಮಾಡಿಕೊಂಡು ಇರುವುದನ್ನು ನನಗೆ ಕರುಣಿಸಬೇಕು"—ಎಂದು ಹೇಳಲು ಅವರು 'ಹಾಗೆಯೇ ಮಾಡುವೆವು' ಎಂದು ವಿಷ್ಣುವಿನ ದೇಗುಲದಲ್ಲಿ ಯೋಗಸ್ಥರಾಗಿ ಇದ್ದರು. ವಿಷ್ಣು ತನ್ನ ಪ್ರಧಾನ ವೈದ್ಯನಾದ ಜಯನನ್ನು ಕರೆದು "ನಮ್ಮ ದಂಡಕಋಷಿಯ ರೋಗವನ್ನು ನಿನಗೆ ಹೇಗೆ ಸಾಧ್ಯವೋ ಹಾಗೆ ಪರಿಹಾರಮಾಡು" ಎಂದು ಹೇಳಿದನು. ಅವನು 'ಹಾಗೆಯೇ ಮಾಡುವೆನು' ಎಂದು ದಿವ್ಯವಾದ ಔಷಧಿಗಳಿಂದ ಹಿಟ್ಟಿನಲ್ಲಿ ಮಾಡಿದ ಉಂಡೆಗಳನ್ನು ಸಾವಿರ ಮಂದಿ ರಾಣಿಯರ ಮನೆಗಳಲ್ಲಿ ಪ್ರಯೋಗ ಮಾಡಿ ದಂಡಕಋಷಿಗೆ ಔಷಧಿ ಕೊಡಿಸಿದನು. ಅದಲ್ಲದೆ, ಪಟ್ಟಣದಲ್ಲೆಲ್ಲ ಉಂಡೆಯ ಹಬ್ಬವನ್ನು ಮಾಡಿಸಿದನು. ಹೀಗೆ ಮಳೆಗಾಲದ ನಾಲ್ಕು ತಿಂಗಳಲ್ಲಿಯೂ ಔಷಧಿ ಕೊಟ್ಟು ರೋಗವನ್ನು ವಾಸಿಮಾಡಲು ಋಷಿಗೆ ಚಿಕಿತ್ಸೆ ಮಾಡುವುದರಲ್ಲಿ ಅತ್ಯಂತವಾಗಿ ಉದ್ಯುಕ್ತನಾದುದರಿಂದ ವಿಷ್ಣುವಿಗೆ ತೀರ್ಥಂಕರ ಎಂಬ ಹೆಸರು ಕಟ್ಟಿಕೊಂಡಿತು (ಬಂತು). ಅನಂತರ, ದಂಡಕಋಷಿಗಳ ಶರೀರದ ಚರ್ಮವು ಹಾವಿನ ಪೊರೆ ಸುಲಿದುಹೋಗುವಂತೆ ಸುಲಿದು ಹೋಗಿ ರೋಗವಿಲ್ಲದ ಶರೀರದವರಾಗಿ ದೇಹಕಾಂತಿ ಹೊಳೆಯುತ್ತಿತ್ತು. ಇದನ್ನು ವಿಷ್ಣು ನೋಡಿ ರೋಗ ಪರಿಹಾರವಾಯಿತೆಂದು ತಿಳಿದು ಬಹಳ ಸಂತೋಷಗೊಂಡ

ರುಷಿಯುರ ಪಕ್ಕದೆ ವೈದ್ಯಜಯುನಂ ಪೊಗಟ್ರೊಡವರ್ ಕೆಮ್ಮಗಿರ್ದೊಡೆ ವೈದ್ಯನಿವರೆನ್ನಂ ಪೊಗಟ್ದರಿಲ್ಲೆಂದು ಮನದೊಳಾ ರಿಸಿಯರೊಳಪ್ಪ ಮುಳಿಸಂ ತಳೆದು ಆರ್ತಧ್ಯಾನದಿಂ ಕೆಲಕಾಲದಿಂ ಕಾಲಂಗೆಯ್ದು ವಿಂಧ್ಯಾಟವೀ ಮಧ್ಯಸ್ಥಮಪ್ಪ ನರ್ಮದಾ ನದೀ ತೀರದೊಳ್ ಕೋಡಗವಾಗಿ ಪುಟ್ಟಿದೊಂ ಮತ್ತಿತ್ತ ದಂಡಕರಿಸಿಯರ್ ತಮ್ಮ ಪಕ್ಕದೆ ವಿಷ್ಣು ಜಯನಂ ಪೊಗಟ್ದುದಱಿಂದ ಮರಸನ ಬೆಸದಿಂ ವೈದ್ಯನನವರತಂ ತಮ್ಮ ನೋಲಗಿಸುವುದಱಿಂ ತಮಗೆಂದುಂ ಮಾಡಿದ ವೈಯಾಪೃತ್ಯಮನಱಿದು ನಿಂದಣ ಗರುಹಣಂ ಗೆಯ್ದು ಅದರ್ಕೆ ತಕ್ಕ ಪ್ರಾಯಶ್ಚಿತ್ತಮಂ ಕೊಂಡು ಸಿಂಹನಿಷ್ಕ್ರೀಡಿತಮೆಂಬ ನೋಂಪಿಯಂ ನೋಂತು ವಿಹಾರಿಸುತ್ತಂ ಪೋಗಿ ನರ್ಮದೆಯ ತಡಿಯೊಳ್ ಮಾಮರದ ಕೆೞಗೆ ಸ್ವಾಧ್ಯಾಯಂ ಗೆಯ್ಯುತ್ತಿರ್ದರನ್ನೆಗಂ ಆ ಕೋಡಗನವರಂ ಕಂಡು ಜಾತಿಸ್ಮರನಾಗಿ ಪೂರ್ವಭವ ವೈರಸಂಬಂಧಮನಱಿದು ಮುಳಿಸಿನಿಂ ಶಕ್ತಿಯೆಂಬಾಯುಧದೊಳೋರಂತಾಗುತ್ತಿರ್ದ ಮಾವಿನಕೊಂಬಂ ಮುನಿವರನ ತೊಡೆಯನುರ್ಚಿ ಪೋಗೆ ನೂಂಕಿತ್ತಾಗಳಾ ಮುನಿಯುಂ ತ್ಯಕ್ತಶರೀರನಾಗಿ ಸಮತ್ವೀ ಭಾವನೆಯೊಳ್ ಕೂಡಿರ್ದನಂ ಕಂಡು ತನ್ನ ಮೆಯ್ಯುಮೀತಂಗೆ ಬಾಚ್ತಿಯಲ್ತೆನ್ನದೇವೆನೆಂದು ಸಲೆ ನಂಬಿ ಪಶ್ಚಾತ್ತಾಪಮಾಗಿ ಮರ್ಕಟ

ಮನಸ್ಸಿನವನಾಗಿ ಆ ಋಷಿಗಳ ಬಳಿಯಲ್ಲಿ ಜಯ ವೈದ್ಯನನ್ನು ಹೊಗಳಿದನು. ಆಗ ಋಷಿಗಳು ಸುಮ್ಮನಿರಲು, ವೈದ್ಯನು 'ಈ ಋಷಿಗಳು ನನ್ನನ್ನು ಹೊಗಳಲಿಲ್ಲ' ಎಂದು ಮನಸ್ಸಿನಲ್ಲಿ ಕೋಪಕೊಂಡು ಆರ್ತಧ್ಯಾನದಿಂದ ಕೆಲವು ಕಾಲದಲ್ಲೇ ಸತ್ತು ವಿಂಧ್ಯೆಯ ಕಾಡಿನ ನಡುವೆ ಇರುವ ನರ್ಮದಾನದಿಯ ತೀರದಲ್ಲಿ ಕೋತಿಯಾಗಿ ಹುಟ್ಟಿದನು. ಆ ಮೇಲೆ ಇತ್ತ ದಂಡಕಋಷಿಗಳು ತಮ್ಮ ಬಳಿಯಲ್ಲಿ ವಿಷ್ಣುವು ಜಯನನ್ನು ಹೊಗಳಿದ್ದರಿಂದಲೂ ಅರಸನ ಅಪ್ಪಣೆಯಂತೆ ವೈದ್ಯನು ಯಾವಾಗಲೂ ತಮ್ಮ ಸೇವೆ ಮಾಡುತ್ತಿದ್ದುದರಿಂದಲೂ ತಮಗೆ ಯಾವಾಗಲೂ ಮಾಡಿದ ಚಿಕಿತ್ಸೆಯ ಸಂಗತಿಯನ್ನು ತಿಳಿದು ತಮ್ಮನ್ನು ತಾವೇ ನಿಂದಿಸಿಕೊಂಡರು. ಅದಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಸ್ವೀಕರಿಸಿ ಸಿಂಹ ನಿಷ್ಕ್ರೀಡಿತ ಎಂಬ ವ್ರತವನ್ನು ಆಚರಿಸಿ, ಸಂಚಾರಮಾಡುತ್ತ ಹೋಗಿ ನರ್ಮದಾ ನದಿಯ ತೀರದಲ್ಲಿ ಮಾವಿನ ಮರದ ಕೆಳಗೆ ಶಾಸ್ತ್ರಪಠನವನ್ನು ಮಾಡುತ್ತಿದ್ದರು. ಆ ವೇಳೆಗೆ ಆ ಕೋತಿ ಅವರನ್ನು ಕಂಡು ಜನ್ಮಸಂಗತಿಯನ್ನು ತಿಳಿದು, ಹಿಂದಿನ ಜನ್ಮದ ದ್ವೇಷಸಂಬಂಧವನ್ನು ತಿಳಿದು ಕೋಪದಿಂದ ಶಕ್ತ್ಯಾಯುಧಕ್ಕೆ ಸಮಾನವಾಗುತ್ತಿದ್ದ ಮಾವಿನ ಕೊಂಬೆಯನ್ನು ದಂಡಕಋಷಿಯ ತೊಡೆ ಸೀಳಿಹೋಗುವಂತೆ ಬೀಳಿಸಿತು. ಆಗ ಮುನಿಯು ದೇಹಾಭಿಮಾನವನ್ನು ತ್ಯಜಿಸಿದವನಾಗಿ ಸಮತ್ವದ ಭಾವನೆಯಲ್ಲಿ ಕೂಡಿದ್ದನು. ಹಾಗೆ ಇರುವುದನ್ನು ಕಂಡು ಕೋಡಗನು—"ಈ ಋಷಿಗೆ ತನ್ನ ಶರೀರವೂ ಪ್ರಯೋಜನವಿಲ್ಲ (ಇವನು ದೇಹಾಭಿಮಾನವಿಲ್ಲದವನು). ನನ್ನ ದೇಹವನ್ನು ಏನು ಮಾಡಲಿ !" ಎಂದು ವಿಶೇಷವಾಗಿ ಯೋಚಿಸಿ ಪಶ್ಚಾತ್ತಾಪವುಂಟಾಗಿ ಕಪಿಗಳ ಸಮೂಹ

ವೃಂದಮಂ ನೆರಪಿಕೊಂಡು ಬಂದದಂ ಕಿೞ್ತು ಮರ್ದಂ ತಂದು ಪೊೞ್ದು ಯತಿವರನ ಕಾಲ್ಗೆಱ
ಗಿರ್ದುದುಮಂ ಕಂಡು ಮುನಿಯುಮೀ ಪ್ರಾಣಿ ಭವ್ಯನೆಂದಱಿದು ಧರ್ಮಮಂ ಪೇೞ್ದು
ಸಮ್ಯಕ್ತ್ವಪೂರ್ವಕಂ ಬ್ರತಂಗಳಂ ಕೊಟ್ಟರ್ ಅದುವುಂ ಕೈಕೊಂಡು ಧರ್ಮದೊಳ್ ಕೂಡಿ ತನ್ನಂ
ನಿಂದಿಸುತಂ ಬ್ರತೋಪವಾಸಂಗಳಿಂ ಮೆಯ್ಯಂ ದಂಡಿಸುತಂ ಸಲ್ವುದೊಂದು ದಿವಸಂ ಪರ್ವತ
ಶಿಖರದಿಂ ಪಾಯ್ದು ಬಂದು ಬಿರ್ದಂಕಿ ಮುನಿವರರ ಪಕ್ಕದೆ ಬಿರ್ದತ್ತಾಗಳವರುಂ ಸಂನ್ಯಸನ
ಪೂರ್ವಕಂ ಪಂಚನಮಸ್ಕಾರಮಂ ಕೊಟ್ಟರ್ ಅದುವುಂ ಸತ್ತುಪೋಗಿ ಸನತ್ಕುಮಾರಮೆಂಬ
ಕಲ್ಪದೊಳ್ ಎರಡು ಸಾಗರೋಪಮಾಯುಷ್ಯಮನೊಡೆಯೊಂ ಸಾಮಾನಿಕ ದೇವನಾಗಿ
ಪುಟ್ಟಿದೊಂ ತನ್ನವಧಿಜ್ಞಾನದಿಂದಮಱಿದು ಮಹಾವಿಭೂತಿಯಿಂದಂ ಬಂದು ಧ್ವಜ ಮಕುಟ
ಸಿತಾತಪತ್ರಾದಿಗಳೊಳ್ ಮಣಿಮಯಮಪ್ಪ ಮರ್ಕಟ ಚಿಹ್ನದೊಳ್ ಮುನಿವರನಂ ಪೂಜಿಸಿ
ಪೊಡೆವಟ್ಟಿಂತೆಂದನೀ ದೇವತ್ವಮುಂ ವಿಭೂತಿಯುಮಂ ಪಶುಜಾತಿಯಪ್ಪೆನಗೆ ನೀಮಿತ್ತಿರ್
ಭಟಾರಾ ಎಂದು ತನ್ನ ಪೂರ್ವಭವ ಸಂಬಂಧಮೆಲ್ಲಮಂ ಪೇೞ್ದು ತನ್ನೊಡಲುಮಂ ಪೂಜಿಸಿ
ಪೋದನಾಯೆಡೆ ಲೋಕದೊಳಮರೇಶ್ವರಮೆಂಬ ತೀರ್ಥಮಾಯ್ತು ಮತ್ತಿತ್ತ ದಂಡಕರಿಸಿಯುಂ
ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ

ವನ್ನು ಕೂಡಿಕೊಂಡು ಬಂದು ಆ ಕೊಂಬೆಯನ್ನು ಕಿತ್ತು ಮದ್ದನ್ನು ತಂದು ಹೊಯಿದು
ಯತೀಶ್ವರನ ಪಾದಕ್ಕೆ ವಂದಿಸಿತು. ಇವನ್ನು ಕಂಡು ದಂಡಕ ಮುನಿಯು "ಇದು ಭವ್ಯ
ಜೀವಿ" ಎಂದು ತಿಳಿದು ಧರ್ಮವನ್ನು ತಿಳಿಸಿ ಜೈನತತ್ತ್ವದಲ್ಲಿ ವಿಶ್ವಾಸ ಪೂರ್ವಕವಾಗಿ ವ್ರತ
ಗಳನ್ನು ಕೊಟ್ಟರು. ಅದು ಅವನ್ನು ಸ್ವೀಕರಿಸಿ ಧರ್ಮದಲ್ಲಿ ಸೇರಿ ತನ್ನನ್ನ ನಿಂದಿಸಿ
ಕೊಳ್ಳುತ್ತ ವ್ರತ ಉಪವಾಸಗಳಿಂದ ದೇಹವನ್ನು ದಂಡಿಸುತ್ತ ಕಾಲಕಳೆಯುತ್ತ ಒಂದು
ದಿವಸ ಬೆಟ್ಟದ ತುದಿಯಿಂದ ಹಾರಿ ಬಿದ್ದಿತು. ಅದು ತಪ್ಪಿ ದಂಡಕ ಋಷಿಯ ಬಳಿಯಲ್ಲಿ
ಬಿದ್ದಿತು. ಋಷಿಗಳು ಆ ಕೋತಿಗೆ ಸಂನ್ಯಾಸದೊಂದಿಗೆ ಪಂಚನಮಸ್ಕಾರಗಳನ್ನು
ಉಪದೇಶಿಸಿದರು. ಅದು ಸತ್ತುಹೋಗಿ ಆ ಜೀವನು ಸನತ್ಕುಮಾರ ಎಂಬ ಸ್ವರ್ಗದಲ್ಲಿ
ಎರಡು ಸಾಗರವನ್ನು ಹೋಲುವ ಆಯುಷ್ಯವಿರತಕ್ಕ ಸಾಮಾನಿಕದೇವನಾಗಿ ಹುಟ್ಟಿದನು.
ಆ ಸಾಮಾನಿಕದೇವನು ತನ್ನ ಅವಧಿ ಜ್ಞಾನದಿಂದ ತಿಳಿದುಕೊಂಡು ದೊಡ್ಡ ವೈಭವದಿಂದ
ಬಂದು ಪತಾಕೆ, ಕಿರೀಟ, ಶ್ವೇತಚ್ಛತ್ರಾದಿಗಳಿಂದ ರತ್ನಮಯವಾದ ವಾನರ ಚಿಹ್ನೆಯಲ್ಲಿ
ಮುನಿಶ್ರೇಷ್ಠನನ್ನು ಪೂಜಿಸಿ ಸಾಷ್ಟಾಂಗ ನಮಸ್ಕಾರಮಾಡಿ ವಂದಿಸಿ ಹೀಗೆಂದನು—
"ಋಷಿವರ್ಯರೇ, ಈ ದೇವತ್ವವೂ ವೈಭವವೂ ಪ್ರಾಣಿಜಾತಿಯವನಾದ ನನಗೆ ನೀವು
ಕೊಟ್ಟಿರಿ"–ಎಂದು ತನ್ನ ಹಿಂದಿನ ಜನ್ಮದ ಸಂಬಂಧವನ್ನೆಲ್ಲ ಹೇಳಿ ತನ್ನ ಶರೀರವನ್ನು
ಪೂಜಿಸಿ ತೆರಳಿದನು. ಆ ಸ್ಥಳವು ಲೋಕದಲ್ಲಿ ಅಮರೇಶ್ವರವೆಂಬ ತೀರ್ಥವಾಯಿತು.
ಅನಂತರ ಇತ್ತ ದಂಡಕಋಷಿ ಗ್ರಾಮ, ನಗರ, ಖೇಡ, ಖರ್ವಡ, ಮಡಂಬ, ಪಟ್ಟಣ,
ದ್ರೋಣಾಮುಖಗಳಲ್ಲಿ ಸಂಚಾರಮಾಡುತ್ತ ಕ್ರಮವಾಗಿ ಉತ್ತರಮಧುರೆಗೆ ಹೋಗಿ ಅಲ್ಲಿ

ಕ್ರಮದಿಂದುತ್ತರ ಮಥುರೆಯನೆಯ್ದಿಯಲ್ಲಿ ಸೂರ್ಯಪ್ರತಿಮೆ ನಿಂದರನ್ನೆಗಂ ಆ ಪೊಟಲನಾಳ್ವೋಂ ಯಮುನಾವಂಕನೆಂಬೊನರಸನಾತಂ ದಂಡಕನಿಂದಂ ಪಲವು ಸೂಟಿಙ್ ದಂಡಣೆಗಳನೆಯ್ದಿದ ನಪ್ಪುದಱಿಂದಂ ದಂಡಕಂ ಬಂದನೆಂಬ ವಾರ್ತೆಯಂ ಕೇಳಲೊಡಂ ಜಾತ್ಯಶ್ವಮನೇಱಿ ಓಡುವವನ ಬೞಿಯಂ ಮಂತ್ರಿ ತಗುಳ್ದೋಡಲೀಯದೆ ಮಾಣಿಸಿಯಿಂತೆಂದಂ ದಂಡಕಂ ತಪಂ ಬಟ್ಟು ಬಂದನೆಂದಱಿಯೆ ಪೇೞ್ದಾಗಳ್ ಮಗುಳ್ದು ಬಂದತಿ ಕ್ರೋಧದಿಂದಂ ಕಾಸಿದ ಮೊನೆ ಯಂಬುಳ್ಳವನವಱ ಮೆಯ್ಯನನೇಕ ಶರಸಂಘಾತಂಗಳಿಂದಮೆಚ್ಚೊಡವರುಮಾ ವೇದನೆಯುಂ ಸೈರಿಸಿ ಸಮತ್ವೀಭಾವನೆಯುಂ ಭಾವಿಸಿ ಚತುರ್ವಿಧಮಪ್ಪಾಹಾರಕ್ಕಂ ಶರೀರಕ್ಕಂ ಯಾವಜ್ಜೀವಂ ನಿವೃತ್ತಿಗೆಯ್ದು ಶುಕ್ಲಧ್ಯಾನಂಗಳಂ ಧ್ಯಾನಿಸಿ ಕರ್ಮಕ್ಷಯಂಗೆಯ್ದು ಮೋಕ್ಷಕ್ಕೆ ಪೋದರ್ ಅನ್ನೆಗಂ ಇತ್ತ ಚತುರ್ವಿಧ ದೇವನಿಕಾಯಂ ತಂತಮ್ಮ ಜ್ಞಾನಂಗಳಿಂದಱಿದು ಚಿತ್ರ ಪಟಮಂ ಕೆದಱಿದಂತೆ ಯಾಕಾಶಮೆಲ್ಲಮಂ ವ್ಯಾಪಿಸಿ ನಾನಾವಿಧ ವಾಹನಾರೂಢರ್ಕಳ್ ಜ್ವಲನ್ಮಣಿಮಯಮಕುಟಾಗ್ರ ವಿನ್ಯಸ್ತ ಹಸ್ತರ್ಕಳಾಗಿ ಇಂದ್ರಾದಿ ದೇವರ್ಕಳುಂ ಜಯಜಯಶಬ್ದಂಗಳಿಂದಂ ಮುನಿವರೇಣ್ಯನ ಗುಣಂಗಳಂ ನೆಗೞ್ತಿಯಂ ಪೊಗೞುತಂ ಬರ್ಪೊರಂ ಕಂಡು ಭಯಂ ಕಾರಣಮಾಗಿಯುಂ

ಸೂರ್ಯನ ಬಿಸಿಲಿನಲ್ಲಿ ಪ್ರತಿಮಾ ಯೋಗದಿಂದ ನಿಂತರು. ಆಗ ಆ ಪಟ್ಟಣವನ್ನಾಳುವ ಯಮುನಾವಂಕನೆಂಬ ರಾಜನು ದಂಡಕನು ಬಂದುದನ್ನು ತಿಳಿದನು. ಯಮುನಾ ವಂಕನು ದಂಡಕನಿಂದ ಹಲವು ಬಾರಿ ದಂಡನೆಗೆ ಗುರಿಯಾಗಿದ್ದನು. ಅವನು ಈಗ ಜಾತಿಯ ಕುದುರೆಯನ್ನೇರಿ ಹೆದರಿ ಓಡತೊಡಗಿದನು. ಮಂತ್ರಿ ಅವನ ಬೆನ್ನ ಹಿಂದೆಯೇ ಬಂದು ಓಡಲು ಬಿಡದೆ, ತಡೆದು ಹೀಗೆಂದನು—"ದಂಡಕನು ಈಗ ತಪಸ್ವಿಯಾಗಿ ಬಂದಿದ್ದಾನೆ"—ಎಂದು ತಿಳಿಯುವಂತೆ ಹೇಳಿದಾಗ ಯಮುನಾವಂಕನು ಹಿಂದೆ ಬಂದು, ಬಹಳ ಕೋಪದಿಂದ ಕಾಯಿಸಿ ಹರಿತಮಾಡಿದ ಚೂಪಾದ ಬಾಣಗಳುಳ್ಳವನಾಗಿ ಅವುಗಳಿಂದ (ಅನೇಕ ಬಾಣಗಳ ಸಮೂಹದಿಂದ) ಮುನಿಗೆ ಹೊಡೆದನು. ಅವರು ಆ ನೋವನ್ನು ಸಹಿಸಿ ಸಮತ್ವದ ಭಾವನೆಯನ್ನು ಭಾವಿಸಿ ನಾಲ್ಕು ವಿಧವಾದ ಆಹಾರಕ್ಕೂ ಶರೀರಕ್ಕೂ ಜೀವವಿರುವವರೆಗೂ ನಿವೃತ್ತಿಮಾಡಿ ಶುಕ್ಲಧ್ಯಾನಗಳನ್ನು ಧ್ಯಾನಿಸಿ ಕರ್ಮವನ್ನು ನಾಶಮಾಡಿ ಮೋಕ್ಷಕ್ಕೆಹೋದರು. ಅಷ್ಟರಲ್ಲಿ ಇತ್ತ ಭವನವಾಸಿ, ವ್ಯಂತರ, ಜ್ಯೋತಿಷ್ಕ, ವೈಮಾನಿಕ—ಎಂಬ ನಾಲ್ಕು ವಿಧದ ದೇವತೆಗಳ ಸಮೂಹಕ್ಕೆ ಸೇರಿದವರೆಲ್ಲ ತಂತಮ್ಮ ಜ್ಞಾನಗಳಿಂದ ಸಂಗತಿಯನ್ನು ತಿಳಿದ ಚಿತ್ರಪಟಗಳನ್ನು ಕೆದರಿದ ಹಾಗೆ ಆಕಾಶವನ್ನೆಲ್ಲ ವ್ಯಾಪಿಸಿಕೊಂಡು ಹಲವಾರು ರೀತಿಯ ವಾಹನಗಳ ಮೇಲೆ ಕುಳಿತವರಾಗಿ ಹೊಳೆಯುವ ರತ್ನಮಯವಾದ ಕಿರೀಟಗಳ ಮೇಲೆ ಇಟ್ಟ ಕೈಯುಳ್ಳವರಾಗಿ (ನಮಸ್ಕರಿಸುತ್ತ)—ಇಂದ್ರನೇ ಮುಂತಾದ ದೇವತೆಗಳೂ ಜಯಜಯ ಎಂಬ ಶಬ್ದಗಳಿಂದ ಮುನಿಶ್ರೇಷ್ಠನ ಗುಣಗಳನ್ನು ಆಚರಣೆಗಳನ್ನೂ ಹೊಗಳುತ್ತ ಬರುತ್ತಿದ್ದರು. ಅವರನ್ನು ಯಮುನಾವಂಕನು ನೋಡಿ ಹೆದರಿಕೆಯ ಕಾರಣದಿಂದಲೂ ಕರ್ಮಗಳು ನಾಶವಾದ ಕಾರಣದಿಂದಲೂ

ಕರ್ಮ್ಮಂಗಳುಪಶಮಮಂ ಕಾರಣಮಾಗಿಯುಂ ಯಮುನಾವಂಕಂ ತಪಂಬಟ್ಟಂ ತಪಂಬಟ್ಟೊಡಮಾ
ರಿಸಿಯುಂ ಕೊಂದ ಪಾಪದ ಫಲದಿಂದನೇಕ ಮಹಾವ್ಯಾಧಿಗಳುಮಾದವು ಮತ್ತಮಾ ಪಾಪಕ್ಕೆ
ತಕ್ಕ ಪ್ರಾಯಶ್ಚಿತ್ತಮಂ ನೆಗಟ್ದು ಪಲಕಾಲ ಮುಗ್ರೋಗ್ರ ಘೋರ ವೀರ ತಪಶ್ಚರಣಂ
ಗೆಯ್ಯುತ್ತಂ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ
ವಿಹಾರಿಸುತಂ ಬರ್ಪೊರ್ ಸಜ್ಜಾತಗಿರಿಯನೆಯ್ದಿಯಲ್ಲಿಯೆ ರಾತ್ರಿ ಪ್ರತಿಮೆನಿಂದೊರನ್ನೆಗಂ
ಕಾಟಿಚ್ಚು ಮೂವಳಸು ಬಳಸಿಯುಂ ತಗುಳ್ದು ತಮ್ಮಂ ಸುಡೆ ಚತುರ್ವಿಧಮಪ್ಪಾ
ಹಾರಕ್ಕಂ ಜಾವಜ್ಜೀವಂ ನಿವೃತ್ತಿಗೆಯ್ದು ಶುಭಮಪ್ಪ ಶುಕ್ಲಧ್ಯಾನಂಗಳಂ ಜಾನಿಸಿ ಘಾತಿಕರ್ಮ್ಮಂ
ಗಳಂ ಕಿಡಿಸಿಯಂತರ್ಗತ ಕೇವಲಿಯಾಗಿ ಯೆಂಟು ಕರ್ಮ್ಮಂಗಳಂ ಕಿಡಿಸಿ ತಪೋಗ್ನಿಯಂ ಸುಟ್ಟು
ಮೋಕ್ಷಕ್ಕೆ ಪೋದರ್ ಮತ್ತೆ ಪೆಱರುಂ ಸಂನ್ಯಸನಂ ಗೆಯ್ದಿರ್ದ ಕ್ಷಪಣಕರುಂ ದಂಡಕರಿಸಿಯುಮಂ
ಕಾಸಿದ ಮೊನೆಯಂಬುಗಳಿಂದೆಚ್ಚು ಮಾಡಿದುಪಸರ್ಗಮುಮಂ ಯಮುನಾವಂಕರಿಸಿಯರ್
ಕಿಚ್ಚಿನಿಂ ಬೆಂದುಪಸರ್ಗಮುಮಂ ಮನದೊಳ್ ಬಗೆದು ಪಸಿವುಂ ನೀರಟ್ಕೆ ಮೊದಲಾಗೊಡೆಯ
ವಿರ್ಪತ್ತೆರಡು ಪರೀಷಹಂಗಳುಮಂ ವ್ಯಾಧಿಗಳೊಳಪ್ಪ ವೇದನೆಗಳುಮಂ ಸೈರಿಸಿ ಪರಮ ಶುದ್ಧ
ಸಹಜ ದರ್ಶನ ಜ್ಞಾನ ಚಾರಿತ್ರಂಗಳಂ ಸಾಧಿಸಿ ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

ತಪಸ್ಸನ್ನು ಸ್ವೀಕರಿಸಿಕೊಂಡನು. ತಪಃಸ್ವೀಕಾರ ಮಾಡಿದರೂ ಆ ಋಷಿಯನ್ನು ಕೊಂದ ಪಾಪದ ಫಲದಿಂದ ಅವನಿಗೆ ಅನೇಕ ಮಹಾವ್ಯಾಧಿಗಳಾದವು. ಮತ್ತೆ ಆ ಪಾಪಕ್ಕೆ ತಕ್ಕುದಾದ ಪ್ರಾಯಶ್ಚಿತ್ತವನ್ನು ಮಾಡಿ ಹಲವು ಕಾಲದವರೆಗೆ ಅತ್ಯಂತ ಕಠಿನವೂ ಶ್ರೇಷ್ಠವೂ ಆದ ತಪಸ್ಸನ್ನು ಆಚರಿಸುತ್ತ ಗ್ರಾಮ, ನಗರ, ಖೇಡ, ಖರ್ವಡ, ಮಡಂಬ, ಪಟ್ಟಣ, ದ್ರೋಣಾಮುಖಗಳಲ್ಲಿ ಸಂಚಾರಮಾಡುತ್ತ, ಬರುತ್ತಿದ್ದವರು ಸಜ್ಜಾತವೆಂಬ ಬೆಟ್ಟವನ್ನು ಸೇರಿ ಅಲ್ಲಿಯೇ ರಾತ್ರಿ ಪ್ರತಿಮಾಯೋಗದಲ್ಲಿ ನಿಂತರು. ಆ ವೇಳೆಗೆ ಕಾಡು ಗಿಚ್ಚು ಮೂರು ಸುತ್ತಾಗಿ ಆವರಿಸಿ ಹತ್ತಿರ ಬಂದು ಅವರನ್ನು ಸುಡತೊಡಗಿತು. ಆಗ ಅವರು ಜೀವವಿರುವವರೆಗೂ ನಾಲ್ಕು ವಿಧವಾದ ಆಹಾರದಲ್ಲಿ (ಭಕ್ಷ್ಯ, ಭೋಜ್ಯ, ಚೋಷ್ಯ, ಲೇಹ್ಯ ಇವುಗಳಲ್ಲಿ) ಯಾವುದೊಂದನ್ನೂ ಸೇವಿಸದೆ ಶುಭವಾದ ಶುಕ್ಲಧ್ಯಾನ ಗಳನ್ನು ಧ್ಯಾನಿಸಿ ಘಾತಿಕರ್ಮಗಳನ್ನು ನಾಶಪಡಿಸಿ ಅಂತರ್ಗತ ಕೇವಲಿಯಾಗಿ ಎಂಟು ಕರ್ಮಗಳನ್ನು ನಾಶಪಡಿಸಿ ತಪಸ್ಸೆಂಬ ಅಗ್ನಿಯಿಂದ ದಹಿಸಿಕೊಂಡು ಮೋಕ್ಷಕ್ಕೆ ಹೋದರು. ಆಮೇಲೆ ಸಂನ್ಯಾಸಮಾಡಿದ ಇತರ ಸವಣರೂ—ದಂಡಕ ಋಷಿಗಳನ್ನು ಕಾಸಿದ ಮೊನೆಯ ಬಾಣಗಳಿಂದ ಹೊಡೆದು ಮಾಡಿದ ಉಪಸರ್ಗವನ್ನೂ ಯಮುನಾವಂಕ ಋಷಿಗಳು ಬೆಂಕಿಯಿಂದ ಸುಟ್ಟುಹೋದ ಉಪಸರ್ಗವನ್ನೂ ಮನಸ್ಸಿನಲ್ಲಿ ಭಾವಿಸಿಕೊಂಡು, ಹಸಿವು ಬಾಯಾರಿಕೆ ಮುಂತಾಗಿ ಉಳ್ಳ ಇಪ್ಪತ್ತೆರಡು ಪರೀಷಹಗಳನ್ನೂ ರೋಗಗಳಿಂದಾಗುವ ನೋವುಗಳನ್ನೂ ಸಹಿಸಿ, ಶ್ರೇಷ್ಠವೂ ನಿರ್ಮಲವೂ ಸಹಜವೂ ಆದ ದರ್ಶನ ಜ್ಞಾನ ಚಾರಿತ್ರ ಗಳನ್ನು ಸಾಧಿಸಿ ಸ್ವರ್ಗ ಮೋಕ್ಷಗಳ ಸುಖಗಳಿಗೆ ಭಾಗಿಗಳಾಗಲಿ !

# ೧೪. ಮಹೇಂದ್ರದತ್ತಾಚಾರ್ಯರ್ ಮೊದಲಾದ ಅಯ್ನೂರ್ವರ್ ರಿಸಿಯರ್ಕಳ ಕಥೆ

ಮಹೇಂದ್ರದತ್ತಾಚಾರ್ಯರ್ ಮೊದಲಾಗೊಡೆಯ ಅಯ್ನೂರ್ವರ್ ರಿಸಿಯರ್ಕಳ ಕಥೆಯಂ ಪೇಳ್ವೆಂ :

ಗಾಹೆ ॥ ಣಗರೇ ಮಹೇಂದ್ರದತ್ತಾದೀಣಂ ಪಂಚಸದಾ ಕುಂಭಕಾರಘಡೇ
ಆರಾಧಣಂ ಪವಣ್ಣಾ ಪೀಳಿಜ್ಜಂತಾವಿ ಜಂತೇಹಿಂ ॥

[ಣಗರೇ-ಪೊೞಲೊಳ್, ಮಹೇಂದ್ರದತ್ತಾದೀಣಂ-ಮಹೇಂದ್ರದತ್ತರೆಂಬಾಚಾರ್ಯರ್ ಮೊದಲಾಗೊಡೆಯ ರಿಸಿಯರ್ಕಳ್, ಪಂಚಸದಾ-ಅಯ್ನೂರ್ವರ್, ಕುಂಭಕಾರಘಡೇ-ಕುಂಭಕಾರಘಟಮೆಂಬುದಱೊಳ್, ಆರಾಧಣಂ-ಸಮ್ಯ ದರ್ಶನ ಜ್ಞಾನ ಚಾರಿತ್ರಂಗಳಾರಾಧನೆಯಂ, ಪವಣ್ಣಾ-ಪೊರ್ದಿದೊರ್, ಪೀಳಿಜ್ಜಂತಾವಿ-ಪೀಳಿಸೆಪಟ್ಟರಾಗಿಯುಂ, ಜಂತೇಹಿಂ-ಗಾಣಂಗಳಿಂದಂ] ಅದೆಂತೆಂದೊಡೆ : ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ವಿದೇಹಮೆಂಬುದು ನಾಡಲ್ಲಿ ಸಾವತ್ಥಿಯೆಂಬುದು ಪೊೞಲಲ್ಲಿಯದನಾಳ್ವಂ ಜಿತಶತ್ರುವೆಂಬೊನರಸನಾತನ ಮಹಾದೇವಿ ಧಾರಿಣಿಯೆಂಬೊಳಾಯಿರ್ವರ್ಗ್ಗಂ ಮಗಂ ಸ್ಕಂದಕುಮಾರನೆಂಬೊನಾತಂ ಕಿಱಿಯೊಳ್ ಪುಂಡ್ರಯಶೆಯೆಂಬೊಳಾಕೆಯಂ ದಕ್ಷಿಣಾಪಥದೊಳ್ ಕುಂಭಕಾರಘಟಮೆಂಬ ಪೊೞಲನಾಳ್ವಂ ದಂಡಕನೆಂಬರಸಂಗೆ ಕೊಟ್ಟರಂತವರ್ಗ್ಗಳಿಷ್ಟವಿಷಯ ಕಾಮ ಭೋಗಂಗಳನನುಭವಿಸುತ್ತಂ ಕಾಲಂ ಸಲೆ

ಮಹೇಂದ್ರ ದತ್ತಾಚಾರ್ಯರು ಮೊದಲಾಗುಳ್ಳ ಐನೂರು ಮಂದಿ ಋಷಿಗಳ ಕತೆಯನ್ನು ಹೇಳುವೆನು—[ನಗರದಲ್ಲಿ ಮಹೇಂದ್ರದತ್ತರೆಂಬ ಆಚಾರ್ಯರೇ ಮೊದಲಾದ ಐನೂರು ಮಂದಿ ಋಷಿಗಳು ಕುಂಭಕಾರಘಟವೆಂಬ ಪಟ್ಟಣದಲ್ಲಿ ಗಾಣಗಳಿಂದ ಹಿಂಡಲ್ಪಟ್ಟವರಾಗಿ ಶ್ರೇಷ್ಠವಾದ ದರ್ಶನ ಜ್ಞಾನ ಚಾರಿತ್ರಗಳ ಆರಾಧನೆಯನ್ನು ಮಾಡಿದರು.] ಈ ಜಂಬೂ ದ್ವೀಪದ ಭರತಕ್ಷೇತ್ರದಲ್ಲಿ ವಿದೇಹವೆಂಬ ನಾಡಿದೆ. ಅಲ್ಲಿ ಸಾವತ್ಥಿ ಎಂಬ ಪಟ್ಟಣವಿದೆ. ಅದನ್ನು ಜಿತಶತ್ರು ಎಂಬ ರಾಜನು ಆಳುತ್ತಿದ್ದನು. ಅವನ ಮಹಾರಾಣಿ ಧಾರಿಣಿಯೆಂಬುವಳು. ಆ ಇಬ್ಬರಿಗೂ ಸ್ಕಂದಕುಮಾರನೆಂಬುವನು ಮಗನು. ಅವನಿಂದ ಕಿರಿಯಳು ಪುಂಡ್ರಯಶೆ. ಆಕೆಯನ್ನು ದಕ್ಷಿಣ ಭಾರತದಲ್ಲಿರುವ ಕುಂಭಕಾರಘಟ ಎಂಬ ಪಟ್ಟಣವನ್ನು ಆಳತಕ್ಕ ದಂಡಕನೆಂಬ ರಾಜನಿಗೆ ಕೊಡಲಾಗಿತ್ತು. ಅಂತು ಅವರಿಬ್ಬರೂ ಇಷ್ಟವಿಷಯದ ಕಾಮಸುಖಗಳನ್ನು ಅನುಭವಿಸುತ್ತ ಇದ್ದರು. ಹೀಗೆಯೇ ಕಾಲಕಳೆಯುತ್ತಿತ್ತು. ಆ

ಮತ್ತಿತ್ತ ಮುನಿಸುವ್ರತ ತೀರ್ಥಕರ ಪರಮದೇವರ ಪಕ್ಕದೆ ಮಹೇಂದ್ರದತ್ತನುಂ ಜಿತಶತ್ರುವ ಮಗನಪ್ಪ ಸ್ಕಂದಕುಮಾರನುಂ ಮೊದಲಾಗೊಡೆಯ ಅಯ್ನೂರ್ವರ್ ರಾಜಪುತ್ರರ್ಕಳ್ ತಪಂ ಬಟ್ಟೋದುಗಳೆಲ್ಲಮಂ ಕಲ್ತು ಅಭಿನಂದನರೆಂಬ ಗಣಧರರೊಡನೆ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಬರ್ಪೊರ್ ಕಳಿಂಗ ದೇಶದೊಳ್ ದಂತಪುರಮೆಂಬ ಪೊೞಲನೆಯ್ದಿ ಅಲ್ಲಿ ಕೆಲವು ದಿವಸಮಿರ್ಪನ್ನೆಗಂ ಆ ಪೊೞಲನಾಳ್ವೋಂ ಜನಾರ್ದನ ಮಹಾರಾಜನೆಂಬೊನರಸನಾತನ ಪುರೋಹಿತಂ ವ್ಯಾಳನೆಂಬೊನಾತಂ ಸ್ಕಂದಕುಮಾರ ಋಷಿಯರೊಡನೆ ಅರಸನ ಮುಂದೆ ಪಂಡಿತರ್ಕಳ ನಡುವೆ ವಾದುಗೆಯ್ದು ಸೋಲ್ತೊಡರಸನಾತನ ನಟ್ಟಿ ಕಳೆದೊಡಾತನುಂ ಪೋಗಿ ದಂಡಕನೆಂಬರಸಂಗಾಳಾಗಿಯಲ್ಲಿ ಮಂತ್ರಿಪದವಂ ಪೆತ್ತಿರ್ಪನ್ನೆಗಂ ಮತ್ತಿತ್ತ ಋಷಿಯರ್ಕಳುಂ ಗ್ರಾಮನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಬರ್ಪೊರ್ ಕುಂಭಕಾರ ಘಟಮೆಂಬ ಪೊೞಲ್ಗೆವಂದೊಡಾ ಪೊೞಲನಾಳ್ವ ದಂಡಕನೃಪತಿ ಬಿಟ್ಟುವರ್ಗೆ ಭಕ್ತನಪ್ಪಾತಂ ರಿಸಿಯರ್ಕಳ ಬರವಂ ಕೇಳ್ದು ಬಂದು ಬಂದಿಸಿಯಭಿನಂದನ ಭಟಾರರ ಪಕ್ಕದೆ ವಿಚಾರಿಸಿ ಧರ್ಮಮಂ ಕೇಳ್ದು ಮೆಚ್ಚಿ ನಂಬಿ ಶ್ರಾವಕಬ್ರತಂಗಳಂ ಕೈಕೊಂಡು ಶ್ರಾವಕನಾಗಿ ಅಯ್ನೂರ್ವರ್ ರಿಸಿಯರ್ಕಳುಮಂ

ಮೇಲೆ ಇತ್ತ ಮುನಿಸುವ್ರತ ತೀರ್ಥಂಕರ ಮಹಾದೇವರ ಬಳಿಯಲ್ಲಿ ಮಹೇಂದ್ರದತ್ತನೂ ಜಿತಶತ್ರುವಿನ ಮಗನಾದ ಸ್ಕಂದಕುಮಾರ ಮೊದಲಾಗಿ ಉಳ್ಳ ಐನೂರು ಮಂದಿ ರಾಜಕುಮಾರರು ತಪಸ್ಸನ್ನು ಮಾಡಲು ಉಪದೇಶ ಪಡೆದು, ವಿದ್ಯೆಗಳೆಲ್ಲವನ್ನೂ ಕಲಿತ ಅಭಿನಂದನರೆಂಬ ಗಣಧರರೊಂದಿಗೆ ಗ್ರಾಮ ನಗರ ಖೇಡ ಖರ್ವಡ ಮಡುಂಬ ಪಟ್ಟಣ ದ್ರೋಣಾಮುಖಗಳಲ್ಲಿ ಸಂಚಾರಮಾಡುತ್ತ ಬರುತಿದ್ದವರು ಕಳಿಂಗ ದೇಶದಲ್ಲಿ ದಂತಪು ನೆಂಬ ಪಟ್ಟಣಕ್ಕೆ ಬಂದು ಅಲ್ಲಿ ಕೆಲವು ದಿವಸ ಇದ್ದರು. ಆ ಪಟ್ಟಣವನ್ನು ಜನಾರ್ದ ಮಹಾರಾಜನೆಂಬ ರಾಜನು ಆಳುತ್ತಿದ್ದನು. ಅವನ ಪುರೋಹಿತನಾದ ವ್ಯಾಳನೆಂಬವನ ಸ್ಕಂದಕುಮಾರ ಋಷಿಗಳೊಂದಿಗೆ ರಾಜನ ಮುಂದೆ ಪಂಡಿತರುಗಳ ನಡುವೆ ವಾದಮಾ ಸೋತುಹೋದನು. ಇದರಿಂದ ರಾಜನು ಅವನನ್ನು ಓಡಿಸಿಬಿಟ್ಟನು. ವ್ಯಾಳನ ಹೋಗಿ ದಂಡಕನೆಂಬ ರಾಜನ ಸೇವಕನಾಗಿ ಅಲ್ಲಿ ಮಂತ್ರಿ ಪದವಿಯನ್ನು ಪಡೆದುಕೊಂ ದ್ದನು. ಹೀಗಿರಲು ಅನಂತರ ಋಷಿಗಳು ಗ್ರಾಮ, ನಗರ, ಖೇಡ, ಖರ್ವಡ, ಮಡಂಬ ಪಟ್ಟಣ, ದ್ರೋಣಾಮುಖಗಳಲ್ಲಿ ಸಂಚಾರಮಾಡುತ್ತ ಬರುತ್ತಿದ್ದವರು ಕುಂಭಕಾರಘ ನೆಂಬ ಪಟ್ಟಣಕ್ಕೆ ಬಂದರು. ಆ ಪಟ್ಟಣವನ್ನು ಆಳುವ ದಂಡಕರಾಜನು ಜೈನಯತಿಗ ಭಕ್ತನಾಗಿದ್ದು ಋಷಿಗಳು ಬಂದುದನ್ನು ಕೇಳಿ ಬಂದು ವಂದಿಸಿ ಅಭಿನಂದನ ಋಷಿಗ ಬಳಿಯಲ್ಲಿ ವಿಚಾರಿಸಿ ಧರ್ಮವನ್ನು ಕೇಳಿ ಮೆಚ್ಚಿ ನಂಬಿ ಶ್ರಾವಕವ್ರತಗಳನ್ನು ಸ್ವೀಕರಿ ಶ್ರಾವಕನಾದನು. ಅವನು ಐನೂರು ಮಂದಿ ಋಷಿಗಳನ್ನೂ ಪ್ರತಿಯೊಂದು ದಿವಸ

ಪ್ರತಿದಿವಸಕ್ಕಂ ಅತಿಭಕ್ತಿಯಿಂದಂ ನಿಱಿಸಿ ತಾಂ ಪಕ್ಕದಿರ್ದು ದಿವ್ಯಾಹಾರಂಗಳನೂಡುತಿಂತು ಋಷಿಯರ್ಕಳ್ಗೆ ಬೆಸಕೆಯ್ಯುತ್ತಮಿರೆ ಸ್ಕಂದಕುಮಾರ ಋಷಿಯೊಡನೆ ವಾದುಗೆಯ್ದು ಸೋಲ್ದೊಡೆ ತನ್ನನಟ್ಟಿ ಕಳೆದುದು ಕಾರಣಮಾಗಿ ವ್ಯಾಳನೆಂಬಂ ಮಂತ್ರಿ ಋಷಿಯರ್ಕಳನಟ್ಟಿ ಕಳೆವುಪಾಯಮನೆ ಬಗೆಯುತ್ತಿರ್ಪೊನ್ ಒಂದು ದಿವಸಂ ಅಡವಿಗೆ ಪೋಗಿ ರಿಸಿಯರ್ಕಳ್ ಸಿದ್ಧಾಂತಮಂ ಪರಿವಿಡಿಗೆಯ್ದುದಂ ಕೇಳ್ದು ಪೊೞಲ್ಗೆವಂದ ಬೞಿಕ್ಕೆ ಅವರೋದುವ ಕ್ಷೇತ್ರದ ಸಾರೆಯೊಂದು ಗಿಡುವಿನ ಕೆೞಗೆ ಕೆಲವುಮಾಯುಧಂಗಳಂ ಪೂೞ್ದು ಬಂದರಸಂಗಿಂತೆಂದ ನೀಯಯ್ನೂರ್ವರುಂ ರಿಸಿಯರ್ಕಳುಮರಸು ಮಕ್ಕಳ್ ಮಹಾಬಲ ಪರಾಕ್ರಮಮನೊಡೆಯರೀ ರೂಪಂ ತೋಱಿ ನಂಬಿಸಿ ನಿಮ್ಮ ಪ್ರಾಣಕ್ಕಪಾಯಮಂ ಮಾಡಲ್ ಬಗೆದು ಬಂದರದಱಿಂ ಬಿಡದವರಲ್ಲಿಗೆ ಪೋಗಲ್ವೇಡ ಅವರುಮಂ ನಂಬಲ್ವೇಡೆಂದೇಕಾಂತದೊಳ್ ಪೇೞ್ದು ಮತ್ತಮಿಂ ತೆಂದನೆಂತಱಿಯಲಕ್ಕುಮವರಾಯುಧಂಗಳಂ ಪೂೞ್ದಿರ್ದರಪ್ಪುದಱಿಂ ಕೂರ್ಪರನಟ್ಟಿ ಅವರೋದುವ ಕ್ಷೇತ್ರದೆ ಬಳಸಿಯುಂ ನೋಡಿಸುವುದೆಂದು ಪೇೞ್ದೊಡರಸನುಮಾಳ್ಗಳಂ ನೋಡಿಮೆಂದು ಬೆಸವೇೞ್ದೊಡವರುಂ ಪೋಗಿಯವರೋದುವ ಕ್ಷೇತ್ರದೊಳ್ ನೋಡಿ ಗಿಡುವಿನ

ಅತ್ಯಂತ ಭಕ್ತಿಯಿಂದ ಭಿಕ್ಷಕ್ಕೆ ನಿಲ್ಲಿಸಿ ತಾನೂ ಬಳಿಯಲ್ಲಿದ್ದು ದಿವ್ಯವಾದ ಆಹಾರವನ್ನು ಊಟಮಾಡಿಸುತ್ತ ಋಷಿಗಳ ಆಜ್ಞೆಯಂತೆ ನಡೆದುಕೊಳ್ಳುತ್ತಿದ್ದನು. ಹೀಗಿರಲು ವ್ಯಾಳನೆಂಬ ಮಂತ್ರಿ ಹಿಂದೆ ಸ್ಕಂದಕುಮಾರ ಋಷಿಯೊಂದಿಗೆ ವಾದಮಾಡಿ ಸೋತಾಗ ತನ್ನನ್ನು ಓಡಿಸಿದುದೇ ಕಾರಣವಾಗಿ ಋಷಿಗಳನ್ನೆಲ್ಲ ಹೇಗೆ ಅಟ್ಟಿಬಿಡುವುದೆಂಬ ಉಪಾಯವನ್ನೇ ಯೋಚಿಸುತ್ತಿದ್ದನು. ಅವನು ಒಂದು ದಿವಸ ಕಾಡಿಗೆ ಹೋಗಿ ಅಲ್ಲಿ ಋಷಿಗಳು ಸಿದ್ಧಾಂತವನ್ನು ಅನುಕ್ರಮವಾಗಿ ಪಠನಮಾಡಿದುದನ್ನು ಕೇಳಿ ಪಟ್ಟಣಕ್ಕೆ ಬಂದ ನಂತರ ಆ ಋಷಿಗಳು ಪಠನ ಮಾಡುವ ಸ್ಥಳದ ಹತ್ತಿರದಲ್ಲಿ ಒಂದು ಗಿಡದ ಕೆಳಗಡೆ ಕೆಲವು ಆಯುಧಗಳನ್ನು ಹೂಳಿಟ್ಟು ಬಂದು ಮಹಾರಾಜನೊಡನೆ ಹೀಗೆಂದನು. "ಈ ಐನೂರು ಮಂದಿ ಋಷಿಗಳು ರಾಜಕುಮಾರರೇ ಆಗಿದ್ದಾರೆ. ಇವರು ಮಹತ್ತರವಾದ ಶಕ್ತಿ–ಪರಾಕ್ರಮಗಳುಳ್ಳವರು. ಈ ಋಷಿ ರೂಪವನ್ನು ತೋರಿಸಿ, ನಂಬಿಸಿ, ನಿಮ್ಮ ಪ್ರಾಣಕ್ಕೆ ಅಪಾಯವನ್ನು ಉಂಟುಮಾಡಬೇಕೆಂದು ಯೋಚಿಸಿ ಬಂದಿರುತ್ತಾರೆ. ಆದುದರಿಂದ ಅವರ ಬಳಿಗೆ ನೀನು ಆಗಾಗ ಹೋಗಬೇಡ. ಅವರನ್ನು ನಂಬಲೇಬೇಡ"– ಈ ರೀತಿಯಾಗಿ ಏಕಾಂತದಲ್ಲಿ ಹೇಳಿದನು. ಆಮೇಲೆ ಹೀಗೆಂದನು.–"ಹೇಗೆ ಗೊತ್ತು ಮಾಡಿಕೊಳ್ಳುವುದು ? ಅವರು ಆಯುಧಗಳನ್ನು ಹೂತು ಇಟ್ಟಿದ್ದಾರೆ–ಆದುದರಿಂದ ಸ್ನೇಹಿತರಾದವನನ್ನು ಅವರಿರುವಲ್ಲಿಗೆ ಕಳುಹಿಸಿ ಅವರು ಪಠಿಸುವ ಸ್ಥಳದಲ್ಲಿ ಸುತ್ತಲೂ ಪರೀಕ್ಷಿಸಬೇಕು" ಎಂದು ಹೇಳಲು ರಾಜನು ಪರೀಕ್ಷಿಸುವುದಕ್ಕಾಗಿ ಸೇವಕರಿಗೆ ಆಜ್ಞೆ ಮಾಡಿದನು. ಅವರು ಹೋಗಿ ಋಷಿಗಳು ಪಠನಮಾಡುವ ಕ್ಷೇತ್ರದಲ್ಲಿ ಪರೀಕ್ಷಿಸಿ ಗಿಡದ

ಕೆೞಗೆ ಪೂೞ್ದಿರ್ದಾಯುಧಂಗಳಂ ತಂದರಸಂಗೆ ತೋಱಿದೊಡೆ ಅರಸನೆಂದಂ ರಿಸಿಯರೆಂದಿ ಱುಪೆಗಪ್ಪುದಂ ಪೊಲ್ಲದಂ ಬಗೆಯುದಪರೆನಗಹಿತಮಂ ಬಗೆವರೆ ಪೊಲ್ಲದೊರಾರಾನುಂ ಋಷಿಯರ್ಗೆ ಮುಳಿವರ್ ಪೂೞ್ದಿಟ್ಟರಕ್ಕುಮೆಂದರಸನದಂ ಕಡೆಗಣಿಸಿ ಕೆಮ್ಮಗಿರ್ದಂ ಮತ್ತೆ ಕೆಲವು ದಿವಸದಿಂ ಭಂಡಾರದ ಮನೆಯೊಳ್ ಕನ್ನಮಿಕ್ಕಿ ಭಂಡಾರದ ಪೆಡಂಕೆಗಳಂ ಪೊೞ್ದು ದ್ರವ್ಯಮಂ ಪೊನ್ನುಂ ತುಡುಗೆಗಳುಮಂ ಸಾಲಿಟ್ಟಂತಿರೆಯುಗುತ್ತಂ ನಡುವಿರುಳ್ ಕೊಂಡು ಪೋಗಿಯವರಿರ್ಪ ಬಸದಿಯೊಳಗೊಂದು ಕೋಣೆಯೊಳೊಟ್ಟಿರಿಸಿ ಬಂದು ಪೊೞ್ತಿಡೆ ಅರಸಂಗಿಂ ತೆಂದು ಪೇೞ್ದಂ ದೇವಾ ಭಂಡಾರದ ಮನೆಯೊಳ್ ಕನ್ನಮನಿಕ್ಕಿ ಭಂಡಾರಮೆಲ್ಲಮಂ ಕಳ್ದು ಕೊಂಡು ಪೋದರೆಂದು ಪೇೞ್ದೊಡರಸನಾರ್ ಕೊಂಡರಾರಯ್ಯೆಂದು ತಳಾಱಂಗೆ ಬೆಸವೇೞ್ದೊ ಡಾತನುಮಾರಯ್ದು ಬಂದು ದೇವಾ ರಿಸಿಯರ್ ಕನ್ನಮಿಕ್ಕಿ ತಮ್ಮ ಬಸದಿಯೊಳ್ ಕಸವರಮ ನೊಟ್ಟಿಟ್ಟು ಸಾಲಿಟ್ಟಂತಿರೆ ಬಸದಿವರೆಗಂ ದ್ರವ್ಯಮುಂ ಪೊನ್ನುಂ ಸಾರಬೀದಿಯಾಗಿಯುಮು ಗುತ್ತಂ ಪೋದುವೆಂದು ಪೇೞ್ದೊಡರಸನೆಂದಂ ಋಷಿಯರ್ ಶ್ರಾವಕರ್ಗೆ ಕಳ್ಳದಿರಿಂ ಪೆಱರ ವಸ್ತುವಂ ಕೊಳ್ಳದಿರಿಮೆಂದು ಬ್ರತಂಗಳಂ ಕುಡುವರ್ ತಾವೆ ಕಳ್ವರೆ ಆರಾನುಮವರ್ಗೆ

ಕೆಳಗಡೆ ಹೂತು ಇಟ್ಟಿದ್ದ ಆಯುಧಗಳನ್ನು ತಂದು ರಾಜನಿಗೆ ತೋರಿಸಿದರು. ಆಗ ರಾಜನು ಹೀಗೆಂದನು–"ಋಷಿಗಳು ಒಂದು ಇರುವೆಗಾದರೂ ಕೆಟ್ಟದನ್ನು ಬಗೆಯು ವವರಲ್ಲ. ಅವರು ನನಗೆ ಅಹಿತವಾದುದನ್ನು ಯೋಚಿಸುವರೆ? ಋಷಿಗಳ ಮೇಲೆ ಕೋಪಿಸತಕ್ಕ ಯಾರಾದರೂ ಅಲ್ಲಿ ಆಯುಧಗಳನ್ನು ಹೂಳಿ ಇಟ್ಟಿರಬಹುದು." ಈ ರೀತಿಯಾಗಿ ಹೇಳಿ ರಾಜನು ಆ ಸಂಗತಿಯನ್ನು ಅಲಕ್ಷ್ಯ ಮಾಡಿ ಸುಮ್ಮನೆ ಇದ್ದನು. ಆಮೇಲೆ, ವ್ಯಾಳಮಂತ್ರಿ ಕೆಲವು ದಿನಗಳ ನಂತರ ಕೋಶಾಗಾರದ ಮನೆಯಲ್ಲಿ ಕನ್ನ ಹಾಕಿಸಿ ಭಂಡಾರದ ದ್ರವ್ಯಗಳ ಪೆಟ್ಟಿಗೆಗಳನ್ನು ಒಡೆದು ದ್ರಮ್ಮ ನಾಣ್ಯಗಳನ್ನೂ ಚಿನ್ನ ವನ್ನೂ ಆಭರಣಗಳನ್ನೂ ದಾರಿಯುದ್ದಕ್ಕೂ ಸಾಲಾಗಿ ಸುರಿಯುತ್ತ ನಟ್ಟಿರುಳಲ್ಲಿ ಕೊಂಡು ಹೋಗಿ ಋಷಿಗಳಿರುವ ಬಸದಿಯೊಳಗೆ ಒಂದು ಕೋಣೆಯಲ್ಲಿ ರಾಶಿ ಹಾಕಿಟ್ಟು ಬಂದು, ಹೊತ್ತಾರೆ ರಾಜನಿಗೆ ಈ ರೀತಿಯಾಗಿ ಹೇಳಿದನು–"ಪ್ರಭು, ನಿಮ್ಮ ದ್ರವ್ಯಾಗಾರದ ಮನೆಯಲ್ಲಿ ಕನ್ನ ಹಾಕಿ ಭಂಡಾರವನ್ನೆಲ್ಲ ಕದ್ದುಕೊಂಡು ಹೋಗಿದ್ದಾರೆ." ಹೀಗೆ ಹೇಳಿ ದಾಗ ರಾಜನು "ಯಾರು ತೆಗೆದುಕೊಂಡರು, ವಿಚಾರಿಸು" ಎಂದು ತಳಾರ (ಪಟ್ಟಣದ ಕಾವಲುಗಾರ)ನಿಗೆ ಆಜ್ಞೆ ಮಾಡಿದನು. ತಳಾರನು ವಿಚಾರಮಾಡಿ ಬಂದು, "ಪ್ರಭುವೇ ಋಷಿಗಳು ಕನ್ನ ಹಾಕಿ ತಮ್ಮ ಬಸದಿಯಲ್ಲಿ ಚಿನ್ನವನ್ನೆಲ್ಲ ರಾಶಿ ಹಾಕಿದ್ದಾರೆ. ದ್ರಮ್ಮ ನಾಣ್ಯವೂ ಚಿನ್ನವೂ ಬಸದಿಯವರೆಗೂ ಉದುರುತ್ತ ಹೋಗಿ ದಾರಿಯು ಈ ಸಂಗತಿ ಯನ್ನು ಸಾರುವ ಬೀದಿಯಂತಾಗಿದೆ" ಎಂದು ಹೇಳಿದನು. ಆಗ ರಾಜನು ಹೀಗೆಂದನು– "ಋಷಿಗಳು ಶ್ರಾವಕರಿಗೆ–ಕಳವು ಮಾಡದಿರಿ ಬೇರೆಯವರ ವಸ್ತುವನ್ನು ತೆಗೆದು ಕೊಳ್ಳದಿರಿ ಎಂದು ವ್ರತಗಳನ್ನು ಕೊಡತಕ್ಕವರು. ಅವರು ಸ್ವತಃ ಕಳ್ಳತನ ಮಾಡು

ಮುಳಿವರಿಂ ಮಾಡಿದರೆಂದದುವಂ ಕಡೆಗಣಿಸಿ ಕಿಮ್ಮಗಿರ್ದಂ ಮತ್ತೆ ಕೆಲವು ದಿನದಿಂ ಮೇಲೆ ಸುವ್ರತೆಯೆಂಬ ಮಹಾದೇವಿಯೊಡನೆ ಮಂತ್ರಿ ಕಜ್ಜಮಂ ಸಮಕಟ್ಟಿಯೊಂದು ದಿವಸಮೊರ್ವ ಬೂತಿಂಗೆ ದ್ರಮ್ಮಮಂ ಕೊಟ್ಟೊಡಂಬಡಿಸಿ ತಲೆಯಂ ಕಿರಿಸಿ ಕರಿಯ ಕೋವಣಮನುಡಿಸಿ ಪಲ್ಗಳೊಳ್ ಕವಡಿಕೆಯಂ ಕಟ್ಟಿಸಿ ಕುಂಚಮಂ ಕೊಟ್ಟಿಂತೆಂದಂ ನೀಂ ಮಹಾದೇವಿಯ ಮಂಚಮನಂಜದೇಱಿ ಆಕೆಯೊಡನೆ ನಗುತ್ತಂ ತೆಗೞುತ್ತಮಿರೆಂದು ಕಲ್ಪಿಸಿದನನ್ನೆಗಮಿತ್ತರಸಂ ಋಷಿಯರ್ಕಳೆಲ್ಲರುಮನೂಡಿ ಕೞಿಪಿದ ಬೞಿಕ್ಕೆ ಬರ್ಪೊನನ್ನೆಗಮಾ ಬೂತುಮಾ ಪ್ರಸ್ತಾವದೊಳ್ ಪೋಗಿ ಮಹಾದೇವಿಯ ಮಂಚಮನೇಱಿರ್ದಾಗಳ್ ಅರಸಿ ಮಂಚದಿಂದಿೞಿದು ಕೈಗಳಂ ಮುಗಿದು ನಮೋಸ್ತ್ವಿದೇನೆಂದು ನುಡಿದೊಡಾತನಿಂತೆಂದಂ ನಿನಗಾಟಿಸಿ ಬೇಂಟಂಗೊಂಡು ಬಂದೆಂ ಪೆಱತೇನುಮಂ ನುಡಿಯದಿರಿತ್ತ ಬಾ ಎಂದು ಮಂಚದತ್ತ ಕರೆವುದನಿತೆಲ್ಲಮಂ ನೃಪತಿಗೆ ಮಂತ್ರಿ ತೋಱಿ .ಇಂತೆಂದಂ ನೋಡರಸಾ ನಿಮ್ಮ ಸವಣರ ಗೊಡ್ಡಮಂ ನಿನ್ನಂ ಕೊಲಲ್ ನೆಱೆದಾಯುಧಂಗಳಂ ಪೊಱ್ಱಿಟ್ಟೊರೆಂದೊಡಂ ನಂಬಿದೆಯಿಲ್ಲ ಭಂಡಾರಮಂ ಕಳ್ದರೆಂದೊಡದಂ ನಂಬಿದೆಯಿಲ್ಲಮೀಗಳ್ ಪ್ರತ್ಯಕ್ಷಂ ನೋಡು ನಿನ್ನ ಮಹಾದೇವಿಯೊಡನೆ ಗೊಡ್ಡಮಾಡುವುದಂ ನಿನ್ನ ಪೆಂಡಿರುಮಂ ಬರ್ದುಂಕಲಿತ್ತ

•

ವರೆ ? ಯಾರಾದರೂ ಅವರ ಮೇಲೆ ಕೋಪಗೊಳ್ಳುವವರು ಇದನ್ನು ಮಾಡಿದ್ದಾರೆ"–ಎಂದು ಅದನ್ನೂ ಕಡೆಗಣಿಸಿ ಸುಮ್ಮನಿದ್ದನು. ಮತ್ತೆ ಕೆಲವು ದಿನಗಳಾದ ಮೇಲೆ, ಸುವ್ರತೆಯೆಂಬ ಮಹಾರಾಣಿಯೊಂದಿಗೆ ಮಂತ್ರಿಯು ಕಾರ್ಯವನ್ನು ವ್ಯವಸ್ಥೆಗೊಳಿಸಿ ಒಂದು ದಿವಸ ಒಬ್ಬ ವ್ಯಕ್ತಿಗೆ ಹಣವನ್ನು ಕೊಟ್ಟು ಒಪ್ಪುವಂತೆ ಮಾಡಿ ಅವನ ತಲೆಯನ್ನು ಬೋಳು ಮಾಡಿಸಿದನು. ಕಪ್ಪಾದ ಕೌಪೀನವನ್ನು ಉಡಿಸಿ, ಹಲ್ಲುಗಳಿಗೆ ಕವಡೆಗಳನ್ನು ಕಟ್ಟಿಸಿದನು. ನವಿಲುಗರಿಯ ಗೊಂಡೆಯನ್ನು ಕೈಗೆ ಕೊಟ್ಟು ಹೀಗೆಂದನು–"ನೀನು ಹೆದರದೆ ಮಹಾರಾಣಿಯ ಮಂಚವನ್ನೇರಿ ಆಕೆಯೊಂದಿಗೆ ನಗುತ್ತ ಬಯ್ಯುತ್ತ ಇರು" ಎಂದು ಹೇಳಿಕೊಟ್ಟನು. ಹೀಗಿರಲು ಇತ್ತ ರಾಜನು ಋಷಿಗಳಿಗೆಲ್ಲ ಭೋಜನವನ್ನಿತ್ತು ಕಳುಹಿಸಿ ಮೇಲೆ ಬರುತ್ತಿದ್ದನು. ಆ ವೇಳೆಗೆ, ಆ ವ್ಯಕ್ತಿ ಅದೇ ಸಂದರ್ಭದಲ್ಲಿ ಹೋಗಿ ಮಹಾರಾಣಿಯ ಮಂಚದ ಮೇಲೇರಿದನು. ಆಗ ರಾಣಿಯು ಮಂಚದಿಂದ ಇಳಿದು ಕೈಗಳನ್ನು ಮುಗಿದು "ನಮಸ್ಕಾರ, ಇದೇನು ?" ಎಂದು ಹೇಳಿದಾಗ ಆತನು–"ನಿನ್ನನ್ನು ನಾನು ಬಯಸಿ ಪ್ರೇಮವನ್ನು ಹೊಂದಿ ಬಂದಿದ್ದೇನೆ. ಬೇರೇನನ್ನೂ ಮಾತಾಡದೆ ಇತ್ತ ಬಾ" ಎಂದು ಮಂಚದ ಕಡೆಗೆ ಕರೆದನು. ಅದೆಲ್ಲವನ್ನೂ ರಾಜನಿಗೆ ಮಂತ್ರಿ ತೋರಿಸಿ ಹೀಗೆಂದನು–"ಎಲೈ ಅರಸನೇ, ನಿಮ್ಮ ಜೈನಯತಿಗಳ ಚೇಷ್ಟೆಯನ್ನು ನೋಡು. ನಿನ್ನನ್ನು ಕೊಲ್ಲುವುದಕ್ಕಾಗಿ ಸಮರ್ಥರಾಗಿ ಆಯುಧಗಳನ್ನು ಹೂಳಿ ಇಟ್ಟಿದ್ದಾರೆ ಎಂದು ನಾನು ಹೇಳಿದರೂ ನೀನು ನಂಬಲಿಲ್ಲ. ದ್ರವ್ಯಾಗಾರದಲ್ಲಿ ಕಳವು ಮಾಡಿದರೆಂದು ಹೇಳಿದಾಗ ಅದನ್ನೂ ನಂಬಲಿಲ್ಲ. ಈಗ ನಿನ್ನ ಮಹಾರಾಣಿಯೊಂದಿಗೆ ಚೇಷ್ಟೆ ಮಾಡುವುದನ್ನು ಪ್ರತ್ಯಕ್ಷವಾಗಿ ನೋಡು. ನಿನ್ನ ಹೆಂಡಿರನ್ನು ಬದುಕಲಿಕ್ಕೆ ಇವರು ಬಿಡುವವರಲ್ಲ"–ಎಂದು

ಪ್ಪುರಿಲ್ಲೆಂದು ತೋಱಿ ನುಡಿದೊಡರಸುಂ ಮುನ್ನ ಕಟ್ಟಿದ ದೋಷಮೆಲ್ಲಮನಿವರೆ ಮಾಡಿದ ರೆಂಬೊಂದು ನಂಬುಗೆ ಮನದೊಳಾಗಿ ಋಷಿಯರ್ಕಳ್ಗೆ ಕಡುಮುಳಿದು ಮಂತ್ರಿಯನಿಂತೆಂದನಿ ವರ್ಗೆ ತಕ್ಕ ನಿಗ್ರಹಮಂ ನೀನಱಿದು ಮಾಡೆಂದು ಪೇೞ್ದೊಡಾತನುಮಂತೆಗೆಯ್ವೆನೆಂದೆಳ್ಳ ಗಾಣಂಗಳೊಳಿಟ್ಟಯ್ನೂರ್ವರ್ ಋಷಿಯರ್ಕಳಂ ಪಿೞಿದು ಕೊಂದನವರುಂ ಶುಕ್ಲಧ್ಯಾನಂಗ ಳೊಳ್ ಕೂಡಿ ಮುಡಿಪಿಯನಿಬರುಂ ಸ್ವರ್ಗಂಗಳೊಳ್ ಪುಟ್ಟಿದರ್ ಮತ್ತವರೊಳಗೆ ಸ್ಕಂದ ಕುಮಾರನೆಂಬ ಋಷಿ ನಿರಪರಾಧಿಗಳಂ ನಿರ್ದೋಷಿಗಳಂ ನಿರರ್ಥಕಮೀ ಪಾತಕಂ ಕೊಂದನೆಂದು ತನ್ನಂತರಂಗದಲ್ಲಿ ಸೈರಿಸಲಾಱದೆ ತೀವ್ರ ಕೋಪಂ ಪುಟ್ಟೆ ಕೈಮಿಗೆ ಆ ಪ್ರಸ್ತಾವದೊಳ್ ತೇಜೋ ಋದ್ಧಿ ಪುಟ್ಟೆ ಘನರವದಿಂ ಬಂದರಸನುಂ ವ್ಯಾಳನೆಂಬ ಮಂತ್ರಿ ಮೊದಲಾಗಿ ಪೊೞಲೆಲ್ಲಾ ಪ್ರಜೆ ಯುಮಂ ಮತ್ತಮಾತನ ನಾಡ ಸಮಸ್ತ ಜೀವರಾಶಿಗಳೆಲ್ಲಮನೆಯ್ದೆ ಸುಟ್ಟು ತನ್ನ ಶರೀರಮುಮಂ ಭಸ್ಮಂ ಮಾಡಿ ಸುಟ್ಟು ಸತ್ತೇೞನೆಯ ನರಕಂಬೊಕ್ಕಂ ಮತ್ತಿತ್ತ ದಂಡಕನೃಪತಿಯುಮೇೞನೆಯ ನರಕದೊಳ್ ಮೂವತ್ತಮೂಱು ಸಾಗರೋಪಮಾಯುಷ್ಯಮನೊಡೆಯೊಂ ನಾರಕನಾಗಿ ಪುಟ್ಟಿ ಯಲ್ಲಿಂದಂ ಬಂದು ಸ್ವಯಂಭೂರಮಣ ಸಮುದ್ರದೊಳ್ ಮಹಾಮತ್ಸ್ಯಮಾಗಿ ಪುಟ್ಟಿ ಪಲವು

ತೋರಿಸಿ ಹೇಳಿದನು. ಆಗ ರಾಜನು ಮುಂಚೆ ಆಗಿಹೋದ ತಪ್ಪನ್ನೆಲ್ಲ ಈ ಜೈನಯತಿ ಗಳೇ ಮಾಡಿದರೆಂಬ ನಂಬಿಕೆ ತನ್ನ ಮನಸ್ಸಿನಲ್ಲಿ ಆಗಲು, ಋಷಿಗಳ ಮೇಲೆ ಬಹಳ ಸಿಟ್ಟುಗೊಂಡು ಮಂತ್ರಿಯೊಡನೆ ಹೀಗೆಂದನು–"ಇವರಿಗೆ ಯೋಗ್ಯವಾದ ದಂಡನೆಯನ್ನು ನೀನು ತಿಳಿದುಕೊಂಡು ಬೇಕಾದಂತೆ ಮಾಡು" ಎಂದು ರಾಜನು ಹೇಳಲು, "ಹಾಗೆಯೇ ಮಾಡುವೆನು" ಎಂದು ಮಂತ್ರಿ ಹೇಳಿದನು. ಅದರಂತೆ ಮಂತ್ರಿಯು ಐನೂರು ಮಂದಿ ಋಷಿಗಳನ್ನೂ ಎಳ್ಳಿನ ಗಾಣಗಳಲ್ಲಿ ಇಟ್ಟು ಅವರನ್ನೆಲ್ಲ ಹಿಂಡಿ ಕೊಂದನು. ಅವರು ಶುಕ್ಲಧ್ಯಾನಗಳಲ್ಲಿ ಕೂಡಿದವರಾಗಿ ಸತ್ತರು. ಅವರೆಲ್ಲರೂ ಸ್ವರ್ಗಗಳಲ್ಲಿ ಜನಿಸಿದರು. ಆನಂತರ, ಅವರಲ್ಲಿ ಸ್ಕಂದಕುಮಾರನೆಂಬ ಋಷಿಯು–"ಈ ಪಾಪಿ ಅಪರಾಧ ಮಾಡದವ ರನ್ನೂ ದೋಷವಿಲ್ಲದವರನ್ನೂ ನಿಷ್ಪ್ರಯೋಜಕವಾಗಿ ಕೊಂದನು" ಎಂದು ತನ್ನ ಮನಸ್ಸಿ ನಲ್ಲಿ ಸಹಿಸಲಾರದೆ ಹೆಚ್ಚಾದ ಕೋಪವುಂಟಾಗಿ ಅದು ಮಿತಿಮೀರಲು, ಆ ಸಂದರ್ಭದಲ್ಲಿ ತೇಜದ ಉನ್ನತಿಯುಂಟಾಗಿ ಗುಡುಗಿನ ಶಬ್ದದೊಂದಿಗೆ ಬಂದು ರಾಜನನ್ನೂ ವ್ಯಾಳನೆಂಬ ಮಂತ್ರಿ ಮೊದಲಾಗಿ ಪಟ್ಟಣದ ಎಲ್ಲ ಪ್ರಜೆಗಳನ್ನೂ ಅವನ ನಾಡಿನ ಎಲ್ಲ ಜೀವರಾಶಿ ಗಳನ್ನೂ ವಿಶೇಷವಾಗಿ ಸುಟ್ಟು ತನ್ನ ದೇಹವನ್ನೂ ಬೂದಿಮಾಡಿ ಸುಟ್ಟು ಸತ್ತು ಏಳನೆಯ ನರಕವನ್ನು ಪ್ರವೇಶಿಸಿದನು. ಆಮೇಲೆ ಇತ್ತ ದಂಡಕ ರಾಜನು ಏಳನೆಯ ನರಕದಲ್ಲಿ ಮೂವತ್ತಮೂರು ಸಾಗರದಷ್ಟು ಆಯುಷ್ಯವುಳ್ಳ ನರಕ ಜೀವಿಯಾಗಿ ಹುಟ್ಟಿದನು. ಅಲ್ಲಿಂದ ಬಂದು ಸ್ವಯಂಭೂರಮಣ ಸಮುದ್ರದಲ್ಲಿ ಒಂದು ದೊಡ್ಡ ಮೀನಾಗಿ ಹುಟ್ಟಿ ಹಲವು ಪ್ರಾಣಿಗಳನ್ನು ಕೊಂದು ತಿಂದು ಸತ್ತು ಏಳನೆಯ ನರಕದಲ್ಲಿ

ಜೀವಂಗಳಂ ಕೊಂದು ತಿಂದು ಸತ್ತಾಱನೆಯ ನರಕದೊಳ್ ಇರ್ಪತ್ತೆರಡು ಸಾಗರೋಪಮಾಯುಷ್ಯಮನೊಡೆಯೊಂ ನಾರಕನಾಗಿ ಪುಟ್ಟಿ ಸತ್ತು ಬಂದಿಲ್ಲಿ ಸಿಂಹಮಾಗಿ ಪುಟ್ಟಿ ಸತ್ತಯ್ದನೆಯ ನರಕದೊಳ್ ಪದಿನಯ್ದು ಸಾಗರೋಪಮಾಯುಷ್ಯಮನೊಡೆಯು ನಾರಕನಾಗಿ ಪುಟ್ಟಿ ಸತ್ತು ಬಂದಿಲ್ಲಿ ಪೆರ್ವಾವಾಗಿಪುಟ್ಟಿ ಸತ್ತು ನಾಲ್ಕನೆಯ ನರಕದೊಳ್ ಪತ್ತುಸಾಗರೋಪಮಾಯುಷ್ಯಮನೊಡೆಯು ನಾರಕನಾಗಿ ಪುಟ್ಟಿ ಸತ್ತು ಬಂದಿಲ್ಲಿ ಪುಲಿಯಾಗಿ ಪುಟ್ಟಿ ಸತ್ತು ಮೂಱನೆಯ ನರಕದೊಳ್ ಏೞು ಸಾಗರೋಪಮಾಯುಷ್ಯಮನೊಡೆಯು ನಾರಕನಾಗಿ ಪುಟ್ಟಿ ಸತ್ತು ಬಂದಿಲ್ಲಿ ಭೇರುಂಡವಕ್ಕಿಯಾಗಿ ಪುಟ್ಟಿ ಸತ್ತು ಎರಡನೆಯ ನರಕದೊಳ್ ಮೂಱು ಸಾಗರೋಪಮಾಯುಷ್ಯಮನೊಡೆಯು ನಾರಕನಾಗಿ ಪುಟ್ಟಿ ಸತ್ತು ಬಂದಿಲ್ಲಿ ಕೊಂಕನಾಗಿ ಪುಟ್ಟಿ ಪಾಪಂಗೆಯ್ದು ಸತ್ತು ಪ್ರಥಮ ನರಕದೊಳೊಂದು ಸಾಗರೋಪಮಾಯುಷ್ಯಮನೊಡೆಯು ನಾರಕನಾಗಿ ಪುಟ್ಟಿ ಸತ್ತು ಬಂದಿಲ್ಲಿ ತ್ರಸಸ್ಥಾವರಂಗಳೊಳ್ ಪುಟ್ಟಿ ಪಲಕಾಲಂ ಸಂಸಾರದುಃಖಮನನುಭವಿಸಿ ನೀಡಱಿಂದೆತ್ತಾನುಂ ಬಂದಿಲ್ಲಿ ಜಟಾಯುವೆಂಬ ಪಕ್ಕಿಯಾಗಿ ಪುಟ್ಟಿ ರಾಮದೇವನ ಸಂಸರ್ಗದಿಂ ಜಿನಧರ್ಮಮಂ ಪೆತ್ತು ಪಂಚ ನಮಸ್ಕಾರದೊಳ್ ಕೂಡಿ ಸತ್ತು ಸ್ವರ್ಗದೊಳ್ ಪುಟ್ಟಿತ್ತು ಮತ್ತೆ ಪೆಱರುಂ ಸಂನ್ಯಸನಂ

ಇಪ್ಪತ್ತೆರಡು ಸಾಗರಕ್ಕೆ ಸಮಾನವಾದ ಆಯುಷ್ಯವುಳ್ಳ ನರಕ ಜೀವಿಯಾಗಿ ಹುಟ್ಟಿತು. ಅದು ಅಲ್ಲಿ ಸತ್ತು ಇಲ್ಲಿಗೆ ಬಂದು ಸಿಂಹವಾಗಿ ಹುಟ್ಟಿ ಸತ್ತಿತು. ಮತ್ತೆ ಐದನೆಯ ನರಕದಲ್ಲಿ ಹದಿನೈದು ಸಾಗರಕ್ಕೆ ಸಮಾನವಾದ ಆಯುಷ್ಯವುಳ್ಳ ನರಕ ಜೀವಿಯಾಗಿ ಹುಟ್ಟಿ ಸತ್ತ ಮೇಲೆ ಇಲ್ಲಿ ಬಂದು ಹೆಬ್ಬಾವಾಗಿ ಹುಟ್ಟಿತು. ಅದು ಸತ್ತು ನಾಲ್ಕನೆಯ ನರಕದಲ್ಲಿ ಹತ್ತು ಸಾಗರವನ್ನು ಹೋಲುವ ಆಯುಷ್ಯವನ್ನುಳ್ಳ ನರಕಜಂತುವಾಗಿ ಹುಟ್ಟಿ ಸತ್ತ ಮೇಲೆ ಇಲ್ಲಿಗೆ ಬಂದು ಹುಲಿಯಾಗಿ ಹುಟ್ಟಿ ಸತ್ತು ಮೂರನೆಯ ನರಕದಲ್ಲಿ ಏಳು ಸಾಗರೋಪಮ ಆಯುಷ್ಯವಿರತಕ್ಕ ನರಕ ಜೀವಿಯಾಗಿ ಹುಟ್ಟಿ ಸತ್ತು ಬಂದು ಇಲ್ಲಿ ಭೇರುಂಡ ಪಕ್ಷಿಯಾಯಿತು. ಅದು ಸತ್ತು ಎರಡನೆಯ ನರಕದಲ್ಲಿ ಮೂರುಸಾಗರ ಆಯುಷ್ಯವುಳ್ಳ ನಾರಕನಾಗಿ ಹುಟ್ಟಿ ಸತ್ತು ಇಲ್ಲಿ ಬಂದು ಡೊಂಕುಳ್ಳವನಾಗಿ ಹುಟ್ಟಿ ಪಾಪವನ್ನು ಮಾಡಿ ಸತ್ತು ಮೊದಲನೆಯ ನರಕವಲ್ಲಿ ಒಂದು ಸಾಗರ ಆಯುಷ್ಯವುಳ್ಳ ನಾರಕನಾಗಿ ಹುಟ್ಟಿ ಸತ್ತಿತು. ಆ ಜೀವಿ ಇಲ್ಲಿ ಬಂದು ಚಲನವುಳ್ಳ ಮತ್ತು ಚಲನವಿಲ್ಲದ ಜೀವಿಗಳ ಜನ್ಮದಲ್ಲಿ ಬಂದು ಹಲವುಕಾಲ ಸಂಸಾರದ ದುಃಖವನ್ನು ಅನುಭವಿಸಿ ದೀರ್ಘ ಕಾಲವಾದ ಮೇಲೆ ಹೇಗೋ ಬಂದು ಇಲ್ಲಿ ಜಟಾಯುವೆಂಬ ಪಕ್ಷಿಯಾಗಿ ಹುಟ್ಟಿತು. ಅದು ಶ್ರೀರಾಮದೇವರ ಒಡನಾಟದಿಂದ ಜೈನಧರ್ಮವನ್ನು ಪಡೆದು ಅರ್ಹಂತ, ಸಿದ್ಧ, ಆಚಾರ್ಯ, ಉಪಧ್ಯಾಯ, ಸಾಧು–ಇವರಿಗೆ ಮಾಡತಕ್ಕ ಐದು ನಮಸ್ಕಾರಗಳನ್ನು ಆಚ

ಗೆಯ್ದಿರ್ದ ಭವ್ಯರ್ಕಳ್ ಮಹೇಂದ್ರದತ್ತಂ ಮೊದಲಾಗೊಡೆಯ ಅಯ್ನೂರ್ವರ್ ಋಷಿಯರ್ಕಳ್ ಗಾಣದೊಳ್ ಪೀೞಿಸಿಕೊಂಡುದಂ ಮನದೊಳ್ ಬಗೆದು ಪಸಿವುಂ ನೀರೞ್ಕೆ ಮೊದಲಾಗೊಡೆಯ ಪರೀಷಹಂಗಳಂ ಸೈರಿಸಿ ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

ರಿಸಿ ಸತ್ತು ಸ್ವರ್ಗದಲ್ಲಿ ಹುಟ್ಟಿತು. ಅದಲ್ಲದೆ, ಸಂನ್ಯಾಸವನ್ನು ಮಾಡಿದ ಇತರ ಭವ್ಯರು ಕೂಡ, ಮಹೇಂದ್ರದತ್ತ ಮೊದಲಾಗಿ ಉಳ್ಳ ಐನೂರು ಮಂದಿ ಋಷಿಗಳು ಗಾಣದಲ್ಲಿ ಹಿಂಡಲ್ಪಟ್ಟುದನ್ನು ಮನಸ್ಸಿನಲ್ಲಿ ಭಾವಿಸಿ, ಹಸಿವು ಬಾಯಾರಿಕೆ ಮೊದಲಾಗಿ ಉಳ್ಳ ಪರೀಷಹಗಳನ್ನು ಸಹಿಸಿಕೊಂಡು ಸ್ವರ್ಗ ಮೋಕ್ಷಗಳ ಸುಖಗಳನ್ನು ಪಡೆಯಲಿ !

# ೧೮. ಚಾಣಾಕ್ಯರಿಸಿಯ ಕಥೆ

ಚಾಣಾಕ್ಯರಿಸಿಯ ಕಥೆಯಂ ಪೇೞ್ವೆಂ :

ಗಾಹೆ ॥ ಗೊಟ್ಠೇ ಪಾಓವಗದೋ ಸುಬಂಧುಣಾ ಗೊಬ್ಬರೇ ಪಳಿವಿದಹ್ಮಿ
ದಜ್ಝಂತೋ ಚಾಣಕ್ಕೋ ಪವಣ್ಣೋ ಉತ್ತಮಂ ಅಟ್ಠಂ ॥

[ ಗೊಟ್ಠೇ–ತುಱುಪಟ್ಟಿಯೊಳ್, ಪಾಓವಗದೋ–ಪ್ರಾಯೋಪಗಮನಕ್ಕೆ ಸಂದೊನಾಗಿ ಸುಬಂಧುಣಾ–ಸುಬಂಧುವೆಂಬೊಂ ಮಂತ್ರಿಯಿಂದಂ, ಗೊಬ್ಬರೇ–ಗೊಬ್ಬರದೊಳ್, ಪಳಿವಿದಹ್ಮಿ–ಉರಿಪೆ ಪಟ್ಟುದಾದೊಡೆ, ದಜ್ಝಂತೋ–ಬೇಯುತ್ತಿರ್ದೊನಾಗಿಯುಂ, ಚಾಣಕ್ಕೋ–ಚಾಣಾಕ್ಯನೆಂಬರಿಸಿ, ಪಡಿವಣ್ಣೋ ಉತ್ತಮಂ ಅಟ್ಠಂ–ಮಿಕ್ಕ ದರ್ಶನ ಜ್ಞಾನ ಚಾರಿತ್ರಂಗಳಾರಾಧನೆಯಂ ಪೊರ್ದಿದೊಂ,]

ಅದೆಂತೆಂದೊಡೆ : ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ಮಗಧೆಯೆಂಬುದು ನಾಡಲ್ಲಿ ಪಾಟಳೀಪುತ್ರಮೆಂಬುದು ಪೊಬಲದನಾಳ್ವೊಂ ನಂದವಂಶದೊಂ ಪದ್ಮನೆಂಬೊನರಸನಾತನ ಮಹಾದೇವಿ ಸುಂದರಿಯೆಂಬೊಳಾಯಿರ್ವರ್ಗಂ ಮಗಂ ಮಹಾಪದ್ಮನೆಂಬೊಂ ಮಂತ್ರಿ ಕಾಪಿಯೆಂಬೊನಾತಂಗೆರಡನೆಯ ಪೆಸರ್ ವಿಶ್ವಸೇನನೆಂಬುದಂತವರ್ಗಳಿಷ್ಟವಿಷಯ ಕಾಮಭೋಗಂಗಳನನುಭವಿಸುತ್ತಿರೆಯಿರೆ ಮತ್ತೊಂದು ದಿವಸಂ ಕಾಪಿಯೆಂಬ ಮಂತ್ರಿ ಸುಂದರಿಮಹಾದೇವಿಗೆ ಕಣ್ಬೇಟಂಗೊಂಡು ಅರಸನಂ ಕೊಂದರಸಿಯೊಳ್ ಬಾೞ್ವೆನೆಂಬ ಬಗೆಯಿಂದಂ ಪರಚಕ್ರದರಸುಗಳಂ

ಚಾಣಾಕ್ಯ ಋಷಿಯ ಕಥೆಯನ್ನು ಹೇಳುವೆನು—ಚಾಣಾಕ್ಯನೆಂಬ ಋಷಿ ಆಕಳ ಹಟ್ಟಿಯಲ್ಲಿ ಪ್ರಾಯೋಪಗಮನಕ್ಕೆ ಸಂದವನಾಗಿ ಸುಬಂಧುವೆಂಬ ಮಂತ್ರಿಯಿಂದ ಬೆರಣಿಯಲ್ಲಿ ಉರಿಸಲ್ಪಟ್ಟು ಬೇಯುತ್ತ ಶ್ರೇಷ್ಠ ದರ್ಶನ ಜ್ಞಾನ ಚಾರಿತ್ರಗಳ ಆರಾಧನೆಯನ್ನು ಮಾಡಿದನು. ಅದು ಹೇಗೆಂದರೆ—ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಮಗಧೆ ಎಂಬ ನಾಡಿನಲ್ಲಿ ಪಾಟಲೀಪುತ್ರವೆಂಬ ಪಟ್ಟಣವುಂಟು. ಅದನ್ನು ನಂದವಂಶದವನಾದ ಪದ್ಮನೆಂಬ ಅರಸನು ಆಳುತ್ತಿದ್ದನು. ಅವನ ಮಹಾರಾಣಿ ಸುಂದರಿ ಎಂಬವಳು. ಆ ಇಬ್ಬರಿಗೂ ಮಹಾಪದ್ಮನೆಂಬವನು ಮಗನು. ಕಾಪಿ ಎಂಬವನು ಮಂತ್ರಿ. ಕಾಪಿಗೆ ಎರಡನೆಯ ಹೆಸರು ವಿಶ್ವಸೇನನೆಂದು. ಅಂತು ಅವರು ಇಷ್ಟ ವಿಷಯಗಳಾದ ಕಾಮಸುಖಗಳನ್ನು ಅನುಭವಿಸುತ್ತ ಇದ್ದರು. ಅನಂತರ, ಒಂದು ದಿವಸ ಕಾಪಿ ಎಂಬ ಮಂತ್ರಿ ಸುಂದರಿ ಮಹಾದೇವಿಯನ್ನು ನೋಡಿ ಮೋಹಿತನಾಗಿ ಅರಸನನ್ನು ಕೊಂದು ಅರಸಿಯೊಂದಿಗೆ ಬಾಳುವೆನೆಂಬ ಭಾವನೆಯಿಂದ, ಶತ್ರುರಾಜ್ಯದ ರಾಜರನ್ನು ಪದ್ಮನ ಮೇಲೆ ದಂಡೆತ್ತಿ ಬರುವಂತೆ ಮಾಡಿದನು. ರಾಜನೊಡನೆ ಹೀಗೆ ಹೇಳಿದನು–"ದೇವಾ, ನಿಮ್ಮ

ಪದ್ಮನ ಮೇಗೇೞ್ವಂತಿರೆ ಮಾಡಿಯರಸನನಿಂತೆಂದಂ ದೇವಾ ನಿಮ್ಮ ಸಾರಮಪ್ಪ ದ್ರವ್ಯಮನಾರು
ಮಱಿಯದಲ್ಲಿ ಮಡಗಿ ನಾಮುಚ್ಚವಿಗ್ರಹದೊಳ್ ನಿಂದು ಕಾದುವಮೆಂದು ಪೇೞ್ದು ದ್ರವ್ಯಮ
ನಿಡುವ ಪ್ರದೇಶಮಂ ತೋರ್ಪ ನೆವದಿಂದರಸನಂ ಬಯ್ಗುರುಳಿನ ಜಾವದಾಗಳ್ ಉದ್ಯಾನವನ
ಕ್ಕೊಡಗೊಂಡು ಪೋಗಿ ಗುಂಡಿತಪ್ಪುದೊಂದು ನಾಡೆ ಕೆಸಱನೊಡೆಯ ಪೞವಾವಿಯ ತಡಿಯೊ
ಳಿಱಿದು ಕೊಂದು ಬಾವಿಯೊಳ್ ನೂಂಕಿ ದೆಸೆಗಳಂ ನೋೞ್ಪನ್ನೆಗಂ ಮರನ ಮೇಗಿರ್ದು
ಪೂಗೊಯ್ವ ವಸಂತಕನೆಂಬ ಮಾಲೆಗಾಱನರಸನ ಸಾವಂ ಕಂಡು ತನಗಂಜಿ ಪಾಯ್ದೋಡುವ
ಭರದಿಂ ಮರದಲುಗುವ ಕೊಂಬಂ ಕಂಡಾದಮಾನುಂ ಭಯಸ್ಥನಾಗಿ ವಿಶ್ವಸೇನನಿಂತೆಂದಂ

ಶ್ಲೋಕ ॥ ಯೇನೇಯಂ ಕಂಪಿತಾ ಶಾಖಾ ವಾನರೇಣ ನರೇಣ ವಾ
ಅಪಿ ವರ್ಷ ಸಹಸ್ರಾಂತಾತ್ ಮದ್ದೋಷಂ ಕಥಯಿಷ್ಯತಿ ॥

ಎಂದಿಂತು ಹೃದಯ ಸಂತಾಪ ಪರನಾಗಿ ತನ್ನ ಮನೆಗೆ ಪೋಗಿ ನೇಸರ್ಮೂಡಿದೊಡೆ ಸಾಮಂತ
ಮಹಾಸಾಮಂತರ್ಕಳೊಡನೆ ಅರಮನೆಯ ಓಲಗಕ್ಕೆ ಪೋಗಿ ಎಲ್ಲಾ ಪೋೞಿಯುಮಱಸಿಯುಱಿ
ಯರಸನಂ ಕಾಣದೆ ಕೃತಕ ದುಃಖಮನಾದಮಾನುಂ ಗೆಯ್ದು ಕೆಲದಿವಸಮಂತಿರ್ದು ಮತ್ತೆ
ಪ್ರಶಸ್ತ ದಿನ ವಾರ ನಕ್ಷತ್ರ ಮುಹೂರ್ತದೊಳ್ ಮಹಾಪದ್ಮಂಗೆ ರಾಜ್ಯಾಭಿಷೇಕಂಗೆಯ್ದು

ಬೆಲೆಬಾಳುವ ವಸ್ತುಗಳನ್ನು ಯಾರೂ ತಿಳಿಯದ ಕಡೆಯಲ್ಲಿ ಇಟ್ಟು ನಾವು ಭಾರೀ ಯುದ್ಧ
ದಲ್ಲಿ ನಿಂದು ಕಾದಾಡೋಣ". ಹೀಗೆ ಹೇಳಿ, ಅಮೂಲ್ಯವಸ್ತುಗಳನ್ನು ಬಚ್ಚಿಡುವ ಸ್ಥಳ
ವನ್ನು ತೋರಿಸುವ ನೆವದಿಂದ ರಾಜನನ್ನು ಮುಂಜಾನೆಯ ಹೊತ್ತಿನಲ್ಲಿ ಉದ್ಯಾನವನಕ್ಕೆ
ಒಡಗೂಡಿಕೊಂಡು ಹೋದನು. ಅಲ್ಲಿ ಆಳವಾಗಿರುವ ಮತ್ತು ಬಹಳ ಕೆಸರನ್ನುಳ್ಳ
ಹಳೆಯ ಬಾವಿಯ ದಡದಲ್ಲಿ ತಿವಿದುಕೊಂದು ಬಾವಿಗೆ ನೂಕಿದನು. ಆಮೇಲೆ ದಿಕ್ಕುಗಳ
ಕಡೆಗೆ ನೋಡುತ್ತಿದ್ದನು. ಆ ವೇಳೆಗೆ ಮರದ ಮೇಲಿದ್ದು ಹೂವನ್ನು ಕೊಯ್ಯುವ
ವಸಂತಕನೆಂಬ ಮಾಲೆಗಾರನು ಅರಸನ ಮರಣವನ್ನು ಕಂಡು, ವಿಶ್ವಸೇನನಿಗೆ ಹೆದರಿ
ಹಾರಿ ಓಡುವ ಭರದಲ್ಲಿ ಮರದ ಕೊಂಬೆ ಅಲುಗಾಡಿತು. ಅದನ್ನು ಕಂಡು ಬಹಳವಾಗಿ
ಹೆದರಿದವನಾಗಿ ವಿಶ್ವಸೇನನು ಹೀಗೆಂದನು—ಯಾವ ಕಪಿಯಿಂದ ಅಥವಾ ಮನುಷ್ಯ
ನಿಂದ ಈ ಮರದ ಕೊಂಬೆ ಅಲುಗಾಡಿತೋ ಅದು ಸಾವಿರ ವರ್ಷಗಳ ಕೊನೆಯವರೆ
ಗಾದರೂ ನನ್ನ ಅಪರಾಧವನ್ನು ಹೇಳುತ್ತದೆ. ಎಂದೀ ರೀತಿಯಾಗಿ ಮನಸ್ಸಿನಲ್ಲಿ ದುಃಖ
ವಶನಾಗಿ ತನ್ನ ಮನೆಗೆ ಹೋದನು. ಸೂರ್ಯೋದಯವಾದೊಡನೆ ಸಾಮಂತರು ಮಹಾ
ಸಾಮಂತರುಗಳೊಂದಿಗೆ ಅರಮನೆಯ ರಾಜಸಭೆಗೆ ಹೋದನು. ರಾಜನನ್ನು ಎಲ್ಲಾ
ಸಾಲುಗಳಲ್ಲಿಯೂ ಹುಡುಕಿ ಹುಡುಕಿ ಕಾಣದೆ, ಅತಿಶಯವಾಗಿ ಕೃತಕ ಶೋಕವನ್ನು
ಪ್ರದರ್ಶಿಸಿದನು. ಕೆಲವು ದಿವಸ ಹಾಗೆಯೇ ಇದ್ದು ಆಮೇಲೆ ಪ್ರಶಸ್ತವೆನಿಸಿದ ದಿನ, ವಾರ,
ನಕ್ಷತ್ರ ಮುಹೂರ್ತದಲ್ಲಿ ಮಹಾಪದ್ಮನಿಗೆ ರಾಜ್ಯಾಭಿಷೇಕಮಾಡಿ ರಾಜ್ಯಪಟ್ಟವನ್ನು

ಪಟ್ಟಂಗಟ್ಟಿ ಸುವ್ರತೆಯೆಂಬರಸಿಗೆ ಮಹಾದೇವಿ ಪಟ್ಟಂಗಟ್ಟಿ ಸುಂದರಿ ಮಹಾದೇವಿಯೊಡನೆ ಮಱೆವಾೞುತ್ತಿರ್ಕುಮಿಂತು ಪಲಕಾಲಂ ಸಲೆ ಮತ್ತೊಂದು ದಿವಸಂ ಮಹಾಪದ್ಮನಿಂತೆಂದು ಬಗೆದನೆನ್ನ ತಂದೆಯ ಸಾವನಿನಿತೊಂದು ಮಹಾನಗರದೊಳ್ ಆವನೊರ್ವನಱಿಯದಿರ್ಕುಮೆ ಆತನನಾರಯ್ವೆನೆಂದರಮನೆಯಿಂ ಪೊಱಮಟ್ಟು ಪೋಗಿ ನಟ್ಟನಡುವಿರುಳ್ ಮಣಿಖೇಟಕಮು ನುರದೊಳಮರ್ಚಿ ಕಿಟ್ಟ ಬಾಳ್ವೆರಸು ಮನೆಮನೆಯ ಜನಂಗಳ ನುಡಿಯಂ ಕೇಳುತ್ತಮಂತೆ ಪೋಪನ್ನೆಗಂ ವಸಂತಕನೆಂಬ ಮಾಲೆಗಾಱನ ಮನೆಯನೆಯ್ದಿ ನುಡಿಯಂ ಕೇಳಲಿರ್ದನನ್ನೆಗಂ ಆತಂ ವನಮಾಳೆಯೆಂಬ ತನ್ನ ಪೆಂಡತಿಯ ವಿಯೋಗದಿಂ ಕಡುದುಃಖದಿಂದಂ ಪೇೞ್ದುದಂ ಸಾಭಿಪ್ರಾಯ ಸಂಬಂಧಮಪ್ಪ ವಚನಮಂ ಕೇಳ್ದನದೆಂತೆನೆ

ಶ್ಲೋಕ ॥ ನೀಲೋತ್ಪಲದಳ ಶ್ಯಾಮೇ ಬಾಲೇ ನೀಲ ಸರೋರುಹೇ
ದಹ್ಯೇಽಹಂ ತ್ವದ್ಗುಣೈರ್ಭದ್ರೇ ವಿಶ್ವಂ ಶಾಖೇನ ಕಂಪಿತಾ (?) ॥

ಈ ವಾಕ್ಯಾರ್ಥಮಂ ಕೇಳ್ದರಸನರಮನೆಗೆ ಪೋಗಿ ನೇಸಮರ್ೞಡೆ ಸಭಾಮಂಟಪದೊಳ್ ಸಿಂಹಾ

ಕಟ್ಟಿ ಸುವ್ರತೆ ಎಂಬ ರಾಣಿಗೆ ಪಟ್ಟದರಾಣಿಯ ಸ್ಥಾನವನ್ನು ಕೊಟ್ಟು ವಿಶ್ವಸೇನನ ಸುಂದರಿ ಮಹಾದೇವಿಯೊಂದಿಗೆ ರಹಸ್ಯ ಸಂಬಂಧವಿಟ್ಟು ಬಾಳುತ್ತಿದ್ದನು. ಹೀಗೆ ಹಲವು ಕಾಲ ಕಳೆಯಿತು. ಒಂದು ದಿವಸ ಮಹಾಪದ್ಮನು ಈ ರೀತಿಯಾಗಿ ಯೋಚಿಸಿದನು— "ಇಷ್ಟೊಂದು ದೊಡ್ಡದಾದ ನಗರದಲ್ಲಿ ನನ್ನ ತಂದೆಯ ಮರಣದ ವಿಚಾರವನ್ನು ಯಾವನೊಬ್ಬನೂ ತಿಳಿಯದೆ ಇರಬಹುದೇ ! ತಿಳಿದವನು ಯಾವನಿದ್ದಾನೆಂದು ವಿಚಾರಿಸುವೆನು" ಎಂದು ಅರಮನೆಯಿಂದ ಹೊರಟನು. ಮಧ್ಯರಾತ್ರಿಯಲ್ಲಿ ರತ್ನಖಚಿತವಾದ ಗುರಾಣಿಯನ್ನು ಎದೆಯಲ್ಲಿ ಸೇರಿಸಿಟ್ಟುಕೊಂಡು ಒರೆಯಿಂದ ಹೊರತೆಗೆದ ಖಡ್ಗದೊಂದಿಗೆ ಇದ್ದು, ಮನೆಮನೆಯ ಜನರ ಮಾತುಗಳನ್ನು ಕೇಳುತ್ತ ಹಾಗೆಯೇ ಹೋಗುವಾಗ ವಸಂತಕನೆಂಬ ಮಾಲೆಗಾರನ ಮನೆಯ ಕಡೆ ಹೋಗಿ ಮಾತುಗಳನ್ನು ಕೇಳುವುದರಲ್ಲಿದ್ದನು. ಅಷ್ಟರಲ್ಲಿ ವಸಂತಕನು ವನಮಾಲೆ ಎಂಬ ತನ್ನ ಹೆಂಡತಿಯ ಅಗಲಿಕೆಯಿಂದ (ಸಾವಿನಿಂದ) ಉಂಟಾದ ಬಹಳ ದುಃಖದಿಂದ ಹೇಳಿದಂತಹ ವಿಶೇಷಾರ್ಥದ ಸಂಬಂಧವುಳ್ಳ ಮಾತನ್ನು ಕೇಳಿದನು. ಅದು ಹೇಗೆಂದರೆ—ಕನ್ನೈದಿಲೆಯ ಎಸಳಿನಂತೆ ಶ್ಯಾಮಲವಾಗಿರುವವಳೇ ನೀಲಿಬಣ್ಣದ ತಾವರೆಯೇ, ಬಾಲೆಯೇ, ಮಂಗಳಾಂಗಿಯೇ, ನಿನ್ನ ಗುಣಗಳಿಂದಾಗಿ ನಾನು ಸಂತಾಪಗೊಳ್ಳುತ್ತಿದ್ದೇನೆ. ಪ್ರಪಂಚವು (ವಿಶ್ವಸೇನನು) ಮರದ ಕೊಂಬೆಯಿಂದ ನಡುಕಗೊಂಡಿದೆ (ನಡುಕಗೊಂಡನು). ಈ ವಾಕ್ಯಾರ್ಥವನ್ನು ಕೇಳಿ ಮಹಾಪದ್ಮನು ಅರಮನೆಗೆ ಹೋಗಿ ಸೂರ್ಯೋದಯವಾದೊಡನೆ ಸಭಾಮಂಟಪದಲ್ಲಿ ಸಿಂಹಾಸನದ ಮೇಲೆ ಕುಳಿತು ಸಾಮಂತ

ಸನಾಸೀನನಾಗಿ ಸಾಮಂತ ಮಹಾಸಾಮಂತರ್ಕಳಿಂ ಪರಿವೇಷ್ಟಿತನಾಗಿರ್ದ್ದು ಮಾಲೆಗಾಱಂಗೆ ಬಱಿಯಟ್ಟಿ ಬರಿಸಿ ಎಮ್ಮರಸನಂ ಕೊಂದವನಂ ನೀನಱಿವೆಯಂಜದೆ ಪೇೞಲ್ಲದಿರ್ದೊಡೆ ನಿನ್ನಂ ಕೊಲಿಸಿದಪ್ಪೆನೆಂದೊಡೆ ಭಯದಿಂ ಪಿಡಿಪೆತ್ತು ಮಾತನಿಂತೆಂದು ಪೇೞ್ದಂ ದೇವಾ ಬಯ್ಗುರುಳಿನ ಜಾವದಾಗಳ್ ವಿಶ್ವಸೇನನೆಂಬ ಮಂತ್ರಿಯರಸನನುದ್ಯಾನವನಕ್ಕೊಡಗೊಂಡು ಪೋಗಿ ಬಾವಿಯ ತಡಿಯೊಳಿರ್ದಿಱಿದು ಕೊಂದು ಬಾವಿಯೊಳ್ ನೂಂಕುವುದಂ ಮರನನೇಱಿ ಪೂಗೊಯ್ಯುತಿರ್ದಾಂ ಕಂಡೆತ್ತಾನುಮೆನ್ನುಮಂ ಕೊಲ್ಗುಮೆಂದು ಭಯದಿಂ ಪಾಯ್ದೋಡಿ ಕೆಟ್ಟೆನಿದೆನ್ನ ಕಂಡ ವೃತ್ತಾಂತಮೆಂದಾಗಳಾತಂಗೆ ಮೆಚ್ಚಿ ಬಿಚ್ಚಳಿಸಿ ತನ್ನಂಗಚಿತ್ರಮುಮಂ ಕೆಲವು ಬಾೞುಮಂ ಕೊಟ್ಟಾತನಂ ಸಂತಸಂಬಡಿಸಿ ಮಂತ್ರಿಯ ಪೊಲ್ಲಮೆಯನೆಲ್ಲರ್ಗಱಿಯೆ ಪೇೞ್ದಾತನ ಪುತ್ರ ಮಿತ್ರ ಕಳತ್ರ ಸ್ವಜನ ಬಾಂಧವ ಸಹಿತಂ ಕೊಲಿಸಲ್ಬಗೆದೊಡೆ ಸಾಮಂತಾದಿಗಳ್ ಬಾರಿಸಿದೊಡನಿಬರುಮಂ ನೆಲಮನೆಯೊಳಿಕ್ಕಿ ಮಲ್ಲಲ್ ಪುಗುವನಿತು ಬಾಗಿಲಂ ಮಾಡಿ ಪ್ರತಿದಿನಕ್ಕೊಂದು ಮಲ್ಲಲ ಕೂೞುಮನೊಂದು ಮೊಗಪೆ ನೀರುಮಂ ನೆಲಮನೆಯೊಳಗಣ್ಗೆ ನೀಡಿದೊಡನಿಬರುಂ ಪಚ್ಚುಗೊಂಡುಣ್ಬರಿಂತು ಪಲದಿವಸಂಗಳ್ ಸಲೆ ಮತ್ತೊಂದು ದಿವಸಂ ಕಾಪಿ

ಮಹಾಸಾಮಂತರಿಂದ ಸುತ್ತುವರಿದವನಾಗಿದ್ದು ಮಾಲೆಗಾರನ ಬಳಿಗೆ ದೂತರನ್ನು ಕಳುಹಿಸಿ, ಅವನನ್ನು ಬರಿಸಿದನು. "ನಮ್ಮ ರಾಜನನ್ನು ಯಾರು ಕೊಂದರೆಂದು ನೀನು ತಿಳಿದಿರುವೆ, ಹೆದರದೆ ಹೇಳು. ಅಲ್ಲವಾದರೆ ನಿನ್ನನ್ನು ಕೊಲ್ಲಿಸುತ್ತೇನೆ" ಎಂದು ಹೇಳಿದನು. ಮಾಲೆಗಾರನು ಭಯಗ್ರಸ್ತನಾಗಿ ಈ ರೀತಿಯಾಗಿ ಮಾತನ್ನು ಹೇಳಿದನು—"ದೇವಾ, ಮುಂಜಾನೆಯ ಹೊತ್ತಿನಲ್ಲಿ ವಿಶ್ವಸೇನನೆಂಬ ಮಂತ್ರಿಯು ಅರಸನನ್ನು ಉದ್ಯಾನವನಕ್ಕೆ ಒಡಗೂಡಿಕೊಂಡು ಹೋಗಿ ಬಾವಿಯ ದಡದಲ್ಲಿದ್ದು ತಿವಿದುಕೊಂದು ಬಾವಿಗೆ ನೂಕಿದ್ದಾನೆ. ಮರ ಹತ್ತಿ ಹೂಗೊಯ್ಯುತ್ತಿದ್ದ ನಾನು ಅದನ್ನು ಕಂಡು ಎಲ್ಲಿಯಾದರೂ ನನ್ನನ್ನೂ ಕೊಲ್ಲುವನು ಎಂದು ಹೆದರಿಕೆಯಿಂದ ಹಾರಿ ಓಡಿ ತಪ್ಪಿಸಿಕೊಂಡೆನು. ಇದು ನಾನು ಕಂಡ ಸಂಗತಿ" ಎಂದು ಹೇಳಿದನು. ಹಾಗೆ ಹೇಳಿದ ಮಾಲೆಗಾರನಿಗೆ ರಾಜನು ಮೆಚ್ಚಿ, ವಿಶೇಷವಾಗಿ ಹೊಗಳಿ, ಸ್ವತಃ ಧರಿಸಿದ ಆಭರಣ ವಸ್ತ್ರಾದಿಗಳನ್ನೂ ಕೆಲವು ಕ್ಷೇತ್ರ (ಜಮೀನು)ಗಳನ್ನೂ ಕೊಟ್ಟು ಅವನನ್ನು ಸಂತೋಷಗೊಳಿಸಿದನು. ಮಂತ್ರಿಯ ದುಷ್ಕೃತ್ಯವನ್ನು ಎಲ್ಲರೂ ತಿಳಿಯುವಂತೆ ಹೇಳಿ ಅವನ ಮಕ್ಕಳು, ಗೆಳೆಯರು, ಹೆಂಡಿರು, ಸ್ವಜನರು, ಬಂಧುಗಳು ಸಮೇತವಾಗಿ ಅವನನ್ನು ಕೊಲ್ಲಬೇಕೆಂದು ಯೋಚಿಸಿದನು. ಆಗ ಸಾಮಂತಾದಿಗಳು ತಡೆಯಲು, ಅವರನ್ನೆಲ್ಲ ನೆಲಮನೆಯಲ್ಲಿರಿಸಿದನು. ಒಂದು ಮಣ್ಣಿನ ಮುಚ್ಚಳ (ಶ್ರಾವೆ) ಹೋಗುವಷ್ಟು ದೊಡ್ಡ ಬಾಗಿಲನ್ನು ಮಾಡಿ, ಪ್ರತಿದಿನಕ್ಕೆ ಒಂದು ಶ್ರಾವೆ ತುಂಬ ಅನ್ನವನ್ನೂ ಒಂದು ಮೊಗೆ (ಮಣ್ಣಿನ ಕುಡಿಕೆ) ನೀರನ್ನೂ ಆ ನೆಲಮನೆಯೊಳಕ್ಕೆ ಕೊಡುವಂತೆ ಮಾಡಿದನು. ಹಾಗೆ ಕೊಟ್ಟದ್ದನ್ನು ಅವರು ಅಷ್ಟು ಮಂದಿ ಪಾಲುಮಾಡಿಕೊಂಡು ಉಣ್ಣುತ್ತಿದ್ದರು. ಹೀಗೆಯೇ ಹಲವು ದಿವಸಗಳು

ತನ್ನವರನಿಂತೆಂದಂ ನಾಮಿನಿಬರುಂ ಸಾವರುಮಲ್ಲ ಬಾೞ್ವರುಮಲ್ಲೆಮ್ಮೊಳಾವನೊರ್ವಂ ನಮ್ಮ ಪಗೆಯಂ ನಿಱಿಯಲುಂ ನಂದನ ವಂಶಮುಂ ನಿರ್ಮೂಲಂ ಮಾಡಿ ಕಿಡಿಸಲುಮಾರ್ಕುಮಾತನೀ ಮಲ್ಲಲ ಕೂೞನುಣ್ಗೆಂದೊಡೆ ಕಾಪಿಯ ಮಗಂ ಸುಬಂಧುವೆಂಬೊನಾತನಿಂತೆಂದಂ ನಮ್ಮ ಪಗೆಯಂ ನಿಱಿಯಲುಂ ನಂದನವಂಶಮುಂ ನಿರ್ಮೂಳಿಸಲುಮಾರ್ಪೆನೆಂದು ಪೂಣ್ದೊಡಾತನನುಣಲ್ವೇೞ್ದು ಉೞಿದವರೆಲ್ಲಮುಣ್ಣಪಟ್ಟು ಸತ್ತರ್ ಸುಬಂಧುವೊರ್ವನುಂಡು ಬರ್ದನ್ ಇಂತು ಮೂಱು ವರ್ಷಂ ಪೋದಿಂ ಬೞಿಕ್ಕೆ ಮತ್ತಿತ್ತ ಪ್ರತ್ಯಂತವಾಸಿಗಳಪ್ಪರಸುಗಳ್ ಮುಸಗಿದೊಡೆ ಮಂತ್ರಿಯ ಗುಣಮುಂ ನೆನೆದು ಬೆಸಗೊಂಡಂ ಮಲ್ಲಲ ಕೂೞಿನಾರಾನುಮಿನ್ನುಮುಣ್ಬರೊಳರೆ ಎಂದು ಬೆಸಗೊಂಡೊಡೊಳರೆಂದು ಪೇೞ್ದೊಡೆ ಸುಬಂಧುವಂ ನೆಲಮನೆಯಿಂ ತೆಗೆಯಿಸಿ ಸನ್ಮಾನ ದಾನಂಗಳಿಂದಾತನಂ ಸತ್ಕರಿಸಿ ಕ್ಷಮೆಗೊಳಿಸಿ ಮಂತ್ರಿ ಪದಮಂ ಕೊಟ್ಟನಾತನುಂ ಪರಚಕ್ರಮುಂ ಮುಸಗಲೀಯದೆ ತನ್ನ ಬುದ್ಧಿಕ್ರಮದಿಂ ಪೂರ್ವಕ್ರಮದೊಳ್ ನಿಱಿಸಿದೊಡರಸನಾತಂಗಾದ ಮಾನುಮೊಸೆದು ತಂದೆಯ ಬಾೞಿಂದಗ್ಗಳ ಬಾೞ್ವೆಯುಂ ಮಾಡಿದಂ ಮತ್ತೆರಡನೆಯ ಮಂತ್ರಿ ಶಕಟಾಳನೆಂಬೊನಾತನ ಮಗಳ್ ನಂದವತಿಯೆಂಬೊಳಾಕೆಯುಂ ಸುಬಂಧು ಮದುವೆನಿಂದು

ಕಳೆದವು. ಆಮೇಲೆ ಒಂದು ದಿವಸ ಕಾಪಿ ತನ್ನವರೊಡನೆ ಹೀಗೆಂದನು--"ನಾವು ಇಷ್ಟೊಂದು ಮಂದಿಯೂ ಸಾಯುವವರೂ ಅಲ್ಲ ಬದುಕುವವರೂ ಅಲ್ಲ. ನಮ್ಮಲ್ಲಿ ಯಾವನೊಬ್ಬನು ನಮ್ಮ ವಿರೋಧಿಯನ್ನು ಘಾತಿಸಲೂ ನಂದನ ವಂಶವನ್ನು ನಿರ್ಮೂಲ ಮಾಡಿ ನಾಶಗೊಳಿಸಲೂ ಸಮರ್ಥನಾಗುವನೋ ಅವನು ಈ ಶ್ರಾವೆ (ಮುಚ್ಚಳ) ಅನ್ನ ವನ್ನು ಉಣ್ಣಲಿ". ಈ ಮಾತಿಗೆ ಕಾಪಿಯ ಮಗನಾದ ಸುಬಂಧುವೆಂಬಾತನು "ನಮ್ಮ ಶತ್ರುವನ್ನು ಘಾತಿಸಲೂ ನಂದನ ವಂಶವನ್ನು ನಿರ್ಮೂಲನ ಮಾಡಲೂ ನಾನು ಸಮರ್ಥನಾಗುವೆನು" ಎಂದು ಶಪಥ ಮಾಡಿದನು. ಕಾಪಿಯು ಅವನನ್ನು ಉಣ್ಣಲು ಹೇಳಿದನು. ಉಳಿದವರೆಲ್ಲ ಉಣ್ಣದೆ ಮಲಗಿ ಸತ್ತರು. ಸುಬಂಧುವೊಬ್ಬನು ಮಾತ್ರ ಊಟಮಾಡಿ ಬದುಕಿದನು. ಹೀಗೆ ಮೂರುವರ್ಷಗಳು ಕಳೆದವು. ಆಮೇಲೆ ಇತ್ತ ರಾಜ್ಯದ ಎಲ್ಲೆಗಳಲ್ಲಿ ವಾಸಮಾಡುವ ರಾಜರು ಕೆರಳಿ ಮೇಲೆ ಬಿದ್ದರು. ಆಗ ರಾಜನು ಮಂತ್ರಿಯ ಶೌರ್ಯಗುಣವನ್ನು ನೆನೆದು, "ಶ್ರಾವೆಯಲ್ಲಿ ಕೊಡುತ್ತಿದ್ದ ಅನ್ನವನ್ನು ಉಣ್ಣುತ್ತ ಬದುಕಿರುವವರು ಯಾರಾದರೂ ಇನ್ನೂ ಇರುವರೆ ?" ಎಂದು ಕೇಳಿದನು. 'ಇರುವರು' ಎಂದು ಹೇಳಲು, ಸುಬಂಧುವನ್ನು ನೆಲಮನೆಯಿಂದ ತೆಗೆಯಿಸಿ ಸನ್ಮಾನ ದಾನಗಳಿಂದ ಅವನನ್ನು ಸತ್ಕರಿಸಿ ಕ್ಷಮೆಗೊಳಿಸಿ, ಅವನಿಗೆ ಮಂತ್ರಿಪದವಿಯನ್ನು ಕೊಟ್ಟನು. ಸುಬಂಧು ಶತ್ರುರಾಜ್ಯಗಳು ಉದ್ರಿಕ್ತವಾಗಲು ಬಿಡದೆ, ತನ್ನ ಬುದ್ಧಿ ಪ್ರಯೋಗದಿಂದ ಅವನ್ನು ಹಿಂದಿನ ರೀತಿಯಲ್ಲಿಯೇ ನಿಲ್ಲಿಸಿದನು. ಅರಸನು ಅವನ ಮೇಲೆ ಬಹಳವಾಗಿ ಪ್ರೀತಿಸಿ, ಅವನ ತಂದೆಯ ವೃತ್ತಿಗಿಂತ ಅತಿಶಯವಾದ ವೃತ್ತಿಯನ್ನು ಅವನಿಗೆ ಮಾಡಿಕೊಟ್ಟನು. ಅನಂತರ, ಎರಡನೆಯ ಮಂತ್ರಿಯಾದ ಶಕಟಾಳನೆಂಬವನ ಮಗಳಾದ

ಪ್ರಧಾನಮಂತ್ರಿಯಾಗಿ ಇಷ್ಟವಿಷಯ ಕಾಮಭೋಗಂಗಳನನುಭವಿಸುತ್ತಂ ಪಲಕಾಲಂ ಸಲೆ ಮತ್ತಿತ್ತ ಮಗಧೆಯೆಂಬ ನಾಡೊಳ್ ಶಾಲ್ಮಲಿಯೆಂಬಗ್ರಹಾರದೊಳ್ ಸೋಮಶರ್ಮನೆಂಬ ಪಾರ್ವಂಗಂ ಕಪಿಳೆಯೆಂಬ ಪಾರ್ವಂತಿಗಂ ಮಗಂ ನಾಲ್ಕುದಾಡೆವೆರಸು ಪುಟ್ಟಿದೊಡಾತಂಗೆ ತಾಯುಂ ತಂದೆಯುಂ ಚಾಣಾಕ್ಯನೆಂಬ ಪೆಸರನಿಟ್ಟರ್ ಮತ್ತೆ ದಾಡೆವೆರಸು ಪುಟ್ಟಿದನೆಂಬುದಂ ನೈಮಿತ್ತಿಕಂ ಶ್ರಾವಕಂ ವಸಂತಕನೆಂಬೊಂ ಕೇಳ್ದಿಂತೆಂದಾದೇಶಂಗೆಯ್ದಂ

ಶ್ಲೋಕ॥ ಸ ಚಾಣಾಕ್ಯಶ್ಚತುರ್ದಂಷ್ಟ್ರೋ ಹ್ಯೇಷೋ ನಂದಾನ್ವಯಕ್ಷಯಃ
ರಾಜೋ ವಾ ರಾಜಮಂತ್ರೀ ವಾ ಭವಿಷ್ಯತಿ ನ ಸಂಶಯಃ ॥

ಎಂದಾದೇಶಂಗೆಯ್ದುದಂ ಚಾಣಕ್ಯನ ತಂದೆ ಕೇಳ್ದು ಕೈಸಾಣೆಗಳಿಂದಂ ನಾಲ್ಕುಂ ದಾಡೆಗಳ ನುರ್ದಿಸಿ ಕಳೆದು ಮಟ್ಟಂ ಮಾಡಿದೊಂ ಮತ್ತಂ ಚಾಣಾಕ್ಯನುಂ ಬಳೆದು ನಾಲ್ಕುವೇದಮುಂ ಮಾಱಂಗಮುಂ ಪದಿನೆಂಟು ಧರ್ಮಶಾಸ್ತ್ರಂಗಳುಂ ಮೀಮಾಂಸಾ ವ್ಯಾಕರಣಂ ಪ್ರಮಾಣಂ ಛಂದ ಮಲಂಕಾರಂ ನಿಘಂಟು ಕಾವ್ಯನಾಟಕಂ ಶಾಲಿಹೋತ್ರಂ ವೈದ್ಯ ಸಾಮುದ್ರಿಕಂ ನೀತಿಶಾಸ್ತ್ರಂ ಮೊದಲಾಗೊಡೆಯ ಶಾಸ್ತ್ರಂಗಳೆಲ್ಲಮಂ ಕಲ್ತು ಋಷಿಯರ ಪಕ್ಕದ ಧರ್ಮಮಂ ಕೇಳ್ದು ಶ್ರಾವಕ ವ್ರತಂಗಳಂ ಕೈಕೊಂಡು ಸಮ್ಯಗ್ ದೃಷ್ಟಿಯಾಗಿ ಪಲಕಾಲಂ ಸಲೆ ಮತ್ತೆ ಪಾಟಳೀಪುತ್ರಪುರಕ್ಕೆ

ನಂದವತಿ ಎಂಬವಳನ್ನು ಸುಬಂಧು ಮದುವೆಯಾಗಿ ಪ್ರಧಾನಮಂತ್ರಿಯಾಗಿ ಇಷ್ಟವಾದ ಕಾಮಸುಖಗಳನ್ನು ಅನುಭವಿಸುತ್ತ ಇರಲು ಹಲವು ಕಾಲ ಕಳೆಯಿತು. ಅನಂತರ, ಇತ್ತ ಮಗಧೆ ಎಂಬ ನಾಡಿನಲ್ಲಿ ಶಾಲ್ಮಲಿ ಎಂಬ ಅಗ್ರಹಾರದಲ್ಲಿ ಸೋಮಶರ್ಮ ನೆಂಬ ಬ್ರಾಹ್ಮಣನಿಗೂ ಕಪಿಳೆ ಎಂಬ ಬ್ರಾಹ್ಮಣಿತಿಗೂ ನಾಲ್ಕು ದಾಡೆ ಹಲ್ಲುಗಳೊಂದಿಗೆ ಒಬ್ಬ ಮಗನು ಹುಟ್ಟಿದನು. ಅವನಿಗೆ ತಾಯಿತಂದೆಗಳು ಚಾಣಾಕ್ಯನೆಂದು ಹೆಸರಿಟ್ಟರು. ದಾಡೆಗಳೊಂದಿಗೆ ಮಗನು ಹುಟ್ಟಿದನೆಂಬುದನ್ನು ಜ್ಯೋತಿಷ್ಯನಾದ ಶ್ರಾವಕನಾದ ವಸಂತಕ ನೆಂಬವನು ಕೇಳಿ ಈ ರೀತಿಯಾಗಿ ಭವಿಷ್ಯ ಹೇಳಿದನು–[ನಾಲ್ಕು ದಾಡೆಹಲ್ಲುಗಳುಳ್ಳ ಆ ಚಾಣಾಕ್ಯನಾದ ಇವನು ನಂದವಂಶಕ್ಕೆ ನಾಶಕಾರಿಯಾದವನು, ಅಲ್ಲವೆ ? ಇವನು ರಾಜ ನಾಗಲಿ, ರಾಜನನ್ನು ಕೊಲ್ಲುವವನಾಗಲಿ (ಅಥವಾ ಮಂತ್ರಿಯಾಗಲಿ) ಆಗುತ್ತಾನೆ, ಸಂದೇಹವಿಲ್ಲ ಹೀಗೆ ಭವಿಷ್ಯ ಹೇಳಿದುದನ್ನು ಚಾಣಾಕ್ಯನ ತಂದೆ ಸೋಮಶರ್ಮನು ಕೇಳಿ ಕೈಸಾಣೆಗಳಿಂದ ನಾಲ್ಕು ದಾಡೆಗಳನ್ನೂ ಉಜ್ಜಿಸಿ ತೆಗೆದು ಮಟ್ಟಮಾಡಿದನು. ಆಮೇಲೆ ಚಾಣಾಕ್ಯನು ದೊಡ್ಡವನಾಗಿ ನಾಲ್ಕು ವೇದಗಳು, ಆರು ವೇದಾಂಗಗಳು, ಹದಿನೆಂಟು ಧರ್ಮಶಾಸ್ತ್ರಗಳು, ಮೀಮಾಂಸೆ, ವ್ಯಾಕರಣ, ಪ್ರಮಾಣಶಾಸ್ತ್ರ, ಛಂದಸ್ಸು, ಅಲಂಕಾರ, ನಿಘಂಟು, ಕಾವ್ಯ, ನಾಟಕ, ಶಾಲಿಹೋತ್ರ, ವೈದ್ಯ, ಸಾಮುದ್ರಿಕ, ನೀತಿ ಶಾಸ್ತ್ರ–ಮೊದಲಾಗುಳ್ಳ ಶಾಸ್ತ್ರಗಳೆಲ್ಲವನ್ನೂ ಕಲಿತು ಋಷಿಗಳ ಬಳಿಯಲ್ಲಿ ಧರ್ಮವನ್ನು ಕೇಳಿ ಶ್ರಾವಕವ್ರತಗಳನ್ನು ಸ್ವೀಕರಿಸಿ ಸರಿಯಾದ ನಿಜಾರ ದೃಷ್ಟಿಯುಳ್ಳವನಾದನು. ಹೀಗೆ

ಪೋದೊಡಾತನ ಪಾಂಡಿತ್ಯಮುಂ ಸಮ್ಯಗ್ ದೃಷ್ಟಿಯುಪ್ಪುದುಮಂ ಭವ್ಯಾಕಾರಮುಮಂ ಶಕಟಾಳಂ ಕಂಡು ತನ್ನ ಕಿಱಿಯ ಮಗಳಂ ಯಶೋಮತಿಯೆಂಬೊಳಂ ಕೊಟ್ಟನಾತನುಮಾಕೆಯುಂ ಮದುವೆ ನಿಂದು ಸುಖದಿಂ ಕಾಲಂ ಸಲೆ ಮತ್ತೊಂದು ದಿವಸಂ ಶೋಣೆಯೆಂಬ ತೊಱೆಯ ತಡಿಯೊಳ್ ತನ್ನ ಕಾಲಂ ದರ್ಭಾಂಕುರಂ ನೆತ್ತರ್ವರೆ ಕೊಂಡೊಡೆ ಮುಳಿದದನಗುಟ್ಟಿ ಸುಡುವೊನಂ ಸುಬಂಧು ಕಂಡು ತತ್ಸಂಬಂಧಮೆಲ್ಲಮಂ ಬೆಸಗೊಂಡೊಡೆ ಸ್ವವೈರಿ ವಿಧ್ವಂಸನಂ ಗೆಯ್ದಪ್ಪೆನೆಂದಱಿಯೆ ಪೇೞ್ದೊಡೆ ಸುಬಂಧು ಮುನ್ನಾದೇಶಮಂ ಕೇಳ್ದನಪ್ಪುದಱಿಂದಿಂತೆಂದಂ

ಶ್ಲೋಕ ॥ ಸ ಚಾಣಾಕ್ಯಶ್ಚತುರ್ದಂಷ್ಟ್ರೋಹ್ಯೇಷೋ ನಂದಾನ್ವಯಕ್ಷಯಃ
ರಾಜೋ ವಾ ರಾಜಮಂತ್ರೀ ವಾ ಭವಿಷ್ಯತಿ ನ ಸಂಶಯಃ ॥

ಎಂಬ ಶ್ಲೋಕಾರ್ಥಮಂ ಮನದೊಳ್ ಬಗೆದು ಸಹಾಯನಂ ಪೆತ್ತೆನೆಂದೊಸೆದುಮಾತನ ಬುದ್ಧಿಯುಂ ಪರೀಕ್ಷಿಸಲ್ವೇಡಿ ಭಟ್ಟಮಂಡಪದೊಳೀ ಶ್ಲೋಕಮಂ ಬರೆದು ಪೋದಂ

ಶ್ಲೋಕ ॥ ಶಕ್ಯಾ ಶಕ್ತಿಸಹಸ್ರೇಣ ನೀತಿಶಾಸ್ತ್ರ ವಿಶಾರದೈಃ
ವ್ಯವಸಾಯ ದ್ವಿತೀಯೇನ ಕೃತ್ಸ್ನಾ ಜೇತುಂ ವಸುಂಧರಾ ॥

ಹಲವು ಕಾಲ ಕಳೆಯಿತು. ಆಮೇಲೆ ಅವನು ಪಾಟಲೀಪುತ್ರ ಪಟ್ಟಣಕ್ಕೆ ಹೋದನು. ಅವನ ಪಾಂಡಿತ್ಯವನ್ನೂ ಸರಿಯಾದ ವಿಚಾರ ದೃಷ್ಟಿಯುಳ್ಳವನಾದುದನ್ನೂ ಉದಾತ್ತವಾದ ರೂಪವನ್ನೂ ಶಕಟಾಳನು ಕಂಡು ತನ್ನ ಚಿಕ್ಕ ಮಗಳಾದ ಯಶೋಮತಿ ಎಂಬವಳನ್ನು ಅವನಿಗೆ ಕೊಟ್ಟನು. ಚಾಣಾಕ್ಯನು ಆಕೆಯನ್ನು ಮದುವೆಯಾಗಿ, ಸುಖದಿಂದ ಕಾಲ ಕಳೆಯುತ್ತಿದ್ದನು. ಅನಂತರ, ಒಂದು ದಿವಸ ಶೋಣೆಯೆಂಬ ನದಿಯ ತೀರದಲ್ಲಿ ಚಾಣಾಕ್ಯನ ಕಾಲನ್ನು ಒಂದು ಎಳೆಯ ದರ್ಭೆ ಚುಚ್ಚಿ ರಕ್ತ ಸುರಿಯಿತು. ಆಗ ಅವನು ಕೋಪಗೊಂಡು ಅದನ್ನು ಅಗೆದು ಕಿತ್ತು ಸುಟ್ಟುಹಾಕಿದನು. ಇದನ್ನು ಸುಬಂಧು ಕಂಡು ಅದರ ಸಂಬಂಧವನ್ನೆಲ್ಲ ಕೇಳಿದಾಗ, ಚಾಣಾಕ್ಯನು ತನ್ನ ವೈರಿಯನ್ನು ನಾಶ ಮಾಡುತ್ತೇನೆ-ಎಂದು ತಿಳಿಯುವ ಹಾಗೆ ಹೇಳಲು ಸುಬಂಧು ಹಿಂದೆ ಭವಿಷ್ಯವನ್ನು ಕೇಳಿದ್ದನಾದುದರಿಂದ ಹೀಗೆಂದನು-[ನಾಲ್ಕು ದಾಡೆಹಲ್ಲುಳ್ಳವನೂ ನಂದವಂಶನಾಶಕನೂ ಆದ ಆ ಚಾಣಾಕ್ಯನು ಇವನು. ರಾಜ ಅಥವಾ ಮಂತ್ರಿಯಾಗುವನು, ಸಂದೇಹವಿಲ್ಲ. ಈ ಶ್ಲೋಕದ ಅರ್ಥವನ್ನು ಮನಸ್ಸಿನಲ್ಲಿ ಭಾವಿಸಿ, 'ಸ್ನೇಹಿತನನ್ನು ಪಡೆದೆನು' ಎಂದು ಸಂತೋಷಪಟ್ಟನು. ಅವನ ಬುದ್ಧಿಶಕ್ತಿಯನ್ನು ಪರೀಕ್ಷಿಸಬೇಕೆಂದು ರಾಜನ ಸಭಾಮಂದಿರದಲ್ಲಿ ಈ ಕೆಳಗಿನ ಒಂದು ಶ್ಲೋಕವನ್ನು ಬರೆದು ಹೋದನು. ರಾಜನೀತಿಶಾಸ್ತ್ರದಲ್ಲಿ ಪಾರಂಗತರಾದವರಿಂದ, ಸಾವಿರಾರು ಶಕ್ತಿಗಳಿಂದ, ಉದ್ಯಮವನ್ನು ಎರಡನೆಯದಾಗಿ ಉಳ್ಳವರಿಂದ, ಪೂರ್ಣವಾಗಿ ಭೂಮಿಯನ್ನು ಗೆಲ್ಲಲು ಸಾಧ್ಯ. ಈ ಬರೆದ ಶ್ಲೋಕವನ್ನು

ಈ ಬರೆದ ಶ್ಲೋಕಮಂ ಚಾಣಾಕ್ಯನೊಂದು ದಿವಸಂ ಕಂಡಿದು ನೀತಿಶಾಸ್ತ್ರದ ಬಲ್ಮೆಯಲ್ತೆಂದದಂ ಕಿಂಟಿ ತಾನಿಂತೆಂದು ಬರೆದಂ

ಶ್ಲೋಕ ॥ ಶಕ್ಯಾಹ್ಯೇಕಶರೀರೇಣ ನೀತಿಶಾಸ್ತ್ರ ವಿಶಾರದೈಃ
ವ್ಯವಸಾಯ ದ್ವಿತೀಯೇನ ಕೃತ್ಸ್ನಾ ಜೇತುಂ ವಸುಂಧರಾ * ॥

ಅದಂ ಸುಬಂಧು ಕಂಡು ಇದನಾರ್ವರೆದರೆಂದು ಬೆಸಗೊಂಡೊಡೆ ಚಾಣಕ್ಯಂ ಬರೆದನೆಂದು ಪೇಳ್ದೊಡೆಯದಂ ಕೇಳ್ದಿದರ್ಕನುಸಾರಿಯಪ್ಪ ಬುದ್ಧಿಯುಂಟೆಂದು ಮನದೊಳ್ ಬಗೆದೊಂದು ದಿವಸಂ ತನ್ನ ಮಗಳಾ ಚೋಳಂಗಿಯೊಳ್ ಸ್ವಜನ ಬಾಂಧವಜನ ಪರಿಜನರ್ಕಳೆಲ್ಲರುಮಂ ಬರಿಸಿ ದಿವ್ಯಾಹಾರಂಗಳನೂಡಿ ವಸ್ತ್ರಾದ್ಯಾಭರಣಂಗಳಿಂ ಪೂಜಿಸಿ ಚಾಣಾಕ್ಯಂಗಂ ಯಶೋಮತಿಗಂ ದಿರ್ವರ್ಗಂ ನಿಶ್ರಾವಮಂ ತನ್ನ ಭಾರ್ಯೆಯಪ್ಪ ನಂದವತಿಯ ಕಯ್ಯೊಳಟ್ಟಿದೊಡೆ ಆಕೆಯುಂ ಕೊಂಡು ಪೋಗಿ ನಿಮಗಿರ್ವರ್ಗ್ಗಂ ನಿಶ್ರಾವಮೆಂದು ಪೇಳ್ದು ಯಶೋಮತಿಗೆ ಕೊಟ್ಟು ಪೋದೊಡೆ ಚಾಣಾಕ್ಯಂ ಮನದೊಳಿಂತೆಂದು ಬಗೆದಂ ಲೋಕದೊಳ್ ದಾರಿದ್ರ್ಯದಿಂ ಬಿಟ್ಟು

ಚಾಣಾಕ್ಯನು ಒಂದು ದಿನಸ ಕಂಡನು. ಇದು ರಾಜನೀತಿಶಾಸ್ತ್ರದ ಪ್ರೌಢಿಮೆಯೇನೂ ಅಲ್ಲ–ಎಂದು ಅವನು ಅದನ್ನು ಒರಸಿ, ಈ ರೀತಿಯಾಗಿ ಬರೆದನು– ರಾಜನೀತಿ ಪಾರಂಗತನಾದವನಿಂದ ಒಬ್ಬ ವ್ಯಕ್ತಿಯಿಂದ, ಉದ್ಯಮವನ್ನು ಎರಡನೆಯದಾಗಿ ಉಳ್ಳವನಿಂದ ಪೂರ್ಣವಾಗಿ ಭೂಮಿಯನ್ನು ಗೆಲ್ಲಲು ಸಾಧ್ಯ ಅದನ್ನು ಸುಬಂಧು ಕಂಡು ಇದನ್ನು ಯಾರು ಬರೆದವರು ?–ಎಂದು ಕೇಳಿದನು. 'ಚಾಣಾಕ್ಯನು ಬರೆದನು' ಎಂದು ಹೇಳಿದರು. ಅದನ್ನು ಕೇಳಿ–ಹೀಗೆ ಬರೆಯಬೇಕಾದರೆ ಇದಕ್ಕೆ ಅನುಗುಣವಾದ ಬುದ್ಧಿಯೂ ಆತನಿಗೆ ಇರಬೇಕು–ಎಂದು ಸುಬಂಧು ಭಾವಿಸಿದನು. ಒಂದು ದಿವಸ ತನ್ನ ಮಗಳ ರವಿಕೆ ಶಾಸ್ತ್ರದ ಸಮಾರಂಭದಲ್ಲಿ ಸುಬಂಧು ತನ್ನ ಜನರನ್ನೂ ಬಂಧುಗಳನ್ನೂ ಪರಿಜನರನ್ನೂ ಬರಮಾಡಿ, ಅವರಿಗೆಲ್ಲ ಶ್ರೇಷ್ಠವಾದ ಭೋಜನವನ್ನು ಕೊಟ್ಟು ವಸ್ತ್ರ ಆದಿಯಾಗಿ ಆಭರಣಗಳಿಂದ ಅವರನ್ನು ಪೂಜಿಸಿ (ಸತ್ಕರಿಸಿ)ದನು. ಚಾಣಾಕ್ಯನಿಗೆ ಯಶೋಮತಿಗೆ ಎಂದಿಬ್ಬರಿಗೂ ಅನ್ನದ ಗಂಜಿಯ ಕೆನೆಯನ್ನು ತನ್ನ ಮಡದಿಯಾದ ನಂದವತಿಯ ಕೈಯಲ್ಲಿ ಕಳುಹಿಸಿದನು. ಆಕೆ ತೆಗೆದುಕೊಂಡು ಹೋಗಿ–"ನಿಮಗಿಬ್ಬರಿಗೂ ಗಂಜಿಯ ಕೆನೆಯಿದೆ" ಎಂದು ಹೇಳಿ, ಅದನ್ನು ಯಶೋಮತಿಗೆ ಕೊಟ್ಟು ಹೋದಳು. ಆಗ ಚಾಣಾಕ್ಯನು ತನ್ನ ಮನಸ್ಸಿನಲ್ಲಿ ಹೀಗೆ ಭಾವಿಸಿದನು–"ಲೋಕದಲ್ಲಿ ಬಡತನ ಹೊರತಾಗಿ ದುಃಖಕರವಾದುದು

---

* ಇಂಥವೇ ಶ್ಲೋಕವು ಹರಿಷೇಣನ ಬೃಹತ್ಕಥಾಕೋಶದಲ್ಲಿಯೂ ಇದೆ (೧೪೨–೩೭)

ನರೇಣೈಕಶರೀರೇಣ ನಯಶಾಸ್ತ್ರಯುತೇನ ಚ
ವ್ಯವಸಾಯೇನ ಯುಕ್ತೇನ ಜೇತುಂ ಶಕ್ಯಾ ವಸುಂಧರಾ ॥

ಕಷ್ಟತಿಕೆಯೊಂದುಮಿಲ್ಲ ಅದುವೆ ಲೋಕದೊಳ್ ಮಹಾಪಾತಕಮೆಂತುಮೆಂತೆಂಬುದಲ್ತೆ

ವೃತ್ತ ॥ ಸಂಗಂ ನೈವ ಹಿ ಕಶ್ಚಿದೇವ ಕುರುತೇ ನಾ ಭಾಷತೇ ಬಾಂಧವಾತ್
ಸಂಪ್ರಾಪ್ತೇ ಗೃಹಮುತ್ಸವೇಽಪಿ ಗೃಹಿಭಿಃ ಸಾಮಾನ್ಯಮಾಲೋಕ್ಯತೇ
ದೂರಾದೇವ ಮಹಾಜನಃ ಪರಿಹರತ್ಯಲ್ಪಚ್ಛದಂ ಲಜ್ಜಯಾ
ಮನ್ಯೇ ನಿರ್ಧನತಾ ಪ್ರಕಾಶಮಪರಂ ಕಷ್ಟಂ ಮಹಾಪಾತಕಂ ॥

ಅದಱಿಂ ದ್ರವ್ಯಾರ್ಜನೆಗೆಯ್ವೆನೆಂಬಭಿಪ್ರಾಯದಿಂದಿರ್ಪಾತನಂ ಸುಬಂಧು ಕೇಳ್ದಱಿದೊಂದು ದಿವಸಂ ಚಾಣಾಕ್ಯನಂ ಕಂಡಿಂತೆಂದಂ ನಿಮಗೆ ದಾರಿದ್ರ್ಯಮೋಕ್ಷಮಕ್ಕುಂ ಷಷ್ಟಿಗ್ರಾಮ ಸಮನ್ವಿತಮಪ್ಪ ಅಗ್ರಾಸನಮನರಸನಂ ಬೇಡಿಕೊಂಡೊಡೆ ಸುಖದಿಂ ಬಾಳ್ವಿರೆನೆ ಆತನುಮಂತೆಗೆಯ್ವೆನೆಂದರಸನಂ ಕಂಡುಪಶ್ಲೋಕಿಸಿಯಗ್ರಾಸನಮಂ ಬೇಡಿಕೊಂಡೊಡರಸನುಂ ಮೆಚ್ಚಿ ಕೊಟ್ಟನಿಂತಗ್ರಾಸನಮನುಣುತ್ತಮಱುವತ್ತು ಬಾಡಮನಾಳುತ್ತಂ ಸುಖ ಸಂಕಥಾವಿನೋದದಿಂ ಕಾಲಂ ಸಲೆ ಮತ್ತೊಂದು ದಿವಸಂ ಸುಬಂಧು ಮಹಾಪದ್ಮನಂ ಕಿಡಿಸುವ ಬಗೆಯಿಂದಂ ನಂದನ ಕ್ರಮಾಗತರಪ್ಪ ಬ್ರಾಹ್ಮಣರ್ಕಳನಿಂತೆಂದಂ ನಿಮ್ಮೀ ಪದಮೆಂಬುದು ನಂದಮಹಾರಾಜಂ ವಿಜಯಂ

ಯಾವುದೊಂದೂ ಇಲ್ಲ. ಬಡತನವೇ ಲೋಕದಲ್ಲಿ ಮಹಾಪಾಪವು. ಹೇಗಿದ್ದರೂ ನೀತಿ ಹೀಗೆನ್ನುವುದಲ್ಲವೆ ?–ಬಡವನ ಸ್ನೇಹವನ್ನು ಯಾರೂ ಮಾಡುವುದಿಲ್ಲ. ವಿಶೇಷ ಸಮಾರಂಭದಲ್ಲಿ ಇತರರ ಮನೆಗೆ ಹೋದಾಗ ಆ ಮನೆಯವರು ಸಾಮಾನ್ಯನನ್ನಾಗಿ ನೋಡುತ್ತಾರೆ. ಅಲ್ಪವಾದ ಉಡುಪುಳ್ಳವನಾದ ಬಡವನನ್ನು ಕಂಡ ಮಹಾಜನರು ನಾಚಿಕೆಯಿಂದ ದೂರದಿಂದಲೇ ತೊಲಗಿಸಿಬಿಡುತ್ತಾರೆ. ಬಡತನವನ್ನು ಪ್ರಕಾಶ ಪಡಿಸುವುದು ಎಣೆಯಿಲ್ಲದ ದುಃಖವು ಮತ್ತು ಮಹಾಪಾಪವೆಂದು ಭಾವಿಸುತ್ತೇನೆ. ಆದುದರಿಂದ ಹಣಸಂಪಾದನೆಯನ್ನು ಮಾಡುವೆನು–ಎಂಬ ಅಭಿಪ್ರಾಯದಿಂದ ಇರತಕ್ಕ ಅವನ ವಿಷಯವಾಗಿ ಸುಬಂಧು ಕೇಳಿ ತಿಳಿದು ಒಂದು ದಿವಸ ಚಾಣಾಕ್ಯನನ್ನು ಕಂಡು ಹೀಗೆಂದನು–"ನಿಮಗೆ ಬಡತನದಿಂದ ಬಿಡುಗಡೆಯಾಗುವುದು. ನೀವು ಅರುವತ್ತು ಗ್ರಾಮಗಳಿಂದ ಕೂಡಿದ ಬ್ರಾಹ್ಮಣವೃತ್ತಿಯನ್ನು ಅರಸನನ್ನು ಬೇಡಿ ಪಡೆದುಕೊಂಡರೆ, ಸುಖದಿಂದ ಬಾಳುವಿರಿ" ಎಂದು ಹೇಳಿದನು. ಚಾಣಕ್ಯನು 'ಹಾಗೆಯೇ ಮಾಡುವೆನು' ಎಂದು ಕೊಂಡು, ರಾಜನನ್ನು ಕಂಡು ಸ್ತುತಿಮಾಡಿ ಬ್ರಾಹ್ಮಣವೃತ್ತಿಯನ್ನು ಬೇಡಿದನು. ರಾಜನು ಮೆಚ್ಚಿ ಅದನ್ನು ಕೊಟ್ಟನು. ಹೀಗೆ ಚಾಣಾಕ್ಯನು ಬ್ರಾಹ್ಮಣವೃತ್ತಿಯನ್ನು ಅನುಭವಿಸುತ್ತ ಅರುವತ್ತು ಗ್ರಾಮಗಳಿಗೆ ಅಧಿಪತಿಯಾಗಿ ಸುಖ ಸಂಕಥೆಗಳ ವಿನೋದದಿಂದ ಕಾಲವನ್ನು ಕಳೆಯುತ್ತಿದ್ದನು. ಆಮೇಲೆ ಒಂದು ದಿವಸ ಸುಬಂಧು ಮಹಾಪದ್ಮನನ್ನು ನಾಶಮಾಡುವ ಯೋಚನೆಯಿಂದ ಮಕ್ಕಳ ಕಟ್ಟಿನಿಂದ ಬಂದಿರತಕ್ಕ ಬ್ರಾಹ್ಮಣರನ್ನು ಕುರಿತು ಹೀಗೆ ಹೇಳಿದನು–"ನಿಮ್ಮ ಈ ಪದವಿಯೆಂಬುದು ಅನುಕ್ರಮವಾಗಿ ನಂದ

ನಂದನಂ ಸುನಂದನಂ ನಂದಿವರ್ಧನಂ ನಂದಂ ಶ್ರೀನಂದನಂ ಪದ್ಮಂ ಮಹಾಪದ್ಮನೆಂದಿಂತು ಒಂಬತ್ತುಂ ತಲೆವರೆಗಂ ಕ್ರಮಾಗತಂ ನಿಮಗೆ ಬಂದಗ್ರಹಾರಮಂ ಪೆಱರ್ ಕೊಂಡು ಬಾೞುತ್ತಿರೆ ನಿಮಗೆ ಕಿಮ್ಮನೆ ನೋಡುತ್ತಿಪ್ಪುದೇಂ ಕಾರಣಂ ಪೇೞಿಮೆಂದೊಡವರ್ಗಳಿಂತೆಂದರ್ ನಿಮ್ಮ ಬಲದಿಂದಮಾಮೆಮ್ಮ ಪದಮಂ ಪಡೆವೆಮೆಂದೊಡೆ ಅಂತೆಗೆಯ್ಯಿಮೆಂದೊಡವರುಮರಸಂಗಿಂತೆಂದು ಬಿನ್ನಪಂಗೆಯ್ದರ್ ಮಹಾರಾಜಾ ಕುಲಕ್ರಮಾಗತರೆಮುಂ ನಿಮ್ಮ ಪ್ರಸಾದದಿಂ ಬಾೞ್ವೆಮುಂ ಕ್ರಮದಿಂ ಬಂದುದೆಮ್ಮ ಪದಮಂ ನಿಮಗೆ ಕಿಡಿಸಲಾಗದೆಂದಾಗಳ್ ಸುಬಂಧುಮಿಂತೆಂದಂ ಕ್ಷತ್ರಿಯರ್ಗೆ ಪೂರ್ವಕ್ರಮಾಗತಮಂ ಕಿಡಿಸದೆ ಸಲಿಪುದೆ ಧರ್ಮಮೆಂದೊಡರಸನಗ್ರಾಸನದಿಂ ಚಾಣಾಕ್ಯನಂ ಪಿಂಗಿಸೆಂದೊಡಂತೆಗೆಯ್ವೆನೆಂದು ಪೋಗಿಯುಗ್ರಾಸನದೊಳುಣಲೆಂದು ಬಂದು ಮಣೆಯನೇಱಿರ್ದ್ದನನಿಂತೆಂದಂ ನಿಮಗಾದಮಾನುಂ ಮುಳಿದರಸನಿಂತೆಂದಂ ಮದವಿಹ್ವಳಿಯರಪ್ಪ ವೇಶ್ಯಾಂಗನಾಸಕ್ತ ವಿಟಜನನಿವಾಸಿ ಎನ್ನಗ್ರಾಸನಮನಾಳ್ವ ಯೋಗ್ಯನಲ್ಲದಱಿಂದಾತನನಟ್ಟಿಕಳೆಯಿಮೆಂದಟ್ಟಿದನೆಂದು . ಪೇೞ್ದು ಪಡಿಯಱನಿಂದಮೆೞ್ಚಿಯುಱಿ ಪೆಱ

ಮಹಾರಾಜ, ವಿಜಯ, ನಂದನ, ಸುನಂದನ, ನಂದಿವರ್ಧನ, ನಂದ, ಶ್ರೀನಂದನ, ಪದ್ಮ, ಮಹಾಪದ್ಮ–ಎಂದೀ ರೀತಿಯಾಗಿ ಒಂಬತ್ತು ತಲೆಗಳವರೆಗೆ ಬಂದಿದೆ. ಹೀಗೆ ಬಂದಿರತಕ್ಕ ಅಗ್ರಹಾರ (ಬ್ರಾಹ್ಮಣರಿಗೆ ಬಿಟ್ಟ ದತ್ತಿಯ ಗ್ರಾಮ)ವನ್ನು ಬೇರೆಯವರು ಪಡೆದು ಬಾಳುತ್ತಿದ್ದರೆ. ಅದನ್ನು ನೋಡಿಕೊಂಡು ಸುಮ್ಮನೆ ಇರುತ್ತಿರುವುದು ಯಾವ ಧರ್ಮ (ಸರಿಯಾದ ಕ್ರಮ) ?" ಎಂದು ಹೇಳಿದಾಗ ಅವರು ಹೀಗೆಂದರು–"ನಿಮ್ಮ ಬಲದಿಂದ ನಾವು ನಮ್ಮ ಪದವಿಯನ್ನು ಪಡೆಯುವೆವು". ಹೀಗೆ ಹೇಳಿದಾಗ 'ಹಾಗೆಯೇ ಮಾಡಿ' ಎಂದು ಸುಬಂಧುವು ಹೇಳಿದನು. ಆ ಬ್ರಾಹ್ಮಣರು ಆಗ ರಾಜನಿಗೆ ಹೀಗೆ ವಿಜ್ಞಾಪನೆ ಮಾಡಿದರು–"ಎಲೈ ಮಹಾರಾಜನೇ, ನಾವು ಕುಲ ಪರಂಪರೆಯಿಂದ ಬಂದವರಾಗಿದ್ದೇವೆ ; ಮತ್ತು ಬಾಳುವೆ ನಡೆಸುವವರಾಗಿದ್ದೇವೆ. ಅಲ್ಲದೆ, ಅನುಕ್ರಮದಿಂದ ಬಂದಿರುವ ನಮ್ಮ ಪದವಿಯನ್ನು (ಸ್ಥಿತಿಯನ್ನು) ನೀವು ಕೆಡಿಸಬಾರದು". ಆಗ ಸುಬಂಧು ಹೀಗೆ ಹೇಳಿದನು–"ಪೂರ್ವದಿಂದಲೇ ಪರಂಪರೆಯಿಂದ ಬಂದ ಅಧಿಕಾರವನ್ನು ಕೆಡಿಸದೆ ಸಲ್ಲಿಸುವುದೇ ಕ್ಷತ್ರಿಯರ ಧರ್ಮ" ಎಂದನು. ಆಗ ಮಹಾಪದ್ಮ ರಾಜನು "ಚಾಣಾಕ್ಯನನ್ನು ಅವನ ದತ್ತಿಯ ಗ್ರಾಮಗಳ ಅಧಿಕಾರದಿಂದ ತೊಲಗಿಸು". ಎಂದು ಆಜ್ಞೆ ಮಾಡಿದನು. "ಹಾಗೆಯೇ ಮಾಡುವೆನು" ಎಂದುಕೊಂಡು ಸುಬಂಧು ಹೋದನು. ಆಗ ಚಾಣಾಕ್ಯನು ತನ್ನ ದತ್ತಿಯ ಗ್ರಾಮಗಳ ಅಧಿಕಾರದಲ್ಲಿದ್ದುಕೊಂಡು, ಊಟಮಾಡುವುದಕ್ಕಾಗಿ ಬಂದುಮಣೆಯ ಮೇಲೆ ಕುಳಿತಿದ್ದನು. ಆಗ ಅವನೊಡನೆ ಸುಬಂಧು ಹೀಗೆ ಹೇಳಿದನು– "ಅರಸನು ನಿಮ್ಮ ಮೇಲೆ ಬಹಳವಾಗಿ ಕೋಪಿಸಿಕೊಂಡು ಹೀಗೆಂದಿರುವನು–ಸೊಕ್ಕಿನಿಂದ ಕವಡಿದವರಾದ ಸೂಳೆ ಹೆಣ್ಣುಗಳಲ್ಲಿ ಆಸಕ್ತರಾಗಿರುವ ವಿಟ ಜನರೊಂದಿಗೆ ವಾಸಮಾಡುವವನು (ಚಾಣಾಕ್ಯನು) ನಾನು ಕೊಟ್ಟ ಬ್ರಾಹ್ಮಣ ವೃತ್ತಿಯನ್ನು (ದತ್ತಭೂಮಿಯನ್ನು) ಅನುಭವಿಸಲಿಕ್ಕೆ

ತಲೆಯಂ ಪಿಡಿದು ನೂಂಕುತ್ತಮರಮನೆಯಿಂದಂ ಪೊಱಮಡಿಸಿಯಟ್ಟೆ ಕಳಿದೊಡಾದ
ಮಾನುಂ ಮುಳಿದಿಂತೆಂದಂ ನಂದನನಂದನನಾಗೆ ಮಾಡುವೆಂ ಸುಬಂಧುವನಬಂಧು ಮಾಡು
ವೆನೆಂದು ಪ್ರತಿಜ್ಞೆಗೆಯ್ದು ಪೊಲಲಿಂ ಪೊಱಮಟ್ಟು ಪೋಗಿ ಪನ್ನೆರಡು ವರುಷದೊಳಗೆ
ಮಹಾಪದ್ಮನಂ ಕಿಡಿಸಿದಲ್ಲದೆ ಕಾಸೆಗಳಂ ಕಳೆಯೆನೆಂದು ಜಾದಿನ ಸೀಲೆಗಳನುಟ್ಟು ಭಗವಂತ
ವೇಷಮಂ ಕೈಕೊಂಡು ಮಹೋದಕವೆಂಬ ಪೊಲಲ್ಗೆ ಪೋಗಿ ಅಲ್ಲಿರ್ದಂ ಅನ್ನೆಗಮಾ ಪೊಲಲ
ನಾಳ್ವೊಂ ಮಯೂರವಂಶದರಸಂ ಕುಮುದನೆಂಬೊನಾತನ ಮಹಾದೇವಿ ಮಂದೆಯೆಂಬೊ
ಳಾಕೆಗೆ ಗರ್ಭವಾಗಿ ಚಂದ್ರನಂ ನುಂಗುವ ಬಯಕೆಯಾಗಿ ಬಡವಾದೊಡರಸಂ ಬೆಸಗೊಂಡಾಕೆಯ
ಬಯಕೆಯಂ ತೀರ್ಚಲಾಱದೆ ಚಿಂತಾಕುಳಿತನಾಗಿರ್ಪನಮದಂ ಚಾಣಾಕ್ಯಂ ಕೇಳ್ದು ಅರಸನಂ ಕಂಡಾ
ನರಸಿಯ ಬಯಕೆಯಂ ನೆರಪುವೆನಾಯರಸಿಗೆ ಪುಟ್ಟಿದ ಕೂಸನೆನಗೀಯಲಾರ್ಪೊಡೆಂದೊಡರಸ
ನೀವೆನೆಂದೊಡರಸಿಯುಮಂ ನನ್ನಿಗೊಂಡಾಱುಮುಱಿಯುದಂತಿರೆ ನೃಪತಿಯ ಪ್ರಾಸಾದದ
ಶಿಖರದ ಮಧ್ಯಪ್ರದೇಶಮಂ ಜಾದಣದಂತಿರೆ ಛಿದ್ರಂ ಮಾಡಿ ಚಂದ್ರನಿರುಳ್ ಮಧ್ಯಾಹ್ನಮಪ್ಪ

ಯೋಗ್ಯನಲ್ಲ! ಆದುದರಿಂದ ಅವನನ್ನು ಓಡಿಸಿ ಕಳೆದು ಬಿಡಿ-ಎಂದು ಹೇಳಿ ನನ್ನನ್ನು
ಕಳುಹಿಸಿರುತ್ತಾನೆ” ಹೀಗೆ ಹೇಳಿ ಸುಬಂಧುವು ಬಾಗಿಲು ಕಾಯುವವನಿಂದಲೇ ಚಾಣಾ
ಕ್ಯನನ್ನು ಎಳೆಯಿಸಿದನು. ಅವನ ಹಿಂದಲೆಯನ್ನು ಹಿಡಿದು ತಳ್ಳುತ್ತ, ಅರಮನೆಯಿಂದ
ಹೊರಡಿಸಿ ಅಟ್ಟಿಬಿಟ್ಟನು. ಆಗ ಚಾಣಾಕ್ಯನು ಕೋಪಿಸಿ ಹೀಗೆಂದನು-” ನಂದನನ್ನು
ನಂದನಲ್ಲದವನನ್ನಾಗಿ ಮಾಡುವೆನು (ಅಂದರೆ, ನಾಶಮಾಡುವೆನು) ಸುಬಂಧುವನ್ನು
ಬಂಧುವಲ್ಲದವನನ್ನಾಗಿ ಮಾಡುವೆನು (ಅಂದರೆ, ನಿಸ್ಸಹಾಯಕಸ್ಥಿತಿಯಲ್ಲಿ ಇರುವಂತೆ
ಮಾಡುವೆನು)” ಹೀಗೆ ಪ್ರತಿಜ್ಞೆ ಮಾಡಿ ಪಟ್ಟಣದಿಂದ ಹೊರಟು ಹೋದನು. “ಹನ್ನೆರಡು
ವರ್ಷದೊಳಗಾಗಿ ಮಹಾಪದ್ಮನನ್ನು ನಾಶಮಾಡದೆ ಕಚ್ಚೆಯನ್ನೇ ತೆಗೆಯೆನು” ಎಂದು
ಕೊಂಡು ಕಾವಿಬಣ್ಣದ ವಸ್ತ್ರಗಳನ್ನು ಧರಿಸಿ ಸಂನ್ಯಾಸಿಯ ವೇಷವನ್ನು ತಾಳಿ ಮಹೋ
ದಕ ಎಂಬ ಪಟ್ಟಣಕ್ಕೆ ಹೋಗಿ ಅಲ್ಲಿದ್ದನು. ಆ ವೇಳೆಗೆ ಆ ಪಟ್ಟಣವನ್ನು ಮಯೂರ
ವಂಶದವನಾದ ಕುಮುದನೆಂಬ ರಾಜನು ಆಳುತ್ತಿದ್ದನು. ಅವನ ಮಹಾರಾಣಿ
ಮಂದೆಯೆಂಬವಳು. ಆಕೆ ಗರ್ಭಿಣಿಯಾಗಿ ಅವಳಿಗೆ ಚಂದ್ರನನ್ನು ನುಂಗಬೇಕೆಂಬ
ಬಸುರಿ ಬಯಕೆ ಉಂಟಾಯಿತು. ಈ ಬಯಕೆಯಿಂದಲೇ ಆಕೆ ಬಡವಾಗಲು,
ರಾಜನು ಕೇಳಿ, ಆಕೆಯ ಬಯಕೆಯನ್ನು ತೀರಿಸಲಾರದೆ ಚಿಂತೆಯಿಂದ ಕಲಕಿದ ಮನ
ಸ್ಸಿನವನಾದನು. ಹೀಗಿರಲು ಇದನ್ನು ಚಾಣಾಕ್ಯನು ಕೇಳಿ, ರಾಜನನ್ನು ಕಂಡು,” ಆ
ರಾಣಿಗೆ ಹುಟ್ಟಿದ ಮಗುವನ್ನು ನನಗೆ ಕೊಡುವುದಾದರೆ, ನಾನು ರಾಣಿಯ ಬಯಕೆ
ಯನ್ನು ಈಡೇರಿಸುವೆನು” ಎಂದು ಹೇಳಿದನು. ಆಗ ರಾಜನು ‘ಮಗುವನ್ನು ಕೊಡುವೆನು’
ಎನ್ನಲು, ರಾಣಿಯು ಒಪ್ಪಿಗೆಯ ಶಪಥವನ್ನು ತೆಗೆದುಕೊಂಡನು. ಚಾಣಾಕ್ಯನು
ಆಮೇಲೆ ಅರಮನೆಯ ತುದಿಯ ಭಾಗದ ಮಧ್ಯದ ಸ್ಥಳವನ್ನು ಗವಾಕ್ಷದ ಹಾಗೆ ರಂಧ್ರ

ಪೊಟ್ಟುಱೊಳಾ ಛಿದ್ರಕ್ಕಭಿಮುಖಮಾಗೆ ಪಿರಿದೊಂದು ಕಾಜಿನ ಬಟ್ಟಲೊಳ್ ಕಮ್ಮಿತಪ್ಪ ನೀರಂ ತೀವಿ ಚಂದ್ರಬಿಂಬಮಂ ನೀರೊಳ್ ಕಾಣ್ಬಂತಿರೆ ಮಾಡಿಯರಸಿಯುಂ ತೃಷ್ಣಾಭಿವೃದ್ಧಿಯ ಪ್ಪಾಹಾರಮನೂಡೆ ನೀರಡಸಿದೊಡೆ ಚಾಣಾಕ್ಯನಿಂತೆಂದಂ ಮಂತ್ರದಿಂದಾಹ್ವಾನಂಗೆಯ್ದು ತಂದೆ ಚಂದ್ರನಂ ನುಂಗು ಬಾಯೆಂದರಸಿಯುಂ ಕಣ್ಣಂ ಕಟ್ಟಿಯೊಡಗೊಂಡು ಪೋಗಿ ಕಣ್ಣ ಕಟ್ಟಂ ಬಿಟ್ಟು ಚಂದ್ರನಂ ನುಂಗೆಂದು ತೋಱಿದೊಡಾಕೆಯುಂ ಕಂಡು ರಾಗಿಸಿಯಾ ನೀರಂ ಕುಡಿದು ಬಯಕೆನೆಱೆದತ್ತು ಮತ್ತಂ ಕೆಲವು ದಿವಸದಿಂ ನವಮಾಸಂ ನೆಱೆದು ಬೆಸಲೆಯಾದ ಕೂಸಂ ದಾದಿಯುನಿಟ್ಟು ಚಾಣಾಕ್ಯಂಗೆ ಕೊಟ್ಟರಾತನುಂ ಚಂದ್ರಭುಕ್ತನೆಂದು ಪೆಸರನಿಟ್ಟು ಬಾಯ್ವೆಣ್ಣೆಯೊಡನೆ ಕಿಱಿಕಿಱಿದೆ ನಂಜನೂಡಿ ಬೞಿಕೆ ಬಳೆದೊಡಾಹಾರದೊಳೂಡಲ್ ತಗುಳ್ದಂ ಮತ್ತೆ ಪದಿನಾಱನೆಯ ಬರಿಸಮಾದಂದು ಸಾಮಂತರ್ಕಳ್ಗಮಲ್ಲಿಯ ಮಂತ್ರಿಯರ್ಕಳ್ಗಮರಸುಮಕ್ಕಳ್ಗಂ ತಳವಱರ್ಕಳ್ಗಮಿಂತೆಂದು ನುಡಿದೊಂ ಚಂದ್ರಭುಕ್ತಂಗೆ ಪೃಥ್ವಿಯೆಲ್ಲಮನಾಳ್ವ ಲಕ್ಷಣಂಗಳೊಳವು ಈತಂಗರಸುಮಾಡಿದಪ್ಪೆಂ ನಿಮಗೆಲ್ಲಮಿಲ್ಲಿಯ ಬಾೞಿಂ ಪದಿರ್ಮಡಿ ಬಾೞಂ ಮಾಡುವೆನೆಂದು ಬೋಧಿಸಿಯೊಡಗೊಂಡು ಪೋಗಿ ಮತ್ತಂ ಪೆಱರುಮಂ ನೆರಪಿ

ಮಾಡಿ, ರಾತ್ರಿ ಚಂದ್ರನು ನಡುನೆತ್ತಿಯ ಮೇಲೆ ಬರುವ ಹೊತ್ತಿನಲ್ಲಿ ಆ ರಂಧ್ರಕ್ಕೆ ಎದುರಾಗಿ ದೊಡ್ಡದಾದ ಒಂದು ಗಾಜಿನ ಬಟ್ಟಲಲ್ಲಿ ಸುಗಂಧಯುಕ್ತವಾದ ನೀರನ್ನು ತುಂಬಿ ಆ ನೀರಿನಲ್ಲಿ ಚಂದ್ರಬಿಂಬವು ಕಾಣುವಂತೆ ಮಾಡಿದನು. ರಾಣಿಗೆ ಬಾಯಾರಿಕೆ ಹೆಚ್ಚಾಗತಕ್ಕ ಆಹಾರವನ್ನು ಉಣಿಸಿ, ಆಕೆಗೆ ಬಾಯಾರಿಕೆಯಾದಾಗ ಚಾಣಕ್ಯನು ಹೀಗೆಂದನು– "ನಾನು ಮಂತ್ರದ ಮೂಲಕ ಚಂದ್ರನನ್ನು ಕರೆದು ತಂದಿದ್ದೇನೆ, ನುಂಗು ಬಾ" ಎಂದು ರಾಣಿಯ ಕಣ್ಣಿಗೆ ಬಟ್ಟೆ ಕಟ್ಟಿ, ಕರೆದುಕೊಂಡು ಹೋದನು. ಬಟ್ಟಲ ಬಳಿಯಲ್ಲಿ ಕಣ್ಣಿನ ಕಟ್ಟನ್ನು ಬಿಡಿಸಿದನು. "ಚಂದ್ರನನ್ನು ನುಂಗು" ಎಂದು ಬಟ್ಟಲಲ್ಲಿ ಚಂದ್ರನನ್ನು ತೋರಿಸಲು ಆಕೆ ಕಂಡು ಸಂತೋಷ ಪಟ್ಟು ನೀರನ್ನು ಕುಡಿದಳು. ಅವಳ ಬಯಕೆ ನೆರವೇರಿತು. ಆಮೇಲೆ ಕೆಲವು ದಿವಸಗಳಿಗೆ ಆಕೆಯ ಗರ್ಭಕ್ಕೆ ಒಂಬತ್ತು ತಿಂಗಳು ತುಂಬಿ ಪ್ರಸವವಾಯಿತು. ಹಾಗೆ ಹೆತ್ತ ಮಗುವನ್ನು ನೋಡಲು ದಾದಿಯನ್ನು ನೇಮಿಸಿ ಚಾಣಾಕ್ಯನಿಗೆ ಕೊಟ್ಟರು. ಅವನು ಮಗುವಿಗೆ ಚಂದ್ರಭುಕ್ತನೆಂದು ಹೆಸರಿಟ್ಟು ತಿನ್ನಿಸುವ ಬೆಣ್ಣೆಯೊಡನೆ ಕೊಂಚ ಕೊಂಚವಾಗಿಯೇ ವಿಷವನ್ನು ತಿನ್ನಿಸಿ, ಆಮೇಲೆ ದೊಡ್ಡವನಾದಾಗ ಆಹಾರದೊಂದಿಗೆ ಸ್ವಲ್ಪ ಸ್ವಲ್ಪ ವಿಷವನ್ನು ತಿನ್ನಿಸಲು ತೊಡಗಿದನು. ಆಮೇಲೆ ಹದಿನಾರನೆಯ ವರ್ಷ ವಯಸ್ಸಾದಾಗ ಸಾಮಂತರುಗಳಿಗೂ ಅಲ್ಲಿಯ ಮಂತ್ರಿಗಳಿಗೂ ರಾಜಕುಮಾರರಿಗೂ ನಗರರಕ್ಷಕರಿಗೂ ಈ ರೀತಿಯಾಗಿ ಹೇಳಿದನು– "ಚಂದ್ರಭುಕ್ತನಿಗೆ ಭೂಮಿಯನ್ನೆಲ್ಲ ಆಳುವ ಲಕ್ಷಣಗಳಿವೆ. ಈತನನ್ನು ರಾಜನಾಗಿ ಮಾಡುತ್ತೇನೆ. ನಿಮಗೆಲ್ಲ ಇಲ್ಲಿಯ ಜೀವಿತಕ್ಕಿಂತ ಹತ್ತರಷ್ಟು ಮಿಗಿಲಾದ ಜೀವಿಕೆಯನ್ನು ಮಾಡುವೆನು"– ಎಂದು ಬೋಧಿಸಿ ಅವರನ್ನು ಕೂಡಿಕೊಂಡು ಹೋದನು. ಆಮೇಲೆ ಬೇರೆಯವರನ್ನೂ

ಪಿರಿದು ತಂತ್ರಮಂ ಮಾಡಿ ಶ್ರೀಪರ್ವತದ ಮೇಗಣಬರುಮನಿರಿಸಿ ತಾನೊರ್ವನೆ ಪೋಗಿ ಪೊನ್ನಂ ಮಾಳ್ಪ ಬಗೆಯಿಂದಂ ಮದ್ದುಗಳನರಸಿ ಸುತ್ತಂ ತೊೞಲ್ವನ್ನೆಗಂ ಪರ್ವತದ ತಪ್ಪಲೊಳಾದ ಮಹಾಪಂ ಗುಂಡಿತಪ್ಪ ರಸದ ಬಾವಿಯಂ ಪೊದೆನಾರ್ಪುದಂ ಕಂಡು ಮುಚ್ಚಿದ ಶಿಲೆಯಂ ಕಳೆದು ನೋೞ್ಪನ್ನೆಗಮದಱೊಳೊರ್ವಂ ಬಾೞುತ್ತಿರ್ದ ಪುರುಷನಂ ಕಂಡು ನೀನೇಕಿಲ್ಲಿ ಪೊಕ್ಕಿರ್ದೆ ಯೆಂದು ಬೆಸಗೊಂಡೊಡಾತನೆಂದನೊರ್ವ ರಸವಾದಕನೆಂಬ ಬಚ್ಚುವನೀ ಬಾವಿಯೊಳಗಿೞಿದು ನೀನೀರಸಮಂ ಮೊಗೆದು ಕೊಟ್ಟೊಡದಱೊಳ್ ಮಾಡಿದ ಪೊನ್ನಂ ನಿನಗಮೆನಗಂ ಸಮಭಾಗ ಮಕ್ಕುಮೆಂದೊಡಾಂ ಪೊನ್ನ ಲೋಭದಿಂದಂ ಬಾವಿಯಂ ಪೊಕ್ಕು ರಸಮಂ ಸೋರೆಯಿಂ ತೀವಿ ಬೇಳ್ಪಿನಿತುಮಂ ಮೊಗೆದು ಕೊಟ್ಟೊಡಾತನೆನ್ನಂ ತೆಗೆಯದೆ ಪೋದನಂತೆ ಮುನ್ನಂ ಪಲಂಬರು ಮೀ ಮಾರ್ಗದಿಂ ಬಾವಿಯೊಳಗೆ ಪುಗಿಸಿ ರಸಮಂ ಕೊಂಡವರಂ ತೆಗೆಯದೆ ಕೊಂದನೆಂದು ಪೇೞ್ದೊಡಾಂ ನಿನ್ನಂ ತೆಗೆದು ಬಾೞ್ಪೆನೆನಗೆ ರಸಮಂ ಮೊಗೆದು ಕುಡೆಂದು ನಿಡುನೇಣಂ ಪಲವುಂ ಸೋರೆಗಳುಮಂ ತಂದು ತೀವಿಸಿ ಕೊಂಡಾತನುಮಂ ತೆಗೆದು ರಸಂ ತಿಂದ ಮೆಯ್ಗ ತಕ್ಕ ಪ್ರತೀಕಾರದ ಮದ್ದುಗಳಂ ಮಾಡಿಯಾತನಂ ಬಾೞಿಸಿ ಕಱಿದಂ ಮತ್ತಾ ರಸದಿಂದೆನಿ

ಒಟ್ಟುಗೂಡಿಸಿ ದೊಡ್ಡ ಸೈನ್ಯವನ್ನು ಸಿದ್ಧಗೊಳಿಸಿದನು. ಅವರನ್ನೆಲ್ಲ ಶ್ರೀಪರ್ವತದ ಮೇಲೆ ನಿಲ್ಲಿಸಿದನು. ತಾನೊಬ್ಬನೆ ಹೋಗಿ ಚಿನ್ನವನ್ನು ಮಾಡಬೇಕೆಂಬ ಮನಸ್ಸಿನಿಂದ ಮೂಲಿಕೆ ಮದ್ದುಗಳನ್ನು ಹುಡುಕುತ್ತ ಸುತ್ತಲೂ ಅಲೆದಾಡುತ್ತಿದ್ದನು. ಆ ಸಂದರ್ಭದಲ್ಲಿ ಪರ್ವತದ ತಪ್ಪಲಿನಲ್ಲಿ ತುಂಬಾ ಆಳವಾಗಿರುವ ಸಿದ್ಧರಸದ (ಮುಟ್ಟಿದ್ದನ್ನೆಲ್ಲ ಚಿನ್ನವಾಗಿಮಾಡುವ ರಸದ) ಬಾವಿಯನ್ನು ಕಂಡನು. ಅದು ಹುಳಿಮಜ್ಜಿಗೆಯಂತೆ ನಾತ ಬಡಿಯುತ್ತಿತ್ತು. (ಹಳಸಿದ ಮಾಂಸದ ನಾತವುಳ್ಳುದಾಗಿತ್ತು). ಅದನ್ನು ಕಂಡು, ಮುಚ್ಚಿದ ಶಿಲೆಯನ್ನು ತೆಗೆದು ಹಾಕಿ ನೋಡಿದನು. ಆಗ ಅದರಲ್ಲಿ ಬದುಕಿದ್ದ ಒಬ್ಬ ಮನುಷ್ಯನನ್ನು ಕಂಡು, "ನೀನು ಇಲ್ಲಿ ಯಾಕೆ ಹೊಕ್ಕಿದ್ದೆ?" ಎಂದು ಕೇಳಿದಾಗ ಆತನು ಹೀಗೆ ಹೇಳಿದನು– "ರಸವಾದಕನೆಂಬ ಒಬ್ಬ ಸನ್ಯಾಸಿಯು ನನ್ನೊಡನೆ–ಈ ಬಾವಿಯೊಳಗಿಳಿದು ನೀನು ಈ ರಸವನ್ನು ಮೊಗೆದು ಕೊಟ್ಟರೆ ಅದರ ಸಹಾಯದಿಂದ ಮಾಡಿದ ಚಿನ್ನವು ನಿನಗೂ ನನಗೂ ಸಮನಾದ ಪಾಲಾಗುವುದು– ಎಂದನು. ಆಗ ನಾನು ಚಿನ್ನದ ದುರಾಶೆಯಿಂದ ಬಾವಿಗಿಳಿದು ರಸವನ್ನು ಸೋರೆಬುರುಡೆಯಲ್ಲಿ ತುಂಬಿಸಿ ಬೇಕಾದಷ್ಟನ್ನು ಮೊಗೆದು ಕೊಟ್ಟೆನು. ಆಮೇಲೆ ಅವನು ನನ್ನನ್ನು ಮೇಲೆ ತೆಗೆಯದೆ ಹೋದನು, ಹಾಗೆಯೇ, ಹಿಂದೆಯೂ ಹಲವರನ್ನು ಈ ರೀತಿಯಿಂದ ಬಾವಿಯೊಳಗಿಳಿಸಿ ರಸವನ್ನು ತೆಗೆದುಕೊಂಡು, ಮತ್ತೆ ಅವರನ್ನು ತೆಗೆಯದೆ ಕೊಂದಿದ್ದಾನೆ" ಎಂದು ಹೇಳಿದನು. "ನಾನು ನಿನ್ನನ್ನು ತೆಗೆದು ಬದುಕಿಸುತ್ತೇನೆ. ನನಗೆ ರಸವನ್ನು ಮೊಗೆದು ಕೊಡು" ಎಂದು ಚಾಣಾಕ್ಯನು ಉದ್ದವಾದ ಹಗ್ಗವನ್ನೂ ಹಲವು ಸೋರೆ ಬುರುಡೆಗಳನ್ನೂ ತಂದು ಸಿದ್ಧರಸವನ್ನು ತುಂಬಿಸಿಕೊಂಡನು. ಆತನನ್ನು ಬಾವಿಯಿಂದ ಮೇಲೆತ್ತಿ, ಸಿದ್ಧರಸವು ಕೊರೆದು ಗಾಸಿಮಾಡಿದ

ತಾನುಂ ಪೊನ್ನ ರಾಶಿಯುಂ ಮಾಡಿ ಇಂತೆಂದನಾರೊರ್ವರೊಂದು ಪೇಱು ಮಣ್ಣಂ ಶ್ರೀ ಪರ್ವತದ ಮೇಗೊಟ್ಟುವರವರ್ಗೊಂದು ಪೇಱು ಪೊನ್ನಂ ಕುಡುವೆನೆಂದಾ ನಾಡೊಳ್ ಘೋಷಣೆಯಂ ಪೊಯ್ಸಿದೊಡದಂ ಕೇಳ್ದೊರ್ವನೊಕ್ಕಲಿಗನೊಂದು ಪೇಱು ಮಣ್ಣಂ ತಂದು ಶ್ರೀ ಪರ್ವತದ ಮೇಗೊಟ್ಟಿದೊಡಾತಂಗೊಂದು ಪೇಱು ಪೊನ್ನಂ ಕೊಟ್ಟೊಡದಂ ಕೇಳ್ದಾ ನಾಡೊಕ್ಕಲಿಗರೆಲ್ಲಂ ಮಣ್ಣ ಪೇಱುಂ ತಂದು ಶ್ರೀಪರ್ವತದ ಮೇಗೆ ಬಳಸಿಯುಂ ಪಿರಿದುಂ ರಾಶಿಯಾಗೊಟ್ಟೆ ಚಾಣಾಕ್ಯನುಂ ಪೊನ್ನಂ ಬೇಡಿದೊಡಿಂತೆಂದಂ ನಿಮ್ಮ ತರವೇಳ್ದೊರಾರೆಮಗೊಂದು ಪೇಱು ಮಣ್ಣು ಬಾೞ್ತೆಯಾಗೆ ತರಿಸಿಕೊಂಡೆವೀಯುೞಿದ ಮಣ್ಣೆಮಗೆ ಬಾೞ್ತೆಯಲ್ತು ನಿಮ್ಮ ನಿಮ್ಮ ತಂದ ಮಣ್ಣಂ ಕೊಂಡು ಪೋಗಿಮೆಂದೊಡವರ್ಗಳ್ ನಿರಾಶೆಯಾಗಿ ಬಿಸುಟ್ಟು ಪೋದರ್ ಮತ್ತಾ ಮಣ್ಣಿಂದಂ ಬಳಸಿಯುಂ ಕೋಂಟೆಯುಂ ಮಾಡಿ ಮಾಟ ಕೂಟ ಪ್ರಾಸಾದ ಸಹಿತಂ ಪೊೞಲಂ ಮಾಡಿ ಪೊನ್ನಂ ಕೊಟ್ಟು ಪಲವುಂ ಕುದುರೆಗಳುಮಂ ಕಟ್ಟಿಯಾಳ್ಗಳ್ಗೆ ಕೊಟ್ಟು ಪಿರಿದುಂ ತಂತ್ರಮುಂ ಮಾಡಿ ಚಂದ್ರಭುಕ್ತನನೊಡಗೊಂಡು ಪೋಗಿ ಮಹಾಪದ್ಮನ ಮೇಗೆದೞ್ತನೊಳ್ ಕಾದಿ ಕಾಳೆಗಮಂ ಸೋಲ್ತೋಡಿ ಬರ್ದುಂಕಿ ಮತ್ತಂ ತಂತ್ರಮುಂ ಮಾಡಿ

ಶರೀರಕ್ಕೆ ಯೋಗ್ಯವಾದ ಪರಿಹಾರ ಕೊಡತಕ್ಕ ಔಷಧಿಗಳನ್ನು ಮಾಡಿ, ಅವನನ್ನು ಬದುಕಿಸಿ ಕಳುಹಿಸಿದನು. ಆಮೇಲೆ ಆ ಸಿದ್ಧರಸದಿಂದ ಎಷ್ಟೋ ಚಿನ್ನದ ರಾಶಿಯನ್ನು ಮಾಡಿ, ಹೀಗೆಹೇಳಿದನು–"ಯಾರೊಬ್ಬರು ಒಂದು ಹೇರು ಮಣ್ಣನ್ನು ಶ್ರೀಪರ್ವತದ ಮೇಲೆ ತಂದು ರಾಶಿಹಾಕುವರೋ ಅವರಿಗೆ ಒಂದು ಹೇರು ಚಿನ್ನವನ್ನು ಕೊಡುವೆನು." ಈ ರೀತಿಯಾಗಿ ಆ ನಾಡಿನಲ್ಲಿ ಡಂಗುರವನ್ನು ಹೊಡೆಯಿಸಿದನು. ಅದನ್ನು ಕೇಳಿ, ಒಬ್ಬ ಒಕ್ಕಲಿಗನು ಒಂದು ಹೇರು ಮಣ್ಣನ್ನು ತಂದು ಶ್ರೀಸರ್ವತದ ಮೇಲೆ ರಾಶಿಹಾಕಿದನು. ಚಾಣಾಕ್ಯನು ಅವನಿಗೆ ಒಂದು ಹೇರು ಚಿನ್ನವನ್ನು ಕೊಟ್ಟನು. ಅದನ್ನು ಕೇಳಿದ ಆ ನಾಡಿನ ಒಕ್ಕಲಿಗರೆಲ್ಲರೂ ಮಣ್ಣಿನ ಹೊರೆಗಳನ್ನು ತಂದು ಶ್ರೀಪರ್ವತದ ಮೇಲೆ ಸುತ್ತಲೂ ದೊಡ್ಡ ರಾಶಿಯಾಗಿ ಹಾಕಿ, ಚಾಣಾಕ್ಯನೊಡನೆ– ಚಿನ್ನವನ್ನು ಕೊಡು ಎಂದು ಕೇಳಿದರು. ಆಗ ಚಾಣಾಕ್ಯನು–"ನಿಮ್ಮನ್ನು ಮಣ್ಣು ತರಲು ಹೇಳಿದವರು ಯಾರು? ನಮಗೆ ಒಂದು ಹೊರೆ ಮಣ್ಣು ಉಪಯೋಗಕ್ಕೆ ಬೇಕಾಯಿತೆಂದು ತರಿಸಿಕೊಂಡಿದ್ದೇವೆ. ಈ ಉಳಿದ ಮಣ್ಣು ನಮಗೆ ಉಪಯೋಗವಿಲ್ಲ. ನೀವು ನೀವು ತಂದ ಮಣ್ಣನ್ನು ತೆಗೆದುಕೊಂಡು ಹೋಗಿ" ಎಂದು ಹೇಳಿದನು. ಆಗ ಅವರು ನಿರಾಶೆಗೊಂಡು ಮಣ್ಣನ್ನು ಅಲ್ಲೇ ಬಿಸಾಡಿ ಹೋದರು. ಅನಂತರ ಆ ಮಣ್ಣಿನಿಂದ ಶ್ರೀಪರ್ವತದ ಸುತ್ತಲೂ ಕೋಟೆಯನ್ನು ಮಾಡಿ, ಮಾಟ–ಕೂಟ– ಅರಮನೆಗಳ ಸಮೇತವಾಗಿ ಪಟ್ಟಣವನ್ನು ನಿರ್ಮಿಸಿ, ಚಿನ್ನವನ್ನು ಕೊಟ್ಟು ಹಲವು ಕುದುರೆಗಳನ್ನೂ ತಂದು ಕಟ್ಟಿಹಾಕಿ, ಭಟರಿಗೆ ಕೊಟ್ಟು ದೊಡ್ಡ ಸೈನ್ಯವನ್ನು ಸಿದ್ಧಮಾಡಿದನು. ಚಂದ್ರಭುಕ್ತನನ್ನು ಕೂಡಿಕೊಂಡು ಹೋಗಿ ಮಹಾ ಪದ್ಮನ ಮೇಲೆ ದಾಳಿಯಿಟ್ಟನು. ಅವನೊಂದಿಗೆ ಕಾದಾಡಿ ಯುದ್ಧದಲ್ಲಿ ಸೋತು ಓಡಿಹೋಗಿ, ಬದುಕಿಕೊಂಡು

ವರುಷ ವರುಷಕ್ಕಂ ಪೋಗಿ ಕಾದಿ ಸೋಲ್ತು ಬರ್ಕುಂ ಮತ್ತೊರ್ಮೆ ಮೇಲೆಟ್ಟಿದ್ದ ಬವರಮಂ ಕಾದಿ ಸೋಲ್ವ ಕಾಳೆಗಮನಱಿದು ಚಂದ್ರಭುಕ್ತನಂ ಪೋಗಲ್ವೇೞ್ದು ತಾನುಂ ನೀಡುಂ ಬೇಗಂ ಕಾದಿ ಕಾಳೆಗಮಂ ಸೋಲ್ತು ಕೊಳ್ಗುಳದೊಳಗಿರ್ದಾಗಳ್ ಪೋಗಲ್ ಪಾಂಗಿಲ್ಲದೆ ಸಾರೆಯೊಂದು ತಾಮರೆಗೆಱೆಯುಂಟದಂ ಪೊಕ್ಕು ನೆರವಿಯೆಲ್ಲಂ ಪೋಪನ್ನೆಗಮಿರ್ದು ಇರುಳ್ ಪೊಱಮಟ್ಟು ಪಾಟಳೀಪುತ್ರಮಂ ಪೊಕ್ಕು ಪಸಿದು ಸಾಲಿಗರ ಮನೆಯಂ ಪೊಕ್ಕು ಸಾಲಿಗರ ಬಿರ್ದಿಯನುಣಲ್ವೇಡಿ ದೊಡಾಕೆಯುಂ ಕುಳ್ಳಿರು ಮಗನೆಯೆಂದೇಱಲಿಕ್ಕಿ ಕುಳ್ಳಿರಿಸಿ ಕಂಚನಿಟ್ಟು ಬಿಸಿಯಂಬಲಿಯಂ ಬಡ್ಡಿಸಿದೊಡಾತನುಂ ಪಸಿದಲಂಪಿನಿಂದಂ ಬಿಸಿಯಂಬಲಿಯಂ ಬಾಯೊಳಿಟ್ಟಾಗಳ್ ಕಯ್ಯುಂ ಬಾಯುಂ ಬೆಂದೊಡೆ ಮೆಯ್ಯನದಿರ್ದು ಕೈಯಂ ಬಿದಿರ್ದವನಂ ಬಿರ್ದಿ ಕಂಡು ನಕ್ಕಿಂತೆಂದಳ್ ಈ ಲೋಕದೊಳ್ ಮೂವರ್ ಮೂರ್ಖರಂ ಕಂಡೆನೆಂದೊಡೆ ಚಾಣಾಕ್ಯನವರಾರಬ್ಬಾಯೆಂದು ಬೆಸಗೊಂಡೊಡಾಕೆಯೆಂದಳ್ ನೀನುಂ ಸಂದನುಂ ಚಾಣಾಕ್ಯನುಮೆಂದು ಪೇೞ್ದೊಡಾತನೆಂತು ಮೂರ್ಖನೆಂದು ಬೆಸಗೊಂಡೊಡೆ ಮಗನೆ ಬುದ್ಧಿಯೊಡೆಯೊನ್ ಬಸಿಯಂಬಲಿಯಂ ಕಂಚಿನ ಕಡೆ

ಪುನಃ ಸೈನ್ಯವನ್ನು ಸಿದ್ಧಗೊಳಿಸಿ ಪ್ರತಿವರ್ಷವೂ ಹೋಗಿ ಕಾದಾಡಿಸೋತು ಬರುತ್ತಿದ್ದನು. ಹೀಗೆ ಮತ್ತೊಮ್ಮೆ ಮೇಲೆದ್ದು ಹೋರಾಡಿ ಸೋಲತಕ್ಕ ಯುದ್ಧ ಪರಿಸ್ಥಿತಿಯನ್ನರಿತು ಚಾಣಾಕ್ಯನು ಚಂದ್ರಭುಕ್ತನನ್ನು ಹೋಗಲಿಕ್ಕೆ ಹೇಳಿ ತಾನು ಬಹಳ ಹೋತ್ತು ಯುದ್ಧ ಮಾಡಿ ಸೋತು, ಯುದ್ಧರಂಗದಲ್ಲಿ ಇದ್ದಾಗ ಹೋಗಲು ಅವಕಾಶವಿಲ್ಲದೆ ಸಮೀಪದಲ್ಲೇ ಇದ್ದ ಒಂದು ತಾವರೆಯಕೆರೆಗೆ ಹೋದನು. ಸೈನ್ಯಸಮೂಹವೆಲ್ಲವೂ ಹೋಗುವವರೆಗೆ ಅಲ್ಲೇ ಇದ್ದನು. ರಾತ್ರಿಯಲ್ಲಿ ಅಲ್ಲಿಂದ ಹೊರಟನು. ಪಾಟಲೀಪುತ್ರ ನಗರವನ್ನು ಹೊಕ್ಕು ಹಸಿದವನಾಗಿ ನೇಕಾರರ ಮನೆಗೆ ಪ್ರವೇಶಿಸಿ ಅಲ್ಲಿದ್ದ ನೇಕಾರರ ಮುದುಕಿಯನ್ನು ಕುರಿತು 'ಅವ್ವಾ ಹಸಿದಿದ್ದೇನೆ, ಊಟವನ್ನು ಬಡಿಸು' ಎಂದು ಬೇಡಿಕೊಂಡನು. ಆಗ ಆಕೆ 'ಮಗನೇ, ಕುಳಿತುಕೋ' ಎಂದು ಹೇಳಿ ಕುಳಿತುಕೊಳ್ಳಲು ಮಣೆಹಾಕಿ ಅವನನ್ನು ಕುಳ್ಳಿರಿಸಿದನು. ಆಮೇಲೆ ಕಂಚಿನ ತಟ್ಟೆಯಿಟ್ಟು ಬಿಸಿಯಾದ ಅಂಬಲಿ (ಗಂಜಿ)ಯನ್ನು ಬಡಿಸಿದಳು. ಚಾಣಾಕ್ಯನು ಹಸಿದವನಾಗಿದ್ದು ಸಂತೋಷದಿಂದ ಆ ಬಿಸಿಗಂಜಿಯನ್ನು ಬಾಯಿಗಿಟ್ಟಾಗ ಅವನ ಕೈಯೂ ಬಾಯೂ ಬೆಂದುಹೋದವು. ಆಗ ಅವನು ಮೈಯನ್ನು ಅಲುಗಾಡಿಸುವುದನ್ನೂ ಕೈ ಕೊಡವುವುದನ್ನೂ ಮುದುಕಿ ಕಂಡು ನಕ್ಕು ಹೀಗೆ ಹೇಳಿದಳು. 'ಈ ಲೋಕದಲ್ಲಿ ಮೂರು ಮಂದಿ ಮೂರ್ಖರನ್ನು (ತಿಳಿಗೇಡಿಗಳನ್ನು) ಕಂಡಿದ್ದೇನೆ'- ಎಂದಾಗ ಚಾಣಾಕ್ಯನು 'ಅವರು ಯಾರು ತಾಯೇ?' ಎಂದು ಪ್ರಶ್ನಿಸಿದನು. ಅದಕ್ಕೆ ಮುದುಕಿಯು 'ನೀನೂ ನಂದನೂ ಚಾಣಾಕ್ಯನೂ' ಎಂದು ಮೂವರನ್ನು ಸೂಚಿಸಿದಳು. ಆಗ ಚಾಣಾಕ್ಯನು "ನಾನು ಹೇಗೆ ಮೂರ್ಖನು?" ಎಂದು ಕೇಳಿದಾಗ ಅವಳು- "ಮಗನೆ ಬುದ್ಧಿಯುಳ್ಳವನು ಬಿಸಿಯಾದ- ಅಂಬಲಿಯನ್ನು ತಟ್ಟೆಯ ಕಡೆಕಡೆಯಲ್ಲಿ ಸ್ವಲ್ಪಸ್ವಲ್ಪವನ್ನೇ ತಣಿಸಿಕೊಳ್ಳುತ್ತ ಊಟ ಮಾಡುತ್ತಾನೆ. ನಿನಗೆ ಹಾಗೆ ಊಟಮಾಡಲು ತಿಳಿಯು

ಕಡೆಯೊಳ್ ಕಿಱಿಕಿಱಿದನೆ ಅಱಿಸುತ್ತಮುಣ್ಗುಂ ನೀನೆಂತುಣಲಱಿಯದುದಱಿಂ ಮೂರ್ಖನೆನೆ ನಂದನೇಂ ಮೂರ್ಖನೆಂದೊಡೆ ನಂದನೆಂದೊಡಂ ಮಹಾಪದ್ಮನೆಂದೊಡಮೊರ್ವನ ಪೆಸರೆ ಆತಂ ತನ್ನ ಕೊಟ್ಟ ದಾನಮಂ ಕುಡದುದಱಿಂ ಪಗೆಗೊಂಡು ಪೋಪನಂ ತನ್ನಾರ್ಪಂದೆ ಕೊಲ್ಲದುದಱಿಂದಂ ನಂದಂ ಮೂರ್ಖಂ ಚಾಣಾಕ್ಯನೆಂತು ಮೂರ್ಖನೆಂದೊಡಿಂತೆಂದಳ್ ಚಾಣಾಕ್ಯಂ ತನ್ನ ಮುಳಿಸನೆ ನೋಟ್ಟುಂ ಕಜ್ಜಮನಱಿಯಂ ಮೂಲತಂತ್ರಮನೊಡೆಯನುಂ ಕ್ಷತ್ರಿಯನುಮಲ್ಲಂ ಪೃಥ್ವೀಶ್ವರನೊಡನೆ ಕಾದಲ್ ಬರ್ಕುಮಾತಂಗೆ ಬುದ್ಧಿಯುಳ್ಳೊಡೆ ತನ್ನ ಪಗೆವನ ನಾಡಂ ಕಿಡಿಸುವುದು ಪ್ರತಿಪಕ್ಷಮಂ ತನಗೆ ಮಾಡುವುದು ಸಾಮಂತ ಮಹಾಸಾಮಂತರ್ಕಳಂ ದ್ರವ್ಯಮಂ ಕೊಟ್ಟು ಭೇದಿಸುವುದು ತತ್ಸಂಬಂಧಿಗಳಂ ಪ್ರತಿಪಕ್ಷದಿಂದಂ ಕಿಡಿಸುವುದುಮಿಂತು ಮಾಡಿದೊಡೆ ನೃಪತಿಯೊರ್ವನೆಯುೞಿಗುಮಾಗಳ್ ತನ್ನ ಬಗೆದ ಕಾರ್ಯಸಿದ್ಧಿಯಕ್ಕುಮೆಂದೊಡಬ್ಬಾ ನಿಮ್ಮ ಪೇೞ್ದಂತುಟೆ ಕಜ್ಜಮೆಂದುಂಡು ಪೊಱಮಟ್ಟು ಶ್ರೀಪರ್ವತಕ್ಕೆ ಪೋಗಿ ಒಱಿದು ತಂತ್ರಮಂ ಮಾಡಿ ಸಾಲಿಗರ ಬಿರ್ದಿಯು ಪೇೞ್ದಂತೆ ನಂದನ ನಾಡಂ ಕಿಡಿಸಿ ಸಾಮಂತ ಮಹಾಸಾಮಂತರ್ಕಳಂ ದ್ರವ್ಯದಿಂ ಭೇದಿಸಿ ತತ್ಪ್ರತಿಪಕ್ಷಮಂ ತನ್ನಂತೆ ಮಾಡಿ ತತ್ಸಂಬಂಧಿಗಳಂ ಪ್ರತಿಪಕ್ಷದಿಂದಂ ಕಿಡಿಸಿ

ದಿರುವುದರಿಂದ ನೀನು ಮೂರ್ಖನು" ಎಂದಳು. "ನಂದನು ಹೇಗೆ ತಾನೇ ಮೂರ್ಖನು?" ಎಂದು ಆಕೆ ಕೇಳಿದಾಗ ಮುದುಕಿಯು–" ನಂದನೆಂದರೂ ಮಹಾಪದ್ಮನೆಂದರೂ ಒಬ್ಬನ ಹೆಸರೇ ಆಗಿರುತ್ತದೆ. ಆತನು ತಾನು ಕೊಟ್ಟದಾನವನ್ನು ಕೊಡದುದರಿಂದ (ದತ್ತಾಪಹಾರ ಮಾಡಿದ್ದರಿಂದ) ಮತ್ತು ದ್ವೇಷವನ್ನಿಟ್ಟುಕೊಂಡು ಹೋಗತಕ್ಕವನನ್ನು ತಾನು ಸಮರ್ಥನಾಗಿರುವಾಗಲೇ ಕೊಲ್ಲದುದರಿಂದ ನಂದನು ಮೂರ್ಖನು" ಎಂದು ಹೇಳಿದಳು. "ಚಾಣಾಕ್ಯನು ಹೇಗೆ ಮೂರ್ಖನು ?" ಎಂದಾಗ ಹೀಗೆಂದಳು–"ಚಾಣಾಕ್ಯನು ಕೋಪವನ್ನು ಮಾತ್ರ ನೋಡುತ್ತಾನೆ, ಕಾರ್ಯವನ್ನು ತಿಳಿಯನು. ಮೂಲಸೈನ್ಯವುಳ್ಳವನೂ ಅಲ್ಲ, ಕ್ಷತ್ರಿಯನೂ ಅಲ್ಲ. ಆದರೆ ಮಹಾರಾಜನೊಂದಿಗೆ ಕಾದಾಡಲು ಬರುತ್ತಾನೆ. ಅವನಿಗೆ ಬುದ್ಧಿಯಿದ್ದರೆ, ತನ್ನ ಶತ್ರುವಿನ ರಾಜ್ಯವನ್ನು ನಾಶಪಡಿಸುತ್ತಿದ್ದನು. ತನ್ನ ವಿರೋಧಪಕ್ಷದವರನ್ನು ತನ್ನವರನ್ನಾಗಿ ಮಾಡುತ್ತಿದ್ದನು. ಸಾಮಂತ ಮಹಾಸಾಮಂತರಿಗೆಲ್ಲ ಹಣವನ್ನು ಕೊಟ್ಟು ಭೇದೋಪಾಯವನ್ನು ಮಾಡುತ್ತಿದ್ದನು. ಅವನ ಸಂಬಂಧವುಳ್ಳವರನ್ನು ವಿರೋಧ ಪಕ್ಷದಲ್ಲಿ ಇಲ್ಲದಂತೆ ಮಾಡುತ್ತಿದ್ದನು. ಹೀಗೆ ಮಾಡಿದ್ದರೆ ರಾಜನೊಬ್ಬನೇ ಉಳಿಯುತ್ತಿದ್ದನು. ಆಗ ತಾನು ಭಾವಿಸಿದ ಕಾರ್ಯವು ಕೈಗೂಡುತ್ತಿತ್ತು". ಹೀಗೆ ಮುದುಕಿ ಹೇಳಿದಾಗ ಚಾಣಕ್ಯನು– "ಅವ್ವಾ, ನೀವು ಹೇಳಿದ ಹಾಗೆಯೇ ಮಾಡತಕ್ಕುದು" ಎಂದು ಹೇಳಿದನು. ಅವನು ಊಟಮಾಡಿ ಹೊರಟು ಶ್ರೀಪರ್ವತಕ್ಕೆ ಹೋಗಿ ದೊಡ್ಡಸೈನ್ಯವನ್ನು ಸಿದ್ಧಮಾಡಿದನು. ನೇಕಾರರ ಮುದುಕಿ ಹೇಳಿದ ಹಾಗೆ ನಂದನ ರಾಜ್ಯವನ್ನು ಕೆಡಿಸಿದನು. ಸಾಮಂತ ಮಹಾಸಾಮಂತರನ್ನು ಹಣ ಕೊಟ್ಟು ಬೇರ್ಪಡಿಸಿದನು. ಶತ್ರು ಪಕ್ಷದವರನ್ನು ತನ್ನ ವಶ ಮಾಡಿಕೊಂಡನು.

ನಂದನೊರ್ವನೆ ಉೞಿದಾಗಳ್ ಚಂದ್ರಭುಕ್ತಂ ಬೆಂಸು ಸಮಸ್ತ ಬಲಮೆಲ್ಲಮಂ ಕೂಡಿಕೊಂಡು
ಮೇಲೆರ್ದು ಕಾದುವಾಗಳ್ ಮಹಾಪದ್ಮನ ಸಾಮಂತ ಮಹಾಸಾಮಂತರೊಡ್ಡಣಮನೊಡ್ಡಿ
ದೊರಂ ಕಾದವೇೞ್ದೊಡಂ ಕಾದಲೊಲ್ಲದೆ ಕಿಮ್ಮಗಿರೆ ಮಹಾಪದ್ಮಂ ಭೇದಕ್ಕೆ ಪಡೆ ಸಂದು
ದೆಂಬುದನಱಿದಂಜಿಯಾರುಮಱಿಯದಂತಿರೆ ಓಡಿ ಕೆಟ್ಟಂ ಮತ್ತಿತ್ತ ಸುಬಂಧು ಪಿರಿದು ಬೇಗಂ
ಕಾಳೆಗಮಂ ಕಾದಿ ಸೋಲ್ತೊಡಾತನಂ ಪಿಡಿದು ಕಟ್ಟಿ ಸಂಕಲೆಯನಿಕ್ಕಿ ಸೆಱೆಯೊಳಿಟ್ಟಂ ಮತ್ತೆ
ಚಾಣಾಕ್ಯಂ ಕಾಳೆಗಮಂ ಗೆಲ್ದು ಪಾಟಳೀಪುತ್ರಮಂ ಪೊಕ್ಕು ಮಹಾಪದ್ಮನರಸಿಯರ್ಕಳ್ಗಂ
ಭಂಡಾರಕ್ಕಂ ಕಾಪನಿಟ್ಟು ಪೊೞಲ ಪ್ರಜೆಯಂ ಸಂತೈಸಿ ಮತ್ತಂ ಪ್ರಶಸ್ತ ದಿನ ವಾರ ನಕ್ಷತ್ರ
ಮುಹೂರ್ತದೊಳ್ ಚಂದ್ರಭುಕ್ತಂಗೆ ರಾಜ್ಯಾಭಿಷೇಕಂಗೆಯ್ದು ಪಟ್ಟಂಗಟ್ಟಿ ಮಹಾಪದ್ಮನರಸಿ
ಚಂದ್ರಮತಿ ಮಹಾದೇವಿಯುಂ ಚಂದ್ರಭುಕ್ತಂಗೆ ಮಹಾದೇವಿ ಮಾಡಿ ಮತ್ತೆ ನಂದನ ಭಂಡಾರ
ದೊಳಂ ತಮ್ಮ ಭಂಡಾರದೊಳಂ ದ್ರವ್ಯಮಿಲ್ಲದುದನಱಿದು ಪಾಟಳೀಪುತ್ರದ ಪ್ರಜೆಗಳಂ ನಾಡ
ಪ್ರಜೆಗಳಂ ಬೞಿಯಟ್ಟಿ ಬರಿಸಿಯವರ್ಗೆಲ್ಲಮುಣಿಸಂ ಮಾಡಿ ಸೊರ್ಕಪ್ಪಾಹಾರಮನೂಡಿ ನಿಮ್ಮ
ನಿಮ್ಮ ದ್ರವ್ಯಂಗಳಿರ್ದೆಡೆಯಂ ತೋಱಿಮೆಂದು ಬೆಸಗೊಂಡೊಡವರ್ಗಳ್ ಸೊರ್ಕಿ ಮೆಯ್ಯಱಿಯು

ಅವರ ಸಂಬಂಧದವರನ್ನು ಶತ್ರು ಪಕ್ಷದವರಿಂದಲೇ ನಾಶಗೊಳಿಸಿದನು. ನಂದನೊಬ್ಬನೆ
ಉಳಿದಾಗ ಚಂದ್ರಭುಕ್ತನನ್ನು ಕೂಡಿಕೊಂಡು, ಸಕಲಸೈನ್ಯಸಮೇತನಾಗಿ ದಾಳಿಮಾಡಿ
ಯುದ್ಧ ಮಾಡುವ ಸಂದರ್ಭದಲ್ಲಿ, ಎದುರಿಗೆ ಸೈನ್ಯವನ್ನು ನಿಲ್ಲಿಸಿ ಕಾದಲು ಅಣಿಯಾಗಿದ್ದ
ಮಹಾಪದ್ಮನ ಸಾಮಂತ ಮಹಾಸಾಮಂತರಿಗೆ ಕಾದಾಡಲು ಆಜ್ಞೆ ಬಂದರೂ ಅವರು
ಕಾದಾಡಲೊಪ್ಪದೆ ಸುಮ್ಮನಿದ್ದರು. ತನ್ನ ಸೈನ್ಯವು ಭೇದೋಪಾಯಕ್ಕೆ ಒಳಗಾಯಿ
ತೆಂದು ಮಹಾಪದ್ಮನು ತಿಳಿದು ಹೆದರಿ, ಯಾರೂ ತಿಳಿಯದ ಹಾಗೆ ಓಡಿ ಕೇಡನ್ನು
ಹೊಂದಿದನು. ಅನಂತರ, ಇತ್ತ ಸುಬಂಧು ಬಹಳ ಹೊತ್ತು ಯುದ್ಧವನ್ನು ಮಾಡಿ
ಸೋತನು. ಚಾಣಾಕ್ಯನು ಅವನನ್ನು ಹಿಡಿದು ಬಂಧಿಸಿ ಸಂಕೋಲೆ ತೊಡಿಸಿ, ಸೆರೆಮನೆ
ಯಲ್ಲಿಟ್ಟನು. ಆಮೇಲೆ ಚಾಣಾಕ್ಯನು ಯುದ್ಧದಲ್ಲಿ ಜಯವನ್ನು ಗಳಿಸಿ, ಪಾಟಳೀಪುತ್ರ
ನಗರವನ್ನು ಹೊಕ್ಕು ಮಹಾಪದ್ಮನ ರಾಣಿಯರಿಗೂ ಭಂಡಾರಕ್ಕೂ ಕಾವಲನ್ನಿಟ್ಟನು.
ಪಟ್ಟಣದ ಪ್ರಜೆಗಳನ್ನೆಲ್ಲ ಸಮಾಧಾನಪಡಿಸಿದನು. ಆಮೇಲೆ ಮಂಗಳಕರವಾದ ದಿನ,
ವಾರ, ನಕ್ಷತ್ರ, ಮುಹೂರ್ತದಲ್ಲಿ ಚಂದ್ರಭುಕ್ತನಿಗೆ ರಾಜ್ಯಾಭಿಷೇಕವನ್ನು ಮಾಡಿ ಪಟ್ಟ
ಗಟ್ಟಿದನು. ಮಹಾಪದ್ಮನ ರಾಣಿಯಾದ ಚಂದ್ರಮತಿ ಮಹಾದೇವಿಯನ್ನು ಚಂದ್ರಭುಕ್ತ
ನಿಗೆ ಮಹಾರಾಣಿಯಾಗಿ ಮಾಡಿದನು. ಅನಂತರ, ನಂದನ ಕೋಶಾಗಾರದಲ್ಲಾಗಲೀ
ತನ್ನ ಕೋಶಾಗಾರದಲ್ಲಾಗಲೀ ಹಣವಿಲ್ಲದುದನ್ನು ತಿಳಿದು ಪಾಟಳೀಪುತ್ರದ ಪ್ರಜೆ
ಗಳನ್ನೂ ನಾಡಿನ ಪ್ರಜೆಗಳನ್ನೂ ದೂತರನ್ನು ಕಳುಹಿಸಿ ಬರಮಾಡಿ, ಅವರಿಗೆಲ್ಲ ಭೋಜನ
ವನ್ನು ಸಿದ್ಧಪಡಿಸಿ ಸೊಕ್ಕನ್ನು ಉಂಟುಮಾಡುವ ಆಹಾರವನ್ನು ಕೊಟ್ಟು ನಿಮ್ಮ ನಿಮ್ಮ
ದ್ರವ್ಯಗಳು ಎಲ್ಲಿವೆಯೆಂಬುದನ್ನು ತೋರಿಸಿರಿ ಎಂದು ಅವರನ್ನು ಕೇಳಿದನು. ಆಗ ಅವರು

ದನಿಬರುಂ ತಂತಮ್ಮ ದ್ರವ್ಯದೆಡೆಗಳಂ ತೋಱಿ ಪೇೞ್ದು ಕೊಟ್ಟರಿಂತನೇಕ ಸಹಸ್ರಕೋಟಿ ದ್ರವ್ಯಮಂ ಚಾಣಾಕ್ಯಂ ಪಡೆದು ಚಂದ್ರಗುಪ್ತಂಗೆ ತೋಱಿ ಭಂಡಾರಮಂ ತೀವಿಯರಮನೆ ಮುಂದಣಂಗಳದೊಳ್ ಇಂತೆಂದು ಪೇೞ್ದಾಡಿದಂ ಪನ್ನೆರಡು ವರ್ಷದಿಂದಂ ನಂದನವಂಶಮಂ ನಿರ್ಮೂಲಂ ಮಾಡಿ ಕಿಡಿಸುವೆನೆಂದೆನ್ನ ಪೂಣ್ದ ಪ್ರತಿಜ್ಞೆ ನೆಱೆದತ್ತು ಮತ್ತೆನಗೆ ಜಾಡಿಸೊಳೂಡಿದವೆರಡು ವಸ್ತ್ರವೊಳವು ಪೊನ್ನಗುಂಡಿಗೆಯುಮುಂಟು ಮೂಱುದಂಡಮುಮೊಳವು ಮಗಧೆನಾಡ ದ್ರವ್ಯಮೆಲ್ಲಮಂ ತಂದು ಭಂಡಾರಮಂ ತೀವಿದೆಂ ಗುಣವಿಶೇಷಮನಱಿವರಸನುಮೆನಗೆ ಬಸಮಾದಂ ಪೊಡೆ ಪಱೆಯನೆಂದು ಪಱೆಯಂ ಪೊಯ್ಸಿಯೊಸೆದು ರಾಗಿಸಿ ತ್ರಿದಂಡಮನೆತ್ತಿ ಸೊರ್ಕಿದ ಪ್ರಜೆಗಳ ಲಟಹದಿಂದಾಡಿದೊಂ ಮತ್ತಂ ಶ್ರೀಪರ್ವತದೊಳಿರ್ದ ತನ್ನ ಪಾರ್ವಂತಿ ಯಶೋಮತಿಗೆ ಬೞಿಯಟ್ಟಿ ಬರಿಸಿಯಾಕೆಯೊಡನೆ ಭೋಗೋಪಭೋಗಂಗಳನನುಭವಿಸುತ್ತಂ ಸಾಮಂತ ಮಹಾಸಾಮಂತರ್ಕಳ್ಗಂ ಜೀವಿತಂಗೆಯ್ದು ತಳವರ್ಗಮುಮಂ ಸಂತಯಿಸಿ ಮಗಧವಿಷಯಮನಾಳುತ್ತಮಿಷ್ಟವಿಷಯ ಕಾಮಭೋಗಂಗಳನನುಭವಿಸುತ್ತಂ ಪಲಕಾಲಂ ಸಲೆ ಮತ್ತಂ ಚಂದ್ರಮತಿ ಮಹಾದೇವಿಗೆ ಗರ್ಭವಾಗಿಯೊಂದು ದಿವಸಂ ರಥಮನೇಱಿದೊಡಾ ರಥದ ಚಕ್ರದ

ಸೊಕ್ಕೇರಿ ಮೈಮೇಲೆ ಎಚ್ಚರವಿಲ್ಲದವರಾಗಿ ಅವರೆಲ್ಲರೂ ತಮ್ಮ ತಮ್ಮ ಹಣವಿರುವ ಸ್ಥಳಗಳನ್ನು ತೋರಿಸಿ, ಹೇಳಿ, ಕೊಟ್ಟುಬಿಟ್ಟರು. ಹೀಗೆ ಅನೇಕ ಸಾವಿರ ಕೋಟಿ ಧನವನ್ನು ಚಾಣಾಕ್ಯನು ಪ್ರಜೆಗಳಿಂದಲೇ ಪಡೆದು ಚಂದ್ರಗುಪ್ತನಿಗೆ ತೋರಿಸಿ, ಭಂಡಾರವನ್ನು ಹಣದಿಂದ ತುಂಬಿಸಿ ಅರಮನೆಯ ಮುಂದುಗಡೆ ಇರತಕ್ಕ ಅಂಗಣದಲ್ಲಿ ಈ ರೀತಿಯಾಗಿ ಹೇಳುತ್ತ ಕುಣಿದಾಡಿದನು. "ಹನ್ನೆರಡು ವರ್ಷಗಳಲ್ಲಿ ನಂದನ ವಂಶವನ್ನು ಬೇರಿಲ್ಲದಂತೆ ಕಿತ್ತು ನಾಶಮಾಡುವೆನೆಂದು ಪ್ರತಿಜ್ಞೆ ಮಾಡಿದ್ದೆನು. ಆ ಪ್ರತಿಜ್ಞೆ ಈಗ ಈಡೇರಿತು. ಇನ್ನು ನನಗೆ ಕಾವಿಯನ್ನು ಬಳಿದಿರುವ ಎರಡು ಬಟ್ಟೆಗಳಿವೆ. ಚಿನ್ನದ ಕಮಂಡಲು (ಜಲಪಾತ್ರೆ) ಇದೆ. ಮೂರು ಕೋಲುಗಳನ್ನು ಒಟ್ಟಿಗೆ ಕಟ್ಟಿರುವ ತ್ರಿದಂಡವಿದೆ. ಮಗಧನಾಡಿನ ಧನವನ್ನೆಲ್ಲ ತಂದು ರಾಜಭಂಡಾರವನ್ನು ಭರ್ತಿಮಾಡಿದ್ದೇನೆ. ವಿಶೇಷವಾದ ಗುಣವನ್ನು ತಿಳಿಯತಕ್ಕ ರಾಜನೂ ನನಗೆ ವಶವಾಗಿದ್ದಾನೆ. ಹರೆ (ತಂಬಟೆ)ಯನ್ನು ಬಾರಿಸು"-ಎಂದು ಹರೆಯನ್ನು ಹೊಡೆಯಿಸಿದನು. ಸಂತೋಷಗೊಂಡು ಪ್ರೀತಿಪಟ್ಟು ತನ್ನ ತ್ರಿದಂಡವನ್ನು ಎತ್ತಿಕೊಂಡು ವಿಜಯದ ಸೊಕ್ಕೇರಿದ ತನ್ನ ಪ್ರಜೆಗಳೊಂದಿಗೆ ರಮ್ಯವಾಗಿ ನರ್ತನಮಾಡಿದನು. ಆಮೇಲೆ ಶ್ರೀ ಪರ್ವತದಲ್ಲಿದ್ದ ತನ್ನ ಪತ್ನಿಯಾದ ಯಶೋಮತಿಯ ಬಳಿಗೆ ದೂತರನ್ನು ಕಳುಹಿಸಿ ಆಕೆಯನ್ನು ಬರಮಾಡಿದನು. ಆಕೆಯೊಂದಿಗೆ ಅನೇಕ ವಿಧದ ಸುಖಗಳನ್ನು ಅನುಭವಿಸುತ್ತ ಸಾಮಂತರಿಗೂ ಮಹಾಸಾಮಂತರಿಗೂ ಜೀವನೋಪಾಯದ ವ್ಯವಸ್ಥೆಯನ್ನು ಮಾಡಿದನು. ನಗರ ರಕ್ಷಕರ ವರ್ಗವನ್ನು ಸಮಾಧಾನಪಡಿಸಿ ಮಗಧದ ನಾಡನ್ನು ಆಳುತ್ತ ಪ್ರಿಯವಿಷಯದ ಬಯಸಿದ ಸುಖಗಳನ್ನೆಲ್ಲ ಅನುಭವಿಸುತ್ತ ಹೀಗೆಯೇ ಹಲವು ಕಾಲ ಕಳೆಯಿತು. ಅನಂತರ ಚಂದ್ರ

**ಪತ್ತುಂ ಕವಿರ್ಗಳ್ ನೆಲದೊಳಿರ್ದುದಂ ಚಾಣಾಕ್ಯಂ ಕಂಡೀ ಚಂದ್ರಭುಕ್ತಂ ಮೊದಲಾಗಿ ಪೃಥ್ವಿಯನೇಕಚ್ಛತ್ರಚ್ಛಾಯೆಯಿಂ ದಶಮಯೂರರ್ಕಳಾಳ್ವರೆಂದಾದೇಶಂಗೆಯ್ದಂ ಮತ್ತೆ ಕೆಲವು ದಿವಸದಿಂ ಚಂದ್ರಮತಿ ಮಹಾದೇವಿಗೆ ನವಮಾಸಂ ನೆಱೆದೊಂದು ದಿವಸಮರಸಂ ನಂಜಿನೊಳ್ ಬೆರಸಿದಾಹಾರಮನುಣ್ಬಾಗಳ್ ಪಕ್ಕದಿರ್ದರಸಿಗೆ ಅರಸನೊಡನುಣ್ಬ ಬಯಕೆಯಾದೊಡೆ ಬಾಳಂ ಕಿಳ್ತು ನಿಮಿರ್ದು ಪಕ್ಕದಿರ್ದ ಚಾಣಾಕ್ಯನ ದೃಷ್ಟಿಯಂ ಬಂಚಿಸಿ ಪ್ರಚ್ಛನ್ನದಿಂದಂ ತನ್ನ ಕೆಯ್ಯ ತುತ್ತನರಸನಂ ವಿಷಮಿಶ್ರಮೆಂದಱಿಯದೆ ಕೊಟ್ಟನದನಾಕೆ ಬಾಯೊಳಿಟ್ಟಾಗಳೆ ಚಾಣಾಕ್ಯಂ ಕಂಡು ತಲೆಯಂ ಪೋಗಿಱಿದು ಬಸಿಱಂ ಪೋಟ್ಟು ಕೂಸಂ ಪೊಱಮಡಿಸುವುದಂ ಕಂಡು ಹಾ ಅಯ್ಯೋ ಎನ್ನ ಚಂದ್ರಮತಿ ಮಹಾದೇವಿ ಎನ್ನ ನಲ್ಲಳೆಯೆಂದು ಪ್ರಳಾಪಂ ಗೆಯ್ದು ದುಃಖಾಕ್ರಾಂತನಾಗಿ ತದ್ವಿಯೋಗದಿಂ ಚಂದ್ರಭುಕ್ತಂ ಪ್ರಾಣಪರಿತ್ಯಾಗಂಗೆಯ್ದು ಮತ್ತಾ ಕೂಸಿನ ತಲೆಯೊಳಿನಿಸಾನುಂ ವಿಷಬಿಂದು ಪನಿತುದಱಿಂದಾತಂಗೆ ಬಿಂದುಸಾಗರನೆಂದು ಪೆಸರನಿಟ್ಟು ಪಟ್ಟಂಗಟ್ಟಿ ಕೂಸಂ ತೋಱಿಯರಸುಗೆಯ್ಯುತ್ತಂ ಕಾಲಂ ಸಲೆ ಮತ್ತೆ ಬಿಂದುಸಾಗರಂ**

ಮತಿ ಮಹಾರಾಣಿ ಗರ್ಭಿಣಿಯಾದಳು. ಆಕೆ ಒಂದು ದಿವಸ ರಥದಲ್ಲಿ ಕುಳಿತಿರಲು ಆ ರಥದ ಗಾಲಿಯ ಹತ್ತೂ ಅರಕಾಲುಗಳು ನೆಲದಲ್ಲಿ ಹೂತುಹೋದವು. ಇವನ್ನು ಚಾಣಾಕ್ಯನು ಕಂಡು "ಈ ಚಂದ್ರಭುಕ್ತನಿಂದ ಪ್ರಾರಂಭವಾಗಿ ಹತ್ತು ಮಂದಿ ಮೌರ್ಯ ರಾಜರು ಈ ಭೂಮಂಡಲವನ್ನು ಏಕಚ್ಛತ್ರದ ನೆರಳಿಗೆ ಒಳಗುಮಾಡಿ ಆಳುವರು" ಎಂದು ಭವಿಷ್ಯವನ್ನು ಹೇಳಿದನು. ಆಮೇಲೆ ಕೆಲವು ದಿವಸಗಳಲ್ಲಿ ಚಂದ್ರಮತಿ ಮಹಾರಾಣಿಗೆ ಒಂಬತ್ತು ತಿಂಗಳು ತುಂಬಿ ಅದೊಂದು ದಿವಸ, ರಾಜನು ವಿಷದಲ್ಲಿ ಮಿಶ್ರಮಾಡಿದ ಆಹಾರವನ್ನು ಉಣ್ಣುತ್ತಿದ್ದನು. ಆಗ ಪಕ್ಕದಲ್ಲಿದ್ದ ರಾಣಿಗೆ ರಾಜನೊಡನೆ ಊಟ ಮಾಡುವ ಬಯಕೆಯುಂಟಾಯಿತು. ಸಮೀಪದಲ್ಲಿಯೇ ಕತ್ತಿಯನ್ನು ಹಿರಿದು ಮೇಲಕ್ಕೆ ಚಾಚಿಕೊಂಡು ಚಾಣಾಕ್ಯನಿದ್ದನು. ರಾಜನು ಚಾಣಾಕ್ಯನಿಗೆ ತಿಳಿಯದ ಹಾಗೆ ಮರೆಯಾಗಿದ್ದು, ತನ್ನ ಕೈಯಲ್ಲಿದ್ದ ತುತ್ತನ್ನು ವಿಷದಿಂದ ಬೆರಸಿದುದೆಂಬುದನ್ನು ತಿಳಿಯದೆ, ರಾಣಿಗೆ ಕೊಟ್ಟನು. ಅದನ್ನು ಆಕೆ ಬಾಯಲ್ಲಿಟ್ಟಳು. ಆಗ ಅದನ್ನು ಚಾಣಕ್ಯನು ಕಂಡು, ತಲೆ ಕತ್ತರಿಸಿ ಹೋಗುವಂತೆ ಹೊಡೆದು, ಹೊಟ್ಟೆಯನ್ನು ಸೀಳಿ, ಹೊಟ್ಟೆಯೊಳಗಿದ್ದ ಮಗುವನ್ನು ಹೊರಗೆ ಹಾಕಿದನು. ಇದನ್ನು ಕಂಡು ಚಂದ್ರಭುಕ್ತನು "ಆಹಾ, ಅಯ್ಯೋ! ನನ್ನ ಚಂದ್ರಮತಿ ಮಹಾರಾಣಿಯೇ, ನನ್ನ ಪ್ರೀತಿಯವಳೇ" ಎಂದು ಶೋಕಿಸುತ್ತ, ವ್ಯಸನದಿಂದ ಕೂಡಿದವನಾಗಿ, ಆಕೆಯ ಅಗಲಿಕೆಯಿಂದ ಪ್ರಾಣಬಿಟ್ಟನು. ಅನಂತರ ಆ ಮಗುವಿನ ತಲೆಯ ಮೇಲೆ ಕೊಂಚವಾಗಿ ವಿಷದ ಬಿಂದುಗಳು ಹನಿಹನಿಯಾಗಿ ಬಿದ್ದುದರಿಂದ ಆ ಮಗುವಿಗೆ ಬಿಂದುಸಾಗರನೆಂದು ಹೆಸರನ್ನಿಟ್ಟು ಪಟ್ಟಾಭಿಷೇಕ ಮಾಡಿ, ಚಾಣಾಕ್ಯನು ಆ ಮಗುವನ್ನು ತೋರಿಸಿಕೊಂಡು, ರಾಜ್ಯಭಾರ ಮಾಡುತ್ತಾ ಇದ್ದನು. ಹೀಗೆಯೇ ಕಾಲ ಕಳೆಯುತ್ತಿದ್ದಿತು. ಅನಂತರ, ಬಿಂದು

ನವಯೌವನನಾದಂದು ಚಾಣಾಕ್ಯಂಗೆ ಸಂಸಾರ ಶರೀರ ಭೋಗಂಗಳೊಳಾದಂ ವೈರಾಗ್ಯ ಮಾಗಿ ತಪಂಬಡುವ ಬಗೆಯಾಗಿ ಸುಬಂಧುವಂ ಸೆಱೆಯಿಂ ಬಿಡಿಸಿ ವರಿಸಿ ಕ್ಷಮೆಗೊಳಿಸಿ ಸನ್ಮಾನದಾನಾದಿಗಳಿಂದಾತನಂ ಪೂಜಿಸಿ ಬಿಂದುಸಾಗರಂಗೆ ಮಂತ್ರಿ ಮಾಡಿಯರಸನಂ ಬೆಸಂ ಗೊಂಡೊಡಂಬಡಿಸಿಯೆಲ್ಲರುಮಂ ಕ್ಷಮೆಗೊಳಿಸಿ ಬಾಹ್ಯಾಭ್ಯಂತರ ಪರಿಗ್ರಹಂಗಳಂ ತೊಱೆದು ಮತಿವರರೆಂಬಾಚಾರ್ಯರ ಪಕ್ಕದೆ ತಪಂಬಟ್ಟಾಗಮಮೆಲ್ಲಮಂ ಕಲ್ತಾಚಾರ್ಯರಾಗಿ ಪಲಂಬರ್ ಶಿಷ್ಯರ್ಕಳಂ ಮಾಡಿ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಪಲಕಾಲಮುಗ್ರೋಗ್ರ ತಪಶ್ಚರಣಂಗೆಯ್ದು ಮತ್ತೆ ಪಾಟಳೀಪುತ್ರದ ಸಾರೆ ಸೋಣೆಯೆಂಬ ತೊಱೆಯ ತಡಿಯ ತುಱುಪಟ್ಟಿಯೊಳ್ ವಿಹಾರಿಸುತ್ತಂ ಬಂದಿರ್ದರಾ ಬರವಂ ಸುಬಂಧು ಕೇಳ್ದು ಮಹಾಪದ್ಮನ ರಾಜ್ಯಮಂ ಕೊಂಡುದುಮಂ ತನ್ನಂ ಸಂಕಲೆಯೊಳಿಟ್ಟು ಸೆಱೆ ಗೆಯ್ದು ಪಲಕಾಲಂ ನವೆಯಿಸಿದ ಪಗೆಯುಮಂ ನೆನೆದು ಸಂಜೆವೊಟ್ಟಾದಾಗಳ್ ಬಂದಿಸುವ ನೆವದಿಂದಂ ಪಿರಿದುಮರ್ಚನೆಯಂ ಕೊಂಡು ಪೋಗಿ ಚಾಣಾಕ್ಯಋಷಿಯರ್ ಮೊದಲಾಗೊಡೆಯ ಋಷಿಯರ್ಕಳನರ್ಚಿಸಿ ಗುರುಪರಿವಿಡಿಯಿಂದಂ ಬಂದಿಸಿ ಪಿರಿದು ಬೇಗಂ ಚಾಣಾಕ್ಯರಿಸಿಯೊಡನೆ

ಸಾಗರನು ಹೊಸ ಜನ್ಮನಿಗನಾದನು. ಆಗ ಚಾಣಾಕ್ಯನಿಗೆ ಸಂಸಾರದಲ್ಲಿಯೂ ಶರೀರದ ಸುಖಗಳಲ್ಲಿಯೂ ಅತಿಯಾದ ವೈರಾಗ್ಯವುಂಟಾಗಿ ತಪಸ್ಸುಮಾಡುವ ಮನಸ್ಸಾಯಿತು. ಸುಬಂಧುವನ್ನು ಸೆರೆಯಿಂದ ಬಿಡಿಸಿ ಬರಮಾಡಿಕೊಂಡು ಅವನಿಗೆ ಕ್ಷಮೆಯನ್ನು ನೀಡಿ ಸನ್ಮಾನದಿಂದಲೂ ದಾನಾದಿಗಳಿಂದಲೂ ಸತ್ಕಾರಮಾಡಿ, ಅವನನ್ನು ಬಿಂದುಸಾಗರನಿಗೆ ಮಂತ್ರಿಯಾಗಿ ಮಾಡಿದನು. ಆಮೇಲೆ ಆರಸನನ್ನು ಕೇಳಿ ಅವನು ಒಪ್ಪುವಂತೆ ಮಾಡಿ, ಎಲ್ಲರಿಗೂ ಕ್ಷಮೆಯನ್ನಿತ್ತು ಬಾಹ್ಯ ಮತ್ತು ಆಭ್ಯಂತರ ಎಂಬ ಭೇದಗಳುಳ್ಳ ಪರಿಗ್ರಹ ಗಳನ್ನು ಬಿಟ್ಟು ಮತಿವರರೆಂಬ ಆಚಾರ್ಯರ ಬಳಿಯಲ್ಲಿ ತಪಸ್ಸಿಗೆ ಉಪದೇಶವನ್ನು ಪಡೆ ದನು. ಶಾಸ್ತ್ರಗಳೆಲ್ಲವನ್ನೂ ಕಲಿತು ಆಚಾರ್ಯರಾಗಿ ಅವರು ಹಲವು ಮಂದಿ ಶಿಷ್ಯರುಗಳನ್ನು ನಿರ್ಮಾಣಮಾಡಿದರು. ಅನಂತರ–ಗ್ರಾಮ, ನಗರ, ಖೇಡ, ಖರ್ವಡ, ಮಡಂಬ, ಪಟ್ಟಣ, ದ್ರೋಣಾಮುಖಗಳೆಂಬ ಭೂಭಾಗಗಳಲ್ಲಿ ಸಂಚಾರಮಾಡುತ್ತ ಹಲವು ಕಾಲ ಅತ್ಯಂತ ಕಠಿನವಾದ ತಪಸ್ಸನ್ನು ಆಚರಿಸಿ ಆಮೇಲೆ ಪಾಟಳೀಪುತ್ರದ ಸಮೀಪ ಸೋಣೆ ಎಂಬ ನದಿಯ ದಡದಲ್ಲಿರುವ ಆಕಳಹಟ್ಟಿಗೆ ಸಂಚಾರ ಮಾಡಿಕೊಂಡು ಬಂದು ಅಲ್ಲಿ ದ್ದರು. ಆ ಬರವನ್ನು ಸುಬಂಧು ಕೇಳಿ, ಚಾಣಾಕ್ಯನು ಮಹಾಪದ್ಮನ ರಾಜ್ಯವನ್ನು ತೆಗೆದುಕೊಂಡದ್ದನ್ನೂ ತನ್ನನ್ನು ಸಂಕಲೆಯಲ್ಲಿ ಬಂಧಿಸಿ ಸೆರೆಮನೆಯಲ್ಲಿಟ್ಟು ಹಲವು ಕಾಲ ಯಾತನೆಪಡಿಸಿದ ಶತ್ರುತ್ವವನ್ನೂ ನೆನೆದು, ಸಂಜೆಯ ಸಮಯವಾದಾಗ ನಮಸ್ಕಾರ ಮಾಡುವ ನೆವದಿಂದ ಹೆಚ್ಚಿನ ಪೂಜಾ ದ್ರವ್ಯಗಳನ್ನು ತೆಗೆದುಕೊಂಡು ಹೋದನು. ಚಾಣಾಕ್ಯ ಋಷಿಗಳು ಮೊದಲಾಗುಳ್ಳ ಋಷಿಗಳನ್ನು ಪೂಜಿಸಿ ಗುರುಗೌರವಾನುಕ್ರಮ ದಿಂದ ವಂದಿಸಿ ಬಹಳ ಹೊತ್ತು ಚಾಣಾಕ್ಯ ಋಷಿಯೊಡನೆ ಕೂಟದಲ್ಲಿದ್ದು, ಹೋಗು

ಗೋಷ್ಠಿಯಿರ್ದು ಪೋಪಾಗಳ್ ತನ್ನವರ್ಗ್ಗಂದಂ ಮಾಗಿಯ ದಿವಸಂ ರಿಸಿಯರ್ಕಳ್ ಸೀತದೊಳ್ ಸೆಡೆಗುಂ ಸೇದೆಗೆಡುವರದಱಿಂ ಬಳಸಿಯುಂ ಪಿರಿದುಂ ಗೊಬ್ಬರಮನೊಟ್ಟಮೆಂದು ಪಕ್ಕದಿ ರ್ದೊಟ್ಟಿಸಿ ಬಳಸಿಯುಂ ಕಿಚ್ಚಂ ತಗುಳ್ಚಲ್ವೇಳ್ದು ಪೊೞಲ್ಗೆ ಪೋದಂ ಮತ್ತೆ ಗೊಬ್ಬರದ ಕಿಚ್ಚು ಬಳಸಿಯುಂ ತಮ್ಮಂ ಸುಡೆ ಚಾಣಾಕ್ಯ ಋಷಿಯರ್ ಮೊದಲಾಗೊಡೆಯ ರಿಸಿಯರ್ಕಳೆಲ್ಲಂ

ಗಾಹೆ॥ ಛಿಜ್ಜಉ ಭಿಜ್ಜಉ ಜಾಉ ಖಉ ಜೋ ಇಯ ಏಹು ಸರೀರು
ಅಪ್ಪಾ ಭಾವಹಿ ಣಿಮ್ಮಲಉ ಜೇಂ ಪಾವಹಿ ಭವತೀರು ॥

ಖಮ್ಮಾಮಿ ಸವ್ವಜೀವಾಣಂ ಸವ್ವೇ ಜೀವಾ ಖಮಂತು ಮೇ
ಮೆತ್ತೀ ಮೇ ಸವ್ವಭೂದೇಸು ವೇರಂ ಮಜ್ಝಣ ಕೇಣಚಿ॥

ಎಂದಿಂತು ಕ್ಷಮೆಯುಂ ಭಾವಿಸಿ ಚತುರ್ವಿಧಮಪ್ಪಾಹಾರಶರೀರಮುಮಂ ತೊಱೆದಿಂಗಿಣೀ ಮರಣದಿಂ ಶುಭಪರಿಣಾಮದೊಳ್ ಕೂಡಿ, ಮಿಕ್ಕ ರತ್ನತ್ರಯಮನಾರಾಧಿಸಿ ಸನತ್ಕುಮಾರ ಕಲ್ಪದೊಳ್ ಸರ್ವಾರ್ಥಮೆಂಬ ವಿಮಾನದೊಳ್ ಚಾಣಾಕ್ಯ ರಿಸಿಯರ್ ಪುಟ್ಟಿದರ್ ಮತ್ತುಳಿದ ಋಷಿಯರ್ಕಳೆಲ್ಲಂ ಸೌಧರ್ಮಕಲ್ಪಂ ಮೊದಲಾಗೊಡೆಯ ಕಲ್ಪಂಗಳೊಳ್ ಪುಟ್ಟಿದರ್ ಮತ್ತೆ

ವಾಗ ತನ್ನವರೊಡನೆ ಹೀಗೆಂದನು– "ಚಳಿಗಾಲದ ದಿವಸದಲ್ಲಿ ಋಷಿಗಳು ಶೀತದಲ್ಲಿ ಮುದುಡಿಕೊಳ್ಳುವರು. ಆಯಾಸಗೊಂಡು ಕೆಡುವರು. ಆದುದರಿಂದ ಸುತ್ತಲೂ ಹೆಚ್ಚು ಕಾಡುಬೆರಣಿಯನ್ನು ರಾಶಿಹಾಕಿರಿ", ಹೀಗೆ ಹೇಳಿ ಹತ್ತಿರದಲ್ಲಿದ್ದು ರಾಶಿ ಹಾಕಿಸಿ, ಸುತ್ತಲೂ ಬೆಂಕಿಯನ್ನು ಹೊತ್ತಿಸುವಂತೆ ನೇಮಿಸಿ ಪಟ್ಟಣಕ್ಕೆ ಹೋದನು. ಅನಂತರ ಆ ಬೆರಣಿಯ ಬೆಂಕಿ ಸುತ್ತಲೂ ಆವರಿಸಿ ತಮ್ಮನ್ನು ಸುಡಲು ತೊಡಗಿತು. ಆಗ ಚಾಣಾಕ್ಯ ಋಷಿಗಳು ಮೊದಲಾಗುಳ್ಳ ಋಷಿಗಳೆಲ್ಲರೂ ಈ ರೀತಿ ಹೇಳಿಕೊಂಡರು– ಈ ಶರೀರವು ಕತ್ತರಿಸಲ್ಪಡಲಿ, ಸೀಳಲ್ಪಡಲಿ, ಅಥವಾ ನಾಶವಾಗಲಿ ಎಲೈ ಯೋಗಿಯೇ, ಯಾವುದರಿಂದ ಸಂಸಾರ ಸಮುದ್ರದ ಆಚೆಯ ತೀರವನ್ನು ಪಡೆಯುವೆವೋ, ಆ ನಿರ್ಮಲನಾದ ಆತ್ಮನನ್ನು ಧ್ಯಾನಮಾಡು. ನಾನು ಎಲ್ಲ ಜೀವಗಳನ್ನು ಕ್ಷಮಿಸುತ್ತೇನೆ. ಎಲ್ಲ ಜೀವಗಳೂ ನನ್ನನ್ನು ಕ್ಷಮಿಸಲಿ. ಸರ್ವಭೂತಗಳಲ್ಲಿಯೂ ನನಗೆ ಮೈತ್ರಿಯಿದೆ. ನನಗೆ ವೈರವು ಎಲ್ಲಿಯೂ ಇಲ್ಲ. ಈ ರೀತಿ ಹೇಳಿ ಕ್ಷಮೆಯನ್ನು ಯೋಚಿಸಿ, ನಾಲ್ಕುವಿಧದ ಆಹಾರದ ಶರೀರವನ್ನು ತೊರೆದು ಇಂಗಿಣೀ ಮರಣದಿಂದ ಶುಭವಾದ ಪರಿಣಾಮದಲ್ಲಿ ಕೂಡಿ ಶ್ರೇಷ್ಠವಾದ ರತ್ನತ್ರಯವನ್ನು ಆರಾಧಿಸಿ ಸನತ್ಕುಮಾರ ಎಂಬ ಸ್ವರ್ಗದಲ್ಲಿ ಸರ್ವಾರ್ಥವೆಂಬ ಏಳು ಅಂತಸ್ತಿನ ಅರಮನೆಯಲ್ಲಿ ಚಾಣಾಕ್ಯ ಋಷಿಗಳು ಹುಟ್ಟಿದರು. ಆಮೇಲೆ ಉಳಿದ ಋಷಿಗಳೆಲ್ಲರೂ ಸೌಧರ್ಮ ಕಲ್ಪವೇ ಮೊದಲಾಗುಳ್ಳ ಸ್ವರ್ಗಗಳಲ್ಲಿ ಹುಟ್ಟಿದರು ಅನಂತರ, ಸಂನ್ಯಾಸವನ್ನು ಹಿಡಿದ

ಪೆಱರುಂ ಸಂನ್ಯಸನಂಗೆಯ್ದಿರ್ದ ಕ್ಷಪಣಕರುಂ ಚಾಣಾಕ್ಯ ರಿಸಿಯುರಂ ಮನದೊಳ್ ಬಗೆದು ಚತುರ್ವಿಧಮಪ್ಪುಪಸರ್ಗಮುಮಂ ಪಸಿವುಂ ನೀರಟ್ಕೆ ಮೊದಲಾಗೊಡೆಯ ಇಪ್ಪತ್ತೆರಡು ಪರೀಷಹಂಗಳಂ ವ್ಯಾಧಿಗಳೊಳಪ್ಪ ವೇದನೆಗಳುಮಂ ಸೈರಿಸಿ ಶುಭ ಪರಿಣಾಮದಿಂ ಮಿಕ್ಕ ದರ್ಶನ ಜ್ಞಾನ ಚಾರಿತ್ರಂಗಳನಾರಾಧಿಸಿ ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

ಇತರ ಜೈನಯತಿಗಳು ಕೂಡ, ಚಾಣಾಕ್ಯ ಋಷಿಗಳನ್ನು ಮನಸ್ಸಿನಲ್ಲಿ ಭಾವಿಸಿಕೊಂಡು ನಾಲ್ಕು ವಿಧಗಳಾದ ಉಪಸರ್ಗವನ್ನೂ ಹಸಿವು ಬಾಯಾರಿಕೆ ಮೊದಲಾಗಿ ಉಳ್ಳ ಇಪ್ಪತ್ತೆರಡು ಬಗೆಯ ಪರೀಷಹಗಳನ್ನೂ ರೋಗಗಳು ಬಂದು ಉಂಟಾಗುವ ನೋವುಗಳನ್ನೂ ಸಹಿಸಿಕೊಂಡು ಶುಭಕರವಾದ ಪರಿಣಾಮದಿಂದ ಶ್ರೇಷ್ಠವಾದ ದರ್ಶನ–ಜ್ಞಾನ–ಚಾರಿತ್ರಗಳೆಂಬ ರತ್ನತ್ರಯವನ್ನು ಆರಾಧಿಸಿ, ಸ್ವರ್ಗ–ಮೋಕ್ಷ ಸುಖಗಳಿಗೆ ಹೋಗಲಿ!

# ೧೯. ವೃಷಭಸೇನರೆಂಬ ರಿಸಿಯರ ಕಥೆ

ವೃಷಭಸೇನರೆಂಬ ರಿಸಿಯರ ಕಥೆಯಂ ಪೇೞ್ವೆಂ :

ಗಾಹೆ॥ ವಸಹೀಏ ಪಳಿದಾಏ ವಿಟ್ಠಾಮಚ್ಛೇಣ ಉಸಹಸೇಣೋ ವಿ
ಆರಾಧಣಂ ಪವಣ್ಣೋ ಸಂಘ ಪರಿಸಾ ಏ ಕುಣಾಳಹ್ಮಿ ॥

[ವಸಹೀಏ-ಬಸದಿ, ಪಳಿದಾಏ-ಉರಿಪೆಪಟ್ಟುದಾದೊಡೆ, ವಿಟ್ಠಾಮಚ್ಛೇಣ-ವಿಷ್ಣುಮತ್ಸ್ಯನಿಂದಂ, ಉಸಹಸೇಣೋವಿ-ವೃಷಭಸೇನಾಚಾರ್ಯರ್, ಆರಾಧಣಂ-ಮಿಕ್ಕ ದರ್ಶನ ಜ್ಞಾನ ಚಾರಿತ್ರಂಗಳಾರಾಧನೆಯಂ, ಪವಣ್ಣೋ -ಪೊರ್ದಿದೊಂ, ಸಂಘಪರಿಸಾಏ-ತಮ್ಮ ರಿಸಿ ಸಮುದಾಯಂ ಬೆರಸು, ಕುಣಾಳಹ್ಮಿ-ಕುಣಾಳಮೆಂಬ ಪೊೞಲೊಳ್]

ಅದೆಂತೆಂದೊಡೆ : ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ದಕ್ಷಿಣಾಪಥದೊಳ್ ಕರಹಟಮೆಂಬುದು ನಾಡಲ್ಲಿ ಕುಣಾಳಮೆಂಬ ಪೊೞಲದನಾಳ್ವೊಂ ಧನದನೆಂಬೊನರಸನಾತನ ಮಹಾದೇವಿ ಪದ್ಮಶ್ರೀಯೆಂಬೊಳ್ ಮಂತ್ರಿ ವಿಷ್ಣುಮತ್ಸ್ಯನೆಂಬೊಂ ಪಿರಿಯ ಪಂಡಿತನಂತವರ್ಗಳಿಷ್ಟವಿಷಯ ಕಾಮ ಭೋಗಂಗಳನನುಭವಿಸುತ್ತಂ ಪಲಕಾಲಂ ಸಲೆ ಮತ್ತೊಂದು ದಿವಸಂ ವೃಷಭಸೇನರೆಂಬಾಚಾರ್ಯರ್ ಪಿರಿದು ರಿಸಿ ಸಮುದಾಯಂ ಬೆರಸು ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಮಾ ಪೊೞಲ್ಗೆ ಬಂದೊಂದು ಬಸದಿಯೊಳಿರ್ದರವರ ಬರವನರಸನುಂ ಪೊೞಲವರುಂ ಕೇಳ್ದು ಪಿರಿದುಂ ಪೂಜೆಯಂ ಕೊಂಡು

ವೃಷಭಸೇನರೆಂಬ ಋಷಿಗಳ ಕಥೆಯನ್ನು ಹೇಳುವೆನು—ಕುಣಾಳವೆಂಬ ಪಟ್ಟಣದಲ್ಲಿ ವಿಷ್ಣುಮತ್ಸ್ಯನಿಂದ ಬಸದಿ ಉರಿಸಲ್ಪಟ್ಟಾಗ, ವೃಷಭಸೇನಾಚಾರ್ಯರು ತಮ್ಮ ಋಷಿಸಮುದಾಯದೊಡನೆ ಶ್ರೇಷ್ಠವಾದ ದರ್ಶನ ಜ್ಞಾನ ಚಾರಿತ್ರಗಳ ಆರಾಧನೆಯನ್ನು ಮಾಡಿದರು. ಅದು ಹೇಗೆಂದರೆ—ಈ ಜಂಬೂದ್ವೀಪದ ಭರತಕ್ಷೇತ್ರದಲ್ಲಿ ದಕ್ಷಿಣಾಪಥದಲ್ಲಿ ಕರಹಟವೆಂಬ ನಾಡಿದೆ. ಅಲ್ಲಿ ಕುಣಾಳವೆಂಬ ಪಟ್ಟಣವಿದೆ. ಅದನ್ನು ಧನದನೆಂಬ ರಾಜನು ಆಳುತ್ತಿದ್ದನು. ಅವನ ಮಹಾರಾಣಿ ಪದ್ಮಶ್ರೀ ಎಂಬವಳು. ಮಂತ್ರಿ ವಿಷ್ಣುಮತ್ಸ್ಯನೆಂಬವನು. ಅವನು ದೊಡ್ಡ ವಿದ್ವಾಂಸನಾಗಿದ್ದನು. ಅಂತು ಅವರೆಲ್ಲರೂ ತಾವು ಬಯಸಿದ ವಿಷಯದ ಕಾಮ ಸುಖಗಳನ್ನು ಅನುಭವಿಸುತ್ತಿದ್ದರು. ಹೀಗೆ ಕಾಲ ಕಳೆಯುತ್ತಿತ್ತು. ಆಮೇಲೆ, ಒಂದು ದಿವಸ ವೃಷಭಸೇನರೆಂಬ ಆಚಾರ್ಯರು ಋಷಿಗಳ ದೊಡ್ಡ ಸಮೂಹವನ್ನು ಕೂಡಿಕೊಂಡು ಗ್ರಾಮ, ನಗರ, ಖೇಡ, ಖರ್ವಡ, ಮಡಂಬ, ಪಟ್ಟಣ, ದ್ರೋಣಾಮುಖ ಎಂಬ ಭೂವಿಭಾಗಗಳಲ್ಲಿ ಸಂಚಾರಮಾಡುತ್ತ ಆ ಕುಣಾಳ ಪಟ್ಟಣಕ್ಕೆ ಬಂದು ಒಂದು ಬಸದಿಯಲ್ಲಿದ್ದರು. ವೃಷಭಸೇನಾಚಾರ್ಯರ ಆಗಮನವನ್ನು ರಾಜನೂ

ಪೋಗಿಯರ್ಚಿಸಿ ಪೂಜಿಸಿ, ಪೊಡೆವಡುವುದಂ ವಿಷ್ಟಮತ್ಸ್ಯಂ ಕಂಡು ಸೈರಿಸಲಾಱದೆ ಮಾತ್ಸರ್ಯದಿಂದಂ ತನ್ನ ಪಾಂಡಿತ್ಯದ ಗರ್ವದಿಂದಂ ವೃಷಭಸೇನಾಚಾರ್ಯರೊಡನೆ ವಾದುಗೆಯ್ದು ನೆರವಿಯೊಳ್ ಸೋಲ್ತು ಸಿಗ್ಗಾಗಿ ಪೋಗಿ ನಟ್ಟನಡುವಿರುಳ್ ಬಂದು ಕಿಚ್ಚಂ ತಗುಳ್ಚಿ ಪೋದಂ ಮತ್ತಂ ವೃಷಭಸೇನಾಚಾರ್ಯರ್ ಮೊದಲಾಗೊಡೆಯ ರಿಸಿಯರ್ಕಳ್ ಕ್ಷಮೆಯಂ ಭಾವಿಸಿ ಚತುರ್ವಿಧಮಪ್ಪಾಹಾರಕ್ಕಂ ಶರೀರಕ್ಕಂ ಯಾವಜ್ಜೀವಂ ನಿವೃತ್ತಿಗೆಯ್ದು ಶುಭಪರಿಣಾಮದಿಂದಂ ಮಿಕ್ಕ ರತ್ನತ್ರಯಂಗಳಂ ಸಾಧಿಸಿ ಮುಡಿಪಿಯಲ್ಲಿ ವೃಷಭಸೇನಾಚಾರ್ಯರ್ ಪದಿನಾಲ್ಕನೆಯ ಪ್ರಾಣತಮೆಂಬ ಕಲ್ಪದೊಳ್ ಪುಷ್ಪಕಮೆಂಬ ವಿಮಾನದೊಳಿರ್ಪತ್ತು ಸಾಗರೋಪಮಾಯುಷ್ಯಮನೊಡೆಯ ದೇವನಾಗಿ ಪುಟ್ಟಿದರ್ ಮತ್ತುಳಿದ ಋಷಿಯರ್ಕಳುಂ ತಂತಮ್ಮ ತಪೋನುಷ್ಠಾನಕ್ಕೆ ತಕ್ಕಂತು ಸೌಧರ್ಮಕಲ್ಪಂ ಮೊದಲಾಗೊಡೆಯ ಸ್ವರ್ಗಂಗಳೊಳ್ ಪುಟ್ಟಿದರ್ ಮತ್ತಂ ಪೆಱರುಂ ಸಂನ್ಯಸನಂಗೆಯ್ದಿರ್ದ ಕ್ಷಪಣಕರುಂ ವೃಷಭಸೇನಾಚಾರ್ಯರ್ ಮೊದಲಾಗೊಡೆಯ ರಿಸಿಯರ್ಕಳಂ ಮನದೆ ಬಗೆದು ಚತುರ್ವಿಧಮಪ್ಪುಪಸರ್ಗಮುಮಂ ಪಸಿವುಂ ನೀರಱ್ಕೆ ಮೊದಲಾಗೊಡೆಯ

ಪಟ್ಟಣಿಗರೂ ಕೇಳಿ ಹೆಚ್ಚಿನ ಪೂಜಾವಸ್ತುಗಳನ್ನು ಕೊಂಡು ಹೋಗಿ, ಅರ್ಚನೆ ಮಾಡಿ, ಪೂಜಿಸಿ ಸಾಷ್ಟಾಂಗ ಪ್ರಣಾಮ ಮಾಡುವುದನ್ನು ವಿಷ್ಟಮತ್ಸ್ಯನು ಕಂಡು ಸಹಿಸಲಾರದೆ ಹೊಟ್ಟೆಕಿಚ್ಚಿನಿಂದ ಕೂಡಿದವನಾಗಿ, ತನ್ನ ಪಾಂಡಿತ್ಯದ ಗರ್ವದಿಂದ ವೃಷಭಸೇನಾಚಾರ್ಯರೊಡನೆ ವಾದಮಾಡಿ ಸಭೆಯಲ್ಲಿ ಸೋತು ನಾಚಿಕೆಪಟ್ಟನು. ಅವನು ಹೋಗಿ ನಟ್ಟನಡುವಿನ ರಾತ್ರಿಯಲ್ಲಿ ಬಂದು ಬಸದಿಗೆ ಬೆಂಕಿ ಹಚ್ಚಿ ಹೋದನು. ವೃಷಭಸೇನಾಚಾರ್ಯರು ಮೊದಲಾದ ಋಷಿಗಳು ವಿಷ್ಟಮತ್ಸ್ಯನ ಮೇಲೆ ಕೋಪಗೊಳ್ಳದೆ ಕ್ಷಮೆಯನ್ನು ಭಾವಿಸಿಕೊಂಡು ನಾಲ್ಕು ವಿಧವಾದ ಆಹಾರಕ್ಕೂ ಶರೀರಕ್ಕೂ ಜೀವವಿರುವತನಕವೂ ಪರಿಹಾರ ಮಾಡಿ (ಅರ್ಥಾತ್ ಆಹಾರ ಸೇವಿಸದೆ ಮತ್ತು ಶರೀರವನ್ನು ಲಕ್ಷ್ಯಮಾಡದೆ), ಶುಭವಾದ ಪರಿಣಾಮದಿಂದ ಶ್ರೇಷ್ಠವಾದ ದರ್ಶನ-ಜ್ಞಾನ-ಚಾರಿತ್ರ ಎಂಬ ರತ್ನತ್ರಯವನ್ನು ಸಾಧಿಸಿ ಸತ್ತರು. ಅಲ್ಲಿ ವೃಷಭಸೇನಾಚಾರ್ಯರು ಹದಿನಾಲ್ಕನೆಯ ಪ್ರಾಣತವೆಂಬ ಸ್ವರ್ಗದಲ್ಲಿ ಪುಷ್ಪಕವೆಂಬ ಏಳು ಅಂತಸ್ತಿನ ಅರಮನೆಯಲ್ಲಿ ಇಪ್ಪತ್ತು ಸಾಗರಕ್ಕೆ ಹೋಲಿಕೆಯಾಗುವ ಆಯುಷ್ಯವುಳ್ಳ ದೇವರಾಗಿ ಹುಟ್ಟಿದರು. ಆಮೇಲೆ ಉಳಿದ ಋಷಿಗಳೂ ತಮ್ಮ ತಮ್ಮ ತಪಸ್ಸಿನ ಆಚರಣೆಗೆ ತಕ್ಕಹಾಗೆ ಸೌಧರ್ಮ ಕಲ್ಪ ಮುಂತಾಗಿ ಉಳ್ಳ ಸ್ವರ್ಗಗಳಲ್ಲಿ ಹುಟ್ಟಿದರು. ಅನಂತರ, ಸಂನ್ಯಸನ ಮಾಡಿರುವ ಇತರ ಜೈನಯತಿಗಳೂ ವೃಷಭಸೇನಾಚಾರ್ಯರೇ ಮೊದಲಾಗುಳ್ಳ ಋಷಿಗಳನ್ನು ಮನಸ್ಸಿನಲ್ಲಿ ಧ್ಯಾನಿಸಿಕೊಂಡು ನಾಲ್ಕು ವಿಧಗಳಾದ ಉಪಸರ್ಗಗಳನ್ನೂ ಹಸಿವು ನೀರಡಿಕೆ ಮೊದಲಾಗಿರತಕ್ಕ ಪರೀಷಹ

ಪರೀಷಹಂಗಳಂ ವ್ಯಾಧಿಗಳೊಳಪ್ಪ ವೇದನೆಗಳುಮಂ ಸೈರಿಸಿ ಕ್ಷಮೆಯುಂ ಭಾವಿಸಿ ಶುಭಪರಿಣಾಮ ದಿಂದಂ ಪರಮ ಶುದ್ಧ ಸಹಜ ದರ್ಶನ ಜ್ಞಾನ ಚಾರಿತ್ರಂಗಳಂ ಸಾಧಿಸಿ ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

ಈ ಪೇೞ್ದ ಪತ್ತೊಂಬತ್ತು ಕಥೆಗಳಂ ಶಿವಕೋಟ್ಯಾಚಾರ್ಯರ್ ಪೇೞ್ದಾರ್
ವಡ್ಡಾರಾಧನೆ ಸಂಪೂರ್ಣಂ

ಗಳನ್ನೂ ರೋಗಗಳಿಂದ ಉಂಟಾಗತಕ್ಕ ನೋವುಗಳನ್ನೂ ಸಹಿಸಿಕೊಂಡು ಕ್ಷಮಾ ಗುಣವನ್ನೇ ಭಾವಿಸಿ ಶುಭ ಪರಿಣಾಮದಿಂದ ಶ್ರೇಷ್ಠವೂ ನಿರ್ಮಲವೂ ಸಹಜವೂ ಆದ ದರ್ಶನ ಜ್ಞಾನ ಚಾರಿತ್ರಗಳನ್ನು ಸಾಧಿಸಿ ಸ್ವರ್ಗ ಮೋಕ್ಷ ಸುಖಗಳನ್ನು ಪಡೆಯಲಿ! ಈಗ ಹೇಳಿದ ಹತ್ತೊಂಬತ್ತು ಕಥೆಗಳನ್ನು ಶಿವಕೋಟ್ಯಾಚಾರ್ಯರು ಹೇಳಿದರು. ವಡ್ಡಾರಾಧನೆ ಸಂಪೂರ್ಣವಾಯಿತು.

# ಅನುಬಂಧ ೧

## ಜೈನ ಪಾರಿಭಾಷಿಕ ಶಬ್ದಗಳ ಮತ್ತು ಸಂಖ್ಯಾರ್ಥಗಳ ಟಿಪ್ಪಣಿ

**ಅಘಾತಿಕರ್ಮ**—ಜೈನಸಿದ್ಧಾಂತದ ಪ್ರಕಾರ ಕರ್ಮಗಳು ಎಂಟು ವಿಧ. ಘಾತಿಕರ್ಮಗಳು ನಾಲ್ಕು, ಅಘಾತಿಕರ್ಮಗಳು ನಾಲ್ಕು. ಅಘಾತಿಕರ್ಮಗಳಿವು: (೧) ಆಯುಃಕರ್ಮ (ಜೀವಿಯ ಆಯುಸ್ಸನ್ನು ನಿರ್ಧರಿಸುವಂಥದು), (೨) ನಾಮಕರ್ಮ (ದೇಹ, ಎತ್ತರ, ಆಕಾರ, ಬಣ್ಣ ಮುಂತಾಗಿ ವ್ಯಕ್ತಿತ್ವವನ್ನು ಗೊತ್ತು ಮಾಡುವಂಥದು), (೩) ಗೋತ್ರಕರ್ಮ (ಕುಲ, ಜಾತಿ, ದೇಶಾದಿಗಳನ್ನು ನಿರ್ಣಯಿಸುವಂಥದು), (೪) ವೇದನೀಯ (ಜೀವನದಲ್ಲಿ ಸುಖದುಃಖಗಳಿಗೆ ಕಾರಣವಾದುದು.)

**ಅಣುವ್ರತ**—ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ—ಈ ಐದು. ಇವನ್ನು ಪಂಚಾಣುವ್ರತವೆಂದೂ ಮಹಾವ್ರತವೆಂದೂ ಹೇಳುತ್ತಾರೆ.

**ಅನಂತ ಚತುಷ್ಟಯ**—(೧) ಅನಂತಜ್ಞಾನ, (೨) ಅನಂತ ದರ್ಶನ, (೩) ಅನಂತ ವೀರ್ಯ, (೪) ಅನಂತ ಸುಖ-ಈ ನಾಲ್ಕು.

**ಅನಾಯತನ ಸೇವೆ**—ಕುದೇವ, ಕುಗುರು, ಕುಧರ್ಮ, ಕುದೇವಪೂಜಕ, ಕುಗುರುಪೂಜಕ, ಕುಧರ್ಮಪೂಜಕ–ಇವರ ಸಹವಾಸ.

**ಅಭಕ್ಷ್ಯಗಳು**—ತಿನ್ನಬಾರದವು; ಜೇನು, ಅತ್ತಿ–ಅರಳಿ–ಆಲ–ಹಲಸು–ಬಸರಿ ಮರ ಇವುಗಳ ಹಣ್ಣುಗಳು. ಹೀಗೆ ಅಭಕ್ಷ್ಯಗಳು ಅರು ಬಗೆ.

**ಅವಧಿ ಜ್ಞಾನ**—ಕಾಲ, ದೇಶ ಯಾವುದಿದ್ದರೂ ತಿಳಿಯಬಲ್ಲ ಜ್ಞಾನ.

**ಅವಳೋಕಿನೀ ವಿದ್ಯೆ**—ಪರೋಕ್ಷದಿಂದಲೇ ಸಂಗತಿಗಳನ್ನು ತಿಳಿವ ವಿದ್ಯೆ.

**ಅಷ್ಟಕರ್ಮ**—ಘಾತಿಕರ್ಮ ನಾಲ್ಕು, ಅಘಾತಿಕರ್ಮ ನಾಲ್ಕು–ಹೀಗೆ ಎಂಟು.

**ಅಷ್ಟಮದ**—ಕುಲ, ರೂಪ, ವಯಸ್ಸು, ತೋಳು, ತಪಸ್ಸು, ಕಲೆ, ದೈವಬಲ, ರಾಜ್ಯ–ಈ ಎಂಟರಿಂದ ಉಂಟಾಗುವ ಸೊಕ್ಕು.

**ಅಷ್ಟಮಲ**—ಶಂಕೆ, ಆಕಾಂಕ್ಷೆ ವಿಚಿಕಿತ್ಸೆ, ಅನ್ಯದೃಷ್ಟಿ, ಪ್ರಶಂಸೆ, ಸಂಸ್ತವ, ಸಮ್ಯಗ್‌ದೃಷ್ಟಿ, ಅತಿಚಾರ–ಈ ಎಂಟು.

**ಅಷ್ಟಾಂಗ ನಿಮಿತ್ತ**—ಲಕ್ಷಣ, ಅಂಗ, ಸ್ವರ, ವ್ಯಂಜನ, ಭೌಮ, ಅಂತರಿಕ್ಷ, ಸ್ವಪ್ನ, ಛಿನ್ನ–ಈ ಎಂಟು ಅಂಗಗಳುಳ್ಳ ಶಕುನಶಾಸ್ತ್ರ.

**ಅಷ್ಟಾಂಗ ಭೋಗ**—ಅನ್ನ, ನೀರು, ತಾಂಬೂಲ, ಪುಷ್ಪ, ಚಂದನ, ವಸ್ತ್ರ, ಶಯ್ಯೆ, ಅಲಂಕಾರ-ಈ ಎಂಟು ಬಗೆಯ ಸುಖಗಳು.

**ಅಷ್ಟಶೋಭೆ**—ಕಲಶ, ಕನ್ನಡಿ, ಬಾವುಟ, ತೋರಣ, ಧೂಪ, ದೀಪ, ಭೇರಿ, ಬೀಸಣಿಗೆ—ಎಂಬೀ ಎಂಟು ಅಲಂಕಾರಗಳು.

**ಆಚಾಮ್ಲವರ್ಧನ**—ಒಂದು ಬಗೆಯ ವ್ರತ.

**ಆಮೋಷಧಿ ಋದ್ಧಿ**—ತಪಸ್ಸಿನಲ್ಲಿ ಸಿದ್ಧಿ ಪಡೆದವರಿಗೆ ಉಂಟಾಗುವ ಮಹಿಮೆಗಳಲ್ಲಿ ಇದು ಒಂದು. ಈ ಋದ್ಧಿಯನ್ನು ಪಡೆದ ಮುನಿಯ ಪಾದಸ್ಪರ್ಶದಿಂದ ಪ್ರಚಂಡ ರೋಗಗಳು ವಾಸಿಯಾಗುವುವು.

**ಆರ್ತಧ್ಯಾನ**—ನಾಲ್ಕು ಬಗೆಯ ಧ್ಯಾನಗಳಲ್ಲಿ ಒಂದು. ಇಷ್ಟಾಕಾಂಕ್ಷಿಯಾಗಿ ಕೊರಗುವುದು ಆರ್ತಧ್ಯಾನ.

**ಆಸನ್ನ ಭವ್ಯ**—ಬೇಗನೆ ಮೋಕ್ಷವನ್ನೈದಲಿರುವ ಜೀವ.

**ಇಂಗಿಣೀ ಮರಣ**—ಅನ್ನ, ಪಾನ, ಖಾದ್ಯ, ಲೇಹ್ಯ ಎಂಬ ನಾಲ್ಕು ವಿಧದ ಆಹಾರವನ್ನು ಬಿಟ್ಟು, ಉಪಸರ್ಗಗಳನ್ನು ಸಹಿಸಿ, ಸಾಯುವುದು.

**ಇಪ್ಪತ್ತೆರಡು ಪರೀಷಹಗಳು**—ಹಸಿವು, ಬಾಯಾರಿಕೆ, ಚಳಿ, ಬಿಸಿ, ಕ್ರಿಮಿಕೀಟಗಳ ಕಡಿತ, ಬತ್ತಲೆಯಿಂದಾದ ತೊಂದರೆ, ಅರತಿಯ ಬಾಧೆ, ಸ್ತ್ರೀಯರಿಂದ ತೊಂದರೆ, ಓಡಾಡುವಾಗ ಆಗುವ ತೊಂದರೆ, ಮಲಗುವಾಗ ಆಗುವ ಬಾಧೆ, ಕುಳಿತಿರುವಾಗ ಆಗುವ ಬಾಧೆ, ಬೈಗುಳು, ಪೆಟ್ಟು, ಭಿಕ್ಷೆಬೇಡುವಾಗ ಬರುವ ಕಷ್ಟನಿಷ್ಠುರ, ಭಿಕ್ಷೆದೊರೆಯದ ದುಃಖ, ತಪೋ ಮಹಿಮೆಗಳು ಕಾಣದಿರುವುದರಿಂದ ಆದ ವ್ಯಥೆ, ರೋಗ, ಕಲ್ಲುಮುಳ್ಳಿನ ಬಾಧೆ, ತನ್ನ ಪ್ರಜ್ಞೆಗಾಗಿ ಅಹಂಕಾರ ಪಡುವಿಕೆ, ಉತ್ತಮ ಜ್ಞಾನವನ್ನಪೇಕ್ಷಿಸಿ ಅಜ್ಞಾನಕ್ಕಾಗಿ ಕೊರಗುವುದು, ಸ್ನಾನ ಮಾಡದಿರುವುದರಿಂದ ಆಗುವ ಬಾಧೆ, ಜನರು ಗೌರವಿಸಲಿಲ್ಲವೆಂಬ ಕೊರಗು-ಹೀಗೆ ಇವು ಇಪ್ಪತ್ತೆರಡು ಬಗೆಯ ತೊಂದರೆಗಳು.

**ಇಪ್ಪತ್ತೈದು ದೋಷಗಳು**—ಎಂಟು ಮಲಗಳು, ಎಂಟು ಮದಗಳು, ಮೂರು ಮೂಢಗಳು, ಆರು ಅನಾಯತನ ಸೇವೆಗಳು.

**ಈರ್ಯಾಪಥ**—ನಿರ್ಮಲವಾದ ಮಾರ್ಗದಲ್ಲಿ ಸೂಕ್ಷ್ಮಪ್ರಾಣಿಗಳಿಗೆ ಕೂಡ, ಬಾಧೆಯಾಗದಂತೆ ಅವನ್ನು ಪರಿಹರಿಸಿಕೊಂಡು ನಡೆಯುವುದು.

**ಉಪಸರ್ಗಗಳು**—ದೇವ, ಮಾನವ, ತಿರ್ಯಕ್, ನಾರಕ-ಎಂಬೀ ನಾಲ್ಕು ಬಗೆಯವರಿಂದ ಬರುವ ತಪೋವಿಘ್ನಗಳು.

**ಏಳು ಗುಣಗಳು**—ಶ್ರದ್ಧೆ, ಭಕ್ತಿ, ಪ್ರೇಮ, ದಯೆ, ಉದಾತ್ತಶೀಲ, ಕ್ಷಮೆ, ಶೌಚ.

**ಚರಣ ಗ್ರಂಥಗಳು**—ಜೈನ ಯತಿಗಳ ಮತ್ತು ಶ್ರಾವಕರ ಆಚಾರಗಳನ್ನು ನಿರೂಪಿಸುವ ಗ್ರಂಥಗಳು.

**ತ್ರಿಷಷ್ಟಿ ಶಲಾಕಾಪುರುಷರು**—೨೪ ತೀರ್ಥಂಕರರು, ೧೨ ಚಕ್ರವರ್ತಿಗಳು, ೯ ವಾಸುದೇವರು, ೯ ಪ್ರತಿವಾಸುದೇವರು, ೯ ಬಲಭದ್ರರು—ಹೀಗೆ ೬೩ ಮಂದಿ.

**ದ್ರವ್ಯಾನುಯೋಗ**—ಶ್ರುತಸ್ಕಂದದಲ್ಲಿ ಮೂರನೆಯ ಭಾಗ. ಇದರಲ್ಲಿ ಸಪ್ತ ತತ್ತ್ವಗಳು, ನವಪದಾರ್ಥಗಳು, ಷಡ್ದ್ರವ್ಯಗಳು ಮುಂತಾದ ತಾತ್ತ್ವಿಕ ವಿಚಾರಗಳಿವೆ.

**ದ್ವಾದಶ ತಪಸ್ಸುಗಳು**—ಇವುಗಳಲ್ಲಿ ಬಾಹ್ಯತಪಗಳು ಆರು, ಅಭ್ಯಂತರ ತಪಗಳು ಆರು.

**ಬಾಹ್ಯತಪಗಳಿವು**: ಅನಶನ, ಅವಮೋದರ್ಯ (ಹೊಟ್ಟೆತುಂಬಲು ಬೇಕಾದುದಕ್ಕಿಂತ ಕಡಮೆ ತೆಗೆದುಕೊಳ್ಳುವುದು), ವೃತ್ತಿಸಂಖ್ಯಾನ (ಭಿಕ್ಷೆಗೆ ರೀತಿ ಮತ್ತು ಮಿತಿ ಹಾಕಿಕೊಳ್ಳುವುದು), ರಸತ್ಯಾಗ, ಕಾಯಕ್ಲೇಶ, ವಿವಿಕ್ತ ಶಯನಾಸನ.

**ಆಭ್ಯಂತರ ತಪಸ್ಸುಗಳಿವು** : ಪ್ರಾಯಶ್ಚಿತ್ತ, ವಿನಯ, ವೈಯಾವೃತ್ತ್ಯ (ವೃದ್ಧ-ಅಶಕ್ತ-ರೋಗಿ ಯತಿಗಳ ಸೇವೆ), ಸ್ವಾಧ್ಯಾಯ, ವ್ಯುತ್ಸರ್ಗ (ಶರೀರದ ಆಸೆಯನ್ನು ಬಿಟ್ಟ, ಸಮಚಿತ್ತತೆ), ಧ್ಯಾನ.

**ದ್ವಾದಶಾಂಗಗಳು**—ಆಚಾರಾಂಗ, ಸೂತ್ರಕೃತಾಂಗ, ಸ್ಥಾನಾಂಗ, ಸಮವಾಯಾಂಗ, ವ್ಯಾಖ್ಯಾಪ್ರಜ್ಞಪ್ತಿ, ಜ್ಞಾತೃಧರ್ಮಕೃತಾಂಗ, ಉಪಾಸಕಾಧ್ಯಾಯಾಂಗ, ಅಂತಕೃದ್ದಶಾಂಗ, ಅನುತ್ತರೋಪಪಾದಕದಶಾಂಗ, ಪ್ರಶ್ನವ್ಯಾಕರಣಾಂಗ, ವಿಪಾಕಸೂತ್ರಾಂಗ, ದೃಷ್ಟಿಪ್ರವಾದಾಂಗ—ಈ ಹನ್ನೆರಡು.

**ಧ್ಯಾನಗಳು**—ಇವು ನಾಲ್ಕು ವಿಧ: (೧) ಆರ್ತಧ್ಯಾನ (ಪ್ರಿಯ-ಅಪ್ರಿಯ ವಸ್ತುಗಳ ಪ್ರಾಪ್ತಿ-ವಿಯೋಗಗಳಿಂದಾಗುವ ಚಿಂತೆ), (೨) ರೌದ್ರ ಧ್ಯಾನ (ಹಿಂಸೆ, ಅಸತ್ಯ, ಕಳವು ಕಾಮಭೋಗಗಳನ್ನು ಉಳಿಸಿಕೊಳ್ಳುವ ಚಿಂತೆಯಿಂದಕೂಡಿದ್ದು), (೩) ಧರ್ಮ ಧ್ಯಾನ (ಇದು ಆಜ್ಞಾವಿಚಯ, ಅಪಾಯವಿಚಯ, ವಿಪಾಕವಿಚಯ, ಸಂಸ್ಥಾನವಿಚಯ ಎಂದು ನಾಲ್ಕುವಿಧ. ಜಿನೋಪದಿಷ್ಟವಾದ ಶಾಸ್ತ್ರಗಳ ಚಿಂತನೆ, ಕರ್ಮವನ್ನು ದೂರಮಾಡುವ ಚಿಂತನೆ, ಸ್ವರ್ಗನರಕ ಫಲಚಿಂತನೆ, ಲೋಕಾಕಾರ ಚಿಂತನೆ—ಇವೆಲ್ಲ ಧರ್ಮಧ್ಯಾನಗಳು. (೪) ಶುಕ್ಲಧ್ಯಾನ-ಇದು ಪೃಥಕ್ತ್ವ ವಿತರ್ಕವಿಚಾರ, ಏಕತ್ವವಿತರ್ಕ, ಸೂಕ್ಷ್ಮಕ್ರಿಯಾ ಪ್ರತಿಪಾತಿ, ವ್ಯುಪರತ ಕ್ರಿಯಾನಿವೃತ್ತಿ-ಎಂದು ನಾಲ್ಕು ಬಗೆ. ಇದು ಅತ್ಯಂತ ಶ್ರೇಷ್ಠವಾದ ಧ್ಯಾನ.

**ನಂದೀಶ್ವರ**—ಕಾರ್ತಿಕ, ಫಾಲ್ಗುಣ, ಆಷಾಢಗಳ ಅಂತ್ಯದ ವಾರಗಳಲ್ಲಿ ಸೌಧರ್ಮಾದಿ ಇಂದ್ರರ ಸಾನ್ನಿಧ್ಯದಲ್ಲಿ ಮಾಡುವ ಪೂಜೆ.

**ನರಕಗಳು**—(ಸಪ್ತ ನರಕಗಳು)—ರತ್ನಪ್ರಭೆ, ಶರ್ಕರಾ ಪ್ರಭೆ, ವಾಳುಕಾ ಪ್ರಭೆ, ಪಂಕಪ್ರಭೆ, ಧೂಮಪ್ರಭೆ, ತಮಃಪ್ರಭೆ, ಮಹಾತಮಃಪ್ರಭೆ—ಎಂಬ ಏಳು.

**ನವ ಪದಾರ್ಥಗಳು**—ಜೀವ, ಅಜೀವ, ಪುಣ್ಯ, ಪಾಪ, ಆಸ್ರವ, ಸಂವರ, ನಿರ್ಜರ, ಬಂಧ, ಮೋಕ್ಷ—ಈ ಒಂಬತ್ತು.

**ಪಂಚನಮಸ್ಕಾರ**—ಅರ್ಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸಾಧು-ಈ ಐವರಿಗೆ ಸಲ್ಲಿಸುವ ನಮಸ್ಕಾರಗಳು.

**ಪಂಚಮಹಾಪಾತಕ**—ಬಾಲ, ಸ್ತ್ರೀ, ಗೋವು, ಬ್ರಾಹ್ಮಣ, ಋಷಿ-ಇವರನ್ನು ಕೊಲ್ಲುವುದು. ಇನ್ನೊಂದು ಬಗೆಯಾಗಿ ಬ್ರಹ್ಮಹತ್ಯೆ, ಸುರಾಪಾನ, ಸ್ವರ್ಣಸ್ತೇಯ, ಗುರುತಲ್ಪ ಗಮನ, ತತ್ಸಂಯೋಗಿ-ಹೀಗೆ ಐದು ಮಹಾಪಾತಕಗಳು.

**ಪಂಚಮಹಾಶಬ್ದ**—ಶೃಂಗ (ಕೊಂಬು), ತಂಬಟೆ, ಶಂಖ, ಭೇರಿ, ಜಯಘಂಟೆ (ಜಾಗಟೆ)-ಎಂಬ ಐದು ವಾದ್ಯಗಳ ಶಬ್ದ.

**ಪಂಚರತ್ನ**—ನೀಲ, ವಜ್ರ, ಪದ್ಮರಾಗ, ಮುತ್ತು, ಹವಳ-ಈ ಐದು ಬಗೆಯ ರತ್ನಗಳು.

**ಪಂಥಾತಿಚಾರನಿಯಮ**—ಭಿಕ್ಷೆಯಿಂದ ಹಿಂದಿರುಗಿ ಬರುವಾಗ ದಾರಿಯಲ್ಲಿ ಆದ ಅತಿಚಾರಗಳ ಶುದ್ಧಿಗೆ ಮಾಡುವ ನಿಯಮ.

**ಪಡಿಕಮಣ**—ಮಾಡಿದ ದೋಷಗಳಿಗಾಗಿ ಪಶ್ಚಾತ್ತಾಪ. ಇದು ಏಳು ಬಗೆ: (೧) ದೈವಸಿಕ (ಹಗಲು ಮಾಡಿದ ದೋಷಕ್ಕೆ), (೨) ರಾತ್ರಿಕ (ರಾತ್ರಿ ಮಾಡಿದ ದೋಷಕ್ಕೆ), (೩) ಐರ್ಯಾಪಥಿಕ (ಚರಿಗೆಗೆ ಹೋಗುವಾಗ ಆದ ದೋಷಕ್ಕೆ), (೪) ಪಾಕ್ಷಿಕ (ಹದಿನೈದು ದಿವಸಗಳಲ್ಲಿ ನಡೆದ ದೋಷಕ್ಕೆ), (೫) ಚಾತುರ್ಮಾಸಿಕ (ನಾಲ್ಕು ತಿಂಗಳಲ್ಲಿ ನಡೆದ ದೋಷಕ್ಕೆ), (೬) ಸಾಂವತ್ಸರಿಕ, (೭) ಉತ್ತಮಾರ್ಥ (ಸಮಾಧಿ ಮರಣ ಸಮಯದಿಂದ ಜೀವನ ಪರ್ಯಂತ ನಡೆದ ದೋಷಕ್ಕೆ).

**ಪದಿನೆಂಟು ದೋಷಗಳು**—ಹಸಿವು, ಬಾಯಾರಿಕೆ, ಭಯ, ದ್ವೇಷ, ರಾಗ, ಮೋಹ, ಚಿಂತೆ, ಜರೆ, ರೋಗ, ಮರಣ, ಬೆವರು, ಖೇದ, ಮದ, ರತಿ, ಆಶ್ಚರ್ಯ, ಜನ್ಮ, ನಿದ್ರೆ, ವಿಷಾದ-ಈ ಹದಿನೆಂಟು ದೋಷಗಳಿಲ್ಲದವನು ಅರ್ಹಂತನು.

**ಪದಿನೆಂಟು ಧರ್ಮಶಾಸ್ತ್ರಗಳು**—ಮನು, ಯಮ, ಗೌತಮ, ವಸಿಷ್ಠ, ಅತ್ರಿ, ದಕ್ಷ, ವಿಷ್ಣು, ಅಂಗಿರಸ್, ಉಶನಾ, ವಾಕ್ಪತಿ, ವ್ಯಾಸ, ಆಪಸ್ತಂಬ, ಗೌತಮ, ಕಾತ್ಯಾಯನ, ನಾರದ, ಯಾಜ್ಞವಲ್ಕ್ಯ, ಪರಾಶರ, ಸಂವರ್ತ, ಶಂಖ, ಹಾರೀತ, ಲಿಖಿತ -ಇವರಿಂದ ಧರ್ಮಶಾಸ್ತ್ರಗಳು ರಚಿತವಾಗಿವೆ. ಅವುಗಳಲ್ಲಿ ಹದಿನೆಂಟು.

**ಪರಿಗ್ರಹಗಳು**—ಇವು ಇಪ್ಪತ್ತನಾಲ್ಕು. ಅವುಗಳಲ್ಲಿ ಕ್ಷೇತ್ರ, ವಸ್ತು, ಹಿರಣ್ಯ,

ಸುವರ್ಣ, ಧನ, ಧಾನ್ಯ, ದಾಸ, ದಾಸಿ, ಕುಪ್ಯ, ಭಾಂಡ-ಎಂಬೀ ಹತ್ತು **ಬಾಹ್ಯ ಪರಿಗ್ರಹಗಳು**. ಮಿಥ್ಯಾತ್ವ, ವೇದ (ಸ್ತ್ರೀಪುರುಷನಪುಂಸಕರೊಡನೆ ಕಾಮಕ್ರೀಡೆಯ ಅಭಿಲಾಷೆ), ರಾಗ, ದ್ವೇಷ, ಹಾಸ್ಯ, ರತಿ, ಅರತಿ, ಶೋಕ, ಭಯ, ಜುಗುಪ್ಸೆ, ಕ್ರೋಧ, ಮಾನ, ಮಾಯಾ, ಲೋಭ-ಎಂಬೀ ಹದಿನಾಲ್ಕು **ಅಂತರಂಗ ಪರಿಗ್ರಹಗಳು**. ಈ ೨೪ ಪರಿಗ್ರಹಗಳನ್ನು ತೊರೆದ ನಿರ್ಗ್ರಂಥ ಮುನಿಗಳೇ ಗುರುಗಳು.

**ಭುಕ್ತ ಪ್ರತ್ಯಾಖ್ಯಾನ ವಿಧಿ**– ಕ್ರಮವಾಗಿ ಆಹಾರ ಪಾನೀಯಗಳನ್ನು ಬಿಟ್ಟು ಬಿಡುವುದು.

**ಮಿಥ್ಯಾತ್ವ**– ತತ್ತ್ವದಲ್ಲಿ ನಂಬಿಕೆಯಾಗಲೀ ಶ್ರದ್ಧೆಯಾಗಲೀ ಇಲ್ಲದೆ ಮೋಕ್ಷ ಮಾರ್ಗದಿಂದ ಪರಾಙ್ಮುಖನಾಗುವಿಕೆ.

**ಮುಂಡಕೇವಲಿ**–ಮುಂಡನ ಎಂದರೆ ವಶಪಡಿಸುವುದು. ಇದು ಹತ್ತು ವಿಧ: ಐದು ವಿಧದ ಸ್ಪರ್ಶನಮುಂಡ, ವಚನಮುಂಡ (ಮಾತಾಡದಿರುವುದು), ಹಸ್ತಮುಂಡ (ಕುಚೇಷ್ಟೆಯಿಂದ ಕೈಯಾಡಿಸದಿರುವುದು), ಪಾದಮುಂಡ (ಆಸನದಲ್ಲಿ ಸೇರಿಸದಿರುವುದು), ಮನೋಮುಂಡ (ಕೆಟ್ಟುದನ್ನು ಯೋಚಿಸದಿರುವುದು), ಶರೀರಮುಂಡ (ದೇಹವನ್ನು ಹತೋಟಿಯಲ್ಲಿಡುವುದು)—ಈ ಹತ್ತು ಮುಂಡಗಳನ್ನು ಆಚರಿಸಿದ ಜಿನಮುನಿ.

**ಮೂರು ಮೂಢಗಳು**—ದೇವತಾ ಮೂಢ (ಮಿಥ್ಯಾದೇವತೆಗಳ ಪೂಜೆ), ಲೋಕ ಮೂಢ (ಮಿಥ್ಯಾಕ್ಷೇತ್ರಗಳಲ್ಲಿ ನಂಬಿಕೆ), ಪಾಷಂಡಿಮೂಢ (ಮಿಥ್ಯಾಗುರುಗಳನ್ನು ನಂಬುವುದು.)

**ರತ್ನತ್ರಯ**–ಮೋಕ್ಷ ಸಾಧನಗಳಾದ ಮೂರು ಶ್ರೇಷ್ಠಗುಣಗಳು– (೧) ಸಮ್ಯಗ್ದರ್ಶನ (ಜೈನ ತೀರ್ಥಂಕರರು ಉಪದೇಶಿಸಿರುವ ತತ್ತ್ವದಲ್ಲಿ ನಂಬಿಕೆ), (೨) ಸಮ್ಯಗ್‌ಜ್ಞಾನ (ನಂಬಿದುದನ್ನು ಚೆನ್ನಾಗಿ ಗ್ರಹಣ ಮಾಡಿರುವುದು), (೩) ಸಮ್ಯಕ್ ಚಾರಿತ್ರ (ನಂಬಿ ತಿಳಿದುದನ್ನು ಸರಿಯಾಗಿ ಆಚರಿಸುವುದು).

**ವ್ಯಂತರ ದೇವತೆ**–ಬೇರೆ ಬೇರೆ ದೇಶಗಳಲ್ಲಿರುವ ಸ್ಥಳೀಕ ದೇವತೆಗಳು. ಇವು ಎಂಟು ಬಗೆ: ಕಿನ್ನರ, ಕಿಂಪುರುಷ, ಮಹೋರಗ, ಗಂಧರ್ವ, ಯಕ್ಷ, ರಾಕ್ಷಸ, ಭೂತ, ಪಿಶಾಚ.

**ಶಲ್ಯಗಳು**–ಇವು ವ್ರತಕ್ಕೆ ಭಂಗ ತರುವಂಥವು-ಮಾಯಾ ಶಲ್ಯ, ಮಿಥ್ಯಾಶಲ್ಯ, ನಿದಾನಶಲ್ಯ ಎಂದು ಮೂರುವಿಧ. ಮಾಯಾಶಲ್ಯ-ಕಪಟ ವಂಚನೆಗಳ ಆಚರಣೆ. ಮಿಥ್ಯಾಶಲ್ಯ-ತಾನು ಆಚರಿಸುವ ವ್ರತದಲ್ಲಿ ಮತ್ತು ಜಿನೋಪದಿಷ್ಟ ಧರ್ಮತತ್ತ್ವದಲ್ಲಿ ಶ್ರದ್ಧೆಯಿಲ್ಲದುದು. ನಿದಾನಶಲ್ಯ-ಮುಂದೆ ವಿಷಯ ಭೋಗಗಳನ್ನು ಅನುಭವಿಸುವ ಅಪೇಕ್ಷೆ ಇಡುವುದು. ವ್ರತಿಯಾದವನು ಈ ಮೂರು ಬಗೆಯ ಶಲ್ಯಗಳನ್ನು ಬಿಟ್ಟಿರಬೇಕು.

**ಶಿಕ್ಷಾವ್ರತ**—ಸಾಮಾಯಿಕ (ಪಾಪಕ್ರಿಯಾ ಪರಿತ್ಯಾಗ), ದೇಶಾವಕಾಶಿಕ, ಪ್ರೋಷಧೋಪವಾಸ, ಅತಿಥಿ ಸಂವಿಭಾಗ–ಹೀಗೆ ನಾಲ್ಕು ಬಗೆ.

**ಶ್ರಾವಕ ಧರ್ಮ**–ಐದು ಅಣುವ್ರತಗಳು, ಮೂರು ಗುಣವ್ರತಗಳು (ದಿಗ್ವ್ರತ, ದೇಶವ್ರತ, ದಂಡವಿರತಿವ್ರತ, ನಾಲ್ಕು ಶಿಕ್ಷಾವ್ರತಗಳು–ಹೀಗೆ ಶ್ರಾವಕಧರ್ಮ ಹನ್ನೆರಡು ಬಗೆ.

**ಷಡಂಗಗಳು**—(ಆರು ಅಂಗಗಳು)-ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು, ಜ್ಯೋತಿಷ–ಇವು ಆರೂ ವೇದದ ಅಂಗಗಳಾಗಿವೆ.

**ಷಡ್ದ್ರವ್ಯಗಳು**—ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ,

**ಸಪ್ತ ಋದ್ಧಿಗಳು**—ಬುದ್ಧಿ, ತಪ, ವೈಕುರ್ವಣ, ಔಷಧ, ರಸ, ಬಲ, ಅಕ್ಷೀಣ–ಹೀಗೆ ಏಳು ಬಗೆ.

**ಸಪ್ತ ವ್ಯಸನಗಳು**—ಜೂಜು, ವೇಶ್ಯಾಸಕ್ತಿ, ಪರಸ್ತ್ರೀಗಮನ, ಚೌರ್ಯ, ಮಾಂಸ ಭಕ್ಷಣ, ಮದ್ಯಪಾನ, ಮೃಗಯಾ (ಬೇಟೆ)-ಈ ಏಳು.

**ಸಿಂಹ ನಿಷ್ಕ್ರೀಡಿತ**—ಎಂಬತ್ತು ದಿನಗಳಲ್ಲಿ ಅರುವತ್ತು ಉಪವಾಸ ಮತ್ತು ಇಪ್ಪತ್ತು ಪಾರಣೆಗಳನ್ನು ಮಾಡತಕ್ಕ ವ್ರತ.

**ಸಾಮಾನಿಕ ದೇವ**—ಇಂದ್ರನಿಗಿರತಕ್ಕ ಆಜ್ಞೆ ಐಶ್ವರ್ಯ ಶಕ್ತಿಗಳಿಲ್ಲದೆ, ಅವನ ಹಾಗೆಯೇ ಆಯುಷ್ಯ, ವೀರ್ಯ, ಪರಿವಾರ, ಭೋಗೋಪಭೋಗಗಳುಳ್ಳವನು. ಗುರು, ತಂದೆ, ಉಪಾಧ್ಯಾಯರಂತೆ ಪೂಜ್ಯನಾದ ದೇವತೆ.

**ಸ್ಥವಿರ ಕಲ್ಪ**—ಏಕವಿಹಾರಿಯಾಗಲು ದೈಹಿಕ ಶಕ್ತಿಯಿಲ್ಲದೆ, ಋಷಿಸಂಘದಲ್ಲಿದ್ದು ಸಂಘದ ರೀತಿಯನ್ನು ಹಾಗೂ ಋಷಿಗಳ ಪರಂಪರೆಯ ರೀತಿಯನ್ನು ತಿಳಿಸತಕ್ಕ ಸಾಧು.

## ವಿಶೇಷ ಟಿಪ್ಪಣಿಗಳು

೧. ಗ್ರಾಮ, ನಗರ, ಖೇಡ........ಇತ್ಯಾದಿ

**ಗ್ರಾಮ**—ನೂರಕ್ಕೆ ಕಡಮೆಯಾಗದೆ ಐನೂರಕ್ಕೆ ಹೆಚ್ಚಾಗದೆ ಕೃಷಿಕ ಕುಟುಂಬ ಗಳು ವಾಸಮಾಡುವ ಹಳ್ಳಿ.

**ನಗರ**—ರಾಜಧಾನಿ (ರಾಜನು ವಾಸಮಾಡುವ ದೊಡ್ಡ ಪಟ್ಟಣ)

**ಖೇಡ**—ಎತ್ತರವಾದ ಕೋಟೆಯುಳ್ಳ ಊರು.

**ಖರ್ವಡ**—ಚಿಕ್ಕ ಪ್ರಾಕಾರವಿರುವ ಊರು.

**ಮಡಂಬ**—ಗೂರಸ್ಥಳ, ಸೀಮೆಯು ಕೊನೆಯಲ್ಲಿರುವ ಪುರ,

**ಪತ್ತನ** (ಪಟ್ಟಣ)—ಬಂಡಿಗಳಲ್ಲಾಗಲಿ, ನಾವೆಗಳಲ್ಲಾಗಲಿ, ಪ್ರಯಾಣ ಮಾಡಿ ಸೇರಬಹುದಾದ ಪುರ.

**ದ್ರೋಣಾಮುಖ**—ಜಲಮಾರ್ಗ ಸ್ಥಳಮಾರ್ಗ ಎರಡೂ ಉಳ್ಳ ಪುರ.

(ಇದರ ವಿವರ ಪಂಪನ ಆದಿಪುರಾಣ ೪. ೮–೬೩ ವಚನದಲ್ಲಿ ಬರುತ್ತದೆ)

**ಪಾಳಿಧ್ವಜ**—ಒಂದು ಬಗೆಯ ಧ್ವಜ ವ್ಯೂಹ. ಹಾರ, ವಸ್ತ್ರ, ನವಿಲು, ಕಮಲ, ಹಂಸ, ಮೀನು, ಸಿಂಹ, ವೃಷಭ, ಆನೆ, ಚಕ್ರ–ಈ ಲಾಂಛನಗಳುಳ್ಳ ಬಾವುಟಗಳು.

**ಲೋಹಾಸನ**—ಒಂದು ಬಗೆಯ ಪೀಠ. ಅದರ ಲಕ್ಷಣವನ್ನು ಹೀಗೆ ಹೇಳಿದೆ–

ಪಂಚಭಿಃ ಸಪ್ತಭಿರ್ವಾಪಿ ನವಭಿರ್ಲೋಹಜೈಃ ಪದೈಃ
ಲೋಹಪಟ್ಟ ಕೃತಾಧಾರೈರ್ಲೋಹ ಜಾಲಕ ಮೂರ್ಧನಿ ||
ಛದಿಕಾ ಪಟ್ಟ ಗರ್ಭಸ್ಥಂ ಕಾರ್ಪಾಸೇನ ವಿಮಿಶ್ರಿತಂ
ಲೋಹಾಸನಮಿದಂ ಪ್ರೋಕ್ತಮುಪಸ್ಯಾತ್ಸ ಕೀಲಿತಂ ||

(ಡಿ. ಎಲ್. ಎನ್. ವಡ್ಡಾರಾಧನೆ. ಪುಟ ೨೦೦)

# ಅನುಬಂಧ ೨

## ಶಬ್ದಕೋಶ

ಅಂಕುರ-ಮೊಳಕೆ
ಅಂಗಡಿಯ ಲಪಡಂ-ಅಂಗಡಿ ಬೀದಿಗಳಲ್ಲಿ ಅಲೆದಾಡುವವನು
ಅಗರು-ಸುಗಂಧದ್ರವ್ಯ
ಅಗುಳ್ದು-ತೋಡಿ, ನಾಟಿಕೊಂಡು
ಅಗ್ಗಳ-ಶ್ರೇಷ್ಠ
ಅಗ್ರಾಸನ-ಬ್ರಾಹ್ಮಣವೃತ್ತಿ
ಅಚ್ಚಿಗ-ದುಃಖಿತ
ಅಜ-ಆಡು
ಅಡಿವೊಣರ್-ಪಾದಯುಗಳ
ಅಣ್ಮು-ಪ್ರಯತ್ನಿಸು, ಸಮರ್ಥನಾಗು
ಅಣಿ-ಪದಾತಿ ಸೈನ್ಯ
ಅದಿರ್-ಅಲುಗಾಡು
ಅರ್ದು-ಅದ್ದು, ನೀರಲ್ಲಿ ಮುಳುಗಿಸು
ಅರ್ಧಚಕ್ರಿ-ಭರತಕ್ಷೇತ್ರದ ಆರು ಖಂಡಗಳಲ್ಲಿ ಮೂರು ಖಂಡಗಳ ಅಧಿಪತಿ
ಅಧಿಗಮ-ಸಂಪಾದಿಸಿದ
ಅಧಿರೂಢ-ಹತ್ತಿರದ
ಅನವರತ-ಯಾವಾಗಲೂ
ಅನಿಬರ್-ಅಷ್ಟು ಜನರು
ಅನುನಯ-ಪ್ರೀತಿ, ಸ್ನೇಹ
ಅಪಣ-ಅಂಗಡಿ, ಮಳಿಗೆ
ಅಪರಂ-ಎಣೆಯಿಲ್ಲದ
ಅಪವರ್ಗ-ಮೋಕ್ಷ
ಅಪುತ್ರಿಕೆ-ಮಕ್ಕಳಿಲ್ಲದವಳು
ಅಪ್ರತ್ಯಯ-ಅವಿಶ್ವಾಸ
ಅಭಿಮಾನ-ಗರ್ವ
ಅಮ್ಮ-ತಂದೆ, ಅಪ್ಪ
ಅಮೋಘ-ವ್ಯರ್ಥವಲ್ಲದ, ನಿಶ್ಚಿತ, ತಪ್ಪದುದು
ಅಯ್ಕಿಲ್-ಹಿಮ
ಅರಿ-ಕತ್ತರಿಸು
ಅರಿಯವು-ಅಸಾಧ್ಯವಾದವು
ಅಱುನೀರ್-ಬತ್ತಿದ ನೀರು
ಅಲಾಭಂಮಾಡು-ಭಿಕ್ಷೆ ಇಲ್ಲದಂತೆ ಆಚರಿಸು
ಆಲೇಖ್ಯ-ಚಿತ್ರವಿದ್ಯೆ
ಆಲೋಕನ ವಿದ್ಯೆ-ಅದೃಶ್ಯವಾಗುವ ವಿದ್ಯೆ
ಅನಯುವದಿಂ-ಶ್ರಮವಿಲ್ಲದೆ, ಸುಲಭವಾಗಿ
ಅವಸರ-ವೇಳೆ, ಸಮಯ
ಅಷ್ಟೋಪವಾಸ-ಎಂಟು ದಿನಗಳ ಉಪವಾಸ
ಅಸಿಖೇಟಕ-ಕತ್ತಿ ಗುರಾಣಿ
ಅಳಂಬೆ-ಅಣಬೆ, ನಾಯಿಕೊಡೆ
ಅಳಿಕಮನಂ-ಕಪಟ ಮನದವನು
ಅಳಿಜು-ಕೆಸರು
ಅಳಿಪು-ದುರಾಶೆಪಡು
ಅಳೆ-ಮಜ್ಜಿಗೆ
ಅೞ್ಕಾಡು-ಹಾಳುಮಾಡು, ಪೂರ್ಣವಾಗಿ ತುಂಬಿಕೊಳ್ಳು
ಅೞ್ತಿ-ಪ್ರೀತಿ
ಅೞ್-ಅಳು

ಅಂದೆ_ಗೂಗೆ
ಅಖಂಡಲ–ಇಂದ್ರ
ಅಟಿಸು_ಬಯಸು
ಅಡು–ನರ್ತಿಸು
ಅತ್ಮ–ಮನಸ್ಸು
ಅದನಮಾನುಂ–ವಿಶೇಷವಾಗಿ
ಅವೇಶಂಗೆಯ್–ಭವಿಷ್ಯವನ್ನು ಹೇಳು
ಅಪ್ಯಾಯನ–ಹಿತ
ಅರಂಭ–ವ್ಯವಸಾಯ
ಅರವೆ–ತೋಟ, ಉದ್ಯಾನ
ಅರಾಧನೆ–ಸಾಧನೆ
ಅರೋಗಿಸು–ಊಟಮಾಡು
ಅಱಡಿಗೊಳ್–ಹಿಂಸೆಮಾಡು, ತೊಂದರೆ ಪಡಿಸು
ಅಱಿಸು_ಶಮನಮಾಡು
ಅಸ್ಫೋಟಕ–ಬಾವು, ಒಡೆಯುವಿಕೆ
ಇಂಬು–ವಾಸಿ, ಲೇಸು
ಇಟ್ಟೆ–ಈಟಿ
ಇನಿಸು–ಇಷ್ಟು, ಸ್ವಲ್ಪ
ಇನಿಯ–ಸವಿಯಾದ, ಪ್ರಿಯ
ಇನ್ನರ್–ಇಂಥವರು
ಇಳಿಸು–ಹೀನಯಿಸು
ಈದೃಗ್ವಿಧ–ಈ ರೀತಿಯ
ಈಡಾಡು–ಬಿಸಾಡು
ಉಕ್ಕೈವ (ಉರ್ಕೆವ) ಕಪಟ
ಉಗುರಿಸು–ಉಗುರಿನಿಂದ ಕೆರೆ
ಉಡಿ–ಮುರಿದುಬೀಳು
ಉಣ್ಣಪಡಿಸು–ಉಣ್ಣದೆ ಬೀಳಿಸು, ಉಪವಾಸ ಬೀಳಿಸು
ಉತ್ತವಳ–ಉತ್ಕಂಠ ; ಕುತೂಹಲ
ಉದ್ಧಂತ–ಉಬ್ಬು ಹಲ್ಲುಳ್ಳವ

ಉನ್ಮಾರ್ಗ–ದುಷ್ಟಮಾರ್ಗ
ಉಪಶಮ–ಶಾಂತಿ, ಸಮತೆ
ಉಪಶ್ಲೋಕಿಸು–ಸ್ತುತಿಸು
ಉಪಾಸಕ–ಜೈನಗೃಹಸ್ಥ
ಉಬ್ಬೆಗ–ಉದ್ವೇಗ, ದುಃಖ
ಉರ–ಎದೆ
ಉಱದೆ–ಲಕ್ಷ್ಯಮಾಡದೆ, ಹೊಂದಿಕೊಳ್ಳದೆ
ಉರ್ಚು–ಜಾರು, ಬಗಿ, ಸೀಳು, ಹಿರಿ
ಊಡು–ಊಟಕೊಡು, ಬಳಿ
ಎಚ್ಚಿ–ಹಚ್ಚಿ, ಬಳಿದು
ಎಡೆ–ಸ್ಥಳ, ನಡುವೆ
ಎತ್ತಾನುಂ–ಎಲ್ಲಾದರೂ
ಎರ್ವೆ–ಎಮ್ಮೆ
ಎಯ್ದು–ಪಡೆದುಕೊಳ್ಳು, ಸೇರು
ಎರಲೆ–ಜಿಂಕೆ
ಎಱತನಿಗ–ಪ್ರಭುತ್ವವುಳ್ಳವ
ಎಱೆ–ಹೊಯ್ಯು ; ಹಾಕು
ಎಱೆಯ–ಒಡೆಯ
ಎಸಡಿ–ಏಡಿ
ಏಳಿದು–ತಿರಸ್ಕಾರ
ಎೞಲು–ನೇತುಬೀಳು
ಎೞ್ತಿನ್ನಿಂ–ಬನ್ನಿರಿ
ಎೞ್ಪು–ಓಡಿಸು
ಏಕವಿಹಾರಿ–ಒಂಟಿಯಾಗಿ ಸಂಚರಿಸುವವ, ಪರಿವ್ರಾಜಕ
ಏಕಸಱ–ಒಂದು ಬಂಡೆ
ಏರಣಿಗ–ಅಕ್ಕಸಾಲಿಗ
ಏರಿಸು (ಏಱಿಸು) ಹತ್ತಿಸು, ಕೈಗೊಳಿಸು, ಧರಿಸು
ಏಱು–ಸೆಟ್ಟು, ಗಾಯ

ಒಂಕಿ–ಸಣ್ಣಕಲ್ಲು
ಒಂದು–ಸೇರು
ಒಟ್ಟು–ರಾಶಿಮಾಡು
ಒಟ್ಟೆ–ಒಂಟೆ
ಒಡೆಯ–ಉಳ್ಳ
ಒಡ್ಡಣ–ಸೈನ್ಯ
ಒದಱು–ಕೂಗು
ಒಯ್ಯನೆ–ಮೆಲ್ಲನೆ
ಒರ್ಮೊದಲ್–ಏಕಕಾಲದಲ್ಲಿ
ಒಲ್ಲಣಿಗೆ–ಒದ್ದೆಬಟ್ಟೆ ; ಆರ್ದ್ರಪಟ್ಟಿಕಾ
ಒಸಗೆ–ಸಂತೋಷ ; ಮೆಚ್ಚು
ಒಸೆ–ಸಂತೋಷಪಡು
ಓಳನ್–ಇರುವನು
ಓಗರ–ಅನ್ನ
ಓಜ–ಉಪಾಧ್ಯಾಯ
ಓರಂತಪ್ಪ–ಸಮಾನವಾಗಿರುವ
ಓಲಗ–ಆಸ್ಥಾನ
ಓಲಗಿಸು–ಸೇವೆಮಾಡು
ಓವರಿ–ಕೋಣೆ
ಓಳಿ–ಸಾಲು
ಕಂಚುಕ–ರವಕೆ
ಕಂತಿ–ಜೈನಸಂನ್ಯಾಸಿನಿ
ಕಚ್ಚುಟ–ಕೌಪೀನ
ಕಟಕ–ಕಡಗ, ಸೈನ್ಯ
ಕಟಿಸೂ–ಸೊಂಟ
ಕಟ್ಟೆಱುಂಪೆ–ಕಟ್ಟಿರುವೆ
ಕಡಂಗು–ಉತ್ಸಾಹಿಸು
ಕಡವರ–ಚಿನ್ನ, ಐಶ್ವರ್ಯ
ಕಡಿದು–ತೀವ್ರವಾದ
ಕತಿಪಯ–ಕೆಲವು
ಕನತ್ಕನಕ–ಹೊಳೆಯುವ ಚಿನ್ನ
ಕಪ್ಪಡ–ಹರಕು ಬಟ್ಟೆ
ಕಮ್ರಿತು–ಸುವಾಸನೆಯುಳ್ಳ
ಕರಜ–ಉಗುರು
ಕರಂ–ವಿಶೇಷವಾಗಿ
ಕರಗ–ಗಿಂಡಿ, ಬಿಂದಿಗೆ
ಕರಭ–ಒಂಟೆ
ಕಱಿಮೆಯಾಗಿ–ಬಲಿತು ; ಪಕ್ವವಾಗಿ
ಕರಿಣಿ–ಹೆಣ್ಣಾನೆ
ಕರ್ಕೇತನ–ಒಂದು ಬಗೆಯ ಸ್ಫಟಿಕ ಮಣಿ
ಕರ್ಚುರ–ಶೊಳೆ
ಕರ್ದಿಂಗಳ್–ಅಮಾವಾಸ್ಯೆ
ಕಲಿಲ–ಪಾಪ, ಕಲ್ಮಷ
ಕಲ್ಪ–ಸ್ವರ್ಗ
ಕಲ್ಪಿಸು–ಕಲಿಸು, ಹೇಳಿಕೊಡು
ಕವರ್–ಸುಲಿಗೆಮಾಡು
ಕಷ್ಟತಿಕೆ–ದುಃಖಕರವಾದುದು
ಕಸವರ–ಚಿನ್ನದನಾಣ್ಯ
ಕಳೆ–ತೆಗೆ, ಬಿಸಾಡು
ಕಱುಮೆಯ ಕೂೞು–ಶಾಲ್ಯನ್ನ
ಕೞ–ಗಂಜಿ ; ಸಾಯು
ಕಾದಲ–ಪ್ರಿಯ
ಕಾದಲಿಸು–ಪ್ರೀತಿಸು
ಕಾಪು–ಕಾವಲು ; ರಕ್ಷಣೆ
ಕಾಯೋತ್ಸರ್ಗ–ದೇಹಾಭಿಮಾನ ತ್ಯಾಗ
ಕಾರಂಡ–ನೀರುಕೋಳಿ
ಕಾಲಂಗೆಯ್–ಸಾಯು
ಕಾಷ್ಠಕರ್ಮ–ಮರಗೆಲಸ
ಕಾಸೆ–ಕಚ್ಚೆ, ಚಡ್ಡಿ
ಕಿತ್ತಯ್ಯ–ಚಿಕ್ಕಸ್ವಾಮಿ, ಬ್ರಹ್ಮಚಾರಿ
ಕಿನಿಸು–ಕೆರಳು

ಕೀಲ್_ವೊಳೆ
ಕೀಱು_ಕೂಗು, ಕಿರಿಚು
ಕೀಟಲ್_ಕಡಿವಾಣ
ಕುಂಚ_ನವಿಲುಗರಿಯ ಕುಚ್ಚು
ಕುಂಡ_ಹಾದರಕ್ಕೆ ಹುಟ್ಟಿದವ
ಕುತ್ತ_ರೋಗ
ಕುತ್ಸಿತ_ನೀಚ
ಕುಮತಿ_ಕೆಟ್ಟಬುದ್ಧಿ
ಕುಮ್ಮರಿ_ತಾತ್ಕಾಲಿಕ ಬೇಸಾಯಕ್ಕಾಗಿ ಕಾಡನ್ನು ಕಡಿದು ಸುಟ್ಟು ಬಿಡಿಸಿದ ನೆಲ
ಕುಱುವಡಿ_ಚಿಕ್ಕ ಮಡಿ ಬಟ್ಟೆ
ಕುರ್ಕುರ್_ಒಂದು ಬಗೆಯ ನೀರು ಹಕ್ಕಿ
ಕುವಳಯ_ಕನ್ನೈದಿಲೆ
ಕುಶಲಿಕೆ_ನೈಪುಣ್ಯ
ಕೂಪ_ಬಾವಿ
ಕೂರಿತು_ಹರಿತವಾದ
ಕೂರ್ಮೆ_ಪ್ರೀತಿ
ಕೂಸು_ಮಗು, ಮಗಳು, ವಿವಾಹಕನ್ಯೆ
ಕೃತ್ಸ್ನ_ಪೂರ್ಣವಾಗಿ
ಕೆಂದು_ಮಲಗು
ಕೆತ್ತು_ಅಲುಗು, ನಡುಗು
ಕೆಮ್ಮಗೆ, ಕೆಮ್ಮನೆ_ಸುಮ್ಮನೆ
ಕೆಯ್_ಹೊಲ, ಬತ್ತದಗದ್ದೆ
ಕೆಯ್ಮಿಗು_ಮಿತಿಮೀರು
ಕೆರಕು_ತುರಿ, ಚರ್ಮರೋಗ
ಕೆರ್ಪು_ಎಕ್ಕಡ
ಕೆಳದಿ_ಗೆಳತಿ
ಕೇರ್_ಗೋಡೆ
ಕೈಗೆಯ್_ಸಿಂಗರಿಸು
ಕೊಂಕು_ವಕ್ರತೆ
ಕೊತಂ_ಒನಗೆ, ಬರ್ಚಿ
ಕೊರಸು_ಒಂದು ಬಗೆಯ ಹಕ್ಕಿ
ಕೊಳ್ಗುಳ_ಯುದ್ಧ, ಯುದ್ಧಭೂಮಿ
ಕೋಡು_ಶೀತವಾಗು, ಕೊಂಬೆ
ಕೋಣ್_ಮೂಲೆ
ಕೋರಕಿತ_ಟಿಸಿಲೊಡೆದ
ಕೋವಣ_ಕೌಪೀನ
ಕೋಟ್ಕಿಳ್_ಕೊಂಬುಗಳು
ಕೋಳ್ಪಡು_ಸುಲಿಗೆಗೆ ಒಳಗಾಗು
ಕ್ರಕಚ_ಗರಗಸ
ಕ್ರಮುಕ_ಅಡಕೆ
ಕ್ಷಪಣಕ_ಜೈನಸಂನ್ಯಾಸಿ
ಖನನ_ತೋಡುವುದು
ಖಳಾಂತಕ_ದುಷ್ಟನಾದ ಯಮ
ಖಾಸ_ಕೆಮ್ಮು
ಗಂಡ_ಗಂಡಮಾಲೆ
ಗಂಡಗುಣ_ಪೌರುಷ
ಗಂಧಹಸ್ತಿ_ಸೊಕ್ಕಿದ ಆನೆ
ಗಳಂತಿಗೆ_ನೀರು ತುಂಬುವ ಕಳಶ ; ಹೂಜಿ
ಗಾಡಿ_ಸೌಂದರ್ಯ
ಗಾಮುಂಡ_ಗೌಡ
ಗಾವುಂಡಿ_ಗೌಡಿ
ಗಾಳಿಗೊಳ್_ಗಾಳಿಯ ಮೂಲಕ ವಾಸನೆ ತಿಳಿ
ಗಿಣ್ಣು_ಗಿಣ್ಣಿನ ಹಾಲು ; ಹಸು ಈದ ಹೊಸದರಲ್ಲಿ ಕೊಡುವ ಹಾಲು
ಗುಂಡಿಗೆ_ಕಮಂಡಲ
ಗುಂಡಿತು_ಆಳವಾದ
ಗುಜ್ಜು_ಕುಳ್ಳ
ಗುಡ್ಡ_ಶಿಷ್ಯ

ಗೃಧ್ರ–ಹದ್ದು
ಗೆಂಟಜುಳ್–ದೂರ
ಗೊಟ್ಟ-ಗೋಷ್ಠಿ ; ಜೊತೆ
ಗೊಡ್ಡ–ಚೇಷ್ಟೆ
ಗೋಮಂಡಳ–ಹಸುಗಳ ಮಂದೆ
ಗೋಶೀರ್ಷ–ಒಂದು ಬಗೆಯ ಶ್ರೀಗಂಧ
ಗೋಸಣೆ–ಡಂಗುರ (ಘೋಷಣೆ)
ಗ್ರೈವೇಯಕ–ಕೊರಳಮಾಲೆ ; ಆನೆಯ ಕೊರಳ ಸರಪಳಿ
ಘನರವ–ಗುಡುಗಿನ ಶಬ್ದ
ಘುಟಿಕಾ–ಗುಳಿಗೆ
ಘೃತ–ತುಪ್ಪ
ಚದುರಸಿಗೆ–ನಾಲ್ಕು ಮೂಲೆಯುಳ್ಳ ವಸ್ತ್ರ (ಚತುರಶ್ರಕ)
ಚರಪುರುಷ–ದೂತ
ಚರಮಪಾಳಿ–ಕೊನೆಯ ಕರ್ಮ ಬಂಧ
ಚರಿಗೆ–ಭಿಕ್ಷೆ
ಚೌಕಿ–ಅಂಗಳ
ಚಾತುರ್ದಂತಬಳ–ಚತುರಂಗಸೇನೆ
ಚಾರು–ಮನೋಹರ
ಚಿಕ್ಕುಟ–ಚಿಗಟ, ಸೊಳ್ಳೆ
ಚೋಳಂಗಿ–ರವಿಕೆ ; ರವಿಕೆ ಶಾಸ್ತ್ರ
ಛದ–ಹೊದಿಕೆ
ಛರ್ದಿ–ವಾಂತಿ ; ಭೇದಿ
ಛಿದ್ರ–ರಂಧ್ರ
ಛಿದ್ರಿಸು–ವಂಚಿಸು
ಛೇದನ–ಕತ್ತರಿಸುವಿಕೆ
ಜಂಬೀರ–ನಿಂಬೆ
ಜಡಿ–ಗದರಿಸು
ಜಯನಶಾಲೆ–ಆಯುಧಾಗಾರ
ಜಾತಿ–ಜನ್ಮ
ಜಾವ–ಯಾಮ ; ೭ ೧/೨ ಗಳಿಗೆ ಕಾಲ
ಜೀವವಿದ್ಧ–ಜೀವಂತ ಶಿಲ್ಪಪ್ರತಿಮೆ
ಜೀರ್ಕೊಳವಿ–ಪಿಚಕಾರಿ
ಜೂದು–ಜೂಜು
ಜೃಂಭಿನಿ-ಪ್ರತ್ಯಕ್ಷವಾಗುವುದು ಮತ್ತು ಮಾಯವಾಗುವುದು
ಜೋಗು–ಯೋಗ
ಝಣಂಬ–ಮೇಲುಹೊದಿಕೆ
ಝಲ್ಲರಿ–ಒಂದು ವಾದ್ಯ
ಡಂಬಿಸು–ಮೋಸಮಾಡು
ಡಿಂಡೀರ–ನೊರೆ
ತಗುಳ್–ಆರಂಭಿಸು ; ಒತ್ತಾಯ ಪಡಿಸು ; ಅನುಸರಿಸು ಸೇರಿಸು
ತಡಿ–ದಡ
ತಣಿಪು-ತೃಪ್ತಿಪಡಿಸು
ತನ್ನನಿಕ್ಕು-ತನ್ನನ್ನು ಬೀಳಿಸು ; ವಂದಿಸು
ತಮಾಳ–ಹೊಂಗೆಮರ
ತಮ್ಮಿರ್ವ್ವರ್–ತಾವಿಬ್ಬರೂ
ತಜಿಸಲ್–ನಿಶ್ಚಯಿಸು
ತವಸು–ನಾಶಮಾಡು
ತವು–ಕ್ಷಯವಾಗು ; ನಾಶವಾಗು
ತವನಿಧಿ–ಅಕ್ಷಯವಾದ ನಿಧಿ
ತಸ್ಕರ–ಚೋರ
ತಳಾಜ–ನಗರದ ರಕ್ಷಕ ; ಕೊತವಾಲ
ತಳಿ–ಚಿಮುಕಿಸು
ತಳಿಗೆ–ತಟ್ಟೆ
ತಟಿಕ್ಕಿಸು–ಅಪ್ಪು
ತಾಂಗು–ಆಧಾರವಾಗು ; ತಡೆ
ತಾಳೋದ್ಘಾಟನಿ ವಿದ್ಯಾ–ಬೀಗ ತೆಗೆ

ಯಲು ಉಪಯೋಗಿಸುವ ಮಂತ್ರ ವಿದ್ಯೆ
ತಿಂಬಡಂ–ತಿನ್ನುವ ಪದಾರ್ಥ
ತಿರಿ–ತೊಳಲು
ತಿರುಡು–ಕದಿ
ತಿರುವಾಯು–ಹೆದೆಯ ಬಾಯಿ
ತಿಳಕ–ಒಂದು ಬಗೆಯ ಹೂವಿನಮರ
ತೀವು–ತುಂಬು
ತುಂಗ–ಎತ್ತರ
ತುಡುಗೆ–ಆಭರಣ
ತುಯ್ಯಲ್–ಪಾಯಸ
ತುರಗಾಶ್ವ–ವೇಗವಾಗಿ ಓಡುವ ಕುದುರೆ
ತುರಿಪ–ತ್ವರೆ
ತುಱುಪಟ್ಟಿ–ದನಗಳ ಹಟ್ಟಿ
ತುಱಿಲ್–ನಮಸ್ಕಾರ
ತೂಂಕಡು–ನಿದ್ದೆ
ತೂಂತು–ತೂಬು ; ರಂಧ್ರ
ತೂರ್ಯ್ಯಾಂಗ–ವಾದ್ಯಗಳನ್ನು ಕೊಡುವ ಕಲ್ಪವೃಕ್ಷ
ತೆಕ್ಕನೆ ತೀವಿ–ಭರ್ತಿಯಾಗಿ ತುಂಬಿ
ತೆಗಲೆ–ಎದೆ
ತೇನತೇನ–ಮೇಲೆ ಮೇಲೆ
ತೊಟ್ಟನೆ–ಬೇಗನೆ
ತೊಟ್ಟು–ಪ್ರಾರಂಭವಾಗಿ, ಮೊದಲಾಗಿ
ತೊಡಂಗು–ತೊಡಗು
ತೊವಲ್–ತೊಗಲು ; ಚಿಗುರು
ತೊಱಿಲ್–ಸುತ್ತಾಡು
ತೊೞ್ತು–ಸೇವಕ ; ಸೇವಕಿ
ತೋರ–ದಪ್ಪ
ತ್ರಸ–ಚಲನವಿರುವ
ತ್ರಸ್ತಾಭಿಭೂತ–ಭಯವಶ
ತ್ರಿಕಾಲಪ್ರಜ್ಞಪ್ತಿ–ಲೋಕಾಕಾರಾದಿ ಗಳನ್ನುನಿರೂಪಿಸುವ ಶಾಸ್ತ್ರ ಗ್ರಂಥ
ದಂಶ–ಸೊಳ್ಳೆ
ದಾಯ–ಬಹುಮಾನ ; ಸಲುಗೆ ; ಅವಕಾಶ
ದಾಯಿಗಂ–ದಾಯಾದಿ
ದಾರ–ಹೆಂಡತಿ
ದಾಷ್ಟಿಕ–ಕಚ್ಚಲ್ಪಟ್ಟವ
ದೀಪನೀಯ–ಸುಡುವ
ದುರ್ಭಗತ್ವ–ಹೀನಭಾಗ್ಯ
ದುರ್ಧರ–ತಾಳಲಾಗದ
ದುಷ್ಕೃತಂ–ಕೇಡಿಗ
ದೇಸಿಗ–ದಿಕ್ಕಿಲ್ಲದವನು ; ನಿರ್ಗತಿಕ
ದೇಹಾರ–ದೇವರ ಕೋಣೆ
ದೋರ್ದಂಡ–ಭುಜಾದಂಡ
ದ್ರಮ್ಮ–ಒಂದು ಬಗೆಯ ನಾಣ್ಯ
ದ್ರವ್ಯ ತಪ–ಕಪಟ ತಪಸ್ಸು
ದ್ರುಮಷಂಡ–ಮರಗಳ ಸಮೂಹ
ಧನದ–ಕುಬೇರ
ಧೃತಿ–ಧೈರ್ಯ ; ಸ್ಥಿರತೆ
ನಡಪಾಡು–ಅಡ್ಡಾಡು
ನಡಪು–ಸಾಕು
ನನ್ನಿ–ಸತ್ಯ
ನವಿರು–ಕೂದಲು
ನಾಗ–ಆನೆ ; ಹಾವು
ನಾಗ ಠಾಣ–ನಾಗರ ಸ್ಥಾನ
ನಾಗವಲ್ಲಿ–ವೀಳೆಯದೆಲೆ
ನಾಣಿಲಿ–ಲಜ್ಜೆಯಿಲ್ಲದ
ನಾರಕ–ನರಕಜೀವಿ
ನಾಳಬಿರ್ದು–ಉದ್ದನೆಯ ಹಳ್ಳವಾಗಿ
ನಿಗ್ರಹ–ದಂಡನೆ, ಶಿಕ್ಷೆ

ನಿಚ್ಚ-ನಿತ್ಯ
ನಿಟ್ಟೆಲ್ವು-ಉದ್ದವಾದ ಮೂಳೆ
ನಿದಾನ-ಸಂಕಲ್ಪ, ಪ್ರತಿಜ್ಞೆ
ನಿಪಾತಿಸು-ಕೊಲ್ಲು
ನಿಮಿರ್-ನೆಟ್ಟಗಾಗು
ನಿಯೋಗಿ-ಅಧಿಕಾರಿ
ನಿರುತ-ದಿಟ, ನಿಜ
ನಿಱಿಸು-ಊಟಕ್ಕೆ ನಿಲ್ಲಿಸು
ನಿರ್ಗ್ರಂಥ ಯತಿ-ದಿಗಂಬರ ಯತಿ
ನಿರ್ವಾಣ, ನಿರ್ವೃತಿ-ಮೋಕ್ಷ
ನಿರ್ವೇಗ-ವಿರಕ್ತಿ
ನಿಶ್ಶಲ್ಯ-ಪಾಪಾಚರಣೆಯಿಲ್ಲದ
ನಿಶ್ರಾವ-ಅನ್ನದ ಗಂಜಿಯ ಕೆನೆ
ನಿಷಣ್ಣ-ಕುಳಿತ
ನಿಸಿದ್ಧಿ, ನಿಸಿದಿಗೆ-ಸಮಾಧಿ
ನಿಃಶ್ರೇಯಸ-ಮೋಕ್ಷ
ನೀಡಱಿಂ-ದೀರ್ಘಕಾಲದಿಂದ
ನೀಡುಂ-ಬಹಳ
ನೀರಟ್ಕೆ-ಬಾಯಾರಿಕೆ
ನೀರಿೞಿ-ಸ್ನಾನಮಾಡು
ನೀರೂಡು-ನೀರು ಕುಡಿಸು
ನೆಗಪು-ಮೇಲೆತ್ತು
ನೆಗೞ್-ಮೊಸಳೆ
ನೆಗೞ್ತೆ-ಮಾಡಿದುದು, ಕೀರ್ತಿ
ನೆರಮ್-ಸಹಾಯ
ನೆರಪು-ಕೂಡಿಹಾಕು
ನೆರವಿ-ಸಭೆ, ಸಮೂಹ
ನೆಱನೆಡೆ-ಮರ್ಮಸ್ಥಾನ
ನೆಱಪು-ಪೂರೈಸು
ನೆಱೆ-ತುಂಬು, ಸಮರ್ಥನಾಗು
ನೆಱೆಯೆ-ಪೂರ್ಣವಾಗಿ
ನೇತ್ರಪಟ್ಟ-ನೇತ್ರವೆಂಬ ರೇಷ್ಮೆ ವಸ್ತ್ರ
ನೇಸಱ್-ಸೂರ್ಯ
ನೈಮಿತ್ತಿಕ-ಜೋಯಿಸ
ನ್ಯಾಯವಿಸ್ತರ-ತರ್ಕಶಾಸ್ತ್ರ
ಪಂಗು-ಹೆಳವ
ಪಂದರ-ಚಪ್ಪರ
ಪಂದೆ-ಹೇಡಿ
ಪಂದೊವಲ್-ಹಸಿತೊಗಲು
ಪಗರಣಿಗ-ಪಗರಣ ಎಂಬ ಆಟವಾಡುವವನು
ಪಚ್ಚುಗೊಡು-ಪಾಲು ಮಾಡಿಕೊಡು
ಪಟಹ-ತಮಟೆವಾದ್ಯ
ಪಟ್ಟವರ್ಧನ-ಪಟ್ಟದಾನೆ
ಪಡಿಯಱ-ಪ್ರತೀಹಾರಿ, ದ್ವಾರಪಾಲಕ
ಪಣ್ಣು-ಮಾಡು
ಪದಿರ್-ಒಗಟೆ, ಗೂಢಾರ್ಥವುಳ್ಳ ಮಾತು
ಪನಸ-ಹಲಸು
ಪಯನ್-ಹಸು
ಪರಚಕ್ರ-ಶತ್ರುಮಂಡಲ
ಪರದ-ವ್ಯಾಪಾರಿ
ಪರದಿ-ವರ್ತಕನ ಹೆಂಡತಿ
ಪರದು-ವ್ಯಾಪಾರ
ಪರವಶತೆ-ಮೂರ್ಛೆ, ಮೈಮರೆಯುವಿಕೆ
ಪರಿಗ್ರಹ-ಸ್ವೀಕಾರ
ಪರಿನಿರ್ವಾಣ-ಮುಕ್ತಿ
ಪರಿಭವ-ತಿರಸ್ಕಾರ, ಅವಮಾನ
ಪರಿಯಣ-ತಟ್ಟೆ, ಹರಿವಾಣ
ಪರಿವಡಿಗೆ-ಅನುಕ್ರಮ
ಪರಿವೇಷ್ಟಿತ-ಬಳಸಿದ
ಪರಿವ್ರಾಜಕ-ಸಂನ್ಯಾಸಿ

ಪರಿಸ್ಫುಟ–ಅತಿಸ್ಪಷ್ಟ
ಪಱಿ–ಕತ್ತರಿಸಿಹೋಗು
ಪಱಿ–ಹರಡು
ಪಱಿವೊಟ್ಟು–ಸಂಜೆ
ಪಱೆ–ತಂಬಟೆ, ಹರೆ ಎಂಬ ಚರ್ಮ ವಾದ್ಯ
ಪರ್ಚಿಗೊಡು–ಹಂಚಿಕೊಡು
ಪರ್ವ–ಹಬ್ಬ
ಪಲಾಲ–ಜೊಳ್ಳು, ನಿಸ್ಸಾರವಾದ ಮಾತು
ಪಲ್ಲಣ–ಜೀನು
ಪಲ್ಲವ–ಚಿಗುರು
ಪಲ್ಯಂಕ–ಪದ್ಮಾಸನ
ಪಸದನ–ಅಲಂಕಾರ
ಪಸರ–ಸಲಿಗೆ
ಪಸುಂಬೆ–ಹಸುಬೆ ಚೀಲ
ಪಳಿತ–ಒಂದು ಬಗೆಯ ಕಾಲಮಾನ
ಪಾಂಗು–ರೀತಿ
ಪಾಗುಡ–ಕಾಣಿಕೆ
ಪಾಟ–ಹಾಡು
ಪಾಡು–ಸ್ಥಿತಿ
ಪಾಣ್ಬ–ಜಾರ
ಪಾದರಿಗ–ಹಾದರಿಗ, ಜಾರ
ಪಾಪೆ–ಬೊಂಬೆ
ಪಾಯ್ತರು–ಹರಿದುಬರು
ಪಾರಕು–ಹಾರಕದ ಅಕ್ಕಿ
ಪಾರಾವತ–ಪಾರಿವಾಳ
ಪಾರ್ವ–ಬ್ರಾಹ್ಮಣ
ಪಾರ್ವಂತಿ–ಬ್ರಾಹ್ಮಣಿತಿ
ಪಾರಾವಾರಗ–ಪ್ರವೀಣ
ಪಾಱಿಸು–ಪಾಱಿಸುಮಾಡು
ಪಾಲ್ಮರ–ಹಾಲು ಬರುವ ಮರ
ಪಾಷಾಣ–ಕಲ್ಲು
ಪಾಳಕಾಪ್ಯ–ಗಜಶಾಸ್ತ್ರ
ಪಿಂಗು–ಹಿಂಜರಿ, ತೊಲಗು
ಪಿಡಿ–ಹೆಣ್ಣಾನೆ
ಪಿಡಿಪೆತ್ತು–ಹಿಡಿತಕ್ಕೆ ಸಿಕ್ಕಿ
ಪಿಶಿತ–ಮಾಂಸ
ಪಿಟ್ಟಿ–ಹಿಂಡು
ಪೀಡನ–ಹಿಂಸೆ
ಪುಂಡರೀಕ–ಬಿಳಿಯ ತಾವರೆ
ಪುಗುಟಿಸ್ ಒಡೆ–ಬೊಕ್ಕೆಯಾಗು
ಪುಡುಕೆ–ಪೆಟ್ಟಿಗೆ, ಸಂಪುಟ, ಭರಣಿ, ಬುಟ್ಟಿ
ಪುದ್ಗಲ–ನೊಸರು, ಸಕ್ಕರೆ, ಬೆಲ್ಲ, ಅನ್ನ, ನೀರು ಮುಂತಾದ ದ್ರವ್ಯಗಳು
ಪುನ್ನಾಗ–ಸುರಗಿಯ ಮರ
ಪುರುಡು–ಸ್ಪರ್ಧೆ
ಪುರುಷವ್ರತ–ಬ್ರಹ್ಮಚರ್ಯ
ಪುರುಳಿ–ಸಾರಿಕೆ, ಹೆಣ್ಣುಗಿಳಿ
ಪುಳಿನ–ಮರಳು
ಪುಟ್ಟಿತು–ಹುಳುವಾಗಿ
ಪುಳು–ಹಕ್ಕಿ
ಪುಳ್ಳಿ–ಸೌದೆ
ಪುಳುಂಗಾಜ–ಹಕ್ಕಿಗಳನ್ನು ಹಿಡಿಯುವವನು
ಪೂಣ್ಕೆ–ಪ್ರತಿಜ್ಞೆ
ಪೂರ–ಪ್ರವಾಹ
ಪೂರಣ–ತುಂಬುವಿಕೆ
ಪೆಂಗರು–ಒಂದು ಬಗೆಯ ದೊಡ್ಡ ಬಕ ಹಕ್ಕಿ
ಪೆಂಡವಾಸ–ಅಂತಃಪುರ

ಪೆಟ್ಟೆ–ಹೆಂಟೆ
ಪೆಱಗು–ಹಿಂದೆ
ಪೆಱವುಳಿ–ಬೇರೆ ಎಡೆ
ಪೆಱು–ಹೆರು, ಪಡೆ
ಪೆಱುಕು–ಹೆಕ್ಕು
ಪೇಪುಂದಿ-ಹೇಲು ಹಂದಿ
ಪೇಱು–ಹೇರು, ಹೊರೆ
ಪೊಟ್ಟಳಿಗೆ–ಪೊಟ್ಟಣ
ಪೊಡೆವಡು–ನಮಸ್ಕರಿಸು
ಪೊರ್ದು–ಹೊಂದು, ಪಡೆ
ಪೊಲ್ಲದು–ಕೆಟ್ಟದು
ಪೊಲ್ಲಮೆ–ದುಷ್ಟತೆ, ಕೇಡಿಗತನ, ಹೊಲಸು, ಹೇಸಿಗೆ
ಪೊಳೆಯಿಸು-ಹೊರಳಿಸು, ತಿರುಗಿಸು
ಪೊಱಲ್–ಪಟ್ಟಣ, ಪೊಟರೆ
ಪೊತ್ತಿಡೆ, ಪೊತ್ತಿಱು–ಹೊತ್ತಾರೆ
ಪೊನ್–ಚಿನ್ನ, ಚಿನ್ನದಪಾತ್ರೆ, ಶ್ರೇಷ್ಠ
ಪೋಡುಂಗಾಱು–ಕಾಡನ್ನು ಕತ್ತರಿಸುವವ
ಪ್ರಚ್ಛನ್ನ–ಮರೆಯಾದ
ಪ್ರಣವ–ಓಂಕಾರ
ಪ್ರತಿಪತ್ತಿ–ಸತ್ಕಾರ
ಪ್ರತಿಬೋಧಿಸು–ಎಚ್ಚರಿಸು, ತಿಳಿಯ ಹೇಳು
ಪ್ರತಿಮಾಯೋಗ–ಪ್ರತಿಮೆಯಂತೆ ನಿಂತು ತಪಸ್ಸುಮಾಡುವುದು
ಪ್ರತಿಮುಖ–ಮೊಗವಾಡ
ಪ್ರತೀಕಾರ–ಚಿಕಿತ್ಸೆ
ಪ್ರಮಾಣ–ಅವಧಿ, ಅಳತೆ, ಕಾರಣ
ಪ್ರಸ್ತುತ–ತಾತ್ಕಾಲಿಕ
ಪ್ರಳಾಪ–ರೋದನ
ಪ್ರಾಣಘಾತಿ–ಜೀವಹಿಂಸಕ
ಪ್ರಾಸುಕ–ಜೀವರಹಿತ, ನಿರ್ಮಲ
ಬಂದಿಸು–ವಂದಿಸು
ಬಂಬಳಂ ಬಾಡಿ–ಬಹಳ ಬಾಡಿ
ಬಗ್ಗಿಸು–ಜೈ, ವಿಧೇಯಗೊಳಿಸು
ಬಟ್ಟಾಟ–ಬಿಲ್ಲೆಯಾಟ
ಬಡ್ಡಿಸು–ಬಡಿಸು (ವರ್ಧಿಸು)
ಬಧಿರ–ಕಿವುಡ
ಬಯಿಗ್ಗಿರುಳಿನ ಜಾವ–ಮುಂಜಾನೆ
ಬರ,ಬರವು–ಆಗಮನ
ಬಱಸಿಡಿಲ್–ಮಳೆಯಿಲ್ಲದೆ ಬರುವ ಸಿಡಿಲು
ಬರುಂಟು–ಬೆರಳಿನಿಂದ ಚುಚ್ಚು
ಬರ್ದು–ನವೆದು, ಕೃಶವಾಗಿ
ಬಲಗೊಳ್–ಪ್ರದಕ್ಷಿಣೆ ಬರು
ಬಲಾಳ್ಕ್ತನ–ಬಲಾತ್ಕಾರ
ಬಲ್ಮೆ–ಪ್ರೌಢಿಮೆ
ಬಸ–ವಶ
ಬಸಮಱು–ಬಸವಳಿ, ವಶತಪ್ಪು, ಶಕ್ತಿ ಕುಂದು
ಬಱಿಯಮಟ್ಟು–ದೂತನನ್ನು ಹೇಳಿ ಕಳು ಹಿಸು
ಬಳಾಕ–ನೀರುಹಕ್ಕಿ
ಬೞ್ಚು–ಕೆಳಗೆ ಜಾರು
ಬೞಿಕ್ಕಂ–ಅನಂತರ
ಬೞಿಯನೆ–ಹಿಂದೆಯೇ
ಬಳ್ಳಿಮಾಡ–ಲತಾಗೃಹ, ಮನೆಗಳ ಸದಲು
ಬೞ್ದಿದ–ಬದುಕಿದ, ಸತ್ತ
ಬಾಚಿಸು,ಬಾಜಿಸು–ಓದು, ಓದಿಸು
ಬಾಡು–ಕಾಯಿಸಲ್ಯ
ಬಾದಣ–ಗವಾಕ್ಷ

ಬಾರಿ—ಆನೆಗಳನ್ನು ಹಿಡಿಯುಲು ಕಟ್ಟಿದ ಕೋಟೆ, ಬೋನು
ಬಾರಿಸು—ನಿವಾರಿಸು, ತಡೆ
ಬಾಲವದ್ದೆ—ಬಾಣಂತಿ
ಬಾಳ್—ಕತ್ತಿ
ಬಾಟ್, ಬಾಟಾನೆ—ಜೀವಿಕೆ, ವೃತ್ತಿ, ಕ್ಷೇತ್ರ, ಜಮೀನು
ಬಾಟ್ತಿ—ಪ್ರಯೋಜನ
ಬಾಹಲ—(ಬಾಹಟ—ವಾಗ್ಭಟ) ವೈದ್ಯಗ್ರಂಥ
ಬಿಚ್ಚಳಿಸು—ವಿಸ್ತರಿಸು, ದೊಡ್ಡದು ಮಾಡು
ಬಿಚ್ಚುನ—ಭಿಕ್ಷು, ಜೈನಯತಿ
ಬಿದಿರ್—ಕೊಡವು
ಬಿನ್ನನೆ—ಶೂನ್ಯವಾಗಿ
ಬಿಯ—ವ್ಯಯ, ವೆಚ್ಚ
ಬಿರ್ದಿ—ಮುದುಕಿ
ಬಿರ್ಮ—ಔತಣ
ಬೂತು—ಭೂತ, ವ್ಯಕ್ತಿ
ಬೆಂಟೆ—ಹುಲ್ಲಿನ ಹಗ್ಗ
ಬೆಸ—ಅಪ್ಪಣೆ
ಬೆಸಕೆಯ್—ಅಪ್ಪಣೆಯಂತೆ ನಡೆ, ಸೇವೆ ಮಾಡು
ಬೆಸಲೆಯಾಗು—ಪ್ರಸವಿಸು
ಬೆಳ್ಕಾಡು—ನಿರ್ಜನಾರಣ್ಯ
ಬೇಗ—ಹೊತ್ತು, ಸಮಯ
ಬೇಂಟ—ಪ್ರೇಮ
ಭೈಕ—ಭಿಕ್ಷ
ಭೈಕಂಗುಳಿ—ಭಿಕ್ಷೆ ಬೇಡುವುದೇ ಶೀಲವಾಗಿರುವವನು
ಭೈಕಂದಿ—ಭಿಕ್ಷೆಗಾಗಿ ತಿರುಗಾಡು
ಬೋನಸೆತ್ತು—ಭೋಜನ ಬಡಿಸು
ಬ್ರಹ್ಮಚ್ಯ—ಬ್ರಹ್ಮಚಾರಿ
ಬ್ಯಾದಿ—ವ್ಯಾಧಿ, ರೋಗ
ಭಂಡ—ವ್ಯಾಪಾರದ ಸರಕು
ಭಂಭಾ—ಒಂದು ಬಗೆಯ ಭೇರಿ
ಭಗಂದರ—ಮೂಲವ್ಯಾಧಿ
ಭರ್ತಾರ—ಗಂಡ
ಭಾಗಸ—ಭಾಗ್ಯ
ಭೂರಿ—ಅತಿಶಯ
ಮಂಡಗೆ—ಒಂದು ಭಕ್ಷ್ಯ
ಮಂಡೂಕ—ಕಪ್ಪೆ
ಮಂತಣ—ಮಂತ್ರಾಲೋಚನೆ
ಮಗುಳ್ದು—ತಿರುಗಿ, ಮತ್ತೆ
ಮುಟ್ಟಿಗೆ—ಒಂದು ಆಯುಧ
ಮಣಿಖೇಟಕ—ರತ್ನಖಚಿತವಾದ ಗುರಾಣಿ
ಮದ್ಯಾಂಗ—ಮದ್ಯವನ್ನು ಕೊಡುವ ಕಲ್ಪವೃಕ್ಷ
ಮದೆವಳ್—ಮದುಮಗಳು, ವಿವಾಹ ಕನ್ಯೆ
ಮನ್ಯು—ದುಃಖ
ಮನೆವಾರ್ತೆ—ಮನೆಗೆಲಸ
ಮರಮೊಗ—ಮರದ ಮೊಗವಾಡ
ಮರುಳ್ಗೊಂಡು—ಭ್ರಾಂತನಾಗಿ
ಮಱಲುಂಡು—ಮೈಮರೆ, ನಿದ್ರಿಸು
ಮಱುಗು—ಕುದಿ
ಮಱುಭವ—ಪುನರ್ಜನ್ಮ
ಮಲರ್ಚು—ಮಗುಚಿ ಮಲಗಿಸು
ಮಲ್ಲಲ್—ಮಣ್ಣಿನ ಸವುಟು
ಮರಕ—(ಮರಕ) ಗುಂಗಾರು
ಮಸಗು—ಕೆರಳು

ಮಹಾವಿಭೂತಿ–ಮಹೈಶ್ವರ್ಯ
ಮಾಂಸಾಳಿ–ಮಾಂಸ ತಿನ್ನುವವ
ಮಾಡ–ಮನೆ, ಅರಮನೆಯಂತಹದು
ಮಾಣಿ–ಬ್ರಾಹ್ಮಣರ ಹುಡುಗ
ಮಾಣಿಸು–ನಿಲ್ಲಿಸು, ತಡೆ
ಮಾದು ಫಲ–ಮಾದಳದ ಹಣ್ಣು
ಮಾದೆಗಿ–ಕೊಲತಿ
ಮಾನಸ–ಮನುಷ್ಯ
ಮಾಱುಗೊಳ್–ಬೆಲೆಗೆ ಕೊಳ್ಳು
ಮಾಱುಲಿ–ಪ್ರತಿಧ್ವನಿ
ಮಾರ್ಕೊಳ್–ಪ್ರತಿಭಟಿಸು, ಮೀರು
ಮಿಕ್ಕ–ಶ್ರೇಷ್ಠವಾದ
ಮಿಸಿಸು–ಮೀಯಿಸು
ಮೀಂಗುಲಿಗ–ಬೆಸ್ತ
ಮುಂಗುರಿ–ಮುಂಗುಸಿ
ಮುಂಜಿಗಟ್ಟು–ಉಪನಯನ ಮಾಡು
ಮುಕುಂದ–ಮದ್ದಳೆ
ಮುಟ್ಟಗೆ–ಕೊಡತಿ
ಮುಟ್ಟು–ಉಪಕರಣ
ಮುಡಿಪು–ಸಾಯು
ಮುನ್ನ–ಮೊದಲು
ಮೃತಕ–ಹೆಣ
ಮೆಯ್ಗಾಪು–ಅಂಗರಕ್ಷಣೆ
ಮೇಲ್ಕೊಳ್–ಧರಿಸು
ಮೊಟ್ಟಯಿಸು–ಎದುರಿಸು, ಪ್ರತಿಭಟಿಸು
ಮೋಹಿ–ನಂಟತನ, ಸಂಬಂಧ
ಮೋದಕ–ಕಡುಬು
ಮೋನ–ಮೌನ
ಮೋಹಿಸು–ಮೂರ್ಛೆಯುಂಟುಮಾಡು
ಯಮ–ಇಂದ್ರಿಯ ನಿಗ್ರಹ
ಯಮ್ಮ–ಕೋಲು, ಬೊಣ್ಣೆ
ಯಾವಜ್ಜೀವ–ಜೀವವಿರುವವರೆಗೆ (ಜಾವಜ್ಜೀವ ಎಂತಲೂ ಇದೆ)
ಯೂಥ–ಹಿಂಡು
ಯೋಷಿದ್–ಹೆಂಗುಸು
ರತಿ–ಆಸಕ್ತಿ
ರಾಗ–ಕೆಂಪು, ಪ್ರೀತಿ
ರೂಕ್ಷ–ಒರಟು
ಲಂಗಿಗ–ಡೊಂಬರಾಟದವನು
ಲಾವಣಿಗೆ–ಉಪ್ಪಿನಕಾಯಿ
ಲುಂದು–ಮಲಗು, ನಿದ್ರಿಸು
ಲೋಗಾಣಿ–ಲೋಕಾಕಾರವನ್ನು ತಿಳಿಸುವ ಗ್ರಂಥ
ಲೋಚು–ಕೂದಲನ್ನು ಕೀಳುವಿಕೆ
ಲೆಪ್ಪ–ಮಯಣ, ಲೇಪ್ಯವಸ್ತು
ವಂಶ–ಕೊಳಲು ; ಬಿದಿರು
ವಕ್ಖಾಣಿಸು–ವ್ಯಾಖ್ಯಾನಮಾಡು
ವಪು–ಶರೀರ
ವರಿಸು–ಬರಮಾಡು (ಬರಿಸು)
ವಶಗಾ–ವಶವಾಗಿರುವವಳು
ವಸುಮತಿ–ನೆಲ, ರಾಜ್ಯ
ವಾದುಗೆಯ್–ವಾದಮಾಡು
ವಾಸಿಸು–ವಾಸನೆ ಕಟ್ಟು
ವಿಕಳ–ವ್ಯಥೆಗೊಂಡ
ವಿಗ್ರಹ–ಯುದ್ಧ
ವಿಗುರ್ವಿಸು–ಮಾಯೆಯಿಂದ ಸೃಷ್ಟಿಸು
ವಿಜಾತಿ–ಕುಲವಿಲ್ಲದವನು
ವಿದಾರಿಸು–ಸೀಳು
ವಿದ್ಯಾಧರ ಕರಣ–ವಿದ್ಯಾಧರ ವಿದ್ಯೆ
ವಿಪಾಟಿತ–ಸೀಳಿದ
ವಿಭೀಷಣ–ಅತಿಭಯಂಕರ
ವಿಭೂತಿ–ಐಶ್ವರ್ಯ

ಬಾರಿ–ಆನೆಗಳನ್ನು ಹಿಡಿಯಲು ಕಟ್ಟಿದ ಕೋಟೆ, ಬೋನು
ಬಾರಿಸು–ನಿವಾರಿಸು, ತಡೆ
ಬಾಲವದ್ದೆ–ಬಾಣಂತಿ
ಬಾಳ್–ಕತ್ತಿ
ಬಾೞ್,ಬಾೞ್ವೆ–ಜೀವಿಕೆ, ವೃತ್ತಿ, ಕ್ಷೇತ್ರ, ಜಮೀನು
ಬಾೞ್ತೆ–ಪ್ರಯೋಜನ
ಬಾಹಲ–(ಬಾಹಟ–ವಾಗ್ಭಟ) ವೈದ್ಯ ಗ್ರಂಥ
ಬಿಚ್ಚಳಿಸು–ವಿಸ್ತರಿಸು, ದೊಡ್ಡದು ಮಾಡು
ಬಿಚ್ಚುವ–ಭಿಕ್ಷು, ಜೈನಯತಿ
ಬಿದಿರ್–ಕೊಡವು
ಬಿನ್ನನೆ–ಶೂನ್ಯವಾಗಿ
ಬಿಯ–ವ್ಯಯ, ವೆಚ್ಚ
ಬಿರ್ದಿ–ಮುದುಕಿ
ಬಿರ್ದು–ಔತಣ
ಬೂತು–ಭೂತ, ವ್ಯಕ್ತಿ
ಬೆಂಟೆ–ಹುಲ್ಲಿನ ಹಗ್ಗ
ಬೆಸ–ಅಪ್ಪಣೆ
ಬೆಸಕೆಯ್–ಅಪ್ಪಣೆಯಂತೆ ನಡೆ, ಸೇವೆ ಮಾಡು
ಬೆಸಲೆಯಾಗು–ಪ್ರಸವಿಸು
ಬೆಳ್ಕಾಡು–ನಿರ್ಜನಾರಣ್ಯ
ಬೇಗ–ಹೊತ್ತು, ಸಮಯ
ಬೇಂಟ–ಪ್ರೇಮ
ಭೈಕ–ಭಿಕ್ಷ
ಭೈಕಂಗುಳಿ–ಭಿಕ್ಷೆ ಬೇಡುವುದೇ ಶೀಲ ವಾಗಿರುವವನು
ಭೈಕಂದಿರಿ–ಭಿಕ್ಷೆಗಾಗಿ ತಿರುಗಾಡು
ಬೋನವೆತ್ತು–ಭೋಜನ ಬಡಿಸು
ಬ್ರಹ್ಮಯ್ಯ–ಬ್ರಹ್ಮಚಾರಿ
ಬ್ಯಾದಿ–ವ್ಯಾಧಿ, ರೋಗ
ಭಂಡ–ವ್ಯಾಪಾರದ ಸರಕು
ಭಂಭಾ–ಒಂದು ಬಗೆಯ ಭೇರಿ
ಭಗಂದರ–ಮೂಲವ್ಯಾಧಿ
ಭರ್ತಾರ–ಗಂಡ
ಭಾಗಸ–ಭಾಗ್ಯ
ಭೂರಿ–ಅತಿಶಯ
ಮಂಡಗೆ–ಒಂದು ಭಕ್ಷ್ಯ
ಮಂಡೂಕ–ಕಪ್ಪೆ
ಮಂತಣ–ಮಂತ್ರಾಲೋಚನೆ
ಮಗುೞ್ದು–ತಿರುಗಿ, ಮತ್ತೆ
ಮುಟ್ಟಗೆ–ಒಂದು ಆಯುಧ
ಮಣಿಖೇಟಕ–ರತ್ನಖಚಿತವಾದ ಗುರಾಣಿ
ಮದ್ಯಾಂಗ–ಮದ್ಯವನ್ನು ಕೊಡುವ ಕಲ್ಪವೃಕ್ಷ
ಮದೆವಳ್–ಮದುಮಗಳು, ವಿವಾಹ ಕನ್ಯೆ
ಮನ್ಯು–ದುಃಖ
ಮನೆವಾೞ್ತೆ–ಮನೆಗೆಲಸ
ಮರಮೊಗ–ಮರದ ಮೊಗವಾಡ
ಮರುಳ್ಗೊಂಡು–ಭ್ರಾಂತನಾಗಿ
ಮಱಲುಂದು–ಮೈಮರೆ, ನಿದ್ರಿಸು
ಮಱುಗು–ಕುದಿ
ಮಱುಭವ–ಪುನರ್ಜನ್ಮ
ಮಲರ್ಚು–ಮಗುಚಿ ಮಲಗಿಸು
ಮಲ್ಲಲ್–ಮಣ್ಣಿನ ಸವುಟು
ಮರಕ–(ಮಶಕ) ಗುಂಗಾರು
ಮಸಗು–ಕೆರಳು

ಸೀಗುರಿ–ಒಂದು ಬಗೆಯ ಕೊಡೆ
ಸೀನರ್ನಾಯ್–ಕಾಡುನಾಯಿ, ನೀರು ನಾಯಿ
ಸುಭದ್ರ–ಆನೆಗಳಲ್ಲಿ ಉತ್ಕೃಷ್ಟವಾದ ಒಂದು ತಳಿ
ಸುರಿಗೆ (ಸುರಿಕಾ)–ಕತ್ತಿ
ಸುವರ್ಣಕಾರ–ಅಕ್ಕಸಾಲಿ
ಸೂರುಳ್–ಪ್ರತಿಜ್ಞೆ
ಸೂಳೆ–ದಾಸಿ
ಸೆಂಡು–ಚೆಂಡು
ಸೆಟ್ಟೆ–ಹೊಟೆ
ಸೆಡೆ–ಮುರುಟು
ಸೇದೆ–ಆಯಾಸ
ಸೇಸೆ–ಮಂತ್ರಾಕ್ಷತೆ
ಸೊಡರು–ದೀಪ
ಸೋಂಕಿಲ್–ಉಡಿ
ಸೋದಿಗೆ–ಗೋಧಿಯಿಂದ ಮಾಡಿದ ಒಂದು ಭಕ್ಷ್ಯ
ಸ್ಕಂದ–ಹೆಗಲು
ಸ್ತಂಭಿನಿ–ಗತಿನಿರೋಧ
ಸ್ವಾಧ್ಯಾಯ–ಅಭ್ಯಾಸ ; ಓದು
ಸ್ವರ್ಣಪಾಷಾಣ–ಚಿನ್ನವಿರುವ ಕಲ್ಲು, ಚಿನ್ನದ ಅದಿರು
ಸ್ಫೂರ್ಜತ್–ಪ್ರಕಾಶಮಾನ
ಹರಿಚಂದನ–ಶ್ರೀಗಂಧ
ಹಸ್ತ–ಮೊಳ
ಹಾನಿತ–ವೈದ್ಯಶಾಸ್ತ್ರ
ಹ್ರೀ–ಲಜ್ಜೆ
ಹೇಮ–ಚಿನ್ನ



